ಓಂ

# ಈ ಶಾ ವಾ ಸ್ಯೋ ಪ ನಿ ಷ ತ್

(ಕ ನ್ನ ಡ ಅ ವ ತ ರ ಣಿ ಕೆ)

ಲೇಖಕರು

ಸಂಸ್ಕೃತ ಸಂಶೋಧನ ಸಂಸತ್ತಿನ ಸಂಶೋಧಕರು

**ಸಂಸ್ಕೃತ ಸಂಶೋಧನ ಸಂಸತ್, ಮೇಲುಕೋಟೆ—571431**

Isavasyopanisad (Kannada Avataranike)
A project of the Academy of Sanskrit Research, Melkote.

Chief Editor : Prof. M. A. Lakshmithathachar, *Registrar*.
The Academy of Sanskrit Research.

Publisher
The Academy of Sanskrit Research, Melkote-571431

First Edition : 1983



PRICE :

*Printed by*
M/s. Janapada Mudranalaya, Melkote.

M/s. Parijatha Printers, B. B. Laya, Mysore-4.

ಶ್ರೀಃ

# ಮುನ್ನುಡಿ

ಪ್ರಸ್ಥಾನತ್ರಯದಲ್ಲಿ ಪ್ರಧಾನವಾಗಿರುವ ಉಪನಿಷತ್ತುಗಳನ್ನೂ ಅವುಗಳಿಗೆ ದೊರೆಯುವ ಅನೇಕ ಭಾಷ್ಯಗಳನ್ನೂ ವಿಮರ್ಶಾತ್ಮಕವಾಗಿ ಸಂಪಾದಿಸಿ ಮುದ್ರಿಸುವ ಕಾರ್ಯವನ್ನು ನಮ್ಮ ಸಂಸ್ಥೆ ಕೈಗೊಂಡಿದೆ. ಸಂಸ್ಕೃತ ಭಾಷೆಯಲ್ಲಿರುವ ಉಪನಿಷತ್‌ಭಾಷ್ಯಗಳ ಭಾಷಾಂತರವನ್ನು ಮತ್ತು ಸಾರಾರ್ಥಗಳನ್ನು ಕನ್ನಡನಾಡಿನ ಜನತೆಗೆ ಸುಲಭವಾದ ಶೈಲಿಯಲ್ಲಿ ಒದಗಿಸುವುದು ಈ ಸಂಸ್ಥೆಯ ಮತ್ತೊಂದು ಉದ್ದೇಶ. ಇಂತಹ ಉದ್ದೇಶದ ಫಲವಾಗಿಯೇ ಈಶಾವಾಸ್ಯದ ಕನ್ನಡ ಅವತರಣಿಕೆಯು ಸಿದ್ಧವಾಗಿದೆ.

ಈಶಾವಾಸ್ಯವು ವೇದದಲ್ಲಿರುವ ಕರ್ಮಕಾಂಡಕ್ಕೂ ಮತ್ತು ಜ್ಞಾನಕಾಂಡಕ್ಕೂ ಮಧ್ಯದಲ್ಲಿದ್ದು ಕರ್ಮಜ್ಞಾನಗಳನ್ನು ಕೂಡಿಸುವ ಸೇತುವೆಯಂತೆ ಇದೆ. ಇಲ್ಲಿ ದೊರೆಯುವ ಅನರ್ಘ್ಯವಾದ ಸಂದೇಶಗಳಿಂದ ಇದಕ್ಕೆ ಉಪನಿಷತ್ತುಗಳಲ್ಲಿ ಅತ್ಯುನ್ನತವಾದ ಸ್ಥಾನ ಇದೆ. "ಪ್ರಪಂಚದಲ್ಲಿರುವ ಅಣು-ರೇಣು-ತೃಣ-ಕಾಷ್ಠಗಳೂ, ಚೇತನಗಳೂ ಪರಮಾತ್ಮನಿಂದ ವ್ಯಾಪ್ತವಾಗಿವೆ. ಇವೆಲ್ಲಕ್ಕೂ ಆತನೇ ಸ್ವಾಮಿ. ಇವೆಲ್ಲವೂ ಆತನ ಸ್ವತ್ತು. ಆದ್ದರಿಂದ ನಿನ್ನ ಶರೀರಾದಿಗಳನ್ನು ಪೋಷಿಸುವುದಕ್ಕೆ ಪ್ರಾಪಂಚಿಕ ವಸ್ತುಗಳನ್ನು ಎಷ್ಟು ಬಳಸಬೇಕೋ ಅಷ್ಟು ಮಾತ್ರ ಬಳಸು ಇಲ್ಲದಿದ್ದರೆ ನೀನು ಮತ್ತೊಬ್ಬರ ವಸ್ತುವನ್ನು ಅಪಹರಿಸಿದ ಚೋರನಾಗುವೆ" ಎಂಬ ಉನ್ನತವಾದ ಸಂದೇಶ ಸರ್ವರಿಗೂ, ಸರ್ವಕಾಲದಲ್ಲೂ ಆದರಣೀಯ. ಅಂತೆಯೇ ಈಶಾವಾಸ್ಯೋಪನಿಷತ್ತು ಜ್ಞಾನ, ಕರ್ಮ, ಭಕ್ತಿಗಳ ಸಮನ್ವಯವನ್ನೂ ಎಲ್ಲೆಲ್ಲೂ ವ್ಯಾಪಿಸಿರುವ ಪರಮಾತ್ಮನ ಉಪಾಸನೆಯ ಮಾರ್ಗವನ್ನೂ ಸಾಮಾನ್ಯ ಜನರೂ ಅರಿತು ಆಚರಿಸಿ ಸುಖಿಗಳಾಗುವಂತೆ ಸಂಗ್ರಹವಾಗಿಯೂ, ಸುಂದರವಾಗಿಯೂ ನಿರೂಪಿಸುತ್ತದೆ. ಜಗತ್ತಿನ ಪ್ರತಿಯೊಂದು ಪದಾರ್ಥಗಳಲ್ಲೂ ಪರಮಾತ್ಮನ ಅಸ್ತಿತ್ವವನ್ನು ಕಾಣುವವನಿಗೆ ಶೋಕ ಮೋಹಗಳೆಲ್ಲಿ ? ಕ್ರೋಧ ದ್ವೇಷಾದಿಗಳೆಲ್ಲಿ ? ಆದ್ದರಿಂದ ಎಲ್ಲೆಲ್ಲೂ ಪರಮಾತ್ಮನನ್ನು ಕಂಡು ಸರ್ವಭೂತಸುಹೃತ್ತಾಗು ಎನ್ನುತ್ತದೆ ಈ ಉಪನಿಷತ್ತು.

ಇಂತಹ ಉತ್ತಮಸಂದೇಶಗಳನ್ನು ಸರಳವಾಗಿಯೂ, ಹೃದಯಂಗಮವಾಗಿಯೂ ಉಪದೇಶಿಸುವ ಈ ಉಪನಿಷತ್ತನ್ನು ಕರ್ನಾಟಕದ ಸಾಮಾನ್ಯಜನರೂ ಅರಿತು ತಮ್ಮ ಜೀವನಮಟ್ಟವನ್ನು ಉತ್ತಮಪಡಿಸಿಕೊಳ್ಳಲಿ. ಅಂತೆಯೇ ಅವರೆಲ್ಲಾ ವಿಶ್ವಮಾನವರಾಗಿ, ವಿಶ್ವಶಾಂತಿಯನ್ನೂ ಕಂಡುಕೊಳ್ಳಲು ಈ ಗ್ರಂಥ ದಾರಿದೀಪವಾಗಲಿ ಎಂಬ ಉದ್ದೇಶದಿಂದ ಈ ಗ್ರಂಥವನ್ನು ಹೊರತರಲಾಗುತ್ತಿದೆ.

ಈ ಗ್ರಂಥ ನಮ್ಮ ಸಂಸ್ಥೆಯ ಮೊಟ್ಟಮೊದಲ ಕೊಡುಗೆ. ಕೇವಲ ಕೆಲವೇ ವರ್ಷಗಳ ಹಿಂದೆ ಆರಂಭವಾದ ಸಂಸ್ಥೆಯು ಈ ಗ್ರಂಥ ಪ್ರಕಾಶನಮಾಡಲು ಸಾಕಷ್ಟು ಶ್ರಮಿಸಿದೆ. ಹದಿನೆಂಟೇ ಮಂತ್ರಗಳಿರುವ ಈ ಉಪನಿಷತ್ತಿಗೆ ಬೇರೆ ಬೇರೆ ಆಚಾರ್ಯರು ಪುನಃ ಪುನಃ ಮನನಮಾಡಿ, ತಮ್ಮ ಚಿಂತನೆಯಿಂದಲೂ, ಅನುಭವದಿಂದಲೂ ಹೊರ ತಂದಿರುವ ಅರ್ಥವಿಶೇಷಗಳನ್ನು ಇಲ್ಲಿ ಸುಲಭವಾದ ಶೈಲಿಯಲ್ಲಿ ಕೊಡುವ ಪ್ರಯತ್ನ ಮಾಡಲಾಗಿದೆ. ಈ ಗ್ರಂಥವನ್ನು ಅಧ್ಯಯನ ಮಾಡುವವರು ಮೊದಲು ಮಂತ್ರವನ್ನೂ ನಂತರ ಪ್ರತಿಪದಾರ್ಥವನ್ನೂ ಮತ್ತು ತಾತ್ಪರ್ಯಾರ್ಥವನ್ನೂ ಚೆನ್ನಾಗಿ ಅಧ್ಯಯನಮಾಡಿದನಂತರವೇ ಭಾಷ್ಯಗಳಲ್ಲಿರುವ ವಿಶೇಷವಾದ ಅರ್ಥವನ್ನು ಅಧ್ಯಯನ ಮಾಡುವುದು ಸೂಕ್ತ. ಭಾಷ್ಯಗಳ ವಿಶೇಷಾರ್ಥಗಳು ವಿಶಕಲಿತವಾಗಿರುವಂತೆ ತೋರಿದರೂ, ಮೂಲಭೂತವಾದ ಮಂತ್ರವನ್ನು ಅದರ ತಾತ್ಪರ್ಯಾರ್ಥವನ್ನು ಮತ್ತು ವೇದಾಂತಾಚಾರ್ಯರ ಭಾಷ್ಯವನ್ನೂ ಅಧ್ಯಯನ

ಮಾಡಿದ ನಂತರ ವಿಶೇಷಾರ್ಥಗಳನ್ನು ಓದಿದರೆ ಅವುಗಳಲ್ಲಿರುವ ಸಾಮರಸ್ಯವು ಚೆನ್ನಾಗಿ ತೋರುವುದು. ಈವರೆಗೂ ಕನ್ನಡದಲ್ಲಿ ಸ್ವರಸಹಿತ ಅಪ್ರಕಟಿತವಾಗಿರುವ ಈಶಾವಾಸ್ಯ ಮಂತ್ರಗಳ ಪ್ರಕಟನ, ಈಶಾವಾಸ್ಯ ಗ್ರಂಥಸೂಚೀ ಅಳವಡಿಕೆ, ಪರಿಶಿಷ್ಟದಲ್ಲಿರುವ ನೂರಾರು ವಿಷಯಗಳು ಸಾಮಾನ್ಯ ಜನರಿಗಲ್ಲದೆ, ಪಂಡಿತರಿಗೂ ಹಾಗೆಯೇ ಸಂಶೋಧಕರಿಗೂ ಪರಮ ಸಂತೋಷಕಾರಕ ಎಂಬುದರಲ್ಲಿ ಸಂದೇಹವಿಲ್ಲ. ಸಂಸ್ಥೆಯು ಶೈಶವಾವಸ್ಥೆಯಲ್ಲಿರುವುದರಿಂದ ಎಷ್ಟೇ ಶ್ರಮವಹಿಸಿ ಈ ಅವತರಣಿಕೆಯನ್ನು ಸಿದ್ಧಪಡಿಸಿದರೂ ಇದರಲ್ಲಿ ಕೆಲವು ದೋಷಗಳು ತೋರಬಹುದು. ಓದುಗರು ಇಂತಹ ನ್ಯೂನತೆಗಳನ್ನು ಈ ಸಂಸ್ಥೆಗೆ ತಿಳಿಸಿದ ಪಕ್ಷದಲ್ಲಿ ಮುಂದಿನ ಸಂಪಾದನೆಗಳಲ್ಲಿ ಇದನ್ನು ತಿದ್ದಿಕೊಳ್ಳುವ ಪ್ರಯತ್ನ ಮಾಡಲಾಗುತ್ತದೆ.

ಈ ಗ್ರಂಥವು ಈ ಮಟ್ಟದಲ್ಲಿ ಬರಲು ಅನೇಕರ ಸಹಕಾರವೇ ಮುಖ್ಯ ಕಾರಣವಾಗಿದೆ. ಪ್ರಪ್ರಥಮವಾಗಿ ಈ ಯೋಜನೆಯ ಮುಖಂಡರಾದ ಶ್ರೀ ಉ.ವೇ. ಅರೆಯರ್ ಶ್ರೀರಾಮಶರ್ಮ ಅವರಿಗೆ ನಮ್ಮ ಸಂಸ್ಥೆಯ ಕೃತಜ್ಞತೆಗಳು ಸಲ್ಲಬೇಕಾಗಿವೆ. ಗ್ರಂಥ ಪರಿಷ್ಕರಣ ಮಾಡುವ ವಿಷಯದಲ್ಲಿ ಅವರಿಗಿರುವ ಉತ್ಸಾಹ ಅಸದೃಶವಾದುದು. ವೇದಾಂತ ಗ್ರಂಥಗಳನ್ನು ವ್ಯಾಪಕವಾಗಿ ಅಧ್ಯಯನ ಮಾಡಿರುವ ಅವರಿಗೆ ಈಶಾವಾಸ್ಯದ ಕನ್ನಡ ಅವತರಣಿಕೆಯನ್ನು ರಚಿಸಲು ಆರಂಭಿಸಿದ ನಂತರ ಎಲ್ಲ ಗ್ರಂಥಗಳಲ್ಲೂ ಈಶಾವಾಸ್ಯದ ವಿಷಯವೇ ಎದ್ದು ಕಾಣುವುದು ಸಹಜ. ಪ್ರಧಾನ ಸಂಪಾದಕನಾಗಿದ್ದ ನಾನು ಅನೇಕ ಸಂದರ್ಭದಲ್ಲಿ ಅವರ ಉತ್ಸಾಹವನ್ನು ಮೊಟಕುಗೊಳಿಸಿ ಗ್ರಂಥವು ಅತಿ ವಿಸ್ತಾರವಾಗುವುದೆಂಬ ದೃಷ್ಟಿಯಿಂದ ಕೆಲವು ವಿಷಯಗಳನ್ನು ತೆಗೆಯಬೇಕಾಯಿತು. ಆದರೂ ಶ್ರೀರಾಮಶರ್ಮರು ನಮ್ಮ ಜೊತೆಯಲ್ಲಿ ಸಹಕರಿಸಿ ಸಾಮಾನ್ಯಜನರಿಗೂ, ಸಂಶೋಧಕರಿಗೂ ಅತ್ಯುಪಯುಕ್ತವಾಗಿ, ಅತಿ ವಿಸ್ತೃತವಲ್ಲದಿದ್ದರೂ, ವಿಸ್ತೃತವಾದ ಗ್ರಂಥವನ್ನೇ ಸಿದ್ಧಮಾಡಿಕೊಟ್ಟಿದ್ದಾರೆ. ಶ್ರೀಮಾನ್ ಅರೆಯರ್‌ಅವರು ಉಪನಿಷತ್ತಿನ ಕನ್ನಡ ಛಾಯಾಪದ್ಯಗಳನ್ನು ರಚಿಸಿಕೊಟ್ಟು ಸಂಸ್ಥೆಗೆ ಅತ್ಯಂತ ಉಪಕಾರ ಮಾಡಿದ್ದಾರೆ. ಅವರಿಗೂ ನಮ್ಮ ಸಂಸ್ಥೆಯ ಅನಂತ ಕೃತಜ್ಞತೆಗಳು. ಭಾಷ್ಯಗಳನ್ನೆಲ್ಲಾ ಪೂರ್ಣವಾಗಿ ಅಧ್ಯಯನ ಮಾಡಿ ಭಾಷ್ಯತಾತ್ಪರ್ಯವನ್ನು ಶ್ರೀಮಾನ್ ಆರ್. ಆರ್. ಕೃಷ್ಣಯ್ಯಂಗಾರ್‌ರವರು ಬರೆದು ಕೊಟ್ಟಿದ್ದಾರೆ. ಗ್ರಂಥ ಸಿದ್ಧವಾದ ನಂತರ ಅದಕ್ಕೆ ಮಾಡಬೇಕಾದ ಸಂಸ್ಕಾರ, ಕರಡುಪ್ರತಿಗಳ ತಿದ್ದುವಿಕೆ, ಮುದ್ರಣದ ಕಾರ್ಯ ಮುಂತಾದವುಗಳಲ್ಲಿ ಶ್ರೀ ಎನ್. ವೆಂಕಟಾಚಾರ್, ಶ್ರೀ ಇ. ಜೆ. ಶೆಲ್ವಪಿಳ್ಳೈ ಮತ್ತು ಶ್ರೀ ಎಂ. ಬಿ. ಪಾರ್ಥಸಾರಥಿ ಅಯ್ಯಂಗಾರ್ ಇವರೆಲ್ಲಾ ವಿಶೇಷವಾಗಿ ಶ್ರಮಿಸಿದ್ದಾರೆ. ಒಂದೊಂದು ಸಲ ಗ್ರಂಥರಚನೆಗಿಂತಲೂ ಮುದ್ರಣ ಕಾರ್ಯವೇ ಕಷ್ಟವೇನೋ ಎಂದೆನಿಸುತ್ತದೆ. ಇಂತಹ ಕಾರ್ಯವನ್ನು ಈ ಮೂವರೂ ಸುಸೂತ್ರವಾಗಿ ನಡೆಸಿ ಕೊಟ್ಟಿದ್ದಾರೆ. ಶ್ರೀಮಾನ್ ಎಂ ವಿ. ವರದರಾಜನ್‌ರವರು ಗ್ರಂಥಸೂಚಿ ಮತ್ತು ಹಸ್ತಪ್ರತಿಗಳ ಲೇಖನದಲ್ಲಿ ಸಹಕರಿಸಿದ್ದಾರೆ. ಇದೂ ಅಲ್ಲದೆ, ನಮ್ಮ ಸಂಸ್ಥೆಯಲ್ಲಿರುವ ಇತರ ಸಂಶೋಧಕರು ಮತ್ತು ಕಾರ್ಯಕರ್ತರು ಈ ಗ್ರಂಥ ಪ್ರಕಾಶನದಲ್ಲಿ ಅನೇಕ ವಿಧವಾಗಿ ಸಹಾಯ ಮಾಡಿದ್ದಾರೆ.

ಶ್ರೀರಂಗಪಟ್ಟಣದ ಶುಕ್ಲಯಜುರ್ವೇದ ಘನಾಂತ ವಿದ್ವಾನ್ ಶ್ರೀ ವೆಂಕಟರಮಣಶಾಸ್ತ್ರಿಗಳು ಶುಕ್ಲಯಜುರ್ವೇದ ಸಂಹಿತೆಯ ಕಾಣ್ವಪಾಠ ಮತ್ತು ಮಾಧ್ಯಂದಿನ ಪಾಠಗಳಿಗೆ ಅನುಸಾರವಾಗಿರುವ ಈಶಾವಾಸ್ಯದ ಮಂತ್ರಗಳನ್ನು ಸ್ವರಸಹಿತವಾಗಿ ಪಠಿಸಿ, ಅವುಗಳನ್ನು ಧ್ವನಿಮುದ್ರಣ ಮಾಡಿಕೊಳ್ಳಲು ಅವಕಾಶಮಾಡಿಕೊಟ್ಟರು ಅವರೊಡನೆ ಚರ್ಚಿಸಿ ಇಲ್ಲಿರುವ ಸಸ್ವರ ಮಂತ್ರಗಳನ್ನೂ, ಪದಪಾಠಗಳನ್ನೂ ಪ್ರಪ್ರಥಮವಾಗಿ ಮುದ್ರಿಸಲಾಗಿದೆ. ಇವರಿಗೆ ನಮ್ಮ ಸಂಸ್ಥೆಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಭಾಷ್ಯಕಾರರ ಮತ್ತು ವಿವರಣಕಾರರ ಬಗ್ಗೆ ಕೆಲವು ಮಾಹಿತಿಗಳನ್ನು ಪತ್ರದಮುಖೇನ ಒದಗಿಸಿದ ಭಾರತದ ಕೆಲವು ಪಂಡಿತವರ್ಯರಿಗೂ ನಮ್ಮ ಗೌರವ ಸಲ್ಲುತ್ತದೆ.

ವೈಜ್ಞಾನಿಕ ದೃಷ್ಟಿಯಿಂದ ವಿಷಯವಿಶ್ಲೇಷಣೆ ಮಾಡಿ ಗ್ರಂಥದ ರೂಪ-ರೇಖೆಗಳು ಈ ರೀತಿ ಇದ್ದರೆ ಚೆನ್ನಾಗಿರುತ್ತದೆ ಎಂದು ಆಗಾಗ ನಮಗೆ ಮಾರ್ಗದರ್ಶನ ಮಾಡಿದ ಸುಪ್ರಸಿದ್ಧ ವಿಜ್ಞಾನಿಗಳೂ, ನಮ್ಮ ಸಂಸ್ಥೆಯ ಹಿಂದಿನ

ಅಧ್ಯಕ್ಷರೂ ಆದ ಡಾಕ್ಟರ್ ಬಿ. ಆರ್. ಶೇಷಾಚಾರ್‌ಅವರಿಗೆ ನಮ್ಮ ಅನಂತ ಕೃತಜ್ಞತೆಗಳು. ಹಾಗೆಯೇ ಈಶಾವಾಸ್ಯದ ವಿಚಾರಸಂಕಿರಣದಲ್ಲಿ ಭಾಗವಹಿಸಿ ಈಶಾವಾಸ್ಯದ ವಿಚಾರಗಳನ್ನು ಜನರ ಮುಂದಿಡುವ ಪ್ರಯತ್ನ ಹೇಗಿರಬೇಕೆಂದು ಸೂಕ್ತತಿಳುವಳಿಕೆಗಳನ್ನು ಕೊಟ್ಟ ಶ್ರೀಮಾನ್ ಎಂ. ಎ. ಎಸ್. ರಾಜನ್, ಐ. ಎ. ಎಸ್. ರಿಟೈರ್ಡ್ ಇವರಿಗೂ, ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಈ ಸಂಸ್ಥೆಯು ಇಂತಹ ಕೆಲಸಗಳನ್ನು ಸುಸೂತ್ರವಾಗಿ ನಿರ್ವಹಿಸಲು ಮುಖ್ಯವಾಗಿ ಮಾರ್ಗದರ್ಶನ ಮಾಡುವುದಲ್ಲದೆ, ಸಕಲವಿಧವಾದ ಸೌಕರ್ಯಗಳನ್ನೂ ಒದಗಿಸಿ ಕೊಟ್ಟಿರುವ ನಮ್ಮ ಕಾರ್ಯನಿರ್ವಾಹಕಮಂಡಲಿಯವರಿಗೂ ನಮ್ಮ ಕೃತಜ್ಞತೆಗಳು.

ಕಾರ್ಯನಿರ್ವಾಹಕಮಂಡಲಿಯ ಕಾರ್ಯದರ್ಶಿಗಳಾಗಿದ್ದ ಶ್ರೀಮಾನ್ ಎಂ. ಕೃಷ್ಣಮೂರ್ತಿ, ಐ. ಎ. ಎಸ್. ಅವರಿಗೂ ಹಾಗೆಯೇ ಹಾಲಿ ಕಾರ್ಯದರ್ಶಿಗಳಾಗಿರುವ ಶ್ರೀಮಾನ್ ರಮೇಶ್‌ಕುಮಾರ್, ಐ. ಎ. ಎಸ್. ಅವರಿಗೂ ಅವರು ಕೊಟ್ಟಂತಹ ಉತ್ತೇಜನ, ಸಹಕಾರ ಇವುಗಳಿಗಾಗಿ ನಾವು ಚಿರಋಣಿಗಳಾಗಿದ್ದೇವೆ.

ಇಷ್ಟೆಲ್ಲಾ ಅನುಕೂಲಗಳಿದ್ದರೂ ಘನಸರ್ಕಾರದ ಧನಸಹಾಯವಿಲ್ಲದೆ ನಮ್ಮ ಸಂಸ್ಥೆಯ ಯಾವ ಕೆಲಸವೂ ನಡೆಯದು. ಕರ್ನಾಟಕ ಸರ್ಕಾರವು ಈ ಸಂಸ್ಥೆಗೆ ಉದಾರವಾಗಿ ವಾರ್ಷಿಕ ಅನುದಾನವನ್ನು ಕೊಟ್ಟು ಇಂತಹ ಸತ್ಕಾರ್ಯಗಳು ನಡೆಯುವ ವ್ಯವಸ್ಥೆ ಮಾಡಿದೆ. ಈ ಸಂದರ್ಭದಲ್ಲಿ ಕರ್ನಾಟಕ ಘನಸರ್ಕಾರಕ್ಕೂ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಜನಪದಸೇವಾಟ್ರಸ್ಟ್‌ನ ಕಾರ್ಯದರ್ಶಿಯವರಾದ ಶ್ರೀಮಾನ್ ಸುರೇಂದ್ರಕೌಲಗಿಯವರು, ಕೈಲಾದಷ್ಟು ಮಟ್ಟಿಗೂ ಶ್ರಮವಹಿಸಿ ತಮ್ಮ ಮುದ್ರಣಾಲಯದಲ್ಲಿ ಇದನ್ನು ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ. ಸ್ವರ ಸಹಿತ ಮಂತ್ರ, ಪದಪಾಠ ಮತ್ತು ಇತರ ಕೆಲವು ಭಾಗಗಳನ್ನು ಮೈಸೂರಿನ ಪಾರಿಜಾತ ಮುದ್ರಣಾಲಯದವರು ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ, ಇವರೆಲ್ಲರಿಗೂ ಸಂಸ್ಥೆಯ ಪರವಾಗಿ ಕೃತಜ್ಞತೆಗಳು.

ಎಮ್. ಎ. ಲಕ್ಷ್ಮೀತಾತಾಚಾರ್
ಪ್ರಧಾನ ಸಂಪಾದಕರು.

# ಸಂಕೇತಾಕ್ಷರಸೂಚಿ

| | |
|---|---|
| ಅಡೈಯವಳೈಂದಾನ್–ಅರುಮ್ಬದಮ್ | ಅ. ಅ. |
| ಅನುಶಾಸನಪರ್ವಃ | ಅನು. |
| ಅಹಿರ್ಬುಧ್ನ್ಯಸಂಹಿತಾ | ಅಹಿರ್ಬು.ಸಂ.; ಅಹಿ. ಸಂ. |
| ಆಗಮಪ್ರಾಮಾಣ್ಯಮ್ | ಆ. ಪ್ರಾ. |
| ಆತ್ಮಸಿದ್ಧಿಃ | ಆ.ಸಿದ್ಧಿ. |
| ಆನಂದವಲ್ಲೀ | ಆನ. |
| ಇರುಪತ್ತ್ನಾಲಾಯಿರಪ್ಪಡಿ-ಶಬ್ದಾರ್ಥಮ್ | ಇ.ಶ. |
| ಈಶಾವಾಸ್ಯಪ್ರಕಾಶಿಕಾ | ಈ.ಪ್ರ. |
| ಉದ್ಯೋಗಪರ್ವಃ | ಉದ್ಯೋ. |
| ಐತರೇಯೋಪನಿಷತ್ | ಐತರೇಯ. |
| ಕಠೋಪನಿಷತ್ | ಕಠ. |
| ಕಾತ್ಯಾಯನ ಪ್ರಾತಿಶಾಖ್ಯಮ್ | ಕಾ.ಪ್ರಾ. |
| ಕಾತ್ಯಾಯನ ಪ್ರಾತಿಶಾಖ್ಯಭಾಷ್ಯಮ್ | ಕಾ.ಪ್ರಾ.ಭಾ. |
| ಕಾತ್ಯಾಯನಸರ್ವಾನುಕ್ರಮಣಿಕಾ | ಕಾ.ಸ. |
| ಕೇನೋಪನಿಷತ್ | ಕೇನ. |
| ಗೀತಾರ್ಥಸಂಗ್ರಹಃ | ಗೀ.ಸಂ. |
| ಗೀತಾರ್ಥಸಂಗ್ರಹರಕ್ಷಾ | ಗೀ.ಸಂ.ರ. |
| ಗೀತಾ, ರಾಮಾನುಜಭಾಷ್ಯಮ್ | ಗೀ.ಭಾ. ; ಗೀ.ರಾ.ಭಾ. |
| ಚತುರ್ವೇದಸಾರ–ನಾರಾಯಣೋಪನಿಷತ್ | ಚ.ನಾ. |
| ಜಿಜ್ಞಾಸಾಧಿಕರಣಮ್ | ಜಿ.ಅ. |
| ಜೀಯರ್ಅರುಮ್ಬದಮ್ | ಜೀ.ಅ. |
| ಜೈಮಿನೀಯನ್ಯಾಯಮಾಲಾ | ಜೈ. |
| ತಿರುವಾಯ್ಮೊೞಿ | ತಿರು. |
| ತಿರುವಾಯ್ಮೊೞಿನೂತ್ತಂದಾದಿ | ತಿರು.ನೂ. |
| ತೈತ್ತಿರೀಯ ಆರಣ್ಯಕಮ್ | ತೈ.ಆ. |
| ತೈತ್ತಿರೀಯೋಪನಿಷತ್,'ಅಂಭಸಿ' | ತೈ.ನಾ. ; ತೈ.ಅಂ. |
| ತೈತ್ತಿರೀಯ ಭಾಷ್ಯಮ್ | ತೈ.ಭಾ. |
| ತೈತ್ತಿರೀಯ ಸಂಹಿತಾ | ತೈ.ಸಂ. |
| ತೈತ್ತಿರೀಯೋಪನಿಷತ್ | ತೈ. ; ತೈ.ಉ. |
| ದಕ್ಷಸ್ಮೃತಿಃ | ದ.ಸ್ಮೃ. |
| ದ್ರಮಿಡೋಪನಿಷತ್ತಾತ್ಪರ್ಯ–ರತ್ನಾವಳೀ | ದ್ರ ತಾ.ರ. |
| ದ್ವಯೋಪನಿಷತ್ | ದ್ವ.ಉ. |
| ಪಾಣಿನಿಸೂತ್ರಮ್ | ಪಾ.ಸೂ. ; ಅಷ್ಟಾ. |
| ಪಾಣಿನಿಶೀಕ್ಷಾ | ಪಾ.ಶೀ. |
| ಪಾತಂಜಲಯೋಗಸೂತ್ರಮ್ | ಪಾ.ಯೋ.ಸೂ. ; ಪಾತ.ಯೋ. |
| ಪಾದ್ಮಸಂಹಿತಾ | ಪಾದ್ಮ.ಸಂ. |
| ಪಿಂಗಳಛಂದಸ್ಸೂತ್ರಮ್ | ಪಿಂ.ಛಂ. |
| ಪುರುಷಸೂಕ್ತಮ್ | ಪು.ಸೂ. |
| ಪ್ರಮಾಣಾಕರಸಂಗ್ರಹಃ | ಪ್ರ.ಸಂ. |
| ಪ್ರಶ್ನೋಪನಿಷತ್ | ಪ್ರ.ಉ. ; ಪ್ರ. |
| ಬಾರ್ಹಸ್ಪತ್ಯಸ್ಮೃತಿಃ | ಬಾರ್ಹ.ಸ್ಮೃ. ; ಬಾ.ಸ್ಮೃ. |
| ಬೃಹದಾರಣ್ಯಕೋಪನಿಷತ್ | ಬೃ. ; ಬೃ.ಉ. |
| ಬ್ರಹ್ಮಸೂತ್ರಮ್ | ಬ್ರ.ಸೂ. |
| ಭಗವದ್ಗೀತಾ | ಗೀ. ; ಭ.ಗೀ. |
| ಭಾಗವತಮ್ | ಭಾಗ. |
| ಭಾಷಿಕಪರಿಶಿಷ್ಟಸೂತ್ರಮ್ | ಭಾ.ಪ.ಸೂ. |
| ಭಾಷಿಕಪರಿಶಿಷ್ಟಸೂತ್ರಭಾಷ್ಯಮ್ | ಭಾ.ಪ.ಭಾ. |
| ಭೃಗುವಲ್ಲೀ | ಭೃ. |

| | |
|---|---|
| ಮನುಸ್ಮೃತಿಃ | ಮನು. |
| ಮಹಾಭಾರತಂ | ಮ.ಭಾ ; ಭಾ; ಭಾರ. |
| ಮಹೋಪನಿಷತ್ | ಮಹೋ. |
| ಮಾಧ್ಯಂದಿನಪಾಠಃ | ಮಾಧ್ಯ. |
| ಮುಕ್ತಿಕೋಪನಿಷತ್ | ಮುಕ್ತಿ.ಉ. |
| ಮುಂಡಕೋಪನಿಷತ್ | ಮುಂ ಉ. ; ಮುಂ. |
| ಮೋಕ್ಷಧರ್ಮಪರ್ವಃ | ಮೋ. |
| ಯಾಜ್ಞವಲ್ಕ್ಯಸ್ಮೃತಿಃ | ಯಾಜ್ಞ. ಸ್ಮೃತಿ. |
| ಯಾಸ್ಕನಿರುಕ್ತಮ್ | ಯಾಸ್ಕ.ನಿ. ; ಯಾ.ನಿ. |
| ರಾಮಾಯಣಮ್- ಸುಂದರಕಾಂಡಃ | ರಾ.ಸುಂ. |
| ರಂಗರಾಮಾನುಜವ್ಯಾಖ್ಯಾನಂ | ರಂ.ರಾ. |
| ಲಕ್ಷ್ಮೀತಂತ್ರಮ್ | ಲಕ್ಷ್ಮೀ.ತಂ. |
| ವರಾಹಚರಮಶ್ಲೋಕಃ | ವ.ಚ.ಶ್ಲೋ. |
| ವರಾಹಪುರಾಣಮ್ | ವರಾಹ.ಪು. |
| ವಾರ್ತಿಕಮ್ | ವಾ. |
| ವಿಷ್ಣುಪುರಾಣಮ್ | ವಿ.ಪು. |
| ವಿಷ್ಣುಪುರಾಣವ್ಯಾಖ್ಯಾ | ವಿ.ಪು.ವ್ಯಾ. |
| ವಿಷ್ಣುಸಹಸ್ರನಾಮ | ವಿ.ಸಹ. |
| ವಿಷ್ಣುಸಹಸ್ರನಾಮಭಾಷ್ಯಮ್ | ವಿ.ಸ.ಭಾ. |
| ವೇದಾಂತಾಚಾರ್ಯಭಾಷ್ಯಮ್ | ವೇ.ಭಾ. |
| ವೈಕುಂಠಸ್ತವಃ | ವೈ.ಸ್ತವ. |
| ವೈರಾಗ್ಯಪಂಚಕಮ್ | ವೈ.ಪಂ. |
| ವ್ಯಾಸಶಿಕ್ಷಾ,ಅಂಗಪ್ರಕರಣಮ್ | ವ್ಯಾ.ಶಿ.ಅಂ.ಪ್ರ. |
| ಶತಪಥಬ್ರಾಹ್ಮಣಮ್ | ಶತ.ಬ್ರಾ. |
| ಶಾಂತಿಪರ್ವಃ | ಶಾಂ. |
| ಶಾರೀರಕಮೀಮಾಂಸಾಭಾಷ್ಯಮ್ | ಶಾ.ಭಾ. |
| ಶೀಕ್ಷಾವಲ್ಲೀ | ಶೀ. |
| ಶುಕ್ಲಯಜುರ್ವೇದಃ | ಶು.ಯ. |
| ಶುಕ್ಲಯಜುರ್ವೇದಸಾಯಣ– ಭಾಷ್ಯಮ್ | ಶು.ಯ.ಸಾ.ಭಾ. |
| ಶ್ರೀಭಾಷ್ಯದ್ರಮಿಡಾಗಮ– ಐಕಕಂಠ್ಯಮ್ | ಶ್ರೀ.ಭಾ.ದ್ರ.ಐ. |
| ಶ್ರೀರಂಗಾಚಾರ್ಯಭಾಷ್ಯಮ್ | ಶ್ರೀರಂ. |
| ಶ್ರುತಪ್ರಕಾಶಿಕಾ | ಶ್ರು.ಪ್ರ. |
| ಶ್ವೇತಾಶ್ವತರೋಪನಿಷತ್ | ಶ್ವೇ.ಉ. ;ಶ್ವೇ. |
| ಸಾತ್ವತಸಂಹಿತಾ | ಸಾತ್ವತ.ಸಂ. ; ಸಾತ್ವ.ಸಂ. |
| ಸುಬಾಲೋಪನಿಷತ್ | ಸುಬಾ. |
| ಸೂತ್ರಮ್ | ಸೂ. |
| ಸ್ತೋತ್ರರತ್ನಮ್ | ಸ್ತೋ.ರ. |
| ಹರಿವಂಶಪುರಾಣಮ್ | ಹ.ಪು. |
| ಹಲಾಯುಧಛಂದಸ್ಸೂತ್ರವೃತ್ತಿಃ | ಹಲಾ. |



# ವಿಷಯಸೂಚಿ

ಪುಟ

ಪುಟ

ಪುಟ

ಪುಟ

ಮಂತ್ರ ಹತ್ತು



ವೇದಾಂತಾಚಾರ್ಯಭಾಷ್ಯ



ಈಶಾವಾಸ್ಯಪ್ರಕಾಶಿಕೆ



ಶ್ರೀರಂಗಾಚಾರ್ಯರ ವ್ಯಾಖ್ಯಾನ



ಮಂತ್ರ ಹನ್ನೊಂದು



ವೇದಾಂತಾಚಾರ್ಯಭಾಷ್ಯ

ಪುಟ

ಪುಟ

ಪುಟ

ಪುಟ

ಈಶಾವಾಸ್ಯಪ್ರಕಾಶಿಕೆ



ಪದಾರ್ಥದೀಪಿಕೆ



ಸುಬೋಧಿನೀ



ಶ್ರೀರಂಗಾಚಾರ್ಯರ ವ್ಯಾಖ್ಯಾನ

ಪುಟ

ಪುಟ

---

# ಪ್ರಸ್ತಾವನೆ

## ವೈದಿಕಸಾಹಿತ್ಯದ ಹಿರಿಮೆ

ವಿಶ್ವದಲ್ಲಿ ಇಂದಿಗೂ ಉಳಿದಿರುವ ಅತ್ಯಂತಪ್ರಾಚೀನಸಾಹಿತ್ಯವೆಂದರೆ ವೇದಗಳು ಮಾತ್ರ ಎಂಬುದನ್ನು ಆಧುನಿಕ ಭಾಷಾಶಾಸ್ತ್ರಜ್ಞರೆಲ್ಲರೂ ಒಪ್ಪಿರುವರು. ಇಂತಹ ಸಾಹಿತ್ಯದ ಉನ್ನತಿ, ಅವನತಿಗಳು ಆಗಾಗ ಆಗುತ್ತಲೇ ಇವೆ. ಸಾಂಪ್ರದಾಯಿಕರೂ ಈಗಿರುವ ವೇದಗಳ ಒಂದು ಪುನರುದ್ಧಾರಕಾಲವನ್ನು ಐದಾರು ಸಾವಿರ ವರ್ಷಗಳಷ್ಟೇ ಪ್ರಾಚೀನವೆನ್ನುತ್ತಾರೆ. ವಿಶ್ವಮಾನವನ ಆಗುಹೋಗುಗಳೆಲ್ಲದರ ಇತಿಹಾಸ, ವೇದ, ಪುರಾಣ ಹಾಗೂ ಶಾಸ್ತ್ರಗಳ ಗರ್ಭದಲ್ಲಿ ಅಡಗಿದೆ. ವೇದಶಾಸ್ತ್ರಗಳ ಬಲದಿಂದ ಇಂದಿಗೂ ನಮ್ಮ ಭಾರತದೇಶವು ಆಧ್ಯಾತ್ಮಿಕ ಸರ್ವಸಮನ್ವಯದ ವಿಶಾಲದೃಷ್ಟಿಯಿಂದ ವಿಶ್ವಕ್ಕೇ ಮಾರ್ಗದರ್ಶನ ನೀಡಬಲ್ಲದಾಗಿದೆ. ಮತ್ತು ಶಾಂತಿ, ಸುಖ, ಸೌಭಾಗ್ಯಗಳನ್ನು ನೀಡಲು ಸಮರ್ಥವಾಗಿದೆ. "ಸಾ ಹಿ ಶ್ರೀರಮೃತಾ ಸತಾಂ" ಎಂಬ ಸೂಕ್ತಿಯಂತೆ ವೇದ ವಾಙ್ಮಯ ವಿಶ್ವದ ಸಜ್ಜನರ ಅಳಿಯದ ಐಶ್ವರ್ಯವೆನಿಸಿದೆ. ಭಾರತೀಯರ ಭಾರತೀಯತೆ ಉಳಿದಿರುವುದು ಇದರಿಂದಲೇ. ಇದು ಭಾರತೀಯರಿಗೆ ಒಂದು ಹೆಮ್ಮೆಯ ವಿಚಾರ. ಇದರಿಂದಲೇ ಭಾರತದೇಶವು ಜಗತ್ತಿಗೆ ಗುರುವಾಗಬಲ್ಲದು. ಈ ಬಗ್ಗೆ ಮನುವಿನ ವಚನವೊಂದನ್ನು ಆಸ್ವಾದಿಸಬಹುದು.

"ಏತದ್ದೇಶಪ್ರಸೂತಸ್ಯ ಸಕಾಶಾದಗ್ರಜನ್ಮನ :
ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾ : "
ಮನುಸ್ಮೃತಿ. ೨. ೨೦.

## ವೈದಿಕಸಾಹಿತ್ಯದ ವೈಶಾಲ್ಯ

ಈ ವೈದಿಕಸಾಹಿತ್ಯ ವಿಶ್ವಮಾನವನ ಉಪಕಾರದೃಷ್ಟಿಯೊಂದರಿಂದಲೇ ವಿಶಾಲವಲ್ಲ, ಅದು ತನ್ನ ಆಕಾರ ಹಾಗೂ ಸಹಾಯಕವಾದ ಅಂಗೋಪಾಂಗಗಳಿಂದಲೂ ಅತಿವಿಶಾಲವಾಗಿದೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬುದಾಗಿ ವೇದಗಳು ಮುಖ್ಯವಾಗಿ ನಾಲ್ಕು ಗುಂಪಾಗಿವೆ. ಋಗ್ವೇದದಲ್ಲಿ ಇಪ್ಪತ್ತೊಂದು ಶಾಖೆಗಳೂ, ಯಜುರ್ವೇದದಲ್ಲಿ ನೂರ ಒಂದು ಶಾಖೆಗಳೂ, ಸಾಮವೇದದಲ್ಲಿ ಒಂದು ಸಾವಿರಶಾಖೆಗಳೂ, ಅಥರ್ವಣವೇದದಲ್ಲಿ ಒಂಭತ್ತುಶಾಖೆಗಳೂ ಇದ್ದವು. ಈ ಅಳಿದುಳಿದಿರುವ ನಾಲ್ಕುವೇದಗಳ ಒಂದೊಂದೇ ಶಾಖೆಯನ್ನು ಮುದ್ರಿಸಿದರೂ ಅದು ಒಂದು ದೊಡ್ಡ ಪುಸ್ತಕವಾಗುವುದು. ಒಂದೊಂದು ಶಾಖೆಯಲ್ಲೂ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್, ಖಿಲ ಎಂಬ ವಿಭಾಗಗಳಿವೆ. ಇವುಗಳನ್ನು ಕಂಠಪಾಠ ಮಾಡಿ ರಕ್ಷಿಸಲೆಂದೇ ಇವುಗಳ ವಿವಿಧರೂಪದ ಆವೃತ್ತಿಗಳು ಪದ, ಕ್ರಮ. ಜಟೆ, ಘನ ಮುಂತಾದ ರೀತಿಯಲ್ಲಿ ಬಹಳ ವಿಸ್ತೃತವಾಗಿವೆ. ಸುಮಾರು ಒಬ್ಬ ಮನುಷ್ಯ ಅದೇ ಕೆಲಸಕ್ಕಾಗಿ ಕುಳಿತು ಒಂದು ಶಾಖೆಯನ್ನು ಪೂರ್ಣವಾಗಿ ಕಲಿಯಲು ಹನ್ನೆರಡು ವರ್ಷಗಳು ಬೇಕಾಗುವುದು. ಇದಲ್ಲದೆ ಶಿಕ್ಷಾ, ವ್ಯಾಕರಣ, ಛಂದಸ್, ನಿರುಕ್ತ, ಜ್ಯೌತಿಷ, ಕಲ್ಪ ಎಂಬ ಆರು ಅಂಗಗಳನ್ನೂ, ಪುರಾಣ, ನ್ಯಾಯಶಾಸ್ತ್ರ, ಮೀಮಾಂಸಾ, ಧರ್ಮಶಾಸ್ತ್ರಗಳೆಂಬ ಉಪಾಂಗಗಳನ್ನೂ ಕಲಿಯಬೇಕಾಗುವುದು. ಇವು ವೇದದ ಅರ್ಥಜ್ಞಾನಕ್ಕೆ ಅತಿಮುಖ್ಯ ಸಹಾಯಕಗಳು. ಇವುಗಳನ್ನೂ ಇವೆಲ್ಲದರ ವ್ಯಾಖ್ಯಾನ ವಿವರಣೆಗಳನ್ನೂ ಸರಿಯಾಗಿ ಕಲಿತರೆ ಮಾತ್ರ ವೇದವಚನಗಳಿಗೆ ಸರಿಯಾದ ಅರ್ಥ ತಿಳಿದುಕೊಳ್ಳಲು ಸಾಧ್ಯ. ವೇದಾರ್ಥದ ಅನುಭವಮಾರ್ಗದಲ್ಲಿ ಇತಿಹಾಸ, ಆಗಮಗಳೂ ಶಿಷ್ಟರಾದವರ ಆಚರಣೆಗಳೂ ಬಹುಮುಖ್ಯ ಸಹಾಯಕಗಳಾಗಿವೆ. ಹಾಗೂ ಯೋಗಾಭ್ಯಾಸದ ನೆರವೂ ಸ್ವಲ್ಪ ಅವಶ್ಯಕ.

ಇಂತಹ ದೀರ್ಘ ಹಾಗೂ ದೃಢವಾದ ಸಾಂಗೋಪಾಂಗವಾದ ಕಲಿಕೆಯಿಂದ ವೇದಾರ್ಥಗಳನ್ನು ಅನುಭವಕ್ಕೆ ತಂದುಕೊಂಡು ಭಟ್ಟಭಾಸ್ಕರ, ಹರದತ್ತ, ಸಾಯಣಾಚಾರ್ಯ ಮುಂತಾದ ಅನೇಕ ಆಚಾರ್ಯ ಮಹನೀಯರು ತಮ್ಮ ಭಾಷ್ಯಗ್ರಂಥಗಳಲ್ಲಿ ವಿವರಿಸಿದ್ದಾರೆ. ಇವುಗಳ ಪೂರ್ಣ ಅಧ್ಯಯನವು ಮಾನವನ ವಿಚಾರಶಕ್ತಿಯನ್ನು ಹೊಡೆದೆಬ್ಬಿಸಿ ಅವನ ಬುದ್ಧಿಯನ್ನೂ ಹರಿತವಾಡಿ, ಶ್ರದ್ಧೆ, ವಿಶ್ವಾಸಗಳನ್ನು ಮೂಡಿಸಿ ಸರಳಗೊಳಿಸಿ ಅವನಿಗೆ ತಾತ್ತ್ವಿಕದರ್ಶನ ವಾಗುವಂತೆ ಮಾಡಬಲ್ಲುದು. ಹಾಗೂ ಇಂತಹ ಅಧ್ಯಯನ ಮಾಡಿರುವ ಆಚಾರ್ಯರ ಸಾರವಾದ ಸದುಪದೇಶ ಗಳಿಂದಲೂ ಅನುಗ್ರಹದಿಂದಲೂ ಇಂತಹ ಅಧ್ಯಯನ ಮತ್ತು ತತ್ವದರ್ಶನವು ಸರಳವೂ ಸುಲಭವೂ ಆಗುವುದು. ಇಂತಹ ತತ್ವದರ್ಶಿಯ ಮಾತೂ ನಡತೆಯೂ ಎಂದೆಂದಿಗೂ ವಿಶ್ವಮಾನವನಿಗೆ ಮಾರ್ಗದರ್ಶಕವಾಗಿ ನಿಲ್ಲುವುದು.

## ವೇದಗಳ ಮುಖ್ಯ ವಿಷಯ

ವೇದಗಳಲ್ಲಿರುವ ವಿಷಯ ಜಗದ್ರಹಸ್ಯ. ಈ ರಹಸ್ಯದಲ್ಲಿ ಮೂರು ಅಂಶಗಳು ಬೆರೆತಿರುತ್ತವೆ. ಜೀವ ವಸ್ತುಗಳು, ಅವು ಅನುಭವಿಸುವ ಜಡವಸ್ತುಗಳು, ಇವೆಲ್ಲವನ್ನು ನಿಯಂತ್ರಿಸುವ ಮಹಾಶಕ್ತಿಯುತ ವಸ್ತುವೊಂದಿದೆ. ಇದೇ ಪರಮಾತ್ಮ. ಈ ಮೂರುವಿಧವಾದ ತತ್ವಗಳ ವಿಶಿಷ್ಟವಾದ ಸ್ವರೂಪವನ್ನು ತಿಳಿಸಿ, ಲೌಕಿಕ ಸುಖ, ಅನುಭವಗಳನ್ನೂ ತೋರಿಸಿ, ಅಲೌಕಿಕವಾದ ದಿವ್ಯಾನುಭವದ ಕಡೆಗೆ ಮಾನವನನ್ನು ಕರೆದೊಯ್ಯುವುದೇ ವೇದ ಗಳ ಪರಮೋದ್ದೇಶ್ಯ. ಈ ರಹಸ್ಯದರ್ಶನಕ್ಕೆ ತಕ್ಕ ಉಪಾಯವನ್ನು ತೋರಿಸಿ ಕೊಡಬಲ್ಲ ಸಾಹಿತ್ಯವೇ ಈ ವೇದರಾಶಿ. ಇದರಲ್ಲಿ ಭೂಗೋಳ, ಖಗೋಳ, ಮಳೆ, ಸಿಡಿಲು, ಬೆಂಕಿ, ಗಾಳಿಗಳವಿಚಾರ; ಗೋ, ಧನ, ಧಾನ್ಯಗಳ ವಿಚಾರ; ಮನುಷ್ಯನ ಸಮಾಜಬಾಂಧವ್ಯಗಳ ವಿಚಾರ; ರಾಷ್ಟ್ರ ವಿಚಾರ; ಸಂಪತ್, ಆಪತ್‌ಗಳ ವಿಚಾರ; ಇಂತಹ ಎಷ್ಟೋ ವಿಚಾರಗಳೂ ದೇವಾಧಿದೇವತೆಗಳ, ವಿಚಿತ್ರಲೋಕಾಂತರಗಳ, ಸ್ವರ್ಗ–ನರಕಗಳ, ಯಜ್ಞಯಾಗಾದಿ ಗಳ ವಿಚಾರಗಳೂ ಬರುತ್ತವೆ. ಆದರೆ ಇವೆಲ್ಲಾ ಪ್ರಾಸಂಗಿಕವಾದವು, ಮುಖ್ಯವಲ್ಲ. ವೇದದ ಮುಖ್ಯದೃಷ್ಟಿ ಇರುವುದು ಜಗದ್ರಹಸ್ಯದ ಪರಮಾವಧಿಯಾದ ಆತ್ಮದರ್ಶನದಲ್ಲಿ. ಯಾವ ಮಹಾತತ್ವವನ್ನು ಕಣ್ಣು, ಕಿವಿ ಮೊದಲಾದ ಇಂದ್ರಿಯಗಳಿಂದ ಪ್ರತ್ಯಕ್ಷವಾಗಿ ಕಾಣಲಾಗುವುದಿಲ್ಲವೋ ಅಂತಹ ಲೋಕಾತೀತ ತತ್ವವನ್ನು ತಿಳಿಸಿ ಕೊಡಬಲ್ಲುದು ವೇದ. ವೇದದ ವೇದತ್ವವಿರುವುದು ಅಂತಹ ಅತೀಂದ್ರಿಯ ವಸ್ತುವಿನ ಬೋಧನೆಯಲ್ಲಿ. ಇದೇ ಅರ್ಥದ ಈ ಸೂಕ್ತಿ ಮನನೀಯವಾಗಿದೆ.

ಪ್ರತ್ಯಕ್ಷೇಣಾನುಮಿತ್ಯಾ ವಾ
ಯಸ್ತೂಪಾಯೋ ನ ಬುಧ್ಯತೇ ।
ಏನಂ ವಿದಂತಿ ವೇದೇನ
ತಸ್ಮಾತ್ ವೇದಸ್ಯ ವೇದತಾ॥

## ವೇದಶಾಖೆ, ಸಂಪ್ರದಾಯ

ವೇದಗಳ ಉಪದೇಶಪರಂಪರೆಯೇ ಸಂಪ್ರದಾಯ. ಇದು 'ಬ್ರಹ್ಮಸಂಪ್ರದಾಯ", "ಆದಿತ್ಯಸಂಪ್ರದಾಯ ಎಂದು ಎರಡುಬಗೆಯಾಗಿದೆ. ಆದಿಸೃಷ್ಟಿಯಲ್ಲೇ ಪರಮಾತ್ಮನು ಹಯಗ್ರೀವಾವತಾರಮಾಡಿ ಚತುರ್ಮುಖ ಬ್ರಹ್ಮನಿಗೆ ಸಕಲವೇದಗಳನ್ನೂ ಉಪದೇಶಿಸಿದನೆಂದು ಪುರಾಣೇತಿಹಾಸಮೂಲಗಳು ಸಾರುತ್ತಿವೆ. ಇದರ ಪ್ರಕಾರ ಆ ಬ್ರಹ್ಮನಿಂದ ಉಪದೇಶಪರಂಪರೆಯಲ್ಲಿ ವೇದವನ್ನು ಕಲಿತ ಬಹುಮಂದಿ ಮಹರ್ಷಿಗಳು ಇದ್ದರು. ಲಕ್ಷೋಪ ಲಕ್ಷ, ಶಾಖೋಪಶಾಖೆಗಳಾಗಿ ವಿಶ್ವದಲ್ಲಿ ಬೆಳೆದುನಿಂತಿದ್ದ ವೇದವೃಕ್ಷವು ಕಾಲಾನುಕ್ರಮದಲ್ಲಿ ಶಿಥಿಲವಾಗಿ ನಷ್ಟವಾ ಯಿತು. ಭಗವಾನ್ ವೇದವ್ಯಾಸಮಹರ್ಷಿಗಳು ಐದಾರುಸಾವಿರವರ್ಷಗಳ ಹಿಂದೆ ತಾವೇ ಹೀಗೆ ಅಳಿದುಳಿದು

ಚೆಲ್ಲಾಪಿಲ್ಲಿಯಾಗಿದ್ದ ವೇದಭಾಗಗಳನ್ನೆಲ್ಲ ಒಂದೆಡೆ ಕೂಡಿಸಿ ನಾಲ್ಕಾಗಿ ವಿಂಗಡಿಸಿ ಸಂಪಾದಿಸಿ ತಮ್ಮ ಶಿಷ್ಯಪ್ರಶಿಷ್ಯ ಪರಂಪರೆಯಲ್ಲಿ ರೂಢಿಸಿದರು. ಇದೇ ಬ್ರಹ್ಮಸಂಪ್ರದಾಯ. ಈಗ ಅಳಿದುಳಿದಿರುವ ನಾಲ್ಕೂ ವೇದಶಾಖೆಗಳು ಇದೇ ಸಂಪ್ರದಾಯಕ್ಕೆ ಸೇರಿವೆ. ಇದೇಕಾಲದಲ್ಲಿ ವ್ಯಾಸರ ಪ್ರಶಿಷ್ಯರಾಗಿದ್ದ ಯಾಜ್ಞವಲ್ಕ್ಯಮಹರ್ಷಿಗಳು ಕಾರಣಾಂತರದಿಂದ ಬೇರೆಯಾಗಿ ಸೂರ್ಯನ ಬಳಿ ನೇರವಾಗಿಯೇ ನಾಲ್ಕು ವೇದಗಳ ಶಾಖೆಗಳನ್ನು ಕಲಿತು ಸ್ವತಂತ್ರವಾಗಿ ತಮ್ಮ ಶಿಷ್ಯಪ್ರಶಿಷ್ಯರ ಮೂಲಕ ರೂಢಿಸಿದರು. ಇದೇ ಆದಿತ್ಯಸಂಪ್ರದಾಯ.

## ಶುಕ್ಲ ಯಜುರ್ವೇದ

ವ್ಯಾಸಶಿಷ್ಯರಲ್ಲಿ ಪೈಲ, ವೈಶಂಪಾಯನ, ಜೈಮಿನಿ, ಸುಮನ್ತು ಎಂಬ ನಾಲ್ವರೂ ಕ್ರಮವಾಗಿ ನಾಲ್ಕು ವೇದಗಳಲ್ಲಿ ಒಂದೊಂದನ್ನು ಪ್ರಚುರಪಡಿಸುತ್ತಿದ್ದರು. ವ್ಯಾಸರು ಒಂದು ಬಾರಿ ಮಹಾಮೇರುವಿನಬಳಿ ಋಷಿಗಳ ಸಭೆಯೊಂದನ್ನು ನಡೆಸಲು ಯೋಚಿಸಿ ತಮ್ಮ ಶಿಷ್ಯರೆಲ್ಲರನ್ನೂ ಆಹ್ವಾನಿಸಿ, ಈ ಸಭೆಗೆ ಹಾಜರಾಗದವರಿಗೆ ಒಂದು ವಾರದಲ್ಲೇ ಬ್ರಹ್ಮಹತ್ಯಾದೋಷ ತಗಲುವುದೆಂದೂ ಸೂಚಿಸಿದ್ದರು. ಕಾರಣಾಂತರದಿಂದ ವೈಶಂಪಾಯನರೊಬ್ಬರು ಮಾತ್ರ ಅಲ್ಲಿಗೆ ಹೋಗಲಾಗಲಿಲ್ಲ. ಅಕಸ್ಮಾತ್ ಒಂದು ದಿನ ತಮ್ಮ ಆಶ್ರಮದಲ್ಲೇ ತಮ್ಮ ತಂಗಿಯ ಮಗುವೊಂದನ್ನು ತಿಳಿಯದೆ ಅವರು ತುಳಿದುದರಿಂದ ಅದು ಸಾವನ್ನಪ್ಪಿತು. ವೈಶಂಪಾಯನರು ಈ ಪಾಪದ ಪರಿಹಾರಕ್ಕಾಗಿ ತಮ್ಮ ಶಿಷ್ಯರೆಲ್ಲರನ್ನೂ ತಪಸ್ಸು ಮಾಡಲು ಹೇಳಿದರು. ಅವರ ಶಿಷ್ಯರಲ್ಲೊಬ್ಬರಾದ ಯಾಜ್ಞವಲ್ಕ್ಯರು "ಒಬ್ಬರು ಮಾಡಿದ ಪಾಪಕ್ಕೆ ಹತ್ತಾರು ಜನ ಏಕೆ ಕಷ್ಟಪಡಬೇಕು ? ನಾನೊಬ್ಬನೇ ಈ ಪಾಪದ ಪರಿಹಾರಕ್ಕಾಗಿ ನಿಶ್ಚಲ ತಪಸ್ಸನ್ನು ನೆರವೇರಿಸಬಲ್ಲೆ" ಎಂದು ಸ್ವಲ್ಪ ಅಹಂಕಾರದಿಂದ ಹೇಳಿದರು. ವೈಶಂಪಾಯನರಿಗೆ ಕೋಪಬಂದು, ಇಂತಹ ನೀನು ನನ್ನ ಶಿಷ್ಯನಾಗಿರಕೂಡದು. ನನ್ನಿಂದ ಕಲಿತುದೆಲ್ಲವನ್ನೂ ಈಗಲೇ ಬಿಟ್ಟು ಹೊರಡು ಎಂದರು. ಒಳ್ಳೆಯ ತಪಸ್ಸೂ ಯೋಗಶಕ್ತಿಯೂ ಇದ್ದ ಯಾಜ್ಞವಲ್ಕ್ಯರು ಆವರೆಗೆ ತಾವು ಕಲಿತ ಎಲ್ಲವನ್ನೂ (ವಾಂತಿಯ ರೂಪದಲ್ಲಿ) ಹೊರಚೆಲ್ಲಿದರು. ಆಗ ಹೀಗೆ ಹೊರಬಿದ್ದ ವೇದವೆಲ್ಲವೂ ವ್ಯರ್ಥವಾಗಬಾರದೆಂದು ಅಲ್ಲಿದ್ದ ಇತರಶಿಷ್ಯರು ತಾವೂ ತಮ್ಮ ತಪೋಬಲದಿಂದ "ತಿತ್ತಿರಿ - ಮೈನಾ" ಪಕ್ಷಿಗಳಾಗಿ ಅದೆಲ್ಲವನ್ನೂ ತಿಂದು ಅರಗಿಸಿಕೊಂಡರು. ಹೀಗಾಗಿಯೇ ಆ ವೇದಭಾಗಗಳಿಗೆ 'ತೈತ್ತಿರೀಯ' ಎಂದು ಹೆಸರಾಗಿದೆ. ಇತ್ತ ಯಾಜ್ಞವಲ್ಕ್ಯರು ಗುರುವನ್ನು ತ್ಯಜಿಸಿ, ಸೂರ್ಯನನ್ನು ಕುರಿತು ತಪಸ್ಸು ಮಾಡಿದರು. ಸೂರ್ಯನು ಬಿಳಿಕುದುರೆಯ ರೂಪದಲ್ಲಿ ಪ್ರತ್ಯಕ್ಷನಾಗಿ ವ್ಯಾಸ, ವೈಶಂಪಾಯನಾದಿಗಳಿಗೂ ಈವರೆಗೆ ಸಿಗದಿದ್ದಂತಹ ವೇದರಾಶಿಯನ್ನು ಸಾಂಗವಾಗಿ ರಹಸ್ಯಗಳೊಡನೆ ಉಪದೇಶಿಸಿದನು.

ಮೂಲತಃ ವೇದವೆಲ್ಲವೂ ಯಜುರ್ವೇದವಾಗಿಯೇ ಇರುವುವು. ಯಾಜ್ಞವಲ್ಕ್ಯರು ಸೂರ್ಯನಿಂದ ಪಡೆದ ವೇದರಾಶಿಯನ್ನು ವ್ಯಾಸರಂತೆ ಋಕ್, ಯಜುಸ್, ಸಾಮ, ಅಥರ್ವ ಎಂದು ವಿಭಾಗಿಸಿದರು. ಯಜ್ಞದಲ್ಲಿ ಋತ್ವಿಕ್‌ಗಳ ಸೌಕರ್ಯಕ್ಕಾಗಿಯೂ ಶಿಷ್ಯರ ಅಧ್ಯಯನಸೌಕರ್ಯಕ್ಕಾಗಿಯೂ ಅವುಗಳಲ್ಲೂ ಅಂತರ್ವಿಭಾಗವನ್ನು ಮಾಡಿರುವರು.

ಇವರ ಶಿಷ್ಯರಲ್ಲಿ ಶಾಂಖ್ಯಾಯನ, ಬಾಷ್ಕಲ, ಕೌಷೀತಕರು, ಋಗ್ವೇದವನ್ನು ಕಲಿತು ಪ್ರಚುರಪಡಿಸಿದರು. ಹೀಗೆ ಕಣ್ವ, ಮಧ್ಯಂದಿನ ಮುಂತಾದವರು ಯಜುರ್ವೇದವನ್ನೂ, ಕೌಥುಮರು ಸಾಮವೇದವನ್ನೂ, ಶೌನಕರು ಅಥರ್ವವೇದವನ್ನೂ ಪ್ರಚುರಪಡಿಸಿದರು. ಇವುಗಳಲ್ಲಿ ಈ ಶುದ್ಧವಾದ ಯಜುರ್ವೇದದ ಮುಂದೆ ಯಾಜ್ಞವಲ್ಕ್ಯರು ಗುರುವಿನ ಬಳಿ ತ್ಯಜಿಸಿದ ವೇದಭಾಗಗಳು, ನೀರಸವಾಗಿಯೂ ಮಂಕಾಗಿಯೂ ಕಾಣುತ್ತಿದ್ದವು. ಆದ್ದರಿಂದ ಅವುಗಳಿಗೆ ಕೃಷ್ಣಯಜುರ್ವೇದ ಎಂದು ಹೆಸರಾಯಿತು. ಹೊಸದಾಗಿ ಸೂರ್ಯನಿಂದ ಪಡೆದ ಯಜುರ್ವೇದ

ಭಾಗವು ಶುಕ್ಲಯಜುರ್ವೇದ ಎಂದೂ ಪ್ರಸಿದ್ಧವಾಯಿತು. ಬಿಳಿಯಕುದುರೆಯ ರೂಪದಲ್ಲಿ ಸೂರ್ಯನು ಮಟಮಟ ಮಧ್ಯಾಹ್ನದಲ್ಲಿ ಪ್ರಜ್ವಲಿಸುತ್ತಾ ಬೆಳ್ಳಗಿದ್ದು ಇದನ್ನು ಉಪದೇಶಿಸಿದುದರಿಂದಲೂ ಇದು ಶುಕ್ಲಯಜುರ್ವೇದವೆನಿಸಿದೆ. ಕೃಷ್ಣಯಜುರ್ವೇದದಲ್ಲಿ ಮಂತ್ರ ಬ್ರಾಹ್ಮಣಗಳ ಮಿಶ್ರಣವಾಗಿರುವುದರಿಂದಲೂ ಶುಕ್ಲಯಜುರ್ವೇದದಲ್ಲಿ ಇಂತಹ ಮಿಶ್ರಣವಿಲ್ಲದಿರುವುದರಿಂದಲೂ ಇದನ್ನು ಶುಕ್ಲ ಎನ್ನಲು ಕಾರಣ ಎನ್ನುವರು. ಯಾಜ್ಞವಲ್ಕ್ಯರು ಪಡೆದ ವೇದರಾಶಿಯೆಲ್ಲಕ್ಕೂ ಶುಕ್ಲಯಜುರ್ವೇದ ಎಂಬ ಹೆಸರಿರಬಹುದಾದರೂ ಈಗ ಯಜ್ಞದಲ್ಲಿ ಅಧ್ವರ್ಯುವು ಕಲಿತಿರಬೇಕಾದ ವೇದಭಾಗಕ್ಕೆ ಮಾತ್ರ ಶುಕ್ಲಯಜುರ್ವೇದ ಎಂಬ ಹೆಸರು ರೂಢಿಯಲ್ಲಿದೆ.

ಶುಕ್ಲಯಜುರ್ವೇದಕ್ಕೆ ವಾಜಸನೇಯಶಾಖೆ ಎಂದು ಹೆಸರಿದೆ. ಇದನ್ನು ಎರಡು ರೀತಿಯಲ್ಲಿ ವಿವರಿಸುವರು. ವಾಜಸನಿ ಎಂಬುದೂ ಯಾಜ್ಞವಲ್ಕ್ಯರ ಹೆಸರು. ಅವರು ಪ್ರಚುರಪಡಿಸಿದ ವೇದಭಾಗ 'ವಾಜಸನೇಯ' ಎನಿಸಿತು. 'ವಾಜ' ಎಂದರೆ ವೇಗ. ವೇಗಶಾಲಿಯಾದವನು ಸೂರ್ಯ ಹಾಗೂ ಕುದುರೆ. 'ಸನಿ' ಎಂದರೆ ಕೊಡುವವನು. ಸೂರ್ಯನೇ ಮಳೆ, ಬೆಳೆಗಳಿಗೆ ಕಾರಣ. ಅನ್ನವೆಂದರೆ ಆಹಾರಪದಾರ್ಥ. ಹೀಗೆ ವಿಶ್ವಕ್ಕೆ ಅನ್ನ ಒದಗಿಸುವವನು ಸೂರ್ಯ ಅವನೇ ವಾಜಸನಿ. ಸೂರ್ಯ ಕುದುರೆಯಾಗಿ ಬಂದು ಉಪದೇಶಿಸಿದ ಈ ವೇದಭಾಗಕ್ಕೆ ಹೀಗೆ ವಾಜಸನೇಯ ಎಂಬ ಹೆಸರೂ ಸೂಕ್ತವಾಗಿದೆ.

## ಕಾಣ್ವ, ಮಾಧ್ಯಂದಿನ ಶಾಖೆಗಳು

ಯಾಜ್ಞವಲ್ಕ್ಯರು ತಮ್ಮ ಯಜುರ್ವೇದವನ್ನು ಕಣ್ವ, ಮಧ್ಯಂದಿನ ಮುಂತಾದ ಹದಿನೈದು ಜನ ಶಿಷ್ಯರಿಗೆ ಉಪದೇಶಿಸಿದರು ಹೀಗೆ ಶುಕ್ಲಯಜುರ್ವೇದದಲ್ಲಿ ಹದಿನೈದು ಶಾಖೆಗಳು ಆದವು. ಹೀಗೆ ಮತ್ತೆರಡು ಉಪಶಾಖೆಗಳಿರುವುದಾಗಿ ಕೆಲವರು ಹೇಳುತ್ತಾರೆ. ಒಟ್ಟು ಶುಕ್ಲಯಜುರ್ವೇದಕ್ಕೇ 'ಪ್ರಥಮ ಶಾಖೆ' ಎಂಬ ಹೆಸರಿದ್ದರೂ ಈ ವೇದದ ಶಾಖೆಗಳಲ್ಲೆಲ್ಲ ಪ್ರಥಮಶಾಖೆ ಎನಿಸಿರುವುದು 'ಕಾಣ್ವಶಾಖೆ'. ಇದು ಕಣ್ವಮಹರ್ಷಿಗಳು ಸ್ವೀಕರಿಸಿ ಪ್ರಚುರಪಡಿಸಿದ ಭಾಗ. ಇದರ ಪ್ರಚಾರ ಭಾರತದ ದಕ್ಷಿಣದಲ್ಲೇ ಹೆಚ್ಚಾಗಿದೆ. ಇದರ ಪಠನಕ್ರಮ ಕೃಷ್ಣಯಜುರ್ವೇದದ ಕ್ರಮವನ್ನೇ ಸ್ವಲ್ಪಮಟ್ಟಿಗೆ ಹೋಲುತ್ತದೆ. ಇದರಲ್ಲಿ ಪದಗಳನ್ನು ಬಿಡಿಸಿ ಪಠನವನ್ನು ವ್ಯವಸ್ಥೆಗೊಳಿಸಿದವರು ಕಣ್ವರು. ಈ ಪದಪಾಠದಲ್ಲಿ ಪುನರುಕ್ತವಾಗುವಂತಹ ಪದಗಳಿಗೆ ಅರ್ಥವ್ಯತ್ಯಾಸವಿದ್ದಾಗ ಮಾತ್ರ ಅವನ್ನು ಅವಶ್ಯವಾಗಿ ಪುನಃ ಪಠಿಸಲಾಗಿದೆ. ಮಧ್ಯಂದಿನ ಮಹರ್ಷಿ ಪ್ರಚುರಪಡಿಸಿದ ಭಾಗವೇ 'ಮಾಧ್ಯಂದಿನ ಶಾಖೆ'. ಇದು ಭಾರತದ ಉತ್ತರದಲ್ಲೇ ಹೆಚ್ಚು ಬಳಕೆಯಲ್ಲಿದೆ. ಇದರ ಪಠನಕ್ರಮ ಋಗ್ವೇದದ ಕ್ರಮವನ್ನೇ ಸ್ವಲ್ಪಮಟ್ಟಿಗೆ ಹೋಲುತ್ತದೆ. ಇದಕ್ಕೆ ಪದಪಾಠವ್ಯವಸ್ಥೆ ಮಾಡಿದವರು ಶಾಕಲ್ಯ ಎಂಬ ಮಹರ್ಷಿ. ಇದರಲ್ಲಿ ಪುನರುಕ್ತವಾಗುವಂತಹ ಪದಗಳನ್ನು ಮತ್ತೆ ಪಠಿಸುವುದಿಲ್ಲ. ಅರ್ಥನಿರ್ಣಯ ಮಾಡುವಾಗ ಪದಗಳ ವಿಂಗಡಣೆ ಅತ್ಯವಶ್ಯಕ. ಇದರಲ್ಲೂ ಕಣ್ವರು ಅರ್ಥವಿಶೇಷವಿರುವ ಸ್ಥಳಗಳನ್ನೆಲ್ಲ ನಿರ್ಣಯವಾಗಿ ಗುರುತಿಸಿದ್ದಾರೆ. ಹೀಗೆ ಮಾಧ್ಯಂದಿನಪಾಠಕ್ಕಿಂತ ಕಾಣ್ವಪಾಠ ಬಹಳ ಉಪಯುಕ್ತವೆನಿಸಿದೆ. ಹಾಗೂ ಮಂತ್ರಯಾಚಾರ್ಯರೂ ಕಾಣ್ವಪಾಠವನ್ನೇ ಆದರಿಸಿ ಭಾಷ್ಯರಚನೆ ಮಾಡಿದ್ದಾರೆ ಎಂಬುದೂ ಇಲ್ಲಿ ಗಮನಾರ್ಹ.

## ಕಾಣ್ವಶಾಖೆಯ ಅಂತರ್ವಿಭಾಗಗಳು

ಪ್ರತಿಯೊಂದು ಶಾಖೆಯಲ್ಲಿರುವಂತೆಯೇ ಕಾಣ್ವಶಾಖೆಯಲ್ಲೂ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್, ಖಿಲ ಎಂಬ ಭಾಗಗಳಿವೆ. 'ಸಂಹಿತೆ' ಎಂದರೆ ಮಂತ್ರಗಳ ಸಂಚಯ. ಮಂತ್ರಗಳ ಪ್ರಯೋಗಗಳನ್ನು ಅರ್ಥಗಳನ್ನು ರೋಚಕವಾದ ಇತಿಹಾಸಗಳನ್ನು ತಿಳಿಸುವ ವೇದಭಾಗಕ್ಕೆ 'ಬ್ರಾಹ್ಮಣ' ಎಂದು ಹೆಸರು. ಕೆಲವು ರಹಸ್ಯವಿಚಾರಗಳನ್ನು ಏಕಾಂತವಾಗಿ ಕಾಡಿನಲ್ಲಿ ಅಭ್ಯಾಸಮಾಡುವುದೇ ಸೂಕ್ತವಾದುದರಿಂದ ಅಂತಹ ವಿಚಾರಪರ

ವೇದಭಾಗಕ್ಕೆ 'ಆರಣ್ಯಕ' ಎಂದು ಹೆಸರು. ಅತ್ಯಂತ ರಹಸ್ಯವಾದ ಜ್ಞಾನಸಾರಭಾಗವೇ 'ಉಪನಿಷತ್'. ಅಧ್ಯಯನ ಮಾಡುವಾಗ ಅಕಸ್ಮಾತ್ ಬಿಟ್ಟುಹೋದ ಭಾಗ ಮತ್ತು ಶಾಖಾಂತರಗಳು ನಷ್ಟವಾಗಿ ಅದರಲ್ಲಿ ಅಳಿದುಳಿದು ಕೊಂಡಿರುವ ಅನವಶ್ಯಕ ವೇದಭಾಗವೇ 'ಖಿಲ'. ಕಾಣ್ವಶಾಖೆಗೆ ಶತಪಥಬ್ರಾಹ್ಮಣ, ಬೃಹದಾರಣ್ಯಕ, ಈಶಾವಾಸ್ಯೋಪನಿಷತ್, ಬೃಹದಾರಣ್ಯಕೋಪನಿಷತ್, 'ಪೂರ್ಣಮದಃ' ಮುಂತಾದ ಭಾಗಗಳೂ ಸೇರಿವೆ.

## ಕರ್ಮಕಾಂಡ, ಜ್ಞಾನಕಾಂಡ

ವೇದವಾಙ್ಮಯವನ್ನು ವಿಷಯದೃಷ್ಟಿಯಿಂದ ಕರ್ಮಕಾಂಡ, ಜ್ಞಾನಕಾಂಡಗಳೆಂದು ಎರಡಾಗಿ ವಿಭಾಗಿಸುವುದೂ ಉಂಟು. ಮೇಲೆ ಹೇಳಿರುವ ಸಂಹಿತೆ, ಬ್ರಾಹ್ಮಣಗಳೆಂಬ ಎರಡು ವೇದಭಾಗಗಳೂ ಕರ್ಮಕಾಂಡ. ಆರಣ್ಯಕ, ಉಪನಿಷತ್ತುಗಳು ಜ್ಞಾನಕಾಂಡ.

ಈ ಮೇಲಿನ ವೇದವಿಭಜನೆ ಸಂಕೇತಮಾತ್ರದ್ದು. ಅದು ಸೂಕ್ಷ್ಮವಿಚಾರದ್ದಲ್ಲ, ಸ್ಥೂಲದೃಷ್ಟಿಯದು. ವಾಸ್ತವವಾಗಿ ವೇದದ ಒಂದು ಭಾಗಕ್ಕೂ ಇನ್ನೊಂದು ಭಾಗಕ್ಕೂ ನಡುವೆ ಗೋಡೆ ಕಂದಕಗಳೇನೂ ಇಲ್ಲ. ಎಲ್ಲ ಭಾಗಗಳೂ ಅನುಸ್ಯೂತವಾಗಿ ಒಟ್ಟುಗೂಡಿಕೊಂಡೇ ಇರುತ್ತವೆ.

ಸಂಹಿತೆಯ ಭಾಗದಲ್ಲಿ ಹೆಚ್ಚಾಗಿ ಯಜ್ಞಯಾಗಾದಿಗಳ ವಿಚಾರವೇ ತುಂಬಿರುತ್ತದೆ. ಪ್ರಸಂಗಾತ್ ಕೆಲವು ಜಗದ್ರಹಸ್ಯಗಳು ಬರುತ್ತವೆ. ಅವುಗಳಲ್ಲಿ ಜಗತ್ತಿನ ಮೂಲಕಾರಣವಾದ ಪರಮಾತ್ಮತತ್ವದ ಬಗ್ಗೆ ಸ್ಪಷ್ಟವಾದ ರೂಪರೇಖೆಗಳಿರುತ್ತವೆ. ಹೀಗೆ ಕಾಣ್ವಸಂಹಿತೆಯಲ್ಲೂ 'ತ್ರ್ಯಂಬಕಮಂತ್ರ', 'ವಿಶ್ವಕರ್ಮಸೂಕ್ತ', 'ಪುರುಷಸೂಕ್ತ' ಮುಂತಾದ ಭಾಗಗಳಲ್ಲಿ ವಿಶ್ವವೆಲ್ಲವನ್ನೂ ನಿಯಮಿಸಿರುವ ಇಂದ್ರಿಯಾತೀತ ಶಕ್ತಿಯೊಂದನ್ನು ಒಪ್ಪಲಾಗಿದೆ. ಎಲ್ಲದರ ಒಡೆಯ ಪರಮಾತ್ಮ. ಅವನೇ ಜಗತ್ತಿಗೆ ಎಲ್ಲ ವಿಧವಾದ ಮೂಲಕಾರಣವೂ ಆಗಿರುವನು. ಅವನಿಗೆ ಗುಣವೈಭವಾದಿಗಳೆಲ್ಲ ಇವೆ. ಈ ಪ್ರಪಂಚವೆಲ್ಲ ಅವನ ಆಸ್ತಿ. ಅವನನ್ನು ಕುರಿತು ನಾವು ವಿಚಾರಮಾಡಬೇಕು. ಯಜ್ಞಯಾಗಾದಿ ಕರ್ಮಗಳೆಲ್ಲವೂ ಅವನ ಆರಾಧನೆ. ಎಲ್ಲ ದೇವತೆಗಳೂ ಪರಮಾತ್ಮನ ಅಂಗೋಪಾಂಗಗಳಿದ್ದಂತೆ. ಆದುದರಿಂದ ಎಲ್ಲ ದೇವತೆಗಳ ಆರಾಧನೆಗಳೂ ಪರಮಾತ್ಮನ ಆರಾಧನೆಯೇ ಆಗುವುವು ಎಂಬ ಅನೇಕ ವಿಚಾರಗಳಿವೆ.

ಈ ವಿಚಾರಗಳನ್ನೇ ಮುಖ್ಯವಾಗಿರಿಸಿಕೊಂಡು ನಿಷ್ಕಾಮಕರ್ಮಾಚರಣೆಯಿಂದ ಜ್ಞಾನಿಯಾದವನು ಪರಮಾತ್ಮನ ಉಪಾಸನೆಯ ಮೂಲಕ ಪರಲೋಕದಲ್ಲಿ ಪರಮಾತ್ಮನನ್ನು ಪಡೆದು ಶಾಶ್ವತವಾಗಿ ಅನುಭವಿಸುತ್ತಾ ಆನಂದದಲ್ಲಿರಬಹುದು ಎಂಬ ಪಾರಮಾರ್ಥಿಕವಾದ ಮುಖ್ಯಗುರಿಯನ್ನು ಉಪನಿಷತ್ತುಗಳು ತೋರಿಸಿಕೊಡುವುವು. ಈ ಮುಖ್ಯಗುರಿ ಕರ್ಮಕಾಂಡವಾದ ಸಂಹಿತಾಭಾಗದಲ್ಲಿ ಪ್ರಧಾನವಾಗಿರುವುದಿಲ್ಲ. ಆದುದರಿಂದ ಕರ್ಮಕಾಂಡಗಳಿಗಿಂತ ಪರಮಾತ್ಮವಿಚಾರದ ಉಪನಿಷತ್ ಭಾಗವು ಶ್ರೇಷ್ಠವೆನಿಸಿದೆ.

ಹೀಗೆ ಕರ್ಮಕಾಂಡದಲ್ಲಿ ಅಂಕುರರೂಪದಲ್ಲಿ ಕಾಣಿಸುವ ತತ್ವವೇ ಜ್ಞಾನಕಾಂಡದಲ್ಲಿ ಶಾಖೋಪಶಾಖೆಗಳುಳ್ಳ ಮಹಾವೃಕ್ಷವಾಗಿದೆ. ಏಕೇಶ್ವರವಾದ, ಜೀವವಿವಿಧತಾವಾದ, ಜನ್ಮಾಂತರ–ಲೋಕಾಂತರಪ್ರಾಪ್ತಿವಾದ, ಕರ್ಮಫಲವಾದ, ಮೊದಲಾದ ಮತಗಳು ವೇದದ ಉಭಯಕಾಂಡಗಳಿಗೂ ಸಮಾನಾಂಶಗಳೇ.

ಹಾಗಿದ್ದರೂ ಮನುಷ್ಯನ ಜೀವನಧರ್ಮಕ್ಕೆ ಆಧಾರವಾಗಿರಬೇಕಾದ ತತ್ವತ್ರಯ ರಹಸ್ಯವನ್ನು ಕುರಿತ ಸಿದ್ಧಾಂತವು ಉಪನಿಷತ್ತುಗಳಲ್ಲಿ ವಿಶೇಷವಾಗಿಯೂ, ವಿಸ್ತಾರವಾಗಿಯೂ, ಪ್ರತಿಪಾದಿತವಾಗಿರುವುದರಿಂದ ಉಪನಿಷತ್ತಿಗೆ ಲೋಕದ ಆದರಣೆ ಹೆಚ್ಚಾಗಿ ದೊರೆತಿದೆ. ಮನುಷ್ಯನು ಪ್ರಪಂಚವನ್ನು ಹೇಗೆ ಕಾಣಬೇಕು; ತನ್ನ ಬಾಳಿಗೆ ಯಾವ ಗುರಿಯನ್ನಿಟ್ಟುಕೊಳ್ಳಬೇಕು? ಆ ಗುರಿಯನ್ನು ಮುಟ್ಟಲು ಏನೇನು ಮಾಡಬೇಕು? ಎಂಬ ಈ ಪ್ರಶ್ನೆಗಳಿಗೆ ಉತ್ತರಬೇಕೆಂಬುವರು ಜ್ಞಾನಕಾಂಡವಾದ ಉಪನಿಷತ್ತಿನಲ್ಲಿ ಸಹಾಯ ಕಾಣಬಲ್ಲರು.

# ಉಪನಿಷತ್

ಉಪನಿಷತ್ ಎಂದರೆ ಬ್ರಹ್ಮವಿದ್ಯೆ. ಗುರುವಿನ ಬಳಿಯೇ ಇದ್ದು ಅಭ್ಯಾಸಮಾಡುವುದು ಈ ವಿದ್ಯೆ. ಇದನ್ನು ತಿಳಿಯಲು ಬ್ರಹ್ಮವಿದ್ಯೆಯನ್ನು ತಿಳಿಸುವ ಈ ಗ್ರಂಥಗಳನ್ನು ಗುರುವಿನಬಳಿ ಕುಳಿತು ಅಭ್ಯಸಿಸಬೇಕು. ಹೀಗೆ ಇವು ಉಪನಿಷತ್ ಎನಿಸಿವೆ. ಇದು ಮಾನವನ ಮನಸ್ಸನ್ನು ಅರಳಿಸುವುದರಿಂದ ಉಪನಿಷತ್. ಇದು ಸಂಶಯಗಳನ್ನು ನಾಶಪಡಿಸುವುದರಿಂದ ಉಪನಿಷತ್. ಇದು ಸಂಸಾರಬಂಧಕ್ಕೆ ಕಾರಣವಾದ ಅವಿದ್ಯೆಯನ್ನು ನಾಶಪಡಿಸುವುದರಿಂದ ಉಪನಿಷತ್. ಇಂತಹ ವಿದ್ಯೆ ಪರಮಾತ್ಮನ ಸಮೀಪಕ್ಕೆ ನಮ್ಮನ್ನು ಸೇರಿಸುವುದು, ಆದ್ದರಿಂದ ಉಪನಿಷತ್. ಪರಮಾತ್ಮದರ್ಶನರೂಪವಾದ ಬ್ರಹ್ಮವಿದ್ಯೆಯನ್ನು ತಿಳಿಸುವ ಗ್ರಂಥವೇ ಉಪನಿಷತ್. ವಿವಿಧ ದೇವತೆಗಳನ್ನು ಕುರಿತಾದ ಭಾಗವೇ 'ನಿಷತ್'. ದೇವತೆಗಳೆಲ್ಲ ಪರಮಾತ್ಮನ ಅಂಗಗಳೆನಿಸಿರುವುದರಿಂದ ಅಂಗಗಳ ಮೂಲಕ ಪರಮಾತ್ಮನನ್ನು ಕುರಿತಾಗಿರುವ ಮಂತ್ರಗಳು 'ನಿಷತ್' ಎನಿಸುವುವು. ಪರಮಾತ್ಮನ ಸಮೀಪದಲ್ಲಿದ್ದು ನೇರವಾಗಿ ಪರಮಾತ್ಮನನ್ನು ತಿಳಿಸುವ ಭಾಗಗಳೇ ಉಪನಿಷತ್. ರಹಸ್ಯಗಳನ್ನು ಉಪನಿಷತ್ ಎಂದು ಕರೆಯುವರು. ವೇದ, ಯಜ್ಞ, ಉಪಾಸನೆಗಳ ರಹಸ್ಯವು ಇರುವ ಈ ಭಾಗಗಳನ್ನೂ ಉಪನಿಷತ್ ಎನ್ನುವರು.

# ಈಶಾವಾಸ್ಯೋಪನಿಷತ್

ಸಾವಿರಾರು ಉಪನಿಷತ್ತುಗಳಲ್ಲಿ ಪ್ರಪ್ರಥಮಸ್ಥಾನ ಇರುವುದು ಈ ಈಶಾವಾಸ್ಯಕ್ಕೆ ಮಾತ್ರ. ಕತ್ತಲೆಯಿರುವಲ್ಲೇ ಬೆಳಕಿನ ಅವಶ್ಯಕತೆ ಹೆಚ್ಚು ಇರುವಂತೆ ಬರಿಯ ಕರ್ಮಠರಿಗೆ ಇತರರಿಗಿಂತಲೂ ಪರಮಾತ್ಮತತ್ತ್ವಜ್ಞಾನದ ಮಾರ್ಗವು ಅವಶ್ಯಕವಿದೆ. ಆದುದರಿಂದ ಕರ್ಮಕಾಂಡಸಂಹಿತೆಯಲ್ಲಿ ಕೊನೆಯದಾದ ನಲವತ್ತನೆಯ ಅಧ್ಯಾಯವಾಗಿ ಈ ಉಪನಿಷತ್ತು ಇದ್ದು ಸಮಸ್ತವೈದಿಕಸಾಹಿತ್ಯಕ್ಕೂ ದೀಪವಿದ್ದಂತೆ ಪ್ರಜ್ವಲಿಸುತ್ತಿದೆ.

ಈಶಾವಾಸ್ಯವು ಸಂಹಿತಾಭಾಗದಲ್ಲಿರುವುದರಿಂದ 'ಸಂಹಿತೋಪನಿಷತ್' ಎನಿಸಿದೆ. ಸಂಹಿತೆಯಲ್ಲಿ ಮಂತ್ರಭಾಗಗಳೇ ಹೆಚ್ಚು. ಈ ಉಪನಿಷತ್ತು ಮಂತ್ರರೂಪವಾಗಿ ಮನುವಿಗೆ ಸಾಕ್ಷಾತ್ಕಾರವಾದುದರಿಂದ 'ಮಂತ್ರೋಪನಿಷತ್. 'ಯಜ್ಞ' ಎಂಬ ಪರಮಾತ್ಮನ ಸ್ತುತಿಯಾದುದರಿಂದ ಇದು 'ಯಾಜ್ಞೀಯ ಮಂತ್ರೋಪನಿಷತ್'. ಕಾಣ್ವಸಂಹಿತೆಯಲ್ಲಿರುವುದರಿಂದ 'ಕಾಣ್ವೋಪನಿಷತ್'. ವಾಜಸನೇಯವೇದದಲ್ಲಿರುವುದರಿಂದ 'ವಾಜಸನೇಯೋಪನಿಷತ್. 'ಈಶಾ' ಎಂಬ ಪದದಿಂದ ಆರಂಭವಾಗುವ ಇದು 'ಈಶೋಪನಿಷತ್' ಎಂದೂ, 'ಈಶಾವಾಸ್ಯಂ' ಎಂಬ ಭಾಗ ಆರಂಭದಲ್ಲಿರುವುದರಿಂದ 'ಈಶಾವಾಸ್ಯೋಪನಿಷತ್' ಎಂದೂ ಎನಿಸಿದೆ.

ಈಶಾವಾಸ್ಯೋಪನಿಷತ್ತನ್ನು "ವ್ಯವಸ್ಥಿತವಾದ ಒಂದುಶಾಸ್ತ್ರ" ವೆಂಬ ದೃಷ್ಟಿಯಿಂದಲೂ ಗಮನಿಸಬಹುದು. ಶಾಸ್ತ್ರಗ್ರಂಥಗಳಲ್ಲಿ ತಂತ್ರ, ಆವಾಪ, ತಂತ್ರಶೇಷ ಎಂಬ ಮೂರು ವಿಭಾಗಗಳಿರುತ್ತವೆ. ಕೌಟಿಲ್ಯನ ಅರ್ಥಶಾಸ್ತ್ರ, ವಾತ್ಸ್ಯಾಯನನ ಕಾಮಶಾಸ್ತ್ರ, ರಾಜಶೇಖರನ ಕಾವ್ಯಶಾಸ್ತ್ರ ಮುಂತಾದವು ಈ ವ್ಯವಸ್ಥೆಯನ್ನು ಉಳಿಸಿಕೊಂಡು ಬಂದಿವೆ. ತಂತ್ರವೆಂದರೆ ಸಿದ್ಧಾಂತದ ಮೂಲಸ್ವರೂಪ. ಆವಾಪವೆಂದರೆ ಅದರ ಪ್ರಾಯೋಗಿಕವಿಚಾರ. ತಂತ್ರಶೇಷವೆಂದರೆ ಪ್ರಾಯೋಗಿಕ ವಿಚಾರಾನುಭವಗಳಿಂದ ತಿಳಿದ ಕೆಲವು ರಹಸ್ಯವಿಚಾರಗಳು. ಇಂತಹ ವಿಚಾರಗಳಲ್ಲಿ ಉಪನಿಷತ್–ಅತ್ಯಂತರಹಸ್ಯ ಎಂದು ಅರ್ಥಕಾಮಶಾಸ್ತ್ರಾದಿಗಳಲ್ಲೂ ತಿಳಿಸಲಾಗಿದೆ.

ಹೀಗೆ ಈಶಾವಾಸ್ಯದ ಮೊದಲಮಂತ್ರದಲ್ಲಿ ಎಲ್ಲ ವಿಚಾರವನ್ನೂ ಸೂಕ್ಷ್ಮವಾಗಿ ಸೂತ್ರರೂಪದಲ್ಲಿ ತಿಳಿಸಲಾಗಿದೆ. ಪರಮಾತ್ಮನೊಳಗೆ ಎಲ್ಲವೂ ಅಡಗಿರುವಂತೆಯೇ ಈಶಾವಾಸ್ಯೋಪನಿಷತ್ತಿನಲ್ಲಿ ಒಟ್ಟು ವೇದಾಂತಶಾಸ್ತ್ರಾರ್ಥವೆಲ್ಲವೂ ಅಡಗಿದೆ. ಅಂತಹ ಪರಮಾತ್ಮನು ನಮ್ಮ ಹೃದಯದಲ್ಲಿ ಅಡಗಿರುವಂತೆ ಈ ಈಶಾವಾಸ್ಯದ

ಸಾರವೆಲ್ಲವೂ ಮೊದಲಮಂತ್ರದಲ್ಲಿದೆ. ಈ ಮಂತ್ರದ ಕೊನೆಯಭಾಗದ, ಸ್ವಲ್ಪವಿಸ್ತೃತವಾದ ಪ್ರಯೋಗವಿಚಾರವೇ 'ಕುರ್ವನ್ನೇವೇಹ' ಎಂಬ ಎರಡನೆಯ ಮಂತ್ರ. ಇದಕ್ಕೆ ಸ್ವಲ್ಪ ವಿಸ್ತೃತವಿವರಣೆಯೇ 'ಅಸುರ್ಯಾಃ' ಎಂಬ ಮಂತ್ರ ಮತ್ತು 'ಅಂಧಂತಮಃ' ಆರಂಭಿಸಿ ಆರುಮಂತ್ರಗಳು. ಇವೆಲ್ಲದರಲ್ಲೂ ಉಪಾಸನತತ್ತ್ವ ಅಡಗಿದೆ. ಉಪಾಸ್ಯವಾದ ಈಶತತ್ತ್ವದ ವಿವರಣೆಯೇ 'ತದೇಜತಿ', 'ಅನೇಜತ್' ಎಂಬ ಮಂತ್ರಗಳು. 'ಸ ಪರ್ಯಗಾತ್' ಎಂಬುದು ಉಪಾಸಕತತ್ತ್ವದ ವಿವರಣೆ. 'ಯತ್ರ', 'ಯಸ್ಮಿನ್', 'ಪೂಷನ್ನೇಕರ್ಷೇ ಇವು ಮೂರೂ ಉಪಾಸನ ತತ್ತ್ವದ ಮತ್ತು ಫಲಿತಾಂಶದ ವಿವರಣೆ. 'ಹಿರಣ್ಮಯೇನ' ಮಂತ್ರವೂ 'ವಾಯುರನಿಲಂ' ಮಂತ್ರದ ಅರ್ಧಭಾಗವೂ ಉಪಾಸನಾನಂತರದ ಪ್ರಾಪ್ತಿಯನ್ನು ತಿಳಿಸುವುದು. 'ವಾಯುರನಿಲಂ' ಮಂತ್ರದ 'ಓಂ ಕ್ರತೋ ಸ್ಮರ' ಎಂಬ ಭಾಗವು ಉಪಾಸನರಹಸ್ಯವನ್ನು ತಿಳಿಸುವುದಲ್ಲದೆ, ಕೊನೆಯ 'ಅಗ್ನೇನಯ'ಮಂತ್ರವೂ ಈವರೆಗಿನ ಉಪಾಸ್ಯ, ಉಪಾಸಕ, ಉಪಾಸನೆಗಳ ರಹಸ್ಯವನ್ನು ತಿಳಿಸಿ ತಂತ್ರಶೇಷವೆನಿಸುವುದು.

ಹೀಗೆ ಈಶಾವಾಸ್ಯದ ಒಂದನೆಯ ಮಂತ್ರವು 'ತಂತ್ರ'ವೆಂದೂ ಕೊನೆಯ ಒಂದೂವರೆಮಂತ್ರಗಳು 'ತಂತ್ರ ಶೇಷ'ವೆಂದೂ ಉಳಿದ ಮಂತ್ರಗಳೆಲ್ಲವೂ 'ಆವಾಪ'ವೆಂದೂ ಶಾಸ್ತ್ರಕ್ರಮದಲ್ಲಿ ಈ ಉಪನಿಷತ್ತು ಒಂದು ವ್ಯವಸ್ಥಿತಗ್ರಂಥವೆನಿಸಿದೆ.

## ಈಶಾವಾಸ್ಯದ ವಿಶೇಷಗಳು

ಈಶಾವಾಸ್ಯದಲ್ಲಿ ಹೇಳಿರುವ 'ವಿದ್ಯೆ' ಎಂಬ ಉಪಾಸನೆಯು ಬ್ರಹ್ಮಧ್ಯಾನದ ಅನೇಕರೀತಿಗಳಲ್ಲಿ ಒಂದು ಮಾತ್ರ. ಪರಮಾತ್ಮನ ಪರಿಪೂರ್ಣತೆಯ ಉಪಾಸನೆಯೇ ಇದರ ವಿಶೇಷ. ಇದನ್ನು 'ಈಶಾವಾಸ್ಯವಿದ್ಯೆ' ಎನ್ನಲಾಗಿದೆ. ಶಾಂತಿಮಂತ್ರವು ಈ ವಿಶೇಷವನ್ನೇ ಎತ್ತಿತೋರಿಸುತ್ತದೆ. ಇಂತಹ ಪೂರ್ಣತೆಯನ್ನು ಬೇರೆ ಯಾವುದೇ ಬ್ರಹ್ಮವಿದ್ಯೆಗಳಲ್ಲೂ ಉಪಾಸಿಸಲು ತಿಳಿಸಿಲ್ಲ. 'ಭೂಮವಿದ್ಯೆ'ಯಲ್ಲಿ 'ಎಲ್ಲಕ್ಕಿಂತಲೂ ಹಿರಿದಾದುದೇ ಬ್ರಹ್ಮ' ಎಂದಷ್ಟೇ ಉಪಾಸಿಸಬೇಕು. ಹಾಗಲ್ಲದೆ ಪರಮಾತ್ಮನಲ್ಲಿ ಸಕಲವಿಧದಲ್ಲೂ ಪೂರ್ಣತೆಯನ್ನು ಉಪಾಸಿಸುವುದೇ ಈ ಈಶಾವಾಸ್ಯವಿದ್ಯೆ.

ಇಂತಹ ವಿವಿಧ ರೀತಿಯ ಉಪಾಸನೆಗಳು ವಿವಿಧ ಉಪನಿಷತ್ತುಗಳಲ್ಲಿವೆ. ಎಲ್ಲ ಉಪಾಸನೆಗಳಿಗೂ ಸಾಮಾನ್ಯವಾದ ಕೆಲವು ಅಂಶಗಳು ಅವಶ್ಯಕವಾಗಿರುವುವು. ಕೆಲವು ಅಂಶಗಳು ಆಯಾಯಾ ವಿದ್ಯೆಗಳಲ್ಲಿ ಮಾತ್ರ ಇರಬೇಕಾದಂತಹವು. 'ವಿದ್ಯೆ–ಅವಿದ್ಯೆ'ಗಳ, 'ಸಂಭೂತಿ–ಅಸಂಭೂತಿ'ಗಳ ಸಹಚಿಂತನೆಯು ಎಲ್ಲ ವಿದ್ಯೆಗಳಿಗೂ ಮುಖ್ಯವಾಗಿ ಬೇಕಾಗುವ ವಿಚಾರ. ಇದನ್ನು ಇಷ್ಟು ನಿಷ್ಕೃಷ್ಟವಾಗಿ ಈಗಿರುವ ಬೇರೆ ಯಾವುದೇ ಉಪನಿಷತ್ತಿನಲ್ಲೂ ಒತ್ತಿ ಹೇಳಿರುವುದು ಕಂಡುಬರುವುದಿಲ್ಲ.

ಈಶಾವಾಸ್ಯವಿದ್ಯೆಯ ಸಾರಾರ್ಥವೆಲ್ಲವೂ 'ಈಶಾವಾಸ್ಯಮಿದಂ ಸರ್ವಂ' ಎಂಬಷ್ಟರಿಂದಲೇ ಸೂತ್ರರೂಪವಾಗಿ ತಿಳಿದುಬರುವುದು. ಅದೂ ಅಲ್ಲದೆ 'ತೇನ ತ್ಯಕ್ತೇನ ಭುಂಜೀಥಾಃ' ಎಂಬ ಮಾತು ಇತರ ಎಲ್ಲ 'ವಿದ್ಯೆ'ಗಳಿಗೂ ಅತ್ಯವಶ್ಯಕವಾದ 'ವಿದ್ಯಾವಿದ್ಯೆ'ಗಳ ರಹಸ್ಯವನ್ನು ಸೂಚಿಸುವ ಸೂತ್ರದಂತಿದೆ. 'ಮಾಗೃಧಃ ಕಸ್ಯಸ್ವಿತ್ ಧನಂ' ಎಂಬ ಮಾತು ಉಪಾಸಕರಿಗೂ ವೈದಿಕರಿಗೂ ಮಾತ್ರವಲ್ಲದೆ ಲೌಕಿಕರಿಗೂ ಈ ಉಪನಿಷತ್ತು ಸಾರುವ ಮುಖ್ಯೋಪದೇಶ.

ವೈದಿಕರೂ ಲೌಕಿಕಕರ್ಮಗಳನ್ನು ಬಿಡುವಂತಿಲ್ಲ. ಗೀತೆಯಲ್ಲಿ ಹೇಳಿರುವಂತೆ ಯಾವ ಕೆಲಸವೇ ಆಗಲಿ ಪರಮಾತ್ಮನದೆಂದು ತಿಳಿದು ಪ್ರಾಮಾಣಿಕತೆಯಿಂದಲೂ ಶ್ರದ್ಧೆಯಿಂದಲೂ ನಿಷ್ಕಾಮವಾಗಿ ಆಚರಿಸಿದರೆ ಸಾಕು, ವೈದಿಕರಿಗೂ ಉಪಾಸಕರಿಗೂ ಉಪಾಸನೆ ಸಿದ್ಧಿಸುವಂತೆ ಲೌಕಿಕರಿಗೂ ಲೌಕಿಕಜೀವನವು ಅಧ್ಯಾತ್ಮಕ್ಕೆ ಅಭಿಮುಖವಾಗಿ ಲೋಕಕ್ಷೇಮಕ್ಕೆ ಕಾರಣವಾಗುವುದು.

"ಈಶೋಪನಿಷತ್ತು ಅವತರಿಸಿದ ಕಾಲದಲ್ಲಿ ನಮ್ಮ ತತ್ವಜಿಜ್ಞಾಸುಗಳಲ್ಲಿ ಒಂದು ವಿವಾದ ಎದ್ದಿದ್ದಂತೆ ಕಾಣುತ್ತದೆ. ಮೋಕ್ಷಕ್ಕೆ ಎಂದರೆ ಪರಮಪುರುಷಾರ್ಥದ ಸಾಧನೆಗೆ, ಅಥವಾ ಬ್ರಹ್ಮದರ್ಶನಕ್ಕೆ-ಜ್ಞಾನಮಾರ್ಗ ತಕ್ಕುದೇ, ಕರ್ಮಮಾರ್ಗ ತಕ್ಕುದೇ, ಎರಡೂ ಸೇರಿಕೊಂಡಿರುವುದು ತಕ್ಕುದೇ? ಇದೇ ಆ ವಿವಾದ. ಇದನ್ನು ಇನ್ನೂ ಸ್ಪಷ್ಟವಾದ ಭಾಷೆಯಲ್ಲಿ ಹೇಳುವುದು ಅವಶ್ಯವೆಂದು ತೋರುತ್ತದೆ. ಜ್ಞಾನಮಾರ್ಗವೆಂದರೆ ಆಗಿನ ಪರಿ ಭಾಷೆಯಲ್ಲಿ ಹೇಳುವುದು ಅವಶ್ಯವೆಂದು ತೋರುತ್ತದೆ. ಜ್ಞಾನಮಾರ್ಗವೆಂದರೆ ಆಗಿನ ಪರಿಭಾಷೆಯಲ್ಲಿ ಸನ್ಯಾಸ. ಕರ್ಮಮಾರ್ಗವೆಂದರೆ ಗೃಹಸ್ಥಾಶ್ರಮ. ಒಂದು ಪಕ್ಷ ವೈರಾಗ್ಯ ಅಥವಾ ನಿವೃತ್ತಿ, ಇನ್ನೊಂದು ಪಕ್ಷ ಸಂಸಾರ ಅಥವಾ ಪ್ರವೃತ್ತಿ. ಈ ಎರಡರಲ್ಲಿ ಮುಮುಕ್ಷುವು ಯಾವುದನ್ನು ಅವಲಂಬಿಸಬೇಕು ಇದು ಆಗಿನ ವಿವಾದ.

ಚಾಕು ಎಂಬ ಆಯುಧದಲ್ಲಿ ಉಕ್ಕಿನಪಟ್ಟಿ ಒಂದು ಭಾಗ. ಅಲಗು ಇನ್ನೊಂದು ಭಾಗ. ಪದಾರ್ಥವನ್ನು ಕುಯ್ಯುವುದೇನೋ ಅಲಗೇ. ಅಲಗಿಲ್ಲದ ಚೂರಿ ಎಷ್ಟು ದೊಡ್ಡದಾಗಿ ದಪ್ಪವಾಗಿದ್ದರೂ ಕುಯ್ಯಲಾರದು. ಆದರೆ ಪಟ್ಟಿ ಇಲ್ಲದೆ ಬರಿಯ ಅಲಗಿರುವುದುಂಟೋ? ಅಲಗೆಂಬುದು ಪಟ್ಟಿಯ ಒಂದಂಚು ತಾನೇ? ತತ್ವಜ್ಞಾನದ ವಿಚಾರವೂ ಹಾಗೆಯೇ. ಕರ್ಮಸಂಸ್ಕಾರದಿಂದ ಮನಸ್ಸು ಪಕ್ವವಾಗದಿದ್ದಲ್ಲಿ ಜ್ಞಾನವು ಅಂಕುರಿಸಲೇ ಆರದು. ಮೋಕ್ಷಕ್ಕೆ ಜ್ಞಾನಬೇಕು. ಜ್ಞಾನಕ್ಕೆ ಕರ್ಮಬೇಕು. ಕರ್ಮವು ಜ್ಞಾನಕ್ಕೆ ದಾರಿಮಾಡಿಕೊಡಬೇಕಾದರೆ ಅದು ಸ್ವಾರ್ಥಸ್ಪರ್ಶವಿಲ್ಲದ ಕರ್ಮವಾಗಿರಬೇಕು. ಹೀಗೆ ವಿರಕ್ತಿಪೂರ್ವಕವಾದ ಲೋಕಜೀವನವೇ ಬ್ರಹ್ಮಪ್ರಾಪ್ತಿಗೆ ಅವಶ್ಯಕವಾದ ಮಹಾದ್ವಾರ.

ಇಲ್ಲಿ ಕರ್ಮವೆಂದರೆ ಏನು? ಕೆಲವು ವ್ಯಾಖ್ಯಾನಗಳನ್ನು ನೋಡಿದರೆ ಅವುಗಳ ಲೇಖಕರು ಯಜ್ಞಯಾಗಾದಿ ದೇವತೋದ್ದಿಷ್ಟಕರ್ಮಗಳನ್ನು ಮಾತ್ರ ದೃಷ್ಟಿಯಲ್ಲಿರಿಸಿಕೊಂಡು ಲೋಕವ್ಯವಹಾರಗಳನ್ನು ಹೊರಗಿರಿಸಿರುವಂತೆ ತೋರುತ್ತದೆ. ಹೀಗೆ ಮಾಡಲು ವೇದವಾಕ್ಯದಲ್ಲಿಯಾಗಲಿ ಅಥವಾ ಅದರ ಇಂಗಿತದಲ್ಲಿಯಾಗಲಿ ಕಾರಣ ಕಾಣು ವುದಿಲ್ಲ. ಕರ್ಮವೆಂದರೆ ಶಾಸ್ತ್ರವಿಹಿತ ಕರ್ಮ. ಶಾಸ್ತ್ರವೆಂದರೆ ಸಮಗ್ರ ಧರ್ಮಶಾಸ್ತ್ರ. ಧರ್ಮವೆಂಬುದರಲ್ಲಿ ಜೀವಿಕಾವೃತ್ತಿ ಅಥವಾ ಕಸುಬು, ರಾಷ್ಟ್ರಕ ಪ್ರಜೆಯ ಕರ್ತವ್ಯ. ಸಮಾಜಹಿತಾರ್ಥ ಭೂತದಯೆ ಮೊದಲಾದ ಎಲ್ಲ ಲೌಕಿಕವ್ಯಾಪಾರಗಳೂ ಸೇರಿರುತ್ತವೆ. ಅವೆಲ್ಲ ಕರ್ಮಗಳೇ. ಇಂತಹ ವಿಸ್ತಾರವಾದ ಅರ್ಥವನ್ನು ಕರ್ಮ ಶಬ್ದಕ್ಕೆ ಕೊಡುವುದು ಯುಕ್ತವೇ ಹೊರತು ಆ ಅರ್ಥವನ್ನು ಸಂಕೋಚಮಾಡುವುದು ಸಾಧುವಾಗಲಾರದು. ಕರ್ಮ ಎಂದರೆ ಚತುರ್ವಿಧಪುರುಷಾರ್ಥಕ್ರಿಯೆ. ಅದೇ "ಪ್ರವೃತ್ತಿಧರ್ಮ".

ಮುಮುಕ್ಷುವಿಗೆ ಪ್ರವೃತ್ತಿಧರ್ಮದಿಂದ ಆಗಬೇಕಾದ ಪ್ರಯೋಜನ ಒಂದಿದೆ. ನಿವೃತ್ತಿಧರ್ಮದಿಂದ ಆಗ ಬೇಕಾದ ಪ್ರಯೋಜನ ಇನ್ನೊಂದಿದೆ. ಪ್ರವೃತ್ತಿಧರ್ಮ ಹೇಗೆ ನಡೆಯಬೇಕೋ ಹಾಗೆ ನಡೆದಲ್ಲದೆ ನಿವೃತ್ತಿ ಧರ್ಮ ಸಾಂಗವಾಗಿ ನಡೆಯದು. ಹಾಗಾದರೆ ನಿವೃತ್ತಿಗೆ ಅನುಕೂಲವಾಗಿ ನಡೆಯುವಂತಹ ಆ ಪ್ರವೃತ್ತಿಯ ಲಕ್ಷಣವೇನು? ಯಾವರೀತಿ ಬದುಕನ್ನು ನಡೆಸಿದರೆ ಬದುಕಿನ ಮೊರೆ ಹಗುರವಾಗಿ ನಮ್ಮ ಕಣ್ಣಿಗೆ ಎಂದೆಂದಿಗೂ ಅಳಿಯದಿರುವ ಬೆಳಕು ಕಾಣಬರುತ್ತದೆ? ಈ ಪ್ರಶ್ನೆಗೆ ಉತ್ತರವನ್ನು ಚಿಕ್ಕ ಚಿಕ್ಕ ಮಾತುಗಳಲ್ಲಿ ಸಂಗ್ರಹವಾಗಿ ತಿಳಿಸಿರುವುದೇ ಈಶೋಪನಿಷತ್ತು ನಮಗೆ ಮಾಡಿರುವ ವಿಶೇಷೋಪಕಾರ. ಬದುಕುವುದು ಕರ್ತವ್ಯ. ಹೇಗೆ ಬದುಕಿದರೆ ಚೆನ್ನ? ಇದನ್ನು ಈ ಉಪನಿಷತ್ತು ತಿಳಿಸುತ್ತದಾಗಿ, ಇದು ಇಂದಿನಲೋಕಕ್ಕೆ ಹೆಚ್ಚು ಬೆಲೆಯುಳ್ಳದಾಗಿದೆ.

ಜೀವನದ ಪರಮಧ್ಯೇಯವೇನಾಗಿರಬೇಕೆಂಬ ವಿಚಾರದಲ್ಲಿ ಲೋಕದ ಮನಸ್ಸು ಈ ಹೊತ್ತಿಗೂ ಇಬ್ಬಗೆ ಯಾಗಿದೆ. ಐಹಿಕಭೋಗ, ಇಂದ್ರಿಯಾಪ್ಯಾಯನ, ಸರ್ವವಿಸ್ಮಾರಕವಾದ ಬಾಹ್ಯವ್ಯಾಪಾರ, ವಿಷಯಮಗ್ನತೆ ಇವು ಪಾಶ್ಚಾತ್ಯಜನದ ಸಾಮಾನ್ಯಮನೋವೃತ್ತಿ. ನೂತನವಿಜ್ಞಾನಸಿದ್ಧಗಳಾದ ರಾಸಾಯನಿಕದ್ರವ್ಯಗಳಿಂದಲೂ ಶಸ್ತ್ರಸಾಧನಗಳಿಂದಲೂ ಆರೋಗ್ಯವನ್ನೂ ಆಯುರ್ವೃದ್ಧಿಯನ್ನೂ ಗಳಿಸಿಕೊಡುವುದು, ವಿವಿಧ ವಾಹನಸೌಕರ್ಯ ಗಳಿಂದ ದೇಶವಿದೇಶಗಳನ್ನು ಸುತ್ತುವುದು, ಹೊಸಹೊಸ ಆಹಾರ ಪಾನ ಶೀತ ಪರಿಕರಗಳಿಂದ ಹೊಸಹೊಸ ಸುಖಾ ನುಭವಗಳನ್ನು ಸಂಪಾದಿಸುವುದು, ಮುಖ್ಯವಾಗಿ ಮನಸ್ಸನ್ನು ಯಾವುದೋ ಒಂದು ಬಾಹ್ಯ ಉದ್ವೇಗದಲ್ಲಿ ಲೀನ

ಹಾಗಿಸುವುದು, ಇದು ಪಾಶ್ಚಾತ್ಯರ ಪುರುಷಾರ್ಥ. ಭೋಗಕ್ಕಾಗಿ ಜನ್ಮ; ಮನಸ್ಸಿನ ಉದ್ರೇಕವೇ ಸೌಖ್ಯ. ಇದು ಪ್ರವೃತ್ತಿಪಂಥದ ಅತಿರೇಕ, ವಿಪರೀತಪ್ರವೃತ್ತಿ.

ಇದರಿಂದ ವಿಲಕ್ಷಣವಾದದ್ದು ನಮ್ಮ-ಭಾರತೀಯರ ಇಂದಿನ ಮನೋವೃತ್ತಿ. ಅದನ್ನು ಪ್ರವೃತ್ತಿಯೆನ್ನೋಣವೆಂದರೆ ಅದು ಪೌರುಷಪೂರ್ವಕವಾದ ಪ್ರವೃತ್ತಿಯಲ್ಲ. ಪಾಶ್ಚಾತ್ಯರ ಪ್ರವೃತ್ತಿಯಲ್ಲಿ ಪೌರುಷವಿದೆ ಶ್ರದ್ಧೆಯಿದೆ, ದಕ್ಷತೆ ಇದೆ. ನಮ್ಮದು ಅರೆಮನಸ್ಸಿನ ಮತ್ತು ವಿಚಕ್ಷಣೆಯಿಲ್ಲದ ನಿರ್ವೀರ್ಯ ವರ್ತನೆ. ಇದನ್ನು ನಿವೃತ್ತಿಯೆನ್ನೋಣವೆಂದರೆ ಭೋಗಲಾಲಸೆ ನಮಗೇನೂ ಕಡಿಮೆಯಾಗಿಲ್ಲ. ಪಾಶ್ಚಾತ್ಯರ ವೈಭವವಿಲಾಸಗಳನ್ನು ನೋಡಿ ನಾವು ಹೊಟ್ಟೆಕಿವಿಚಿಕೊಳ್ಳುತ್ತೇವೆ. ಅವರ ಸಾಹಸ ಸ್ವೇಚ್ಛಾಚಾರಗಳನ್ನೂ ಪ್ರಗತಿಯೆಂದು ಕೊಂಡಾಡುತ್ತೇವೆ. ಅವರ ಸಂಪತ್ಪ್ರತಾಪಗಳು ನಮಗೂ ಬೇಕು, ಆದರೆ ಬೇಡವೇನೋ ಎಂಬಂತೆ ನಡೆಯುತ್ತಿದ್ದೇವೆ. ನಾವು ಇತ್ತ ಲೌಕಿಕದಲ್ಲಿ ಕೃತಕೃತ್ಯರಾಗಿಲ್ಲ; ಅತ್ತ ವಿರಕ್ತಿಯಲ್ಲಿ ಸಿದ್ಧಾರ್ಥರಾಗಿಲ್ಲ. ನಮ್ಮದು ರೋಗಿಯ ಚಿತ್ತ ದೌರ್ಬಲ್ಯ, ಚಪಲತೆ, ತೇಜೋವಿಹೀನತೆ. ಉಭಯಧರ್ಮರಿಕ್ತರು ನಾವು.

ಇನ್ನೂ ಒಂದು ಚೋದ್ಯ ಉಂಟು. ಪಾಶ್ಚಾತ್ಯರ ಪ್ರವೃತ್ತಿನಿಷ್ಠೆಯಿಂದ ಅವರ ಜೀವನ ನಿರುಪದ್ರವವಾಗಿ ನಡೆಯುತ್ತಿದೆ ಎಂದಾಗಲೀ ಹಾಗೆ ನಡೆಯುವ ಭರವಸೆ ತೋರುತ್ತಿದೆಯೆಂದಾಗಲೀ ಯಾರೂ ಹೇಳರು. ಅವರ ಯಾವ ಸ್ವಭಾವಗುಣಗಳು ಭೋಗಾನ್ವೇಷಣೆಯನ್ನು ಪ್ರೇರಿಸುತ್ತಿವೆಯೋ ಅದೇ ಸ್ವಭಾವದ ಇನ್ನೂ ಕೆಲವು ಗುಣಗಳು ಆ ಪ್ರಯತ್ನವನ್ನು ವಿಕಾರಪಡಿಸುತ್ತಿವೆ. ಸಂಪತ್ಸಾಧನೆಯ ಸ್ಪರ್ಧೆಯಲ್ಲಿ ದೇಶದೇಶಕ್ಕೂ ಜನ ಜನವರ್ಗಕ್ಕೂ ಮಾತ್ಸರ್ಯವೈಷಮ್ಯಗಳು ಬೆಳೆಯುತ್ತಿವೆ. ಇದರ ಜೊತೆಗೆ ದೈಹಿಕಭೋಗಮಾತ್ರದಿಂದ ಆತ್ಮ ಸಂತೃಪ್ತಿಯಾಗಲಾರದೆಂಬುದನ್ನೂ ಪಾಶ್ಚಾತ್ಯಲೋಕ ಕಂಡುಕೊಳ್ಳುತ್ತಿದೆ. ಮಾನವಜೀವನವೆಂದರೆ ಉಣ್ಣುವುದು, ಉಡುವುದು, ಮೆರೆಯುವುದು, ಮೈಮರೆಯುವುದು ಇವಿಷ್ಟೆ ಅಲ್ಲ. ಈ ದೇಹದ ಹಸಿವುಗಳೆಲ್ಲ ತೀರಿದಮೇಲೂ ಅಂತರಂಗದಲ್ಲಿ ಏನೋ ಒಂದು ಕೊರಗು, ಒಂದು ಬಯಕೆ ಉಳಿದುಕೊಂಡಿರುತ್ತದೆ. ಆ ಒಳಹಸಿವು ಹೊರಗಣ ಉಪಚಾರಗಳಿಂದ ತೀರತಕ್ಕದ್ದಲ್ಲ; ಅದು ಆಧ್ಯಾತ್ಮಿಕವಿರಬಹುದು, ಎಂಬ ಅನುಮಾನವೂ ಪಾಶ್ಚಾತ್ಯರಲ್ಲಿ ತಲೆದೋರುತ್ತಿದೆ. ಎಲ್ಲ ಸುಖಸಾಮಗ್ರಿ ಇದ್ದರೂ ನೆಮ್ಮದಿ ಇಲ್ಲವಾಗಿದೆ ಆ ಪ್ರಪಂಚದಲ್ಲಿ, ನಿವೃತ್ತಿಧರ್ಮವನ್ನು ಮರೆತ ಪ್ರವೃತ್ತಿಯ ಗತಿಯ ಹಾಗೆ.

ಅರ್ಜುನನು ಪ್ರವೃತ್ತಿಧರ್ಮವನ್ನು ತೊರೆದು ನಿವೃತ್ತನಾಗುವೆನೆಂದನು. ಆದಾಗದೆಂದು ಕೃಷ್ಣನು ಕಾರಣತೋರಿಸಿದ್ದೇ ಭಗವದ್ಗೀತೆ.

ಪ್ರವೃತ್ತಿ, ನಿವೃತ್ತಿಗಳೆರಡರ ಸಮನ್ವಯವನ್ನು ಬೋಧಿಸಿರುವುದೇ ಈಶೋಪನಿಷತ್ತಿನ ವಿಶೇಷಗುಣ. ಬದುಕಬೇಕು; ಭೋಗವೇ ದೊಡ್ಡದೆಂದುಕೊಳ್ಳದೆ ಬದುಕಬೇಕು; ಈಶ್ವರಸೇವೆಗಾಗಿ ಬದುಕಬೇಕು; ಲೋಕ ಕಾರ್ಯಗಳನ್ನು ಮಾಡಬೇಕು; ಸ್ವಾರ್ಥದ ಸೋಂಕಿಲ್ಲದೆ ಮಾಡಬೇಕು; ಸಂತೋಷ ಪಡಬೇಕು. ಅಹಂಕಾರ, ಮಮಕಾರಗಳನ್ನು ದೂರಮಾಡಿ ಸಂತೋಷಪಡಬೇಕು. ಪ್ರವೃತ್ತಿಯಿಲ್ಲದ ಲೌಕಿಕಜೀವನವಿಲ್ಲದ ಅಂತರಂಗ ಶೋಧನೆ ಇಲ್ಲದ ನಿವೃತ್ತಿಗೆ – ಸನ್ಯಾಸಕ್ಕೆ ಸಾರ್ಥಕ್ಯವಿಲ್ಲ. ಅಂಥ ಪರಿಶುದ್ಧ ನಿವೃತ್ತಿಮೂಲಕವಿಲ್ಲದೆ ತತ್ತ್ವ ಸಾಕ್ಷಾತ್ಕಾರವಿಲ್ಲ. ತತ್ತ್ವಸಾಕ್ಷಾತ್ಕಾರವಿಲ್ಲದೆ ಮನುಷ್ಯನಿಗೆ ಲೋಕಜೀವನದ ದ್ವಂದ್ವಜಾಲಿಕೆಯಿಂದ ಬಿಡುಗಡೆಯಿಲ್ಲ ಲೋಕಾಸಕ್ತಿ, ಸ್ವಾರ್ಥವಿರಕ್ತಿಗಳೆರಡನ್ನೂ ಜೋಡಿಗೂಡಿಸಿ ಬಾಳಬಲ್ಲವನೇ ಯೋಗಿ. ಅವನನ್ನು ಯಾವದೋಷವೂ ಯಾವದುಃಖವೂ ಮುಟ್ಟದು. ಇದು ಈಶೋಪನಿಷತ್ತಿನ ಬೋಧನೆ. ಈ ನೀತಿಸೂತ್ರ ಯಾವ ಮನುಷ್ಯನಿಗೆ ಅನಾವಶ್ಯಕ? ಅದರಿಂದ ಲಭಿಸುವ ಆತ್ಮಶಾಂತಿ ಯಾರಿಗೆ ಬೇಡ?"[1]

---

1. ಈ ಭಾಗವನ್ನು ದಿವಂಗತ ಶ್ರೀಮಾನ್ ಡಿ. ವಿ. ಜಿ. ಯವರ ಕನ್ನಡ 'ಈಶೋಪನಿಷತ್' ಗ್ರಂಥದಿಂದ ಕೃತಜ್ಞತಾಪೂರ್ವಕವಾಗಿ ಆಯ್ದುಕೊಳ್ಳಲಾಗಿದೆ.

"ದೇಹಕ್ಕೆ ಜೀವಾತ್ಮವು ಹೇಗೋ ಹಾಗೆ ಜೀವಾತ್ಮನಿಗೆ ಪರಮಾತ್ಮನು. ಜೀವನು ದೇಹವನ್ನು ಎಂದರೆ ಚೇತನವಿಲ್ಲದ ಒಂದು ಶವವನ್ನು, ಪ್ರಾಣ - ಚೈತನ್ಯಗಳಿಂದಕೂಡಿದ ವಸ್ತುವನ್ನಾಗಿ ಮಾಡಿ ಅದರೊಳಗೆ ತಾನು ಹೇಗೆ ಅಂತರಾತ್ಮನಾಗಿ ನಿಂತುಕೊಂಡಿರುವನೋ ಹಾಗೆ ಜೀವನೊಳಗೆ ಪರಮಾತ್ಮನು ಅಂತರ್ಭವಿಸಿ ನಿಂತು ಆ ಜೀವವನ್ನು ಧಾರಣೆ ಪೋಷಣೆ ಮಾಡುತ್ತಾ ಅದನ್ನು ಬೆಳಗುತ್ತಿರುವನೆಂದು ಹೇಳಬಹುದು.

ಜೀವನು ಹೇಗೆ ಹಲವು ಜನ್ಮಗಳಲ್ಲಿ ಹಲವು ರೀತಿಯ ರೂಪಗಳನ್ನು ತಾಳುತ್ತಾ ಬರುವನೋ, ಹಾಗೆಯೇ ಪರಮಾತ್ಮನು ಒಂದೇ ಕಾಲದಲ್ಲಿ ಹಲವು ರೂಪಗಳನ್ನು ತಾಳುತ್ತಾ ನಿಂತಿರುವನು. ಅಂದರೆ ಯಾವುದೇ ವಸ್ತುವಿನಲ್ಲಿಯೂ, ಯಾವುದೇ ಜೀವದೊಳಗೂ ಪರವಸ್ತುವಾಗಿ ನಿಂತು ಅದನ್ನು ಧಾರಣೆ ಮಾಡುತ್ತಾ ಬರುವನು.

ಪರವಸ್ತುವನ್ನು ತುಂಡುಗಳಾಗಿ ಮಾಡಲಾಗದು. ಎಲ್ಲ ವಸ್ತುಗಳಲ್ಲಿ ಅದು ನಿಂತರೂ ಅದರ ಏಕತೆಗೆ ಭಂಗವಿಲ್ಲ.

ಈಶಾವಾಸ್ಯೋಪನಿಷತ್ತಿನ ಶಾಂತಿಶ್ಲೋಕವೂ ಇದನ್ನೇ ಹೇಳುವುದು :–

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ॥
ಓಂ ಶಾಂತಿಃ ಶಾಂತಿಃ ಶಾಂತಿಃ॥ ಅಂದರೆ

ಅದೂ ಪೂರ್ಣ, ಇದೂ ಪೂರ್ಣ, ಪೂರ್ಣದಿಂದ ಪೂರ್ಣವಾದುದು ಹೊರಬಿತ್ತು; ಆದರೂ ಪೂರ್ಣವು ಕಡಿಮೆಯಾಗಲಿಲ್ಲ. ಉಳಿದು ನಿಲ್ಲುವುದೂ ಪೂರ್ಣವೇ.

ಕ್ಷೇತ್ರಗಣಿತದ ಆಧಾರನಿಯಮಕ್ಕೆ ಇದು ವಿರೋಧವಾಗುವುದು. ಒಂದುವಸ್ತುವಿನಿಂದ ಒಂದು ಭಾಗವನ್ನು ಬೇರ್ಪಡಿಸಿದರೆ ಉಳಿಯುವುದು ಪೂರ್ತಿಯಾಗಿರದೆ ಒಂದು ಭಾಗವಾಗಿ ಮಾತ್ರ ನಿಲ್ಲುವುದೆಂದು ಕ್ಷೇತ್ರಗಣಿತದ ಸಿದ್ಧಾಂತ. ಆದರೆ ಪರವಸ್ತುವು ಈ ಕ್ಷೇತ್ರಗಣಿತದ ನಿಯಮಕ್ಕೆ ಒಳಪಡುವುದಿಲ್ಲ. ಭಾಗಗಳನ್ನು ಬೇರೆಯಾಗಿ ತೆಗೆದಿಟ್ಟರೂ ಮೂಲವಸ್ತು ಪೂರ್ತಿಯಾಗಿಯೇ ಇರುವುದು. ಭಿನ್ನತೆಯೂ, ಏಕತೆಯೂ ಕಲೆತು ನಿಲ್ಲುವುದೇ ಪರವಸ್ತುವಿನ ಲಕ್ಷಣ.

ಋಷಿಗಳು ಉಪನಿಷತ್ತನ್ನು ಉಪದೇಶಿಸುವುದಕ್ಕೆ ಮೊದಲು ಶಿಷ್ಯನಿಗೆ ಪೂರ್ಣವಾದ ಮೂಲವಸ್ತುವನ್ನೂ, ತನ್ನ ಆತ್ಮವನ್ನೂ ಸೇರಿಸಿ ಧ್ಯಾನಿಸಲು ಹೇಳುವರು. "ಲೋಕವನ್ನು ಸೃಷ್ಟಿಮಾಡಿದ ಈಶ್ವರನೂ, ಅವನಿಂದ ಚಿಮ್ಮಿದ ನನ್ನ ಆತ್ಮನೂ ಎರಡೂ ಪೂರ್ಣವಾದ ವಸ್ತುಗಳು. ಪೂರ್ಣವಸ್ತುವಿನಿಂದ ಉಂಟಾದ ಭಾಗವೂ ಪೂರ್ಣವಾದ ವಸ್ತುವೇ. ಮೂಲವಸ್ತುವೂ ಪೂರ್ವದಂತೆಯೇ ತನ್ನ ಪೂರ್ಣತೆಗೆ ಲೋಪವಿಲ್ಲದೆ ನಿಲ್ಲುವುದು. ಆ ಪೂರ್ಣವಸ್ತುವು ನನಗೆ ಶಾಂತಿಯನ್ನು ಕೊಡಲಿ."

ಹೀಗೆ ತನ್ನ ಆತ್ಮದ ಹುಟ್ಟನ್ನೂ ಅದು ಅಂತರಾತ್ಮನಾದ ಈಶ್ವರನೊಂದಿಗೂ ಲೋಕದೊಂದಿಗೂ ಒಂದುಗೂಡಿ ನಿಲ್ಲುವ ರೀತಿಯನ್ನು ಹೆಚ್ಚೆಹೆಚ್ಚಾಗಿ ಧ್ಯಾನಿಸುತ್ತಾ ಬಂದರೆ ಬಲಹೀನತೆಯು ಹೋಗಿ ಶಕ್ತಿ ಹುಟ್ಟುವುದು. ಕೆಟ್ಟಭಾವನೆಗಳು ಹೋಗಿ ಒಳ್ಳೆಯಭಾವನೆಗಳು ಉಂಟಾಗುವುವು. ದುಃಖಗಳು ಮಂಜಿನಂತೆ ಕರಗಿ ಹೋಗುವುವು. ಮನಶ್ಶಾಂತಿಯನ್ನು ಹೊಂದುವೆವು.

ಕಠೋಪನಿಷತ್ತಿನಲ್ಲಿ ನಚಿಕೇತನಿಗೆ ಯಮನು ಹೇಳುತ್ತಾನೆ, "ಮಗೂ! ಒಳ್ಳೆಯದು ಬೇರೆ, ಪ್ರಿಯವಾದುದು ಬೇರೆ. ಇವೆರಡೂ ಅಂತರಂಗವನ್ನು ಹಿಡಿಯುವುವು. ಬುದ್ಧಿವಂತನು ಒಳ್ಳೆಯದನ್ನು ಉತ್ತಮ

ವೆಂದು ಭಾವಿಸುವನು. ಮೂಢನು ಸುಖತರುವುದನ್ನು ದೊಡ್ಡದೆಂದು ಭಾವಿಸಿ ಮೋಸಹೋಗುವನು. ಒಳ್ಳೆಯದೂ, ಪ್ರಿಯವಾದುದೂ ತನ್ನಿದಿರಿಗೆ ನಿಲ್ಲುವಾಗ ಧೀರನು ಎರಡನ್ನೂ ಚೆನ್ನಾಗಿ ದಿಟ್ಟಿಸಿ ನೋಡಿ ಒಳ್ಳೆಯದನ್ನೇ ಬಯಸುವನು. ಮೂಢನಾದರೋ ಒಳ್ಳೆಯದನ್ನು ಕೈಬಿಟ್ಟು ಪ್ರಿಯವಾದುದನ್ನು ಕೈಗೊಳ್ಳುವನು".

"ಜ್ಞಾನಕ್ಕೂ ಜ್ಞಾನವನ್ನು ತರದ ವಿದ್ಯಾರ್ಜನೆಗೂ ಬಹಳ ಅಂತರವುಂಟು. ಕಲಿತುದೆಲ್ಲವೂ ಅರಿವಾಗದು. ಕಲಿತ ಮೂಢರು ತಾವು ಪಡೆದ ವಿದ್ಯೆಯನ್ನು ದೊಡ್ಡದಾಗಿ ಭಾವಿಸಿ "ಕಣ್ಣಿಲ್ಲದವನು ದಾರಿತೋರಿಸುವುದನ್ನು ನಂಬಿ ಹೋಗುವ ಕುರುಡರಂತೆ" ಸುತ್ತಿಸುತ್ತಿ ಎಡವುತ್ತ ಮುಗ್ಗರಿಸುತ್ತ ಅಲೆಯುವರು".

"ವೇದಾಂತವನ್ನು ಓದಿ ಅರಿಯುವುದರಿಂದಲೇ ಪರಮಾತ್ಮನ ದರ್ಶನ ಸಿಕ್ಕಲಾರದು. ವಿಷಯಸುಖಗಳನ್ನು ಲೆಕ್ಕಿಸದಂತಹ ಪ್ರಯತ್ನವೂ ಶುದ್ಧವಾದ ಅಂತರಂಗವೂ ಇಲ್ಲದಿದ್ದರೆ, ಅರಿವೆಲ್ಲವೂ ನಿಷ್ಫಲವಾಗುವುದು. ಕೆಟ್ಟ ನಡತೆಯನ್ನು ಬಿಡದವನು, ಇಂದ್ರಿಯಗಳನ್ನೂ ಮನಸ್ಸನ್ನೂ ತನ್ನವಶದಲ್ಲಿಟ್ಟುಕೊಳ್ಳದವನು, ಅಂತರಂಗದಲ್ಲಿ ಶಾಂತಿ, ಸಮತ್ವವನ್ನು ಪಡೆಯದಿರುವವನು, ಅರಿವಿನಿಂದ ಮಾತ್ರ ಪರವಸ್ತುವನ್ನು ಕಾಣಲಾರನು".

"ಜ್ಞಾನವಿಲ್ಲದೆ ಕರ್ಮಗಳನ್ನೂ ಬಾಹ್ಯಾಚರಣೆಗಳನ್ನೂ ಕೈಗೊಳ್ಳುವವರು ಕಗ್ಗತ್ತಲಲ್ಲಿ ಬಿದ್ದಿರುವರು. ಆದರೆ ಮಾಡಬೇಕಾದ ಕರ್ಮಗಳನ್ನು ಕೈಬಿಟ್ಟು ವೇದಾಂತವಿಚಾರಗಳಲ್ಲಿಯೇ ಸಂತೋಷಗೊಂಡು ತೃಪ್ತಿಹೊಂದುವವರೂ ಅದಕ್ಕಿಂತಲೂ ದೊಡ್ಡ ಅಂಧಕಾರದಲ್ಲಿ ಮುಳುಗುವರು" ಎಂದು ಈಶಾವಾಸ್ಯೋಪನಿಷತ್ತು ಹೇಳುತ್ತದೆ.

ಜ್ಞಾನವನ್ನು ಪಡೆದವನೂ ಸಾಧಾರಣಜನಗಳಂತೆಯೇ ಕಾರ್ಯಗಳನ್ನು ಕ್ರಮವಾಗಿ ಮಾಡುತ್ತಾ ತನ್ನ ಜೀವಿತಕಾಲವನ್ನು ಕೊನೆಗಾಣಿಸಬೇಕು. ಹಾಗೆ ಮುಗಿಸಿ ದೇಹವನ್ನು ಬಿಟ್ಟಮೇಲೆ ಜ್ಞಾನದ ಫಲವಾಗಿ ಅಮೃತತ್ವವನ್ನು ಹೊಂದಬಹುದು.

ಆಸೆಗಳನ್ನು ಸುಡುವುದೇ ಯಜ್ಞ; ಆಸಕ್ತಿಗಳನ್ನು ಬಿಡುವುದೇ ತ್ಯಾಗ; ಇದಕ್ಕಿಂತ ಬೇರೆಯಾದ ತ್ಯಾಗಮಾರ್ಗ ನಿಷ್ಕ್ರಿಯತೆ ಒಂದೇ ಮೋಕ್ಷಸಾಧನವೆಂಬ ಅಭಿಪ್ರಾಯವನ್ನು ಖಂಡಿಸಿ ಜೀವನಕ್ಕೆ ಬೇಕಾದ ಕಾರ್ಯಗಳನ್ನು ಮಾಡಿಯೇ ಧರ್ಮದಲ್ಲಿ ನಿಲ್ಲಬಹುದೆನ್ನುವ ಸತ್ಯವನ್ನು ಭಗವಂತನು ಅರ್ಜುನನಿಗೆ ಗೀತೆಯಲ್ಲಿ ವಿಶದಗೊಳಿಸಿರುವನು. ಸಮುದಾಯದ ಕ್ಷೇಮಕ್ಕಾಗಿ ಬೇಕಾದ ಕಾರ್ಯಗಳನ್ನು ಮಾಡಬೇಕೆಂದೂ ಆ ಕಾರ್ಯಗಳಲ್ಲಿ ಪ್ರತಿಯೊಬ್ಬನೂ ತನಗೆ ನಿಯಮಿತವಾದ ಕರ್ತವ್ಯಗಳನ್ನು ಕ್ರಮವಾಗಿ ಮಾಡಿ ಮುಗಿಸುವುದರಿಂದ ಮೋಕ್ಷಕ್ಕೆ ತಡೆಯುಂಟಾಗದೆಂದೂ ಗೀತೆಯು ಉಪದೇಶಿಸುತ್ತದೆ. ಸ್ವಾರ್ಥವನ್ನೂ, ಆಸಕ್ತಿಯನ್ನೂ ಬಿಟ್ಟು, ಕಷ್ಟಗಳನ್ನು ಕಂಡು ಮನಗುಂದದೆ ಅಂತರಂಗದಲ್ಲಿ ಶಾಂತತೆಯಿಂದಿದ್ದು ಎಲ್ಲ ಕಾರ್ಯಗಳನ್ನೂ ಭಗವಂತನಿಗೆ ಅರ್ಪಣವೆಂದೇ ಮಾಡುತ್ತಾ ಬಂದರೆ, ಅದೇ ಯಜ್ಞ, ಅದೇ ಸನ್ಯಾಸವಾಗುವುದೆಂದು ಗೀತೆಯಲ್ಲಿ ಬಹಳ ವಿಶದವಾಗಿ ಭಗವಂತನು ತೋರಿಸಿರುವನು.

ಇದನ್ನು ಸಂಕ್ಷೇಪವಾಗಿ ಈಶಾವಾಸ್ಯೋಪನಿಷತ್ತಿನಲ್ಲಿ ಮೊದಲೆರಡು ಮಂತ್ರಗಳಲ್ಲಿ ಋಷಿಯು ಹಾಡಿರುವನು.

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಮ್॥
ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ॥

ಅಂದರೆ

"ಲೋಕದಲ್ಲಿರುವುದೆಲ್ಲವೂ ಈಶನಲ್ಲಿ ಅಡಗಿರುವುದು. ಅವನನ್ನು ಬಿಟ್ಟು ಅಗಲಿರುವುದೆಂಬುದು ಯಾವುದೂ ಇಲ್ಲ."

"ವಸ್ತುಗಳ ಮೇಲೆ ಆಸೆಯನ್ನು ಬಿಟ್ಟು ಒಳ್ಳೆಯದನ್ನು ಪಡೆದುಕೋ. ಯಾವನ ವಸ್ತುವಿನ ಮೇಲೂ ಆಸೆಗೊಳ್ಳಬೇಡ".

"ಹೀಗೆ ಎಲ್ಲವೂ ಈಶಮಯವೆಂದರಿತು ಮಾಡುವ ಕರ್ಮಗಳೆಲ್ಲವನ್ನೂ ಅವನಿಗೆ ಅರ್ಪಣವೆಂದು ಮಾಡುತ್ತಾ, ನಿನಗೆ ಬಂದಿರುವ ಜೀವಿತಕಾಲವನ್ನು ಮುಗಿಸುವವನಾಗು".

"ಕರ್ಮದ ಬಂಧನದಲ್ಲಿ ಸಿಕ್ಕಿಕೊಳ್ಳದೆ ಬಾಳನ್ನು ಕೊನೆಗಾಣಿಸಲು ಇದೇ ಮಾರ್ಗ. ಬೇರೆ ಮಾರ್ಗವಿಲ್ಲ".

ಆದುದರಿಂದ ಉಪನಿಷತ್ತಿನ ವಾಕ್ಯವೂ ಗೀತೆಯ ಉಪದೇಶವೂ ಒಂದೇ. ಆಸೆಗಳನ್ನು ನಾಶಗೊಳಿಸಿ, ಎಲ್ಲವೂ ಈಶ್ವರಮಯವೆಂದು ಅರಿತು, ಅವನಿಗೆ ಅರ್ಪಣವೆಂದೇ ಎಲ್ಲ ಕೆಲಸಗಳನ್ನೂ ಕೈಗೊಂಡು ಜೀವಿತಕಾಲ ವನ್ನು ಮುಗಿಸಬೇಕು. ಆಸೆಗಳನ್ನು ನಾಶಗೊಳಿಸುವುದು ಯಜ್ಞ, ಜ್ಞಾನವೇ ಆಸೆಗಳನ್ನು ಸುಟ್ಟುಬಿಡುವ ಯಜ್ಞದ ಬೆಂಕಿ.

ಯಥೈಧಾಂಸಿ ಸಮಿದ್ಧೋಽಗ್ನಿಃ ಭಸ್ಮಸಾತ್ಕುರುತೇಽರ್ಜುನ।
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ॥

ಅಂದರೆ

"ಚೆನ್ನಾಗಿ ಉರಿಯುವ ಬೆಂಕಿಯು ಕಟ್ಟಿಗೆಗಳನ್ನು ಬೂದಿಮಾಡಿಬಿಡುವಂತೆ ಜ್ಞಾನವೆಂಬ ಬೆಂಕಿಯು ಎಲ್ಲ ಕರ್ಮಗಳನ್ನು ಸುಟ್ಟು ಬೂದಿಮಾಡುವುದು" ಎಂದು ಗೀತೆಯಲ್ಲಿ ಭಗವಂತನು ಅರ್ಜುನನಿಗೆ ಉಪದೇಶಿಸುತ್ತಾನೆ.

ಇದೇ ಮೇಲೆ ಹೇಳಿದ ಈಶಾವಾಸ್ಯೋಪನಿಷತ್ತಿನ ಮಂತ್ರಗಳ ಅರ್ಥ. ಎಲ್ಲವೂ ಈಶ್ವರನದೆಂಬ ಜ್ಞಾನ ವನ್ನು ಮೊದಲನೆಯ ಭಾಗದಲ್ಲಿಯೂ, ಆಸೆ, ಆಸಕ್ತಿಗಳನ್ನು ಮನಸ್ಸಿನಿಂದ ದೂರಮಾಡಿ ಕರ್ಮಮಾಡುವ ಮಾರ್ಗವನ್ನು ಎರಡನೆಯ ಭಾಗದಲ್ಲಿಯೂ ಋಷಿಯು ಹೇಳುತ್ತಾನೆ. ಹೀಗೆ ಜ್ಞಾನವನ್ನು ಹೊಂದಿ ಆಸೆಗಳನ್ನು ದೂರಮಾಡಿ ಕರ್ಮಗಳನ್ನು ಭಗವಂತನಿಗೆ ಅರ್ಪಿಸುವುದೇ ಕರ್ಮಪಾಶದಿಂದ ತಪ್ಪಿಸಿಕೊಳ್ಳುವ ದಾರಿ, ಬೇರೆಯಿಲ್ಲ ಎನ್ನುವುದೇ ಗೀತೆ ಮತ್ತು ಉಪನಿಷತ್ತುಗಳೆರಡರ ಉಪದೇಶವೂ ಆಗಿರುತ್ತದೆ. ಈ ಉಪದೇಶವನ್ನು ಅನು ಸರಿಸಿ ನಡೆಯಲು ದೊಡ್ಡ ಸಾಧನೆಯೂ, ಭಕ್ತಿಯೂ, ದೈವೋಪಾಸನೆಯೂ ಬೇಕು. ಇದೇ ಹಿಂದೂ ಧರ್ಮದ ಒಟ್ಟಿನ ರೂಪ".[1]

## ಉಪನಿಷತ್ ಅಧ್ಯಯನಯೋಜನೆ

"ಹಿಂದೂ ಧರ್ಮಕ್ಕೆ ಪ್ರಮಾಣಗ್ರಂಥಗಳಲ್ಲಿ ಮುಖ್ಯವಾದುವು ಉಪನಿಷತ್ತುಗಳು. ಈ ಕಾಲದಲ್ಲಿ ನಮ್ಮ ಶಾಲೆಗಳಲ್ಲಿ ಓದುವ ಹುಡುಗರೂ ಹುಡುಗಿಯರೂ ನಮ್ಮ ಧರ್ಮಗ್ರಂಥಗಳನ್ನು ಓದುವುದೇ ಇಲ್ಲ; ಓದಲೂ ಇಷ್ಟಪಡುವುದಿಲ್ಲ. ಶ್ರದ್ಧಾಭಕ್ತಿಗಳಿಗೆ ಪ್ರತಿಯಾಗಿ ಅವುಗಳನ್ನು ಕಂಡರೆ ಭಯ. ವೇದಾಂತ, ಗೀತೆ, ಉಪ ನಿಷತ್ತು ಎಂದರೆ ದೂರ ಓಡುವರು.

ವೈಜ್ಞಾನಿಕಯುಗದ ನಮ್ಮ ಜನ ತಮಗೊದಗಿರುವ ಪೂರ್ವಕಾಲದ ಧರ್ಮಗ್ರಂಥಗಳನ್ನು ಓದದೆ ಇರುವುದರಿಂದ ಅನೇಕ ವಿಧವಾದ ಹಾನಿಗಳು ಬೆಳೆಯುತ್ತಾ ಬರುತ್ತಿವೆ. ಅನ್ಯದೇಶಗಳಲ್ಲಿ ಹೀಗಿಲ್ಲ; ಅಲ್ಲಿ ಓದಿದವರ ಗೋಷ್ಠಿಯು ತಮ್ಮ ಸಮಾಜದವರ ಪುರಾತನ ಗ್ರಂಥಗಳನ್ನು ಅಲಕ್ಷ್ಯಮಾಡುವುದಿಲ್ಲ ಆದುದರಿಂದ ಆ ದೇಶದವರ ಧರ್ಮದ ಸಂಪ್ರದಾಯವು ಹಿಂದಿನಕಾಲದ ಜ್ಞಾನವನ್ನು ತಿಳಿದವರ ರಕ್ಷಣೆಯಲ್ಲಿದೆ. ಹಿಂದೂ ಧರ್ಮವು ದುಃಸ್ಥಿತಿಯಲ್ಲಿರುವುದಕ್ಕೆ ಒಂದು ದೊಡ್ಡ ಕಾರಣವೇನೆಂದರೆ ನಮ್ಮ ದೇಶದಲ್ಲಿ ಮತಗ್ರಂಥಗಳನ್ನು ಚೆನ್ನಾಗಿ ತಿಳಿದವರಿಗೂ ಇತರ ವಿದ್ಯೆಗಳನ್ನು ತಿಳಿದವರಿಗೂ ಹೊಂದಿಕೆಯಿಲ್ಲದಿರುವುದು. ನಮ್ಮ ಪೂರ್ವಜರು ಬರೆ ದಿಟ್ಟಿರುವ ಶ್ರೇಷ್ಠವಾದ ಧರ್ಮಗ್ರಂಥಗಳನ್ನು ನವೀನಕಾಲದ ಜ್ಞಾನವನ್ನು ಸಂಪಾದಿಸಿದವರು ಓದಿ ತಿಳಿದು ವೈದಿಕ

---

1. ಈ ಭಾಗವನ್ನು ಸ್ವತಂತ್ರಭಾರತದ ಪ್ರಥಮ ವೈಸರಾಯ್ ಆಗಿದ್ದ ದಿವಂಗತ ಶ್ರೀಮಾನ್ ಚಕ್ರವರ್ತಿ ರಾಜಗೋಪಾಲಾಚಾರಿ (ರಾಜಾಜಿ) ಯವರ ತಮಿಳು ಗ್ರಂಥದ ಕನ್ನಡ ಅನುವಾದದಿಂದ ಕೃತಜ್ಞತಾಪೂರ್ವಕವಾಗಿ ಆಯ್ದುಕೊಳ್ಳಲಾಗಿದೆ.

ರಂತೆ ತಾವೂ ಅವುಗಳನ್ನು ಅಭ್ಯಾಸಮಾಡಿ ಅವುಗಳ ವಿಷಯುಗಳನ್ನು ಇತರರಿಗೆ ವಿಶದಗೊಳಿಸುವ ಸಾಮರ್ಥ್ಯವನ್ನು ಪಡೆದರೆ ಸಮಾಜವೂ ಮತವೂ ಬೇರೆ ಪ್ರಯತ್ನವಿಲ್ಲದೆಯೇ ತಾವಾಗಿಯೇ ಸುಧಾರಿಸುವುವು. ಇದಕ್ಕಾಗಿ ನಮ್ಮ ವಿದ್ಯಾರ್ಥಿಗಳು ಪ್ರೌಢಶಾಲೆಯ ಸ್ತರದಿಂದಲೇ ತಮ್ಮ ಮುಖ್ಯವಾದ ಕರ್ತವ್ಯಗಳಲ್ಲಿ ಇದನ್ನೂ ಸೇರಿಸಿಕೊಂಡು ತಮ್ಮ ಹಳೆಯ ಗ್ರಂಥಗಳನ್ನು ಚೆನ್ನಾಗಿ ಗಮನವಿಟ್ಟು ಓದಬೇಕು. ಓದಿ ಸಮಾಜದ ಅಭ್ಯುದಯಕ್ಕಾಗಿ ಸೇವೆ ಸಲ್ಲಿಸಬೇಕು.

ಉಪನಿಷತ್ತುಗಳಲ್ಲಿ ಶಿಷ್ಯನು ಗುರುವಿಗೆ ಅತಿ ಸಮೀಪದಲ್ಲಿ ಕುಳಿತು ವಿಷಯುಗಳನ್ನು ಕೇಳಿ ತಿಳಿದುಕೊಳ್ಳುವ ಕ್ರಮವಲ್ಲಿ ಆತ್ಮಜ್ಞಾನದ ಬೋಧನೆ ಆಗಿರುವುದು. ಆ ಕಾಲದ ಜೀವನಕ್ಕೂ, ಆಚಾರವ್ಯವಹಾರಗಳಿಗೂ, ನಾವು ಈ ಕಾಲವಲ್ಲಿ ಆಚರಿಸುವುದಕ್ಕೂ ಬಹಳ ಭೇದವಿರುವುದರಿಂದ ಅನೇಕ ಕಡೆಗಳಲ್ಲಿ ವಿಷಯವು ಸ್ಪಷ್ಟವಾಗದು. ಅಲ್ಲದೆ ಶಿಷ್ಯನಿಗೆ ತಿಳಿಸಬೇಕಾದ ವಿಷಯುಗಳನ್ನು ಜ್ಞಾಪಿಸಿಕೊಳ್ಳಲು ಅನುಕೂಲವಾಗಿರುವ ಸೂತ್ರಗಳ ರೂಪದಲ್ಲಿ ಋಷಿಗಳು ಉಪನಿಷತ್ತುಗಳನ್ನು ರಕ್ಷಿಸಿದರು. ಅವು ಏಕಾಂತದಲ್ಲಿ ತಲೆ ಬಗ್ಗಿಸಿ ಕುಳಿತು ಓದುವವರಿಗಾಗಿ ಅಚ್ಚುಹಾಕಿ ಸಿದ್ಧವಾಗಿರುವ ಗ್ರಂಥಗಳಲ್ಲ. ಈ ಕಾರಣದಿಂದಲೂ ಕೆಲವು ಎಡೆಗಳಲ್ಲಿ ವಿಷಯ ವನ್ನು ತಿಳಿದುಕೊಳ್ಳುವುದು ಕಷ್ಟವಾಗುವುದು. ಆದರೂ ಸನ್ಮಾರ್ಗದಲ್ಲಿ ಜೀವನವನ್ನು ನಡೆಸಿ ಮನಸ್ಸನ್ನು ಶುದ್ಧವಾಗಿ ಇಟ್ಟುಕೊಂಡು ಸತ್ಯವಾದ ವಿಷಯವನ್ನು ನಿಜವಾದ ಆಸಕ್ತಿಯಿಂದ ಓದುವವರಿಗೆ ಈ ಉಪನಿಷತ್ತು ಗಳಂತೆ ಉಪಯೋಗವಾಗುವ ಗ್ರಂಥಗಳು ಲೋಕದಲ್ಲಿ ಬೇರೆ ಯಾವುವೂ ಇಲ್ಲ".[1]

"ಪ್ರೌಢಶಾಲೆಯಲ್ಲಿ ಉಪಾಧ್ಯಾಯನು ವಿದ್ಯಾರ್ಥಿಗಳಿಗೆ ಉಪನ್ಯಾಸಕೊಡುವಾಗ ತಾನು ಜ್ಞಾಪಕಕ್ಕಾಗಿ ಮುಖ್ಯಗಳಾದ ಅಂಶಗಳನ್ನೂ ತಾನು ಉಪಯೋಗಿಸಬೇಕೆಂದಿರುವ ಪದಗಳನ್ನೂ ಉದಾಹರಣೆಗಳನ್ನೂ ಒಂದು ಕಾಗದದ ಮೇಲೆ ಗುರುತುಹಾಕಿಕೊಂಡು ಅದನ್ನು ಮುಂದೆ ಇರಿಸಿಕೊಂಡಿರುವುದುಂಟಷ್ಟೆ. ಅದರಲ್ಲಿ ಪಾಠದ ಎಷ್ಟೋ ಅಂಶಗಳು ಕಾಣಬರುವುದಿಲ್ಲ. ಆ ಅಂಶಗಳನ್ನು ಉಪಾಧ್ಯಾಯನು ಉಪನ್ಯಾಸಕಾಲದಲ್ಲಿ ಬಾಯಿಮಾತಿ ನಿಂದ ಹೇಳಬಹುದೆಂದು ಬರೆದಿಡದೆ ಬಿಟ್ಟಿರುತ್ತಾನೆ. ಉಪನಿಷತ್ತು ಬಹುಮಟ್ಟಿಗೆ ಅಂಥಾ ಟಿಪ್ಪಣಿಪತ್ರ. (ಕ್ಲಾಸ್ ನೋಟ್ಸ್) ಅದರ ವಿಷಯಪ್ರತಿಪಾದನೆಯು ಸರಪಣಿಯಲ್ಲಿ ಕೊಂಡಿಗಳು ಅಲ್ಲಿ ಇಲ್ಲಿ ಕಳಚಿಹೋಗಿರುವುದುಂಟು. ಆ ಕೊಂಡಿಗಳನ್ನು ನಮಗೆ ಎತ್ತಿಕೊಡುವವರು ಭಾಷ್ಯಕಾರರು.

ಟಿಪ್ಪಣಿಯಲ್ಲಿ ಪಾರಿಭಾಷಿಕ ಪದಗಳಿರುವುದುಂಟು. ಉದಾಹರಣೆ : ಈಶೋಪನಿಷತ್ತಿನಲ್ಲಿ "ಅವಿದ್ಯೆ, ವಿದ್ಯೆ" (ಮಂತ್ರ ೯), "ಸಂಭೂತಿ, ಅಸಂಭೂತಿ" (ಮಂತ್ರ ೧೨). ಇವುಗಳ ವಿವರಣೆಯೂ ಭಾಷ್ಯಕಾರರಿಂದ ಬರಬೇಕಾದದ್ದೇ.

ಉಪನಿಷತ್ತು ಒಂದು ಕಡೆ ಕಾವ್ಯ, ಒಂದು ಕಡೆ ಶಾಸ್ತ್ರ. ಅದರಲ್ಲಿ ಉತ್ತಮ ಕಾವ್ಯದ ಧ್ವನಿ, ತರ್ಕದ ಲೆಕ್ಕಾಚಾರ ಎರಡೂ ಕೂಡಿಕೊಂಡಿರುತ್ತವೆ. ಅದರ ಪದಗಳಲ್ಲಿ ನಿಘಂಟಿನ ಅರ್ಥಕ್ಕಿಂತ ನಿಘಂಟಿಗೆ ಸಿಕ್ಕದ ಭಾವ ಸೂಚನೆಗಳು ದೊಡ್ಡವು. ಆ ಅಂತರ್ಧ್ವನಿಗಳು ಒಂದು ನಿಯತಾಕಾರದ ಸರಪಣಿಯಲ್ಲಿ ಜೋಡಣೆಯಾಗಿರುತ್ತವೆ. ಆದುದರಿಂದ ಉಪನಿಷತ್ಪಠನೆಗೆ (೧) ಕಾವ್ಯವ್ಯಾಸಂಗಿಯ ಊಹನ, ಕಲ್ಪನ, ಅನುಭಾವನ ಶಕ್ತಿಗಳೂ, (೨) ಶಾಸ್ತ್ರ ವ್ಯಾಸಂಗಿಯ ವಾಕ್ಯಶೋಧನ, ಕಾರ್ಯಕಾರಣಯೋಜನ, ಪೂರ್ವಾಪರವಿಮರ್ಶನ ಸಾಮರ್ಥ್ಯಗಳೂ ಅವಶ್ಯ ವಾಗುತ್ತವೆ.

ಕನ್ನಡದಲ್ಲಿ ಗ್ರಂಥಕಾಲಕ್ಷೇಪವೆಂದರೆ ಬರಿಯ ಕಥೆಕಾದಂಬರಿಗಳ ವ್ಯಾಸಂಗವೆಂದು ಈಗ ಬಹುಮಂದಿ ತಿಳಿದುಕೊಂಡಿರುವಂತಿದೆ. ಅಂಥವರು ಉಪನಿಷತ್ ಪುಸ್ತಕವನ್ನು ಕೈಗೆ ತೆಗೆದುಕೊಳ್ಳುವುದಾದರೆ ಅವರಿಗಾಗಿ

---

1. ಈ ಭಾಗವನ್ನು ದಿವಂಗತ ಶ್ರೀ ರಾಜಾಜಿಯವರ ತಮಿಳು ಲೇಖನದ ಕನ್ನಡ ಅನುವಾದದಿಂದ ಆಯ್ದುಕೊಳ್ಳಲಾಗಿದೆ.

ಒಂದು ಮುನ್ನೆಚ್ಚರಿಕೆಯ ಮಾತನ್ನು ಹೇಳುವ ಸಾಹಸವನ್ನು ಮಾಡಬೇಕಾಗಿದೆ. ಅದನ್ನವರು ಕ್ಷಮಿಸಿ ಲಾಲಿಸಬೇಕು. ಕಥೆ ಕಾದಂಬರಿಗಳ ಅಭ್ಯಾಸ ಅತಿಯಾದರೆ-ಅದು ಒಂದು ಮಿತಿಯನ್ನು ಮೀರಿದರೆ ತತ್ವಗ್ರಂಥದ ಓದಿಗೆ ಬೇಕಾದ ಹದವನ್ನು ಮನಸ್ಸು ಕಳೆದುಕೊಂಡೀತು. ಕಥೆ ಕಾದಂಬರಿಗಳನ್ನು ಬರೆಯುವವರು ಮಾತನ್ನು ತೂಕಮಾಡಿ ಆರಿಸಿ ಜೋಡಿಸಬೇಕಾದ ನಿರ್ಬಂಧವಿಲ್ಲ. ಮಾತು ಕೊಂಚ ಹೆಚ್ಚು ಕಡಿಮೆಯಾದರೂ ಅಲ್ಲಿ ಅರ್ಥಕ್ಕೇನೂ ಬಾಧೆಯಿಲ್ಲ. ಅಲ್ಲಿ ಮುಖ್ಯವಾದುದು ಕಥಾಪ್ರವಾಹ. ತತ್ತ್ವಗ್ರಂಥವಾದರೋ ಮಾತಿನ ಹೆಚ್ಚು ಕಡಿಮೆಗಳನ್ನು ಸಹಿಸಲಾರದು. ಇಲ್ಲಿ ಬುದ್ಧಿಯು ಗಣಿತಶಾಸ್ತ್ರದ ಕಟ್ಟುನಿಟ್ಟಿಗೆ ಸಿದ್ಧವಾಗಿರಬೇಕು. ಕಥಾಪ್ರಪಂಚದ ಸ್ವಾತಂತ್ರ್ಯ ಇಲ್ಲಿರದು. ಇಲ್ಲಿ ಬುದ್ಧಿಯು ಪೂರ್ವಾಪರಸೂಕ್ಷ್ಮಗಳನ್ನು ತಪ್ಪಿಲ್ಲದಂತೆ ಗ್ರಹಿಸಲು ಜಾಗರೂಕವಾಗಿರಬೇಕು.

ಕಥೆಯಲ್ಲಿ ಓದುಗನ ಸ್ವಪ್ರಯತ್ನ ಹೆಚ್ಚು ಬೇಕಿಲ್ಲ. ಸನ್ನಿವೇಶದ ಸ್ವಾರಸ್ಯವೇ ಅವನನ್ನು ಸೆಳೆದುಕೊಂಡು ಹೋಗುತ್ತದೆ. ತತ್ವಗ್ರಂಥದಲ್ಲಿ ಹಾಗಲ್ಲ. ಇಲ್ಲಿ ಬುದ್ಧಿಯಶ್ರಮ ಹೆಚ್ಚು ಅವಶ್ಯ.

ಕಥೆಯಲ್ಲಿ ಬಿಡಿಮಾತು ಅಷ್ಟು ಮುಖ್ಯವಲ್ಲ. ಅಲ್ಲಿ ವಾಕ್ಯರಾಶಿಯ ಒಟ್ಟುಧೋರಣೆ ಮುಖ್ಯ. ತತ್ವಜಿಜ್ಞಾಸೆಯಲ್ಲಿ ತಿರುಳಿರತಕ್ಕದ್ದು ಬಿಡಿಮಾತಿನಲ್ಲಿ. ಮಾತಿನ ಅಂತರ್ಭಾವ ಕೈತಪ್ಪಿಹೋದರೆ ವಾಕ್ಯದ ಸಾರಾಂಶ ಸರಿಯಾಗಿ ದೊರೆಯದು. ಆದ್ದರಿಂದ ಈ ಗ್ರಂಥವು ವಾಚಕರಿಂದ ಹೆಚ್ಚು ಅವಧಾನವನ್ನೂ ಹೆಚ್ಚಿನ ಬುದ್ಧಿಪರಿಶ್ರಮವನ್ನೂ ಹೆಚ್ಚಾದ ವಿಚಾರಜಾಗರೂಕತೆಯನ್ನೂ ಅಪೇಕ್ಷಿಸುತ್ತದೆ. ವಾಚಕರು ಪ್ರತಿಮಾತನ್ನೂ ಚೆನ್ನಾಗಿ ಗಮನಿಸಿನೋಡಿ, ಅದರ ಅಂತರ್ಭಾವಗಳನ್ನು ಸ್ವಪ್ರತಿಭಾಪ್ರಸಾದದಿಂದ ಕಂಡು ಜೋಡಿಸಿಕೊಳ್ಳಬೇಕು.

ಉಪನಿಷತ್ತು ಎಂದರೆ ಸದ್ಯಕ್ಕೆ ಅದು ಜೀವನತತ್ವವನ್ನು ತಿಳಿಸಿಕೊಡುವ ಗ್ರಂಥ ಎಂದು ಇಟ್ಟುಕೊಳ್ಳಬಹುದು. ಅದರ ವಿಷಯ ಹೀಗೆ ಗಹನವಾದದ್ದು. ಅದು ಸುಲಭವಾಗಬೇಕಾದರೆ ನಾವು ಮೊದಲು ಕೆಲವು ಶಿಕ್ಷಣ ಸಾಧನೆಗಳಿಂದ ಮನಸ್ಸನ್ನು ಸಿದ್ಧಪಡಿಸಿಕೊಂಡಿರಬೇಕು. ಅಂಥ ಸಾಧನೆಗಳಲ್ಲಿ "ಪುರುಷಸೂಕ್ತ" ದ ವ್ಯಾಸಂಗ ಮುಖ್ಯವಾದದ್ದು.

ತತ್ವಜ್ಞಾನದ ಸಂಪಾದನೆಯು ಬರಿಯ ನಿಘಂಟು, ವ್ಯಾಕರಣಗಳ ಪಾಂಡಿತ್ಯದಿಂದಾಗಲಿ ತರ್ಕಚಮತ್ಕಾರದಿಂದಾಗಲಿ ಆಗತಕ್ಕದ್ದಲ್ಲ. ಏಕೆಂದರೆ ತತ್ವದ ಮುಖ್ಯವಿಷಯವಾದ ಆತ್ಮವಸ್ತುವೆಂಬುದು ಭಾಷೆಗಿಂತ ಸೂಕ್ಷ್ಮವಾದದ್ದು ಮತ್ತು ಬುದ್ಧಿಗೆ ಮೇಲ್ಪಟ್ಟದ್ದು. ಆ ಆತ್ಮವನ್ನು ಕಾಣುವ ಶಕ್ತಿಯು ಮನುಷ್ಯನ ಅಂತರಂಗದಲ್ಲಿ ಮನಸ್ಸು ಮತ್ತು ಬುದ್ಧಿಗಿಂತಲೂ ಸೂಕ್ಷ್ಮವಾಗಿ ಆತ್ಮದಲ್ಲಿಯೇ ಗೂಢವಾಗಿ ಅಡಗಿಕೊಂಡಿರುತ್ತದೆ. ಅದೇ ಸಹಜಬೋಧೆ; ಅದೇ ಅಂತಃಪ್ರಜ್ಞೆ; ಅದೇ ಪ್ರತ್ಯಗ್ದೃಷ್ಟಿ. ಅದಿದ್ದರೆ ಮಾತ್ರ ಆಧ್ಯಾತ್ಮಿಕ ಪ್ರವೃತ್ತಿ. ಮನಸ್ಸು ಬುದ್ಧಿ ಮೊದಲಾದ ಎಲ್ಲ ಅಂತಃಕರಣಗಳೂ ನಿರ್ಮಲವಾಗಿ ಏಕೀಭವಿಸಿ ಜಗದ್ರಹಸ್ಯದ ಕಡೆ ತಿರುಗಿದಾಗ ಆ ಆಧ್ಯಾತ್ಮಿಕಶಕ್ತಿಯು ಪ್ರಕಾಶಕ್ಕೆ ಬರುತ್ತದೆ.

ತತ್ವವ್ಯಾಸಂಗಕ್ಕೆ ಬೇಕಾದ ಗುಣಯೋಗ್ಯತೆಗಳಲ್ಲಿ ಮೊದಲು ಅಪೇಕ್ಷ್ಯವಾದದ್ದು ವೇದಶಾಸ್ತ್ರಗಳಲ್ಲಿ ನಂಬಿಕೆ. ಅದೇ ಶ್ರದ್ಧೆ. ಸಾಮಾನ್ಯವಾಗಿ ಒಬ್ಬ ಮನುಷ್ಯನಿಗೆ ತನ್ನ ತಾಯಿ ಬಡಿಸಿದ ಊಟದಲ್ಲಿ ಎಂಥ ನಂಬಿಕೆ ಇರುತ್ತದೆಯೋ ಅಥವಾ ತನ್ನ ವೈದ್ಯನ ಔಷಧದಲ್ಲಿ ಎಷ್ಟು ನೆಚ್ಚಿಕೆ ಇರುತ್ತದೆಯೋ ಆ ತೆರೆದ ವಿಶ್ವಾಸದೃಷ್ಟಿಯಿಲ್ಲದವನ ಮನಸ್ಸಿಗೆ ಉಪದೇಶವಾಕ್ಯವು ಸರಿಯಾಗಿ ಅರ್ಥವಾಗಲಾರದು. ಮೊದಲು ನಂಬಿಕೆಯಿಂದ ಊಟಮಾಡಿ ಅಥವಾ ಔಷಧಿ ಕುಡಿದು, ಆ ಮೇಲಿನ ಅನುಭವದಿಂದ ಅದರ ಗುಣವನ್ನು ಕಂಡುಕೊಳ್ಳುತ್ತೇವೆ. ಅಂಥಾ ಉತ್ತರೋತ್ತರ ಪುನರ್ವಿಚಾರ, ನಿಷೇಧಕವಾಗದ ಆಪ್ತವಾಕ್ಯವಿಶ್ವಾಸವು ತತ್ವಜಿಜ್ಞಾಸೆಯಲ್ಲಿಯೂ ಅವಶ್ಯಕ.

ಯಾರ ಸಹಜದಲ್ಲಿ ಅಧ್ಯಾತ್ಮಕುತೂಹಲವಿಲ್ಲವೋ, ಯಾರು ತಮ್ಮ ವ್ಯವಹಾರದಲ್ಲಿ ನಿಯಮನಿಷ್ಠೆಗಳನ್ನಿಟ್ಟುಕೊಂಡಿಲ್ಲವೋ, ಯಾರು ತಾತ್ವಿಕದೃಷ್ಟಿಯನ್ನು ಸತತಾಭ್ಯಾಸದಿಂದ ಸೂಕ್ಷ್ಮಪಡಿಸಿಕೊಂಡಿಲ್ಲವೋ, ಅಂಥವರಿಗೆ ಇಂಥ ಗ್ರಂಥವು ನಿಷ್ಪ್ರಯೋಜಕ. ಅಷ್ಟೇ ಅಲ್ಲ, ಅಂಥವರು ಈ ವಿಷಯದ ಗಂಭೀರತೆಯನ್ನೂ ಪೂಜ್ಯತೆಯನ್ನೂ

ಕಾಣಲಾರದೆ ಗ್ರಂಥವಾಕ್ಯಕ್ಕೆ ಅಪಾರ್ಥವನ್ನೂ ಕಲ್ಪಿಸಿ, ಲೋಕದ ಸುಸ್ಥಿತಿಗೆ ಹಾನಿ ತಂದರೂ ತರಬಹುದು.

ಆದ್ದರಿಂದ ನಮ್ಮ ಉದ್ಧಾರಕ್ಕೆ ಬೇಕಾದ ಮೊದಲನೆಯ ಸಾಧನ ನಮ್ಮ ಶ್ರದ್ಧೆ, ಪ್ರಯತ್ನಗಳೇ, ಮಂತ್ರಾಕ್ಷರಗಳು ನಿಮಿತ್ತ ಮಾತ್ರ. ಅಕ್ಕಿಯನ್ನು ಅನ್ನವಾಗಿಸುವುದು ಪಾತ್ರೆಯಲ್ಲ, ಬೆಂಕಿ. ಮಂತ್ರದಿಂದ ತತ್ತ್ವದರ್ಶನವನ್ನು ಉಂಟಾಗಿಸುವುದು ಮನಸ್ಸಿನ ಕಾವು, ಅದೇ ಶ್ರದ್ಧೆ ಅದೇ ತಪಸ್ಸು.[1]

ವೇದಗಳಿಗೆ ರೂಪಬದಲಾವಣೆಯಾಗಲಿ ಅಪಾರ್ಥವಾಗಲಿ ಆಗದಿರುವಂತೆ ನಮ್ಮ ಹಿಂದಿನ ಮಹರ್ಷಿಗಳು ಬಹಳ ಎಚ್ಚರಿಕೆ ವಹಿಸಿರುವರು. ಅದಕ್ಕಾಗಿಯೇ ಅವರು ಶ್ರದ್ಧೆಯಿಂದಲೂ ತಪಸ್ಸಿನಿಂದಲೂ ವೇದಾರ್ಥಗಳನ್ನು ಸಾಕ್ಷಾತ್ಕರಿಸಿಕೊಂಡು ಲೋಕಕ್ಷೇಮಾರ್ಥವಾಗಿಯೇ ತಮ್ಮ ಜೀವನವನ್ನೆಲ್ಲಾ ಮುಡಿಪಾಗಿಡುತ್ತಿದ್ದರು. ಈ ಲೋಕಕ್ಷೇಮದ ಪ್ರಯತ್ನಕ್ಕೆ ಪ್ರೇರಣೆಕೊಡುವುದೇ ವೇದೋಪನಿಷತ್ತುಗಳ ಮುಖ್ಯಗುರಿ. ಅವುಗಳಿಗೆ ಸ್ವಾರ್ಥವೇನಿದೆ ? ಸಾಂಪ್ರದಾಯಿಕವಾಗಿ ಅವು ಯಾರೊಬ್ಬರಿಗಾಗಿಯೂ ಇರುವ ಅಥವಾ ಯಾರೊಬ್ಬರ ಮಾತೂ ಅಲ್ಲ. ಸಕಲಲೋಕದಲ್ಲೂ ವಿವಿಧರೀತಿಯ ಜನರಿರುವುದರಿಂದ ಅವರವರ ಯೋಗ್ಯತೆಗೆ ತಕ್ಕ ಕರ್ಮಗಳನ್ನೂ ಉಪಾಸನೆಗಳನ್ನೂ ಬೋಧಿಸಿ, ಅವರವರ ಮಟ್ಟದಲ್ಲೇ ಅವರಿಗೆ ಜೀವನವನ್ನೂ ಉಜ್ಜೀವನವನ್ನೂ ಒದಗಿಸುವುದು ವೇದಗಳ ವ್ಯಾವಹಾರಿಕವಾದ ನೀತಿ. ಉಪಾಸನೆಗಳಲ್ಲಿ ಬರುವ ವಿವಿಧ ಉಪಾಸನೆಗಳಿಗೂ ಈ ಲೌಕಿಕ ತಾರತಮ್ಯಗಳಿಗೆ ತಕ್ಕಂತೆ ತರತಮಭಾವದಿಂದಲೇ ಪರಮಾತ್ಮನೆಂಬ ಏಕೈಕ ಗುರಿಯನ್ನು ಸಾಧಿಸುವ ದೃಷ್ಟಿ ಒಂದೇ ಮುಖ್ಯವಾಗಿದೆ. ಈ ಪರಮಾತ್ಮದೃಷ್ಟಿ ಬೆಳೆದು ಸಾಕ್ಷಾತ್ಕಾರರೂಪವಾಗಿ ಫಲಿಸಿದಾಗ ಮಾತ್ರ ಅಂತಹ ಒಬ್ಬ ವ್ಯಕ್ತಿಯಿಂದ ಲೋಕವೇ ಉದ್ಧಾರವಾಗಬಲ್ಲುದು. ಇಂತಹ ಸಾಕ್ಷಾತ್ಕಾರವಿದ್ದ ಮಹರ್ಷಿಗಳು ಇದನ್ನು ತಮ್ಮ ಅನುಭವಪೂರ್ವಕವಾಗಿ ತಿಳಿಸಲೆಂದೇ ರಚಿಸಿದಂಥವು ಇತಿಹಾಸ ಪುರಾಣಾಗಮಧರ್ಮಶಾಸ್ತ್ರಾದಿಗ್ರಂಥಗಳು. ಪ್ರಸಂಗಾತ್ ಅವುಗಳಲ್ಲಿ ವಿಶ್ವದ ಒಳ್ಳೆಯ ಕೆಟ್ಟ ವಿಚಾರಗಳೆಲ್ಲ ತಾರತಮ್ಯ ವಿಮರ್ಶೆಗಾಗಿ ಬಂದಿರುವುದು. ವಿಮರ್ಶಕನ ಮುಖ್ಯದೃಷ್ಟಿ ಇರಬೇಕಾದುದು ಗುಣಗ್ರಹಣದಲ್ಲಿ, ದೋಷತ್ಯಾಗದಲ್ಲಿ. ಇಂತಹ ದೃಷ್ಟಿಯಿಂದ ವಿಶ್ವದ ಯಾವ ವಾಙ್ಮಯವನ್ನು ವಿಮರ್ಶಿಸಿದರೂ ಸಹೃದಯರಿಗೆ ಅಲೌಕಿಕವಾದ ಒಂದು ಗುರಿ ಸಿಕ್ಕಿ ಅದರ ಮೂಲಕ ಅವರು ಲೋಕಕ್ಕೆ ಆಯಾಕಾಲಗಳಿಗೆ ತಕ್ಕಂತೆ ಒಂದು ಸಮರ್ಥನೀಯವಾದ ಅನುಕೂಲವಿಚಾರವನ್ನೇ ತಿಳಿಸಿ ಕ್ಷೇಮಂಕರರಾಗಿ ಬಾಳಿ ಬೆಳಗುವರು.

ಇಂತಹ ಅಲೌಕಿಕದಿವ್ಯಾನುಭವಶಾಸ್ತ್ರವಾದ ಉಪನಿಷತ್ತುಗಳು ವೈದಿಕಸಾಹಿತ್ಯದಲ್ಲಿ ಇರುವುದರಿಂದ ವೇದಾಂಗಗಳಾದ ಶಿಕ್ಷಾ, ವ್ಯಾಕರಣ, ಛಂದಸ್, ನಿರುಕ್ತಾದಿಗಳ ಸಹಾಯವಿಲ್ಲದೆ ಇವುಗಳ ಅರ್ಥನಿರ್ಣಯ ಮಾಡಲು ಸಾಧ್ಯವಿಲ್ಲ. ಸಾಂಗೋಪಾಂಗವಾಗಿ ಉಪನಿಷತ್ತುಗಳನ್ನು ಅಧ್ಯಯನಮಾಡಿ ನಮ್ಮ ಪ್ರಾಚೀನಾಚಾರ್ಯರು ಭಾಷ್ಯಗಳನ್ನು ಬರೆದಿರುವುದರಿಂದ ಅವೆಲ್ಲವನ್ನೂ ಇಲ್ಲಿ ಬಳಸಿಕೊಳ್ಳಬೇಕಾಗುವುದು. ಈ ಬಗ್ಗೆ ಕೆಲವು ವಿವರಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

## ಹೊಸ ಪ್ರಕಾಶನದ ವಿಶೇಷಗಳು

ವೇದಗಳ ಅರ್ಥತಿಳಿಯಲು ಅವುಗಳ ಪದವಿಂಗಡಣೆಯೇ ಮೊಟ್ಟಮೊದಲನೆಯ ಸಾಧನವಾಗಿದೆ. ಪದಗಳ ಸ್ವರವಿನ್ಯಾಸಗಳೂ, ಸಂಧಿನಿಯಮಗಳೂ, ವಾಕ್ಯ, ಅನುವಾಕ ಮುಂತಾದ ವಿಭಾಗಗಳೂ, ಅರ್ಥನಿರ್ಣಯಕ್ಕೆ ಬಹುಮುಖ್ಯ ಸಹಾಯಕಗಳು. ಈಶಾವಾಸ್ಯಕ್ಕೆ ಸಂಬಂಧಿಸಿದಂತೆ ಇವುಗಳನ್ನು ಪ್ರತ್ಯೇಕ ಮೂಲಪಾಠದೊಡನೆ ಕನ್ನಡ ಲಿಪಿಯಲ್ಲೇ ಕೊಡಲಾಗಿದೆ.

---

1. ಈ ಭಾಗವನ್ನು ದಿವಂಗತ ಶ್ರೀ 'ಡಿ. ವಿ. ಜಿ.' ಯವರ ಲೇಖನದಿಂದ ಸ್ವೀಕರಿಸಲಾಗಿದೆ.

ವೇದಮಂತ್ರಗಳಿಗೆ ಅವುಗಳನ್ನು ಸಾಕ್ಷಾತ್ಕಾರಮಾಡಿಕೊಂಡ ಋಷಿ, ಅವಕ್ಕೆ ಸಂಬಂಧಿಸಿದ ದೇವತೆ, ಅವುಗಳನ್ನು ಪಠಿಸುವಾಗ ಅಕ್ಷರಸಂಖ್ಯೆಗಳ ನಿಯಮರೂಪವಾದ ಛಂದಸ್ಸು, ಅವುಗಳ ಉಪಯೋಗ, ಇಂತಿಷ್ಟು ಇರುತ್ತವೆ. ಇವನ್ನು ತಿಳಿಯದೆ ಯಾವ ಮಂತ್ರವನ್ನೇ ಪಠಿಸಿದರೂ ಅಧ್ಯಯನಮಾಡಿದರೂ ಅದು ವ್ಯರ್ಥ ಮತ್ತು ಅನರ್ಥಕಾರಿಯೂ ಆಗುವುದು.[1] ಸ್ವರ ಮತ್ತು ಪದಪಾಠಗಳು ಅರ್ಥಜ್ಞಾನಕ್ಕೆ ಅತ್ಯಂತ ಸಹಾಯಕಗಳು. ಇವಿಲ್ಲದಿದ್ದರೂ ಅನರ್ಥವೇ.[2] ಇವನ್ನೆಲ್ಲ ಪರಂಪರೆಯಾಗಿ ವೇದಾಧ್ಯಯನಮಾಡಿರುವ ವಿದ್ವಾಂಸರ ಉಪದೇಶದಿಂದ ತಿಳಿಯಬೇಕು. ಸ್ವತಂತ್ರವಾಗಿ ಕಲಿಯತೊಡಗಿದರೆ ನಮ್ಮ ಕಲಿಕೆ ಶಿಥಿಲವೂ ವ್ಯರ್ಥವೂ ಆಗುವುದು.[3] ಆದುದರಿಂದ ಈ ಎಲ್ಲವನ್ನೂ ಸೇರಿಸಿ ಈಶಾವಾಸ್ಯೋಪನಿಷತ್ತಿನ ಮೂಲವನ್ನು ಪಾಠಾಂತರ ಟಿಪ್ಪಣಿಗಳೊಡನೆ ಕೊಡಲಾಗಿದೆ.

ಶಾಸ್ತ್ರೀಯವಾಗಿ ಉಪಾಸನೆ ಮಾಡುವವರಿಗೆ ಇಂತಹ ಕಲಿಕೆಯ ಕ್ರಮ ಆವಶ್ಯಕ. ಉಪಾಸನಾರ್ಹತೆ ಇಲ್ಲದವರಿಗೂ ಆತ್ಮಜ್ಞಾನ ಉಂಟಾಗಲು ಸ್ಮೃತಿ, ಇತಿಹಾಸ, ಪುರಾಣ, ಆಗಮ ಮುಂತಾದ ಗ್ರಂಥಗಳು ಸುಲಭವಾಗಿ ವೇದಾರ್ಥಗಳನ್ನು ತಿಳಿಸುತ್ತವೆ. ಇಂತಹ ಉಪಯೋಗ ಉಪನಿಷತ್ತುಗಳ ಭಾಷಾಂತರಗಳಿಂದಲೂ ಉಂಟು. ಆದುದರಿಂದ ಸ್ವರವಿಲ್ಲದ ಸಾಮಾನ್ಯ ಮೂಲಪಾಠವನ್ನೂ ಕನ್ನಡ ಛಾಯಾನುವಾದವನ್ನೂ ಇಲ್ಲಿ ಒದಗಿಸಲಾಗಿದೆ.

"ದಧ್ಯಙ್ ಆಥರ್ವಣ" ಎಂಬ ಮಹರ್ಷಿಗಳು ಯಾಜ್ಞವಲ್ಕ್ಯರಿಗಿಂತ ಮೊದಲು 'ಈಶಾವಾಸ್ಯ' ಮಂತ್ರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡಿದ್ದರು. ಇವರೇ ಈಶಾವಾಸ್ಯೋಪನಿಷತ್ತಿನ ಋಷಿ. ಇವರು ಸೂರ್ಯನ ಅವತಾರ. ಇವರಿಗೆ 'ಮನು' ಎಂದೂ ಹೆಸರು. ಇವರಿಗೆ ಕುದುರೆಯ ತಲೆಯಂತಹ ತಲೆ. ಇವರು ಉತ್ತಮ ಬ್ರಹ್ಮಜ್ಞಾನಿಗಳು. ಶುಕ್ಲಯಜುರ್ವೇದದ ಪ್ರಾಚೀನ ಆಚಾರ್ಯವಂಶಪರಂಪರೆಯಲ್ಲಿ ಇವರೂ ಬರುತ್ತಾರೆ.[4]

ಎಂಟು ಅಕ್ಷರಗಳ ಛಂದಸ್ಸಿಗೆ 'ಅನುಷ್ಟುಪ್' ಎಂದು ಛಂದಸ್ ಶಾಸ್ತ್ರದಲ್ಲಿ ಹೆಸರು. ಒಂದು ಮಂತ್ರದ ನಾಲ್ಕನೆಯ ಒಂದು ಭಾಗ ಹೀಗಿದ್ದರೆ ಸರಿ. 'ಈಶಾವಾಸ್ಯ'ದ ಅಧ್ಯಾಯದಲ್ಲಿ ಇಂತಹ ಮಂತ್ರಗಳೇ ಅಧಿಕವಾಗಿರುವುದರಿಂದ ಈ ಅಧ್ಯಾಯದ ಛಂದಸ್ ಅನುಷ್ಟುಪ್.

ಮಂತ್ರಗಳು ಯಾರನ್ನು ಕುರಿತಾಗಿವೆಯೋ ಅವರೇ ಆ ಮಂತ್ರದ ದೇವತೆಗಳು. ಈ ಅಧ್ಯಾಯದ ಎಲ್ಲ ಮಂತ್ರಗಳೂ ಆತ್ಮವಿದ್ಯೆಯನ್ನು ಮುಖ್ಯವಾಗಿ ತಿಳಿಸುತ್ತವೆ. ಆತ್ಮ ಎಂದರೆ ಪರಮಾತ್ಮ-ಬ್ರಹ್ಮ. ಇದೇ ಈ ಈಶಾವಾಸ್ಯ ಅಧ್ಯಾಯದ ದೇವತೆ. ಅಗ್ನಿ, ಪೂಷಾ, ಸೂರ್ಯ, ವಾಯು, ಕ್ರತು ಮುಂತಾದ ಎಲ್ಲ ದೇವತೆಗಳಿಗೂ ಅಂತರಾತ್ಮನಾಗಿ ಅವರೆಲ್ಲರನ್ನೂ ತನ್ನ ಅಂಗಗಳಂತೆ ಮಾಡಿಕೊಂಡಿರುವ ಮಹಾ ಆತ್ಮವೇ ಇದು.

ಯಾಸ್ಕ. ನಿ. ೭.೧.೪, ೧೩.೧.

---

1. ಯೋ ಹ ವಾ ಅವಿದಿತಾರ್ಷೇಯಚ್ಛಂದೋದೈವತವಿನಿಯೋಗೇನ ಬ್ರಾಹ್ಮಣೇನ ಮಂತ್ರೇಣ ಯಾಜಯತಿ ವಾ, ಅಧ್ಯಾಪಯತಿ ವಾ, ಸ ಸ್ಥಾಣುಂ ವರ್ಚ್ಛತಿ, ಗರ್ತಂ ವಾ ಪದ್ಯತೇ, ವಾ ಪ್ರಮೀಯತೇ, ಪಾಪೀಯಾನ್ ಭವತಿ, ಯಾತಯಾಮಾನ್ಯಸ್ಯ ಚ್ಛಂದಾಗ್ಂಸಿ ಭವಂತಿ ಇತಿ ಛಂದೋಗಬ್ರಾಹ್ಮಣಂ :— ಹಲಾಯುಧನ ಛಂದಸ್ಸೂತ್ರವೃತ್ತಿ. ೧. ೧.
2. ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ
ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಸ್ಸ್ವರತೋಽಪರಾಧಾತ್ ॥ ಪಾಣಿನಿಶಿಕ್ಷಾ.
3. ಆಮ್ನಾಯಾನಾಮಯೋಗೇನ ವಿದ್ಯಾಂ ಪ್ರಶಿಥಿಲಾಮಿವ । ರಾಮಾಯಣ. ೫. ೧೫. ೩೮.
4. ಯಾಸ್ಕನಿರುಕ್ತ ೧೨. ೩. ೧೪. ಭಾಗವತ ೮. ೧. ಬೃಹದಾರಣ್ಯಕೋಪನಿಷತ್. ೪, ೬ ಅಧ್ಯಾಯ.

ವಿದ್ಯೆ ಎಂದರೆ ಬರಿಯ ಜ್ಞಾನವಲ್ಲ. ಅದು ಭಕ್ತಿರೂಪವಾಗಿದ್ದು ಧ್ಯಾನಕ್ರಮದಿಂದ ದೇವತಾದರ್ಶನವಾಗುವ ಮಟ್ಟಕ್ಕೆ ಏರಿರುವ ಜ್ಞಾನ. ಇದೇ ಉಪಾಸನೆ. ಇದಕ್ಕೆ ನಿಷ್ಕಾಮಕರ್ಮ ಅಂಗವಾಗಿರುವುದು. ಈ ವಿಚಾರವೇ ಉಪನಿಷತ್ತಿನ ಸಾರ. ಇದೇ ಈ ಮಂತ್ರಗಳ ಉಪಯೋಗ. ಇದನ್ನೇ 'ವಿನಿಯೋಗ' ಎನ್ನಲಾಗಿದೆ.

ಎಲ್ಲ ವೈದಿಕ ಸಾಹಿತ್ಯಗಳ ಆದ್ಯಂತದಲ್ಲೂ ವೇದದ ಮುಖ್ಯಾರ್ಥವೆನಿಸಿದ ಪರಮಾತ್ಮನ 'ಹರಿ' ಎಂಬ ಹೆಸರನ್ನೂ ವೇದಗಳ ಮೂಲರೂಪವಾದ ಓಂಕಾರವನ್ನೂ ಪಠಿಸುವುದು ಪದ್ಧತಿ.

ಉಪನಿಷತ್ತುಗಳನ್ನು ಪಠಿಸುವಾಗ ಆಯಾಯಾ ಶಾಖೆಯವರು ಆದ್ಯಂತಗಳಲ್ಲಿ ಮನಶ್ಶಾಂತಿಗೂ ಜಗತ್ತಿನ ನೆಮ್ಮದಿಗೂ ಕೆಲವು ಮಂತ್ರಗಳನ್ನು ಪಠಿಸುವರು. ಶುಕ್ಲಯಜುರ್ವೇದದ ಹದಿನೈದು ಶಾಖೆಗಳಿಗೂ "ಪೂರ್ಣಮದಃ" ಎಂಬುದು ಇಂತಹ ಶಾಂತಿಮಂತ್ರವೆಂದು ಮುಕ್ತಿಕೋಪನಿಷತ್ತಿನಲ್ಲಿ ಹೇಳಿದೆ. ಈಗಿನ ವೈದಿಕರೂ ಇದನ್ನೇ ಅನುಸರಿಸುತ್ತಿದ್ದಾರೆ. ಈ ಮಂತ್ರ ಶತಪಥಬ್ರಾಹ್ಮಣದ ಬೃಹದಾರಣ್ಯಕದಲ್ಲಿದೆ. ಅಲ್ಲಿ 'ಉದಂಚ್ಯತೇ' ಎಂಬ ಪಾಠಾಂತರವಿದೆ. ಈ ಬ್ರಾಹ್ಮಣದಲ್ಲಿ ಸ್ವರಿತಸ್ವರ ಇಲ್ಲ. ಅಕ್ಷರಗಳ ಸ್ವರವನ್ನು ತಗ್ಗಿಸದೆ ಹೇಳಿದರೆ ಉದಾತ್ತ. ತಗ್ಗಿಸಿದರೆ ಅನುದಾತ್ತ. ಏರಿಸಿ ತಗ್ಗಿಸಿದರೆ ಸ್ವರಿತ. ಮಂತ್ರಗಳಲ್ಲಿ ಬರುವ ಸ್ವರಿತಗಳನ್ನು ಈ ಬ್ರಾಹ್ಮಣದಲ್ಲಿ ಉದಾತ್ತಮಾಡಿ ಪಠಿಸಬೇಕು. ಅನುದಾತ್ತಗಳ ನಡುವೆ ಬರುವ ಸ್ವರ ಉದಾತ್ತವೇ ಆಗಿರುವುದು.[1] ಇದೇ ರೀತಿಯ ಮಂತ್ರ ಕೃಷ್ಣಯಜುರ್ವೇದದ ಕಠಶಾಖೆಯ ವ್ವಯೋಪನಿಷತ್ತಿನಲ್ಲೂ ಇದೆ. ಉದ್ರಿಚ್ಯತೇ ಎಂಬ ಪಾಠಾಂತರವೂ ಇದೆ.

ಇದಂ ಪೂರ್ಣಮದಃ ಪೂರ್ಣಂ ಪೂರ್ಣಾತ್ ಪೂರ್ಣಮುದಚ್ಯತೇ।

ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ॥

ಉದಾತ್ತಕ್ಕೆ ಗುರುತಿರುವುದಿಲ್ಲ. ಅನುದಾತ್ತದ ಕೆಳಗೆ ಸಣ್ಣ (–) ಅಡ್ಡಗೆರೆ ಇರುವುದು. ಸ್ವರಿತದ ಮೇಲೆ ಸಣ್ಣ (।) ಉದ್ದಗೆರೆ ಇರುವುದು.

ಅನುಸ್ವಾರವನ್ನು ಪಠಿಸುವಾಗ ಕೆಲವೆಡೆ ಗ್, ಗ್ಂ, ಗ್ಗ್ಂ ಎಂಬ ರೂಪಾಂತರಗಳಾಗುವುವು. ಪದಗಳಲ್ಲಿ ಒಳಪದಗಳಿದ್ದಾಗ ಮತ್ತೆ ಕೆಲವು ಸಂದರ್ಭಗಳಿದ್ದಾಗ ಸ್ವಲ್ಪಕಾಲ ನಿಲ್ಲಿಸಿ ಪಠಿಸಲಾಗುವುದು. ಅಂತಹ ಸಂದರ್ಭಗಳಲ್ಲಿ 'ಽ' ಈ ಅವಗ್ರಹ ಚಿಹ್ನೆಯನ್ನು ಕೊಡಲಾಗುವುದು. ವಾಕ್ಯವು ಮುಗಿದಾಗ ಕೊನೆಯ ಪದವನ್ನು ಇತರ ವೈದಿಕರು ಎರಡುಸಲ ಪಠಿಸುತ್ತಾರೆ. ಶುಕ್ಲಯಜುರ್ವೇದದಲ್ಲಿ ಮಾತ್ರ ಹೀಗೆ ಪಠಿಸುವುದಿಲ್ಲವಾದರೂ '೦' ಈ ಗುರುತನ್ನು ಹಾಕುವ ಪದ್ಧತಿ ಇದೆ. ಪದಗಳನ್ನು ಪುನರಾವರ್ತನೆ ಮಾಡಿ ಪಠಿಸುವ "ಕ್ರಮ" ಎಂಬ ಪಾಠದಲ್ಲಿ ಈ ಗುರುತಿನಿಂದ ಉಪಯೋಗವಿದೆ. ಅಕ್ಷರಗಳ ಮುಂದೆ ೨, ೩ ಎಂಬ ಸಂಖ್ಯೆಗಳನ್ನು ಅವುಗಳ ಉಚ್ಚಾರಣೆಯ ಕಾಲನಿರ್ದೇಶನಕ್ಕಾಗಿ ಬಳಸಲಾಗುವುದು. 'ಅ' ಎಂಬುದು ಹ್ರಸ್ವ, ಒಂದು ಮಾತ್ರಾಕಾಲ. 'ಆ' ಎಂಬುದು ದೀರ್ಘ, ಎರಡು ಮಾತ್ರಾಕಾಲ. 'ಆ೩' ಎಂಬುದು ಪ್ಲುತ, ಮೂರು ಮಾತ್ರಾಕಾಲ. ಈ ವಿವರಗಳನ್ನು ಅರಿತು ಪಾಠಕರು ಮೂಲದ ಸ್ವರೂಪವನ್ನು ಸಾಧ್ಯವಾದಷ್ಟು ಸಾಂಪ್ರದಾಯಿಕ ಕ್ರಮದಲ್ಲಿ ಅರಿಯಬಹುದಾಗಿದೆ.

ವೇದಾಂಗಗಳೆನಿಸಿದ 'ಪ್ರಾತಿಶಾಖ್ಯ' ಎಂಬ ವ್ಯಾಕರಣ, 'ನಿರುಕ್ತ ಮತ್ತು ಛಂದಸ್' ಮುಂತಾದವುಗಳಿಂದ ಈಶಾವಾಸ್ಯದ ಅರ್ಥನಿರ್ಣಯಕ್ಕಾಗುವ ಸಹಾಯವನ್ನೂ ಉಪಾಂಗಗಳಾದ ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರಗಳಿಂದ ಆಗುವ ಸಹಾಯವನ್ನೂ ಪರಿಶಿಷ್ಟದಲ್ಲಿ ಸಾಧ್ಯವಾದಷ್ಟು ವಿವರಿಸಿದೆ. ವೈದಿಕ ನ್ಯಾಯ

---

1. "ಉಚ್ಚೈರುದಾತ್ತಃ, ನೀಚೈರನುದಾತ್ತಃ ಉಭಯವಾನ್ ಸ್ವರಿತಃ" ಯಾಜ್ಞವಲ್ಕ್ಯರ ಪುತ್ರರಾದ ಕಾತ್ಯಾಯನರ ಪ್ರಾತಿಶಾಖ್ಯ ೧. ೧೦೦. 'ಅನುದಾತ್ತಾವಂತರೇಣೋದಾತ್ತಃ' ಭಾಷಿಕ ಪರಿಶಿಷ್ಟಸೂತ್ರ ೧. ೬. 'ಸ್ವರಿತಾನುದಾತ್ತಾವಪಿಶತಪಥಬ್ರಾಹ್ಮಣೇ ಉದಾತ್ತೌ ಸ್ತಃ' ಭಾ. ಪ. ಅನಂತದೇವ ವ್ಯಾಖ್ಯಾನ. ೧. ೧೪.

ಶಾಸ್ತ್ರವೇ 'ಬ್ರಹ್ಮಸೂತ್ರಗಳು'. ಅವುಗಳ ಅಧ್ಯಯನವು ಈಶಾವಾಸ್ಯಕ್ಕೆ ಅವಶ್ಯಕ ಎಂಬ ದೃಷ್ಟಿಯಿಂದ ಅವುಗಳ ಭಾಷ್ಯವ್ಯಾಖ್ಯಾನಗಳನ್ನು ಗಮನಿಸಿ ಸಾರವನ್ನು ಸಂಗ್ರಹಿಸಿಕೊಟ್ಟಿದೆ.

ಈಶಾವಾಸ್ಯಕ್ಕೆ ಕ್ರಿಸ್ತಶಕದ ಆರಂಭಕಾಲದಲ್ಲೇ 'ಭರ್ತೃಪ್ರಪಂಚ' ಎಂಬ ಆಚಾರ್ಯರು ಭಾಷ್ಯ ಬರೆದಿರುವರು. ಅನಂತರ ಶಂಕರಭಗವತ್ಪಾದರೂ ಇತರ ಅನೇಕ ಆಚಾರ್ಯರೂ ಭಾಷ್ಯಬರೆದಿರುವರು. ಅವರಲ್ಲಿ ಭಗವದ್ರಾಮಾನುಜರು ತಮ್ಮ ಗ್ರಂಥಗಳಲ್ಲಿ ಈಶಾವಾಸ್ಯದ ಮುಖ್ಯಮಂತ್ರಗಳನ್ನಷ್ಟೇ ವ್ಯಾಖ್ಯಾನಿಸಿರುವರು. ಆನಂದತೀರ್ಥ ಭಗವತ್ಪಾದರು ತಮ್ಮ ಸ್ವಂತವಾಕ್ಯಗಳನ್ನು ಹೆಚ್ಚಾಗಿ ಬಳಸದೆ ಈಶಾವಾಸ್ಯದ ಅರ್ಥವನ್ನೇ ಸ್ಪಷ್ಟಪಡಿಸುವಂತಹ ಅನೇಕ ಪೌರಾಣಿಕ ಆಗಮಿಕ ಶ್ರೌತ ವಚನಗಳನ್ನೇ ತಮ್ಮ ಭಾಷ್ಯದಲ್ಲಿ ತಿಳಿಸಿ ಉಪಕರಿಸಿರುವರು. ಈ ಮತತ್ರಯಾಚಾರ್ಯರ ಅನುಯಾಯಿಗಳೂ ಇತರರೂ ಸಹ ಈಶಾವಾಸ್ಯಕ್ಕೆ ಭಾಷ್ಯ ಬರೆದಿರುವರು. ಅವುಗಳಲ್ಲಿ ಅನೇಕ ಭಾಷ್ಯಗಳೂ ವಿವರಣೆಗಳೂ ಕನ್ನಡದಲ್ಲಿ ಈವರೆಗೆ ಪ್ರಕಾಶಿತವಾಗಿವೆ. ಈ ಎಲ್ಲ ಭಾಷ್ಯಕಾರರಿಗಿಂತಲೂ ಪ್ರಾಚೀನರಾದ ಬೋಧಾಯನ ಮಹರ್ಷಿಗಳ ಬ್ರಹ್ಮಸೂತ್ರವೃತ್ತಿಯನ್ನೂ ಸಂಪ್ರದಾಯವನ್ನೂ ಅನುಸರಿಸಿ ಬಂದ ಭಾಷ್ಯಗಳು ಹೆಚ್ಚಾಗಿ ಕನ್ನಡದಲ್ಲಿ ಪ್ರಕಾಶಿತವಾಗಿಲ್ಲ. ಇಂತಹ ಪಾರಂಪರಿಕ ಭಾಷ್ಯವಿವರಣೆಗಳಲ್ಲಿ ಸದ್ಯಃ ಲುಪ್ತವಾಗದೆ ಉಳಿದಿರುವ ಪ್ರಾಚೀನ ಗ್ರಂಥವೆಂದರೆ ವೇದಾಂತದೇಶಿಕರ ಭಾಷ್ಯ ಮತ್ತು ರಾಮಾನಂದರ ಭಾಷ್ಯ ಮಾತ್ರ. ಅಲ್ಲಿಂದೀಚಿನ ಅನೇಕ ಭಾಷ್ಯವಿವರಣೆಗಳು ಇವೆರಡನ್ನೂ ಪದಶಃ ಅರ್ಥಶಃ ಅನುಸರಿಸಿವೆ.

"ನಮ್ಮ ದೇಶದಲ್ಲಿ ರಾಜ್ಯಭಾರ ಮಾಡಿದ ಮುಘಲ್‌ಚಕ್ರವರ್ತಿಯಾದ ಷಾಜಹಾನಿನ ಹಿರಿಯ ಮಗನೂ, ಔರಂಗಜೇಬನ ಅಣ್ಣನೂ ಆದ ದಾರಾಷುಕೋ ಎನ್ನುವ ಹೆಸರುವಾಸಿಯಾದ ಮೇಧಾವಿಯು ಕ್ರಿ. ಶ. ೧೬೫೭ರಲ್ಲಿ ಅನೇಕ ಪಂಡಿತರ ಸಹಾಯದಿಂದ ೫೦ ಮುಖ್ಯ ಉಪನಿಷತ್ತುಗಳನ್ನು ಫಾರಸೀ ಭಾಷೆಯಲ್ಲಿ ಭಾಷಾಂತರಿಸಿದನು. ಈ ಫಾರಸೀ ಭಾಷಾಂತರದ ಆಧಾರದಮೇಲೆಯೇ ಐರೋಪ್ಯ ವಿದ್ವಾಂಸರು ಕ್ರಿ. ಶ. ೧೮೦೧ ರಲ್ಲಿ ಲ್ಯಾಟಿನ್ ಭಾಷೆಯಲ್ಲಿ ಉಪನಿಷತ್ತುಗಳನ್ನು ಮೊದಲು ಭಾಷಾಂತರಿಸಿದರು. ಕೂಡಲೇ ಪಶ್ಚಿಮದೇಶದಲ್ಲಿ ಉಪನಿಷತ್ತುಗಳ ಮಹತ್ತ್ವವು ಪ್ರಸಾರಗೊಂಡಿತು. ಮುಘಲ್ ರಾಜಕುಮಾರನಾದ ದಾರಾವಿನ ಉತ್ತಮವಾದ ಜ್ಞಾನ, ಸಂಸ್ಕೃತವಿದ್ವತ್ತು, ಉತ್ತಮಗುಣ ಇವುಗಳೇ ಉಪನಿಷತ್ತುಗಳ ಮಹತ್ತ್ವವನ್ನು ಪ್ರಪಂಚದಲ್ಲೆಲ್ಲ ಪಸರಿಸಲು ಕಾರಣವಾಯಿತೆನ್ನುವುದನ್ನು ನಾವು ಎಂದೂ ಮರೆಯಬಾರದು.

ಉಪನಿಷತ್ತುಗಳಲ್ಲಿ ಯಾವವಿಷಯ ಹೇಗೆ ಹೇಳಲ್ಪಟ್ಟಿದೆ ಎನ್ನುವುದನ್ನೂ ತಿಳಿಯದೆ ವಿದ್ಯಾವಂತರೆನ್ನುವ ಹೆಸರು ಪಡೆದ ಹಿಂದುಗಳು ಇರುತ್ತಿರುವುದು ಒಂದು ದೊಡ್ಡ ಅಪಮಾನವೇ ಸರಿ. ನಮ್ಮನ್ನು ಪಡೆದ ಪೂರ್ವಕಾಲದವರಲ್ಲಿ ಮಹಾಜ್ಞಾನಿಗಳೂ, ಗುಣಶೀಲರೂ ಆದ ಮುನಿಗಳೂ ಆಚಾರ್ಯರೂ ಕಂಡ ಸತ್ಯಗಳನ್ನು ಈ ಕಾಲದ ಯುವಕರಿಗೆ ಪರಿಚಯಮಾಡುವುದಕ್ಕಾಗಿ ಇಂತಹ ಭಾಷಾಂತರ ಅವಶ್ಯಕವೆನಿಸಿದೆ."[1]

ಆದುದರಿಂದ ಈ ಪ್ರಕಾಶನದಲ್ಲಿ ವೇದಾಂತದೇಶಿಕರ ಭಾಷ್ಯವನ್ನು ಸಾಮಾನ್ಯವಾಗಿ ಚಾಚೂತಪ್ಪದೆ ಭಾಷಾಂತರಿಸಿಕೊಟ್ಟಿದೆ. ಇತರ ಭಾಷ್ಯವಿವರಣೆಗಳಲ್ಲಿ ಹೆಚ್ಚಿನ ವಿಚಾರಗಳೂ ವಿವರಗಳೂ ಇದ್ದರೆ ಆ ಭಾಗಗಳನ್ನು ಮಾತ್ರ ಭಾಷಾಂತರಿಸಿಕೊಡಲಾಗಿದೆ. ಆದುದರಿಂದ ಓದುಗರು ಇತರ ವಿವರಣೆಗಳನ್ನು ಓದುವಾಗ ಹಿಂದು ಮುಂದಿನ ವಿಚಾರಗಳಿಲ್ಲವೆ ಕ್ಲೇಶಪಡದಿರಲು ವೇದಾಂತಾಚಾರ್ಯರ ಭಾಷ್ಯವನ್ನು ಸಮಗ್ರವಾಗಿ ಅಧ್ಯಯನ ಮಾಡುವುದು ಒಳಿತು. ಕೆಲವೆಡೆ ಅಭಿಪ್ರಾಯಭೇದಗಳಿದ್ದರೆ ಓದುಗರು ಅವನ್ನು ಆಯಾ ಗ್ರಂಥಕರ್ತರದೆಂದು ತಿಳಿಯಬೇಕು. ವಿಮರ್ಶಕರಿಗೆ ಎಲ್ಲ ವಿಧವಾದ ಅಭಿಪ್ರಾಯಗಳೂ ತಿಳಿದಿರಬೇಕಾದುದು ಅವಶ್ಯ.

ಸ್ವರವಿಲ್ಲದೆ ಮೂಲಪಾಠವನ್ನೂ, ಪ್ರತಿಪದಾರ್ಥವನ್ನೂ, ತಾತ್ಪರ್ಯವನ್ನೂ ಸಾಮಾನ್ಯ ಓದುಗರಿಗಾಗಿ ಕೊಡಲಾಗಿದೆ. ಈ ಪ್ರತಿಪದಾರ್ಥವು ಪ್ರಕಾಶಿತವಾಗುತ್ತಿರುವ ಎಲ್ಲ ವಿವರಣೆಗಳನ್ನು ಔಚಿತ್ಯಮರಿತು ಅನುಸರಿಸಿ

---

1. ಈ ಭಾಗವನ್ನು ದಿವಂಗತ ಶ್ರೀ ರಾಜಾಜಿಯವರ ತಮಿಳು ಲೇಖನದ ಕನ್ನಡ ಅನುವಾದದಿಂದ ಆಯ್ದುಕೊಳ್ಳಲಾಗಿದೆ.

ದುದಾಗಿದೆ. ತಾತ್ಪರ್ಯಾರ್ಥವೂ ಸಾಮಾನ್ಯವಾಗಿ ಹೀಗೆಯೇ ಇರುವುದು. ಭಾಷಾಂತರಮಾಡುವಾಗ ಕೆಲವೆಡೆ ಭಾಷ್ಯಕಾರರ ವಾಕ್ಯಗಳ ಭಾವಾರ್ಥವನ್ನೂ, ಕೆಲವೆಡೆ ಪದಪದಾರ್ಥಗಳನ್ನೂ ಗ್ರಹಿಸಲಾಗಿದೆ. ಹೆಚ್ಚಿನ ವಿಚಾರ ವಿಮರ್ಶೆಗಳನ್ನು ಮಾಡಬಯಸುವವರು ಅವಶ್ಯವಾಗಿ ಸಂಸ್ಕೃತ ಮೂಲಗ್ರಂಥಗಳನ್ನು ಅಧ್ಯಯನ ಮಾಡಬೇಕು. ಸಂಸ್ಕೃತ ಭಾಷೆಯ ಮೂಲಗ್ರಂಥಗಳನ್ನು ಅಧ್ಯಯನ ಮಾಡಲು ಅವಕಾಶವಿಲ್ಲದವರಿಗೆ ಈ ಭಾಷಾಂತರವು ಸಾಕಷ್ಟು ಮಾರ್ಗದರ್ಶನ ನೀಡಬಲ್ಲದು.

ಪ್ರಾಚೀನ ಬೋಧಾಯನವೃತ್ತಿಯನ್ನು ಸಾಹಸದಿಂದ ಕಾಶ್ಮೀರಕ್ಕೆ ಹೋಗಿ ಅರಿತು ಅದರಂತೆ ಉಪನಿಷತ್ ವ್ಯಾಖ್ಯಾನರೂಪವಾದ ಬ್ರಹ್ಮಸೂತ್ರಗಳ ನಿಷ್ಕೃಷ್ಟ ಅರ್ಥವನ್ನು ಪ್ರಚುರಪಡಿಸಿದವರು ಭಗವದ್ರಾಮಾನುಜರು. ಇವರು ನೇರವಾಗಿ ಈಶಾವಾಸ್ಯಕ್ಕೆ ಭಾಷ್ಯ ಬರೆಯದಿದ್ದರೂ ತಮ್ಮ ವೇದಾರ್ಥಸಂಗ್ರಹ ಮತ್ತು ಶ್ರೀಭಾಷ್ಯ ಗ್ರಂಥಗಳಲ್ಲಿ ಈಶಾವಾಸ್ಯದ ಮುಖ್ಯ ಮಂತ್ರಗಳನ್ನು ವಿವರಿಸಿರುವರು. ಇವರ ಕಾಲ ದೇಶ ಚರಿತ್ರಾದಿಗಳ ಬಗ್ಗೆ ಪರಿಶಿಷ್ಟದಲ್ಲಿ ವಿವರಿಸಲಾಗಿದೆ. ಹೀಗೆ ಇವರ ಸಂಪ್ರದಾಯವನ್ನು ಆಪತ್ಕಾಲದಲ್ಲಿ ರಕ್ಷಿಸಿ ಮುನ್ನಡೆಸಿದ ಮಹನೀಯರು ವೇದಾಂತದೇಶಿಕರೆಂದು ಪ್ರಸಿದ್ಧರೂ, ಕವಿತಾರ್ಕಿಕಸಿಂಹರೂ, ಸರ್ವತಂತ್ರಸ್ವತಂತ್ರರೂ ಆದ ವೆಂಕಟನಾಥರು. ಇವರ ವಿದ್ವತ್‌ವೈಖರಿಗೆ ಮಾರುಹೋದ ಶ್ರೀರಂಗನಾಥದೇವರು ಇವರನ್ನು 'ವೇದಾಂತಾಚಾರ್ಯ' ಎಂಬ ಬಿರುದಿನಿಂದ ಸನ್ಮಾನಿಸಿದರು. ಆದುದರಿಂದ ಅವರ ಈ ಹೆಸರನ್ನೇ ಇಲ್ಲಿ ಹೆಚ್ಚಾಗಿ ಬಳಸಲಾಗಿದೆ. ಇವರ ಕಾಲ ದೇಶಾದಿಗಳ ಬಗ್ಗೆ ಪರಿಶಿಷ್ಟದಲ್ಲಿ ವಿವರಿಸಲಾಗಿದೆ.

ಪ್ರಸಿದ್ಧರಾದ 'ರಾಮಾನಂದ'ರು ವೇದಾಂತದೇಶಿಕರ ಸಮಕಾಲದಲ್ಲೇ ಉತ್ತರದೇಶದಲ್ಲಿ ಬೋಧಾಯನ ಸಿದ್ಧಾಂತಕ್ಕೆ ಪ್ರವರ್ತಕರಾಗಿದ್ದವರು. ಇವರ ಭಾಷ್ಯವು ಸಾವಕಾಶವಾಗಿ ನಮಗೆ ಸಿಕ್ಕಿದುದರಿಂದ ಅವರ ಸಾರ ಸಂಗ್ರಹರೂಪವಾದ ಭಾಷಾಂತರವನ್ನು ಕೊನೆಯಲ್ಲಿ ಸೇರಿಸಲಾಗಿದೆ.

ರಾಮಾನುಜರ ಪ್ರಶಿಷ್ಯರಾದ ಕೂರನಾರಾಯಣಮುನೀಂದ್ರರ ಈಶಾವಾಸ್ಯಭಾಷ್ಯ ಈವರೆಗೆ ಉಪಲಬ್ಧವಾಗಿಲ್ಲ. ಅಹೋಬಲಮಠದ ಪರಂಪರೆಯಲ್ಲಿ ಬಂದ ಶ್ರೀವತ್ಸನಾರಾಯಣಮುನೀಂದ್ರರು ವೇದಾಂತಾಚಾರ್ಯರ ಭಾಷ್ಯವನ್ನು ವಿವರಿಸಿ ತಾವೂ ವ್ಯಾಖ್ಯಾನಿಸಿರುವರು. ಇದೇ 'ಈಶಾವಾಸ್ಯಪ್ರಕಾಶಿಕೆ'. ಇವರ ಕಾಲ ದೇಶಾದಿಗಳ ಬಗ್ಗೆಯೂ ಪರಿಶಿಷ್ಟದಲ್ಲಿ ವಿವರ ಇದೆ. ಇವರನ್ನೇ ಅನೇಕರು ಕೂರನಾರಾಯಣರೆಂದು ಭ್ರಮಿಸಿರುವರು.

ಇವರ ನಂತರ ಮಹಾಚಾರ್ಯರೆಂದು ಪ್ರಸಿದ್ಧರಾದ ದೊಡ್ಡಯ್ಯಾಚಾರ್ಯರ 'ಉಪನಿಷನ್ಮಂಗಳದೀಪಿಕೆ' ಎಂಬ ಉಪನಿಷದ್‌ಭಾಷ್ಯವು ಇದೆಯೆಂದು ತಿಳಿದರೂ ಈವರೆಗೆ ಉಪಲಬ್ಧವಿಲ್ಲ. ದಶೋಪನಿಷದ್ ಭಾಷ್ಯಕಾರರೆಂದು ಪ್ರಸಿದ್ಧರಾದ ರಂಗರಾಮಾನುಜಮುನೀಂದ್ರರ ಭಾಷ್ಯದ ಕನ್ನಡ ಅನುವಾದ ಸಂಗ್ರಹವು ಮಾತ್ರ ಸಾವಕಾಶವಾಗಿ ನಮಗೆ ದೊರಕಿರುವುದರಿಂದ ಪರಿಶಿಷ್ಟದಲ್ಲಿ ಅದನ್ನು ಅಳವಡಿಸಲಾಗಿದೆ.

ಆಂಧ್ರದ ಪ್ರಸಿದ್ಧವಾದ ಮಂಗಳಗಿರಿಕ್ಷೇತ್ರದಲ್ಲಿದ್ದ ಶ್ರೀಭಾಷ್ಯಂರಾಮಾನುಜಾಚಾರ್ಯರೆಂಬುವರು ಶ್ರೀವತ್ಸನಾರಾಯಣಮುನಿಗಳ ಭಾಷ್ಯವನ್ನು ಅನುಸರಿಸಿ ಸರಳವಾದ ಪದಾರ್ಥದೀಪಿಕೆಯನ್ನು ಬರೆದಿರುವರು. ಇವರ ಬಗ್ಗೆಯೂ ಪರಿಶಿಷ್ಟದಲ್ಲಿ ವಿವರಿಸಿದೆ.

ಉದ್ಧವಸಂಪ್ರದಾಯದ ಶ್ರೀಗೋಪಾಲಾನಂದಸ್ವಾಮಿಗಳು ಗುಜರಾತ್‌ದೇಶದಲ್ಲಿ ಪ್ರಸಿದ್ಧ ಆಚಾರ್ಯರು. ಮಹಾಯೋಗಿಗಳಾದ ಇವರ ದಶೋಪನಿಷದ್ಭಾಷ್ಯವು ಅತಿಸರಳವೂ ಭಾವಪೂರ್ಣವೂ ಸುಂದರವೂ ಆಗಿದೆ. ಬೋಧಾಯನ ಪರಂಪರೆಯ ಅರ್ಥಗಳಿಗೆ ಅನುಗುಣವಾಗಿಯೇ ಇರುವ ಇವರ 'ಸುಬೋಧಿನೀ' ಭಾಷ್ಯವು ಸರ್ವಾದರಣೀಯವಾಗಿರುವುದು. ಇವರ ಕಾಲ ದೇಶಗಳ ಬಗ್ಗೆ ಪರಿಶಿಷ್ಟ ನೋಡಿ.

ಈ ಶತಮಾನದ ಆದಿಯಲ್ಲಿ ಈಶಾವಾಸ್ಯಭಾಷ್ಯಗಳನ್ನು ವಿಮರ್ಶಾತ್ಮಕವಾಗಿ ಗಮನಿಸಿ ವಿಸ್ತಾರವಾದ ಭಾಷ್ಯವನ್ನು ಬರೆದವರು ತಿರುಪತಿಶ್ರೀರಂಗಾಚಾರ್ಯರು. ಇವರ ಕಾಲ ದೇಶಾದಿಗಳ ಬಗ್ಗೆಯೂ ಪರಿಶಿಷ್ಟ ನೋಡಿ.

ಸರ್ವೋದಯನಿಷ್ಠರಾದ ಮೇಲುಕೋಟೆಯ ಅರೆಯರ್ ಅವರು ಈಶಾವಾಸ್ಯದ ತಮ್ಮ ಛಾಯಾ ಪದ್ಯಾನುವಾದವನ್ನು ಸಂಸತ್ತಿನ ಏಕಸ್ವಾಮ್ಯರಹಿತ ಉಪಯೋಗಕ್ಕಾಗಿ ಕೊಟ್ಟಿರುತ್ತಾರೆ. ಕನ್ನಡಜನತೆಗೆ ವೇದಮಂತ್ರಗಳಂತೆ ಪ್ರಾರ್ಥನಾರೂಪದಲ್ಲಿ ಈಶಾವಾಸ್ಯವನ್ನು ಕಲಿತು ಹೇಳಿ ಅನುಭವಿಸಲು ಈ ಛಾಯಾನುವಾದ ಬಹಳ ಉಪಯುಕ್ತವಾಗಿದೆ.

ಕನ್ನಡ ಭಾಷಾಂತರಗಳಲ್ಲಿ ಮಧ್ಯೆ ಬರುವ ಪಾರಿಭಾಷಿಕ ಪದಗಳಿಗೂ ಮುಖ್ಯ ವಿಷಯಗಳಿಗೂ ಅಲ್ಲಲ್ಲೇ ಟಿಪ್ಪಣಿಗಳನ್ನು ಸೇರಿಸಲಾಗಿದೆ. ಪರಿಶಿಷ್ಟದಲ್ಲಿ ಮಂತ್ರ, ಪ್ರಮಾಣಾಕರ, ನ್ಯಾಯ, ವಸ್ತು, ವ್ಯಕ್ತಿ ಮುಂತಾದವುಗಳ ಪಟ್ಟಿಯನ್ನು ಕೊಡಲಾಗಿದೆ. ಇದೂ ಅಲ್ಲದೆ ಈಶಾವಾಸ್ಯದ ಬಗ್ಗೆ ವಿವಿಧ ಭಾಷೆಯಲ್ಲಿರುವ ಮೂಲ, ವ್ಯಾಖ್ಯಾನ, ವಿಮರ್ಶೆ, ಅನುವಾದಾದಿ ಗ್ರಂಥಗಳ ಉಪಯುಕ್ತವಾದ ಪಟ್ಟಿಯನ್ನೂ, ಗ್ರಂಥಕಾರರ ಕಾಲ, ದೇಶ, ಚರಿತ್ರಾದಿಗಳ ಪಟ್ಟಿಯನ್ನೂ ಒದಗಿಸಲಾಗಿದೆ. ಮತ್ತು ಕೆಲವು ವಿಮರ್ಶಾತ್ಮಕ ಲೇಖನಗಳನ್ನೂ ಕೊಡಲಾಗಿದೆ. ಒಟ್ಟಿನಲ್ಲಿ ಈಶಾವಾಸ್ಯದ ಈ ಹೊಸ ಪ್ರಕಾಶನದಲ್ಲಿ ವಿಮರ್ಶಕರಿಗೆ ಮತ್ತು ಸಂಶೋಧಕರಿಗೆ ಸಾಕಷ್ಟು ಸಾಮಗ್ರಿಗಳನ್ನು ಒದಗಿಸಿಕೊಡಲಾಗಿದೆ.

ಹೀಗೆ ಸಾಮಾನ್ಯ ಓದುಗರಿಗಾಗಿ ಪ್ರತಿಪದಾರ್ಥ ತಾತ್ಪರ್ಯಗಳೂ, ಮತ್ತಷ್ಟು ಹೆಚ್ಚು ಅಧ್ಯಯನ ಮಾಡುವ ಜಿಜ್ಞಾಸುಗಳಿಗೆ ಭಾಷ್ಯವಿವರಣೆಗಳೂ, ಇನ್ನೂ ಸೂಕ್ಷ್ಮವಿಚಾರವಮಾಡಬೇಕೆನ್ನುವವರಿಗೆ ಪರಿಶಿಷ್ಟದಲ್ಲಿರುವ ವಿವಿಧ ವಿವರಣೆಗಳೂ ಅವಶ್ಯಕವಾಗಿರುವುದೆಂದು ನಾವು ಭಾವಿಸಿದ್ದೇವೆ. ಸಾಂಗವಾಗಿ ವೇದಾಧ್ಯಯನ ಮಾಡಿ ಈಶಾವಾಸ್ಯದ ಅರ್ಥನಿಷ್ಕರ್ಷೆ ಮಾಡಬಯಸುವವರು ಎಲ್ಲ ವಿವರಣೆಗಳ ಮೂಲಗ್ರಂಥಗಳನ್ನೇ ಓದುವುದು ಅವಶ್ಯಕ. ಅಂತಹ ಎಲ್ಲ ಭಾಷ್ಯವಿವರಣೆಗಳನ್ನೊಳಗೊಂಡ ಸಂಸ್ಕೃತ ಮೂಲಗ್ರಂಥದ ಪ್ರಕಾಶನಕಾರ್ಯವನ್ನು ಈ ಸಂಸ್ಕೃತ ಸಂಶೋಧನ ಸಂಸತ್ತು ವಹಿಸಿಕೊಂಡಿದೆ.

ಹೀಗೆ ವಿಶ್ವದ ಪ್ರಾಚೀನತಮ ಸಾಹಿತ್ಯೋದ್ಯಾನದಲ್ಲಿ ಈಶಾವಾಸ್ಯೋಪನಿಷತ್ತೆಂಬ ಸುಗಂಧಪುಷ್ಪ ಅರಳಿರುವಾಗ ಅದರ ಸುಗಂಧದ ಅಲ್ಪಾಂಶವನ್ನು ಕನ್ನಡಿಗರಿಗೆ ದೊರಕಿಸಲು ನನಗೆ ಈ ಅವಕಾಶ ಮಾಡಿಕೊಟ್ಟಿರುವುದಕ್ಕೆ ಈ ಸಂಶೋಧನಸಂಸತ್ತಿಗೆ ನಾನು ಕೃತಜ್ಞ. ಇದನ್ನು ಓದಿ ಅರಿತು ಸಂತೋಷಿಸುವ ಸಹೃದಯ ಜನತೆಗೂ ನಾನು ಕೃತಜ್ಞ.

ಇಂತು ವಿಭಾಗದ ಮುಖ್ಯಸ್ಥರು

**ಅರೈಯರ್ ಶ್ರೀರಾಮಶರ್ಮಾ**

ಉಭಯನ್ಯಾಯ ವೇದಾಂತಾಲಂಕಾರ ವಿದ್ವಾನ್

ಕನ್ನಡಪಂಡಿತ ರಾಷ್ಟ್ರಭಾಷಾವಿಶಾರದ

**ಸಂಸ್ಕೃತ ಸಂಶೋಧನ ಸಂಸತ್**

**ಮೇಲುಕೋಟೆ**

**ದಿನಾಂಕ ೧. ೧೧. ೧೯೮೧**

# ಈಶಾವಾಸ್ಯೋಪನಿಷತ್

ಸಂಹಿತಾಪಾಠ, ಋುಷಿ, ಛಂದಸ್, ದೇವತಾ, ವಿನಿಯೋಗ,

ಸ್ವರ, ಪದಪಾಠ, ಪಾಠಾಂತರ, ಟಿಪ್ಪಣಿಸಹಿತ

ಮತ್ತು

ಮೂಲ ಕನ್ನಡ ಛಾಯಾಪದ್ಯ

|| ಶ್ರೀಃ ||

ಋುಷಿ–ಛಂದೋ–ದೇವತಾ–ವಿನಿಯೋಗ–

ಸ್ವರ–ಪದ–ಪಾಠಾಂತರ—ಟಿಪ್ಪಣೀ–

ಸಹಿತಾ [1]

# ಈ ಶಾ ನಾ ಸ್ಯೋ ಪ ನಿ ಷ ತ್

---

1. ಮಂತ್ರದ್ರಷ್ಟಾರರೇ ಋುಷಿಗಳು, ಮಂತ್ರಕ್ಕೆ ಸಂಬಂಧಿಸಿ ಪೂಜಿಸಲ್ಪಟ್ಟು ಸ್ತುತಿಸಲ್ಪಡುವವರೇ ದೇವತೆಗಳು, ಯಾಗಾದಿಗಳಲ್ಲಿ ಉಪಯೋಗಿಸುವ ಪದಾರ್ಥಗಳೇ ಆಯಾ ದೇವತೆಗಳಿಗೆ ಪ್ರತಿಮೆಗಳು. ಗಾಯತ್ರಿ ಮುಂತಾದವು ಛಂದಸ್ಸುಗಳು. ಇವನ್ನು ತಿಳಿಯದೆ ಮಂತ್ರಗಳ ಅಧ್ಯಯನ, ಪಠನ, ಪಾಠನ, ಶ್ರವಣ, ಜಪ, ಹೋಮ ಮತ್ತು ಉಪಾಸನಾದಿಗಳನ್ನು ಮಾಡಿದರೆ ಅವೆಲ್ಲ ನಿರ್ವೀರ್ಯವೂ ವ್ಯರ್ಥವೂ ಆಗುವದಲ್ಲದೆ ಅನರ್ಥಕಾರಿಯೂ ಆಗುವುವು. ಇವೆಲ್ಲವನ್ನೂ ತಿಳಿದು ಅಧ್ಯಯನ ಮಾಡಿದರೆ ಮಂತ್ರಗಳು ವೀರ್ಯವತ್ತಾಗಿರುವುವು. ಹೀಗೆ ತಿಳಿದು ಜಪ, ಹೋಮ, ಉಪಾಸನಾದಿಗಳನ್ನು ಮಾಡಿದರೆ ಅದಕ್ಕೆ ತಕ್ಕ ಫಲ ಸಿಕ್ಕೇ ಸಿಗುವುದು. (ಕಾ.ಸ. ೧ ೧.)

'ಯಜುರ್ವೇದದ ಮಂತ್ರವಾಕ್ಯಗಳಿಗೆ ಅಕ್ಷರಸಂಖ್ಯಾನಿಯಮವಿಲ್ಲದುದರಿಂದ ಛಂದಸ್ಸಿನ ಪರಿಗಣನೆ ಇಲ್ಲ' ಎಂದು ಕೆಲವರ ಅಭಿಪ್ರಾಯ. (ಕಾ.ಸ. ೧.೧ )

'ಮಂತ್ರವನ್ನೂ ಅದರ ದೇವತೆಯನ್ನೂ ಅರಿತವನನ್ನು ಈ ಲೋಕದಲ್ಲಿರುವಾಗಲೇ ಎಲ್ಲ ದೇವತೆಗಳೂ ಹೊಗಳುತ್ತಾರೆ. ದೇವತಾಜ್ಞಾನದಿಂದ ಮಂತ್ರದ ಅಂತರಾರ್ಥದ ಅರಿವಾಗುವುದು. ಈ ಅರಿವಿನಿಂದ ಪಾಪಪರಿಹಾರವಾಗುವುದು. ನಂತರ ಅರಿತವನು ಸ್ವರ್ಗ (ಮೋಕ್ಷ)ವನ್ನು ಪಡೆಯುವನು. (ಕಾ.ಸ. ೪.೧೦)

ಮಂತ್ರಗಳ ಆದಿಭಾಗವನ್ನು ಉದ್ಧರಿಸಿ ಆ ಮಂತ್ರಗಳ ದೇವತೆಗಳನ್ನು ತಿಳಿಸುವ ಮತ್ತು ಕರ್ಮಗಳಲ್ಲಿ ಪ್ರಯೋಗವನ್ನು ತಿಳಿಸುವ ವಾಕ್ಯಗಳು ವಿನಿಯೋಗ ವಾಕ್ಯಗಳು ಅವುಗಳನ್ನು ಅನುಸರಿಸಿ ಆಚರಿಸುವುದೇ ವಿನಿಯೋಗ. (ಭಾ.ಪ. ೨.೧೫)

'ಋಷಿ ಛಂದಸ್ ದೇವತೆ ಮಂತ್ರಗಳನ್ನಷ್ಟೇ ಅಲ್ಲದೆ ಮಂತ್ರಗಳ ಪ್ರಯೋಗವನ್ನೂ ತಿಳಿದಿರಬೇಕು ಹಾಗಿಲ್ಲವಾದರೆ ಮಂತ್ರಗಳು ನಿರ್ವೀರ್ಯವಾಗುವುವು.'

(ಛಂದೋಗ ಬ್ರಾಹ್ಮಣ, ಹಲಾಯುಧ ಛಂದಸ್ಸೂತ್ರವೃತ್ತಿ, ಅಧ್ಯಾಯ ೧. ಸೂತ್ರ ೧)

'ಮಂತ್ರಗಳ ಸ್ವರ, ವರ್ಣಗಳು ವ್ಯತ್ಯಾಸವಾದರೆ ಅರ್ಥವೂ ವ್ಯತ್ಯಾಸವಾಗಿ ಅನರ್ಥವಾದೀತು' (ಪಾ ಶೀ. ೫೨)

'ವ್ಯಾಕರಣವು ವಿದ್ಯೆಯ ಒಂದು ನೆಲೆ. ಇದರಿಂದ ಎಲ್ಲ ವಿಧವಾದ ಅರ್ಥಜ್ಞಾನವೂ ಫಲವೂ ಉಂಟಾಗುವುದು. ಪ್ರಾತಿಶಾಖ್ಯವ್ಯಾಕರಣಾನುಸಾರ ಮಂತ್ರಗಳಿಗೆ ಸ್ವರ ಸಂಸ್ಕಾರವು ಅರ್ಥವಿಶೇಷದ ಅರಿವಾಗಲೆಂದೇ ಇರುವುದು.' (ಯಾ.ನಿ. ೧ ೫.೧೩)

ಎಲ್ಲ ವೇದಶಾಖೆಗಳ ಮುಖ್ಯ ಗುರಿಯೂ ಒಂದೇ ಆಗಿರುವುದು. ಸಾಧನ ಮಾರ್ಗಗಳು ಸ್ವಲ್ಪ ಭಿನ್ನವಾಗಿದ್ದರೂ ಅನೇಕ ಅಂಶಗಳಲ್ಲಿ ಪರಸ್ಪರ ಪೋಷಕಗಳಾಗಿರುವುವು. ಆದುದರಿಂದ ಶಾಖಾಂತರಗಳ ಪಾಠಾಂತರಗಳೂ ಗಮನಾರ್ಹ.

ಶ್ರೀಶುಕ್ಲಯಜುರ್ವೇದೇ ಪ್ರಥಮಶಾಖಾಯಾಂ–ಕಾಣ್ವಸಂಹಿತಾಯಾಂ ²–ಚತ್ವಾರಿಂಶೋಽಧ್ಯಾಯಃ

ಅಸ್ಯ ವೇದಸ್ಯ ವಿವಸ್ವಾನ್ ಋಷಿಃ ; ಅಸ್ಯ ಅಧ್ಯಾಯಸ್ಯ ದಧ್ಯಙ್ ಆಥರ್ವಣ ಋಷಿಃ ³–ಅನುಷ್ಟುಪ್ ಛಂದಃ ⁴–

ಆತ್ಮಾ ದೇವತಾ ⁵–ವಿದ್ಯಾಯಾಂ ವಿನಿಯೋಗಃ ⁶ ಏಕೋಽನುವಾಕಃ–ಮಂತ್ರಾ ಅಷ್ಟಾದಶ ⁷–

ಪದಾನಿ–ತ್ರ್ಯೂನಂ ತ್ರಿಶತಮ್.

---

2. ಬೋಧಾಯನರ ಮಗನೂ, ಯಾಜ್ಞವಲ್ಕ್ಯರ ಶಿಷ್ಯನೂ, ಸೂರ್ಯನ ಪ್ರಶಿಷ್ಯನೂ ಆದ ಕಣ್ವನು ಎಲ್ಲ ಹಿರಿಯ ಮಹರ್ಷಿಗಳಿಗಿಂತಲೂ ಮುಖ್ಯನೆನಿಸಿದನು.

(ಆದಿತ್ಯ ಪುರಾಣ, ಕಾಣ್ವಸಂಹಿತಾ ಮತ್ತು ಶತಪಥ ಬ್ರಾಹ್ಮಣಗಳ ಪ್ರಸ್ತಾವನೆ.)

3. ಶುಕ್ಲಯಜುರ್ವೇದಸಂಹಿತೆಗೆ ವಿವಸ್ವಂತನೆನಿಸಿದ ಸೂರ್ಯನೇ ದ್ರಷ್ಟಾರ. ಪ್ರತ್ಯೇಕ ಮಂತ್ರವಿಭಾಗಗಳಿಗೆ ಶತಪಥ ಬ್ರಾಹ್ಮಣವನ್ನನುಸರಿಸಿ ಅನೇಕ ಋಷಿಗಳು ದ್ರಷ್ಟಾರರು. ಹೀಗೆ ಕೊನೆಯ ಐದು ಅಧ್ಯಾಯಗಳಿಗೆ (ಈಶಾವಾಸ್ಯ ಇವುಗಳ ಕೊನೆಯ ಅಧ್ಯಾಯ) ದಧ್ಯಙ್ ಆಥರ್ವಣನು ದ್ರಷ್ಟಾರ. (ಕಾ.ಸ. ೪.೫)

ಇವನ ಬಗ್ಗೆ (ಯಾ.ನಿ. ೧೨.೩.೧೪) ಗಮನಿಸಿ. ಇವನು ಒಳ್ಳೆಯ ಧ್ಯಾನಶೀಲ. ಬ್ರಹ್ಮಕರ್ಮಗಳನ್ನು ಅರಿತವನು. ಮಾನವರಿಗೆ ತಂದೆಯಂತೆ ಹಿತಚಿಂತಕನು. ಮೋಕ್ಷಮಾರ್ಗ ಪ್ರವರ್ತಕನು.

4. ಈಶಾವಾಸ್ಯವೆಂಬ ಅಧ್ಯಾಯದ ಛಂದಸ್ಸು ಅನುಷ್ಟುಪ್. (ಕಾ.ಸ. ೪೯)

5. ' ಈಶಾವಾಸ್ಯಂ ' ಎಂಬ ಅಧ್ಯಾಯದ ಮಂತ್ರಗಳಿಗೆ ಆತ್ಮವೇ ದೇವತೆ. (ಕಾ ಸ. ೪೯)

ಇದು ಸಾಕ್ಷಾತ್ಕಾರವಾಗುವ ವಿಷಯ, ಈ ದೇವತೆಯು ಎಲ್ಲೆಡೆಯೂ ವ್ಯಾಪಿಸಿರುವುದರಿಂದ ಪರಮವೆನಿಸಿದೆ ಅದೊಂದೇ ವಿವಿಧ ರೀತಿಯಲ್ಲಿ ಆತನ ವರ್ಣನೆ ಹೊಗಳಿಕೆಗಳಿಗೆ ಪಾತ್ರವಾಗಿದೆ. ಈ ಒಂದು ಆತ್ಮಕ್ಕೆ. ಎಲ್ಲ ದೇವಾಧಿದೇವತೆಗಳೂ ಅಂಗೋಪಾಂಗಗಳು. (ಯಾ.ನಿ. ೭.೧೪.)

' ಸರ್ವವ್ಯಾಪಕವಾಗಿರುವ ಪರಮಾತ್ಮನು ಋಷಿಗಳಿಗೆ ಅನುಭವಸಿದ್ಧನಾದುದರಿಂದ ವಿಶ್ವಾಸಾರ್ಹನಾಗಿದ್ದಾನೆ.

(ಯಾ.ನಿ. ೧೩.೧)

6. ಈಗ ಜ್ಞಾನಕಾಂಡ ಆರಂಭವಾಗುವುದು ' (ಶುಕ್ಲಯಜುರ್ವೇದ ಉವ್ವಟ ಭಾಷ್ಯ ೪೦.೧)

ಈಶಾವಾಸ್ಯ ಮುಂತಾದ ಮಂತ್ರಗಳಿಗೆ ಕರ್ಮಗಳಲ್ಲಿ ಪ್ರಯೋಗವಿಲ್ಲ. (ಶು.ಯ. ಮಹೀಧರ ಭಾಷ್ಯ ೪೦.೧)

7. ಈಶಾವಾಸ್ಯವು ೧೮ ಮಂತ್ರಗಳ ಒಂದು ಅನುವಾಕ. (ಕಾಣ್ವ ಅನುಕ್ರಮಣಿಕಾಪಾಠ)

ಈಶಾವಾಸ್ಯ ಮುಂತಾದ ೮ ಮಂತ್ರಗಳೂ ' ಅನ್ಧಂತಮಃ ' ಮುಂತಾದ ಒಂಭತ್ತು ಮಂತ್ರಗಳೂ ಪ್ರತ್ಯೇಕ ಎರಡು ಅನುವಾಕಗಳು. ಒಟ್ಟು ೧೭ ಮಂತ್ರಗಳ ಒಂದು ಅಧ್ಯಾಯ. ಇದು ಮಾಧ್ಯಂದಿನ ಪಾಠ.

(ಕಾ. ಅನುವಾಕಸೂತ್ರಾಧ್ಯಾಯ ೨.೧೭ ೪೦)

# ಗುರುವಂದನಮ್ [8]

ಓಂ ಅಸ್ಮದ್ಗುರುಭ್ಯೋ ನಮಃ. ಓಂ ಅಸ್ಮತ್ಪರಮಗುರುಭ್ಯೋ ನಮಃ.
ಓಂ ಅಸ್ಮತ್ಸರ್ವಗುರುಭ್ಯೋ ನಮಃ.
ಓಂ ವಿದ್ಯಾದೇಹಾಯ ನಿತ್ಯಪ್ರಬುದ್ಧಾಯ ಪರಮಾತ್ಮನೇ ನಮಃ.
ಓಂ ನಮಃ ಸ್ವಸ್ತಿ ಶ್ರೀಸೂರ್ಯನಾರಾಯಣಪರಬ್ರಹ್ಮ- ದಧ್ಯಙ್ ಆಥರ್ವಣ-
ಯಾಜ್ಞವಲ್ಕ್ಯ-ಶ್ರೀಕಣ್ವಾದಿಭ್ಯೋ ಮುನಿಭ್ಯೋ ಮಹದ್ಭ್ಯೋ
ಗುರುಭ್ಯಃ.

# ಪೂರ್ವಶಾಂತಿಃ

ಪೂರ್ಣಮಿತ್ಯಾದಿಶಾಂತಿಮಂತ್ರಸ್ಯ-ಶ್ರೀರಾಮಚಂದ್ರೋ ಭಗವಾನೃಷಿಃ [9]-ಪಂಚಪಾತ್ ಯಾಜುಷೀ ನಿವೃದನ್ತಾ ಶುದ್ಧಾ ಅನುಷ್ಟುಪ್ ಛಂದಃ-ಏಕೋನಚತ್ವಾರಿಂಶದಕ್ಷರಾಣಿ-ಓಂಕಾರವಾಚ್ಯಃ ಪೂರ್ಣಃ ಪರಮಾತ್ಮಾ ದೇವತಾ [10]-ಅಧ್ಯಯನಾದೌ ಶಾನ್ತ್ಯರ್ಥೇ ವಿನಿಯೋಗಃ.[11]

॥ ಹರಿಃ ಓಮ್3 ॥ [12]

---

8. ದೇವರಲ್ಲಿಡುವಂತೆಯೇ ಗುರುವಿನಲ್ಲೂ ಭಕ್ತಿಯಿಟ್ಟಿರುವ ಮಹಾತ್ಮನಿಗೆ ಮಾತ್ರ ಈಉಪನಿಷತ್ತಿನ ಅರ್ಥಗಳೆಲ್ಲ ಚೆನ್ನಾಗಿ ತಿಳಿಯುವುವು. (ಶ್ವೇ ಉ. ೬ ೨೩)

'ಸಂಪ್ರದಾಯಪರಂಪರಾಗತವಾದ ಅಭ್ಯಾಸವಿಲ್ಲದಿದ್ದರೆ ವಿದ್ಯೆಯು ಶಿಥಿಲವಾದಂತೆಯೇ.' (ಶ್ರೀರಾಮಾಯಣ ೫.೧೫ ೩೮)

9. 'ಪ್ರತಿಶಾಖೆಗಳಿಗೂ ಶಾಂತಿಮಂತ್ರಗಳು ವಿಧಾಯಕಗಳಾಗಿವೆ' ಎಂದ ಆಂಜನೇಯನಿಗೆ ಶ್ರೀರಾಮಚಂದ್ರನು ಹೇಳುತ್ತಾನೆ. (ಮುಕ್ತಿ.ಉ. ೧.೨.೨)

10. ಮಂತ್ರಗಳ ಅರ್ಥ ಮತ್ತು ಚಿಹ್ನೆಗಳಿಂದ ದೇವತೆಯನ್ನು ನಿರ್ಣಯಿಸಬೇಕು. ಬೃಹದಾರಣ್ಯಕದಲ್ಲಿ ಈಮಂತ್ರವು ಓಂಕಾರ ಮಹಿಮೆಯನ್ನೂ ಅದರ ಅರ್ಥವಾದ ಪರಮಾತ್ಮನನ್ನೂ ತಿಳಿಸುತ್ತದೆ. (ಯಾ ನಿ. ೭ ೧.)

11. ಶುಕ್ಲಯಜುರ್ವೇದದ ಇಪ್ಪತ್ತೊಂದು ಉಪನಿಷತ್ತುಗಳಿಗೂ 'ಪೂರ್ಣಮದಃ' ಎಂಬುದು ಶಾನ್ತಿಮಂತ್ರ. (ಮುಕ್ತಿ.ಉ. ೧.೨.೨)

'ಸೂತ್ರಕಾರರು ತಿಳಿಸಿರುವಂತೆ ಆದ್ಯಂತಗಳಲ್ಲಿ ಶಾಂತಿ ಮಂತ್ರಪಠನೆಯು ಅಧ್ಯಯನ ಪರಂಪರಾಗತವಾಗಿ ಬಂದಿದೆ.' (ಶು.ಯ.ಸಾ.ಭಾ ೩೬ ಅ)

12. ವೇದಾರಂಭದಲ್ಲಿ 'ಹರಿ' ಎಂಬ ಪದದ ಎರಡು ಅಕ್ಷರಗಳೂ ಉದಾತ್ತಸ್ವರವಾಗಿಯೂ, ವೇದಸಮಾಪನದಲ್ಲಿ ಅದರ 'ರಿ' ಎಂಬ ಅಕ್ಷರವು ಸ್ವರಿತಸ್ವರವಾಗಿಯೂ, ವಿಸರ್ಗವು ಪ್ರಚಯಸ್ವರವಾಗಿಯೂ ಇರುತ್ತದೆ. (ವ್ಯಾ.ಶಿ.ಶಂ.ಪ್ರ. ೧)

'ಓಂ' ಎಂಬ ಅತ್ಯುತ್ತಮವಾದ ಅಕ್ಷರವು ಯೋಗಿಗಳಿಗೆ ಧ್ಯಾನಕ್ಕೆ ಆಸರೆಯಾಗಿರುವುದು. ಇದು ವೇದಗಳಲ್ಲೇ ಅತ್ಯುತ್ತಮವಾದುದು. ಇದಕ್ಕೆ 'ಪ್ರಣವ' ಎಂದು ಹೆಸರು. 'ಇದು ದೊಡ್ಡದೂ ಅಲ್ಲ ಚಿಕ್ಕದೂ ಅಲ್ಲ' ಎಂಬಿವೇ ಮುಂತಾದ ಗುಣಗಳನ್ನು ಪಡೆದಿರುವ ಸಾಕ್ಷಾತ್ ಪರಮಾತ್ಮನ ಹೆಸರಾದುದರಿಂದ ಇದನೂ ಪರಮಾತ್ಮನಂತೆಯೇ ಭಾವಿಸಬೇಕು. ಇದರ ದ್ರಷ್ಟಾರ ಆ ಪರಮಾತ್ಮನೇ. ಛಂದಸ್ಸು ದೇವೀ ಗಾಯತ್ರೀ. ಪರಮಾತ್ಮನೇ

**ಪೂರ್ಣಮದಃ ಪೂರ್ಣಮಿದಮ್ಪೂರ್ಣಾತ್ ಪೂರ್ಣಮುದಚ್ಯತೇ ।**

**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ ॥** [13]

ಓಂ3 ಶಾಂತಿ ಶ್ಶಾಂತಿ ಶಾಂತಿಃ

ಪೂರ್ಣಂ । ಅದಃ । ಪೂರ್ಣಂ । ಇದಂ । ಪೂರ್ಣಾತ್ । ಪೂರ್ಣಂ । ಉದಚ್ಯತ ಇತ್ಯುತ್ ಅಚ್ಯತೇ । ೦ [14]

ಪೂರ್ಣಸ್ಯ । ಪೂರ್ಣಂ । ಆದಾಯೇತ್ಯಾ ದಾಯ । ಪೂರ್ಣಂ । ಏವ । ಅವ । ಶಿಷ್ಯತೇ । ೦

ಓಂ3 । ಶಾಂತಿಃ । ಶಾಂತಿಃ । ಶಾಂತಿಃ.

ಪದಾನಿ ಅಷ್ಟಾದಶ.

೧

ಈಶೇತ್ಯಾದಿ ಮಂತ್ರಸ್ಯ–ದಧ್ಯಙ್ ಆಥರ್ವಣ ಋಷಿಃ–ಚತುಷ್ಪಾತ್ ಯಾಜುಷೀ ಶುದ್ಧಾ ಅನುಷ್ಟುಪ್ ಛಂದಃ–ದ್ವಾತ್ರಿಂಶದಕ್ಷರಾಣಿ–ಆತ್ಮಾದೇವತಾ–ವಿದ್ಯಾಯಾಂ ವಿನಿಯೋಗಃ.

---

ಇದಕ್ಕೆ ದೇವತೆ. ವೇದಗಳ ಆರಂಭ ಮತ್ತು ಸಮಾಪನಗಳಲ್ಲೂ, ದೇವರ ಪೂಜೆ, ದಾನ, ಹೋಮ, ಶಾನ್ತಿಕರ್ಮ, ಪುಷ್ಟಿಕರ್ಮಗಳಲ್ಲೂ, ಇತರ ಕಾಮ್ಯ ಮತ್ತು ನೈಮಿತ್ತಿಕಾದಿ ಎಲ್ಲ ವೈದಿಕ ಕರ್ಮಗಳಲ್ಲೂ ಇದನ್ನು ಉಪಯೋಗಿಸುತ್ತಾರೆ. (ಕಾ.ಪ. ೪.೯.)

ಓಂಕಾರವೆಂಬುದು ಬ್ರಹ್ಮ–ಪರಮಾತ್ಮನೆನಿಸಿದ ಬ್ರಹ್ಮವನ್ನು ತಿಳಿಸುವ ವೇದ. ಇದನ್ನು ಅನುಸಂಧಾನ ಮಾಡಿ ಪರಮಾತ್ಮನನ್ನು ಪಡೆಯಬಹುದು (ತೈ.ಉ.ಶೀ. ೭)

ಉದಾತ್ತಸ್ವರದಿಂದ ಕೂಡಿದ ಪ್ರಣವವು ಮೂರು ಮಾತ್ರಾಕಾಲವುಳ್ಳದ್ದು. (ಕಾ.ಪ್ರಾ.ಭಾ. ೨.೫೧)

ಮೂರು ಮಾತ್ರಾಕಾಲದ 'ಓಂ' ಎಂಬ ಈ ಒಂದೇ ಅಕ್ಷರವನ್ನು ಹೇಳುತ್ತಾ ಪರಮಾತ್ಮನನ್ನು ಪ್ರೀತಿಯಿಂದ ಧ್ಯಾನಿಸಬೇಕು. ಈ ಓಂಕಾರವೇ ದೇವರ ನೆಲೆ. ಇದನ್ನು ಅರಿತವನು ಪರಮಾತ್ಮನನ್ನು ಪಡೆಯುವನು. (ಪ್ರ.ಉ. ೫.೫.೭)

13. ಮಂತ್ರಗಳಿಗಿಂತ ಭಿನ್ನವಾದ 'ಬ್ರಾಹ್ಮಣ' ಎಂಬ ಭಾಗದಲ್ಲಿ ಬರುವ ಪದಗಳ ಉದಾತ್ತಾನುದಾತ್ತಾದಿ ಸ್ವರ ವಿಚಾರವನ್ನು ಪಾಣಿನಿವ್ಯಾಕರಣದಿಂದಲೂ, ಪ್ರಾತಿಶಾಖ್ಯಾದಿ ಗ್ರಂಥಗಳಿಂದಲೂ, ಇತರ ವೇದಶಾಖೆಗಳಿಂದಲೂ ತಿಳಿಯಬಹುದು.
(ಭಾಷಿಕ ಸೂತ್ರ ಭಾಷ್ಯ ಟಿಪ್ಪಣಿ ೩೧೭ ಪುಟ ; ಶತ.ಬ್ರಾ.ವಾ ೫ ; ಲ.ವೆಂ.ಪ್ರೆ. ಬಾಂಬೆ ; ಕ್ರಿ.ಶ. ೧೯೪೦)
ಉದಾತ್ತಾನುದಾತ್ತಾದಿಸ್ವರಗಳ ವಿಷಯದಲ್ಲಿ ಭಾಷಿಕಪರಿಶಿಷ್ಟಸೂತ್ರಭಾಷ್ಯ ನೋಡಿ.

14. ಶುಕ್ಲಯಜುರ್ವೇದದ ಪದಪಾಠದಲ್ಲಿ ವಾಕ್ಯದ ಮತ್ತು ಅರ್ಧಮಂತ್ರದ ಕೊನೆಯ ಪದವನ್ನು ಸೂಚಿಸಲು ಒಂದು '೦' (ವೇಷ್ಟನ) ಚಿಹ್ನವನ್ನು ಉಪಯೋಗಿಸುವುದು ಪದ್ಧತಿ. ಇದರ ಬದಲು ಇತರ ವೇದಶಾಖೆಗಳಲ್ಲಿ ಕೊನೆಯ ಪದವನ್ನು ಆವರ್ತಿಸಿ ಹೇಳುವ ಪದ್ಧತಿ ಇದೆ. (ಕಾ.ಪ್ರಾ.ಭಾ. ೪. ೨.)

ಈಶಾವಾಸ್ಯಾದಿ ಮಂತ್ರಗಳಲ್ಲಿ (ಕೊನೆಯಲ್ಲಿರುವ) ಎಲ್ಲ ಪದಗಳಿಗೂ ವೇಷ್ಟನವುಂಟು.
(ಶಂಭುಮಿಶ್ರವಿರಚಿತ ಕ್ರಮಕಾರಿಕಾರತ್ನಮಾಲಾ. ಶ್ಲೋ. ೯೩)

ಈಶಾವಾಸ್ಯಮಿದಗ್ಂ[15] ಸರ್ವಯ್ಯತ್ಕಿಞ್ಚ ಜಗತ್ಯಾಞ್ಜಗತ್ ।

ತೇನ ತ್ಯಕ್ತೇನ ಭುಞ್ಜೀಥಾ ಮಾ ಗೃಧಃ ಕಸ್ಯ ಸ್ವಿದ್ಧನಮ್ ॥

ಈಶಾ । ವಾಸ್ಯಮ್ । ಇದಮ್ । ಸರ್ವಮ್ । ಯತ್ । ಕಿಮ್ । ಚ । ಜಗತ್ಯಾಂ । ಜಗತ್ । ೦

ತೇನ । ತ್ಯಕ್ತೇನ । ಭುಂಜೀಥಾಃ । ಮಾ । ಗೃಧಃ । ಕಸ್ಯ । ಸ್ವಿತ್[16] । ಧನಮ್ । ೦

ಪದಾನಿ ಸಪ್ತದಶ.

೨

ಕುರ್ವನ್ನಿತ್ಯಾದಿಮಂತ್ರಸ್ಯ-ದಧ್ಯಙ್ ಆಥರ್ವಣಋಷಿಃ-ಚತುಷ್ಪಾತ್ ಯಾಜುಷೀ ಭುರಿಕ್[17] ಅನುಷ್ಟುಪ್ ಛಂದಃ-ತ್ರಯಸ್ತ್ರಿಂಶದಕ್ಷರಾಣಿ-ಆತ್ಮಾ ದೇವತಾ-ವಿದ್ಯಾಯಾಂ ವಿನಿಯೋಗಃ.

---

15. ಶ, ಷ, ಸ, ಹ, ರ ಅಕ್ಷರಗಳು ಪರದಲ್ಲಿದ್ದಾಗ ಅನುಸ್ವಾರವನ್ನು ' ಗ್ಂ ' ಎಂದು ಹೇಳಬೇಕು. ಇದು ಗ್ಂ, ಗ್ಗ್ಂ, ಗ್ಂ ಎಂದು ಮೂರು ವಿಧ. (ಕಾತ್ಯಾಯನ ಪ್ರತಿಜ್ಞಾ ಪರಿಶಿಷ್ಟ ಸೂತ್ರ. ೩)

16. ' ವಾ, ಚ, ಕಂ, ಉ, ಚಿತ್, ಸಂ, ಅಸ್ಮಾತ್, ಘ, ಹ, ಸ್ಮ, ತ್ವ, ಈಂ, ಮರ್ಯಾಃ, ಅರೇ, ಸ್ವಿತ್,' ಈ ಪದಗಳಿಗೆ ನಿಪಾತಸಂಜ್ಞೆ. ಒಂದಾಗ ಇವು ಅನುದಾತ್ತಸ್ವರವನ್ನೇ ಪಡೆಯುವುವು. (ಕಾ.ಪ್ರಾ. ೨ ೧೬.)

17. ಗಾಯಿತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ ಎಂಬುದಾಗಿ ವೈದಿಕ ಛಂದಸ್ಸುಗಳು ಏಳು. ಇವುಗಳಲ್ಲಿ ' ಆರ್ಷೀ ' ಎಂಬ ಗಾಯತ್ರೀ ಛಂದಸ್ಸಿನಲ್ಲಿ ಮಂತ್ರದ ನಾಲ್ಕನೆಯ ಒಂದು ಭಾಗದಲ್ಲಿ ೨೪ ಅಕ್ಷರಗಳಿರುವುವು. ನಾಲ್ಕು ಅಕ್ಷರಗಳನ್ನು ಕ್ರಮವಾಗಿ ಹೆಚ್ಚಿಸಿದರೆ ' ಉಷ್ಣಿಕ್ ' ಮುಂತಾದ ಛಂದಸ್ಸುಗಳಾಗುವುವು. ಹೀಗೆ ಒಂದಕ್ಷರವಿರುವ ದೈವೀಗಾಯತ್ರೀ ಛಂದಸ್ಸಿಗೆ ಒಂದೊಂದಕ್ಷರ ಹೆಚ್ಚಿಸಬೇಕು. ಆಸುರೀ ಗಾಯತ್ರಿಗೆ ೧೫ ಅಕ್ಷರವಿದ್ದು ಒಂದೊಂದಕ್ಷರ ಕಡಿಮೆ ಮಾಡಬೇಕು. ಪ್ರಾಜಾಪತ್ಯಾಗಾಯತ್ರಿಗೆ ಎಂಟಕ್ಷರವಿದ್ದು ನಾಲ್ಕಕ್ಷರಹೆಚ್ಚಿಸಬೇಕು. ಯಾಜುಷೀಗಾಯತ್ರಿಗೆ ೧೦ ಅಕ್ಷರವಿದ್ದು ಎರಡಕ್ಷರಹೆಚ್ಚಿಸಬೇಕು. ಆರ್ಚೀ ಗಾಯತ್ರಿಗೆ ೧೮ ಅಕ್ಷರವಿದ್ದು ಮೂರಕ್ಷರಹೆಚ್ಚಿಸಬೇಕು. ಬ್ರಾಹ್ಮೀ ಗಾಯತ್ರಿಗೆ ೩೬ ಅಕ್ಷರವಿದ್ದು ಆರಕ್ಷರ ಹೆಚ್ಚಿಸಬೇಕು. ಮಂತ್ರದನಾಲ್ಕುಭಾಗಗಳೂ ಸಮಾನವಾಗಿದ್ದರೆ ಅದು ಶುದ್ಧ. ಅಸಮಾನವಾಗಿದ್ದರೆ ಮಿಶ್ರ. (ಪಿಂಗಳ ಛಂದಸ್ಸಾರ ೨ನೇ ಅಧ್ಯಾಯ)

ಹೇಳಿರುವ ಅಕ್ಷರಸಂಖ್ಯೆಯಲ್ಲಿ ಒಂದಕ್ಷರ ಕಡಿಮೆಯಾದರೆ ' ನಿಚೃತ್ ' ಅಥವಾ ' ನಿವೃತ್ ' ಎಂದೂ ಹೆಚ್ಚಾದರೆ ' ಭುರಿಕ್ ' ಎಂದೂ ಹೆಸರು. ಹೀಗೆ ಎರಡಕ್ಷರ ಕಡಿಮೆಯಾದರೆ ' ವಿರಾಟ್ ' ಎಂದೂ ಹೆಚ್ಚಾದರೆ ' ಸ್ವರಾಟ್ ' ಎಂದೂ ಹೆಸರು. (ಪಿಂಗಳ ಛಂದಶ್ಶಾಸ್ತ್ರ ೩.೫೯, ೬೦)

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ ।

ಏವನ್ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥

ಕುರ್ವನ್ । ಏವ । ಇಹ । ಕರ್ಮಾಣಿ । ಜಿಜೀವಿಷೇತ್ । ಶತಮ್ । ಸಮಾಃ ।

ಏವಮ್ । ತ್ವಯಿ । ನ । ಅನ್ಯಥಾ । ಇತಃ ॥ಅಸ್ತಿ । ನ । ಕರ್ಮ । ಲಿಪ್ಯತೇ । ನರೇ ।

ಪದಾನಿ ಸಪ್ತದಶ.

೩

ಅಸುರ್ಯಾ ಇತ್ಯಾದಿಮಂತ್ರಸ್ಯ-ದಧ್ಯಙ್ ಆಥರ್ವಣಋಷಿಃ-ಚತುಷ್ಪಾತ್ ಯಾಜುಷೀ ಶುದ್ಧಾ ಅನುಷ್ಟುಪ್ ಛಂದಃ-ದ್ವಾತ್ರಿಂಶದಕ್ಷರಾಣಿ-ಆತ್ಮಾ ದೇವತಾ-ವಿದ್ಯಾಯಾಂ ವಿನಿಯೋಗಃ.

ಅಸುರ್ಯಾ ನಾಮ ತೇ ಲೋಕಾ ಅನ್ಧೇನ ತಮಸಾವೃತಾಃ ।

ತಾಗ್ಂಸ್ತೇ ಪ್ರೇತ್ಯಾಭಿಗಚ್ಛನ್ತಿ ಯೇಕೇಚಾತ್ಮಹನೋ ಜನಾಃ ॥

ಅಸುರ್ಯಾಃ । ನಾಮ । ತೇ । ಲೋಕಾಃ । ಅನ್ಧೇನ । ತಮಸಾ ಆವೃತಾ ಇತ್ಯಾಽವೃತಾಃ[18] ।

ತಾನ್ । ತೇ । ಪ್ರೇತ್ಯೇತಿ ಪ್ರಽಇತ್ಯ । ಅಭಿ । ಗಚ್ಛನ್ತಿ । ಯೇ । ಕೇ । ಚ । ಆತ್ಮಹನ ಇತ್ಯಾತ್ಮಽಹನಃ । ಜನಾಃ ।

ಪದಾನಿ ಸಪ್ತದಶ.

೪

ಅನೇಜದಿತ್ಯಾದಿಮಂತ್ರಸ್ಯ-ದಧ್ಯಙ್ ಆಥರ್ವಣ ಋಷಿಃ-ಚತುಷ್ಪಾತ್ ಯಾಜುಷೀ ನಿವೃತ್ ತ್ರಿಷ್ಟುಪ್ ಛಂದಃ-ತ್ರಿಚತ್ವಾರಿಂಶದಕ್ಷರಾಣಿ-ಆತ್ಮಾ ದೇವತಾ-ವಿದ್ಯಾಯಾಂ ವಿನಿಯೋಗಃ.

---

18. ಸಮಸ್ತವಾದ ಒಂದುಪದದ ಎರಡು ಒಳಪದಗಳನ್ನು ಬಿಡಿಸಿ ತಿಳಿಸುವಾಗ ಮೊದಲಪದಕ್ಕೆ 'ಅವಗ್ರಹ' ವೆಂದು ಹೆಸರು,ಇದರ ಚಿಹ್ನೆ 'ऽ'. ಇಂತಹ ಪದವನ್ನು ಪಠಿಸುವಾಗ ವ್ಯಾಕರಣ ಸಮ್ಮತವಾದ 'ಸಂಧಿ ವ್ಯತ್ಯಾಸಗಳು ಬರುವುದಿಲ್ಲ. ಮತ್ತು ಅರ್ಧಮಾತ್ರಕಾಲ ವಿರಾಮಕೊಟ್ಟು ಎರಡನೆಯ ಪದ ಪಠಿಸಬೇಕು
(ಕಾ ಪ್ರಾ.ಭಾ. ಮತ್ತು ಟಿಪ್ಪಣಿ ೧.೧೫೩)

ಅನೇಜದೇಕಮ್ಮನಸೋಜವೀಯೋ ನೈನದ್ದೇವಾ ಆಪ್ನುವನ್ಪೂರ್ವಮರ್ಷತ್ ।

ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥

ಅನೇಜತ್ । ಏಕಮ್ । ಮನಸಃ । ಜವೀಯಃ । ನ । ಏನತ್ । ದೇವಾಃ । ಆಪ್ನುವನ್ । ಪೂರ್ವಮ್ । ಅರ್ಷತ್ ।

ತತ್ । ಧಾವತಃ । ಅನ್ಯಾನ್ । ಅತಿ । ಏತಿ । ತಿಷ್ಠತ್ । ತಸ್ಮಿನ್ । ಅಪಃ । ಮಾತರಿಶ್ವಾ । ದಧಾತಿ ।

ಪದಾನಿವಿಗ್ಂಶತಿಃ.

೫

ತದಿತ್ಯಾದಿಮಂತ್ರಸ್ಯ–ದಧ್ಯಙ್ ಆಥರ್ವಣಋಷಿಃ–ಚತಃಷ್ಪಾತ್ ಯಾಜುಷೀ ನಿವೃದಧ್ರಾ ಭುರಿಕ್ ಅನುಷ್ಟುಪ್ ಛಂದಃ–ದ್ವಾತ್ರಿಂಶದಕ್ಷರಾಣಿ–ಆತ್ಮಾ ದೇವತಾ–ವಿದ್ಯಾಯಾಂ ವಿನಿಯೋಗಃ.

ತದೇಜತಿ ತನ್ನೈಜತಿ[19] ತದ್ದೂರೇ ತದ್ವನ್ತಿಕೇ ।

ತದನ್ತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥

ತತ್ । ಏಜತಿ । ನ । ಏಜತಿ । ದೂರೇ । ಊ೦2 ಇತ್ಯೂ2 ।[20] ಅನ್ತಿಕೇ ।

ಅನ್ತಃ[21] । ಅಸ್ಯ । ಸರ್ವಸ್ಯ । ಊ೦2 ಇತ್ಯೂ2 । ಸರ್ವಸ್ಯ । ಅಸ್ಯ । ಬಾಹ್ಯತಃ ।

ಪದಾನಿ ಚತುರ್ದಶ ; ಪುನರನುಕ್ತಾನಿ ಪಂಚ ;[22] ಏಕೋನವಿಂಶತಿರಾಹತ್ಯ.

---

19. ಅವರ್ಣದ ಪರದಲ್ಲಿ 'ಏಜತಿ' ಎಂಬ ಪದವಿದ್ದಾಗ ಅವರ್ಣವೂ 'ಏ' ಎಂದು ಬದಲಾಗುವುದು ಎಂದು ಇತರ ಕೆಲವರ ನಿಯಮ. (ಕಾ.ಪ್ರಾ.ಭಾ. ೪.೫೬) ಕಾತ್ಯಾಯನರು ಮಾಧ್ಯಂದಿನಾನುಯಾಯಿ. ಅವರ ಅಭಿಪ್ರಾಯದಲ್ಲಿ ಇತರರೆಂದರೆ ಮುಖ್ಯವಾಗಿ ಕಾಣ್ವರು ಎಂಬುದು ಇಲ್ಲಿ ಗಮನಾರ್ಹ.

20. ಏಕಾಕ್ಷರ ಪದವಾಗಿರುವ ಉಕಾರಕ್ಕೆ 'ಪ್ರಗೃಹ್ಯ' ಎಂಬ ಹೆಸರೂ ಅನುನಾಸಿಕವಾದ ದೀರ್ಘವೂ ಬರುವುದು (ಕಾ.ಪ್ರಾ.ಭಾ ೧.೯೫)

21. 'ಅನ್ತಃ' ಶಬ್ದದ ಮೊದಲನೆಯ ಅಕ್ಷರಕ್ಕೆ ಉದಾತ್ತ ಸ್ವರವಿಲ್ಲದಿದ್ದಾಗ 'ರಿಫಿತ' ಎಂದು ಹೆಸರು. (ಕಾ.ಪ್ರಾ. ೧ ೧೬೨)

22. ಪದಪಾಠದಲ್ಲಿ ಒಂದೇ ಮಂತ್ರದಲ್ಲಿ ಪುನರುಕ್ತವಾಗುವ ಪದವನ್ನು ಮೊದಲಬಾರಿ ಮಾತ್ರ ಪಠಿಸುವುದು

೬

ಯಸ್ತ್ವಿತ್ಯಾದಿ ಮಂತ್ರಸ್ಯ–ದಧ್ಯಙ್ ಆಥರ್ವಣ ಋಷಿಃ–
ಚತುಷ್ಪಾತ್ ಯಾಜುಷೀ ನಿವೃದರ್ಥಾ ಭುರಿಕ್ ಅನುಷ್ಟುಪ್ ಛಂದಃ–
ಏಕತ್ರಿಂಶದಕ್ಷರಾಣಿ–ಆತ್ಮಾದೇವತಾ–ವಿದ್ಯಾಯಾಂ ವಿನಿಯೋಗಃ

**ಯಸ್ತು ಸರ್ವಾಣಿ ಭೂತಾನ್ಯಾತ್ಮನ್ನೇವಾನುಪಶ್ಯತಿ ।**

**ಸರ್ವಭೂತೇಷು ಚಾತ್ಮಾನನ್ತತೋ ನ ವಿಜುಗುಪ್ಸತೇ ॥**

ಯಃ । ತು । ಸರ್ವಾಣಿ । ಭೂತಾನಿ । ಆತ್ಮನ್[23] । ಏವ । ಅನುಪಶ್ಯತೀತ್ಯನು‿ಪಶ್ಯತಿ ।

ಸರ್ವಭೂತೇಷ್ವಿತಿ ಸರ್ವ‿ಭೂತೇಷು । ಚ[24] । ಆತ್ಮಾನಮ್ ತತಃ । ನ । ವಿ । ಜುಗುಪ್ಸತೇ ।

ಪದಾನಿ ಚತುರ್ದಶ.

೭

ಯಸ್ಮಿನ್ನಿತ್ಯಾದಿ ಮಂತ್ರಸ್ಯ–ದಧ್ಯಙ್ ಆಥರ್ವಣ ಋಷಿಃ–
ಚತುಷ್ಪಾತ್ ಯಾಜುಷೀ ನಿವೃದರ್ಥಾ ಭುರಿಕ್ ಅನುಷ್ಟುಪ್ ಛಂದಃ–
ಏಕತ್ರಿಂಶದಕ್ಷರಾಣಿ–ಆತ್ಮಾ ದೇವತಾ–ವಿದ್ಯಾಯಾಂ ವಿನಿಯೋಗಃ.

---

ಮಾಧ್ಯಂದಿನ ಶಾಖೆಯ ಪದ್ಧತಿ. ಇದು ಶಾಕಲ್ಯ ನಿಯಮ. ಬೇರೆ ಕೆಲವು ಶಾಖೆಗಳಲ್ಲಿ ಪುನರುಕ್ತ ಪದಗಳನ್ನು ಹಾಗೆಯೇ ಪಠಿಸುವುದು ಪದ್ಧತಿ. ಇದು ಗಾರ್ಗ್ಯರ ನಿಯಮ. ಪುನರುಕ್ತ ಪದಗಳನ್ನು ಅರ್ಥ–ತಾತ್ಪರ್ಯ ವ್ಯತ್ಯಾಸಗಳಿದ್ದಾಗ ಮಾತ್ರ ಮತ್ತೆ ಪಠಿಸುವುದು ಕಾಣ್ವಶಾಖೆಯ ಪದ್ಧತಿ ಇದು ಕಾಣ್ವ ನಿಯಮ.
(ಕಾ ಪ್ರಾ.ಭಾ. ಉದ್ಧೃತವಚನ)

23. ಕಾಣ್ವರ ಪದಪಾಠದ ; ' ಆತ್ಮನ್ ' ಎಂಬ ರೂಪವೇ ಇದೆ. ' ಆತ್ಮನಿ ' ಎಂಬ ರೂಪವಿಲ್ಲ. ಆದುದರಿಂದ ಮೂಲದಲ್ಲೂ ' ಆತ್ಮನ್ನೇವ ' ಎಂಬ ಪಾಠವೇ ಸರಿ.

24. ' ಸಮುಚ್ಚಯ ' ಎಂಬ ಸಂಯೋಜನಾರ್ಥದಲ್ಲಿ ' ಚ ' ಕಾರವಿದ್ದಾಗ ಆ ವಾಕ್ಯದಲ್ಲಿರುವ ಕ್ರಿಯಾಪದದ ಸ್ವರ ಬದಲಾವಣೆಯಾಗುವುದು ಖಚಿತ. ಶುಕ್ಲಯಜುರ್ವೇದದಲ್ಲಿ ' ಚ 'ಕಾರ ಮತ್ತು ಕ್ರಿಯಾ ಪದಗಳಿಗೆ ೧೪ ಪದಗಳ ವರೆಗೂ ಅಂತರವಿರಬಹುದು. ೨೩ ಪದಗಳ ಅಂತರವನ್ನು ಭಾರದ್ವಾಜರೂ ೩೦ ಪದಗಳ ಅಂತರವನ್ನು ಔಪಶವಿ ಋಷಿಯೂ ಒಪ್ಪಿರುವರು.
(ಭಾ. ಪ. ೨.೨೦)

ಯಸ್ಮಿನ್ತ್ಸರ್ವಾಣಿ[25] ಭೂತಾನ್ಯಾತ್ಮೈವಾಭೂದ್ವಿಜಾನತಃ ।

ತತ್ರ ಕೋ ಮೋಹಃ ಕಶ್ಶೋಕ ಏಕತ್ವಮನುಪಶ್ಯತಃ ॥

ಯಸ್ಮಿನ್ । ಸರ್ವಾಣಿ । ಭೂತಾನಿ । ಆತ್ಮಾ । ಏವ । ಅಭೂತ್ । ವಿಜಾನತ ಇತಿ ವಿ ಽ ಜಾನತಃ ।

ತತ್ರ । ಕಃ । ಮೋಹಃ । ಕಃ । ಶೋಕಃ । ಏಕತ್ವಮಿತ್ಯೇಕ ಽ ತ್ವಮ್ । ಅನುಪಶ್ಯತ ಇತ್ಯನು ಽ ಪಶ್ಯತಃ ।

ಪದಾನಿ ಚತುರ್ದಶ.

೮

ಸ ಇತ್ಯಾದಿ ಮಂತ್ರಸ್ಯ–ದಧ್ಯಙ್ಆಥರ್ವಣಋಷಿಃ–ಪಂಚಪಾತ್‌ಮಿಶ್ರಾ–ಪುರಸ್ತಾತ್‌ಜ್ಯೋತಿಃ[26]–ಜಗತೀ ಛಂದಃ–ಪಂಚಾಶದಕ್ಷರಾಣಿ–ಆತ್ಮಾದೇವತಾ–ವಿದ್ಯಾಯಾಂ ವಿನಿಯೋಗಃ. ಪ್ರಥಮಪಾದೇ ಯಾಜುಷೀ ಶುದ್ಧಾ ಜಗತೀಛಂದಃ–ದ್ವಾದಶಾಕ್ಷರಾಣಿ ; ದ್ವಿತೀಯಪಾದೇ ಸಾಮ್ನೀ ನಿವೃತ್ ಗಾಯತ್ರೀ ಛಂದಃ–ಏಕಾದಶಾಕ್ಷರಾಣಿ ; ತೃತೀಯಪಾದೇ ಸಾಮ್ನೀ ನಿವೃತ್ ಗಾಯತ್ರೀ ಛಂದಃ–ಏಕಾದಶಾಕ್ಷರಾಣಿ ; ಚತುರ್ಥಪಾದೇ ಪ್ರಾಜಾಪತ್ಯಾ ಭುರಿಕ್ ಗಾಯತ್ರೀಛಂದಃ–ನವಾಕ್ಷರಾಣಿ ; ಪಂಚಮಪಾದೇ ಯಾಜುಷೀ ಭುರಿಕ್ ಗಾಯತ್ರೀ ಛಂದಃ–ಸಪ್ತಾಕ್ಷರಾಣಿ.

ಸ ಪರ್ಯಗಾಚ್ಛುಕ್ರಮಕಾಯ ಮವ್ರಣ-

ಮಸ್ನಾವಿರಗ್ಂ ಶುದ್ಧಮಪಾಪವಿದ್ಧಮ್ ।

ಕವಿ ರ್ಮನೀಷೀ ಪರಿಭೂ ಸ್ಸ್ವಯಂಭೂ-

ರ್ಯಾಥಾತಥ್ಯತೋಽರ್ಥಾನ್ವ್ಯದಧಾ-

ಚ್ಛಾಶ್ವತೀಭ್ಯಸ್ಸಮಾಭ್ಯಃ ॥

---

25. ಎರಡು ಪದಗಳ ಮಧ್ಯೆ ಕೆಲವು ಅಕ್ಷರಗಳು ಹೆಚ್ಚಾಗಿ ಸೇರುವುದೂ ಒಂದು ಸಂಧಿ ನಿಯಮ.
ಉದಾ :–ತ್ರೀನ್+ಸಮುದ್ರಾನ್=ತ್ರೀನ್‌ತ್ ಸಮುದ್ರಾನ್. (ಕಾ. ಪ್ರಾ. ೧.೧೩೮)

26. ಒಂದುಮಂತ್ರದಲ್ಲಿ ಐದುಭಾಗಗಳಿದ್ದು ಮೊದಲನೆಯದು ಜಗತೀಛಂದಸ್ಸಿನಲ್ಲೂ ಉಳಿದವು ಗಾಯತ್ರೀ ಛಂದಸ್ಸಿನಲ್ಲೂ ಇದ್ದರೆ ಅದಕ್ಕೆ ' ಪುರಸ್ತಾತ್‌ಜ್ಯೋತಿ ' ಎಂದು ಹೆಸರು.
(ಪಿಂ.ಛಂ. ವೃತಿಮಂಗಳಾವೃತ್ತಿ. ೫.೧.೫೨.)

ಸಃ । ಪರಿ । ಅಗಾತ್ । ಶುಕ್ರಮ್ । ಅಕಾಯಮ್ । ಅವ್ರಣಮ್ ।

ಅಸ್ನಾವಿರಮ್ । ಶುದ್ಧಮ್ । ಅಪಾಪವಿದ್ಧಮಿತ್ಯಪಾಪ ಽ ವಿದ್ಧಮ್ ।

ಕವಿಃ । ಮನೀಷೀ । ಪರಿಭೂರಿತಿ ಪರಿ ಽ ಭೂಃ । ಸ್ವಯಂಭೂರಿತಿ ಸ್ವಯಮ್ ಽ ಭೂಃ । ಯಾಥಾ

ತಥ್ಯತ ಇತಿ ಯಾಥಾ ಽ ತಥ್ಯತಃ । ಅರ್ಥಾನ್ । ವಿ । ಅದಧಾತ್ । ಶಾಶ್ವತೀಭ್ಯಃ । ಸಮಾಭ್ಯಃ ।

ಪದಾನಿ ಏಕೋನವಿಂಶತಿಃ.

೯

ಅನ್ಧಮಿತ್ಯಾದಿ ಪೂರ್ವಮಂತ್ರಸ್ಯ- ದಧ್ಯಙ್ ಆಥರ್ವಣಋಷಿಃ–ಚತುಷ್ಪಾತ್ ಯಾಜುಷೀ ನಿವೃತ್ ಅನುಷ್ಟುಪ್ ಛಂದಃ–ಏಕತ್ರಿಂಶದಕ್ಷರಾಣಿ - ಆತ್ಮಾದೇವತಾ– ವಿದ್ಯಾಯಾಂ ವಿನಿಯೋಗಃ.

ಅನ್ಧನ್ತಮಃ ಪ್ರವಿಶನ್ತಿ ಯೇಽವಿದ್ಯಾಮುಪಾಸತೇ ।

ತತೋ ಭೂಯಇವ ತೇ ತಮೋ ಯ ಉ ವಿದ್ಯಾಯಾಗ್ಂ ರತಾಃ ॥

ಅನ್ಧಮ್[27] । ತಮಃ । ಪ್ರ । ವಿಶನ್ತಿ । ಯೇ । ಅವಿದ್ಯಾಮ್[28] । ಉಪಾಸತ ಇತ್ಯುಪ ಽ ಆಸತೇ ।

ತತಃ । ಭೂಯ ಇವೇತಿ ಭೂಯಃ ಽ ಇವ । ತೇ । ತಮಃ । ಯೇ । ಊ 2 ಇತ್ಯೂ 2 । ವಿದ್ಯಾಯಾಮ್ । ರತಾಃ ।

ಪದಾನಿ ಪಂಚದಶ.

---

27. ವೀರ್ಯವೆಂದರೆ ಬಲ. ಅದಕ್ಕೆ ಕಾರಣ ಆಹಾರ. ಈ ಅರ್ಥದಲ್ಲಿ ಬಳಸುವಾಗ 'ಅಂಧ' ಶಬ್ದದ ಮೊದಲನೆಯ ಅಕ್ಷರವು ಉದಾತ್ತಸ್ವರವನ್ನು ಪಡೆದಿರುತ್ತದೆ. (ಕಾ. ಪ್ರಾ. ೨.೩೪)
ಆದುದರಿಂದ 'ಕುರುಡು' ಎಂಬ ಅರ್ಥದಲ್ಲಾಗಲಿ 'ಒತ್ತಾಗಿರುವ' ಎಂಬ ಅರ್ಥದಲ್ಲಾಗಲೀ ಬರುವ ಅಂಧಶಬ್ದದ ಮೊದಲ ಅಕ್ಷರ ಅನುದಾತ್ತವಾಗಿರುವುದು.

ಉದಾ. :–' ಅಂಧಂತಮಃ ಪ್ರವಿಶನ್ತಿ '

28. 'ಅವಿದ್ಯಾ' ಎಂಬ ಪದವನ್ನು ಅವಗ್ರಹವಿಲ್ಲದೆಯೇ ಪಠಿಸುವುದು ಪರಂಪರೆಯಾಗಿ ಬಂದಿರುವುದರಿಂದ ಇದು ಸಮಾಸವಿಲ್ಲದ ಒಂದೇಪದ. ಕರ್ಮಕ್ಕೆ 'ಅವಿದ್ಯೆ' ಎಂದು ಹೆಸರು. (ವಿ.ಪು. ೬ .೭.೬೧)

೧೦

ಅನ್ಯದಿತ್ಯಾದಿ ಪೂರ್ವಮಂತ್ರಸ್ಯ-ದಧ್ಯಙ್ ಆಥರ್ವಣಋಷಿಃ-ಚತುಷ್ಪಾತ್ ಯಾಜುಷೀ ನಿವೃತ್ ಅನುಷ್ಟುಪ್ ಛಂದಃ-ಏಕತ್ರಿಂಶದಕ್ಷರಾಣಿ-ಆತ್ಮಾದೇವತಾ- ವಿದ್ಯಾಯಾಂ ವಿನಿಯೋಗಃ.

ಅನ್ಯದೇವಾಹುರ್ವಿದ್ಯಯಾನ್ಯದಾಹುರವಿದ್ಯಯಾ ।

ಇತಿ ಶುಶ್ರುಮ ಧೀರಾಣಾಯ್ಯೇ ನಸ್ತದ್ವಿಚಚಕ್ಷಿರೇ ॥

ಅನ್ಯತ್ । ಏವ । ಆಹುಃ । ವಿದ್ಯಯಾ । ಅನ್ಯತ್ । ಆಹುಃ । ಅವಿದ್ಯಯಾ ।

ಇತಿ । ಶುಶ್ರುಮಃ । ಧೀರಾಣಾಮ್ । ಯೇ । ನಃ । ತತ್ । ವಿಚಚಕ್ಷಿರ ಇತಿ ವಿ ಽ ಚಚಕ್ಷಿರೇ ।

ಪದಾನಿ ಚತುರ್ದಶ.

೧೧

ವಿದ್ಯಾಮಿತ್ಯಾದಿ ಮಂತ್ರಸ್ಯ-ದಧ್ಯಙ್ ಆಥರ್ವಣಋಷಿಃ-ಚತುಷ್ಪಾತ್ ಯಾಜುಷೀ ವಿರಾಟ್ ಅನುಷ್ಟುಪ್ ಛಂದಃ-ತ್ರಿಂಶದಕ್ಷರಾಣಿ-ಆತ್ಮಾದೇವತಾ-ವಿದ್ಯಾಯಾಂ ವಿನಿಯೋಗಃ.

ವಿದ್ಯಾಞ್ಚಾವಿದ್ಯಾಞ್ಚ ಯಸ್ತದ್ವೇದೋಭಯಂಗ್ಂ ಸಹ ।

ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾಮೃತಮಶ್ನುತೇ ॥

ವಿದ್ಯಾಮ್ । ಚ । ಅವಿದ್ಯಾಮ್ । ಚ । ಯಃ । ತತ್ । ವೇದ । ಉಭಯಮ್ । ಸಹ ।

ಅವಿದ್ಯಯಾ । ಮೃತ್ಯುಮ್ । ತೀರ್ತ್ವಾ । ವಿದ್ಯಯಾ । ಅಮೃತಮ್ । ಅಶ್ನುತೇ ।

ಪದಾನಿ ಪಂಚದಶ.

೧೨

ಅನ್ಧಮಿತ್ಯಾದ್ಯುತ್ತರಮಂತ್ರಸ್ಯ- ದಧ್ಯಙ್ಙಾಥರ್ವಣ ಋಷಿಃ-ಚತುಷ್ಪಾತ್ ಯಾಜುಷೀ ಶುದ್ಧಾ ಅನುಷ್ಟುಪ್ ಛಂದಃ-ದ್ವಾತ್ರಿಂಶದಕ್ಷರಾಣಿ-ಆತ್ಮಾ ದೇವತಾ-ವಿದ್ಯಾಯಾಂ ವಿನಿಯೋಗಃ.

ಅನ್ಧನ್ತಮಃ ಪ್ರವಿಶನ್ತಿ ಯೇಽಸಂಭೂತಿಮುಪಾಸತೇ ।

ತತೋ ಭೂಯಇವ ತೇ ತಮೋ ಯ ಉ ಸಂಭೂತ್ಯಾಗ್‌ಂ ರತಾಃ ॥

ಅನ್ಧಮ್ । ತಮಃ । ಪ್ರವಿಶನ್ತಿ । ಯೇ ।

ಅಸಮ್ಭೂತಿ ಮಿತ್ಯಸಮ್[29] ಽ ಭೂತಿಮ್[30] । ಉಪಾಸತ ಇತ್ಯುಪ ಽ ಆಸತೇ ।

ತತಃ । ಭೂಯ ಇವೇತಿ ಭೂಯಃ ಽ ಇವ । ತೇ । ತಮಃ ।

ಯೇ । ಊ 2 ಇತ್ಯೂ 2 । ಸಮ್ಭೂತ್ಯಾಮಿತಿ ಸಮ್ ಽ ಭೂತ್ಯಾಮ್ । ರತಾಃ ।

ಪದಾನಿ ಪಂಚದಶ.

೧೩

ಅನ್ಯದಿತ್ಯಾದ್ಯುತ್ತರಮಂತ್ರಸ್ಯ–ದಧ್ಯಙ್ ಆಥರ್ವಣ ಋಷಿಃ–ಚತುಷ್ಪಾತ್ ಯಾಜುಷೀ ಶುದ್ಧಾ ಅನುಷ್ಟುಪ್ ಛಂದಃ–ದ್ವಾತ್ರಿಂಶದಕ್ಷರಾಣಿ–ಆತ್ಮಾ ದೇವತಾ–ವಿದ್ಯಾಯಾಂ ವಿನಿಯೋಗಃ.

ಅನ್ಯದೇವಾಹುಸ್ಸಮ್ಭವಾದನ್ಯದಾಹುರಸಂಭವಾತ್ ।

ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥

---

29. ಎರಡು ಪದಗಳಿಗೆ ಸಮಾಸ ಮಾಡುವಾಗ ಅವಗ್ರಹ ನಿಯಮವಿದೆ. ಈ ನಿಯಮವು ನಿಷೇಧಾರ್ಥಕವಾದ ' ನ ' ಎಂಬ ನಿಪಾತದೊಡನೆ ಸಮಾಸಮಾಡುವಾಗ ಅನ್ವಯಿಸುವುದಿಲ್ಲ. (ಕಾ.ಪ್ರಾ. ೫. ೨೪)

30. ' ಭೂತಿ ' ಎಂಬ ಪದವು ಉದಾತ್ತಸ್ವರವಾಗಿರುತ್ತದೆ. (ಕಾ.ಪ್ರಾ.ಭಾ. ೨. ೨೨)
ಈ ನಿಯಮವನ್ನು ' ಸಂಭೂತ್ಯಾಂ ' ' ಸಂಭೂತಿಂ ' ' ಸಂಭೂತ್ಯಾ ' ಎಂಬಪದಗಳಲ್ಲಿ ಅನುಸರಿಸಿರುವಂತೆ ಕಾಣದು. ಉದಾತ್ತದ ನಂತರ ಬರುವ ಅನುದಾತ್ತವು ಸ್ವರಿತವಾಗುವುದು ಎಂಬ ಕಾ. ಪ್ರಾ. ೪.೧೩೫ ರ ನಿಯಮವನ್ನೇ ಇವುಗಳಲ್ಲಿ ಅನುಸರಿಸಿರಬಹುದಾಗಿ ತೋರುವುದು. ಪದಪಾಠ ಸಂಪ್ರದಾಯದಲ್ಲಿ ಸ್ವರಿತಸ್ವರವೇ ಇರುವುದು.

ಅನ್ಯತ್ । ಏವ । ಆಹುಃ । ಸಂಭವಾದಿತಿ ಸಂ ಽ ಭವಾತ್ । ಅನ್ಯತ್ । ಆಹುಃ । ಅಸಂಭವಾದಿತ್ಯಸಂ ಽ ಭವಾತ್ ।

ಇತಿ । ಶುಶ್ರುಮ । ಧೀರಾಣಾಂ । ಯೇ । ನಃ । ತತ್ । ವಿಚಚಕ್ಷಿರ ಇತಿ ವಿ ಽ ಚಚಕ್ಷಿರೇ ।

ಪದಾನಿ ಚತುರ್ದಶ.

೧೪

ಸಂಭೂತಿಮಿತ್ಯಾದಿ ಮಂತ್ರಸ್ಯ-ದಧ್ಯಙ್ ಆಥರ್ವಣ ಋಷಿಃ-ಚತುಷ್ಪಾತ್ ಯಾಜುಷೀ ಶುದ್ಧಾ ಅನುಷ್ಟುಪ್ ಛಂದಃ-ದ್ವಾತ್ರಿಂಶದಕ್ಷರಾಣಿ-ಆತ್ಮಾ ದೇವತಾ-ವಿದ್ಯಾಯಾಂ ವಿನಿಯೋಗಃ.

**ಸಂಭೂತಿಞ್ಚ ವಿನಾಶಞ್ಚ ಯಸ್ತದ್ವೇದೋಭಯಗ್ಂ ಸಹ ।**

**ವಿನಾಶೇನ ಮೃತ್ಯುನ್ತೀರ್ತ್ವಾ ಸಂಭೂತ್ಯಾಮೃತಮಶ್ನುತೇ ॥**

ಸಂಭೂತಿ ಮಿತಿ ಸಂ ಽ ಭೂತಿಮ್ । ಚ । ವಿನಾಶ ಮಿತಿ ವಿ ಽ ನಾಶಮ್ । ಚ ।

ಯಃ । ತತ್ । ವೇದ । ಉಭಯಂ । ಸಹ ।

ವಿನಾಶೇನೇತಿ ವಿ ಽ ನಾಶೇನ । ಮೃತ್ಯುಮ್ । ತೀರ್ತ್ವಾ ।

ಸಂಭೂತ್ಯೇತಿ ಸಂ ಽ ಭೂತ್ಯಾ । ಅಮೃತಮ್ । ಅಶ್ನುತೇ ।

ಪದಾನಿ ಪಂಚದಶ.

೧೫

ಹಿರಣ್ಮಯೇನೇತ್ಯಾದಿಮಂತ್ರಸ್ಯ-ದಧ್ಯಙ್ ಆಥರ್ವಣಋಷಿಃ-ಚತುಷ್ಪಾತ್ ಯಾಜುಷೀ ಶುದ್ಧಾ ಅನುಷ್ಟುಪ್ ಛಂದಃ-ದ್ವಾತ್ರಿಂಶದಕ್ಷರಾಣಿ-ಪೂಷಾ ದೇವತಾ [31]-ವಿದ್ಯಾಯಾಂ ವಿನಿಯೋಗಃ.

---

31. ಈ ಮಂತ್ರದಲ್ಲಿ ಆದಿತ್ಯೋಪಾಸನೆ ವಿಹಿತವಾಗಿದೆ. (ಕಾ.ಪ್ರಾ. ೪.೯)
'ಆದಿತ್ಯ ಈ ಮಂತ್ರದ ದೇವತೆ' (ಆನಂದಭಟ್ಟೋಪಾಧ್ಯಾಯ ಭಾಷ್ಯ) ಮಂತ್ರದಲ್ಲಿ 'ಪೂಷಾ' ಎಂಬ ಆದಿತ್ಯ ಪರ್ಯಾಯಶಬ್ದ ವಿರುವುದರಿಂದ ಅದನ್ನೇ ಇಲ್ಲಿ ಬಳಸಲಾಗಿದೆ.

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಮ್ಮುಖಮ್ ।

ತತ್ತ್ವಮ್ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥

ಹಿರಣ್ಮಯೇನ । ಪಾತ್ರೇಣ । ಸತ್ಯಸ್ಯ । ಅಪಿಹಿತಮಿತ್ಯಪಿ ऽ ಹಿತಮ್ । ಮುಖಮ್ ।

ತತ್ । ತ್ವಮ್ । ಪೂಷನ್ । ಅಪ । ಆ । ವೃಣು । ಸತ್ಯಧರ್ಮಾಯೇತಿ ಸತ್ಯ ऽ ಧರ್ಮಾಯ । ದೃಷ್ಟಯೇ ।

ಪದಾನಿ ತ್ರಯೋದಶ.

೧೬

ಪೂಷನ್ನಿತ್ಯಾದಿಮಂತ್ರಸ್ಯ–ದಧ್ಯಙ್ ಆಥರ್ವಣಋಷಿಃ ತ್ರಿಪಾತ್‌ಸಾಮ್ನೀ ಆಸುರೀ ವಾ ಯಜುರನ್ತಾ ಮಿಶ್ರಾ ಉಷ್ಣಿಕ್ ಛಂದಃ–ಅನ್ತ್ಯೇ ದ್ವಾದಶಕಃ[32]–ಏಕೋನಪಂಚಾಶದಕ್ಷರಾಣಿ–ಸೂರ್ಯೋ ದೇವತಾ[33]–ವಿದ್ಯಾಯಾಂ ವಿನಿಯೋಗಃ.

ಪೂಷನ್ನೇಕಋಷೇ[34] ಯಮ ಸೂರ್ಯ ಪ್ರಾಜಾಪತ್ಯ

ವ್ಯೂಹ ರಶ್ಮೀನ್ತ್ಸಮೂಹ ತೇಜೋ

ಯತ್ತೇ ರೂಪಙ್ಕಲ್ಯಾಣತಮನ್ತತ್ತೇ ಪಶ್ಯಾಮಿ ।

ಯೋ ಅಸಾವಸೌ[35] ಪುರುಷಸ್ಸೋಽ ಹಮಸ್ಮಿ[36] ॥

32. 'ಪೂರ್ಷ' ಎಂಬ ಮಂತ್ರವು ತ್ರಿಷ್ಟುಪ್ ಛಂದಸ್ಸು. (ಆನಂದಭಟ್ಟೋಪಾಧ್ಯಾಯ ಭಾಷ್ಯ) 'ಪೂರ್ಷ' ಎಂಬ ಮಂತ್ರವು ಯಜುರ್ವಾಕ್ಯರೂಪವಾದ ಹನ್ನೆರಡಕ್ಷರವುಳ್ಳ ನಾಲ್ಕನೆಯ ಭಾಗವನ್ನು ಪಡೆದ ಮೂರು ಪಾದದ ಉಷ್ಣಿಕ್ ಛಂದಸ್ಸು. (ಅನಂತಾಚಾರ್ಯ ಭಾಷ್ಯದಲ್ಲಿ ಉದ್ಧೃತವಚನ)

33. 'ಸೂರ್ಯ ಈ ಮಂತ್ರದ ದೇವತೆ.' (ಆನಂದಭಟ್ಟೋಪಾಧ್ಯಾಯ ಭಾಷ್ಯ)

34. ಮಂತ್ರಗಳಲ್ಲಿ ಅಕಾರದ ಮುಂದೆ ಋಕಾರ ಬಂದಾಗ 'ಅರ್' ಎಂದು ವ್ಯತ್ಯಾಸವಾಗುವುದಿಲ್ಲ.
ಉದಾ :–'ಸಪ್ತಋಷೀನ್'
'ಬ್ರಾಹ್ಮಣ'ದಲ್ಲಿ 'ಅರ್' ಎಂಬ ರೂಪಾಂತರವುಂಟು. ಉದಾ :—'ಸಪ್ತರ್ಷೀನ್' (ಭಾ ಪ.ಭಾ. ೩.೧೧)

35. 'ಯೋ ಅಸೌ' ಎಂಬ ಸ್ಥಳದಲ್ಲಿ ಪೂರ್ವರೂಪಸಂಧಿಯು ಬರುವುದಿಲ್ಲ. (ಕಾ.ಪ್ರಾ. ೩.೪)
ವಿವರಗಳಿಗೆ :—(ಕಾ.ಪ್ರಾ. ೪.೧.೨೨ ; ೪.೧೨೬, ೧೨೭ ; ೧.೧೬೦ ; ೪.೩೬ ; ೪.೪೭) ನೋಡಿ.

36. ವಾಕ್ಯದಲ್ಲಿ 'ಯತ್' ಎಂಬ ಸರ್ವನಾಮಪದವಿದ್ದಾಗ ಕ್ರಿಯಾಪದಕ್ಕೆ ಇದರಿಂದ ಹದಿನಾಲ್ಕು ಪದಗಳ [illegible] ವಿದ್ದರೂ ಸ್ವರ ವ್ಯತ್ಯಾಸವಾಗುವುದು. (ಕಾ. ಪ್ರಾ. ೨.೧೪)

ಪೂಷನ್ । ಏಕಋಷೇ ಇತ್ಯೇಕ ऽ ಋಷೇ । ಯಮ । ಸೂರ್ಯ । ಪ್ರಾಜಾಪತ್ಯೇತಿ ಪ್ರಾಜಾ ऽ ಪತ್ಯ ।

ವಿ । ಊಹ । ರಶ್ಮೀನ್ । ಸಮ್ । ಊಹ । ತೇಜಃ ।

ಯತ್ । ತೇ[37] । ರೂಪಮ್ । ಕಲ್ಯಾಣತಮಮಿತಿ ಕಲ್ಯಾಣ[38] ऽ ತಮಮ್ । ತತ್ । ತೇ[37] । ಪಶ್ಯಾಮಿ ।

ಯಃ । ಅಸೌ । ಅಸೌ । ಪುರುಷಃ । ಸಃ । ಅಹಮ್ । ಅಸ್ಮಿ ।

ಪದಾನಿ ಪಂಚವಿಗ್ಂಶತಿಃ.

೧೭

ವಾಯುರಿತ್ಯಾದಿಮಂತ್ರಸ್ಯ–ದಧ್ಯಙ್ ಆಥರ್ವಣಋಷಿಃ–ಯಜುಷೀ[39] ವಾಕ್ಯದ್ವಯಂ–ಮಧ್ಯೇ ಪ್ರಣವಃ–ಚತುಸ್ತ್ರಿಂಶದಕ್ಷರಾಣಿ–ಲಿಂಗೋಕ್ತಾ ದೇವತಾಃ[40]–ವಿದ್ಯಾಂಗಭೂತೇ ಆತ್ಮಾರ್ಪಣೇ ವಿನಿಯೋಗಃ.[41]

ಪ್ರಥಮಸ್ಯ ವಾಯುರ್ದೇವತಾ–ಸಪ್ತದಶಾಕ್ಷರಾಣಿ. ದ್ವಿತೀಯಸ್ಯ ಕ್ರತುರ್ದೇವತಾ–ಷೋಡಶಾಕ್ಷರಾಣಿ. ಪ್ರಣವಸ್ಯ ಋಷಿರ್ಬ್ರಹ್ಮ[42]–ದೇವೀ ಗಾಯತ್ರೀಛಂದಃ–ಪರಮಾತ್ಮಾ ಶ್ರೀಮನ್ನಾರಾಯಣೋ ದೇವತಾ[43]–ಏಕಂ ಅಕ್ಷರಮ್.

---

37. ನೀನು ಎಂಬ ಅರ್ಥದ ' ಯುಷ್ಮತ್ ' ಶಬ್ದದ ' ತೇ ' ಎಂಬ ಪದವು ಅನುದಾತ್ತಸ್ವರವಾಗಿರುತ್ತದೆ. 27ನೇ ಟಿಪ್ಪಣಿ ಸಹ ನೋಡಿ. (ಕಾ.ಪ್ರಾ. ೨.೫)

38. ಉತ್ಕರ್ಷವನ್ನು ತಿಳಿಸುವ ' ತರ, ತಮ ' ಶಬ್ದಗಳು ಮುಂದಿದ್ದಾಗ ಅವುಗಳಿಗೆ ಮೊದಲು ' ಅವಗ್ರಹ ' ' ऽ ' ಚಿಹ್ನೆ ಬರುವುದು.

39. ' ವಾಯುರನಿಲಂ ' ಎಂಬ ಮಂತ್ರವು ಎರಡು ಯಜುರ್ವಾಕ್ಯರೂಪವಾಗಿದೆ. (ಕಾ.ಸ. ೪೯)

40. ಮಂತ್ರದಲ್ಲಿರುವ ಚಿಹ್ನೆಗಳಿಂದ ಕೆಲವೆಡೆ ಮಂತ್ರದ ದೇವತೆಗಳನ್ನು ನಿರ್ಣಯಿಸಬೇಕು. (ಆನಂದಭಟ್ಟೋಪಾಧ್ಯಾಯ ಭಾಷ್ಯ ಉದ್ಧೃತವಚನ ಮತ್ತು ಯಾ.ನಿ. ೭.೧)

41. ' ಕ್ರತೋ ' ಮುಂತಾದ ಮೂರು ಯಜುರ್ವಾಕ್ಯಗಳಿಂದ ಯೋಗಿಯು ಅನ್ತ್ಯಕಾಲದಲ್ಲಿ ಯಜ್ಞರೂಪಿಯಾದ ಪರಮಾತ್ಮನಿಗೆ ಯಜ್ಞರೂಪವಾದ ಆತ್ಮಾರ್ಪಣಾದಿಗಳನ್ನು ಜ್ಞಾಪಿಸುತ್ತಾನೆ. (ಕಾ.ಸ. ೪.೯)

42. ' ಪರಮಾತ್ಮನು ವಿಶ್ವಸೃಷ್ಟಿಯ ಆದಿಯಲ್ಲಿ ಮೊಟ್ಟಮೊದಲು ಉಚ್ಚರಿಸಿದ ಶಬ್ದ ' ಓಂ '. ೧೨ನೇ ಟಿಪ್ಪಣಿ ಸಹ ನೋಡಿ.

43. ೧೨ನೇ ಟಿಪ್ಪಣಿ ನೋಡಿ.

ವಾಯುರನಿಲಮಮೃತಮಥೇದಮ್ಭಸ್ಮಾನ್ತಗ್ಂ ಶರೀರಮ್ ।

ಓಮ್ 3 [44]

ಕ್ರತೋ ಸ್ಮರ ಕೃತಗ್ಂ ಸ್ಮರ ಕ್ರತೋ ಸ್ಮರ ಕೃತಗ್ಂ ಸ್ಮರ ॥

ವಾಯುಃ । ಅನಿಲಮ್ । ಅಮೃತಮ್ ।

ಅಥ । ಇದಮ್। ಭಸ್ಮಾನ್ತಮಿತಿ ಭಸ್ಮ ಽ ಅನ್ತಮ್ । ಶರೀರಮ್ ।

ಓಮ್3 । ಕ್ರತೋ ಇತಿ ಕ್ರತೋ । ಸ್ಮರ । ಕೃತಮ್ । ಸ್ಮರ ।

ಕ್ರತೋ ಇತಿ ಕ್ರತೋ । ಸ್ಮರ । ಕೃತಮ್ । ಸ್ಮರ ।

ಪದಾನಿ ಷೋಡಶ.

೧೮

ಅಗ್ನ ಇತ್ಯಾದಿಮಂತ್ರಸ್ಯ–ಅಗಸ್ತ್ಯಋಷಿಃ [45]–ಚತುಷ್ಪಾತ್ ಯಾಜುಷೀ ನಿವೃತ್ ತ್ರಿಷ್ಟುಪ್ ಛಂದಃ [45]–ತ್ರಿಚತ್ವಾರಿಂಶದಕ್ಷರಾಣಿ–ಅಗ್ನಿರ್ದೇವತಾ [45]–ವಿದ್ಯಾಂಗೇ ನಮಃಕರ್ಮಣಿ ದೇವತೋಪಸ್ಥಾನೇ ವಿನಿಯೋಗಃ. [46]

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್

ವಿಶ್ವಾನಿ ದೇವ ವಯುನಾನಿ ವಿದ್ವಾನ್ ।

ಯುಯೋಧ್ಯಸ್ಮಜ್ಜುಹುರಾಣಮೇನೋ

ಭೂಯಿಷ್ಠಾನ್ತೇ ನಮಉಕ್ತಿಂವಿಧೇಮ ॥

---

44. 'ಓಂ' ಎಂಬುದು ಪರಮಾತ್ಮನ ಹೆಸರು. ಆಕಾಶದಂತೆ ಎಲ್ಲೆಡೆಯೂ ವ್ಯಾಪಿಸಿರುವ ಪರಮಾತ್ಮನನ್ನು ಈ ಓಂಕಾರ ಹೇಳುತ್ತ ಧ್ಯಾನಿಸಬೇಕೆಂಬ ವಿಶೇಷಾರ್ಥ ಮಾಧ್ಯಂದಿನಪಾಠದಲ್ಲೂ ಬೃಹದಾರಣ್ಯಕದಲ್ಲೂ ಇದೆ. ೧೨ನೇ ಟಿಪ್ಪಣಿ ಸಹ ನೋಡಿ.

45. ಕಾ.ಸ. ೫.೨೨ ನೋಡಿ.

46. 'ಈ ಮಂತ್ರವು ಕೊನೆಯಲ್ಲಿ ನಿರ್ಣಾಯಕ ಘಟ್ಟದ ನಮಸ್ಕಾರೋಕ್ತಿ ರೂಪವಾಗಿದೆ.' (ಕಾ.ಸ. ೪.೯)

ಈಶಾವಾಸ್ಯಮಿತ್ಯೇಕಾನುವಾಕೇಷ್ಟಾದಶ.[47]

ಇತಿ ಶ್ರೀಶುಕ್ಲಯಜುರ್ವೇದೇ ಪ್ರಥಮಶಾಖಾಯಾಂ ಕಾಣ್ವಸಂಹಿತಾಯಾಂ
ಚತ್ವಾರಿಂಶೋಧ್ಯಾಯಃ ಈಶಾವಾಸ್ಯೋಪನಿಷತ್ ಸಮಾಪ್ತಾ

ಇತಿ ಶ್ರೀಶುಕ್ಲಯಜುರ್ವೇದೀಯಾ ಕಾಣ್ವಸಂಹಿತಾ ಸಮಾಪ್ತಾ



ಅಗ್ನೇ । ನಯ । ಸುಪಥೇತಿಸು ಽ ಪಥಾ ।[48] ರಾಯೇ । ಅಸ್ಮಾನ್ ।

ವಿಶ್ವಾನಿ । ದೇವ । ವಯುನಾನಿ । ವಿದ್ವಾನ್ ।

ಯುಯೋಧಿ । ಅಸ್ಮತ್ । ಜುಹುರಾಣಮ್ । ಏನಃ ।[49]

ಭೂಯಿಷ್ಠಾಮ್ । ತೇ । ನಮಉಕ್ತಿಮಿತಿ ನಮಃ ಽ ಉಕ್ತಿಮ್ । ವಿಧೇಮ ।

ಪದಾನಿ ಸಪ್ತದಶ.

ಪೂರ್ವೋಕ್ತಾನಿ ಪದಾನಿ ಸಪ್ತದಶ.[50] ಏವಂ ಪದಕಂಡಿಕಾಶ್ಚ[51] ಸಪ್ತದಶ. ಅನಯಾಸಹಾಷ್ಟಾದಶ.

---

47. ಕಾಣ್ವಪದಪಾಠಾನುಕ್ರಮಣಿ.

48. ' ಸು ' ಎಂಬ ಪದಕ್ಕೆ ಕ್ರಮಪಾಠದಲ್ಲಿ ಪುನರಾವೃತ್ತಿಯೂ, ಪದಪಾಠದಲ್ಲಿ ಅವಗ್ರಹ ಆವೃತ್ತಿಗಳೂ ಶಾಕಟಾಯನರ ಮತದಂತೆ ಬರುತ್ತವೆ. (ಕಾ.ಪ್ರಾ.ಭಾ. ೪.೨೨)
-ಕಾಣ್ವರು ಕೆಲವೆಡೆ ಶಾಕಟಾಯನರ ಮತವನ್ನೇ ಅನುಸರಿಸಿರುತ್ತಾರೆ. ಮಾಧ್ಯಂದಿನಪದಪಾಠದಲ್ಲಿ ಈ ಆವೃತ್ತಿ ಇಲ್ಲ.

49. ' ಏನಃ ' ಎಂಬುದಕ್ಕೆ ' ಪಾಪ ' ಎಂಬರ್ಥವಿಲ್ಲದಿದ್ದಾಗ ಆದಿಯಲ್ಲಿ ಅನುದಾತ್ತಸ್ವರ ಬರುವುದು.

ಇಲ್ಲಿ ಪಾಪ ಎಂಬ ಅರ್ಥವಿರುವುದರಿಂದ ಉದಾತ್ತಸ್ವರ ಬಂದಿದೆ. (ಕಾ.ಪ್ರಾ. ೨.೧೩)

50. ಈ ಮಂತ್ರದ ಪದಪಾಠವು ಹಿಂದೆ ಕರ್ಮಕಾಂಡಭಾಗದಲ್ಲೇ ಬಂದಿದೆ. (ಶು.ಯ. ೫.೩೬)

51. ಒಂದೊಂದು ಮಂತ್ರಗಳ ಪದಸಮೂಹಕ್ಕೂ ಒಂದು ' ಕಂಡಿಕೆ '=' ಖಂಡ ' ಎಂದು ಹೆಸರು.

ಕಾಂಡಿಕೇಯಾನಿ ಪದಾನಿ ದ್ವಿಶತಂ ಚತುಸ್ಸಪ್ತತಿಶ್ಚ. ಏತದೀಯೈಸ್ಸಹ ನವೋನಂ ತ್ರಿಶತಂ. ಓಮಿತಿ ಮಾಂತ್ರಿಕಾನಿ ಪದಾನಿ ತ್ರ್ಯೂನಂ ತ್ರಿಶತಂ ತ್ರ್ಯೂನಂ ತ್ರಿ ಶತಮ್. ಶಾನ್ತಿಮಂತ್ರೇತ್ವಷ್ಟಾದಶ. ಪುನಃ ಪೂರ್ಣಂ ಪೂರ್ಣಮ್.[52]

ಇತಿ ಶ್ರೀಶುಕ್ಲಯಜುರ್ವೇದೀಯಾಯಾಃ ಕಾಣ್ವಸಂಹಿತಾಯಾಃ
ಕಣ್ವೋಪಜ್ಞಃ ಪದಪಾಠಃ ಸಮಾಪ್ತಃ



## ಉತ್ತರಶಾಂತಿಃ

ಅಸ್ಯ ಮಂತ್ರಸ್ಯ ಋಷ್ಯಾದಿಕಂ ಪೂರ್ವಮೇವೋಕ್ತಮ್
ಅಧ್ಯಯನಾಂತೇ ಶಾನ್ತ್ಯರ್ಥೇ ವಿನಿಯೋಗಃ.[53]

**ಪೂರ್ಣಮದಃ ಪೂರ್ಣಮಿದಮ್ಪೂರ್ಣಾತ್ಪೂರ್ಣಮುದಚ್ಯತೇ ।**

**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ ॥**

**ಓಂ 3 ಶಾಂತಿಶ್ಶಾಂತಿಶ್ಶಾಂತಿಃ ॥**

**ಹರಿಃ ಓಮ್ 3**

**ಓಂನಮಃ, ಸ್ವಸ್ತಿಶ್ರೀಸೂರ್ಯನಾರಾಯಣಪರಬ್ರಹ್ಮ-ದಧ್ಯಙ್ ಆಥರ್ವಣ-ಯಾಜ್ಞವಲ್ಕ್ಯ**
**ಶ್ರೀಕಣ್ವಾದಿಭ್ಯೋ ಮುನಿಭ್ಯೋ ಮಹದ್ಭ್ಯೋ ಗುರುಭ್ಯಃ**

ಓಂ ವಿದ್ಯಾದೇಹಾಯ ನಿತ್ಯಪ್ರಬುದ್ಧಾಯ ಪರಮಾತ್ಮನೇ ನಮಃ
ಓಂ ಅಸ್ಮದ್ಗುರುಭ್ಯೋ ನಮಃ, ಓಂ ಅಸ್ಮತ್ಪರಮಗುರುಭ್ಯೋ ನಮಃ
ಓಂ ಅಸ್ಮತ್ಸರ್ವಗುರುಭ್ಯೋ ನಮಃ
ಶ್ರೀಕೃಷ್ಣಾರ್ಪಣಮಸ್ತು.

---

52. ಈಶಾವಾಸ್ಯದ ಪದಕಂಡಿಕೆಗಳಲ್ಲಿ ಉಕ್ತವಾಗಿರುವ ಪದಗಳು ೨೭೪. ಅನುಕ್ತಪದಗಳು ೫. ಪೂರ್ವೋಕ್ತ ಕಂಡಿಕೆ ೧ಕ್ಕೆ ೧೭ ಪದಗಳು. ಓಂಕಾರದೊಡನೆ ಒಟ್ಟು ಈಶಾವಾಸ್ಯದ ೧೮ ಮಂತ್ರಗಳಿಗೆ ಪದಗಳು ೨೯೭. ಆರಂಭದಲ್ಲಿರುವ ಶಾಂತಿಮಂತ್ರಕ್ಕೆ ೧೮. ಒಟ್ಟು ೩೧೫. ಪುನಃ ಶಾಂತಿಮಂತ್ರಕ್ಕೆ ೧೮. ಒಟ್ಟು ೩೩೩ ಪದಗಳು. ಈ ಸಂಖ್ಯೆಯನ್ನು ಒಂಬತ್ತರಿಂದ ಭಾಗಿಸಲು ಶೇಷವು ‘ 0 ’ ಪೂರ್ಣವೊಂದೇ ಉಳಿಯುವುದು. ಈ ಪೂರ್ಣತೆಯು ಸಜ್ಜನರ ಮತ್ತು ಪರಮಾತ್ಮನ ಸಹಜ ಸಾರ್ವಕಾಲಿಕಸ್ವಭಾವ ಎಂಬುದು ಹಿರಿಯ ಮಹರ್ಷಿಗಳ ನಿಶ್ಚಯ.

53. ೧೧ನೆಯ ಟಿಪ್ಪಣಿ ನೋಡಿ.

॥ ಓಂ ॥

# ಶ್ರೀಮದ್ವಾಜಸನೇಯಿ ಮಾಧ್ಯಂದಿನ ಶುಕ್ಲಯಜುರ್ವೇದಸಂಹಿತಾ ಚತ್ವಾರಿಂಶೋಽಧ್ಯಾಯಃ

ಈಶಾ ವಾಸ್ಯಮಿದಗ್ಂ ಸರ್ವಂ ಯತ್ಕಿಂ ಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯ ಸ್ವಿದ್ಧನಮ್ ॥ ೧ ॥

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ ೨ ॥

ಅಸುರ್ಯಾ ನಾಮ ತೇ ಲೋಕಾ ಅನ್ಧೇನ ತಮಸಾವೃತಾಃ ।
ತಾಂಸ್ತೇ ಪ್ರೇತ್ಯಾಪಿಗಚ್ಛನ್ತಿ ಯೇ ಕೇ ಚಾತ್ಮಹನೋ ಜನಾಃ ॥ ೩ ॥

ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ ಆಪ್ನುವನ್ಪೂರ್ವಮರ್ಶತ್ ।
ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥ ೪ ॥

ತದೇಜತಿ ತನ್ನೈಜತಿ ತದ್ದೂರೇ ತದ್ವನ್ತಿಕೇ ।
ತದನ್ತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥ ೫ ॥

ಯಸ್ತು ಸರ್ವಾಣಿ ಭೂತಾನ್ಯಾತ್ಮನ್ನೇವಾನುಪಶ್ಯತಿ ।
ಸರ್ವಭೂತೇಷು ಚಾತ್ಮಾನಂ ತತೋ ನ ವಿಚಿಕಿತ್ಸತಿ ॥ ೬ ॥

ಯಸ್ಮಿನ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ ।
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥ ೭ ॥

ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಗ್ಂ ಶುದ್ಧಮಪಾಪವಿದ್ಧಮ್ ।
ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ ॥ ೮ ॥

ಅನ್ಧಂ ತಮಃ ಪ್ರವಿಶನ್ತಿ ಯೇಽಸಂಭೂತಿಮುಪಾಸತೇ ।
ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಗ್ಂ ರತಾಃ ॥ ೯ ॥

ಅನ್ಯದೇವಾಹುಃ ಸಂಭವಾದನ್ಯದಾಹುರಸಂಭವಾತ್ ।
ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥ ೧೦ ॥

ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಗ್ಂ ಸಹ ।
ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಮೃತಮಶ್ನುತೇ ॥ ೧೧ ॥

ಅನ್ಧಂ ತಮಃ ಪ್ರವಿಶನ್ತಿ ಯೇಽವಿದ್ಯಾಮುಪಾಸತೇ ।

ತತೋ ಭೂಯಇವ ತೇ ತಮೋ ಯ ಉ ವಿದ್ಯಾಯಾಗ್ಂ ರತಾಃ ॥ ೧೨ ॥

ಅನ್ಯದೇವಾಹುರ್ವಿದ್ಯಾಯಾ ಅನ್ಯದಾಹುರವಿದ್ಯಾಯಾಃ ।

ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥ ೧೩ ॥

ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಗ್ಂ ಸಹ ।

ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ ॥ ೧೪ ॥

ವಾಯುರನಿಲಮಮೃತಮಥೇದಂ ಭಸ್ಮಾನ್ತಗ್ಂ ಶರೀರಮ್ ।

ಓಮ್ ೩ ಕ್ರತೋ ಸ್ಮರ ಕ್ಲಿಬೇ ಸ್ಮರ ಕೃತಗ್ಂ ಸ್ಮರ ॥ ೧೫ ॥

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ವಿಶ್ವಾನಿ ದೇವ ವಯುನಾನಿ ವಿದ್ವಾನ್ ।

ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥ ೧೬ ॥

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ ।

ಯೋಽಸಾವಾದಿತ್ಯೇ ಪುರುಷಃ ಸೋಽಸಾವಹಮ್ ॥ ೧೭ ॥

॥ ಓಮ್ ೩ ಖಂ ಬ್ರಹ್ಮ ॥

॥ ಇತಿ ಮಾಧ್ಯಂದಿನೀಯಾಯಾಂ ವಾಜಸನೇಯಸಂಹಿತಾಯಾಂ ಚತ್ವಾರಿಂಶೋಽಧ್ಯಾಯಃ ॥



ಶ್ರೀಃ

# ಈಶಾವಾಸ್ಯೋಪನಿಷತ್

( ಮೂಲ – ಕನ್ನಡ ಭಾಷ್ಯ – ಅನುವಾದ – ಟಿಪ್ಪಣಿ – ವಿವರಣೆಗಳು )

* * *

## ಶಾಂತಿ ಮಂತ್ರ[1]

ಓಂ

**ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।**

**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**

**ಓಂ ಶಾಂತಿಃ ಶಾಂತಿಃ ಶಾಂತಿಃ**

### ಅನ್ವಯಾನುಸಾರ ಪ್ರತಿಪದಾರ್ಥ

**ಅದಃ** — ಅದು, ಪರಮಾತ್ಮ ; **ಪೂರ್ಣಂ** — ತುಂಬಿದೆ, ಸಕಲ ವಿಧದಲ್ಲೂ ಪೂರ್ಣವಾಗಿದೆ. **ಇದಂ** — ಇದು, ನಾವು ನೋಡಿ ಅನುಭವಿಸಿ, ಹಾಗೂ ಕಿವಿಯಿಂದ ಕೇಳಿ ತಿಳಿದುಕೊಳ್ಳುತ್ತಿರುವ ಈ ಎಲ್ಲ ವಿಧವಾದ ಜಗತ್ತು. **ಪೂರ್ಣಂ** — ತುಂಬಿದೆ, ಆ ಪರಮಾತ್ಮನಿಂದ ಒಳಗೂ, ಹೊರಗೂ ಆವರಿಸಲ್ಪಟ್ಟಿದೆ. **ಪೂರ್ಣಾತ್** — ಪೂರ್ಣದಿಂದಲೇ, ಪೂರ್ಣನಾದ ಪರಮಾತ್ಮನಿಂದಲೇ. **ಪೂರ್ಣಂ** — ತುಂಬಿದ ಈ ಜಗತ್ತು **ಉದಚ್ಯತೇ** — ಹೊರ ಹೊಮ್ಮುವುದು. **ಪೂರ್ಣಸ್ಯ** — ಸಕಲಗುಣ ಪರಿಪೂರ್ಣನಾದ ಪರಮಾತ್ಮನ. **ಪೂರ್ಣಂ** — ಪೂರ್ಣತೆಯನ್ನು. **ಆದಾಯ** — ಸ್ವೀಕರಿಸಿದರೆ, ಸಾಕ್ಷಾತ್ತಾಗಿ ಕಂಡು ಅನುಭವಿಸಿದರೆ. **ಪೂರ್ಣಂ ಏವ** — ಯಾವೊಂದು ಪೂರ್ಣವೂ ಪೂರ್ಣವಾಗಿಯೇ. **ಅವಶಿಷ್ಯತೇ** — ಉಳಿದಿರುತ್ತದೆ.

* * *

### ಛಾ ಯಾ ಪ ದ್ಯ

ಓಂ : ದೇವರಿಗಾಗಿಯೆ ನಾನು.

ಪೂರ್ಣವದು, ಪೂರ್ಣವಿದು, ಪೂರ್ಣದಿಂದಲೆ ಪೂರ್ಣ ಉದಿಸುವುದು ;
ಪೂರ್ಣದಾ ಪೂರ್ಣವನೆ ಪಡೆದು, ಪೂರ್ಣವೇ ಉಳಿಯುವುದು.
ಇರುತಿರಲಿ ನೆಮ್ಮದಿ – ನೆಮ್ಮದಿ – ನೆಮ್ಮದಿ.

### ತಾತ್ಪರ್ಯಾರ್ಥ

ಪರಮಾತ್ಮ ಸಕಲವಿಧದಲ್ಲೂ ಪರಿಪೂರ್ಣವಾದ ವಸ್ತು. ಸಕಲವಿಧ ಎಂದರೆ ಸ್ವರೂಪ,[2] ರೂಪ,[3]

---

1. ವಿದ್ಯಾರಂಭದಲ್ಲಿ ಮನಸ್ಸಿನ ನೆಮ್ಮದಿಗಾಗಿ ಹೇಳುವ ಪ್ರಾರ್ಥನೆ.

2. ಸ್ವರೂಪ — ತಾನು - ತನ್ನತನ ಎಂಬ ಈ ಎರಡರ ಒಕ್ಕೂಟವೇ ಸ್ವರೂಪ. ಈ ಪದವನ್ನು ಎರಡು ಅರ್ಥಗಳಲ್ಲೂ ಬಳಸುವುದುಂಟು. ಪರಮಾತ್ಮನಿಗೆ ಜ್ಞಾನ-ಆನಂದಗಳ ಘನತೆಯೇ ಸ್ವರೂಪ. ಹೇಗೆ ಉಪ್ಪಿಗೆ ಎಲ್ಲ ಅಂಶದಲ್ಲೂ ಉಪ್ಪಾಗಿರುವಿಕೆಯೇ ಸ್ವರೂಪ ಎನಿಸಿದೆಯೋ ಹಾಗೆ. ಉಪ್ಪಿಗಿಂತ ಅದರ ಸ್ವರೂಪ ಬೇರೆಯಲ್ಲ. ಹಾಗೆ ಪರಮಾತ್ಮನ ಸ್ವರೂಪ ಎಂದರೆ ಇಲ್ಲಿ ಪರಮಾತ್ಮನೇ.

3. ರೂಪ — ದಿವ್ಯವಾದ ಆಕಾರ ಬಣ್ಣ ಮೊದಲಾದವು.

ಗುಣ,[1] ವಿಭವ,[2] ಐಶ್ವರ್ಯ[3] ಮುಂತಾದ ಎಲ್ಲ ಅಂಶದಲ್ಲೂ.

ಇಂತಹ ಪರಮಾತ್ಮ ಎಲ್ಲದರ ಹುಟ್ಟು, ಸಾವು, ಬದುಕು, ನೆಮ್ಮದಿ, ದಿವ್ಯಜೀವನ ಎಲ್ಲಕ್ಕೂ ಕಾರಣ. ಈ ಜಗತ್ತಿನಲ್ಲಿ ಯಾವುದನ್ನೇ ಅನುಭವಿಸುವ ಈ ಜೀವಾತ್ಮಗಳು, ಪರಿಪೂರ್ಣ ಪರಮಾತ್ಮನ ಸಾಕ್ಷಾತ್ಕಾರ ಅನುಭವಗಳನ್ನು ಪಡೆದರೆ ಉಪನಿಷತ್‌ಗಳಲ್ಲಿ ವಿಶೇಷವಾಗಿ ತಿಳಿಸಿರುವಂತೆ, ಪರಮಾತ್ಮನ ಎಂಟು ವಿಶೇಷಗುಣಗಳಿಂದ[4] ಪೂರ್ಣರಾಗಿ, ತಮ್ಮ ಜ್ಞಾನದ ವಿಕಾಸದ ಮೂಲಕ ಸಮಸ್ತಜಗತ್ತಿನಲ್ಲೂ ಪೂರ್ಣರಾಗಿ, ಪರಮಾತ್ಮನ ಸಹಜವಾದ ಪೂರ್ಣತೆಯನ್ನು ಪ್ರಕಟಗೊಳಿಸುತ್ತಾರೆ, ಎಂದು ಭಾವಾರ್ಥ.

ಪರಮಾತ್ಮನಿಗೆ ಬ್ರಹ್ಮ ಎಂದು ಹೆಸರು. ಬ್ರಹ್ಮ ಎಂಬ ಪದಕ್ಕೆ ಹಿರಿಯ ವಸ್ತು ಹಾಗೂ ಇತರ ವಸ್ತುಗಳನ್ನೂ ಹಿರಿದಾಗಿಸುವ ವಸ್ತು ಎಂದರ್ಥ. ಈ ಶಬ್ದ ಮತ್ತು ಅರ್ಥಗಳಲ್ಲೇ ಎಲ್ಲ ವೇದಾಂತಗಳ ಸಾರಾರ್ಥವೂ ಅಡಗಿದೆ. "ಓಂ" ಕಾರದ, 'ದೇವರಿಗಾಗಿಯೆ ನಾನು' ಎಂಬ ಅರ್ಥವೂ ಇದೇ ಆಗಿದೆ. ನಾವು ಹೇಗಿದ್ದರೇನೇ ದೇವರು ನಮ್ಮನ್ನೂ ಹಿರಿದಾಗಿಸುವನು. ಈ ಅರ್ಥವನ್ನೇ 'ಶಾಂತಿ ಮಂತ್ರದಲ್ಲೂ' 'ಈಶಾವಾಸ್ಯ' ದಲ್ಲೂ ವಿವರಿಸಲಾಗಿದೆ. ಆದುದರಿಂದಲೇ ಈ ಉಪನಿಷತ್‌ಗೆ ಇದು ಸಮಂಜಸವಾದ ಶಾಂತಿಮಂತ್ರವೆನಿಸಿದೆ. ಇದರಿಂದಲೇ ಜಗತ್ತಿಗೆ ನೆಮ್ಮದಿ, ಸುಖ, ಶಾಂತಿ.

ಈ ಮಂತ್ರಕ್ಕೆ ಮತ್ತೂ ಹಲವು ವಿಶೇಷಾರ್ಥಗಳಿವೆ. ಅವುಗಳನ್ನು ಸಮಯ ಬಂದಾಗ ತಿಳಿಸುವೆವು.

---

1. ಗುಣ — ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ ಎಂಬ ಮುಖ್ಯಗುಣಗಳ ಆರು ಸಮೂಹಗಳು. ಇವಲ್ಲದೆ ಒಳ್ಳೆಯ ನಡತೆ, ವಾತ್ಸಲ್ಯ, ಸರಳತೆ, ಸ್ನೇಹಪರತೆ, ಸಮತಾಭಾವ, ಕರುಣೆ, ಸ್ಥೈರ್ಯ, ಧೈರ್ಯ, ಮುಂತಾದ ಸದ್ಗುಣಗಳೆಲ್ಲವೂ.

2. ವಿಭವ — ಆಸ್ತಿ ಎಂಬುದು ಈ ಪದದ ಮೂಲಭೂತವಾದ ಅರ್ಥ. ಈ ಜಗತ್ತೆಲ್ಲವೂ ಪರಮಾತ್ಮನ ಆಸ್ತಿ. ಇದರಲ್ಲಿ ದೇವತೆ, ಮನುಷ್ಯ, ಪಶು, ಪಕ್ಷಿ, ಸರೀಸೃಪ, ಕ್ರಿಮಿ ಕೀಟಗಳು, ಮರಗಿಡಗಳು, ಕಲ್ಲು, ಮಣ್ಣು, ಲೋಹಗಳು ಮುಂತಾಗಿ ವಿಚಿತ್ರವಾದ ವಿವಿಧ ಆಕಾರಗಳೆಲ್ಲವೂ ಇವೆ. ಈ ವಿಧವಾದ ಆಕೃತಿಗಳೆಲ್ಲವೂ ಈ ಪದದ ತಾತ್ಪರ್ಯಾರ್ಥ.

3. ಐಶ್ವರ್ಯ — ಈಶ್ವರ ಎಂದರೆ ಸಹಜವಾಗಿಯೇ ಆಳುವ ಸ್ವಭಾವದವನು ಎಲ್ಲವನ್ನೂ ತನ್ನ ಹತೋಟಿಯಲ್ಲಿಟ್ಟುಕೊಳ್ಳುವ ಸ್ವಭಾವವೇ ಐಶ್ವರ್ಯ.

4. ಪಾಪವಿಲ್ಲದಿರುವಿಕೆ, ಮುಪ್ಪಿಲ್ಲದಿರುವಿಕೆ, ಸಾವಿಲ್ಲದಿರುವಿಕೆ, ದುಃಖವಿಲ್ಲದಿರುವಿಕೆ, ಹಸಿವಿಲ್ಲದಿರುವಿಕೆ, ಬಾಯಾರಿಕೆಯಿಲ್ಲ ದಿರುವಿಕೆ, ಇಷ್ಟಬಂದ ಭೋಗ್ಯವಸ್ತುಗಳನ್ನು ಪಡೆಯುವಿಕೆ, ತನ್ನ ಇಷ್ಟಕ್ಕೆ ಯಾವ ವಿರೋಧವೂ ಇಲ್ಲದಿರುವಿಕೆ.

  

# ಈಶಾವಾಸ್ಯೋಪನಿಷತ್

# ಭಾಷ್ಯಗಳ ಭೂಮಿಕೆ

* * *

## ವೇದಾಂತಾಚಾರ್ಯ[1]ಭಾಷ್ಯ

### ಮಂಗಳಾಚರಣೆ

ಈ ಜಡ[2] ಮತ್ತು ಜೀವವಸ್ತುಗಳಿಂದ ತುಂಬಿರುವ ಪ್ರಪಂಚವೆಲ್ಲವೂ ಯಾವ ಒಬ್ಬನ ಆಶ್ರಯದಲ್ಲಿದೆಯೋ; ಶುದ್ಧವಾದ ಸದ್ಗುಣಗಳನ್ನು ಪಡೆದಿರುವ, ಆ ವಾಸುದೇವನನ್ನೇ[3] ಉಪಾಸನೆ[4] ಮಾಡುವೆವು.

### ಈಶಾವಾಸ್ಯಸಾರಾರ್ಥ

ಎಲ್ಲದರ ಒಡೆಯು, ಸಹಜವಾದ ಮಹಿಮೆ[5] ಉಳ್ಳವ, ಎಲ್ಲ ಜೀವಗಳ ಅಂತರಾತ್ಮ,[6] ಎಲ್ಲ ವಿಧವಾದ ದೋಷಗಳನ್ನೂ ತಾನೇ ತಾನಾಗಿ ಮೆಟ್ಟಿ ನಿಂತಿರುವವ, ಎಲ್ಲ ವಿದ್ಯೆಗಳ ಮುಖ್ಯವಾದ ಗುರಿ, ಎಲ್ಲರ ಕರ್ಮಗಳನ್ನೂ[7] ನೋಡಿಕೊಳ್ಳುವ ಅಧಿಪತಿ, ಪಾಪಗಳನ್ನು ಅಡಗಿಸುವವ, ಮುಕ್ತಜನರೂ[8] ಅನುಭವಿಸುವಂತಹ (ರಸಮಯ), ಸಿದ್ಧವಾಗಿಯೇ ಇರುವ ಸಹಜವಾದ ಸಾಧನ, ಇಂತಹ ಅಪೂರ್ವವಾದ ಒಂದು ವ್ಯಕ್ತಿ ವಾಜಸನೇಯ[9] ಸಂಹಿತೆಯ[10] ಕೊನೆಯ ನಿರ್ಣಯವಿಭಾಗದಲ್ಲಿ ಕಂಗೊಳಿಸುತ್ತದೆ.

### ಉಪೋದ್ಘಾತ

"ಈಶಾವಾಸ್ಯಮಿದಂ ಸರ್ವಂ" ಎಂದು ಮೊದಲಾಗಿ ಉಪದೇಶಿಸುವ ಈ ಭಾಗದಲ್ಲಿ ಶಿಷ್ಯನನ್ನು ಕುರಿತು ಆಚಾರ್ಯನು[11] ಬ್ರಹ್ಮವಿದ್ಯೆಯನ್ನು[12] ಅಧಿಕೃತವಾಗಿ[13] ಉಪದೇಶಿಸುತ್ತಿದ್ದಾನೆ.

ಈ ಉಪನಿಷತ್ತನ್ನು[14] ಕರ್ಮಕಾಂಡವಾದ[15] ಸಂಹಿತೆಯ ಕೊನೆಯಲ್ಲೇ ಪಠಿಸಿರುವುದು, ಎಲ್ಲ ಕರ್ಮಗಳನ್ನೂ ಸಹ, ವಿಶಿಷ್ಟಕ್ರಮದಲ್ಲಿ[16] ಪ್ರಯೋಗಿಸುವುದರಿಂದ ಅವು ಪರಮಾತ್ಮನ ಉಪಾಸನೆಗೂ ಆಗುವುವು ಎಂಬುದನ್ನು ಸ್ಪಷ್ಟಪಡಿಸುವ ಸಲುವಾಗಿ.

---

1. ಶ್ರೀವೈಷ್ಣವಸಿದ್ಧಾಂತದ ಆಚಾರ್ಯರಲ್ಲಿ ಪ್ರಸಿದ್ಧರಾದ ವೇದಾಂತದೇಶಿಕರು. 2. ಜೀವವಿಲ್ಲದುದು.
3. ಪರಮಾತ್ಮನ ಐದುರೂಪಗಳಲ್ಲಿ "ಪರವಾಸುದೇವ" ಎಂಬ ಪ್ರಧಾನವಾದ ರೂಪ. ಈ ರೂಪವು ವೈಕುಂಠಲೋಕದಲ್ಲಿ ಇದೆ.
4. ಪರಮಾತ್ಮನನ್ನು ಎಡೆಬಿಡದೆ ಪ್ರೀತಿಯಿಂದ ಧ್ಯಾನಿಸಿ ಸಾಕ್ಷಾತ್ಕಾರಮಾಡಿಕೊಳ್ಳುವುದು.
5. ಎಲ್ಲೆಲ್ಲೂ ಹರಡುವ ಸಾಮರ್ಥ್ಯ.
6. ಒಳಹೊಕ್ಕು ವ್ಯಾಪಿಸಿರುವವನು. 7. ಒಳ್ಳೆಯ ಮತ್ತು ಕೆಟ್ಟ ಕೆಲಸಗಳು.
8. ಹುಟ್ಟು-ಸಾವು ರೂಪವಾದ ಸಂಸಾರದಿಂದ ಬಿಡುಗಡೆ ಹೊಂದಿದವರು.
9. ಶುಕ್ಲ ಯಜುರ್ವೇದ. 10. ಮಂತ್ರಗಳ ಸಂಕಲನ.
11. ದಧ್ಯಙ್ಆಥರ್ವಣ ಎಂಬ ಮಹರ್ಷಿ. 'ಮನು' ಎನಿಸಿದ ಇವರು ಸೂರ್ಯನ ಅವತಾರ. (ಯಾ. ನಿ. ೧೨-೩-೨೧)
12. ಉಪಾಸನೆ. 13. ಯೋಗ್ಯತೆಗೆ ತಕ್ಕಂತೆ. 14. ಮಂತ್ರರಹಸ್ಯ
15. ಯಜ್ಞಯಾಗಾದಿ ಕರ್ಮಗಳನ್ನೂ, ಅವುಗಳ ಅಂಗಗಳನ್ನೂ, ವಿವರಿಸುವ ಭಾಗ.
16. ವಿಶೇಷರೀತಿ. ಇಲ್ಲಿ "ವಿನಿಯೋಗಪೃಥಕ್ತ್ವ" ಎಂಬ ನಿಯಮವನ್ನು ತಿಳಿದಿರಬೇಕು. ಒಂದೇ ಕೆಲಸವನ್ನು ಬೇರೆ ಬೇರೆ ಉದ್ದೇಶಗಳಿಗಾಗಿ ಪ್ರಯೋಗಿಸುವುದು. ಉದಾ:- ವೈದಿಕರು ನಿತ್ಯಮಾಡುವ ಅಗ್ನಿಹೋತ್ರ ಎಂಬ ಕರ್ಮವನ್ನು ಬೇರೆ ಬೇರೆ ಫಲಗಳಿಗಾಗಿಯೂ ಇಟ್ಟುಕೊಳ್ಳಬಹುದಾಗಿದೆ.

# ಈಶಾವಾಸ್ಯಪ್ರಕಾಶಿಕೆ

(ಶ್ರೀವತ್ಸನಾರಾಯಣಮುನಿಗಳ[1] ವಿವರಣೆ)

## ಮಂಗಳಾಚರಣೆ

(ಶ್ರೀರಂಗನಾಥಸ್ವಾಮಿ[2] ಈಶಾವಾಸ್ಯದ ವಿಷಯ)

ಈ ಉಪನಿಷತ್ತಿನಲ್ಲಿ ಹೇಳಲಾಗಿರುವುದು ಮಹಾಪುರುಷನೂ[3] ಋಷಿಯೂ[4] ಆದ ಪರಮಾತ್ಮನ ಉಪಾಸನೆ. ಅವನದು ಅಚ್ಚರಿಗೊಳಿಸುವಂತಹ ಶಕ್ತಿ. ಅವನಿಂದಲೇ ಈ ಜಗತ್ತು ನಿಂತಿರುವುದು. ಅವನು ಬೇರೆ ಯಾರೂ ಅಲ್ಲ. ನಮ್ಮ ಶ್ರೀರಂಗನಾಥನೇ ಅವನು. ಅವನಿಗೆ ಮನಸಾರೆ ನಮಸ್ಕಾರ ಹೇಳುತ್ತಾ ದೀರ್ಘದಂಡಪ್ರಣಾಮ ಮಾಡೋಣ.

## ಈಶಾವಾಸ್ಯಸಾರಾರ್ಥ[5] – ಶರಣಾಗತಿ.

ನಾವು ಶರಣಾಗತಿಯಿಂದ[6] ಪರಮಾತ್ಮನನ್ನು ಪಡೆಯಬಹುದು ಎಂಬುದೇ ಈ ಉಪನಿಷತ್ತಿನ ಸ್ಪಷ್ಟವಾದ ಸಾರಾರ್ಥ.

## ವಿವರಣೆಯ ಉದ್ದೇಶ್ಯ

ವೇದಾಂತಾಚಾರ್ಯರು ಆಳವಾಗಿ ಯೋಚಿಸಿ ಈ ಉಪನಿಷತ್ತಿಗೆ ಭಾಷ್ಯರೂಪವಾದ ವಿವರಣೆ ಬರೆದಿರುತ್ತಾರೆ. ಅವರ ಮಾತುಗಳ ಭಾವಾರ್ಥವನ್ನು ಅಲ್ಲಲ್ಲೇ ವಿವರಿಸಿ ತೋರಿಸಿಕೊಡುತ್ತೇವಷ್ಟೆ.

## ಈಶಾವಾಸ್ಯ ಮತ್ತು ಗೀತೋಪನಿಷತ್‌ಗಳ ತೋಲನೆ

ಈಶಾವಾಸ್ಯದ ಮಂತ್ರಗಳು ಹದಿನೆಂಟು. ಇವು "ಪುರುಷಸೂಕ್ತ"ದ[7] ಅರ್ಥವನ್ನೇ ಸಂಗ್ರಹವಾಗಿ ತಿಳಿಸುತ್ತವೆ. ಕಲ್ಪಸೂತ್ರವನ್ನು[8] ಬರೆದ ಕಾತ್ಯಾಯನ[9] ಮಹರ್ಷಿಯು ವೈದಿಕಕರ್ಮಗಳಲ್ಲಿ ಈ ಮಂತ್ರಗಳನ್ನು ಉಪಯೋಗಿಸಿರುವುದಿಲ್ಲ. ಹೀಗಾಗಿ ಇವು ಎಲ್ಲ ಉಪನಿಷತ್ತುಗಳ ಅರ್ಥಗಳಿಗೂ ಒಂದು ಸಂಕ್ಷಿಪ್ತ ವಿವರಣೆಯಾಗಿವೆ. ಈ ಅಂಶವನ್ನು ಅಲ್ಲಲ್ಲೇ ತೋರಿಸಿ ಕೊಡಲಾಗುವುದು.

## ಈಶಾವಾಸ್ಯ — ಉಪನಿಷತ್ತೆ?

ಇವರ ಮಂತ್ರಗಳಲ್ಲಿ ಕೆಲವನ್ನು ಬ್ರಹ್ಮಕಾಂಡದಲ್ಲೂ[10] ಪಠಿಸಿರುತ್ತಾರೆ. ಹಾಗೂ ಕೆಲವು ಕರ್ಮಗಳು

---

1. ಉಪೋದ್ಘಾತ ನೋಡಿ. 2. ತಮಿಳುನಾಡಿನ ಶ್ರೀರಂಗಕ್ಷೇತ್ರದಲ್ಲಿ ಇರುವ ಪರಮಾತ್ಮನ ಅರ್ಚಾಮೂರ್ತಿ.
3. ಉತ್ಕೃಷ್ಟನಾದವನು. 4. ಅತೀಂದ್ರಿಯವಿಷಯಗಳನ್ನು ತಿಳಿಯುವವನು.
5. ಶರಣಾಗತಿಯೇ ಈ ಉಪನಿಷತ್ತಿನಲ್ಲಿ ಹೇಳಿರುವ ಉಪಾಸನೆಯ ರಹಸ್ಯ ಎಂಬುದು ವಿವರಣಕಾರರ ಅಭಿಪ್ರಾಯ. ಶರಣಾಗತಿ ಮಾಡಲು ನಮಗೆಲ್ಲಾ ಪರಮಾತ್ಮನ ಅರ್ಚಾವತಾರವೇ ಆಸರೆ. ಅರ್ಚಾಮೂರ್ತಿಗಳಿಗೆಲ್ಲ ಮೂಲ ಎನಿಸಿರುವ ರೂಪವೇ ಶ್ರೀರಂಗದ ರಂಗನಾಥಸ್ವಾಮಿ.
6. ಇಷ್ಟಾರ್ಥ ನೆರವೇರಿಸಲು ದೇವರನ್ನೇ ಸಾಧನಸಲಕರಣೆಯನ್ನಾಗಿ ಸ್ವೀಕರಿಸುವುದು.
7. ಜಗದ್ರಕ್ಷಕನಾದ ಪರಮಾತ್ಮನ ಬಗ್ಗೆ ತಿಳಿಸುವ ೧೬ ಮಂತ್ರಗಳ ಸಂಗ್ರಹ.
8. ಮಂತ್ರಗಳನ್ನು ಎಲ್ಲಿ ಹೇಗೆ ಬಳಸಬೇಕೆಂದು ತಿಳಿಸುವ ಗ್ರಂಥಗಳು. 9. ಯಾಜ್ಞವಲ್ಕ್ಯರ ಶಿಷ್ಯರು.
10. ತತ್ತ್ವಜ್ಞಾನವನ್ನೂ ಬ್ರಹ್ಮವಿದ್ಯೆಯನ್ನೂ ತಿಳಿಸುವ ವೇದದ ಕೊನೆಯ ಭಾಗ. ಇದಕ್ಕೆ ವೇದಾಂತ, ಉಪನಿಷತ್, ಜ್ಞಾನ ಕಾಂಡ ಎಂದು ಹೆಸರುಗಳಿವೆ.

ಬ್ರಹ್ಮೋಪಾಸನೆಗೆ ಅಂಗವಾಗಿರುವುವು. ಕರ್ಮ-ಬ್ರಹ್ಮಗಳ ಈ ಸಂಬಂಧವನ್ನೂ ಸ್ಪಷ್ಟವಾಗಿ ತಿಳಿಸಲೆಂದೇ ಈ ಮಂತ್ರಗಳನ್ನು ಕರ್ಮಕಾಂಡದಲ್ಲೇ ಪಠಿಸಲಾಗಿದೆ. ಇವುಗಳನ್ನು ಕರ್ಮದಲ್ಲಿ ಉಪಯೋಗಿಸದಿರುವುದರಿಂದ ಇಂತಹ ಕರ್ಮಗಳೆಲ್ಲವೂ ಬ್ರಹ್ಮವಿದ್ಯೆಗೆ ಅಂಗ ಎಂದು ಸ್ಪಷ್ಟವಾಗುವುದು. ಹೀಗೆ ಬ್ರಹ್ಮೋಪಾಸನೆಯ ಅಂಗಗಳ ರಹಸ್ಯವನ್ನು ತಿಳಿಸುವುದರಿಂದಲೇ ಈ ಮಂತ್ರಗಳು ಉಪನಿಷತ್ ಎನಿಸಿವೆ.

* * *

# ಪದಾರ್ಥದೀಪಿಕೆ

(ಭಾರದ್ವಾಜ ರಾಮಾನುಜಾಚಾರ್ಯರ[1] ರಚನೆ)

* * *

### ಮಂಗಳಾಚರಣೆ

ಭಗವಾನ್ ನಾರಾಯಣನು ಆದಿಸೃಷ್ಟಿಯಲ್ಲಿ ಮತ್ಸ್ಯಾವತಾರ[2] ತಾಳಿದ. ಸೋಮಕಾಸುರನನ್ನು[3] ಸಂಹರಿಸಿದ. ಅಸುರ ಅಪಹರಿಸಿದ್ದ ನಾಲ್ಕು ವೇದಗಳನ್ನೂ ಉದ್ಧರಿಸಿ ಚತುರ್ಮುಖನಿಗೆ ಉಪದೇಶ ಮಾಡಿದ. ಇಂತಹ ಭಗವಾನ್‌ನಾರಾಯಣನಿಗೆ ನಮಸ್ಕಾರ.

ಶ್ರೀಮನ್ನಾರಾಯಣನಿಂದ ಮೊದಲಾಗಿ ವಾತ್ಸ್ಯ ಶ್ರೀನಿವಾಸಾಚಾರ್ಯರೆಂಬ ನನ್ನ ಗುರುಗಳವರೆಗೆ ಎಲ್ಲ ಗುರುವರ್ಯರಿಗೂ ನಮಸ್ಕಾರ.

### ಪ್ರತಿಜ್ಞೆ

ಶ್ರೀರಂಗದ ರಂಗನಾಥಸ್ವಾಮಿಯನ್ನು ಸ್ತುತಿಸಿ, ನಂತರ ಪಂಡಿತರಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ಈಶಾವಾಸ್ಯೋಪನಿಷತ್ತಿಗೆ ವಿವರಣೆಯನ್ನು ಬರೆಯುತ್ತೇನೆ.

### ಗ್ರಂಥಕರ್ತನ ವಿಷಯ

ಭಾರದ್ವಾಜಗೋತ್ರದ ಜಗನ್ನಾಥಾಚಾರ್ಯರ ಪುತ್ರನಾದ, ರಾಮಾನುಜದಾಸನೆಂದೂ, ಶ್ರೀಭಾಷ್ಯಂ ತಿರುವಾಯ್ಮೊಳಿಪ್ಪಿಳ್ಳೈ ಎಂದೂ ಹೆಸರಿನ ನಾನು ಬರೆದಿರುವ ಗ್ರಂಥಗಳು ಹದಿಮೂರು. ಅವುಗಳಲ್ಲಿ ಹನ್ನೆರಡನೆಯದು ಈ ದಶೋಪನಿಷದ್ವ್ಯಾಖ್ಯಾನ (ಪದಾರ್ಥ ದೀಪಿಕೆ). ಇದರ ಹತ್ತು ವಿಭಾಗಗಳಲ್ಲಿ ದಶಾವತಾರಗಳ ಹೋಲಿಕೆಗಳನ್ನು ಇಟ್ಟುಕೊಳ್ಳಲಾಗಿದೆ.

* * *

# ವಿಚಾರ ವೇದಿಕೆ

### ಸಿದ್ಧಾಂತದ ಹೇಳಿಕೆ

ಉಪನಿಷತ್ತಿನ ವಚನಗಳಿಂದ ಈ ಜಗತ್ತಿನ ಹುಟ್ಟು-ಬದುಕು ಸಾವುಗಳಿಗೆ ಬ್ರಹ್ಮವೇ ಕಾರಣವೆಂದು ತಿಳಿದು ಬರುವುದು. ಈ ಬ್ರಹ್ಮ ಎಲ್ಲವನ್ನೂ ನೋಡುತ್ತದೆ ಹಾಗೂ ಮಾಡುತ್ತದೆ. ಬ್ರಹ್ಮವು ಜ್ಞಾನಿ ಮತ್ತು ಎಲ್ಲೆಲ್ಲೂ ಹರಡಿದ್ದು ಸ್ವತಂತ್ರವಾಗಿದೆ. ಯಾವಾಗಲೂ ಸತ್ಯ ಮತ್ತು ನಿತ್ಯ. ಇದು ಆತ್ಮಗಳಿಗೂ ಆತ್ಮನಾಗಿ ಪರಮಾತ್ಮ ಎನಿಸಿದ ಲಕ್ಷ್ಮೀಪತಿ ಹಾಗೂ ಏಕೈಕ.

ಹೀಗೆಯೇ ಜೀವಾತ್ಮಗಳೂ ಜ್ಞಾನಿಗಳೇ, ಹಾಗೂ ನಿತ್ಯ ಮತ್ತು ಸತ್ಯ. ಆದರೆ ಇವು ಅಣುಗಳು ಮತ್ತು ಅನೇಕ; ಹಾಗೂ ಪರಮಾತ್ಮನಿಗೆ ಅಧೀನ. ಜೀವಾತ್ಮಗಳು ಪರಮಾತ್ಮನನ್ನು ಧ್ಯಾನಮಾಡಿ ಅವನನ್ನು ಸಾಕ್ಷಾತ್ಕರಿಸಿಕೊಂಡು ಅವನ ಕೆಲವು ಗುಣಗಳನ್ನೂ, ಶಕ್ತಿಗಳನ್ನೂ ಪಡೆದು ಅವನಿಗೆ ಸಮವೆನಿಸುತ್ತವೆ. ಹಾಗೂ ಪರಮಪದ ಎಂಬ ಪರಮಾತ್ಮನ ಲೋಕದಲ್ಲಿ ಸೇರಿ ಮತ್ತೆ ಈ ಪ್ರಕೃತಿಮಂಡಲಕ್ಕೆ

1. ಉಪೋದ್ಘಾತ ನೋಡಿ. 2. ಪರಿಶಿಷ್ಟನೋಡಿ. 3. ಪರಿಶಿಷ್ಟನೋಡಿ.

ಬರಲಾರವು. ಪರಮಾತ್ಮನೊಡನೆ ಕಲೆತು ಅವನು ಅನುಭವಿಸುವ ಆನಂದವನ್ನು ತಾವೂ ಅನುಭವಿಸುತ್ತವೆ. ಇಷ್ಟೆಲ್ಲಾ ಪರಮಾತ್ಮನೊಡನೆ ಸಮತೆ ಏರ್ಪಟ್ಟರೂ ಜಗತ್ತಿನ ಸೃಷ್ಟಿ–ಸ್ಥಿತಿ–ಸಂಹಾರಗಳನ್ನು ಇವು ಸ್ವತಂತ್ರ ವಾಗಿ ಮಾಡಲಾರವು. ಹಾಗೂ ಲಕ್ಷ್ಮಿಗೆ ಪತಿಯಾಗಲಾರವು. ಇವು ಲಕ್ಷ್ಮಿಗೆ ಮಕ್ಕಳಂತೆ ಇರುವುವಷ್ಟೆ. ಇದಿಷ್ಟೂ ಸಿದ್ಧಾಂತದ ಹೇಳಿಕೆ.

## ನಿರ್ಣಯಕ್ಕೆ ಸಹಾಯಕ ಅಂಶಗಳು

ಇಲ್ಲಿ ಒಂದು ವಿಚಾರ ಮಾಡುತ್ತೇವೆ. ಒಂದು ಮಾತಿನ ಸರಿಯಾದ ಅಭಿಪ್ರಾಯ ಇದೇ ಎಂದು ನಿರ್ಣಯಿಸಲು ಈ ಕೆಳ ಕಾಣಿಸಿರುವ ( ಆರು ) ಅಂಶಗಳು ಸಹಾಯಕಗಳಾಗಿರುತ್ತವೆ.

೧. ಆರಂಭದಸನ್ನಿವೇಶ ಮತ್ತು ಮುಗಿಸಿರುವ ಸಂದರ್ಭ. (ಉಪಕ್ರಮ ಮತ್ತು ಉಪಸಂಹಾರ)

೨. ಮಧ್ಯೆ ಮತ್ತೆ ಮತ್ತೆ ಒತ್ತಿಹೇಳಿರುವ ವಿಷಯ. (ಅಭ್ಯಾಸ)

೩. ಹೊಸ ಅಂಶಗಳು. (ಅಪೂರ್ವತಾ)

೪. ವಿಚಾರದಿಂದಾಗುವ ಮುಖ್ಯ ಪ್ರಯೋಜನ. (ಫಲ)

೫. ಐತಿಹಾಸಿಕ ಉದಾಹರಣೆಗಳು. (ಅರ್ಥವಾದ)

೬. ವಿಚಾರದ ನಿರ್ಣಯಕ್ಕೆ ಅನುಕೂಲವಾಗಿ ಎಲ್ಲರೂ ಒಪ್ಪುವಂತಹ ನಿರೂಪಣೆ. (ಉಪಪತ್ತಿ)

ಈ ಆರು ಅಂಶಗಳೊಡನೆ ಅಧ್ಯಾತ್ಮವಿಚಾರದಲ್ಲಿ ಶಿಷ್ಟರಾದ[1] ಜ್ಞಾನಿಗಳ ಆಚರಣೆ ಏನಿದೆ ಎಂಬು ದನ್ನೂ, ( ಹಿಂದಿನವರ ವಚನಗಳೇ ನಮಗೆ ಪರಮಾತ್ಮವಿಚಾರದಲ್ಲಿ ಆಧಾರವಾಗಿರುವುದರಿಂದ ) ಹಿಂದಿನವರ ವಚನಗಳಲ್ಲಿ ಪ್ರಕೃತಿ – ಮೂಲ ಶಬ್ದಗಳು, ಪ್ರತ್ಯಯ – ಮೂಲ ಶಬ್ದಗಳನ್ನು ವಿವಿಧವಾಗಿ ಬಳಸಲು ಸಹಾಯಕವಾಗಿ ಅವುಗಳೊಡನೆ ಸೇರಿಸಿಕೊಳ್ಳುವ ಶಬ್ದಾಂಶಗಳು ಇವನ್ನೆಲ್ಲ ಬಿಡಿಸಿ ನೋಡಿ, ಅದರ ಅನು ಸಾರ ಅರ್ಥ ಹೇಳುವುದನ್ನೂ ಗಮನಿಸಿ, ಪಕ್ಷಪಾತವಿಲ್ಲದೆ ಮಧ್ಯಸ್ಥಗಾರರಾದ ವಿದ್ವಾಂಸರು ಯಾವುದೇ ವಿಷಯವನ್ನೂ ನಿರ್ಣಯಿಸಬೇಕಾದುದು ಸಹಜ.

## ವಿವೇಚನೆ

ಹೀಗೆ ಹತ್ತು ಮುಖ್ಯ ಉಪನಿಷತ್ತುಗಳನ್ನೂ,[2] ಉಪನಿಷತ್ತಿನ ಅರ್ಥಗಳನ್ನೂ ಸಂದೇಹಕ್ಕೆ ಅವಕಾಶ ವಿಲ್ಲದಂತೆ ಹಾಗೂ ವಿರೋಧವಿಲ್ಲದಂತೆ ನಿರ್ಣಯಿಸಲೆಂದೇ ಇರುವ ಬ್ರಹ್ಮಸೂತ್ರಗಳನ್ನೂ,[3] ಉಪನಿಷತ್ತುಗಳ ಸಾರವಾದ ಗೀತೆ ಮತ್ತು ಅದರ ಪ್ರಯೋಗರೂಪವಾದ ವಿಷ್ಣುಸಹಸ್ರನಾಮಾಧ್ಯಾಯಗಳ[4] ಆರಂಭ– ಅಂತ್ಯಗಳನ್ನೂ, ಸ್ವಲ್ಪ ಆಲೋಚಿಸಿ ನೋಡಬೇಕು. ಹಾಗೂ ವೈದಿಕರಲ್ಲಿ ಶಿಷ್ಟರಾದವರ ಆಚರಣೆಗಳನ್ನೂ ಗಮನಿಸಬೇಕು. ಪ್ರಕೃತಿ ಪ್ರತ್ಯಯಗಳನ್ನು ವಿಂಗಡಿಸಿ ನೋಡಿ, ಒಟ್ಟು ವಾಕ್ಯದ ಅರ್ಥವನ್ನು ನಿರ್ಣಯಿಸಬೇಕು. ಹೀಗೆ ಮಾಡಿದರೆ ಸಿದ್ಧಾಂತದ ಹೇಳಿಕೆಯಲ್ಲಿರುವ ಅರ್ಥಗಳು ಸರಿಯೆಂದೂ ಇತರ ಅಂಶಗಳು ಸರಿಯಿಲ್ಲವೆಂದೂ

---

1. ಶಾಸ್ತ್ರಾನುಸಾರವಾಗಿ ನಡೆಯುವ.

2. ಈಶ–ಕೇನ-ಕಠ-ಪ್ರಶ್ನ-ಮುಂಡ-ಮಾಂಡೂಕ್ಯ–ತಿತ್ತಿರಿ।
ಐತರೇಯಂ ಚ ಛಾಂದೋಗ್ಯಂ ಬೃಹದಾರಣ್ಯಕಂ ದಶ॥

3. ಬ್ರಹ್ಮವಿಚಾರದ ಸಂಕ್ಷಿಪ್ತ ವಾಕ್ಯಗಳು. ಇದನ್ನು ಬರೆದವರು ವೇದವ್ಯಾಸರು.

4. ಮಹಾಭಾರತದಲ್ಲಿರುವ ವಿಷ್ಣುಸಹಸ್ರನಾಮಸ್ತೋತ್ರಭಾಗ.

ತಿಳಿಯುವುದು. ಇದನ್ನು ವಿಶೇಷರೀತಿಯಿಂದ ವಿಮರ್ಶಿಸಿ ತಿಳಿಯಬೇಕು. ಈ ಅಂಶವನ್ನು ನಾವೇ ರಚಿಸಿರುವ "ಸರ್ವವೇದಾಂತಸಾರಾರ್ಥ" ಎಂಬ ಗ್ರಂಥದಲ್ಲಿ ನೋಡಿ ತಿಳಿಯಿರಿ.

### ಉಪನಿಷತ್‌ಗಳಲ್ಲಿ ವಿಚಾರಗಳ ಕ್ರಮ

ಎಲ್ಲ ಉಪನಿಷತ್ತುಗಳ ವಿಚಾರಗಳನ್ನೂ ಒಂದು ಕ್ರಮದಲ್ಲಿ ಇಟ್ಟುಕೊಳ್ಳಬೇಕೆಂದು ತಮ್ಮದೇ ಆದ ಕ್ರಮದಿಂದ ಬ್ರಹ್ಮಸೂತ್ರಗಳು ತಿಳಿಸುತ್ತವೆ. ಆ ಕ್ರಮ ಈಶಾವಾಸ್ಯೋಪನಿಷತ್ತಿನಲ್ಲಿ ಸ್ವಾಭಾವಿಕವಾಗಿಯೇ ಇದೆ.

೧. ಜಗತ್ತಿನ ಸೃಷ್ಟಿ ಸ್ಥಿತಿ ಗತಿಗಳು.

೨. ಜೀವಾತ್ಮ ಪರಮಾತ್ಮಗಳ ನಿಜವಾದ ಸ್ಥಿತಿ ಗತಿಗಳು.

೩. ಜೀವಾತ್ಮನು ಮಾಡಬೇಕಾದ ಪರಮಾತ್ಮನ ಧ್ಯಾನ.

೪. ಜೀವಾತ್ಮನಿಗೆ ಸಂಸಾರಬಂಧವಿಲ್ಲದೆ ಪರಲೋಕ ಪ್ರಾಪ್ತಿ.

### 6. ಈಶಾವಾಸ್ಯದ ಅರ್ಥನಿರ್ಣಯ

ಈಶಾವಾಸ್ಯದ ಮೊದಲಲ್ಲೇ ಈ ಜಗತ್ತು ದೇವರ ವ್ಯಾಪ್ತಿಗೆ ಒಳಪಟ್ಟಿದೆಯೆಂದೂ, ದೇವರನ್ನು ಉಪಾಸನೆ ಮಾಡುವ ಜ್ಞಾನಿಯು ಬದುಕಿರುವವರೆಗೂ ಶಾಸ್ತ್ರವಿಹಿತವಾದ ಕರ್ತವ್ಯಗಳನ್ನು ಮಾಡುತ್ತಲೇ ಇರಬೇಕೆಂದೂ ತಿಳಿಸಲಾಗಿದೆ.

ಮಧ್ಯೆ ಇಂತಹ ಜ್ಞಾನಿಯ ಮಹತ್ವವನ್ನೂ "ಕವಿರ್ಮನೀಷೀ" ಎಂಬ ಸಂದರ್ಭದಲ್ಲಿ ಹೇಳಲಾಗಿದೆ. "ವಿದ್ಯಾಂ ಚ" ಮುಂತಾದ ಮಂತ್ರಗಳಲ್ಲಿ ವಿದ್ಯೆ ಮತ್ತು ಅವಿದ್ಯೆಗಳನ್ನೂ ಅವುಗಳ ಫಲಗಳನ್ನೂ ಹೇಳಲಾಗಿದೆ.

ಕೊನೆಯಲ್ಲಿ ಭಗವಂತನಾದ ಪರಮಾತ್ಮನ ದಿವ್ಯರೂಪವು ಜ್ಞಾನಿಗೂ ಬರುವುದೆಂದೂ, ಇಂತಹ ದಿವ್ಯಜ್ಞಾನಿಯನ್ನು ಪರಮಾತ್ಮನೂ ಸಹ ನೆನಪಿಟ್ಟುಕೊಂಡು ಮುನ್ನಡೆಸುತ್ತಾನೆ ಎಂದೂ ಹೇಳಲಾಗಿದೆ.

ಈ ರೀತಿ ಎಲ್ಲ ಉಪನಿಷತ್‌ಗಳಲ್ಲೂ ಹಠ ಮಾಡದೆ, ಇರುವ ಶಬ್ದಗಳಿಗೆ ಸರಿಯಾದ ಅರ್ಥವನ್ನಷ್ಟೆ ತಿಳಿದುಕೊಂಡು, ವಿವೇಕದಿಂದ ತತ್ತ್ವವನ್ನು[1] ನಿರ್ಣಯಿಸಬೇಕು.

* * *

## ಸುಬೋಧಿನೀ

### (ಶ್ರೀಗೋಪಾಲಾನಂದಸ್ವಾಮಿಯವರ[2] ರಚನೆ.)

### ಮಂಗಳಾಚರಣೆ

ಅನಂತವಾದ ಆನಂದದಿಂದ ಪರಿಪೂರ್ಣನಾದವನು ಸ್ವಾಮಿ ನಾರಾಯಣ. ಅವನ ಬಗ್ಗೆ ಹೊಗಳಲು ಹೊರಟು ವೇದಗಳೂ ಕೂಡ ಹಿಂದಿರುಗಿವೆಯೇ ಹೊರತು ಅವನ ಪೂರ್ಣತೆಯನ್ನು ಅನುಭವಿಸಲಾಗಿಲ್ಲ. ಇಂತಹ ನಾರಾಯಣನು ದಿವ್ಯವಾದ ತನ್ನ ವೈಕುಂಠಲೋಕದಲ್ಲಿ[3] ನಿತ್ಯ–ಮುಕ್ತರೆಲ್ಲರೊಡನೆ ಇರುವನು.

---

1. ತನ್ನ ಸಹಜವಾದ ರೀತಿಯಲ್ಲಿ ಇರುವ ವಸ್ತು.
2. ಉಪೋದ್ಘಾತ ನೋಡಿ.
3. ಪ್ರಕೃತಿಮಂಡಲದಿಂದ ಹೊರಗೆ ಶಾಶ್ವತವಾಗಿರುವ ಪರಮಾತ್ಮನ ಲೋಕ.

ಇವನು ಬಹಳ ಕರುಣಾಳು, ತನ್ನಷ್ಟಕ್ಕೆ ತಾನೇ ನಮ್ಮ ಮೇಲೆ ಕರುಣೆಯ ದೃಷ್ಟಿ ಬೀರುವನು. ಕೃಷ್ಣನಾಗಿ ಈ ಲೋಕಕ್ಕೆ ಇಳಿದು ಬಂದು ಕಾಣಿಸಿಕೊಳ್ಳುವನು. ನಮ್ಮನ್ನೆಲ್ಲಾ ತನ್ನವರನ್ನಾಗಿಸಿಕೊಂಡು ಕಾಪಾಡುವನು. ಇವನೇ ಈ ಜಗತ್ತಿನ–ಹುಟ್ಟು–ಸಾವು–ಇರವುಗಳಿಗೆ ಕಾರಣ.

ಎಲ್ಲ ಒಳ್ಳೆಯ ಗುಣಗಳೂ ಇವನಲ್ಲಿ ತುಂಬಿವೆ. ಇವನು ಜಗತ್ತಿನ ಜೀವಿ–ಹಾಗೂ ಜಡವಸ್ತುಗಳಿಗಿಂತ ಪ್ರತ್ಯೇಕವಾದ ಒಂದು ವಸ್ತು. ಸಮಸ್ತ ಜಗತ್ತಿನ ಒಳಗೂ ಹೊಕ್ಕು ಶಾಶ್ವತವಾಗಿರುವ ಅಂತರಾತ್ಮ. ಹೀಗೆ ಇವನು ಅಲ್ಲಲ್ಲೇ ದೇವತೆಗಳ ರೂಪದಲ್ಲೂ, ಮನುಷ್ಯ–ಪಶು–ಪಕ್ಷಿ–ವೃಕ್ಷ–ಜಲ–ಶಿಲಾದಿ ರೂಪದಲ್ಲೂ ಕಾಣಿಸಿಕೊಳ್ಳುವನು. ಇಂತಹ ಕೃಷ್ಣಪರಮಾತ್ಮನಿಗೆ ನಮಸ್ಕಾರ.

### ಪ್ರತಿಜ್ಞೆ

ಕಣ್ಣಿಗೆ ಕಾಣಿಸುವಂತಹ ಒಂದು ದೇವರ ರೂಪವೆನಿಸಿದ ಆಚಾರ್ಯರಾದ ಸಹಜಾನಂದರ ಪಾದಗಳನ್ನು ನೆನೆದು, ವೇದಾಂತವೆಂದು ಪ್ರಸಿದ್ಧವಾಗಿರುವ ಉಪನಿಷತ್‌ಗಳಿಗೆ ಸುಲಭವಾಗಿ ಅರ್ಥತಿಳಿಸುವ ವಿವರಣೆಯನ್ನು ಬರೆಯುತ್ತೇನೆ.

### ಈಶಾವಾಸ್ಯದ ಅರ್ಥಗಳೂ ಪ್ರಾರ್ಥನೆಯೂ

ಜಗತ್ತಿನ ಎಲ್ಲವನ್ನೂ ಮೀರಿಸಿರುವವನು ದೇವನೊಬ್ಬ. ಅವನ ವ್ಯಾಪ್ತಿಗೆ ಎಲ್ಲವೂ ಒಳಪಟ್ಟಿದೆ. ಈ ಜಗತ್ತಿನ ಎಲ್ಲ ವಿಧವಾದ ಕರ್ತವ್ಯಗಳೂ ಅವನನ್ನು ಸಂತೋಷಗೊಳಿಸಲೆಂದೇ. ಎಳ್ಳಷ್ಟೂ ಅವನಲ್ಲಿ ದೋಷವಿಲ್ಲ. ಎಲ್ಲ ಗುಣಗಳೂ ಅವನಲ್ಲಿ ತುಂಬಿವೆ. ಅವನದು ಅಚ್ಚರಿಗೊಳಿಸುವಂತಹ ವಿಚಿತ್ರವಾದ ಶಕ್ತಿ. ಅವನ ಬಗ್ಗೆ ತಿಳಿಯಬೇಕಾದರೆ ವೇದವಚನಗಳನ್ನು ಕಿವಿಯಾರ ಕೇಳಿ ತಿಳಿಯಬೇಕು. ಇವನನ್ನೇ "ಪುರುಷ" – ಜಡವಲ್ಲದ ಚೈತನ್ಯವಿರುವ ಅಸಾಧಾರಣ ವ್ಯಕ್ತಿ, "ಪೂಷಾ" – ಸೂರ್ಯನ ಒಳಗೂ ಇರುವ ಪರಮಾತ್ಮ "ಈಶ" – ಎಲ್ಲದರ ಒಡೆಯ ಎಂದೆಲ್ಲ ಕರೆಯಲಾಗಿದೆ. ಅವನು ನಮಗೆ ಶಾಶ್ವತವಾದ ಧರ್ಮವೊಂದರಲ್ಲೇ ಲಕ್ಷ್ಯವಿರುವಂತೆ ಮಾಡಿ ನಮ್ಮ ಅಜ್ಞಾನವನ್ನು ದೂರ ಸರಿಸಲಿ.

* * *

## ಶ್ರೀರಂಗಾಚಾರ್ಯರ[1] ವ್ಯಾಖ್ಯಾನ

### ಮಂಗಳಾಚರಣೆ

ಶ್ರೀಮಂತನಾಗಿ ಸುದರ್ಶನಚಕ್ರವನ್ನು[2] ಧರಿಸಿರುವ ತಿರುಪತಿಯ[3] ಶ್ರೀನಿವಾಸನು[4] ಸೂರ್ಯನಂತೆ ವೆಂಕಟಗಿರಿಯ[5]ಮೇಲೆ ಸದಾ ಉದಯಿಸಿರುವನು. ಆದರೂ ಅವನು ಧ್ಯಾನಿಸುವವರ ಹೃದಯದಲ್ಲೇ ನೆಲೆಸಿರುವನು. ಜನರ ಒಳ್ಳೆಯ ದಾರಿಗೆ ಅಡ್ಡಲಾಗುವ ಅಜ್ಞಾನವೆಂಬ ಕತ್ತಲೆಯನ್ನು ಅವನು ಜನರಿಗೆ ದರ್ಶನಕೊಡುವಾಗಲೇ ತನ್ನ ತೇಜಸ್ಸಿನಿಂದ ದಹಿಸಿಬಿಡಲಿ.

ಆದಿಶೇಷನ[6] ಅವತಾರಗಳಲ್ಲಿ ರಾಮಾನುಜರೂ[7] ಅವರ ಶಿಷ್ಯೋತ್ತಮರಾದ ಅನಂತಾಚಾರ್ಯರೂ[8] ರಾಮಾನುಜರ ಅಪರಾವತಾರವೆನಿಸಿದ ಮಣವಾಳಮಾಮುನಿಗಳೂ[9] ಮುಖ್ಯ. ಇವರಲ್ಲಿ ಮೊದಲ ಮತ್ತು ಕೊನೆಯವರಿಬ್ಬರೂ ಮಹಾಸಾಗರದಂತಹ ಉಭಯ–ವೇದಾಂತಗಳ[10] ಮಾರ್ಗದಲ್ಲಿ ನಮ್ಮನ್ನು

---

1. ಉಪೋದ್ಘಾತ ನೋಡಿ. 2. ಪರಮಾತ್ಮನಾದ ವಿಷ್ಣುವಿನ ಆಯುಧ. 3. ಆಂಧ್ರಪ್ರದೇಶದ ಪ್ರಸಿದ್ಧ ದಿವ್ಯಕ್ಷೇತ್ರ
4. ತಿರುಪತಿಯ ಬೆಟ್ಟದಮೇಲಿರುವ ಪರಮಾತ್ಮನ ಅರ್ಚಾಮೂರ್ತಿ. 5. ತಿರುಪತಿಯ ಬೆಟ್ಟ.
6. ಪರಮಾತ್ಮನ ಹಾಸಿಗೆಯಂತಿರುವ ದಿವ್ಯವಾದ ಹಾವು. 7. ಉಪೋದ್ಘಾತ ನೋಡಿ.
8. ಅನಂದಾಳ್ವಾರ್. 9. ವರವರಮುನಿ. 10. ಸಂಸ್ಕೃತ-ಮತ್ತು ದ್ರಾವಿಡ ವೇದಾಂತ.

ಕರೆದೊಯ್ದು ಕಡೆಹಾಯಿಸುವ ಸಮರ್ಥನಾವಿಕರು. ನಡುವಿನವರು ನನ್ನ ವಂಶಕ್ಕೆ ಮೂಲಪುರುಷರು. ಇವರ ಮಹಿಮೆಯೆಲ್ಲವೂ ಆ ಆದಿಶೇಷನದೇ. ಇಂತಹ ಆದಿಶೇಷನು ನಮಗೆ ವಿಜಯವನ್ನು ಕರುಣಿಸಲಿ.

ನನ್ನ ಹೃದಯವೇ ಒಂದು ರಥದಂತೆ. ಇದರ ಒಡೆಯ ಶ್ರೀಮನ್ನಾರಾಯಣ. ಅವನೇ ರಥಿಕ. ಶ್ರೀ ಭಾಷ್ಯಕಾರರಾದ ರಾಮಾನುಜರೇ ಸಾರಥಿಯಂತೆ. ಜಗದಾಚಾರ್ಯರೆನಿಸಿದ ಪಿಳ್ಳೈಲೋಕಾಚಾರ್ಯರೂ,[1] ಮಣವಾಳಮಾಮುನಿಗಳೂ ಉತ್ತಮ ಕುದುರೆಗಳಂತೆ. ಇವರೆಲ್ಲರೂ ಗಮನವಿರಿಸಿ, ನಾನು ದುರಹಂಕಾರಕ್ಕೆ ವಶನಾಗಿ ದುರ್ಮಾರ್ಗದಲ್ಲಿ ಬೀಳದಂತೆ ನೋಡಿಕೊಳ್ಳಲಿ. ಹಾಗೂ ಪ್ರಾಚೀನ ಆಚಾರ್ಯರ ವಿರುಪೇರಿಲ್ಲದ ಬರವಣಿಗೆಯ ಮಾರ್ಗದಲ್ಲೇ ನಡೆಸಲಿ.

## ಗ್ರಂಥರಚನೆಗೆ ಕಾರಣ

ವೇದಾಂತದ ಮಾರ್ಗಗಳು ಅಂಚಿನಲ್ಲಿ ಗೊಂಡಾರಣ್ಯದಂತಾಗಿವೆ. ಆದರೆ ವೇದಾಂತಗ್ರಂಥಗಳೆಂಬ ಕಾಡಿನೊಳಗೆ ಜ್ಞಾನಿಗಳಾದ ಮಹರ್ಷಿಗಳ ಜ್ಞಾನಭಂಡಾರ ನಮಗೆಲ್ಲ ಸಿಗದೆ ಕೂತಿದೆ. ವೇದಾಂತಗಳನ್ನು ರಾಜಮಾರ್ಗದಂತೆಯೂ ಅದರ ಅಂಚುಗಳನ್ನು ಸುಂದರವಾದ ತೋಟಗಳಂತೆಯೂ ಮಾಡಲು ಹವಣಿ ಸುತ್ತಿರುವ ಈ ಗ್ರಂಥಕರ್ತನಾದ ಶ್ರೀರಂಗನ ಅಂತರಂಗವನ್ನು ಶ್ರೀನಿವಾಸನು ಸಫಲಗೊಳಿಸಲಿ.

## ಗ್ರಂಥಕರ್ತ ಯಾರು?

ತಿರುಮಲೈ ಅನಂದಾಣ್ ಪಿಳ್ಳೈ ಆಚಾರ್ಯಪೀಠಾಧಿಪತಿಯಾಗಿರುವ ಪುರಿಶೈ ಶ್ರೀರಂಗಾಚಾರ್ಯಪಂಡಿತನು ಈಶಾವಾಸ್ಯೋಪನಿಷತ್ತಿಗೆ ಭಾಷ್ಯರೂಪವಾದ ವ್ಯಾಖ್ಯಾನವನ್ನು ವಿಸ್ತಾರವಾಗಿ ಬರೆಯುತ್ತಿದ್ದಾನೆ.

## ಈಶಾವಾಸ್ಯವು ಜ್ಞಾನಕಾಂಡ

ಶುಕ್ಲಯಜುರ್ವೇದಕ್ಕೆ ವಾಜಸನೇಯಶಾಖೆ ಎಂದೂ ಹೆಸರು. ಇದರಲ್ಲಿ ಕಾಣ್ವರ ಪಾಠ[2] ಒಂದು, ಮಾಧ್ಯಂದಿನರ ಪಾಠ[3] ಮತ್ತೊಂದು. ಇವುಗಳಲ್ಲಿ ನಲವತ್ತು ಅಧ್ಯಾಯಗಳಿವೆ. ಮೂವತ್ತೊಂಬತ್ತು ಅಧ್ಯಾಯ ಗಳೂ ಕರ್ಮಕಾಂಡ. ನಲವತ್ತನೆಯ ಅಧ್ಯಾಯವೇ ಈಶಾವಾಸ್ಯೋಪನಿಷತ್ತು. ಇದರಲ್ಲಿ ಕಾಣ್ವರು ಹದಿನೆಂಟು ಮಂತ್ರಗಳನ್ನೂ ಮಾಧ್ಯಂದಿನರು ಹದಿನೇಳು ಮಂತ್ರಗಳನ್ನೂ ಉಪದೇಶಕ್ರಮದಲ್ಲಿ ಪಠಿಸುತ್ತಾರೆ.

ವೇದದಲ್ಲಿ ಯಜ್ಞಯಾಗಾದಿ ಕರ್ಮಗಳನ್ನೂ ಅವುಗಳ ಅಂಗಗಳನ್ನೂ ವಿವರಿಸುವ ಭಾಗಗಳಿಗೆ ಕರ್ಮ ಕಾಂಡವೆಂದು ಹೆಸರು. ಇವು ವಿವಿಧವಾದ ಮಂತ್ರಗಳ ಸಂಕಲನ ರೂಪವಾಗಿವೆ. ಆದುದರಿಂದಲೇ ಇವುಗಳಿಗೆ ಸಂಹಿತೆ ಎಂದೂ ಹೆಸರು. ಈಶಾವಾಸ್ಯಮಂತ್ರಗಳು ಈ ಭಾಗದಲ್ಲೇ ಇರುವುವು.

ಮಂತ್ರಗಳನ್ನು ಎಲ್ಲಿ ಹೇಗೆ ಬಳಸಬೇಕೆಂದು ತಿಳಿಸುವ ಗ್ರಂಥಗಳಿಗೆ ಕಲ್ಪಸೂತ್ರಗಳೆಂದು ಹೆಸರು. ಇವನ್ನು ಬರೆದವರು ಮಹರ್ಷಿಗಳು. ಅವರಾರೂ ಈಶಾವಾಸ್ಯಮಂತ್ರಗಳನ್ನು ಎಲ್ಲೂ ಬಳಸಿರುವುದಿಲ್ಲ.

ಹೀಗೆ ಬಳಸದಿದ್ದರೂ "ದೇವತೆಗಳಿಗೆ ಆಸರೆಯಾದ ದರ್ಭೆಹುಲ್ಲನ್ನು ಕುಯ್ಯುವೆನು"[4] ಮುಂತಾದ ಅರ್ಥದ ಮಂತ್ರಗಳಲ್ಲಿ ಮಾಡಬೇಕಾದ ಕರ್ಮಗಳನ್ನೇ ತಿಳಿಸಿರುವಂತೆ ಈಶಾವಾಸ್ಯಮಂತ್ರಗಳಲ್ಲಿ ವಿಶಿಷ್ಟ ಕರ್ಮರೂಪವಾದ ಅಂಶದ ಗುರುತುಗಳಿಲ್ಲ. ತದ್ವಿರುದ್ಧವಾಗಿ ಈ ಮಂತ್ರಗಳಲ್ಲಿ ಜೀವಾತ್ಮ – ಪರಮಾತ್ಮ

---

1. ವರವರಮುನಿಗಳ ಆಚಾರ್ಯರ ಆಚಾರ್ಯರು.
2. ಉಪೋದ್ಘಾತ ನೋಡಿ.
3. ಉಪೋದ್ಘಾತ ನೋಡಿ.
4. ಬರ್ಹಿರ್ದೇವಸದನಂ ದಾಮಿ; ಶತ.ಬ್ರಾ.

ತತ್ತ್ವಗಳ ಬಗ್ಗೆ ಆಳವಾದ ನಿಜವಾದ ವಿಮರ್ಶೆ ಇದೆ. ಇದರಿಂದ ಜ್ಞಾನಭಾಗಕ್ಕೆ ಸಂಬಂಧಿಸಿದ ಇವು ಜ್ಞಾನಕಾಂಡವೆನಿಸುತ್ತವೆಯೇ ಹೊರತು ಕರ್ಮಕಾಂಡದಲ್ಲಿದ್ದರೂ ಕರ್ಮಕಾಂಡವಲ್ಲ.

## ಜ್ಞಾನ ಕಾಂಡವು ಕರ್ಮಕಾಂಡದಲ್ಲೇ ಹೇಗೆ ?

ಹೀಗೆ ಈ ಉಪನಿಷತ್ತು ಜ್ಞಾನಕಾಂಡವೇ ಆಗಿದ್ದ ಪಕ್ಷಕ್ಕೆ ಇದೇ ವಾಜಸನೇಯಶಾಖೆಯ ಜ್ಞಾನಕಾಂಡ ಭಾಗವಾದ ಬೃಹದಾರಣ್ಯಕೋಪನಿಷತ್ತಿನಲ್ಲಿ ಇದನ್ನು ಸೇರಿಸಬೇಕಾಗಿತ್ತಲ್ಲವೇ ? ಆದರೆ ಹಾಗಿಲ್ಲವಷ್ಟೆ! ಮತ್ತು ಇದನ್ನು ಕರ್ಮಕಾಂಡದಲ್ಲೇ ಸೇರಿಸಿರುವಂತೆ ಬೃಹದಾರಣ್ಯಕೋಪನಿಷತ್ತನ್ನೂ ಸೇರಿಸಬಹುದಿತ್ತಲ್ಲ?

ಹೀಗೆ ಪ್ರತ್ಯೇಕ ಜ್ಞಾನಕಾಂಡದಲ್ಲಿ ಸೇರದೆ ಕರ್ಮಕಾಂಡದಲ್ಲೇ ಸೇರಿರುವುದರಿಂದ ಈಶಾವಾಸ್ಯವು ಕರ್ಮಕಾಂಡಕ್ಕೆ ಅಂಗವಿರಬಹುದು ! ಎಂದೂ ಆರೋಪಿಸಲು ಅವಕಾಶವಿದೆ.

ಆದರೆ ಹಾಗಲ್ಲ. ಇದರಲ್ಲಿರುವ ಕೆಲವು ಮುಖ್ಯಮಂತ್ರಗಳನ್ನೇ ಜ್ಞಾನಕಾಂಡವಾದ ಬೃಹದಾರಣ್ಯಕೋಪನಿಷತ್ತಿನಲ್ಲಿ ಆರನೆಯ ಅಧ್ಯಾಯದ ನಾಲ್ಕನೇ ಬ್ರಾಹ್ಮಣ[1] ಮತ್ತು ಏಳನೆಯ ಅಧ್ಯಾಯದ ಹದಿನೈದನೆಯ ಬ್ರಾಹ್ಮಣಗಳಲ್ಲಿ ಅಲ್ಪವ್ಯತ್ಯಾಸದಿಂದ ಪಠಿಸಿರುತ್ತಾರೆ. ಇವು ಜ್ಞಾನಕಾಂಡವೆಂಬುವುದಕ್ಕೆ ಇದೇ ಗುರುತು. ಹಾಗೂ ಕರ್ಮಕಾಂಡದಲ್ಲಿ ಹೇಳಿರುವ ಕರ್ಮಗಳನ್ನೇ ಆತ್ಮಜ್ಞಾನಪೂರ್ವಕವಾಗಿ ಫಲ–ಸಂಗ–ಕರ್ತೃತ್ವಗಳನ್ನು[2] ಬಿಟ್ಟು ಮಾಡಿದರೆ ಆ ಕರ್ಮಗಳೇ ಜ್ಞಾನದ ಪರಿಪಕ್ವಾವಸ್ಥೆಯಾದ ಬ್ರಹ್ಮವಿದ್ಯೆಗೆ ಸಹಾಯಕ ಅಂಗಗಳಾಗುತ್ತವೆ. ಈ ರಹಸ್ಯವನ್ನು ತಿಳಿಸಲೆಂದೇ ಕರ್ಮಕಾಂಡದ ಕೊನೆಯ ಅಧ್ಯಾಯವಾದ ಈಶಾವಾಸ್ಯದಲ್ಲಿ ಸಂಕ್ಷಿಪ್ತವಾಗಿ ಜ್ಞಾನಕಾಂಡರಹಸ್ಯವನ್ನೂ ಒಡಗೂಡಿಸಿ ಹೇಳಿರುವುದು ಔಚಿತ್ಯಪೂರ್ಣವಾಗಿದೆ.

ಹೀಗಾಗಿ ಈ ಉಪನಿಷತ್ತು ಕರ್ಮಕಾಂಡದ ಕೊನೆಯಲ್ಲಿದ್ದೂ ಜ್ಞಾನಕಾಂಡ ಎನಿಸಿದೆ.

---

1. ಇದು ಉಪನಿಷತ್ತಿನ ಅಧ್ಯಾಯದ ವಿಭಾಗಗಳ ಹೆಸರು.
2. ಈ ಫಲ ನನಗೆ, ಈ ಕೆಲಸ ನನ್ನದು, ಮಾಡುವವನು ನಾನು ಎಂಬ ಅಂಶ, ಇವನ್ನು ಬಿಡುವುದೇ ತ್ರಿವಿಧತ್ಯಾಗ.



# ಈಶಾವಾಸ್ಯೋಪನಿಷತ್

## ಮಂತ್ರ ಒಂದು

ಈಶಾ ವಾಸ್ಯಮಿದಂ ಸರ್ವಂ ಯತ್ ಕಿಂ ಚ ಜಗತ್ಯಾಂ ಜಗತ್।
ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯ ಸ್ವಿದ್ ಧನಂ ॥ ೧ ॥

### ಅನ್ವಯಾನುಸಾರ ಪ್ರತಿಪದಾರ್ಥ

**ಜಗತ್ಯಾಂ** — ಈ ಭೂಮಿಯಲ್ಲಿ ಮಾತ್ರವಲ್ಲದೆ ಸಮಸ್ತ ಜಗತ್ತಿನಲ್ಲೂ; **ಯತ್ ಕಿಂ ಚ** — ಯಾವುದೇ ಒಂದನ್ನೂ ಬಿಡದೆ; **ಜಗತ್** — ವ್ಯತ್ಯಾಸವಾಗುತ್ತಿರುವ; **ಇದಂ** — ಈ; **ಸರ್ವಂ** — ಎಲ್ಲವೂ; **ಈಶಾ** — ಎಲ್ಲವರ ಒಡೆಯನಾದ ಪರಮಾತ್ಮನಿಂದ; **ವಾಸ್ಯಂ** — ವ್ಯಾಪಿಸಲ್ಪಟ್ಟಿದೆ; **ತ್ಯಕ್ತೇನ** — ಹೇಗೆ ತ್ಯಾಗಮಾಡಬೇಕೋ ಹಾಗೆ ಮಾಡಿದ; **ತೇನ** — ಆಯಾ ವಸ್ತುವಿನಿಂದ; **ಭುಂಜೀಥಾಃ** — ಭೋಗಪಡು. **ಕಸ್ಯ ಸ್ವಿತ್** — ಬೇರೆ ಯಾವೊಬ್ಬನ ಪಾಲಿನ; **ಧನಂ** — ಯಾವುದೇ ವಸ್ತುವನ್ನೂ; **ಮಾ ಗೃಧಃ** — ಆಸೆ ಪಡಬೇಡ.

### ಛಾಯಾಪದ್ಯ

ಈಶಗೆ ವಾಸ್ಯವಿದೆಲ್ಲವು ಏನಿನಿತಿಳೆಯೊಳು ಗತಿಸುತ ಇರುತಿಹುದೋ;
ಅದರಿಂ ದಾನದಿ ಭೋಗಿಸು, ಪಡಬೇಡಾಸೆಯನಾವೊಬ್ಬನ ಧನಕೂ.

## ತಾತ್ಪರ್ಯಾರ್ಥ

### ಲೋಕ ಈಶ್ವರನದು

ಈ ಜಗತ್ತಿನಲ್ಲಿ ಯಾವಯಾವುದು ಇದೆಯೋ ಅದೆಲ್ಲ ಈಶ್ವರನ ಮನೆ; ಮತ್ತು ಅದಕ್ಕೆಲ್ಲಾ ಈಶ್ವರನು ಮನೆ. ಈ ಜಗತ್ತನ್ನು ನೀನು ನನ್ನದಲ್ಲವೆಂಬ ಭಾವದಿಂದ ಅನುಭವಿಸತಕ್ಕದ್ದು; ಮತ್ತು ಇದು ನಿನಗೆ ಈಶ್ವರನಿಂದ ಬಂದ ಪ್ರಸಾದವೆಂದು ಅನುಭವಿಸತಕ್ಕದ್ದು. ಯಾರೊಬ್ಬರ ಒಡವೆಗಾಗಿಯೂ ಆಸೆಪಡಬೇಡ. ಒಡವೆ ಯಾವುದೇ ಆಗಲಿ, ಅದು ಯಾರದು? ಈಶ್ವರನದೇ ಎಂದು ಭಾವ.

### ಸ್ವತಂತ್ರ ಭ್ರಾಂತಿ

ಮಾನವರು ಈ ಪ್ರಪಂಚದಲ್ಲಿ ಶುಭ ಅಶುಭ ಕೆಲಸಗಳನ್ನು ಮಾಡುತ್ತಲೇ ಇರುತ್ತಾರೆ. ಅವರು ಮಾಡಿದ ಆ ಕರ್ಮಗಳ ಫಲವನ್ನು ಅನುಭವಿಸಲು ಇಲ್ಲಿ ಹುಟ್ಟಿ ಅಳಿಯುತ್ತಲಿದ್ದಾರೆ. ಇವರು ಅಧಿಕವಾದ ರಜೋಗುಣ ತಮೋಗುಣಗಳ[1] ಪ್ರಭಾವದಿಂದ ತಮ್ಮನ್ನು ಸ್ವತಂತ್ರರೆಂದು ತಿಳಿದು, ಎಲ್ಲ ಸುಖಭೋಗಗಳನ್ನು ತಾವೇ ಅನುಭವಿಸುವವರೆಂದು ಭಾವಿಸುತ್ತಾರೆ.

---

1. ಜಗತ್ತಿನ ಹುಟ್ಟಿಗೆ ಕಾರಣವಾದ ಜಡವಸ್ತುವೇ ಪ್ರಕೃತಿ. ಇದರಲ್ಲಿ ಸತ್ತ್ವ, ರಜಸ್, ತಮಸ್ ಎಂಬ ಗುಣಗಳಿವೆ. ರಜೋಗುಣವು ಇಂದ್ರಿಯಗಳ ಆಸೆಯನ್ನು ಹುಟ್ಟಿಸುವುದು. ತಮೋಗುಣವು ಮಾಡಬೇಕಾದ ಕೆಲಸದಲ್ಲಿ ತೊಡಗದಂತೆ ಮಾಡಿ, ಮಾಡಬಾರದ ಕೆಲಸದಲ್ಲಿ ತೊಡಗಿಸುತ್ತದೆ. ಸೋಮಾರಿತನ ನಿದ್ರೆಗಳು ಇದರಿಂದ ಉಂಟಾಗುತ್ತವೆ.

## ಪರದೇವತಾ ಭ್ರಾಂತಿ ಮತ್ತು ಅದರ ನಿವಾರಣೆ

ಮತ್ತೆ ಕೆಲವರು ಸಕಲಲೋಕರಕ್ಷಕನೂ ನಾಯಕನೂ ಆದ ಶ್ರೀಮನ್ನಾರಾಯಣನಿಗಿಂತ ಬೇರೆ ದೇವತೆಯನ್ನು ಪರಬ್ರಹ್ಮನೆಂದು ಆರಾಧಿಸುತ್ತಾರೆ. ಇಂತಹವರ ಭ್ರಮೆಯನ್ನು ವೇದಪುರುಷನು[1] "ಈಶಾ ವಾಸ್ಯಂ" ಎಂಬ ಮಾತಿನಿಂದ ಹೋಗಲಾಡಿಸುತ್ತಾನೆ. ಈ ವಿಚಿತ್ರವಾದ ಪ್ರಪಂಚದಲ್ಲಿ ಹುಲ್ಲಿನ ತೆಂಡೆಯಿಂದ ಹಿಡಿದು ಬ್ರಹ್ಮನ ವರಗೆ ಜಡ ಮತ್ತು ಚೇತನರು ವಾಸವಾಗಿದ್ದಾರೆ, ಇವರೆಲ್ಲರಲ್ಲಿಯೂ ಸಕಲೈಶ್ವರ್ಯಪರಿಪೂರ್ಣನೂ, ಅನಂತ ಕಲ್ಯಾಣಭರಿತನೂ, ದೋಷಗಂಧರಹಿತನೂ, ಸಕಲಲೋಕನಿಯಾಮಕನೂ, ರಕ್ಷಕನೂ, ನಾಶಕನೂ ಆದ ಶ್ರೀಮನ್ನಾರಾಯಣನು ವ್ಯಾಪಿಸಿದ್ದಾನೆ. ಅವನೇ ಪರಮಾತ್ಮ. ಪರಮಾತ್ಮನಿರದ ಎಡೆಯು ಯಾವುದೂ ಇಲ್ಲ ಎಂದು ತಿಳಿ. ಆದುದರಿಂದಲೇ ಸ್ಮೃತಿಕಾರರು[2] ಈತನನ್ನು "ವಾಸುದೇವ" ಎಂದೂ ಕರೆಯುತ್ತಾರೆ. ಹೀಗಾಗಿ ಯಾವ ಜೀವನೂ ಸ್ವತಂತ್ರನಲ್ಲ.

### ಜಗತ್ತು

ಪರಮೇಶ್ವರನ ಸಂಕಲ್ಪದಿಂದ ಜಡವಸ್ತುಗಳು ಜೀವದ ಉಪಭೋಗಕ್ಕೆ[3] ಅನುಕೂಲವಾಗಿ ಅನೇಕ ಸ್ವರೂಪವಿಕಾರವನ್ನು ಪಡೆಯುತ್ತವೆ. ಜೀವರು ತಮ್ಮ ತಮ್ಮ ಕರ್ಮಾನುಗುಣಫಲವನ್ನು ಅನುಭವಿಸಲು ತಮ್ಮ ಜ್ಞಾನವಲ್ಲಿ ಸಂಕೋಚ–ವಿಕಾಸಗಳನ್ನು ಹೊಂದುತ್ತಾರೆ. ಹೀಗೆ ವ್ಯತ್ಯಾಸಹೊಂದುವ ಪದಾರ್ಥಗಳನ್ನೇ 'ಜಗತ್' ಎಂದು ಕರೆಯುತ್ತಾರೆ.

### ಜೀವಿಸುವ ಬಗೆ

ಸಂಸಾರದಲ್ಲಿ ಸಿಹಿ–ಕಹಿಗಳನ್ನು ಅನುಭವಿಸಿ, ಜನನ – ಮರಣ – ಚಕ್ರದಿಂದ ಬಿಡುಗಡೆಯನ್ನು ಬಯಸುವ ಮೋಕ್ಷಾಭಿಲಾಷಿಯು ತನ್ನ ಗುರಿಯನ್ನು ಸಾಧಿಸಿಕೊಳ್ಳಲು ಸಾಧಕವಾದ ಜೀವನಕ್ರಮವನ್ನು ವೇದಪುರುಷನು ಉಪದೇಶಿಸುತ್ತಾನೆ, "ತೇನ ತ್ಯಕ್ತೇನ" ಎಂಬುವುದರಿಂದ.

ಈ ಜಗತ್ತು ತಾನು ಸುಖಕ್ಕೆ ಸಾಧನ ಎಂಬ ಭ್ರಾಂತಿಯನ್ನು ಹುಟ್ಟಿಸುತ್ತದೆ. ವಿವೇಕಶಾಲಿಯಾದವನು ಪರೀಕ್ಷಿಸಿದಾಗ ಇದರಲ್ಲಿ ಬಹಳ ದೋಷಗಳನ್ನು ಕಾಣಬಹುದು. ಇದು ಅಲ್ಪವಾದುದು; ಅಸ್ಥಿರವಾದುದು; ದುಃಖಕ್ಕೆ ಕಾರಣವಾದುದು; ದುಃಖಮಿಶ್ರಿತವಾದುದು; ದೇಹವೇ ಆತ್ಮವೆಂಬ ಭ್ರಮೆಯನ್ನು ಹುಟ್ಟಿಸುವುದು; ಪರಮಾತ್ಮನ ಅನುಭವಪಡೆಯಲು ಅಡ್ಡಿಯಾಗಿರುವುದು. ಆದುದರಿಂದ ಇದನ್ನು ನಿರ್ಲಕ್ಷಿಸಬೇಕು. ಶರೀರ ಇರುವವರೆಗೆ ಬದುಕಿರಲೇಬೇಕಾದುದರಿಂದ, ಶರೀರಧಾರಣೆಗೆ ಮಾತ್ರ ಉಪಯುಕ್ತವಾದ, ಶಾಸ್ತ್ರನಿಷಿದ್ಧವಲ್ಲದ, ವಸ್ತುವನ್ನು ಉಪಭೋಗಿಸಬೇಕು. ಆ ಉಪಭೋಗಕಾಲದಲ್ಲಿ ಸರ್ವವ್ಯಾಪಕನಾದ ನಾರಾಯಣನೇ ಕರ್ತೃವೆಂದೂ ಆತನಿಗೆ ಉಪಭೋಗದ ಫಲ ಸೇರತಕ್ಕದ್ದೆಂದೂ, ತನಗೆ ಕರ್ಮದ ಸಂಬಂಧವು ಎಳ್ಳಷ್ಟಿಲ್ಲವೆಂದೂ ಭಾವಿಸುತ್ತಾ ಶರೀರಯಾತ್ರೆಯನ್ನು[4] ಕಳೆಯಬೇಕು.

ನೀನು, ಅತ್ಯಂತ ಆಪ್ತನಾದ ಬಂಧುವಿನ ವಸ್ತುವನ್ನೂ ಅಪೇಕ್ಷಿಸಬೇಡ, ಅಲ್ಲದೆ ನಿನ್ನ ವಿರೋಧಿಯ ಹಣವನ್ನೂ ಅಪೇಕ್ಷಿಸದೆ ಜೀವನವನ್ನು ನಡೆಸು.

---

1. ಎಲ್ಲ ವೇದಗಳನ್ನೂ ತಪಸ್ಸಿನ ಬಲದಿಂದ ಕಂಡ 'ಅಪಾಂತರತಮಾ' ಎಂಬ ಮಹರ್ಷಿ.
2. ವೇದಾರ್ಥವನ್ನು ನೆನಪಿಗೆ ತರುವ ಧರ್ಮಗ್ರಂಥಗಳನ್ನು ಬರೆದ ಮನು ಮುಂತಾದವರು.
3. ಉಪಯೋಗಿಸಿ ಆನಂದಪಡುವುದು. 4. ಬದುಕನ್ನು

# ವೇದಾಂತಾಚಾರ್ಯಭಾಷ್ಯ

* * *

## ಎಲ್ಲವೂ ದೇವರ ವಶದಲ್ಲಿದೆ

ಈ ಮೊದಲ ಮಂತ್ರ, ಜಡಪ್ರಕೃತಿಯ ವಿಕೃತರೂಪಗಳೊಡನೆ ಬೆರೆತು ತಾನೇತಾನೆಂದು ವಿಜೃಂಭಿಸುವ ಜೀವಾತ್ಮಗಳ ಈ ಸ್ವಾತಂತ್ರ್ಯ ಭ್ರಮೆ ಮೊದಲಾದುವನ್ನು ಪರಿಹರಿಸಿಕೊಡುವುದಕ್ಕಾಗಿ, ಎಲ್ಲ ವಸ್ತುಗಳ ಸ್ವರೂಪ, ಇರವು, ಪ್ರಯತ್ನ, ಎಲ್ಲವೂ ಪರಮಪುರುಷ[1]ನೊಬ್ಬನ ವಶದಲ್ಲಿದೆ ಎಂಬುದನ್ನು ತಿಳಿಸುತ್ತದೆ.

## ಪ್ರತಿಪದಾರ್ಥ ಮತ್ತು ವಿಶೇಷ

**ಇದಂ** — ಆಯಾ ಪ್ರಮಾಣಗಳಿಂದ ಎಲ್ಲರಿಗೂ ಒಪ್ಪಿಗೆಯಾಗಿರುವ ವಸ್ತುಗಳಲ್ಲಿ ಪರಮಾತ್ಮನನ್ನುಳಿದು ಇತರ ಎಲ್ಲ ಜಡ ಜೀವವಸ್ತುಗಳು.

**ಈಶಾ** — ಎಲ್ಲವನ್ನೂ ಆಳುವ ಪುರುಷೋತ್ತಮನೊಬ್ಬನಿಂದ.

ಇವನು ಜೀವಾತ್ಮಗಳಿಗಿಂತ ಅನೇಕರೀತಿಗಳಲ್ಲಿ ಬೇರೆಯಾದವನೇ ಎಂಬುದು, "ತಿಳಿದವನು ಒಬ್ಬ, ತಿಳುವಳಿಕೆ ಇಲ್ಲದವನೂ ಒಬ್ಬ, ಇಬ್ಬರೂ ಹುಟ್ಟು ಸಾವಿಲ್ಲದವರು, ಒಬ್ಬ ಒಡೆಯ, ಮತ್ತೊಬ್ಬ ಅವನ ಆಳು"[2], ಮುಂತಾದ ವಚನಗಳಿಂದ ಪ್ರಸಿದ್ಧವಾಗಿದೆ.

**ವಾಸ್ಯಂ** — ವ್ಯಾಪಿಸಲ್ಪಟ್ಟಿದೆ ಎಂದರ್ಥ. ಅಥವಾ ಎಲ್ಲಕ್ಕೂ ಆಸರೆಯಾದ ತನ್ನಲ್ಲೇ, ತನ್ನಿಂದಲೇ ವಾಸ ಇರಿಸಲ್ಪಟ್ಟಿದೆ.

ಸ್ಮೃತಿಗ್ರಂಥಗಳಲ್ಲಿ ಇದರ ನೆನಪು ಮಾಡಿಸುತ್ತಾರೆ. "ಇವನು ಎಲ್ಲೆಲ್ಲೂ ಇರುವನು; ಎಲ್ಲವೂ ಇವನಲ್ಲಿ ವಾಸಿಸುವುದು; ಎಂಬ ಕಾರಣದಿಂದಲೇ ಇಂತಹವನನ್ನು 'ವಾಸುದೇವ' ಎಂದು ವಿದ್ವಾಂಸರು ಹೇಳುವರು"[3] ಎಂದು.

**ಜಗತ್ಯಾಂ** — ಇದರಿಂದ ಲೋಕಾನ್ತರವೆಲ್ಲವೂ ಸೂಚಿತವಾಗುವುದು.

**ಜಗತ್** — ಸ್ವರೂಪದಿಂದಾಗಲಿ, ಸ್ವಭಾವದಿಂದಾಗಲಿ, ವ್ಯತ್ಯಾಸವನ್ನು ಹೊಂದುತ್ತಲೇ ಇರುವ, ಅನುಭವಿಸಲ್ಪಡುವ ವಸ್ತುಗಳು ಅನುಭವಿಸುವ ನಾವು ಈ ಎಲ್ಲವೂ.

ಪರಮಾತ್ಮನನ್ನು ಒಳಗೊಳ್ಳದುದು ಯಾವುದೂ ಇಲ್ಲ ಎಂಬುದನ್ನು ದೃಢಪಡಿಸಲು **'ಯತ್ಕಿಂಚ'** ಎಂಬ ವಿಶೇಷಶಬ್ದವನ್ನು ಉಪಯೋಗಿಸಲಾಗಿದೆ. "ಇಂದ್ರಿಯಗಳು, ಮನಸ್ಸು, ಬುದ್ಧಿ, ಸತ್ವಗುಣ, ತೇಜಸ್ಸು, ಬಲ, ಧೃತಿ, ಕ್ಷೇತ್ರವೆನಿಸುವ ಶರೀರಾದಿಗಳು, ಕ್ಷೇತ್ರಜ್ಞ ಎನಿಸುವ ಜೀವಾತ್ಮ, ಇವೆಲ್ಲವೂ ವಾಸುದೇವನನ್ನು ಒಳಗೊಂಡೇ ಇವೆ, ಎನ್ನುವರು"[4] ಎಂದು ಈ ವಿಷಯ ವಿವರಿಸಲ್ಪಟ್ಟಿದೆ.

---

1. ಪರಮಾತ್ಮ
2. ಜ್ಞಾಜ್ಞೌ ದ್ವಾವಜಾವೀಶನೀಶೌ. ಶ್ವೇ.೧.೯.
3. ಸರ್ವತ್ರಾಸೌ ಸಮಸ್ತಂ ಚ ವಸತ್ಯತ್ರೇತಿ ವೈ ಯತಃ ।
   ತತಸ್ಸ ವಾಸುದೇವೇತಿ ವಿದ್ವದ್ಭಿಃ ಪರಿಪಠ್ಯತೇ॥ ವಿ. ಪು. ೧.೨.೧೨.
4. ಇಂದ್ರಿಯಾಣಿ ಮನೋ ಬುದ್ಧಿಸ್ಸತ್ತ್ವಂ ತೇಜೋ ಬಲಂ ಧೃತಿಃ।
   ವಾಸುದೇವಾತ್ಮಕಾನ್ಯಾಹುಃ ಕ್ಷೇತ್ರಂ ಕ್ಷೇತ್ರಜ್ಞ ಏವ ಚ॥ ವಿ. ಸ. ಭಾ. ಅನು. ೧೪೯.೧೩೬.

## ಈಶನು ರುದ್ರನೆ ?

''ಪ್ರಸಿದ್ಧವಾಗಿ ಬಳಕೆಯಲ್ಲಿರುವ ಅರ್ಥ ಒಂದಿರುವಾಗ ಪದಗಳಿಗೆ ಅಕ್ಷರಾರ್ಥವನ್ನು[1] ಸ್ವೀಕರಿಸಬಾರದು'' ಎಂಬುದು ಒಂದು ನಿಯಮ.[2] ಅದರಂತೆ ಇಲ್ಲಿ ''ಈಶ'' ಎಂಬ ಪದಕ್ಕೆ "ರುದ್ರ" ಎಂದು ಅರ್ಥವಾಗಬಹುದಲ್ಲ? ಹಾಗೂ "ಸರ್ವ" ಮುಂತಾದ ಪದಗಳೂ ಸಹ ಇದರೊಡನೆ ಸೇರುವುದಿಲ್ಲ ಎಂಬುದೂ ಒಂದು ಕಾರಣವಿ ಯಲ್ಲ ? ಎಂದು ಆಕ್ಷೇಪಿಸಬಹುದು.

## ಈಶನು ರುದ್ರನಲ್ಲ, ನಾರಾಯಣ

ಆದರೆ ಈ ಆಕ್ಷೇಪ ಸರಿಯಲ್ಲ. ಜಗತ್ಕಾರಣವಸ್ತುವನ್ನು ತಿಳಿಸುವಾಗ "ಆಕಾಶ", ''ಪ್ರಾಣ'' ಮುಂತಾದ ಶಬ್ದಗಳಿಗೆ ರೂಢಿಯಲ್ಲಿರುವ ಪ್ರಸಿದ್ಧವಾದ ಆಕಾಶ ಪ್ರಾಣ ಎಂಬ ಅರ್ಥಗಳನ್ನು ವೇದವ್ಯಾಸರು ಬ್ರಹ್ಮಸೂತ್ರಗಳಲ್ಲಿ ಪರಿಹರಿಸಿರುತ್ತಾರೆ. ಅದರಂತೆ ಇಲ್ಲಿಯೂ "ಒಬ್ಬನೇ ಅಲ್ಲವೆ ನಾರಾಯಣ ಇದ್ದವನು, ಬ್ರಹ್ಮನೂ ಇರಲಿಲ್ಲ, ಈಶ್ವರನೂ ಇರಲಿಲ್ಲ"[3] "ಪಾಪಗಳು ಇನ್ನೂ ನನಗೆ ಕಳೆದಿಲ್ಲ, ನನಗೆ ನೀನೇ ನಾವು ಶರಣ ಮಾಡು''[4] ಮುಂತಾದ ವಚನಗಳಿಂದ, ಎಲ್ಲಕ್ಕೂ ತಾನು ಕಾರಣನಲ್ಲ, ಪುಣ್ಯಪಾಪಕರ್ಮಗಳಿಗೆ ತಾನು ಪರವಶ, ಎಂದು ಸ್ಪಷ್ಟಪಡಿಸಿಕೊಂಡಿರುವ ರುದ್ರನಿಗೆ ಎಲ್ಲದರ ಒಳಹೊಗುವುದು, ಎಲ್ಲಕ್ಕೂ ಆಸರೆಯಾಗಿರುವುದು, ಮುಂತಾದ ಸ್ವಭಾವಗಳು ಸಲ್ಲದವು.

ಈ ಎಲ್ಲ ಸ್ವಭಾವಗಳೂ, ನಿರಂಕುಶೈಶ್ವರ್ಯವೂ, ಇರುವುದಾಗಿ ಪ್ರಸಿದ್ಧವಾಗಿರುವ ಸರ್ವೇಶ್ವರನಿಗೆ ಅಕ್ಷರಾರ್ಥಾನುಸಾರ ಈ ಪದ ಅನ್ವಯಿಸುವುದು ಎಂದೇ ತಿಳಿಯಬೇಕು.

## ಬಳಕೆಯ ಅರ್ಥ ಕೈಬಿಡಬಹುದು

ಒಂದು ಪಕ್ಷ ಈ ಪ್ರಕರಣದಲ್ಲಿ ಆಕಾಶ–ಪ್ರಾಣಶಬ್ದಗಳಂತೆ ಪ್ರಸಿದ್ಧವಾದಂತಹ ನಿರ್ದೇಶನ ಇಲ್ಲದಿದ್ದರೂ, "ಐಂದ್ರೀ"[5] ಎಂಬ ನಿಯಮದಂತೆ, ಅರ್ಥದಲ್ಲಿ ವಿರೋಧ ತೋರುವುದರಿಂದ ಬಳಕೆಯ ಅರ್ಥವನ್ನು ಬಿಡುವುದು ಸರಿಯಾಗಿದೆ.

## ಸರ್ವಶಬ್ದದ ಅರ್ಥವನ್ನು ಸೀಮಿತಗೊಳಿಸಲಾಗದು

ಇಲ್ಲಿ ''ಸರ್ವ'' ಶಬ್ದಕ್ಕೆ ತನ್ನದೆಲ್ಲ ಮಾತ್ರ[6] ಎಂದು ಅರ್ಥೈಸಿ, ರುದ್ರನನ್ನೇ ಸರ್ವೇಶ್ವರನೆನ್ನಬಹುದಲ್ಲ ? ಎನ್ನುವುದೂ ಸರಿಯಲ್ಲ ; ''ತನ್ನದು ಮಾತ್ರ'' ಎಂದು ಸರ್ವಶಬ್ದಾರ್ಥವನ್ನು ಸೀಮಿತಗೊಳಿಸಲು ಇಲ್ಲಿ ಯಾವುದೇ ಕಾರಣಗಳಿಲ್ಲ.

---

1. ಪದಗಳ ಅವಯವಗಳಿಂದ ಬರುವ ಅರ್ಥ. ಇದನ್ನು ಯೌಗಿಕಾರ್ಥ ಎಂದೂ ಕರೆಯುತ್ತಾರೆ.
2. "ಯೋಗಾದ್ರೂಢಿರ್ಬಲೀಯಸೀ" ಇತಿ ನ್ಯಾಯಃ.
3. ಏಕೋ ಹ ವೈ ನಾರಾಯಣ ಆಸೀತ್ ನ ಬ್ರಹ್ಮಾನೇಶಾನಃ. ಮಹೋ. ೧.೧.
4. ಅನಪಹತಪಾಪ್ಮಾಹಮಸ್ಮಿ; ನಾಮಾನಿ ಮೇ ಧೇಹಿ. ಶತ. ಬ್ರಾ.
5. ಸ್ತೋತ್ರಪ್ರಕರಣದಲ್ಲಿ ಗಾರ್ಹಪತ್ಯಾಗ್ನಿಯನ್ನು ಸ್ತೋತ್ರಮಾಡುವ ಮಂತ್ರವಲ್ಲಿ ಇಂದ್ರಶಬ್ದವಿದ್ದರೂ ಅದನ್ನು ಗಾರ್ಹಪತ್ಯಾಗ್ನಿ ಎಂದೇ ಅರ್ಥ ಮಾಡಿದ್ದಾರೆ ಎಂದು ತಿಳಿಸುವ ನ್ಯಾಯ.
6. "ಸರ್ವತ್ವಮಾಧಿಕಾರಿಕಮ್" ಇತಿ ನ್ಯಾಯಃ.

## ವಿವಿಧ ಈಶ್ವರವಾದಗಳ ಖಂಡನ

ಜಗತ್ತಿನಲ್ಲಿ ಒಬ್ಬರ ನಂತರ ಒಬ್ಬರಂತೆ ಅನೇಕ ಈಶ್ವರವ್ಯಕ್ತಿಗಳು ಉಂಟು; ಅಥವಾ ಏಕಕಾಲದಲ್ಲಿ ಅನೇಕ ಈಶ್ವರರೂ ಉಂಟು; ಎಂಬ ಪಕ್ಷಗಳು ''ಎಲ್ಲವಕ್ಕೂ ಈಶ್ವರನೊಬ್ಬನೇ ಶಾಶ್ವತವಾಗಿ ಅಧಿಪತಿ'' ಎಂದು ಸ್ಥಿರಪಡಿಸುವ ಪ್ರಾಮಾಣಿಕವೂ ಸರ್ವಸಮ್ಮತವೂ ಆದ ಆಧಾರವಚನಗಳಿಂದ ಅಡಗಿಸಲ್ಪಟ್ಟಿವೆ.

## ನಾರಾಯಣನೇ ಸರ್ವೇಶ್ವರ

ಆದುದರಿಂದ "ಎಲ್ಲಕ್ಕೂ ಅವನೊಬ್ಬನೇ ಪತಿ, ಅವನು ತನಗೂ ತಾನೇ ಪತಿ"[1] ಮುಂತಾದ ಪ್ರಸಿದ್ಧ ವಚನಗಳಿಂದ, ಇತರರಿಗೆ ಅಧೀನನಲ್ಲದ, ಶಾಸಕನೂ ಆಗಿರುವ ವ್ಯಕ್ತಿಯನ್ನು ಇದೇ ಉಪನಿಷತ್ತಿನಲ್ಲಿ ಮುಂದೆ ''ಯಾವ ಇವನು ಪ್ರಸಿದ್ಧನೋ, ಇವನೇ ಪರಮ ಪುರುಷ''[2] ಎಂದು ಹೇಳಲಾಗುವುದು. ಹಾಗೂ ಬೇರೆ ರೀತಿ ಅರ್ಥ ಬದಲಾಯಿಸಲು ಸಾಧ್ಯವಿಲ್ಲದ ಕೆಲವು ಮಾತುಗಳಿಂದ ಅವನೇ ಚತುರ್ಮುಖ ಈಶ್ವರ–ಎಂಬ ಇಬ್ಬರನ್ನೂ ಸೃಷ್ಟಿಸುವವನು ಎಂದೂ ನಿರ್ಧರಿಸಲಾಗಿದೆ. "ಇವನೇ ಎಲ್ಲ ಜೀವಿಗಳ ಅಂತರಾತ್ಮನೂ, ಸ್ವಲ್ಪವೂ ದೋಷವಿಲ್ಲದವನೂ, ದಿವ್ಯಲೋಕದಲ್ಲಿರುವವನೂ, ದಿವ್ಯಪುರುಷನೂ, ಏಕೈಕನೂ ಆದ ನಾರಾಯಣ,''[3] ಇವೇ ಮುಂತಾದ ವಚನಪ್ರಸಂಗಗಳಲ್ಲಿ, ಅವನೇ ಎಲ್ಲಕ್ಕೂ ಅಂತರಾತ್ಮನೆಂಬುದೂ ಪ್ರಸಿದ್ಧವಾಗಿದೆ.

## "ಜಡ–ಜೀವಗಳೆಲ್ಲ ನಾರಾಯಣನೇ" ಎಂಬ ಮಾತಿನ ಅರ್ಥ

ಹಾಗೂ ಅವನೇ ಬ್ರಹ್ಮ, ಅವನೇ ಶಿವ,[4] ಮುಂತಾದ ಸಂದರ್ಭಗಳಲ್ಲಿ ಅವನ ಸ್ವತ್ತಾಗಿ ತಿಳಿದು ಬರುವ ಬ್ರಹ್ಮ-ಶಿವ-ಇಂದ್ರ-ಮುಂತಾದವರಿಗೆಲ್ಲ, ಮತ್ತು "ಈ ಪ್ರಪಂಚವೆಲ್ಲ ಈ ಪುರುಷನೇ"[5] ಎಂಬ ಸಂದರ್ಭದಲ್ಲಿ ಜಡ–ಜೀವ–ಪ್ರಪಂಚವೆಲ್ಲಕ್ಕೂ ಸಹ, ಅವನೇ ಮುಖ್ಯವಾದ ಆಧಾರ ಮತ್ತು ವಿಶೇಷ್ಯ ಎಂದು ತಿಳಿದುಬರುವುದರಿಂದ, ನಾರಾಯಣನೇ ಎಲ್ಲವನ್ನೂ ವ್ಯಾಪಿಸಿ, ಒಡೆಯನಾಗಿ ನಿಯಂತ್ರಿಸುವವನು ಎಂದು ತಿಳಿಸುವುದರಲ್ಲಿ "ಈಶಾ ವಾಸ್ಯಂ" ಎಂಬ ಈ ಮಾತು ಸಮರ್ಥವಾಗಿದೆ.

## ವಾದವಿವಾದಗಳಿಗೆ ವಿರಾಮ

ಹೀಗೆ ಬೇರೆ ಅರ್ಥದಲ್ಲಿ ರೂಢಿ ಇದೆ ಎನ್ನುವ ಪ್ರಸಂಗವೇ ಇಲ್ಲದಿರುವಾಗಲೂ ಸಮಾಸವಿಲ್ಲದಂತಹ ಪದವನ್ನು ಓದಿ ತಿಳಿಯುವುದಕ್ಕೇ ಬಾರದ ಶ್ರೋತ್ರಿಯರಲ್ಲದವರು ಮಾಡುವ ಆಕ್ಷೇಪಗಳನ್ನು ಹೀಯಾಳಿಸುವ ಕೆಲಸ ನಮಗೆ ಇಷ್ಟೇ ಸಾಕು ಎನಿಸುತ್ತದೆ.

## ವೈರಾಗ್ಯದಿಂದ ಕೂಡಿದ ಜೀವನಮಾರ್ಗ ಅವಶ್ಯಕ

ಸಂಸಾರಬಂಧನವನ್ನು ಕಳಚಿಕೊಳ್ಳಬೇಕೆನ್ನುವವನಿಗೆ ಈರೀತಿ ಎಲ್ಲವೂ ಈಶ್ವರನಿಗೆ ಪರತಂತ್ರ ಎಂಬ ಅವಶ್ಯಕ ಜ್ಞಾನವನ್ನು ಹುಟ್ಟಿಸಿ, ಅನಂತರ ವೈರಾಗ್ಯದಿಂದ ಕೂಡಿಕೊಳಿಸುವ ಜೀವನಮಾರ್ಗವನ್ನು ಉಪದೇಶಿಸುತ್ತಿದ್ದಾನೆ:—'ತೇನ ತ್ಯಕ್ತೇನ ಭುಂಜೀಥಾಃ, ಮಾ ಗೃಧಃ ಕಸ್ಯ ಸ್ವಿತ್ ಧನಂ" ಎಂದು.

---

1. ಪತಿಂ ವಿಶ್ವಸ್ಯಾತ್ಮೇಶ್ವರಮ್. ತೈ. ನಾ.

2. ಏಷ ಸರ್ವಭೂತಾನ್ತರಾತ್ಮಾಅಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ. ಸುಬಾ.೨

3. ಯೋಽಸಾವಸೌ ಪುರುಷಃ. ಈಶಾ. ೧೬. 4. ಸ ಬ್ರಹ್ಮಾ ಸ ಶಿವಃ. ತೈ.ನಾ. 5. ವಿಶ್ವಮೇವೇದಂ ಪುರುಷಃ. ತೈ. ನಾ.

## ಪದವಿವರಣೆ ಮತ್ತು ವಿಶೇಷ

**ತೇನ** — ನಮಗೆ ಅನುಭವಿಸುವ ಸಲುವಾಗಿ ಎಂದು ನಾವು ಭ್ರಮೆಯಿಂದ ಇದು ನಮ್ಮದು ಎಂದುಕೊಂಡಿರುವ ಈ ಜಗತ್ತಿನಿಂದ ;

**ತ್ಯಕ್ತೇನ** — ಇದು ಅನೇಕದೋಷಗಳಿಂದ ಕೂಡಿದೆ ಎಂದು ತಿಳಿದು ಬಿಡಲ್ಪಟ್ಟುದರಿಂದ ಕೂಡಿದವನಾಗಿ;

**ಭುಂಜೀಥಾಃ** — ಅನುಭವಿಸು.

## ಧರ್ಮಕ್ಕಾಗಿ ದೇಹದ ಬದುಕಿಗೆ ಸಾಕಷ್ಟು ಮಾತ್ರ ಅನುಭವಿಸು

ಯಾವುದರ ಬಳಕೆ ಶಾಸ್ತ್ರನಿಷಿದ್ಧವಲ್ಲವೋ, ಧರ್ಮಾಚರಣೆಗೆ ಉಪಯುಕ್ತವಾದ ಈ ಶರೀರದ ಬದುಕಿಗೆ ಎಷ್ಟು ಅವಶ್ಯವೋ, ಅಷ್ಟುಮಾತ್ರ ಭೋಗವಸ್ತುಗಳನ್ನು[1] ಅನುಭವಿಸು ಎಂದು, ಅರ್ಥ ಮತ್ತು ಪ್ರಕರಣಗಳ ನೆರವಿನಿಂದ ತಿಳಿದು ಬರುವುದು.

## ಪರಮಾತ್ಮನನ್ನು ಉಪಾಸನೆಯ ಮೂಲಕ ಅನುಭವಿಸು

ಅಥವಾ ಸರ್ವವ್ಯಾಪಿಯೂ ಅತ್ಯಂತಭೋಗ್ಯನೂ ಆದ ಪರಮಾತ್ಮನನ್ನು ಮುಂದೆ ಹೇಳುವ ಉಪಾಯದ ಮೂಲಕ ಅನುಭವಿಸು ಎಂದೂ ಅನ್ವಯಿಸಬಹುದು.

## ಇತರರ ವಸ್ತುಗಳಲ್ಲಿ ಆಸೆಪಡಬೇಡ

**ಕಸ್ಯ ಸ್ವಿತ್ ಧನಂ** — ಅವನು ಬಂಧುವಿರಲಿ ಅಲ್ಲದಿರಲಿ ಯಾವನದೇ ಸ್ವತ್ತಸ್ಸೂ,

**ಮಾಗೃಧಃ** — ನನಗೆ ಬೇಕೆಂದು ಆಸೆಪಡಬೇಡ.

ಯಮುನೂ ತನ್ನ ಭಟನಿಗೆ ಹೀಗೆಂದಿರುವನು:—"ಬಹಳ ಸ್ನೇಹಿತನಾದವನಲ್ಲೂ" ಎಂದು ಆರಂಭಿಸಿ, "ಒಳಗೊಳಗೇ ಕೆಟ್ಟದನ್ನು ಮಾಡುವಂತಹ ಬುದ್ಧಿಯವನಾಗಿ, ಯಾವನು ಇತರರಿಂದ ಏನೊಂದನ್ನಾದರೂ ಪಡೆಯಬೇಕೆಂದೇ ಅವರ ಬಳಿ ಸೇರುವನೋ, ಅವನು ಬರೀ ಮಾನವಾಕೃತಿಯ ಪಶುಪ್ರಾಣಿ ಮಾತ್ರ; ಅವನು ವಾಸುದೇವನ ಭಕ್ತನಲ್ಲ''[2]. ಎಂದು.

## ಪರಮಾತ್ಮನಲ್ಲದ ಎಲ್ಲ ವಿಚಾರದಲ್ಲೂ ವೈರಾಗ್ಯ ಲೇಸು

ಈ ಹಣದ ಆಸೆ ಬಿಡಬೇಕೆಂಬುದು, ಪರಮಾತ್ಮನ–ಹೊರತು ಇತರ ಎಲ್ಲ ವಿಚಾರಗಳಲ್ಲೂ ವೈರಾಗ್ಯ ಬೇಕು ಎಂದು ಸೂಚಿಸಲು ಮಾತ್ರ. ಸ್ಮೃತಿಗ್ರಂಥಗಳಲ್ಲಿ ಈ ಅರ್ಥವನ್ನೂ ನೆನಪುಗೊಳಿಸಲಾಗಿದೆ- ''ಪರಮಾತ್ಮನಲ್ಲಿ ಯಾವನಿಗೆ ಪ್ರೀತಿ ಉಂಟೋ ; ಅವನಿಗೆ ಪರಮಾತ್ಮನಲ್ಲದುದರಲ್ಲೆಲ್ಲ ವೈರಾಗ್ಯವೂ ಉಂಟಾಗಬೇಕು"[3] ಎಂದು.

---

1. ಇಂದ್ರಿಯಗಳಿಗೆ ಸಂತೋಷವನ್ನುಂಟುಮಾಡುವ ವಸ್ತು.
2. ಪರಮಸುಹೃದಿ...ಶಠಮತಿರುಪಯಾತಿ ಯೋಽರ್ಥತೃಷ್ಣಾಂ...ಪುರುಷಪಶುರ್ನ ಸ ವಾಸುದೇವಭಕ್ತಃ॥ ವಿ.ಪು.೩.೭.೩೧.
3. ಪರಮಾತ್ಮನಿ ಯೋ ರಕ್ತೋ ವಿರಕ್ತೋಽಪರಮಾತ್ಮನಿ. ಬಾರ್ಹ. ಸ್ಮೃ.

# ಈಶಾವಾಸ್ಯ ಪ್ರಕಾಶಿಕೆ

## ವಾಸ್ಯಂ ಎಂದರೇನು?

(ಭಾ) **ವಾಸನೀಯಂ** – ಇರಿಸಲ್ಪಡುವಂತಹದು, ನಿಲ್ಲಿಸಲ್ಪಡುವುದು, ಎಂದರ್ಥ. **ವಾಸ್ಯಂ** – ವ್ಯಾಪಿಸಲ್ಪಡುವುದು ಮಾತ್ರವಲ್ಲದೆ ಧರಿಸಲ್ಪಡುವುದೂ ಎಂದರ್ಥ.

## ಜಡ ಮತ್ತು ಜೀವಗಳಲ್ಲಾಗುವ ವ್ಯತ್ಯಾಸಗಳು

(ಭಾ) **ಅನ್ಯಥಾತ್ವಂ ಗಚ್ಛತ್** – ಅನುಭವಿಸಲ್ಪಡುವಾಗ ಅಚಿತ್ ಎಂಬ ಜಡವಸ್ತುಗಳು ಸ್ವರೂಪದಲ್ಲೇ ವ್ಯತ್ಯಾಸಗಳನ್ನು ಪಡೆಯುವುವು. ಚಿತ್ ಎಂಬ ಜೀವವಸ್ತುಗಳು ಅನುಭವಿಸುವಾಗ ತಮ್ಮ ಸ್ವಭಾವವಾದ ಜ್ಞಾನದಲ್ಲಿ ಮಾತ್ರ ಸಂಕೋಚ–ವಿಕಾಸಗಳಿಂದಾದ ವ್ಯತ್ಯಾಸ ಪಡೆಯುವುವು.

## ಜೀವಾತ್ಮ ಪರಮಾತ್ಮಗಳ ಭಿನ್ನತೆ

"ಈಶಾ" ಎಂಬ ಈ ಮಾತು "ಅನೀಶ" ಎಂಬುದನ್ನೂ ಜ್ಞಾಪಕಕ್ಕೆ ತರುತ್ತದೆ. ಪರಮಾತ್ಮನೇ ಈಶ, ಒಡೆಯ. ಜೀವಗಳು ಅನೀಶಗಳು, ಒಡೆಯರಲ್ಲ ಆಳುಗಳು ಮಾತ್ರ. ಇದರಿಂದ ಜೀವ–ಪರಮಾತ್ಮರ ಸ್ವಾಭಾವಿಕವಾದ ಭಿನ್ನತೆಯೂ ತಿಳಿದು ಬರುವುದು.

ಇಲ್ಲಿ ಬೇರೆ ಉಪನಿಷತ್ತಿನ ವಚನಗಳೂ ಗಮನಾರ್ಹವಾಗಿವೆ:–

"ಜೀವಾತ್ಮಗಳನ್ನೂ ಇವುಗಳಿಗೆ ಪ್ರೇರಣೆಕೊಡುವ ಪರಮಾತ್ಮನನ್ನೂ ಬೇರೆ ಬೇರೆಯೆಂದು ತಿಳಿದು"[1]

"ಪೂರ್ಣಅರಿವುಳ್ಳ ವಸ್ತುವನ್ನು 'ಜ್ಞ' ಎಂದೂ, ಪೂರ್ಣಅರಿವಿಲ್ಲದ ವಸ್ತುವನ್ನು 'ಅಜ್ಞ' ಎಂದೂ ಕರೆಯಬಹುದು. ಈ ಎರಡುಬಗೆ ವಸ್ತುಗಳೂ ಶಾಶ್ವತ. 'ಜ್ಞ' ಎಲ್ಲದರ ಒಡೆಯ, 'ಅಜ್ಞ' ಅವನ ಅಧೀನ."[2]

"ಜ್ಞ" ವಸ್ತು ಶಾಶ್ವತ, ಇದಕ್ಕೆ ಚೈತನ್ಯವಿದೆ. ಇದು ಒಬ್ಬ ವ್ಯಕ್ತಿ. ಅಜ್ಞವಸ್ತುವೂ ಶಾಶ್ವತ, ಇದಕ್ಕೂ ಚೈತನ್ಯವಿದೆ. ಇದು ಅನೇಕ ವ್ಯಕ್ತಿಗಳು. ಈ ಅಜ್ಞರೆನಿಸುವ ಜೀವಾತ್ಮರ ಆಸೆಗಳೆಲ್ಲವನ್ನೂ ಪೂರೈಸುವವನೇ ಈ 'ಜ್ಞ' ಎನಿಸಿದ ಪರಮಾತ್ಮ."[3]

## ಈಶನು ಯಾರು?

(ಭಾ) ಸರ್ವೇಶ್ವರೇ - ಜಗತ್ತಿಗೆ ಕಾರಣವಾದ ಪರಮಾತ್ಮನನ್ನು ಆಕಾಶ– (ಎಲ್ಲೆಡೆ ಹರಡಿಕೊಂಡು ಬೆಳಗುತ್ತಿರುವವನು); ಪ್ರಾಣ– (ಎಲ್ಲದರ ಬದುಕಿಗೂ ಕಾರಣ) ಎಂಬ ಶಬ್ದಗಳಿಂದ ತಿಳಿಸುವ ಉಪನಿಷದ್ ವಚನಗಳಂತೆ

---

1. ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ. ಶ್ವೇ. ಉ. ೧.೬.
2. ಜ್ಞಾಜ್ಞೌ ದ್ವಾವಜಾವೀಶನೀಶೌ.. ಶ್ವೇ. ಉ. ೧.೯.
3. ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್. ಶ್ವೇ. ಉ. ೬.೧೩.

ಇಲ್ಲಿ, ಈಟ್ - (ಒಡೆಯ) ಎಂಬ ಶಬ್ದದಿಂದ ತಿಳಿಸಲಾಗಿದೆ, ಅಲ್ಲದೆ, "ಅಜ[1], ಸರ್ವೇಶ್ವರ[2], ಸಿದ್ಧ[3] "ಎಂದೂ ಇವನನ್ನು ತಿಳಿಸಲಾಗಿದೆ.

### ತ್ಯಾಗಕ್ಕೆ ಕಾರಣ ಜಗತ್ತಿನ ಏಳು ದೋಷಗಳು

(ಭಾ) **ದೋಷಭೂಯಿಷ್ಠ್ವ** – ಪರಮಾತ್ಮನಲ್ಲಿಲ್ಲದ ದೋಷಗಳು ನಾವು ಅನುಭವಿಸುವ ಈ ಜಗತ್ತಿನಲ್ಲಿವೆ. ಅವನ್ನು ಹೀಗೆ ಏಳುವಿಧವಾಗಿ ವಿಂಗಡಿಸಬಹುದು;–

೧. ಅಲ್ಪತ್ವ – ಅಳತೆಯಲ್ಲಿ ಬಹಳ ಕಮ್ಮಿಯಾಗಿರುವಿಕೆ.

೨. ಅಸ್ಥಿರತ್ವ – ಬಹಳಕಾಲ ಇಲ್ಲದೆ ಶೀಘ್ರವಾಗಿ ನಾಶವಾಗುವಿಕೆ.

೩. ದುಃಖಮೂಲತ್ವ - ಬಹಳ ಕಷ್ಟದಿಂದ ಸಂಪಾದಿಸಲ್ಪಡುವಿಕೆ.

೪. ದುಃಖಮಿಶ್ರತ್ವ – ಕಷ್ಟಗಳ ಜೊತೆಜೊತೆಗೇ ಇರುವಿಕೆ.

೫. ದುಃಖೋದರ್ಕತ್ವ – ಈ ಮುಂಬರುವ ದುಃಖಗಳಿಗೆ ಕಾರಣವಾಗುವಿಕೆ.

೬. ದೇಹಾತ್ಮಾಭಿಮಾನಮೂಲತ್ವ – ಜಡದೇಹವೇ ನಾನು ಎಂಬ ಸಲ್ಲದ ಭಾವನೆಯಿಂದಲೇ ಉಂಟಾಗಿ ಅಂತಹುದೇ ಭಾವನೆಯನ್ನು ಬೆಳಸುವಿಕೆ.

೭. ಸ್ವಾಭಾವಿಕಬ್ರಹ್ಮಾನುಭವವಿರುದ್ಧತ್ವ – ತಾತ್ವಿಕವಾಗಿಯೂ ಸಹಜವಾಗಿಯೂ ಆಗುವಂತಹ ಪರಮಾತ್ಮನ ದರ್ಶನಕ್ಕೆ ತಡೆಯೊಡ್ಡುವುದಲ್ಲದೆ ಅದಕ್ಕೆ ವಿರುದ್ಧವಾದ ಕೆಟ್ಟ ಅನುಭವಗಳನ್ನು ಉಂಟುಮಾಡುವಿಕೆ.

ಈ ಏಳು ಅಂಶಗಳೂ ಜಗತ್ತನ್ನು ನಾವು ಬಿಡಲು ಕಾರಣ.

### ತ್ಯಾಗಮಾಡಿ ಅನುಭವಿಸುವುದು ಹೇಗೆ?

(ಭಾ)**ಯೋಗ ಧರ್ಮೋಪಯುಕ್ತ** – ಜಗತ್ತನ್ನೂ ಅದರಲ್ಲಿರುವ ದೋಷಗಳನ್ನೂ ಪರಿಶೀಲಿಸಿ ಬ್ರಹ್ಮೋಪಾಸನೆಗೂ ಅದಕ್ಕಾಗಿ ನಮ್ಮ ದೇಹದ ಬದುಕಿಗೂ, ಅತ್ಯವಶ್ಯವಾದಷ್ಟು ಮಾತ್ರ ಅನ್ನ–ನೀರು ಮುಂತಾದವನ್ನೂ, ದಾನ-ಹೋಮ-ದೇವರಪೂಜೆ–ಅತಿಥಿ ಸಮಾರಾಧಾನೆಗಳಿಗೆ ಬೇಕಾದಷ್ಟು ಮಾತ್ರ ಕುಟುಂಬ ಪರಿವಾರಗಳನ್ನೂ, ಆಸ್ತಿ

---

1. a. ಹುಟ್ಟುಸಾವಿಲ್ಲದವನು; b. ಜ್ಞಾನವೆಂಬ ದೀಪದಿಂದ ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವವನು.
2. a. ಎಲ್ಲದರ ಒಡೆಯ; b. ಶರಣಾಗತರಾದ ಎಲ್ಲರನ್ನೂ ರಕ್ಷಿಸಲು ಅವರೊಡನೆ ಶೀಘ್ರವಾಗಿ ಸೇರಿಕೊಳ್ಳುವವನು.
3. a. ಯಾವಾಗಲೂ ಸಜ್ಜಾಗಿರುವವನು; b. ಯಾವುದೇ ಉಪಾಯಗಳಿಗೂ ಸಿಗದಂತಹವನು, ಆದರೂ ತಾನಾಗಿಯೇ ಸಿಗುವವನು ಎಂದರೆ "ಸಿದ್ಧೋಪಾಯ" ವಿ. ಸಹ. ೯೭, ೯೮, ೯೯. ಇಲ್ಲಿ ಒಂದನೇ ಅರ್ಥಗಳು ಸಾಮಾನ್ಯವಾದವು. ಎರಡನೆಯ ಅರ್ಥಗಳು, ಭಟ್ಟಪರಾಶರರ ಭಾಷ್ಯಾನುಸಾರವಾಗಿ ಇರುವುವು. ಈಗ ಇಲ್ಲಿ ಸರ್ವೇಶ್ವರ ಎಂಬ ಪದವನ್ನೂ ಅದರ ಸಾಮಾನ್ಯಾರ್ಥವನ್ನೂ ವಿವರಣಕಾರರು ಮುಖ್ಯವಾಗಿ ತಿಳಿಸಬೇಕಾಗಿರುವುದು. ಆದರೂ ಈ ನಾಮಗಳ ಭಾಷ್ಯಾನುಸಾರವಾದ ಅರ್ಥಗಳು ಈಶಾವಾಸ್ಯದ ೮-೧೫-೧೬-೧೭-೧೮ ನೆಯ ಮಂತ್ರಗಳ ಅರ್ಥವನ್ನೇ ಸ್ಪಷ್ಟಪಡಿಸುತ್ತವೆ ಎಂಬುದು ಗಮನಾರ್ಹವಾದ ಅಂಶ. "ಸಿದ್ಧೋಪಾಯ" ಎಂದರೆ ಸಾಕ್ಷಾತ್ ಪರಮಾತ್ಮ ಒಬ್ಬನೇ. ಈ ಅಂಶವನ್ನು ಈಶಾವಾಸ್ಯ ಸಾರ ಸಂಗ್ರಹದಲ್ಲಿ "ನ್ಯಾಸ" ಎಂದು ಪರಮಾತ್ಮನಿಗೆ ಹೆಸರು ಎಂಬ ತೈತ್ತಿರೀಯ ಉಪನಿಷತ್ ವಚನವನ್ನು ಉದಾಹರಿಸಿ ತಿಳಿಸಲಾಗಿದೆ.

ಪಾಸ್ತಿಗಳನ್ನೂ ಅನುಭವಿಸು ಎಂದರ್ಥ. ಅಥವಾ ಅವಶ್ಯಕವಾದಷ್ಟರಿಂದಲೇ ಈ ದೇಹದ ಬದುಕನ್ನು ಸಾಗಿಸಿ ಕೊಂಡು, ಮುಂದೆ ತಿಳಿಸುವ ರೀತಿಯಲ್ಲಿ ಪರಮಾತ್ಮನನ್ನು ಅನುಭವಿಸು ಎಂದರ್ಥ.

### ತತ್ತ್ವತ್ರಯ ಚಿಂತನೆ

ಇಲ್ಲಿ ಕೆಲವು ಉಪನಿಷತ್ ವಚನಗಳು ಗಮನಾರ್ಹವಾಗಿವೆ.

"ಅನುಭವಿಸುವ ವ್ಯಕ್ತಿ ಅನುಭವಿಸಬೇಕಾದುದನ್ನೂ. ತನಗೆ ಪ್ರೇರಣೆ ಕೊಡುವ ಸ್ವಾಮಿಯನ್ನೂ ತನ್ನನ್ನೂ ತಿಳಿದು (ನಡೆದುಕೊಳ್ಳಬೇಕು)"[1].

ಎರಡು ಹಕ್ಕಿಗಳು–ಜೀವಾತ್ಮ-ಪರಮಾತ್ಮ ಒಂದೇ ತರಹವು. ಎರಡೂ ಸ್ನೇಹಿತ. ಒಂದೇ (ಅರಳಿ) ಮರ ವನ್ನು–ದೇಹವನ್ನು – ಆಸರೆಯಾಗಿ ಮಾಡಿಕೊಂಡಿವೆ. ಅವುಗಳಲ್ಲಿ ಒಂದು – ಜೀವಾತ್ಮ ಸಿಹಿಯಾದ ಅರಳಿ ಹಣ್ಣನ್ನು – ಪುಣ್ಯ ಪಾಪಫಲಗಳನ್ನು ತಿನ್ನುತ್ತಿದೆ – ಅನುಭವಿಸುತ್ತಿದೆ. ಮತ್ತೊಂದು – ಪರಮಾತ್ಮ ಏನೂ ತಿನ್ನದೆಯೇ ಚಟುವಟಿಕೆಯಿಂದ ಬೆಳಗುತ್ತಿದೆ."[2] (ಮೊದಲನೆಯದು ತೀದು ತಿಂದು ಮಂಕಾಗಿ ಕುಳಿತಿದೆ.)

"ಒಂದೇ ಮರದಲ್ಲಿ – ದೇಹದಲ್ಲಿ ಇದ್ದೂ ಜೀವಾತ್ಮ ಒಡೆತನ ಸ್ವಾತಂತ್ರ್ಯಗಳಿಲ್ಲದೆ ಮಂಕಾಗಿ ಅಳುತ್ತ ಕೂತಿದೆ. ಆದರೆ ಇದು ತನಗಿಂತ ಬೇರೆಯಾದ ತನ್ನ ಒಡೆಯನನ್ನು ಪ್ರೀತಿಯಿಂದ ಸೇವೆಮಾಡಿ, ಅವನ ದರ್ಶನ ಪಡೆದರೆ ದುಃಖವೆಲ್ಲವನ್ನೂ ಕಳೆದುಕೊಂಡು ಅವನಿಗಿರುವ ಮಹಿಮೆಯನ್ನು ತಾನೂ ಪಡೆಯುತ್ತದೆ."[3] ಅಥವಾ ಒಡೆಯನನ್ನೂ ಒಡೆಯನ ಮಹಿಮೆಯನ್ನೂ ಕಣ್ಣಾರೆ ಕಂಡರೆ ಆಗ ತನ್ನ ದುಃಖವೆಲ್ಲವನ್ನೂ ಕಳೆದುಕೊಳ್ಳು ವುದು ಎಂದರ್ಥ.

### ಆಸೆಬಿಡಲು ಆಧಾರವಚನ

(ಭಾ) ಧನಾಶಾಪ್ರಹಾಣಂ – ಗೀತೆಯಲ್ಲೂ ಇದನ್ನೇ "ಕೃಷ್ಣ ನಾನು ವಿಜಯವನ್ನು ಬಯಸವುದಿಲ್ಲ"[4] ......... ಇತ್ಯಾದಿಯಾಗಿ ಹೇಳಲಾಗಿದೆ.

---

1. ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ. ಶ್ವೇ.ಉ. ೧.

2. ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ॥ ಮುಂ. ಉ. ೩.೧.

3. ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ।
ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ ಅಸ್ಯ ಮಹಿಮಾನಮಿತಿ ವೀತಶೋಕಃ॥ ಶ್ವೇ. ೪.೭.

4. ............ರಾಜ್ಯ, ಸುಖ, ಏನೊಂದನ್ನೂ ಬಯಸುವುದಿಲ್ಲ. ರಾಜ್ಯದಿಂದ ನಮಗೇನು ಆಗಬೇಕು, ಗೋವಿಂದ!
ಭೋಗಗಳಿಂದೇನು! ಈ ಬದುಕಿನಿಂದೇನು! ಭ. ಗೀ. ೧.೩೨.
ನ ಕಾಂಕ್ಷೇ ವಿಜಯಂ ಕೃಷ್ಣ ! ನ ಚ ರಾಜ್ಯಂ ಸುಖಾನಿ ಚ।
ಕಿಂ ನೋ ರಾಜ್ಯೇನ ಗೋವಿಂದ ! ಕಿಂ ಭೋಗೈರ್ಜೀವಿತೇನ ವಾ॥

# ಪದಾರ್ಥ ದೀಪಿಕೆ

### ಹಿನ್ನೆಲೆ

ವಾಸ್ತವವಾಗಿ ಈ ಜಗತ್ತೆಲ್ಲ ದೇವರ ಅಧೀನದಲ್ಲಿರುವುದು. ಈ ಜಗತ್ತಿಗೆ ಒಳಪಟ್ಟ ನಾವು ಸ್ವತಂತ್ರರೆಂದು ಕೊಂಡರೆ ಇದು ಬರಿಯ ಭ್ರಮೆ. ಈ ಭ್ರಮೆಯಿಂದಲೇ ನಾವು ಸಂಸಾರದಲ್ಲೂ ಲೋಕ–ಲೋಕಾಂತರಗಳಲ್ಲೂ ಜನ್ಮಾಂತರಗಳ ಮೂಲಕ ಅಲೆದಾಡುತ್ತಿರುವೆವು. ನಾವು ತತ್ತ್ವಜ್ಞಾನಿಗಳಾದರೆ ಈ ತೊಂದರೆ ತಪ್ಪೀತು. ಅದಕ್ಕಾಗಿ ನಾವು ಸದ್ಗುರುಗಳಿಗೆ ಶಿಷ್ಯರಾಗಬೇಕು. ತತ್ತ್ವಜ್ಞಾನದ ಬಗ್ಗೆ ವಿಚಾರ ಮಾಡುವ ಶ್ರದ್ಧೆ ಬೆಳೆಸಿಕೊಳ್ಳಬೇಕು. ಜಗತ್ತಿನ ಜೀವರಾಶಿಗಳು ಮತ್ತು ಜಡವಸ್ತುಗಳು ಹಾಗೂ ಇವೆಲ್ಲದರ ಚಲನ ವಲನಗಳೂ ದೇವರ ಅಧೀನದಲ್ಲಿವೆ ಎಂದು, ಇಂತಹ ಶಿಷ್ಯನಿಗೆ ಈ ಮಂತ್ರದಿಂದ ಒಂದು ಉಪದೇಶ ಸಿಗುತ್ತದೆ.

### ಪ್ರತಿಪದಾರ್ಥಸಾರ

ಭೂಮಿಯಲ್ಲಿ ಯಾವುದೊಂದುಕಣ್ಣಿಗೆ ಕಾಣಿಸುತ್ತಿರುವ ಅಶಾಶ್ವತವಾದ ವಸ್ತು ಇದೆಯೋ, ಅದೆಲ್ಲವೂ, ಎಲ್ಲದರ ಒಡೆಯನೂ ಆರುಗುಣಗಳಿಂದ ಪೂರ್ಣನೂ ಆದ ವಿಷ್ಣುವಿನಿಂದ ವ್ಯಾಪಿಸಲ್ಪಟ್ಟಿದೆ. ಇದೆಲ್ಲವೂ ಅತ್ಯಲ್ಪ ಮತ್ತು ಅಸ್ಥಿರ ಎಂಬ ಕಾರಣದಿಂದ ತ್ಯಾಗ ಮಾಡಿ. ಬಿಟ್ಟುದನ್ನೇ ಗುರುತಾಗಿಟ್ಟುಕೊಂಡು ಅನುಭವಿಸು; ಎಂದರೆ ದೇವರ ಪೂಜೆಗೆ ಯೋಗ್ಯವಾದಷ್ಟು ಹಾಗೂ ದೇಹದ ಬದುಕಿಗೆ ಎಷ್ಟು ಬೇಕೋ ಅಷ್ಟು ಮಾತ್ರ ಭೋಗವಸ್ತುಗಳನ್ನು ಇರಿಸಿಕೊಂಡು ಅನುಭವಿಸು. ಬೇಕು–ಬೇಡದ ಯಾರೊಬ್ಬರ ಸ್ವತ್ತಿಗಾಗಲೀ ಆಸೆಪಡಬೇಡ. ಹೀಗೆ ಪರಮಾತ್ಮನಿಗೆ ಸಂಬಂಧಿಸದ ಇತರವಿಷಯಗಳಲ್ಲಿ ನಮಗೆ ವೈರಾಗ್ಯ ಅವಶ್ಯಕ ಎಂದು ಒಟ್ಟು ಭಾವಾರ್ಥ.

# ಸುಬೋಧಿನೀ

### ಎರಡು ಉಪದೇಶಗಳು

ಈ ಉಪನಿಷತ್ತು ಬ್ರಹ್ಮವಿದ್ಯೆಯ ಉಪದೇಶರೂಪವಾಗಿದೆ. ಈ ಮಂತ್ರದಲ್ಲಿ ಮೊದಲ ಉಪದೇಶ– "ದೇವರಿಗೆ ಜಗತ್ತೆಲ್ಲವೂ ಶರೀರವಾಗಿದ್ದು ಅವನ ಅಧೀನದಲ್ಲಿದೆ. ಈ ಜೀವಾತ್ಮಗಳೂ ಅವನಿಗೆ ಅಂತೆಯೇ ಶರೀರ ವಾಗಿದ್ದು ಅಧೀನದಲ್ಲಿವೆ. ಆದುದರಿಂದ ಜೀವಾತ್ಮಗಳು ಸ್ವತಂತ್ರರು ಎಂಬ ಭಾವನೆ ಬರಿಯ ಭ್ರಮೆ' ಎಂದು.

ಈ ಲೋಕದಿಂದ ತಮ್ಮ ಬಿಡುಗಡೆಯಾಗಬೇಕೆನ್ನುವವರಿಗೆ ಇಲ್ಲಿಯ ಜೀವನದ ರೀತಿನೀತಿಗಳೇನೆಂಬುದೇ ಎರಡನೆಯ ಉಪದೇಶ. ಅದನ್ನೇ ಮುಂದೆ ವಿವರಿಸಲಾಗುವುದು.

### ತ್ಯಾಗ ಮತ್ತು ಕರ್ತವ್ಯ

ಈ ಜಗತ್ತೆಲ್ಲ ದೇವರ ವ್ಯಾಪ್ತಿಗೆ ಒಳಪಟ್ಟುದು. ಆ ದೇವರು ನಿನ್ನ ಪಾಲಿಗೆ ಕೊಟ್ಟಷ್ಟನ್ನು ಮಾತ್ರ ಶಾಸ್ತ್ರೋಕ್ತನಿಯಮಗಳಿಗೆ ಅನುಸಾರವಾಗಿ ಅನುಭವಿಸು. ಬೇರೆಯವರ ಪಾಲಿಗೆ ಬಂದಿರುವುದನ್ನು ನೀನು ಆಸೆ ಪಡ ಬೇಡ. ಅಥವಾ ದೋಷಪೂರ್ಣವಾದ ಈ ಜಗತ್ತಿನಲ್ಲಿ ಹೆಚ್ಚಿನದನ್ನು ಅಪೇಕ್ಷಿಸದೆ ಬಿಟ್ಟು, ದೇಹಧಾರಣೆಗೆ ಸಾಕಷ್ಟು ಮಾತ್ರ ಪಡೆದು ಶಾಸ್ತ್ರಾನುಸಾರ ಬದುಕು ಎಂದರ್ಥ. ಅಥವಾ ಎಲ್ಲ ವಿಧವಾದ ಆಸೆಗಳನ್ನೂ ಬಿಟ್ಟುಬಿಡು.

ಏಕೆಂದರೆ; ಈ ಲೋಕದಲ್ಲಿ ಯಾರದಾಗಿ ಏನಿದೆ ? ಯಾವುದೂ ಯಾರದೂ ಅಲ್ಲ. ಅದು ಹೇಗೆಂದರೆ –ಎಲ್ಲವೂ ದೇವರದೇ ಅಲ್ಲವೆ ? ಎಲ್ಲವನ್ನೂ ಒಳಹೊಕ್ಕು ಅವನ್ನೇ ತನ್ನ ಶರೀರವಾಗಿಸಿಕೊಂಡು ಅನುಭವಿಸುವವನು ಆ ಪರಮಾತ್ಮ ಒಬ್ಬನೇ. ಹೀಗಾಗಿ ನಮಗೆ ಅನುಭವಿಸಲು ನಮ್ಮದಾಗಿ ಏನಿದೆ?

ಆದರೆ ನಾವು ಇದನ್ನು ಅರಿತು ಸುಮ್ಮನಿರಬೇಕೇ? ನಮಗೂ ದೇಹವೆಂಬುವುದಿಲ್ಲವೇ? ಅದರ ಧಾರಣೆಗೆ ನಾವೂ ಏನಾದರಷ್ಟು ಊಟ–ನಿದ್ದೆಗಳನ್ನಾದರೂ ಮಾಡಬೇಡವೇ? ಮಾಡದೆ ಬಿಡಲು ಸಾಧ್ಯವೇ? ಮಾಡುವುದ ನ್ನೆಲ್ಲ ಮಾಡಲೇಬೇಕು. ಮಾಡುವಾಗ 'ಇದು ನಮ್ಮದಲ್ಲ, ನಮಗಾಗಿ ಅಲ್ಲ, ಎಲ್ಲವೂ ನಮ್ಮೊಳಗಿರುವ ಪರಮಾತ್ಮ ನಿಗೆ' ಎಂದು ತಿಳಿದು ಶಾಸ್ತ್ರೀಯವಾಗಿ ಮಾಡಬೇಕು. ನಮಗಾಗಿ ಅಲ್ಲ ಎಂದು ತಿಳಿಯುವುದೇ ತ್ಯಾಗ, ಶಾಸ್ತ್ರೀಯ ವಾಗಿ ಮಾಡುವುದೇ ಕರ್ತವ್ಯ.

'ವಾಸ್ಯಂ' ಎಂದರೆ ಮುಚ್ಚಲ್ಪಟ್ಟಿರುವುದು.

ಇಲ್ಲಿ ಕೆಲವರು 'ವಾಸ್ಯಂ' ಎಂಬ ಪದಕ್ಕೆ ಮುಚ್ಚಲ್ಪಟ್ಟಿರುವುದು ಎಂದು ಅರ್ಥೈಸುವರು. ಅಂದರೆ ಮಾಯೆಯಿಂದ ಮುಚ್ಚಲ್ಪಟ್ಟಿರುವುದು ಎಂದರ್ಥ. ಇಂತಹ ಈ ಜಗತ್ತೆಲ್ಲವೂ ವಾಸ್ತವವಾಗಿ ಇಲ್ಲದ ವಸ್ತು ವಷ್ಟೆ. ಇಂತಹ ಸುಳ್ಳಾದ ವಸ್ತುವನ್ನು 'ಮಿಥ್ಯೆ' ಎಂದೂ, ಭ್ರಮೆ ಎಂದೂ ಕರೆಯಲಾಗುವುದು ಎಂಬುದು ಅವರು ಸಾಧಿಸಿ ತೋರಬೇಕಾದ ಅಂಶ.

ಈ ಅಂಶ 'ಮುಚ್ಚಲ್ಪಟ್ಟಿರುವುದು' ಎಂಬ ಮಾತಿನಿಂದ ಸಿದ್ಧಪಡಿಸಿ ತೋರಿಸಲಾಗುವುದಿಲ್ಲ. ಯಾರಾದ ರೊಬ್ಬರು ಏನಾದರೊಂದನ್ನು ಮುಚ್ಚಿಟ್ಟುಕೊಂಡಿದ್ದರೆ ಆ ವಸ್ತು ಇರುವುದೇ ಸುಳ್ಳಾದೀತೇ? ಹಗಲು ಸೂರ್ಯನ ಕಿರಣಗಳಿಂದ ಆಕಾಶದಲ್ಲಿ ಮುಚ್ಚಿಹೋಗಿರುವ ನಕ್ಷತ್ರಗಳು ಸುಳ್ಳಾಗುವುವೆ?

ಹೊಳೆಯುವ ಮುತ್ತಿನ ಚಿಪ್ಪನ್ನು ನೋಡಿದರೆ ಅದು ಬೆಳ್ಳಿ ಎಂಬ ಭ್ರಮೆ ಉಂಟಾಗುವುದಷ್ಟೆ. ಪರಿಶೀಲಿಸಿ ದಾಗ, ಅದು ಮುತ್ತಿನ ಚಿಪ್ಪೇ ಹೊರತು ಬೆಳ್ಳಿಯಲ್ಲ ಎಂದು ತಿಳಿದಾಗ, ಬೆಳ್ಳಿ ಎಂಬ ಅಂಶ ಸುಳ್ಳು ಎನ್ನಬಹು ದಲ್ಲವೆ? ಅದರಂತೆ ಎಲ್ಲೆಲ್ಲೂ ಈಶನನ್ನೇ ನಾವು ನೋಡುತ್ತಿದ್ದರೂ ಅದೆಲ್ಲವನ್ನೂ ಜಗತ್ತು ಎಂದು ಭ್ರಮಿಸಿರು ತ್ತೇವೆ. ಪರಿಶೀಲಿಸಿದಾಗ ಇದೆಲ್ಲವೂ ಈಶನೇ ಎಂದೂ ಈ ಜಗತ್ತೆಲ್ಲ ಸುಳ್ಳು ಎಂದೂ ಸಿದ್ಧವಾಗುವುದಿಲ್ಲವೇ ಎಂಬುದು ಕೆಲವರ ಅಭಿಪ್ರಾಯ.

ಆದರೆ ಈಶನು ಜಗತ್ತನ್ನು ಮುಚ್ಚಿರುವನು ಎಂದರೆ, ಹಾಗೆಯೇ ಮುತ್ತಿನ ಚಿಪ್ಪೂ ಬೆಳ್ಳಿಯನ್ನು ಮುಚ್ಚಿ ಕೊಂಡಿರುತ್ತದೆಯೆ? ಒಂದು ಪಕ್ಷ ಹಾಗೆ ಮುತ್ತಿನ ಚಿಪ್ಪಿನೊಳಗೆ ಬೆಳ್ಳಿಯ ಚೂರಿದ್ದರೆ ಅದು ನಿಜವಾಗಿ ಅದರೊಳಗಿರಲೇ ಬೇಕಲ್ಲವೆ. ಹಾಗೆ ಈಶನೊಳಗೆ ಜಗತ್ತು ನಿಜವಾಗಿ ಅಡಗಿರಬೇಕಲ್ಲವೆ. ಅದು ಸುಳ್ಳು ಹೇಗಾ ದೀತು.

ಹಾಗೂ ಮರದ ಚೂರುಗಳನ್ನು ನೀರಲ್ಲಿ ನೆನೆಹಾಕಿದರೆ ಅವು ಕೊಳೆತು ದುರ್ಗಂಧವನ್ನು ಬೀರುತ್ತವೆ. ಆದರೆ ಶ್ರೀಗಂಧ ಅಗರು ಮುಂತಾದ ಮರದ ಚೂರುಗಳು ಅದೇ ನೀರಲ್ಲಿ ನೆನೆದೂ ತಮ್ಮ ಸುಗಂಧದಿಂದ ಅದರ ಕೃತಕ ದುರ್ಗಂಧವನ್ನು ಮರೆಸಿರುತ್ತವೆ ಎಂಬುದೂ ಇಲ್ಲಿ ಸರಿಯಲ್ಲ. ಆಯಾವಸ್ತುಗಳಿಗೆ ತಕ್ಕಂತೆ ದುರ್ಗಂಧ- ಸುಗಂಧಗಳು ನಿಜವಾಗಿ ಅವುಗಳಲ್ಲೇ ಇದ್ದು ನೀರು ಮುಂತಾದವುಗಳ ಸಂಪರ್ಕದಿಂದ ಹೊರಹೊಮ್ಮುವುವು. ಸುಗಂಧಾಂಶ ಹೆಚ್ಚಿರುವಾಗ, ದುರ್ಗಂಧಾಂಶ ಇದ್ದರೂ ಆಗ ಕಾಣದಿರಬಹುದೇ ಹೊರತು ಅದು ಇಲ್ಲದಿಲ್ಲ.

ಈಶನನ್ನು ನಾವು ಈಶನೆಂದು ತಿಳಿಯದಿರುವಾಗ ಅವನ ಈಶತ್ವವು ಮುಚ್ಚಲ್ಪಟ್ಟಿದೆ ಎಂದು ಹೇಳುವ ಪಕ್ಷಕ್ಕೆ ಮುಚ್ಚುವ ವ್ಯಕ್ತಿಯೇ ಆದ ಈಶನಿಗೆ ತನ್ನ ವ್ಯಕ್ತಿತ್ವವೇ ಮುಚ್ಚಿಹೋಗಿದೆ ಎಂದಂತಾಗುವುದಿಲ್ಲವೆ. ಹೀಗೆ ಈಶನಿಗೆ ಈಶತ್ವ ಇರುವುದೇ ಸುಳ್ಳು ಎಂದಂತಲ್ಲವೆ? ಈಶನೂ, ಅವನ ಈಶತ್ವವೂ ಒಂದೇ ಎನ್ನುವ ಪಕ್ಷಕ್ಕೆ ಈಶನೂ ಸುಳ್ಳೇ ? ಈಶನು ನಿಜವಾಗಿದ್ದ ಪಕ್ಷಕ್ಕೆ ತನ್ನ ಈಶತ್ವವನ್ನಾಗಲಿ ಜಗತ್ತನ್ನಾಗಲಿ ಮುಚ್ಚುವ ಅವಶ್ಯಕತೆ ಏನಿದೆ. ಅದು ಸಾಧ್ಯವೂ ಅಲ್ಲವಲ್ಲವೇ?

'ವಾಸ್ಯಂ' ಎಂಬ ಪದಕ್ಕೆ ಒಂದುಪಕ್ಷ ಮುಚ್ಚಲ್ಪಟ್ಟುದು ಎಂಬ ಅರ್ಥ ಇರಿಸಿಕೊಂಡರೂ ಜಗತ್ತು ಸುಳ್ಳು ಎಂಬ ಅಭಿಪ್ರಾಯ ಮಾತ್ರ ಎಂದಿಗೂ ಬರದು.

ನಾವು ಪರಮಾತ್ಮನ ಧ್ಯಾನದಲ್ಲಿ ಮಗ್ನರಾದರೆ ನಮ್ಮ ಮೈಗೆ ಗಾಳಿ, ಬಿಸಿಲು, ಮಳೆಗಳ ಸ್ಪರ್ಶವೂ ಸಹ ತಿಳಿಯದೆ ಇರುವುದಲ್ಲವೆ? ಹಾಗೆ ಜಗತ್ತಿನಲ್ಲಿ ಏನೇನಿದ್ದರೂ ಅದೇನೂ ನಮ್ಮ ಮನಸ್ಸಿಗೆ ಅಂಟದು. ಪರಮಾತ್ಮನೇ ಮುಖ್ಯ ಧ್ಯೇಯವಾದುದರಿಂದ ಬೇರೆ ಧ್ಯೇಯದ ದರ್ಶನ ನಮಗಾಗದು. ಈ ದರ್ಶನವಾಗದಿರುವುದರಿಂದಲೇ 'ಜಗತ್ತು ಮರೆಸಿಕೊಂಡಿದೆ, ಪರಮಾತ್ಮನು ಅದನ್ನು ಮುಚ್ಚಿಬಿಟ್ಟಿರುವನು' ಎಂದು ಹೇಳಿರಬಹುದಲ್ಲವೇ?

## ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಹಿನ್ನಲೆ

ಈ ಲೋಕದಲ್ಲಿ ಚೆನ್ನಾಗಿ ಬಾಳಿ ಬದುಕುವುದೂ ಯಜ್ಞದಾನ ಮೊದಲಾದ ಪುಣ್ಯ ಕರ್ಮಗಳನ್ನು ನಡೆಸಿ ಸ್ವರ್ಗ ಮುಂತಾದ ಸುಖಗಳನ್ನು ಪಡೆಯುವುದೂ ಎಲ್ಲರೂ ಬಯಸುವ ಅಂಶಗಳೇ ಅಹುದು. ಆದರೂ ಇವುಗಳಲ್ಲಿ ಮತ್ತೆ ಮತ್ತೆ ಸಾಂಸಾರಿಕ ನಿರ್ಬಂಧಗಳೂ ದುಃಖವೂ ಅಲ್ಪತೆಯೂ ಅಸ್ಥಿರತೆಯೂ ಕಂಡುಬರುವುವು.

### ಸಾರಾರ್ಥ

ಈವರೆಗೆ ಇಂತಹ ಅಲ್ಪಭೋಗಗಳಿಗೆ ಸಾಧಕವಾದ ಪುಣ್ಯಕರ್ಮಗಳನ್ನೆಲ್ಲ ತಿಳಿಸಿದ ವೇದವು ಈಗ ಶಾಶ್ವತವಾದ ಬ್ರಹ್ಮಾನಂದಸುಖವನ್ನೂ, ಅದಕ್ಕೆ ಸಾಧಕವಾದ ಬ್ರಹ್ಮೋಪಾಸನೆಯನ್ನೂ, ಅದಕ್ಕೆ ಅಂಗವಾದ ಕರ್ಮಗಳನ್ನು ಮಾಡುವಾಗ ಅವನ್ನೇ ಹದಮಾಡಿಕೊಳ್ಳಲು ಬುದ್ಧಿವಂತಿಕೆಯಿಂದ ಹೇಗೆ ಅವುಗಳನ್ನು ತ್ಯಾಗ ಮಾಡುವುದು ಎಂಬ ಅಂಶವನ್ನೂ, ಉಪದೇಶಿಸುತ್ತಿದೆ. ಇದೇ ಈಶಾವಾಸ್ಯದ ಮೊದಲ ಮಂತ್ರದ ಸಾರಾರ್ಥ.

### "ವಾಸ್ಯಂ" ಎಂಬುದರ ಅರ್ಥ

ವಾಸ್ಯಂ — ಹೊದಿಯಲು ಯೋಗ್ಯವಾದ, ಅಂದರೆ ಬಟ್ಟೆಬರೆಗಳಂತೆ ಇಷ್ಟಬಂದಂತೆ ಇಟ್ಟುಕೊಳ್ಳಲು ಬರುವ, ಒಟ್ಟಿನಲ್ಲಿ "ಪರತಂತ್ರ" ಎಂದರ್ಥ.

### ಭಾವಾರ್ಥ

ಎಲ್ಲವೂ ದೇವರ ಸ್ವತ್ತು. ಅವನ ಅಧೀನ. ಎಲ್ಲವೂ ಅವನ ಭೋಗಕ್ಕಾಗಿಯೇ, ಹೀಗಿರುವಾಗ ನಾವು ನಮ್ಮದು ನಮಗಾಗಿ ಇದು ಎಂದೆಲ್ಲ ತಿಳಿಯುವುದು ಭ್ರಮೆ. ಈ ಭ್ರಮೆಯಿಂದ ನಾವೇನನ್ನಾದರೂ ಅನುಭವಿಸಲು ಪ್ರಯತ್ನಿಸಿದರೆ ಅದರಿಂದ ನಮಗೆ ಸಂಸಾರವು ಬಂಧಕವಾಗುತ್ತದೆ. ನರಕಾದಿ ದುಃಖಗಳೂ

ಭರುವುವು. ಆದುದರಿಂದ ನಾವು ಯಾವುದನ್ನೂ ಅನುಭವಿಸದೆ ಸುಮ್ಮನಿರಬಹುದೇ? ಎಂದರೆ ಹಾಗಲ್ಲ. ದೇವರೇ ತನ್ನ ಭೋಗಕ್ಕಾಗಿ ನಮ್ಮಿಂದ ಈ ಪ್ರಯತ್ನಗಳನ್ನೆಲ್ಲ ಮಾಡಿಸುವನು; ನಮ್ಮದಾಗಿ ಏನೂ ಇಲ್ಲ ಎಂದು ಭಾವಿಸಬೇಕು. ಹಾಗೂ ಅವನಿಗೆ ಪೂಜೆ ಮಾಡಿ ಒಪ್ಪಿಸಿ ಉಳಿದ ಅಂಶವನ್ನು ನಾವು ದೇವರ ಪ್ರಸಾದವೆಂಬಂತೆ ಅನುಭವಿಸಬಹುದಷ್ಟೆ. ಲೋಕವ್ಯವಹಾರಕ್ಕಾಗಿ ನಮ್ಮದು ಎಂದು ಏನಿದ್ದರೂ ಅದನ್ನು ದೇವರದು ಎಂದು ಭಾವಿಸುವುದೇ ತ್ಯಾಗಮಾಡುವ ಬುದ್ಧಿಮತಿಕೆ. ಇದೇ ತತ್ತ್ವಜ್ಞಾನ. ಹೀಗೆ ಮಾಡಿದರೆ ಕಾಮಕ್ರೋಧಗಳಾಗಲೀ, ಕಲಹವಾಗಲೀ, ಸಾಂಸಾರಿಕ ಬಾಧವಾಗಲೀ, ದುಃಖವಾಗಲೀ ಉಂಟಾಗುವುದಿಲ್ಲ.

ಹೀಗೆ ತತ್ತ್ವಜ್ಞಾನಿಗಳು ಮಾಡುವ ಕೆಲಸಗಳಿಗೂ ಅಜ್ಞಾನಿಗಳು ಮಾಡುವ ಅದೇ ಕೆಲಸಗಳಿಗೂ ತಾರತಮ್ಯ ಇದೆ. ಒಟ್ಟಿನಲ್ಲಿ ಯಾವುದೇ ಕರ್ತವ್ಯ ಕೆಲಸಗಳನ್ನೂ ತತ್ತ್ವಜ್ಞಾನಿ ಬಿಡುವಂತಿಲ್ಲ.

"ಈ ರೀತಿ ಕರ್ಮಗಳನ್ನು ಮಾಡುತ್ತಲೇ ತ್ಯಜಿಸುವುದು" ಎಂಬ ಅಂಶವನ್ನು ಗೀತೆಯಲ್ಲಿ ಮೂರು ಮತ್ತು ಹದಿನೆಂಟನೆಯ ಅಧ್ಯಾಯಗಳ ಹಲವೆಡೆ ವಿವರವಾಗಿ ತಿಳಿಯಬಹುದು. ಇದನ್ನೇ ಭಾಷ್ಯಕಾರರಾದ ರಾಮಾನುಜರು "ಈ ಕೆಲಸದ ಫಲವು ನನಗಾಗಿ ಅಲ್ಲ; ಈ ಕೆಲಸ ನನ್ನದಲ್ಲ; ಇದರ ಮುಖ್ಯ ಕರ್ತ ನಾನಲ್ಲ; ದೇವರು. ಎಂಬುದೇ ಫಲ–ಸಂಗ–ಕರ್ತೃತ್ವಗಳ ತ್ಯಾಗ" ಎಂದು ಸ್ಪಷ್ಟಪಡಿಸಿರುತ್ತಾರೆ. ಭಾರದ್ವಾಜಸಂಹಿತೆಯಲ್ಲೂ, ಅದರ ಪರಿಶಿಷ್ಟದಲ್ಲೂ ಭಗವದ್ರಾಮಾನುಜರ ನಿತ್ಯಾರಾಧನಗ್ರಂಥದಲ್ಲೂ ಈ ಅಂಶ ಸ್ಪಷ್ಟವಾಗಿ ಇದೆ.

## ಕೆಲವು ಮನನೀಯ ಅಂಶಗಳು

ಬ್ರಹ್ಮವಿದ್ಯೆಯಲ್ಲಿ ನಾವು ಗಮನಿಸಬೇಕಾದ ಅಂಶಗಳು ಕೆಲವು.

೧. ಪರಮಾತ್ಮ ಸ್ವತಂತ್ರ, ಜೀವಾತ್ಮರಾದ ನಾವೆಲ್ಲ ಪರತಂತ್ರ.

೨. ಅವನು ನಮ್ಮನ್ನು ಆಡಿಸುವವನು, ನಾವು ಆಡುವವರು.

೩. ಅವನು ಪ್ರಧಾನ, ನಾವು ಅಪ್ರಧಾನ.

೪. ಅವನು ಒಡೆಯ, ನಾವು ಆಳುಗಳು ಎಂದು.

ಹೀಗೆ ಈ ಮಂತ್ರದಲ್ಲಿ ಪರಮಾತ್ಮ, ಜೀವಾತ್ಮಗಳ ಬಗ್ಗೆ ನಾಲ್ಕು ನಾಲ್ಕು ಅಂಶಗಳನ್ನೂ ಕರ್ಮದ ಬಗ್ಗೆ ಮೂರುವಿಧ ತ್ಯಾಗಭಾವನೆಯನ್ನೂ, ಕರ್ಮ ಅವಶ್ಯಕರ್ತವ್ಯ ಎಂಬ ಅಂಶವನ್ನೂ ಸೂಕ್ಷ್ಮವಾಗಿ ತಿಳಿಸಲಾಗಿದೆ.

## ಅರ್ಥಾಂತರಗಳ ಚರ್ಚೆ

ಜ್ಞಾನಿಯಾದವನು ಜಗತ್ತನ್ನು ಬಿಡಬೇಕು, ಕರ್ಮಗಳನ್ನು ಸಂಪೂರ್ಣ ತ್ಯಾಗ ಮಾಡಬೇಕು, ಎಂಬುದಾಗಲಿ, ಜ್ಞಾನಿಯಲ್ಲದವನು ಮಾತ್ರ ಕರ್ಮ ಮಾಡಬೇಕೆಂದು ಇದೇ ಈಶಾವಾಸ್ಯದ ಎರಡನೆಯ ಮಂತ್ರದಲ್ಲಿ ಹೇಳಲಾಗುವುದು ಎಂದಾಗಲಿ, ನಾವು ತಿಳಿಯಬಾರದು. ಜ್ಞಾನಿಯಲ್ಲದವರು ಮಾಡಬೇಕಾದ ಕರ್ಮಗಳ ರೀತಿಯೆಲ್ಲವನ್ನೂ ಈ ಹಿಂದೆಯೇ ಕರ್ಮಕಾಂಡಭಾಗದಲ್ಲಿ ಹೇಳಿ ಮುಗಿಸಿ ಆಗಿದೆ. ಈಗ ಹೇಳುತ್ತಿರುವ ವಿಷಯವೆಲ್ಲವೂ ಜ್ಞಾನಿಗಳಿಗಾಗಿ. ಎರಡನೆಯ ಮಂತ್ರದಲ್ಲಿ ಜ್ಞಾನಿಯೂ ಕರ್ಮ ಮಾಡಲೇಬೇಕು. ಆದರೆ ಅದರಲ್ಲಿ ವಿಶೇಷವಿದೆ ಎಂದು ತಿಳಿಸಲಾಗುವುದಷ್ಟೆ. ಆದುದರಿಂದ ಈ ಮೊದಲನೆಯ ಮಂತ್ರವೂ ಜ್ಞಾನಿಗಳ ಕರ್ಮವನ್ನೂ ಜೀವನ ಮಾರ್ಗವನ್ನೂ ಬೆಂಬಲಿಸುತ್ತದೆ.

"ಈ ಜಗತ್ ಎಂದರೆ ಸಂಚರಿಸುವ ಜೀವಿಗಳೆಲ್ಲವೂ ಎಂದರ್ಥ. ಸಂಚರಿಸಲಾಗದ ಮರಗಿಡಗಳು ಮುಂತಾದುವಲ್ಲ. ಈ ಚರಜೀವಿಗಳಲ್ಲಿ ಮೇಲು-ಕೀಳು ಒಡೆಯ-ಆಳು ಎಂಬ ಭೇದಗಳೇ ಇವೆ. ಇಂತಹ ಒಡೆಯ-ಆಳು ಎಂಬ ಸಂಬಂಧವನ್ನು ಪರಿಗಣಿಸದೆ ಬಿಡಬೇಕು. ಹೀಗೆ ನಾವು ಎಲ್ಲವನ್ನೂ ಭೇದವಿಲ್ಲದೆ ನಮ್ಮ ಭೋಗವಸ್ತುವನ್ನಾಗಿ ಮಾಡಿಕೊಂಡು ಅನುಭವಿಸಬೇಕು. ಹಾಗೂ ಯಾವುದರಲ್ಲೂ ಮಮತೆಯನ್ನು ಇಟ್ಟು ಕೊಳ್ಳಬಾರದು. ಯಾವುದೂ ಯಾರಿಗೂ ಸ್ವತ್ತಲ್ಲ" ಎಂದು ಈ ಮಂತ್ರದ ಭಾವವನ್ನು ವಿವರಿಸುವುದು ಸರಿಯಲ್ಲ. ಕಾರಣ ಇಲ್ಲಿ ಜಗತ್ ಎಂದರೆ ಜೀವಿಗಳಷ್ಟೇ ಎನ್ನುವುದೂ, ಒಡೆಯ-ಆಸ್ತಿ ಎಂಬ ಸಂಬಂಧ ಎಂಬ ಹೊಸ ಅಂಶವನ್ನು ನಾವಾಗಿ ಸೇರಿಸಿಕೊಳ್ಳುವುದೂ, ಭೋಗಗಳನ್ನು ಅನುಭವಿಸು ಎನ್ನುವುದೂ, ಯಾವುದೂ ಯಾರೊಬ್ಬರ ಸ್ವತ್ತೂ ಅಲ್ಲವಾಗಿ ಯಾರು ಏನನ್ನು ಬೇಕಾದರೂ ಅನುಭವಿಸಲು ಅವಕಾಶವಾಗುವುದೂ ಇವೆಲ್ಲ ಮಂತ್ರದ ಯಥಾವತ್ತಾದ ಅರ್ಥವಾಗಲಾರದಷ್ಟೆ!

## ಪಾಠಾಂತರ–ಅರ್ಥಗಳ ಚರ್ಚೆ

ಮಂತ್ರಗಳನ್ನು ಬಿಡಿಸಿ ಪಠಿಸುವ ಮಹರ್ಷಿಗಳ ಪರಂಪರೆಯಲ್ಲಿ 'ಈಶಾ–ವಾಸ್ಯಂ' ಎಂದು ಎರಡು ಪ್ರತ್ಯೇಕ ಪದಗಳೆಂಬುದು ಸಿದ್ಧವಾದ ಅಂಶ. ವಾಸ್ಯಂ ಎಂಬ ಪದಕ್ಕೆ ಹೊದೆದುಕೊಳ್ಳಲು ಅರ್ಹವಾದುದು ಎಂಬುದು ನೇರವಾದ ಅರ್ಥ. 'ವಸ–ಆಚ್ಛಾದನೇ' ಎಂದು ವ್ಯಾಕರಣದಲ್ಲಿ ಧಾತುಪಾಠ. ಹೊದಿಯುವುದು ಎಂಬ ಅರ್ಥದಲ್ಲಿ 'ವಸ' ಎಂಬ ಮೂಲ ಶಬ್ದ ಬಳಸಲಾಗಿದೆ ಎಂದು ಇದರ ಅರ್ಥ. ಹೀಗಾಗಿ ವಾಸ್ಯಂ ಎಂದರೆ ನಮ್ಮಿಷ್ಟಬಂದಂತೆ ಹೊದಿಯಲು ಅರ್ಹವಾದ ಬಟ್ಟೆಬರೆಗಳಂತೆ ಈ ಜಗತ್ತು ದೇವರಿಗೆ ಪರತಂತ್ರ ಎಂಬುದು ಭಾವಾರ್ಥ.

ವಾಸ್ಯಂ ಎಂಬುದಕ್ಕೆ ವ್ಯಾಪ್ತಿಗೆ ಒಳಪಡುವಂತಹದು ಎಂಬ ಅರ್ಥವನ್ನು ನೇರವಾಗಿ ಮಾಡಲಾಗುವುದಿಲ್ಲ. "ವಸ–ನಿವಾಸೇ" ಎಂಬುದೂ ಒಂದು ಧಾತುಪಾಠ. ಇದಕ್ಕೆ ವಾಸಮಾಡುವುದು ಎಂದರ್ಥ. ವಾಸಿಸಲು ಅರ್ಹವಾದುದು ಮನೆ. ಅದರಂತೆ ವಾಸ್ಯ ಎಂದರೆ ಪರಮಾತ್ಮನಿಗೆ ವಾಸಿಸಲು ತಕ್ಕದು ಈ ಜಗತ್ ಅನ್ನಬೇಕು.

ಈ ಅರ್ಥದಲ್ಲಿ ವಾಸ್ಯಂ ಎಂಬುದಾಗಿ ಪದವನ್ನು ತಯಾರಿಸಲು ವ್ಯಾಕರಣದಲ್ಲಿ ಅವಕಾಶವಿಲ್ಲ. ವ್ಯಾಪ್ತಿಗೆ ಒಳಪಡುವ ವಸ್ತು ವ್ಯಾಪ್ತಿಗೆ ಕರ್ಮವೆನಿಸುತ್ತದೆ. ಕರ್ಮಾರ್ಥದಲ್ಲಿ "ಣ್ಯತ್" ಎಂಬ ಪ್ರತ್ಯಯ ಸೇರಬೇಕು. ಈ ವಸ ಧಾತು ಸಕರ್ಮಕವಲ್ಲ ಎನ್ನುತ್ತದೆ ವ್ಯಾಕರಣ. ಹೀಗಾಗಿ ಕರ್ಮಾರ್ಥವೇ ಇಲ್ಲದೆ "ಣ್ಯತ್" ಪ್ರತ್ಯಯ ಬರಲಾರದು. ಹಾಗೂ "ವಾಸ್+ಯ" ಎಂಬ ಪದದ ರಚನೆ ಆಗಲಾರದು.

ಆದುದರಿಂದ ಈ ಅರ್ಥ ಮಾಡಬೇಕಾದರೆ ಬೇರೆ ದಾರಿ ಹಿಡಿಯಬೇಕು. ವಸ ಧಾತುವನ್ನು ವಾಸವಿರುವುದು ಎಂಬ ಅರ್ಥದಿಂದ ವಾಸವಿರಿಸುವುದು ಎಂಬ ಅರ್ಥಕ್ಕೆ ಬದಲಾಯಿಸಿಕೊಳ್ಳಬೇಕು. ಈ ಬದಲಾವಣೆಗೆ "ಣಿ" ಎಂಬ ಗುರುತನ್ನು ಕೊನೆಗೆ ಸೇರಿಸಬೇಕೆನ್ನುತ್ತವೆ ವ್ಯಾಕರಣ. ಹೀಗಾದಾಗ ವಸ ಎಂಬುದು "ವಾಸ್" ಎಂಬ ಬದಲಾವಣೆಯೊಂದಿಗೆ ಸಕರ್ಮಕವೆನಿಸುತ್ತದೆ. ಇಂತಹ ಕರ್ಮಾರ್ಥದಲ್ಲಿ "ಣ್ಯತ್" ಪ್ರತ್ಯಯ ಸೇರಿಸಬೇಕು. ಆಗ ಣ್ಯತ್ತಿನ 'ಯ' ದೊಡನೆ ಸೇರಿ "ವಾಸ್+ಯ" ಎಂಬ ಪದ ಸಿದ್ಧವಾಗುವುದು.

ಹೀಗಾಗಿ–ವಸಧಾತುವಿಗೆ ವಾಸ ಮಾಡಿಸುವುದು — ಒಕ್ಕಲಿರಿಸುವುದು ಎಂದೂ, ವಾಸ್ಯಂ ಎಂದರೆ ಪರಮಾತ್ಮನು ಈ ಜಗತ್ತನ್ನು ತನ್ನ ಆಜ್ಞಾನುಸಾರ ಒಕ್ಕಲಿರಿಸುವವನಾಗಿ ಈ ಜಗತ್ತು ಒಕ್ಕಲಿರಿಸಲ್ಪಡಲು ಅರ್ಹವಾದುದೆಂಬೂ ಅರ್ಥ. ಈ ಜಗತ್ತೆಲ್ಲ ಪರಮಾತ್ಮನ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿದೆ; ಇದೆಲ್ಲವೂ ಅವನ ಸ್ವತ್ತು ಅವನಿಗೆ ಪರತಂತ್ರ ಎಂದು, ಇದರ ಒಟ್ಟಾರೆ ಅಭಿಪ್ರಾಯ.

ನಾವು ಈಶ್+ಆವಾಸ್ಯಂ ಎಂಬ ಎರಡುಪದಗಳನ್ನು ಒಗ್ಗೂಡಿಸಿ ಒಂದುಪದ ಮಾಡಿಕೊಳ್ಳಬಹುದಾಗಿದೆ. ಆದರೆ ಇದು ಮಹರ್ಷಿಗಳಿಗಾಗಲಿ ವೇದಪುರುಷನಿಗಾಗಲಿ ಸಮ್ಮತವಲ್ಲ. ಆದರೂ ಈಗ ನಮಗೆ ದೊರಕದ ವೇದಭಾಗಗಳಲ್ಲೆಲ್ಲೋ ಈರೀತಿ ಪಾಠವಿರಬಹುದೆಂದು ಊಹಿಸಬಹುದು. ಹೀಗೆ ಊಹಿಸಿದರೆ ಆವಾಸ್ಯಂ ಎಂಬ ಅಂಶ ಒಪ್ಪಿದಂತಾಗುವುದು.

ಹೀಗೆ ಆವಾಸ್ಯಂ ಎಂದಾಗ ಮಾತ್ರ ವ್ಯಾಪ್ತಿಗೆ ಒಳಪಡಲು ಅರ್ಹವಾದುದು ಎಂಬ ಅರ್ಥ ನೇರವಾಗಿ ಸಿಗುವುದು. 'ಆ' ಎಂಬ ಅಂಶ ಮೊದಲು ಸೇರಿದಾಗ ನಿವಾಸ ಎಂಬ ಅರ್ಥದ ವಸಧಾತು ಸಕರ್ಮಕವಾಗುವುದು. ಹಾಗೂ ಅರ್ಹ ಎಂಬ ಅರ್ಥದಲ್ಲಿ 'ಣ್ಯತ್' ಪ್ರತ್ಯಯ ಸೇರುವುದು.

ಇಷ್ಟಾದರೂ ನಾವು ಊಹಿಸಲು ಪ್ರಾಚೀನ ಆಧಾರ ಏನಿದೆ? ವಿಚಾರ ಮಾಡೋಣ. ಶ್ರೀಭಾಷ್ಯ ವ್ಯಾಖ್ಯಾನವಾದ ಶ್ರುತಪ್ರಕಾಶಿಕೆಯಲ್ಲಿ "ಅಥವಾ ದೇವರಿಂದ ವ್ಯಾಪಿಸಲು ಅರ್ಹವಾದುದು, ದೇವರಿಗೆ ಅಧೀನ ವಾದುದು ಎಂದರ್ಥ"[1] ಎಂಬ ಮಾತಿದೆ. ಇಲ್ಲಿ ಈಶಾವಾಸ್ಯಂ ಎಂಬುದು[2] ಒಂದೇ ಪದ ಎಂಬ ಅಭಿಪ್ರಾಯ ದಿಂದ ಈರೀತಿ ವಿವರಿಸಲಾಗಿದೆ. ಕೆಲವು ಮಂತ್ರಗಳು ಸಂಹಿತೆಯಲ್ಲೂ[3] ಶಾಖೆಯಲ್ಲೂ[4] ಇರುವುದರಿಂದ ಈ ಮಂತ್ರವು ಯಾವುದೋ ಶಾಖೆಯಲ್ಲಿರಬಹುದೆಂದೂ ಶಾಖೆಯಲ್ಲಿ ಪದಪಾಠದ ನಿಯಮವಿಲ್ಲವಾಗಿ ಈಶಾವಾಸ್ಯಂ

---

1. ಯದ್ವಾ ಈಶೇನ_ಆವಾಸ್ಯಂ ಈಶ್ವರಪರತಂತ್ರಮಿತ್ಯರ್ಥಃ.

2. 'ಸ್ಮೃತಯೋಽನುಮತಿರ್ವಾ' ಎಂಬ ಬ್ರಹ್ಮಸೂತ್ರ (೩-೪-೧೪) ಭಾಷ್ಯದ ಶ್ರುತಪ್ರಕಾಶಿಕೆಯಲ್ಲಿ ಈಶಾವಾಸ್ಯ ಎಂಬುದನ್ನು ಸಮಸ್ತಪದವನ್ನಾಗಿಯೂ, ಈಶಾ, ವಾಸ್ಯಂ ಎಂಬುದಾಗಿ ಭಿನ್ನಪದಗಳನ್ನಾಗಿಯೂ ಇಟ್ಟುಕೊಂಡು ಅರ್ಥವನ್ನು ವಿವರಿಸಿ ದ್ದಾರೆ. ಎರಡು ಬಗೆಯ ಪದವಿಭಾಗದಲ್ಲೂ ಅರ್ಥದಲ್ಲಿ ವ್ಯತ್ಯಾಸವಿರುವುದಿಲ್ಲ.

3. ವೇದಗಳಲ್ಲಿ ಮಂತ್ರಗಳ ಸಂಕಲಿತ ಭಾಗಗಳಿಗೆ 'ಸಂಹಿತೆ' ಎಂದು ಹೆಸರು.

4. ಯಜ್ಞಯಾಗಾದಿಗಳಲ್ಲಿ ಮಂತ್ರಗಳ ಬಳಕೆಯನ್ನೂ ಕೆಲವೆಡೆ ಅರ್ಥಗಳನ್ನೂ ಕೆಲವೆಡೆ ಯಜ್ಞಾದಿಗಳ ಫಲಿತಾಂಶವನ್ನೂ ಇದಕ್ಕೆ ರೋಚಕವಾದ ಇತಿಹಾಸಗಳನ್ನೂ ತಿಳಿಸುವ ಭಾಗಗಳಿಗೆ 'ಬ್ರಾಹ್ಮಣ' ಎಂದೂ 'ಶಾಖೆ' ಎಂದೂ ಹೆಸರಿದೆ. ಕೆಲವು ಮಂತ್ರಗಳು ಸಂಹಿತೆಯಲ್ಲಿ ಇಲ್ಲ. ಪ್ರಯೋಗದ ವಿವರಣೆಯಾದ ಶಾಖೆಯಲ್ಲಿವೆ. ಮತ್ತೆ ಕೆಲವು ಸಂಹಿತೆಯಲ್ಲೂ ಶಾಖೆ ಯಲ್ಲೂ ಪಠಿಸಲಾಗಿವೆ.

ವೇದವಾಕ್ಯಗಳಲ್ಲಿ ಸಂಹಿತಾಭಾಗಗಳನ್ನು ಮಾತ್ರ ಪದಪದವಾಗಿ ವಿಂಗಡಿಸಿ ಸಂಪ್ರದಾಯ ಪರಂಪರೆಯಾಗಿ ಪಠಿಸುತ್ತಿ ದ್ದಾರೆ. ಶಾಖೆಯ ಭಾಗಗಳನ್ನೂ ಆರಣ್ಯಕ ಭಾಗಗಳನ್ನೂ ಉಪನಿಷತ್ ಭಾಗಗಳನ್ನೂ ಈ ರೀತಿ ಪಠಿಸುವುದಿಲ್ಲ. ಹೀಗಾಗಿ ಸಂಹಿತೆ ಬಿಟ್ಟು ಇತರ ಭಾಗಗಳಲ್ಲಿ ನಾವಾಗಿಯೇ ಪದಗಳನ್ನು ಔಚಿತ್ಯಾನುಸಾರ ಬಿಡಿಸಿಕೊಳ್ಳಬಹುದು.

ವೇದಗಳಲ್ಲಿ ಶಾಖೆಗಳು ಸಾವಿರಾರು ಇದ್ದವು. ಈಗ ಈ ಶತಮಾನದಲ್ಲಿ ಉಳಿದಿರುವುವು ಎಲ್ಲೋ ನಾಲ್ಕಾರು ಮಾತ್ರ. ನಷ್ಟವಾದ ಶಾಖೆಗಳಲ್ಲೆಲ್ಲಿಯಾದರೂ 'ಈಶಾವಾಸ್ಯಂ' ಎಂಬ ಒಂದೇ ಪದದ ಪಾಠ ಇದ್ದಿರಬಹುದಲ್ಲವೆ!

ಎಂಬುದನ್ನು ಈಶ+ಆವಾಸ್ಯಂ[1] ಎಂದು ಒಟ್ಟುಪದವಾಗಿ ಮಾಡಿಕೊಳ್ಳಲು ಅವಕಾಶವಿದೆಯೆಂದೂ ತಿಳಿಯ ಬೇಕು.

'ಈಶಾ,ವಾಸ್ಯಂ' ಎಂಬ ಎರಡು ಪದಗಳಿರುವ ಮುಖ್ಯ ಪಕ್ಷದಲ್ಲೂ ಪರಮಾತ್ಮನಿಂದ ಈ ಜಗತ್ತು ಹೊದಿಯುವ ವಸ್ತ್ರಾದಿಗಳಂತೆ ತನ್ನಿಷ್ಟದಂತೆ ಇರಿಸಲು ಅರ್ಹವಾಗಿದೆ ಎಂದೇ ತಾತ್ಪರ್ಯ, ಎಂಬುದೂ ಶ್ರುತ ಪ್ರಕಾಶಿಕೆಯ[2] ಅಭಿಪ್ರಾಯ.

### ಈಶನು ಯಾರು?

ಈಶ+ಆವಾಸ್ಯಂ ಎಂಬ ಪಾಠಾಂತರದಿಂದ ನಾವು ಇಲ್ಲಿ ಈಶ ಎಂದರೆ ರುದ್ರನೇ ಎಂದು ಅರ್ಥ ಮಾಡಬಹುದಲ್ಲವೇ? ಎಂದರೆ, ಮಾಡಲು ಅವಕಾಶವಿಲ್ಲ ಎಂಬುದಕ್ಕೆ ಸಾಕಷ್ಟು ಕಾರಣಗಳಿವೆ.

ಈಶನು ಯಾರು ಎನ್ನುವ ಈಶಾವಾಸ್ಯದ ಕೊನೆಯ ಮಂತ್ರಗಳಲ್ಲಿ 'ಪೂಷನ್' ಎಂದೂ 'ಪುರುಷ' ಎಂದೂ ಉತ್ತರವಿದೆ. ಅಲ್ಲಿ 'ಕಲ್ಯಾಣತಮಂ ರೂಪಂ' ಎಂಬ ಗುರುತೂ ಇದೆ. ಪೂಷಾ ಎಂದರೆ ಸೂರ್ಯ ಹಾಗೂ ಸೂರ್ಯನ ಮಧ್ಯೆ ಇರುವ ನಾರಾಯಣ. ಪುರುಷ ಎಂದರೂ ನಾರಾಯಣನೇ. ಈ ಅಂಶ "ಪುರುಷ ಸೂಕ್ತ" ಮಂತ್ರಗಳಲ್ಲೂ ಮಹೋಪನಿಷತ್ತಿನಲ್ಲೂ ಸ್ಪಷ್ಟವಾಗಿದೆ. ಹಾಗೂ ಸೂರ್ಯನಾರಾಯಣ ನನ್ನು ಛಾಂದೋಗ್ಯೋಪನಿಷತ್ತಿನಲ್ಲಿ ಕಲ್ಯಾಣರೂಪವನ್ನಾಗಿ ವರ್ಣಿಸಲಾಗಿದೆ. ಅಲ್ಲಿಯ ಮಾತಿನಲ್ಲೇ ಹೇಳುವು ದಾದರೆ ಅವನು ಪುಂಡರೀಕಾಕ್ಷ, ಹಿರಣ್ಮಯಪುರುಷ ಹಾಗೂ ಒಂದಿನಿತೂ ಪಾಪದ ಸಂಬಂಧವಿಲ್ಲದೆ ಉತ್ತಮ ನಾದವನು, ಉತ್ ಎಂದು ಹೆಸರಾಂತವನು.

---

1. ಶ್ರುತಪ್ರಕಾಶಿಕೆಯಲ್ಲಿ 'ಈಶಾ,ಆವಾಸ್ಯಂ' ಎಂದು ಎರಡು ಪದಗಳನ್ನಾಗಿಯೇ ಇಟ್ಟುಕೊಂಡಿರಬಹುದಾಗಿದೆ, ಕಾರಣ ಇದು ಒಟ್ಟು ಒಂದು ಪದವೆಂದು ಅವರೆಲ್ಲೂ ಹೇಳಿಲ್ಲ. ಈಶಾ, ಆವಾಸ್ಯಂ ಎಂದು ಬಿಡಿಸಿಟ್ಟುಕೊಂಡರೂ, ಈಶಾ+ಆವಾಸ್ಯಂ ಎಂದು ಒಗ್ಗೂಡಿಸಿದರೂ ಸಹ ಶ್ರುತಪ್ರಕಾಶಿಕೆಯಲ್ಲಿನ ಅರ್ಥಕ್ಕೆ ಏನೂ ವ್ಯತ್ಯಾಸವಿಲ್ಲವಾಗಿ ನಾವು ಒಂದು ಪದವೆನ್ನಲು ಸಾಕಷ್ಟು ಬೇರೆ ಆಧಾರಬೇಕು. ವೇದಗಳ ಅರ್ಥವನ್ನೇ ವಿವರಿಸಲೂ ಅದಕ್ಕಾಗಿ ಸಹಾಯಕ ಅಂಶಗಳನ್ನು ಒದಗಿಸಲೂ ಇರುವ ಇತಿಹಾಸ ಪುರಾಣಗಳಲ್ಲಿ ಭಾಗವತದ ಎಂಟನೇ ಸ್ಕಂಧದ ಮೊದಲನೇ ಅಧ್ಯಾಯದಲ್ಲಿ "ಈಶಾವಾಸ್ಯಂ" ಎಂಬ ಅರ್ಥ ವನ್ನು 'ಆತ್ಮಾವಾಸ್ಯಂ' ಎಂಬ ಒಂದೇ ಪದದಲ್ಲಿ ಹೇಳಿ ಉಳಿದ ಮಂತ್ರ ಭಾಗವನ್ನು ಮಾತ್ರ ಇದ್ದಂತೆಯೇ ಹೇಳಲಾಗಿದೆ.

ಹೀಗೆ ಈಶನಿಂದ ಆವಾಸ್ಯ ಈ ಜಗತ್ತು. ಈಶನೇ ಆತ್ಮಗಳಿಗೂ ಆತ್ಮ. ಆದುದರಿಂದ ಈಶಾವಾಸ್ಯ ಎಂದರೆ ಆತ್ಮಾವಾಸ್ಯ ಎಂದರ್ಥ. ಇದರ ಅನುಸಾರ 'ಈಶಾವಾಸ್ಯ' ಎಂಬ ಒಂದು ಪದ ವೇದದಲ್ಲೂ ಇದ್ದಿರಬೇಕು. ಇದ್ದುದರಿಂದಲೇ ಆತ್ಮಾ ವಾಸ್ಯಂ ಎಂಬ ಒಂದೇ ಪದವನ್ನು ಇಲ್ಲಿ ಬಳಸಲಾಗಿದೆ ಎಂದಿಷ್ಟು ನಮ್ಮ ಊಹೆಗೆ ಆಧಾರ ಎನ್ನಬಹುದು.

2. ಶ್ರುತಪ್ರಕಾಶಿಕೆಯ ಮಾತಿನಲ್ಲಿ ವ್ಯಾಪ್ಯಂ ಎಂದಷ್ಟೆ ಇರುವುದಲ್ಲದೆ ವಾಸ್ಯಂ ಎಂದಾಗಲೀ, ಧಾರ್ಯಂ ಎಂದಾಗಲೀ, ಪ್ರತಿ ಷ್ಠಾಪನೀಯಂ ಎಂದಾಗಲಿ, ಸ್ಪಷ್ಟವಾದ ವಿವರಣೆ ಇಲ್ಲ. ಆದರೆ ಈ ಎಲ್ಲ ವಿವರಣೆಗಳ ತಾತ್ಪರ್ಯವಾಗಿ 'ಪರತಂತ್ರ' ಎಂದು ಅವರು ಬಳಸಿರುವರು. ಈ ಮಾತ್ರದಿಂದಲೇ 'ವಾಸ್ಯಂ' ಎಂಬ ಪದಕ್ಕೆ 'ಹೊದಿಯಲು ಅರ್ಹವಾದುದು' ಎಂದೊಂದೇ ಅಭಿ ಪ್ರಾಯ ಎಂದು ನಿರ್ಧರಿಸುವುದು ತಪ್ಪು. ಯಾವುದೇ ವಿಧದಿಂದ ವ್ಯಾಕರಣಾನುಸಾರ ಪದದ ಒಳ ಅರ್ಥವನ್ನು ಹೊರಗೆಡಹಿ ದರೂ ಜಗತ್ತು ದೇವರಿಗೆ ಪರತಂತ್ರ ಎಂಬ ಒಟ್ಟು ಭಾವಕ್ಕೆ ಏನೂ ಕುಂದಿಲ್ಲ. ಹೀಗೆ ಇಲ್ಲಿ ಯಾವುದೇ ಒಂದರ್ಥವನ್ನು ಒಪ್ಪಿ ಉಳಿದವನ್ನು ಕೈ ಬಿಡಲಾಗಲಿ ಖಂಡಿಸಲಾಗಲಿ ಅವಕಾಶವಿಲ್ಲ. ಈ ತಾತ್ಪರ್ಯಾರ್ಥ ಇಟ್ಟುಕೊಂಡರೆ ಮಂತ್ರಗಳ ಹೊಂದಾಣಿಕೆಗೂ ಏನೂ ಭಂಗವಿಲ್ಲ. ಬೇರೆ ಏನನ್ನೂ ಮಧ್ಯೆ ಸೇರಿಸಿ ಅರ್ಥ ಮಾಡಬೇಕಿಲ್ಲ. ಹಾಗೂ ಶಬ್ದದ ಸ್ವಾಭಾವಿಕ ಅರ್ಥಗಳಿಗೂ ಭಂಗವಿಲ್ಲ.

ವೇದದಲ್ಲಿ ಶತಪಥಶಾಖೆಯ ಅಷ್ಟಮೂರ್ತಿಬ್ರಾಹ್ಮಣ ಎಂಬ ಭಾಗದಲ್ಲಿ ರುದ್ರನದೇ ಆದ ಮಾತೊಂದಿದೆ. "ನನಗೆ ಒಂದಿನಿತೂ ಪಾಪ ಪರಿಹಾರವಾಗಿಲ್ಲ, ನನಗೊಂದು ಹೆಸರೂ ಇಟ್ಟಿಲ್ಲ, ನನ್ನ ಪಾಪ ಕಳೆಯಲು ನನಗೊಂದು ಹೆಸರಿಡು".[1] ಎಂದು.

ಹೀಗೆ ಪುಂಡರೀಕಾಕ್ಷನಿಗೂ, ವಿರೂಪಾಕ್ಷನಿಗೂ ಬಹಳ ತಾರತಮ್ಯವಿದ್ದು, ನಮ್ಮ ಈಶಾವಾಸ್ಯದ ಈಶನು ಪುಂಡರೀಕಾಕ್ಷನಾದ ನಾರಾಯಣನೇ[2] ಹೊರತು ವಿರೂಪಾಕ್ಷ ರುದ್ರನಲ್ಲ.

## "ತೇನ ತ್ಯಕ್ತೇನ ಭುಂಜೀಥಾಃ"

ಈ ಮಾತಿಗೆ, ನಮ್ಮ ದೇವರ ಪೂಜೆಗೂ ದೇಹ ಧಾರಣೆಗೂ ಎಷ್ಟು ಬೇಕೋ ಅಷ್ಟು ಮಾತ್ರ ಇಟ್ಟುಕೊಂಡು ಬೇರೆಯದೆಲ್ಲವನ್ನೂ ತ್ಯಜಿಸಬೇಕು, ದೇವರಿಗೆ ಒಪ್ಪಿಸಿ ಪ್ರಸಾದವಾಗಿ ಉಳಿದುದನ್ನು ಮಾತ್ರ ಅನುಭವಿಸಬೇಕು ಎಂಬ ಅರ್ಥವನ್ನಾಗಲಿ ದೇವರನ್ನು ಅನುಭವಿಸಬೇಕು ಎಂಬ ಅರ್ಥವನ್ನಾಗಲಿ ಮಾಡಬೇಕಾದರೆ ಪ್ರಕರಣವನ್ನು ಅನುಸರಿಸಿ ಬೇರೆ ಅರ್ಥದಿಂದ ಈ ಅರ್ಥವನ್ನು ಮಥಿಸಿ ತೆಗೆಯಬೇಕು.

ಜಗತ್ ಎಂಬ ಪದಕ್ಕೆ ನಾವು ಇಲ್ಲಿ ಅನುಭವಿಸಬೇಕಾದ ವಸ್ತುಗಳನ್ನು ಎಂದರ್ಥ ಮಾಡಿದರೆ ಆಚಾರ್ಯರೆಲ್ಲರ ಭಾವವೂ ಬಳಸುದಾರಿಯಿಲ್ಲದೆ ನೇರವಾಗಿಯೇ ಸಿಗುವುದು.

## ತ್ರಿವಿಧತ್ಯಾಗ ಎಲ್ಲಿ ಹೇಳಿದೆ?

ಈ ಮಂತ್ರದಲ್ಲಿ ಸಾಮಾನ್ಯವಾಗಿ ಜಗತ್ತಿನ ಎಲ್ಲ ವಸ್ತುಗಳನ್ನೂ ಬಿಡು ಎಂದು ಹೇಳಿದಿಯಲ್ಲದೆ, ಮಾಡುವ ಕೆಲಸಗಳಲ್ಲಿ ಫಲ-ಸಂಗ-ಕರ್ತೃತ್ವ ಭಾವನೆಗಳನ್ನು ಬಿಡು ಎಂದು ಹೇಳಿಲ್ಲವಲ್ಲ? ಎಂದು ಪ್ರಶ್ನಿಸಬಹುದು.

## ಇದಕ್ಕೆ ಉತ್ತರ

ಬದುಕಿರುವಾಗ ಈ ಜಗತ್ತನ್ನು ಬಿಡುವುದು ಹೇಗೆ ಸಾಧ್ಯ? ಬಿಟ್ಟ ಮೇಲೆ ಅನುಭವಿಸುವುದು ಹೇಗೆ ಸಾಧ್ಯ? ಮಂತ್ರದಲ್ಲಿ 'ಬಿಟ್ಟು ಅನುಭವಿಸು' ಎಂದಷ್ಟೇ ಹೇಳಿರುವುದು. ಜಗತ್ತನ್ನು ಅನುಭವಿಸುವುದು ಬದುಕಿರುವವರಿಗೆಲ್ಲ ಸಹಜ. ಎಲ್ಲರೂ ಯಾವ ಭಾವದಿಂದ ಅನುಭವಿಸುತ್ತಾರೆ? ಎಂದರೆ – ಇದು ನನ್ನದು, ನಾನು ಮಾಡುವೆನು, ಇದರ ಫಲಿತಾಂಶವೆಲ್ಲ ನನಗೇ, ಎಂಬ ಭಾವದಿಂದ. ಇಲ್ಲಿ ಈ ಅನುಭವ ಎಂಬ ಕರ್ಮ–ಕೆಲಸವೂ, ಅದಕ್ಕಾಗಿ ನಾವು ಮಾಡುವ ಪ್ರಯತ್ನವೂ ಸಹಜವಾಗಿ ಇದ್ದೇ ಇರುವುದು. ಈ ಕರ್ಮ

---

1. ಅನಪಹತಪಾಪ್ಮಾಽಹಮಸ್ಮಿ ನಾಮಾನಿ ಮೇ ಧೇಹಿ ಪಾಪ್ಮನೋಽಪಹತ್ಯೈ. ಶತ.ಬ್ರಾ.

2. ಇಲ್ಲಿ ಇನ್ನೂ ಕೆಲವು ಅಂಶಗಳು 'ನಾರಾಯಣ' ಎನ್ನಲು ಅನುಕೂಲವಾಗಿವೆ. ಈಶಾವಾಸ್ಯದಲ್ಲಿ ಕ್ರತು ಎಂಬ ಶಬ್ದ ಇದೆ. ಕ್ರತು ಎಂದರೆ ಯಜ್ಞ. ನಾರಾಯಣನು ಯಜ್ಞರೂಪಿ. ರುದ್ರನು ಯಜ್ಞಕ್ಕೆ ಶತ್ರು. ಅವನ ಹೆಸರು ಕ್ರತುಧ್ವಂಸಿ. 'ಏಕಋಷಿ' ಎಂಬ ಶಬ್ದ ಮತ್ತೊಂದು. 'ದೇವಾನಾಂ ನಾಮಧಾ ದೇವ ಏಕಃ'– ದೇವತೆಗಳಿಗೆ ನಾಮಕರಣಮಾಡಿದವನು ಒಬ್ಬ ದೇವನು. 'ಋಷಿ' - ಅವನು ಅತೀಂದ್ರಿಯಜ್ಞಾನಿಯಾದವನು ಎಂಬುದಾಗಿ ನಾರಾಯಣನನ್ನೇ ಕುರಿತು ಹೇಳುವ ವೇದವಚನಗಳಿವೆ. ಈಶಾವಾಸ್ಯದ ಈಶನೂ 'ಏಕಋಷಿ'ಯಲ್ಲವೆ. ರುದ್ರನು ನಾಮಕರಣ ಮಾಡಿಸಿಕೊಳ್ಳುವವನೇ ಹೊರತು ನಾಮಕರಣ ಮಾಡಿದವನಲ್ಲ ಎಂಬ ಅಂಶ ಶತಪಥಬ್ರಾಹ್ಮಣದಿಂದ ಹಿಂದೆ ತಿಳಿದುದೇ ಆಗಿದೆ.

ಗಳನ್ನು 'ನಾನು, ನನ್ನದು, ನನಗಾಗಿ' ಎಂಬ ಭಾವನೆಯಿಲ್ಲದೆ ಮಾಡಿದರೆ; ಅವುಗಳ ಜೊತೆಗೆ ನಾವು ಬಿಡದೆ ಅನುಭವಿಸುತ್ತಲೇ ಇರುವ ಜಗತ್ತನ್ನೂ ಭಾವನಾತ್ಮಕವಾಗಿ[1] ಬಿಟ್ಟಂತೆಯೇ ಅಲ್ಲವೆ?

ಹೀಗೆ ಈಶಾವಾಸ್ಯದ ಈ ಮೊದಲಮಂತ್ರದಲ್ಲಿ ಗೀತಾಶಾಸ್ತ್ರದಲ್ಲಿ ಹೇಳಿರುವ ತ್ರಿವಿಧತ್ಯಾಗಗಳನ್ನೇ ಮುಖ್ಯವಾಗಿ ತಿಳಿಸಲಾಗಿದೆ.

---

1. ವಿದ್ಯೆ ಎಂಬುದು ಭಾವನಾತ್ಮಕವಾಗಿದ್ದರೂ ಅದರಲ್ಲಿ ಕ್ರಿಯಾತ್ಮಕವಾದ ಅಂಶವೂ ಅಂಗವಾಗಿದೆ. ಕ್ರಿಯಾತ್ಮಕ ಅಂಶಗಳು ಪ್ರತ್ಯೇಕವಾಗಿರುವಾಗ ಅವುಗಳ ಅಂಟೂ ಅವುಗಳ ಒಳ್ಳೆಯ ಮತ್ತು ಕೆಟ್ಟ ಫಲಗಳೂ ನಮಗೆ ತಟ್ಟುವುವು. ಕ್ರಿಯಾತ್ಮಕ ಅಂಶಗಳಿಗೆ ಫಲ–ಸಂಗ–ಕರ್ತೃತ್ವಗಳ ತ್ಯಾಗಭಾವನೆ ಸೇರಿದಾಗ ಅದೇ ಕ್ರಿಯೆಗಳು ಕರ್ಮಯೋಗ ಎನಿಸಿಕೊಳ್ಳುತ್ತವೆ. ಇಂತಹ ಕರ್ಮಗಳು ಮಾತ್ರ ಬ್ರಹ್ಮವಿದ್ಯೆಗೆ ಅಂಗಗಳಾಗುವುವು. ಇವುಗಳಿಂದ ವಿದ್ಯೆಗೆ ವಿರುದ್ಧವಾದ ಯಾವುದೇ ಒಳ್ಳೆಯ ಹಾಗೂ ಕೆಟ್ಟ ಫಲಗಳೂ ಆಗಲಾರವು. ಈಶಾವಾಸ್ಯ ಪ್ರಕರಣವು ಮುಖ್ಯವಾಗಿ ವಿದ್ಯೆಗೆ ಸಂಬಂಧಿಸಿದುದು. ಕ್ರಿಯಾತ್ಮಕ ಅನುಭವಗಳಿಗೆ ಆಸರೆಯಾದ ಈ ಜಗತ್ತನ್ನು ಭಾವನಾತ್ಮಕವಾಗಿ ಬಿಡಬೇಕೆಂಬುದೇ ವಿದ್ಯೆಯ ಅಂಶ ಮತ್ತು ಕರ್ಮಯೋಗದ ರಹಸ್ಯ। ಇದಿಷ್ಟೂ ವಿದ್ಯೆಯ ಮಹಿಮೆ. ಇದನ್ನು ಹೇಳಲೆಂದೇ ಈಶಾವಾಸ್ಯ ಹೊರಟಿದೆ.

ಈ ಅಭಿಪ್ರಾಯವನ್ನು ಭಗವದ್ರಾಮಾನುಜರ ಶ್ರೀಭಾಷ್ಯ–ದೀಪ–ಸಾರ–ಗೀತಾಭಾಷ್ಯ ಮುಂತಾದ ಗ್ರಂಥಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.



# ಈಶಾವಾಸ್ಯೋಪನಿಷತ್

## ಮಂತ್ರ ಎರಡು

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ।**

**ಏವಂ ತ್ವಯಿ ನಾನ್ಯಥೇತೋಽಸ್ತಿ, ನ ಕರ್ಮ ಲಿಪ್ಯತೇ ನರೇ ॥೨॥**

### ಅನ್ವಯಾನುಸಾರ ಪ್ರತಿಪದಾರ್ಥ

**ಇಹ** — ಈ ಜ್ಞಾನ ಉಂಟಾಗಿರುವ ಜನ್ಮದಲ್ಲೂ; **ಏವಂ** — ಈ ರೀತಿ; **ಕರ್ಮಾಣಿ** — ಸ್ವಧರ್ಮಕ್ಕೆ ತಕ್ಕ ಕೆಲಸಗಳನ್ನು; **ಕುರ್ವನ್ ಏವ** — ಮಾಡುತ್ತಲೇ; **ಶತಂ** — ನೂರಾರು; **ಸಮಾಃ** — ವರ್ಷಗಳು; **ಜಿಜೀವಿಷೇತ್** — ಬದುಕಿರಬೇಕೆಂದೇ ಆಶಿಸ ಬೇಕು; **ನರೇ** — ಸ್ವಾರ್ಥವನ್ನು ಬಿಟ್ಟಿರುವ; **ತ್ವಯಿ** — ಪರಮಾತ್ಮನಿಗೆ ಪರತಂತ್ರನಾಗಿ ಕರ್ತವ್ಯನಿಷ್ಠೆಯಲ್ಲಿರುವ ನಿನಗೆ; **ಕರ್ಮ** — ಸಂಸಾರಿಗಳು ಮಾಡುವಂತಹ ಯಾವುದೇ ಕರ್ಮವೂ ಸಹ; **ನ, ಲಿಪ್ಯತೇ** — ಮೋಕ್ಷಕ್ಕೆ ವಿರುದ್ಧವಾದ ಫಲಗಳ ಕಡೆಗೆ ಸೆಳೆಯುವಂತೆ ಅಂಟುವುದಿಲ್ಲ; **ಇತಃ** — ಇದಕ್ಕಿಂತಲೂ; **ಅನ್ಯಥಾ** — ಬೇರೆರೀತಿಯು; **ನ, ಅಸ್ತಿ** — ಇಲ್ಲ.

### ಛಾಯಾಪದ್ಯ

ಮಾಡುತಲೇ ಇಹ ಕರ್ಮಗಳಂ ಬಾಳಲು ಬಯಸೈ ನೂರ್‌ವರಿಸಂ.
ಇದೆ ಸರಿ, ಈ ಬಗೆ ಬೇರಿಲ್ಲ. ಕರ್ಮವು ಅಂಟದು ನರ! ನಿನ್ನೊಳ್.

## ತಾತ್ಪರ್ಯಾರ್ಥ

### ಮುಮುಕ್ಷುವಿನ ಕರ್ತವ್ಯ

ಭೋಗಾಭಿಲಾಷಿಯು ಸುಖಕ್ಕೆ ಸಾಧಕವಾದ ಕರ್ಮಗಳನ್ನು ಆಸಕ್ತಿಯಿಂದ ಮಾಡುತ್ತಾನೆ. ಹಾಗೆ ವಿವೇಕಿಯಾದ ಮೋಕ್ಷಾಭಿಲಾಷಿಯೂ ತನ್ನ ವರ್ಣಾಶ್ರಮವಿಹಿತವಾದ ಕರ್ಮಗಳನ್ನು ಆಸಕ್ತಿಯಿಲ್ಲದೆ ಫಲ, ಸಂಗ, ಕರ್ತೃತ್ವಗಳನ್ನು ಬಿಟ್ಟು ಬದುಕಿರುವವರೆಗೂ ಆಚರಿಸುತ್ತಲೇ ಇರಬೇಕೆಂದು, 'ಕುರ್ವನ್ನೇವ' ಎಂಬ ಮಂತ್ರದಿಂದ ತಿಳಿಸಲಾಗಿದೆ.

### ಬದುಕಿರುವವರೆಗೂ ಕರ್ಮಾಚರಣೆ

ಬದುಕು ಎಲ್ಲರಿಗೂ ಪ್ರಿಯವಾದುದು. ಈ ಬದುಕಿನ ಕಾಲದಲ್ಲಿ ಆಯಾವರ್ಣದವರು ಮಾಡಬೇಕಾದ ನಿತ್ಯ[1] – ನೈಮಿತ್ತಿಕ[2] ಕರ್ಮಗಳನ್ನು ಪರಮಾತ್ಮನೇ ತಿಳಿಸಿದ್ದಾನೆ. ಆ ಕರ್ಮಗಳನ್ನು ಮಾಡದಿದ್ದಲ್ಲಿ ಅವರು ಆತನ ಅನುಗ್ರಹಕ್ಕೆ ಪಾತ್ರರಾಗಲಾರರು. ಉಪಾಸಕರೂ ಸಹ ಪರಮಾತ್ಮನು ಸಂಕಲ್ಪಿಸಿದ ಕಾಲದವರೆಗೆ ತಮತಮಗೆ ವಿಹಿತವಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಆಚರಿಸುತ್ತಲೇ ಇರಬೇಕು.

---

1. ಜೀವಿತ ಕಾಲದಲ್ಲಿ ಪ್ರತಿದಿನ ಮಾಡಬೇಕೆಂದು ವೇದ ಮತ್ತು ಧರ್ಮಶಾಸ್ತ್ರಗಳಲ್ಲಿ ವಿಧಿಸಿರುವ ಕೆಲಸಗಳು.
   ಉದಾ :– ಸ್ನಾನ, ದೇವರಪೂಜೆ ಮುಂತಾದವು.

2. ಕಾಲವಿಶೇಷಗಳಲ್ಲಿ ಮಾಡಲೇಬೇಕೆಂದು ವೇದ ಮತ್ತು ಧರ್ಮಶಾಸ್ತ್ರಗಳಲ್ಲಿ ವಿಧಿಸಿರುವ ಕೆಲಸಗಳು.
   ಉದಾ: - ಶ್ರಾದ್ಧ, ತರ್ಪಣ ಮುಂತಾದವು.

### ಕರ್ಮವು ಬಂಧಕವಲ್ಲ

ಬ್ರಹ್ಮವಿದ್ಯಾವಿರುದ್ಧವಾದ, ಕರ್ಮ ಫಲಗಳಲ್ಲಿ ಆಸಕ್ತನಲ್ಲದ ನಿನಗೆ ತ್ರಿವಿಧತ್ಯಾಗದೊಡನೆ ಮಾಡುವ ವರ್ಣಾಶ್ರಮವಿಹಿತವಾದ ಕರ್ಮಗಳು ಬ್ರಹ್ಮವಿದ್ಯೆಗೆ ಸಾಧಕಗಳಾಗುತ್ತವೆ. ಎಂದಿಗೂ ಬ್ರಹ್ಮವಿದ್ಯಾವಿರೋಧಿಯಾದ ಫಲವನ್ನು ಉಂಟುಮಾಡುವುದಿಲ್ಲ. ಆದುದರಿಂದ ಬದುಕಿರುವವರೆಗೂ ಕರ್ಮವನ್ನು ಮಾಡುತ್ತಲೇ ಇರು.

ಪ್ರತಿಕೂಲವಾದದ್ದು ಕರ್ಮವಲ್ಲ; ಕರ್ಮಫಲ. ಕರ್ಮ ಫಲಕೊಡುವುದು ಯಾವಾಗ? ಆ ಕರ್ಮದಲ್ಲಿ ಕರ್ತೃವಿನ ಸ್ವಾರ್ಥಚಿಂತನೆ ಸೇರಿಕೊಂಡಾಗಲ್ಲವೆ? ಕರ್ತೃವು "ಈ ಕಾರ್ಯದಿಂದ ಪರಮಾತ್ಮನಿಗೆ ಪ್ರೀತಿಯಾಗಲಿ; ಇದು ನನಗೋಸ್ಕರವಲ್ಲ" ಎಂದು ಮನೋನಿಶ್ಚಯ ಮಾಡಿಕೊಂಡಿದ್ದೇ ಆದರೆ, ಆ ಕರ್ಮಗಳು ಪುಣ್ಯ ಪಾಪ ರೂಪವಾದ ಫಲಗಳನ್ನು ಕೊಡಲಾರವು.

## ವೇದಾಂತಾಚಾರ್ಯಭಾಷ್ಯ

### ಕರ್ಮಯೋಗ ಅವಶ್ಯಕರ್ತವ್ಯ

ಈ ರೀತಿ ತಿಳುವಳಿಕೆಯುಳ್ಳವನಿಗೆ ನಿತ್ಯ ಮತ್ತು ನೈಮಿತ್ತಿಕ ಎಂಬ ರೂಪದಲ್ಲಿರುವಂತಹುದೂ, ಬ್ರಹ್ಮೋಪಾಸನೆಗೆ ಅಂಗವೂ ಆದ ಕೆಲಸವು. ಅದು ತನ್ನದು ಎಂಬ ಸಂಗ, ಅದರ ಫಲ ತನಗೇ ಎಂಬ ಆಸೆ, ಅದರ ಕರ್ತೃ ತಾನೇ ಎಂಬ ಅಹಂಕಾರ, ಇವುಗಳನ್ನು ಬಿಟ್ಟುಕೊಟ್ಟು ಮಾಡಬೇಕಾದುದು ಎಂಬ ಭಾವನೆಯಿಂದ ತಾನು ಬದುಕಿರುವವರೆಗೂ ಅವಶ್ಯ ಕರ್ತವ್ಯ, ಎಂಬುದನ್ನು ತಿಳಿಸುತ್ತಾನೆ. "ಕುರ್ವನ್...ಸಮಾಃ" ಎಂದು.

### ಸನ್ ಪ್ರತ್ಯಯದ ಭಾವಾರ್ಥ

ಬ್ರಹ್ಮಜ್ಞಾನ[1] ಬಂದನಂತರವೂ, ಬ್ರಹ್ಮೋಪಾಸನೆ ಪೂರ್ಣವಾಗುವವರೆಗೆ ಅವನಿಗೆ ಬದುಕು ಇಷ್ಟವಾಗಿಯೇ ಇರುವುದು ಎಂಬ ಅಂಶವನ್ನು ತಿಳಿಸುವಸಲುವಾಗಿ ಇಚ್ಛಾರ್ಥಕವಾದ 'ಸನ್' – ಜಿಜೀವಿಷೇತ್ ಎಂಬಲ್ಲಿ 'ಇಷ್' ಎಂಬ ಪ್ರತ್ಯಯವನ್ನು ಪ್ರಯೋಗಿಸಲಾಗಿದೆ.

### ನೂರು ಎಂಬುದರ ಭಾವಾರ್ಥ

ನೂರು ಎಂಬುದು ಸುಮಾರು ನೂರಷ್ಟು ಎಂಬ ಅರ್ಥದಲ್ಲಿದೆ. ನೂರು ವರ್ಷಗಳಷ್ಟು ಬದುಕಿಯೂ ತನ್ನ ಹಕ್ಕಿನ ಕರ್ತವ್ಯಗಳೆಲ್ಲವನ್ನೂ ಮಾಡಲೇಬೇಕು, ಎಂದಿಗೂ ಉಪಾಸನೆಗೆ ಅಂಗವಾದ ಕೆಲಸವನ್ನು ಬಿಡಬಾರದು ಎಂದರ್ಥ.

### ಜ್ಞಾನಿಗೆ ಸ್ವತಂತ್ರಕರ್ಮಗಳಿಲ್ಲ

ಈ ಮಂತ್ರವಾಕ್ಯವು ಕೆಲವು ಫಲಗಳಿಗಾಗಿ ವಿದ್ಯೆಗೆ ಅಂಗವಲ್ಲದ ಜ್ಞಾನಿಯು ಮಾಡುವ ಸ್ವತಂತ್ರವಾದ ಕರ್ಮದ ಬಗ್ಗೆ ಹೇಳುತ್ತದೆ ಎಂಬ ಒಂದು ಪಕ್ಷದ ವಿಚಾರಕ್ಕೆ ಸಾಧಕವಾದ ವಿಶೇಷ ಕಾರಣಗಳಿಲ್ಲ ಎಂಬ ಅಂಶವನ್ನು ಬ್ರಹ್ಮಸೂತ್ರದಲ್ಲಿ "ಹಾಗಲ್ಲ ಇದಕ್ಕೆ ವಿಶೇಷವಚನ ಇಲ್ಲದುದೇ ಕಾರಣ"[2] ಎಂದು ಮಂಡಿಸಲಾಗಿದೆ.[3]

---

1. ಪರಮಾತ್ಮನ ಬಗ್ಗೆ ಸಾಮಾನ್ಯವಾದ ತಿಳುವಳಿಕೆ.
2. ನಾವಿಶೇಷಾತ್. ಬ್ರ. ಸೂ. ೩. ೪. ೧೩.
3. ಬ್ರಹ್ಮವಿದ್ಯಾಂಗವಲ್ಲದ ಕರ್ಮಗಳನ್ನು ಮಾಡಕೂಡದು ಎಂದು ನಿರ್ಣಯಿಸಲಾಗಿದೆ.

## ಬ್ರಹ್ಮವಿದ್ಯೆಯ ಹಿರಿಮೆ

ಈ ನಂತರದ "ಹಿರಿಮೆ ತಿಳಿಸಲೋಸುಗ, ಒಪ್ಪಿಗೆ ಉಂಟೇ ಉಂಟು"[1] ಎಂಬ ಸೂತ್ರದಿಂದ ಈ ಪ್ರಕರಣಕ್ಕೆ ವಿರೋಧವಿಲ್ಲದಂತೆ ಇದರ ಮತ್ತೊಂದರ್ಥವನ್ನು ಸ್ಪಷ್ಟಪಡಿಸಲಾಗಿದೆ.

## ರಾಮಾನುಜಭಾಷ್ಯವಚನಆಧಾರ

ಇದಕ್ಕೆ ಭಗವದ್ರಾಮಾನುಜರ ಭಾಷ್ಯ ಹೀಗಿದೆ:— "ಇಲ್ಲಿ 'ವಾ' ಎಂಬ ಶಬ್ದಕ್ಕೆ ಅಥವಾ ಎಂದರ್ಥ ವಲ್ಲ; ಅದೇ ಎಂಬ ನಿರ್ಧಾರ ಅರ್ಥ. 'ಪರಮಾತ್ಮನಿಂದ ವ್ಯಾಪಿಸಿಧರಿಸಲ್ಪಟ್ಟಿರುವುದು ಈಎಲ್ಲವೂ' ಎಂಬುದು ಬ್ರಹ್ಮವಿದ್ಯೆಯ ಪ್ರಕರಣವಾಗಿದ್ದು ಇಲ್ಲಿ ಬ್ರಹ್ಮವಿದ್ಯೆಯ ಹಿರಿಮೆಯನ್ನು ತಿಳಿಸಲೋಸುಗ ಬ್ರಹ್ಮಜ್ಞಾನಿಯು ಕರ್ಮವನ್ನೂ[2] ಮಾಡಬಹುದೆಂಬ ಅನುಮತಿ ಮಾತ್ರ ಇದು. ಸರ್ವದಾ ಕರ್ಮಗಳನ್ನೇ ಮಾಡುತ್ತಿದ್ದರೂ ವಿದ್ಯೆಯ ಬಲ ಇರುವುದರಿಂದ ಕರ್ಮಫಲಗಳಾದ ಪುಣ್ಯಪಾಪಗಳು ಇವನಿಗೆ ಅಂಟುವುದಿಲ್ಲ ಎಂಬ ಮಾತಿಂದಲ್ಲವೆ ವಿದ್ಯೆಯ ಹಿರಿಮೆ ತಿಳಿಯುವುದು. ಈ ವಾಕ್ಯಕ್ಕೆ ಉಪವಾಕ್ಯವಾದ[3] 'ನಿನ್ನ ಬಗ್ಗೆ ಇದು ಹೀಗೆಯೇ, ಇದಕ್ಕಿಂತ ಬೇರೆ ರೀತಿ ಇಲ್ಲ, ಇಂತಹ ನರನಿಗೆ ಕರ್ಮದ ಲೇಪ ಇಲ್ಲ' ಎಂಬುದೂ ಇದನ್ನೇ ತೋರಿಸಿಕೊಡುವುದು" ಎಂದು.

## ಕರ್ತವ್ಯದ ಬಗ್ಗೆ ದೃಢತೆ

"ಬ್ರಹ್ಮಜ್ಞಾನ ಹಾಗೂ ಅದಕ್ಕೆ ಸಂಬಂಧಿಸಿದ ಕರ್ತವ್ಯಗಳ ಹಕ್ಕು ಇರುವ ನಿನಗೆ ಆಚರಣೆಯೇ ಕ್ರಮ; ಇದಕ್ಕಿಂತ ಬೇರೆ ರೀತಿ ಅಲ್ಲ" ಎಂದು ವಿಧಿ[4]–ನಿಷೇಧ ಎರಡು ರೀತಿಯಲ್ಲೂ ತಿರುಗಿಸಿ ಹೇಳುತ್ತಿರುವುದು, ಕರ್ತವ್ಯದ ಬಗ್ಗೆ ದೃಢತೆ ಉಂಟು ಮಾಡುವ ಸಲುವಾಗಿ.

## ಜ್ಞಾನಿಗೆ ಕರ್ಮಬಂಧ ಇಲ್ಲ

ಬ್ರಹ್ಮಜ್ಞಾನಿಯೂ ಕರ್ಮವನ್ನೇ ಮಾಡುತ್ತಿದ್ದರೆ ಸಂಸಾರಬಂಧವೇ ಅವನಿಗೆ ಉಂಟಾಗುವುದಲ್ಲವೆ? ಎಂಬ ಆಕ್ಷೇಪ ಬಂದರೆ ಅದಕ್ಕೆ ಉತ್ತರವಾಗಿ ಹೇಳುತ್ತಾನೆ. "ಆ ನರನಿಗೆ ಕರ್ಮದ ಲೇಪ ಇಲ್ಲ" ಎಂದು.

ಇಂತಹ ಬ್ರಹ್ಮಜ್ಞಾನಿಯಾದವನಿಗೆ "ಅಗ್ನಿಹೋತ್ರ[5] ಮುಂತಾದವೂ ಅವನ ಕರ್ತವ್ಯವೇ ಆದುದು; ಅವನಲ್ಲೇ ಇವೆಲ್ಲ ಕಂಡು ಬಂದಿದೆ"[6] ಎಂಬುದೇ ಇದಕ್ಕೆ ಕಾರಣ ಎಂಬ ಪ್ರತ್ಯೇಕ ವಿಶಿಷ್ಟರೀತಿ[7]ಯಲ್ಲಿ ಪ್ರಯೋಗಿಸುವ ನಿಯಮದಂತೆ, ಯಾವುದೇ ಕರ್ಮವೂ ಸ್ವರ್ಗ–ನರಕ–ಫಲಗಳಿಗೆ ಕಾರಣವಾಗಲಾರದು.

---

1. ಸ್ತುತಯೇಽನುಮತಿರ್ವಾ. ಬ್ರ. ಸೂ. ೩. ೪. ೧೪.
2. ಇಲ್ಲಿ ಕರ್ಮ ಎಂದರೆ ಉಪಾಸನೆಗೆ ಅಂಗವಾದ ಕರ್ಮ.
3. ಒಂದು ವಾಕ್ಯದ ಅರ್ಥವನ್ನು ಸಂಶಯವಿಲ್ಲದೆ ತಿಳಿಸುವ ಪಕ್ಕದ ಮತ್ತೊಂದು ವಾಕ್ಯ.
4. ಕರ್ತವ್ಯಗಳನ್ನು ತಿಳಿಸುವ ವಾಕ್ಯಗಳು. 5. ವೇದೋಕ್ತವಾದ ವಿಶೇಷ ಅಗ್ನಿಪೂಜೆ.
6. ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್. ಬ್ರ ಸೂ. ೪. ೧. ೧೬.
7. ವಿನಿಯೋಗ ಪೃಥಕ್ತ್ವನ್ಯಾಯ. ಪೂ. ಸಂ. ನೋಡಿ ೩.

## ಆಕಸ್ಮಿಕ ಕರ್ಮಗಳು

ಬ್ರಹ್ಮೋಪಾಸನೆಯ ಉಪಯೋಗಕ್ಕೆ ಬಾರದ[1] ಕಾಮ್ಯ[2]ವೆನಿಸುವ ಯಜ್ಞಾದಿಗಳನ್ನೂ, ಅಸತ್ಯ-ಹಿಂಸೆ ಮುಂತಾದ ಮಾಡಬಾರದ ಕೆಲಸಗಳನ್ನು ಸಹ, ವೈರಾಗ್ಯ ಮತ್ತು ವಿವೇಕ ಇರುವ ಯಾವನೂ ಬುದ್ಧಿ ಪೂರ್ವಕವಾಗಿ ಮಾಡುವುದಿಲ್ಲ.

## ಜ್ಞಾನಿಗೆ ಕರ್ಮದ ಪರಿಹಾರ ಉಂಟು

ಆಕಸ್ಮಾತ್ ತಿಳಿಯದೆ ಮಾಡಿಬಿಡುವ ಇಂತಹ ಯಾವುದೇ ಸಣ್ಣ ಪುಟ್ಟ ಕರ್ಮಗಳಿಗೂ "ಕೆಟ್ಟ ಕೆಲಸ ಗಳಿಂದ ಹಿಂಜರಿಯದವನೂ''[3] ಮುಂತಾದ ಪ್ರಮಾಣ ವಚನಗಳಿಂದ, ಅಂತಹವನು ತನಗೆ ಅರ್ಹವಾದ ಪ್ರಾಯಶ್ಚಿತ್ತ[4]ವನ್ನು ಮಾಡಬಹುದಾಗಿದೆ.

"ಅದನ್ನು ಪಡೆದರೆ''[5] ಎಂಬ ಬ್ರಹ್ಮಸೂತ್ರದ ಅಧಿಕೃತವಾದ ಭಾಗದಲ್ಲಿ ''ಆಕಸ್ಮಾತ್ ತಿಳಿಯದೆ ಮಾಡುವ ಕರ್ಮಗಳು ಮಾತ್ರ ಬ್ರಹ್ಮವಿದ್ಯೆ ಪಡೆದವರಿಗೆ ಅಂಟುವುದಿಲ್ಲ''[6] ಎಂದು ಸ್ಪಷ್ಟಪಡಿಸಲಾಗಿದೆ.

## ಜ್ಞಾನಿಗೆ ಶಾಸ್ತ್ರದ ಕಟ್ಟುನಿಟ್ಟುಗಳೇನೂ ಇಲ್ಲವೆ?

ಶಾಸ್ತ್ರೋಕ್ತಕರ್ತವ್ಯಗಳನ್ನು ನೆರವೇರಿಸಬೇಕಾದ ಹಕ್ಕು ಜ್ಞಾನವೆಂಬ ಬೆಂಕಿಯಿಂದ ಉರಿದು ಹೋಗು ವುದರಿಂದ, ಅಂತಹ ಜ್ಞಾನಿಗೆ ಶಾಸ್ತ್ರದ ಯಾವ ಕಟ್ಟುನಿಟ್ಟು ಇರುವುದಿಲ್ಲ ಎನ್ನುವ ಕೆಲವರ ಪಕ್ಷವು, ವೇದ ವನ್ನು ಚೆನ್ನಾಗಿ ಅರಿತವರಿಗೆ ಒಪ್ಪಿಗೆಯಾದುದಲ್ಲ.

---

1. ಸ್ವಾರ್ಥಕ್ಕಾಗಿಮಾಡುವ ಮತ್ತು ಬ್ರಹ್ಮವಿದ್ಯೆಯಿಲ್ಲದವನು ಮಾಡುವ ಕಾಮ್ಯಕರ್ಮಗಳು ಉಪಾಸನೆಗೆ ಉಪಯೋಗಕ್ಕೆ ಬಾರವು.
2. ಮಳೆ ಬರಿಸಲು, ದೇಶದಲ್ಲಿ ಕ್ಷಾಮಡಾಮರ ಮುಂತಾದವುಗಳ ನಿವಾರಣೆಗಾಗಿ, ಸ್ವರಾಜ್ಯಬರಲು, ಪ್ರಜಾಕ್ಷೇಮಕ್ಕೆ, ರೋಗಗಳ ನಿವಾರಣೆಗೆ, ದುರ್ಭಿಕ್ಷೆ, ಕಳ್ಳಕಾಕರ ಭೀತಿ ಪರಿಹರಿಸಲು, ಮಾಡಬೇಕೆಂದು ವಿಧಿಸಿರುವ ವೈದಿಕ ಕರ್ಮಗಳು.
3. ನಾವಿರತೋದುಶ್ಚರಿತಾತ್. ಕಠ ೨.೨೪.
4. ಪಾಪಪರಿಹಾರಕವಾದ ಕರ್ಮ. ತಪ್ಪುಮಾಡಿದವನು ಮೊದಲು ಅದರ ಪರಿಹಾರಕ್ಕಾಗಿ ತಾನು ಮಾಡಿದ್ದು ತಪ್ಪು ಎಂದು ಮನಸ್ಸಿನಲ್ಲಿ ಕೊರಗಬೇಕು. ನಂತರ ಶಾಸ್ತ್ರೋಕ್ತವಾದ ಸ್ನಾನ - ಪೂಜೆ- ಹೋಮ - ದಾನ - ವ್ರತ ಉಪವಾಸಾದಿಗಳನ್ನು ಮಾಡ ಬೇಕು. ನಂತರ ಇನ್ನು ಮುಂದೆ ಇಂತಹ ಕೆಲಸ ಮಾಡುವುದಿಲ್ಲವೆಂದು ನಿಶ್ಚಯಿಸಿ ಅದರಂತೆ ನಡೆದುಕೊಳ್ಳಬೇಕು.
5. ತದಧಿಗಮಾಧಿಕರಣ. ಬ್ರ. ಸೂ. ೪. ೧. ೭.
6. ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ, ತದ್ವ್ಯಪದೇಶಾತ್. ಬ್ರ. ಸೂ. ೪.೧.೧೩.

# ಈಶಾವಾಸ್ಯ ಪ್ರಕಾಶಿಕೆ

## ಕರ್ಮಯೋಗ ಎಂದರೇನು?

(ಭಾ) **ಅಧಿಕಾರಾನುಗುಣಕರ್ಮಾಣಿ** – ತ್ರಿವಿಧ ತ್ಯಾಗ ಸಹಿತವಾದ ನಿತ್ಯ – ನೈಮಿತ್ತಿಕ ಕರ್ಮಗಳನ್ನು. **ಕರ್ಮಾಣಿ** - ಕರ್ಮವೆಂದರೆ ಇಲ್ಲಿ ಕರ್ಮಯೋಗ. "ದೇವರ ಪೂಜೆಯನ್ನೇ ಕೆಲವರು ಯಜ್ಞವಾಗಿಸುವರು"[1] ಇವೇ ಮೊದಲಾಗಿ ಗೀತೆಯಲ್ಲಿ ಹೇಳಿರುವ ಕರ್ಮಯೋಗಗಳಲ್ಲಿ ಯಾವುದಾದರೊಂದನ್ನು ನಮ್ಮನಮ್ಮ ಅಭಿರುಚಿಗೆ ತಕ್ಕಂತೆ ಸ್ವೀಕರಿಸಿ, ಅದರ ಅಂಗವಾಗಿ ನಿತ್ಯನೈಮಿತ್ತಿಕಗಳನ್ನು ಅಳವಡಿಸಿಕೊಂಡು ತ್ರಿವಿಧ ತ್ಯಾಗ ಪೂರ್ವಕವಾಗಿ ನಡೆಸುವುದು.

## ಈ ಮಂತ್ರದಲ್ಲಿ ವಿಧಾಯಕವಾದ ಅಂಶ ಯಾವುದು?

**ಕುರ್ವನ್, ಏವ** – ಇಲ್ಲಿ ನಾವೆಲ್ಲ ಬದುಕಿರುವುದು ಅನುಭವಸಿದ್ಧವಾದ ವಿಷಯವಾಗಿದ್ದು, ಅದನ್ನು ವಿಧಿಸಬೇಕಾಗಿಲ್ಲವಷ್ಟೆ. ಇರುವವರೆಗೆ ಉಪಾಸನಾಂಗವಾದ ಕರ್ಮಗಳನ್ನು ಮಾಡಲೇ ಬೇಕು ಎಂಬುದಷ್ಟೆ ಇಲ್ಲಿ ವಿಧಿಸುವ ಮುಖ್ಯ ಅಂಶ ಎಂದು ತಿಳಿಯಬೇಕು. ಜ್ಞಾನಯೋಗವನ್ನು[2] ಆಚರಿಸುವ ಅರ್ಹತೆಬರುವವರೆಗೆ ಕರ್ಮಯೋಗವನ್ನು[3] ಆಚರಿಸುತ್ತಿರಬೇಕೆಂಬುದು ತಾತ್ಪರ್ಯ.

## ಅಧಿಕಾರ ಎಂದರೇನು?

(ಭಾ) **ಅಧಿಕಾರಿಣೆ** – ಈಶ್ವರನಿಗೆ ಜೀವಿಗಳು ಅತ್ಯಂತ ಪರತಂತ್ರವಾಗಿರುವುದೇ ಅವುಗಳ ಸ್ವರೂಪವಾದುದರಿಂದ ಅವನ ಆಜ್ಞಾಕೈಂಕರ್ಯಗಳನ್ನು[4] ನೆರವೇರಿಸುವ ಏಕೈಕ ಉದ್ದೇಶ್ಯವೇ ಅಧಿಕಾರ[5]. ಅದೆಲ್ಲ ತಿಳಿದ ಯಾರೇ ಆಗಲಿ ಕರ್ಮಯೋಗಕ್ಕೆ[6] ಅಧಿಕಾರಿಗಳೆನಿಸುವರು.

## ತ್ಯಾಗ ಪೂರ್ವಕ ಆಚರಿಸುವ ಕರ್ಮಗಳಿಗೆ ಉಪಯೋಗ ಏನು?

**ಕರ್ಮ, ನ, ಲಿಪ್ಯತೇ** – ಮೇಲೆ ಹೇಳಿದಂತೆ ಮಾಡುವ ಯಾವುದೇ ಕರ್ಮಯೋಗಗಳು (ಬರಿಯ ಕರ್ಮಗಳಲ್ಲ) ಸ್ವರ್ಗಾದಿ ಫಲಗಳಿಗೆ ನಮ್ಮನ್ನು ಅಂಟಿಸಿಬಿಡುವುದಿಲ್ಲ ಹಾಗೂ ಜ್ಞಾನಯೋಗದ ಮೂಲಕವಾಗಲಿ, ನೇರ

---

1. ದೈವಮೇವಾಪರೇ ಯಜ್ಞಮ್. ಗೀ. ೪.೨೫.
2. ಪರಿಶುದ್ಧಜೀವಾತ್ಮಸ್ವರೂಪವನ್ನು ಸಾಕ್ಷಾತ್ಕಾರ ಮಾಡಿಕೊಂಡು ಅದರಲ್ಲೇ ಮಗ್ನನಾಗಿರುವುದು.
3. ತೀರ್ಥಯಾತ್ರೆ, ತಪಸ್ಸು, ದಾನ. ದೇವರಪೂಜೆ ಮುಂತಾದ ಯಜ್ಞಗಳು. ವ್ರತೋಪವಾಸ ಮುಂತಾದುವುಗಳ ಆಚರಣೆ.
4. ಶಾಸ್ತ್ರೋಕ್ತವಾದ ನಿತ್ಯ-ನೈಮಿತ್ತಿಕಕರ್ಮಗಳು. ಇವುಗಳನ್ನು ದೇವರ ಆಜ್ಞಾಪಾಲಕನಾದ ಆಳಿನಂತೆ ದೇವರಿಗೆ ಸಂತೋಷವಾಗುವರೀತಿಯಲ್ಲಿ ಮಾಡಬೇಕು. ಕಿಂಕರ ಎಂದರೆ ಹೇಳಿದ ಕೆಲಸವನ್ನು ಬೇಗ ಅಚ್ಚುಕಟ್ಟಾಗಿ ಮಾಡಿಮುಗಿಸಿ ಮತ್ತೇನು ಮಾಡಲಿ? ಮತ್ತೇನು ಮಾಡಲಿ? ಎಂದು ಉತ್ಸಾಹಿಯಾಗಿರುವ ಆಳು. ಅವನು ಮಾಡುವಕೆಲಸ ಕೈಂಕರ್ಯ.
5. ಅಧಿಕಾರ ಎಂದರೆ ಅರ್ಹತೆ ಎಂದು ಸಾಮಾನ್ಯವಾದ ಅರ್ಥ.
6. ಇಲ್ಲಿ ಹೇಳುವ ಕೈಂಕರ್ಯರೂಪವಾದ ಕರ್ಮಯೋಗವು ಜ್ಞಾನಯೋಗದನಂತರ ಭಕ್ತಿಯೋಗವನ್ನು ಏರಿ ಉಪಾಸಕರಾಗಿರುವ ಜ್ಞಾನಿಗಳಿಗೆ ಎಂದು ತಿಳಿದಿರಬೇಕು.

ವಾಗಿಯೇ ಆಗಲಿ ಜೀವಾತ್ಮತತ್ವದ ಬಗ್ಗೆ ಯೋಗಸಾಧನೆಯನ್ನು ಮೊದಲು ಏರ್ಪಡಿಸಿಕೊಟ್ಟು ನಂತರ ಪರಮಾತ್ಮನ ಭಕ್ತಿಗೆ ಅಂಗವಾದ ಜೀವಾತ್ಮಸಾಕ್ಷಾತ್ಕಾರವನ್ನೇ ಉಂಟುಮಾಡುತ್ತವೆ.

**ಅನ್ಯಥಾ** – ಮೇಲೆ ಹೇಳಿದ ರೀತಿಗಿಂತ ಬೇರೆ ರೀತಿಯಲ್ಲಿ ಕರ್ಮಗಳ ಆಚರಣೆ.

**ನರೇ** - ಉಪಾಸನರೂಪವಾದ ವಿದ್ಯೆಗೆ ವಿರುದ್ಧವಾದ ಕರ್ಮಗಳ ಫಲಗಳಲ್ಲಿ ಆಸೆಯಿಲ್ಲದವನಲ್ಲಿ.

**ಕರ್ಮಗಳು ಜ್ಞಾನಿಗೂ ಬೇಕಾದವು**

(ಛಾ) **ವಿಧಿನಿಷೇಧಾಧಿಕಾರೀ** - ಕರ್ಮಯೋಗವನ್ನು ಮಾಡಲೇ ಬೇಕೆನ್ನುವುದು ಅಜ್ಞಾನಿಗಳನ್ನು ಕುರಿತು ಮಾತ್ರ, ಜ್ಞಾನಿಗಳನ್ನಲ್ಲ. ಜ್ಞಾನಿಗಳಿಗೆ ಯಾವುದೇ ಶಾಸ್ತ್ರದ ವಿಧಿ-ನಿಷೇಧಗಳು ಅನ್ವಯಿಸವು ಎಂಬುದು ಬೇರೆ ಕೆಲವರ ಅಭಿಪ್ರಾಯ. ಇದು 'ವಿದ್ಯೆಯನ್ನೂ[1] ಅವಿದ್ಯೆಯನ್ನೂ[2] ಜೊತೆಜೊತೆಗೇ' ಎಂಬ ಮಾತಿಗೆ ಹೊಂದುವುದಿಲ್ಲ.

## ಪದಾರ್ಥ ದೀಪಿಕೆ

### ಸಾರಾರ್ಥ

ಈ ರೀತಿ ವೈರಾಗ್ಯದಿಂದಿರುವ ವಿದ್ವಾಂಸನೂ ಸಹ ಬ್ರಹ್ಮವಿದ್ಯೆಗೆ ಅಂಗರೂಪವಾಗಿ ಕರ್ಮಯೋಗವನ್ನು ತಾನು ಬದುಕಿರುವವರೆಗೂ ಆಚರಿಸಲೇಬೇಕು. ಕರ್ಮಯೋಗವೆಂದರೆ ಕರ್ಮದ ಫಲದ ಬಗ್ಗೆ ಆಸೆಯನ್ನೂ ತಾನು ತನ್ನದು ಎಂಬ ಭಾವನೆಗಳನ್ನೂ ಬಿಟ್ಟು, ಕರ್ತವ್ಯನಿಷ್ಠೆಯಿಂದ ಶಾಸ್ತ್ರೀಯ ಕರ್ಮಗಳನ್ನು ಮಾಡುವುದು. ಈ ಅಂಶವನ್ನು ಈ ಎರಡನೆಯ ಮಂತ್ರವು ತಿಳಿಸುತ್ತದೆ.

## ಸುಬೋಧಿನೀ

### ಭಾವಾರ್ಥ

ಮುಕ್ತಿಯನ್ನು ಬಯಸುವವನೂ ಸಹ ಬ್ರಹ್ಮವಿದ್ಯೆಗೆ ಅಂಗವಾದ ಕರ್ಮಗಳನ್ನು ಬಿಡದೆ ಮಾಡಲೇಬೇಕು ಎಂಬ ಅಂಶವನ್ನು ಈ ಮಂತ್ರದಲ್ಲಿ ಮುಖ್ಯವಾಗಿ ಹೇಳಲಾಗುತ್ತದೆ.

**ಕರ್ಮಗಳು ಎಂತಹವು?**

**ಕರ್ಮಾಣಿ** – ಫಲ–ಸಂಗ– ಕರ್ತೃತ್ವಗಳ ಅಭಿರುಚಿಯನ್ನು ಬಿಟ್ಟು ಮಾಡುವಕೆಲಸಗಳು.

**ಕರ್ಮಗಳನ್ನು ಮಾಡಲೇಬೇಕೆಂಬ ವಿಧಿ**

**ಜಿಜೀವಿಷೇತ್** – ಇಲ್ಲಿ ಬದುಕಲು ಇಷ್ಟಪಡಬೇಕು ಎಂಬುದಾಗಿ ಸಾಮಾನ್ಯವಾಗಿ ಅರ್ಥವಾಗುತ್ತದೆ. ಬದುಕುವ ಇಷ್ಟ ಎಲ್ಲರಿಗೂ ಸ್ವಾಭಾವಿಕವಾಗಿ ಇರುವುದರಿಂದ ಯಾರೂ ಆ ಇಷ್ಟವನ್ನು ಬಲಾತ್ಕಾರವಾಗಿ ವಿಧಿಸಬೇಕಾಗಿಲ್ಲ ಆದುದರಿಂದ ಬದುಕು ಇಷ್ಟವಾಗಿರುವವರೆಗೂ ಕರ್ಮಗಳನ್ನು ಮಾಡುತ್ತಲೇ ಇರಬೇಕೆಂಬುದೇ ಇಲ್ಲಿ

---

1. ಉಪಾಸನಾರೂಪವಾದ ಜ್ಞಾನ. 2. ಉಪಾಸನೆಗೆ ಸಹಕಾರಿಯಾದ ಕರ್ಮ.

ವಿಧಾಯಕವಾದ ಅಂಶ ಎಂದು ತಿಳಿಯಬೇಕು. ಉದಾಹರಣೆಗೆ ಶಾಸ್ತ್ರದಲ್ಲಿ "ಸ್ನಾನ ಮಾಡಿದನಂತರವೇ ಊಟ ಮಾಡಬೇಕು"[1] ಎಂದು ವಿಧಿಸಲಾಗಿದೆ. ಇಲ್ಲಿ ಊಟ ಹಸಿದಿರುವ ಎಲ್ಲರಿಗೂ ಸಹಜವಾದುದು. ಅದು ಇಲ್ಲಿ ವಿಧಾಯಕ ಅಂಶವಲ್ಲ. ಊಟಮಾಡುವ ಮುಂಚೆ ಸ್ನಾನವಾಗಿರಬೇಕು, ಎಂದಷ್ಟೆ ಇಲ್ಲಿ ವಿಧಿಸಲಾಗುವುದು.

## ಕರ್ಮದ ಅವಶ್ಯಕತೆ ಯಾರಿಗೆ?

**ನ, ಅನ್ಯಥಾ** – ಮುಕ್ತಿಯ ಆಸೆ ಹುಟ್ಟಿದ ಮಾತ್ರಕ್ಕೆ ಅವನು (ಮುಮುಕ್ಷು) ಬ್ರಹ್ಮಜ್ಞಾನಿ ಎನಿಸುವುದಿಲ್ಲ ಅವನಿಗೆ ಸಾಕ್ಷಾತ್ಕಾರವಾಗಿ ಬಿಡುವುದಿಲ್ಲ. ಅವನು ಕರ್ಮ ಮಾಡುತ್ತಲೇ ಇರಬೇಕು,

ಇದನ್ನೇ ಗೀತೆಯಲ್ಲಿ "ನಿನಗೆ ಕರ್ಮ ಮಾಡುವ ಅರ್ಹತೆ, ಕರ್ಮದ ಅವಶ್ಯಕತೆ ಮತ್ತು ಕರ್ತವ್ಯತೆ ಇದ್ದೇ ಇದೆ."[2] ಎಂದು ಹೇಳಲಾಗಿದೆ, ಹಾಗೂ ಯಾವನಿಗೆ ಆತ್ಮದರ್ಶನವಾಗಿ[3] ಆತ್ಮಾನುಭವದಲ್ಲೇ ಮಗ್ನತೆ ಅದಷ್ಟೇ ಸಾಕಾಗಿರುವುದೋ ಅವನಿಗೆ ಮಾತ್ರ ಕರ್ಮದ ಅವಶ್ಯಕತೆ ಇಲ್ಲ ಎಂದು ಹೇಳಲಾಗಿದೆ.

## ಕರ್ಮಗಳು ಯಾವ ಸ್ಥಿತಿಯಲ್ಲಿ ಬಂಧಕಗಳು?

**ನ, ಕರ್ಮ, ಲಿಪ್ಯತೇ, ನರೇ** – ವಾಸ್ತವವಾಗಿ ಕರ್ಮಗಳನ್ನು ವಿಮರ್ಶಿಸಿನೋಡಿದರೆ ಯಾವುದೇ ಕೆಲಸಗಳೂ ಪರಮಾತ್ಮನ ಸೇವಾ ರೂಪವಾಗಿವೆಯೇ, ಹೊರತು ಬೇರೇನೂ ಅಲ್ಲ. ಅವುಗಳ ಫಲವನ್ನು ನಾವೇ ಅನುಭವಿಸಬೇಕೆಂದು ಹೊರಡುವಾಗ ಮಾತ್ರ ಆ ಕರ್ಮಗಳು ನಮಗೆ ಬಂಧಕಗಳಾಗುತ್ತವೆ. ಹೀಗೆ ಅವುಗಳ ವಾಸ್ತವಸ್ಥಿತಿಯಲ್ಲಿ ಯಾವ ಕರ್ಮಗಳೂ ಬಂಧಕಗಳಲ್ಲ ಎಂಬ ಸಾರ್ವತ್ರಿಕವಾದ ವಿಚಾರವನ್ನು ತಿಳಿಸಲೆಂದೇ ಇಲ್ಲಿ 'ಕರ್ಮ' 'ನರ' ಎಂಬ ಸಾಮಾನ್ಯ ಶಬ್ದಗಳನ್ನೇ ಬಳಸಲಾಗಿದೆ.

## ಕರ್ಮ – ಜ್ಞಾನಗಳಿಗೆ ವಿರೋಧವಿಲ್ಲ

ಕರ್ಮ ಮತ್ತು ಜ್ಞಾನಗಳಿಗೆ ಪರಸ್ಪರ ವಿರೋಧವಿದೆ. ಒಂದಿದ್ದರೆ ಅಲ್ಲಿ ಮತ್ತೊಂದಿರಲು ಸಾಧ್ಯವಿಲ್ಲ. ಈ ವಿರೋಧ ಬೆಟ್ಟದಂತೆ ಅಲುಗಾಡಿಸಲೂ ಆಗದಂತಹದು ಎಂದು ಕೆಲವರು ಹೇಳಬಹುದು.

---

1. ಸ್ನಾತ್ವಾ ಭುಂಜೀತ. ದ. ಸ್ಮೃ.
ಊಟವಾದಮೇಲೆ ಸ್ನಾನ ಆರೋಗ್ಯ ಕೆಡಿಸುತ್ತದೆ, ಸ್ನಾನವಿಲ್ಲದ ಊಟವೂ ಹಾಗೆಯೇ. ಆದುದರಿಂದ ಶಾಸ್ತ್ರದಲ್ಲಿ ಸ್ನಾನಕ್ಕೆ ಮುಂಚೆ ತಿನ್ನುವುದನ್ನು ನಿಷೇಧಿಸುವುದಕ್ಕಾಗಿ ತಿನ್ನುವ ಮುಂಚೆಯೇ ಸ್ನಾನವಾಗಿರಬೇಕು ಎಂದು ವಿಧಿಸಲಾಗಿದೆ.

2. ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ।
ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ॥ ಗೀ. ೨. ೪೭.

3. ಈ ಆತ್ಮದರ್ಶನವು ವಿದ್ಯೆಗೆ ಅಂಗವಾಗಿರುವ ಸ್ವಾತ್ಮದರ್ಶನ. ಅಷ್ಟಕ್ಕೇ ತಮ್ಮ ಅಭ್ಯಾಸ ನಿಲ್ಲಿಸಿಬಿಡುವಂತಹವರಿಗೆ ಕರ್ಮದ ಅವಶ್ಯಕತೆ ಇಲ್ಲ ಎಂದು ಹೇಳಲಾಗಿದೆ. "ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ। ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ಗೀ. ೩.೧೭. ಇಂತಹವನು ವಿದ್ಯೆಯನ್ನು ಮುಂದುವರಿಸಿಕೊಳ್ಳುವಾಗ ಮುಮುಕ್ಷು ಎನಿಸುತ್ತಾನೆ. ಅವನಿಗೆ ಕರ್ಮ ಮತ್ತೆ ಅವಶ್ಯವಾಗುವುದು." ಯಜ್ಞದಾನತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್। ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್॥ ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ। ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್॥ " ಗೀ. ೧೮.೫.೬.

ಆದರೆ ಜ್ಞಾನಿಯಾದವನು ಮಾಡುವ ಸನ್ಯಾಸದಲ್ಲಿ ಒಂದುಚೂರೂ ಕರ್ಮವಿಲ್ಲವೇನು? ಅವನು ಭಿಕ್ಷಾಟನೆ ಮುಂತಾದ ಕೆಲಸಗಳನ್ನು ಮಾಡುವುದಿಲ್ಲವೆ? ಅಂತಹ ಕರ್ಮಗಳು ಅವನಿಗೂ ಆವಶ್ಯಕವಿದು ಶಾಸ್ತ್ರವೂ ವಿಧಿಸಿರುವಾಗ ನಾವು ನಮ್ಮಿಷ್ಟಬಂದಂತೆ ಯಾವುದನ್ನೂ ತ್ಯಾಗಮಾಡುವಂತಿಲ್ಲ. ಎಲ್ಲ ಕರ್ಮಗಳನ್ನೇ ಜ್ಞಾನಿಯೂ ತ್ಯಾಗಮಾಡಿಬಿಡುವ ಪಕ್ಷಕ್ಕೆ 'ಭುಂಜೀಥಾಃ' ಎಂಬ ಮಾತಿನಂತೆ ಅನುಭವಿಸಲು ಏನು ಉಳಿದಿರುತ್ತದೆ?

ಆತ್ಮಸಾಕ್ಷಾತ್ಕಾರವಾದವನಿಗೆ ಸಮಾಧಿಯಲ್ಲಿರುವಾಗ[1] ಎಲ್ಲ ಹೊರಗೆಲಸಗಳೂ ತನ್ನಷ್ಟಕ್ಕೆ ತಾನೇ ಬಿಟ್ಟುಹೋಗುವುವು. ಒಬ್ಬನು ಆಯಾಸ ಪರಿಹಾರಕ್ಕಾಗಿ ಕೈಯಲ್ಲಿ ಬೀಸಣಿಗೆಹಿಡಿದುಕೊಂಡು ಬೀಸಿಕೊಳ್ಳುತ್ತ ಇರುವನೆಂದು ಇಟ್ಟುಕೊಳ್ಳೋಣ. ಅವನಿಗೆ ಹಾಗೆಯೇ ನಿದ್ದೆಯ ಜೊಂಪುಹತ್ತಿದರೆ ಕೈಯಲ್ಲಿರುವ ಬೀಸಣಿಗೆ ತಾನೇ ತಾನಾಗಿ ಬಿದ್ದುಹೋಗುವುದಿಲ್ಲವೆ? ಹಾಗೆಯೇ, ಇದು. ಹೀಗೆ ನಿದ್ದೆಯಂತಹಸಮಾಧಿ ಬರುವವರೆಗೂ ಯಾವ ಜ್ಞಾನಿಯೂ ಕರ್ಮವನ್ನು ಬಿಡುವಂತಿಲ್ಲ. ಸಮಾಧಿಯಿಂದ ಎಚ್ಚೆತ್ತಮೇಲೂ ಕರ್ಮಮಾಡಲೇಬೇಕು. ಮಾಡದಿರುವಂತಿಲ್ಲ. ಹೀಗೆ ಜ್ಞಾನಿಯಾದವನಿಗೂ ಸಮಾಧಿಯಿಲ್ಲದಕಾಲದಲ್ಲಿ ಕರ್ಮಗಳು ವಿಹಿತಗಳಾಗಿವೆ. ಆದುದರಿಂದ ಜ್ಞಾನಕರ್ಮಗಳಿಗೆ ಯಾವತ್ತೂ ವಿರೋಧವಿಲ್ಲ.

## ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಸಾರಾರ್ಥ ಸಂಗತಿ

ಸುಖಾಭಿಲಾಷಿಗಳಿಗೆ ಸುಖವೊದಗಿಸುವ ಸಹಾಯಸಾಧನ ಅವರವರ ಪುಣ್ಯ. ಹಾಗೆಯೇ ಮೋಕ್ಷಾಭಿಲಾಷಿಗಳಿಗೆ ಮೋಕ್ಷವೊದಗಿಸುವ ವಿದ್ಯೆಯ ಜೊತೆಗೆ ಸಹಾಯಸಾಧನ ಕರ್ಮಯೋಗ. ಈಕರ್ಮಯೋಗ ಅವರವರ ಅರ್ಹತೆಗೆ ತಕ್ಕಂತೆ ಒಂದು ವಿಶೇಷರೀತಿಯಲ್ಲಿ ಆಚರಿಸಬೇಕಾದುದು. ಈ ಅಭಿಪ್ರಾಯವನ್ನು ಅನುಸರಿಸಿ, ಮೂರುವಿಧತ್ಯಾಗ ಭಾವನೆಯಿಂದ ಆಚರಿಸುವುದೇ ಆ ವಿಶೇಷರೀತಿ ಎಂದು ಈವರೆಗೆ ತಿಳಿಸಿಯಾಯಿತು. ಇಂತಹ ಕರ್ಮಯೋಗವನ್ನು ಬದುಕಿರುವವರೆಗೂ ಆಚರಿಸಬೇಕೆಂದೂ ಇದರಿಂದ ವಿದ್ಯೆಗೆ ಬಹಳ ಉಪಕಾರವಾಗುವುದೆಂದೂ ಈ ಎರಡನೆಯ ಮಂತ್ರದಲ್ಲಿ ತಿಳಿಸಲಾಗುತ್ತದೆ.

ಸುಖಾಭಿಲಾಷಿಗಳು ಮಾಡುವ ಕರ್ಮಗಳನ್ನೇ ಕರ್ಮಕಾಂಡದಲ್ಲಿ ಈಹಿಂದೆ ಹೇಳಲಾಗಿತ್ತು. ಅದೇ ಕರ್ಮಗಳನ್ನು ಮೊದಲ ಮಂತ್ರದಲ್ಲಿ ಹೇಳಿದ ವಿಶೇಷರೀತಿಯಲ್ಲಿ ಆಚರಿಸಿದರೆ ಅವುಗಳೇ ಮೋಕ್ಷವಿದ್ಯೆಗೂ ಸಹಾಯಕಗಳಾಗುವುವು, ಎಂಬ ಅಂಶವನ್ನು ತಿಳಿಸಲೋಸುಗ, ಈ ವಿದ್ಯೆಯನ್ನೂ ಕರ್ಮಕಾಂಡದ ಕೊನೆಯಲ್ಲೇ ತಿಳಿಸಲಾಗಿದೆಯಷ್ಟೆ.

ಕರ್ಮಠರು ಮಾಡುವ ಕರ್ಮಗಳನ್ನೇ ಮುಮುಕ್ಷುವೂ ಮಾಡತಕ್ಕದ್ದು. ಆದರೆ ಇವನು ಮಾಡುವ ಭಾವನೆಯಲ್ಲಿ ಮಾತ್ರ ವ್ಯತ್ಯಾಸ ಅಷ್ಟೆ. ಕರ್ಮದ ಆಚರಣೆಯ ರೀತಿಯಲ್ಲಿ ಸ್ವಲ್ಪವೂ ವ್ಯತ್ಯಾಸವಿಲ್ಲ. ಈಅಂಶವನ್ನು "ಎಲ್ಲ ರೀತಿಯಿಂದಲೂ ಅವುಗಳೇ, ಇಬ್ಬರ ಗುರುತೂ ಆಗಿರುವುದರಿಂದ"[2] ಎಂಬುದಾಗಿ ಬ್ರಹ್ಮಸೂತ್ರಗಳಲ್ಲೇ ವ್ಯಾಸಮಹರ್ಷಿಗಳು ಸ್ಪಷ್ಟಪಡಿಸಿದ್ದಾರೆ.

---

1. ಪರಮಾತ್ಮನ ಸ್ವರೂಪದಲ್ಲಿ ಮನಸ್ಸನ್ನು ನೆಲೆಗೊಳಿಸಿ ಬೇರೆ ಯಾವ ವಿಷಯಗಳನ್ನೂ ಚಿಂತಿಸದೆ ಇರುವ ಸ್ಥಿತಿಯೇ ಧ್ಯಾನ. ಈಧ್ಯಾನದ ಕೊನೆಯ ಹಂತವೇ ಸಮಾಧಿ.

2. ಸರ್ವಥಾಪಿ ತ ಏವೋಭಯಲಿಂಗಾತ್. ಬ್ರ. ಸೂ. ೩.೪.೩೪.

## ಪದವಿವರಣೆ

**ಕುರ್ವನ್ನೇವ, ಜಿಜೀವಿಷೇತ್** – ಮಾಡುತ್ತಲೇ ಬದುಕಿರಬೇಕು.[1]

**ಅನ್ಯಥಾ** – ಇತರಸುಖಾಭಿಲಾಷಿಗಳು ಇದೇಕರ್ಮಗಳನ್ನು ಮಾಡಿ ಮೋಕ್ಷಕ್ಕೆ ತಡೆಮಾಡಿಕೊಳ್ಳುವಂತಹ ರೀತಿಯು.

## ಜ್ಞಾನಿಗೆ ಕರ್ಮಾಚರಣೆಯ ರೀತಿ

"ಇತಃ, ಅನ್ಯಥಾ, ನ, ಅಸ್ತಿ" ಈಮಾತು ಬ್ರಹ್ಮಜ್ಞಾನಿಯನ್ನು ಸುಮ್ಮನೆ ಹೊಗಳಲು ಬಂದುದಲ್ಲ. ವಾಸ್ತವವಾಗಿಯೇ ತ್ಯಾಗಭಾವನೆಯಿಂದ ಮಾಡುವ ಕರ್ಮಗಳು ಅಂಟುವುದಿಲ್ಲ ಎಂಬ ತಾತ್ವಿಕವಿಚಾರವನ್ನು[2] ತಿಳಿಸಲು ಬಂದುದು. ಕರ್ಮದ ಲೇಪ[3] ಇಂತಹ ನಿಸ್ಸಂಗಿಯಾದವನಿಗೆ[4] ಇಲ್ಲವೇ ಇಲ್ಲ ಎಂಬುದು ಇಲ್ಲಿಯ ನಿರ್ಣಯ. ಈ ನಿರ್ಣಯಕ್ಕೆ ವಿರುದ್ಧವಾದ ಯಾವುದೇ ರೀತಿಯೂ ಇಲ್ಲ ಎಂದು ಈಮಾತು ಸ್ಪಷ್ಟಪಡಿಸುತ್ತದೆ.

ಇಲ್ಲಿ ಬ್ರಹ್ಮಜ್ಞಾನದ ವಾಸ್ತವವಾದ ಗುಣವನ್ನು ಹೇಳಲಾಗಿದೆ, ಬರೀಹೊಗಳಿಕೆಯನ್ನಲ್ಲ. ಹಾಗೂ ಬ್ರಹ್ಮಜ್ಞಾನಿಯು ಕಾಮ್ಯಕರ್ಮಗಳನ್ನು ಮಾಡಲೇಬೇಕೆಂಬ ವಿಧಿಯಿಲ್ಲ, ಮಾಡಲು ಅನುಮತಿ ಮಾತ್ರ ಉಂಟು. ಮಾಡಿದರೂ ಅದರಿಂದ ಅವನಿಗೆ ಬಂಧವಿಲ್ಲ. ಫಲಸಂಗ ಇಟ್ಟುಕೊಂಡ ಸಾಮಾನ್ಯಜನರು ಆಚರಿಸುವ ರೀತಿಯಲ್ಲೇ ಆಚರಿಸಬೇಕು. ಫಲಸಂಗಾದಿಭಾವನೆಗಳಿಲ್ಲದೆ ಆಚರಿಸುವುದಷ್ಟೇ ಇದರಲ್ಲಿ ವಿಶೇಷ.

ಹಾಗೂ ಗೃಹಸ್ಥಾಶ್ರಮದಲ್ಲಿದ್ದುಕೊಂಡೇ ಬ್ರಹ್ಮಜ್ಞಾನಿಯಾಗಿ ಜನಕ – ಯಾಜ್ಞವಲ್ಕ್ಯ ಮುಂತಾದವರ ಹಾಗೆ ಕರ್ಮಮಾಡುತ್ತಿರಬಹುದು. ಕರ್ಮತ್ಯಾಗ ಮಾಡಿ ಸನ್ಯಾಸಿಯಾಗಲೇಬೇಕೆಂದೇನೂ ಇಲ್ಲ. ಒಂದುವೇಳೆ ಸನ್ಯಾಸಿಯಾಗಬೇಕೆಂಬ ಇಷ್ಟದಿಂದ ಕೆಲವರು ಕಾವಷೇಯ ಮುಂತಾದ ಋಷಿಗಳಂತೆ ಕರ್ಮತ್ಯಾಗಮಾಡಿದರೆ ಮಾಡಿಕೊಳ್ಳಲಿ. ಗೃಹಸ್ಥರಿಗಾಗಲಿ ಸನ್ಯಾಸಿಗಳಿಗಾಗಲಿ ಅವರವರ ಬ್ರಹ್ಮವಿದ್ಯೆಗೆ ಅಂಗವಾದ ಕರ್ಮಗಳು ಅವರು ಬದುಕಿರುವವರೆಗೂ ಬಿಡದೆ ಇದ್ದೇ ಇರುತ್ತವೆಯಷ್ಟೆ. ಅವುಗಳಲ್ಲಿ ನಿತ್ಯ – ನೈಮಿತ್ತಿಕಕರ್ಮಗಳನ್ನು ಶಾಸ್ತ್ರವಿಧಿ ಪ್ರೇರಣೆಯಿಂದಲೂ, ಕಾಮ್ಯಕರ್ಮಗಳನ್ನು ಶಾಸ್ತ್ರದ ಅನುಮತಿಯಿಂದಲೂ ಅವರೆಲ್ಲರೂ ನಿಸ್ಸಂಗರಾಗಿ ಆಚರಿಸುತ್ತಿರಬೇಕೆಂದೇ ಈಶಾವಾಸ್ಯದ ಎರಡನೆಯಮಂತ್ರ ತಿಳಿಸುತ್ತದೆ. ಈವಿಚಾರವನ್ನೇ ಬ್ರಹ್ಮಸೂತ್ರ, ಶ್ರೀಭಾಷ್ಯ, ಟೀಕೆಗಳಲ್ಲಿ[5] ಸ್ಪಷ್ಟಪಡಿಸಲಾಗಿದೆ[6]

---

1. ಬದುಕಿರುವವರೆಗೂ ಮಾಡುತ್ತಲೇ ಇರಬೇಕು. ಕರ್ತವ್ಯಕರ್ಮಗಳನ್ನು ಮಾಡದೆ ಬದುಕಿರಲು ಹವಣಿಸುವುದಾಗಲಿ, ಮಾಡದೆ ಅಥವಾ ಇಂತಿಷ್ಟೆಂದು ಯಾವುದನ್ನೋ ಮಾಡಿಮುಗಿಸಿ ಸಾವಾಗಿ ಸಾಯಲು ಹವಣಿಸುವುದಾಗಲಿ ತಪ್ಪು ಎಂದು ತಿಳಿಯುವುದು.

2. ಸತ್ಯ. 3. ಕರ್ಮ ಫಲದ ಸಂಬಂಧ. 4. ಫಲವನ್ನು ಅಪೇಕ್ಷಿಸದೆ ಕರ್ಮ ಮಾಡುವವನು.

5. ಶ್ರೀಭಾಷ್ಯದ ಅರ್ಥವನ್ನು ವಿವರಿಸುವ ಶ್ರುತಪ್ರಕಾಶಿಕಾ ಮುಂತಾದ ಗ್ರಂಥಗಳು.

6. ಎಲ್ಲವನ್ನೂ ಶಾಸ್ತ್ರವಿಧಿಪ್ರೇರಣೆಯಿಂದ ಮಾಡಬೇಕೆಂದೇ ವ್ಯಾಸರ ಅಭಿಪ್ರಾಯ ಇರುವುದಾಗಿಯೂ, ಬ್ರಹ್ಮಜ್ಞಾನಿಯು ತ್ರಿವಿಧ ಕರ್ಮಗಳನ್ನು ಶಾಸ್ತ್ರಾನುಮತಿಯಿಂದ ಮಾಡಬೇಕೆಂಬ ಅಭಿಪ್ರಾಯವನ್ನು ವ್ಯಾಸರು ನಂತರ ಹೇಳಿದ್ದರೂ, ಅದು ಅವರಿಗೆ ಅಷ್ಟು ಪ್ರಿಯವಾದುದಲ್ಲವೆಂದೂ ವೇದಾಂತಾಚಾರ್ಯರ ಭಾಷ್ಯದಿಂದ ತಿಳಿದುಬರುವಂತಿದೆ.

ಈರೀತಿ ವೇದಾಂತಾಚಾರ್ಯರ ವಚನದ ಭಾವವನ್ನು ತಿಳಿದುಕೊಳ್ಳುವುದು ಸರಿಯಾಗದು. ಕರ್ಮದ ಆಚರಣೆಯು ಎರಡು ಸಂದರ್ಭಗಳಲ್ಲಿದೆ. ಒಂದು:- ಸಾಮಾನ್ಯ ಕರ್ಮಠರು ಮಾಡುವಂತಹ ಕರ್ಮಗಳನ್ನೇ ಬ್ರಹ್ಮಜ್ಞಾನಿಯೂ ಮಾಡುವುದು. ಎರಡು:- ಅದರಂತೆಯೇ ಕೆಲವು ವಿಶೇಷ ಕರ್ಮಗಳನ್ನು ಮಾಡುವುದು. ಈಶಾವಾಸ್ಯದ ಪ್ರಕರಣಕ್ಕೆ ಈ ವಿಶೇಷಕರ್ಮಗಳೇನೂ ವಿರುದ್ಧವಾದವುಗಳಲ್ಲ. ಈಕರ್ಮಗಳು ಅಂಟವು ಎಂದು ಬ್ರಹ್ಮಜ್ಞಾನದ ವಾಸ್ತವಿಕ ಮಹಿಮೆಯನ್ನು ತಿಳಿಸಲೂ, ಬ್ರಹ್ಮಜ್ಞಾನಿಗೆ ಇಂತಹ ವಿಶೇಷ ಕರ್ಮಗಳನ್ನು ಮಾಡಲು ಅನುಮತಿಯಿದೆ ಎಂಬುದನ್ನು ತಿಳಿಸಲೂ ಈಮಂತ್ರ ಇಲ್ಲಿ ಬಂದಿದೆಯಷ್ಟೆ. ಈ ವಿಚಾರಗಳಲ್ಲಿ ಮೊದಲನೆಯದನ್ನು ಮೊದಲು ಸೂತ್ರದಲ್ಲಿ ವ್ಯಾಸರು ತಿಳಿಸಿದ್ದಾರೆ. ಇದು ಪ್ರಕರಣಕ್ಕೆ ವಿರುದ್ಧವಾದುದೇನೂ ಅಲ್ಲ. ಎರಡನೆಯ ವಿಚಾರವನ್ನು ಅನಂತರ ಸೂತ್ರದಲ್ಲಿ ತಿಳಿಸಿದ್ದಾರೆ. ಇದು ಈಶಾವಾಸ್ಯ ಪ್ರಕರಣಕ್ಕೆ ವಿರುದ್ಧವೇನೋ ಎಂದು ಸಂದೇಹಿಸಲು ಅವಕಾಶವಾಗಬಹುದು ಎಂದುಕೊಂಡು ಆ ಸಂದೇಹದ ಪರಿಹಾರಕ್ಕಾಗಿ ಇದೂ ಪ್ರಕರಣಕ್ಕೆ ವಿರುದ್ಧವಲ್ಲ ಎಂದು ಇಲ್ಲಿ ನಿರೂಪಿಸಲಾಗಿದೆ. ಇದಿಷ್ಟೇ ವೇದಾಂತಚಾರ್ಯರ ಮಾತಿನ ತಾತ್ಪರ್ಯ. ಇಲ್ಲಿ ಶ್ರೀರಂಗಾಚಾರ್ಯರು ಇದನ್ನು ವಿಮರ್ಶಿಸಲು ಹೊರಟು, ವೇದಾಂತಾಚಾರ್ಯರ ಮಾತಿಗೆ ಯಾರಾದರೂ ಆ ರೀತಿ ಅಪಾರ್ಥ ಮಾಡಿದರೆ ಅದನ್ನು ಖಂಡಿಸುವ ರೀತಿಯಲ್ಲಿ ಖಂಡಿಸಿದ್ದಾರೆ.

  

# ಈಶಾವಾಸ್ಯೋಪನಿಷತ್

## ಮಂತ್ರ ಮೂರು

**ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾ ವೃತಾಃ।**

**ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥೩॥**

### ಅನ್ವಯಾನುಸಾರ ಪ್ರತಿಪದಾರ್ಥ

**ಅಸುರ್ಯಾಃ** — ಅಸುರಸ್ವಭಾವದವರಿಗೆ ಮಾತ್ರ ಹಿತಕರವಾಗಿರುವುದರಿಂದ 'ಅಸುರ್ಯಾಃ' ಎಂದು; **ನಾಮ** — ವೇದಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುವ; **ತೇ** — ಆ; **ಲೋಕಾಃ** — ಲೋಕಗಳು; **ಅಂಧೇನ** — ಕಣ್ಣನ್ನೇ ಕುರುಡಾಗಿಸುವಷ್ಟು ಗಾಢವಾದ; **ತಮಸಾ** — ಕತ್ತಲೆಯಿಂದ; **ವೃತಾಃ** — ಆವರಿಸಲ್ಪಟ್ಟಿವೆ; **ಯೇ, ಕೇ, ಚ** — ಯಾವ ಕೆಲವು; **ಜನಾಃ** — ಸಂಸಾರಿಜನರು; **ಆತ್ಮಹನಃ** — ಆತ್ಮಜ್ಞಾನವಿಲ್ಲದೆ 'ಅಸತ್' ಎನಿಸಿಕೊಂಡಿರುವರೋ; **ತೇ** — ಅವರೆಲ್ಲರೂ; **ಪ್ರೇತ್ಯ** — ಮರಣವಾದೊಡನೆ; **ತಾನ್** — ಅಸುರ್ಯ ಎಂಬ ನರಕಗಳನ್ನೇ; **ಅಭಿಗಚ್ಛಂತಿ** — ಎಲ್ಲ ವಿಧದಿಂದಲೂ ಗುರಿಯಿಟ್ಟು ಸಾಗುವರು.

### ಛಾಯಾ ಪದ್ಯ

ಅಸುರರವೆಂಬಾ ಲೋಕಗಳು ಕಗ್ಗತ್ತಲೆಯಿಂ ತುಂಬಿಹವು.
ಅವನವರ್ ಸತ್ತೆಡೆಗೊಳ್ಳುವರೈ; ಕೆಲರಾರ್ ತನ್ನನೆ ಘಾತಿಪರೋ.

## ತಾತ್ಪರ್ಯಾರ್ಥ

### ಸ್ವಾರ್ಥದ ಪರಿಣಾಮ; ಆತ್ಮಘಾತಿಯ ಲಕ್ಷಣ

ವೇದಪುರುಷನು ಒಂದನೆಯ ಮತ್ತು ಎರಡನೆಯ ಮಂತ್ರದಲ್ಲಿ ಪರಮಾತ್ಮ, ಜೀವ, ಪ್ರಕೃತಿ ಎಂಬ ಮೂರು ತತ್ವಗಳ ಸ್ವರೂಪವನ್ನು ತಿಳಿಸಿದನು. ಬ್ರಹ್ಮವಿದ್ಯೆಗೆ ಪರಿಪೋಷಕವಾದ ಕರ್ಮಾನುಷ್ಠಾನದ ರೀತಿನೀತಿಗಳನ್ನು ಪ್ರಕಾಶಪಡಿಸಿದನು. ಅದರಂತೆ ನಡೆಯದೆ ಸ್ವತಂತ್ರಾತ್ಮಭ್ರಮೆಯಿಂದಲೂ ಡಂಭ–ಅಹಂಕಾರಗಳಿಂದಲೂ ಕೂಡಿದ ಅಸುರಸ್ವಭಾವದವರು[1] ಕಾಮ–ಕ್ರೋಧಗಳಿಗೆ ಪರವಶರಾಗಿ ಯಜ್ಞಯಾಗಾದಿಗಳನ್ನು ಮಾಡುವರು. ಶಾಸ್ತ್ರ ನಿಷಿದ್ಧವಾದ ಕರ್ಮಗಳನ್ನು ಆಚರಿಸುವರು. ಇವರೇ ಆತ್ಮಘಾತಿಗಳು. ಇಂತಹವರು; ಅತಿಘೋರ ನರಕವನ್ನು ಅನುಭವಿಸುವರೆಂದು 'ಅಸುರ್ಯಾ ನಾಮ' ಎಂಬ ಮಂತ್ರದಿಂದ ವೇದಪುರುಷನು ತಿಳಿಸಿ, ಬ್ರಹ್ಮವಿದ್ಯಾಂಗವಾದ ಕರ್ಮಾಚರಣೆಗಳಲ್ಲಿ ಕಾತುರತೆಯನ್ನು ಹುಟ್ಟಿಸುತ್ತಾನೆ.

---

1. ಡಂಭಾಚಾರ — ತೋರಿಕೆಗಾಗಿ ಧರ್ಮಾಚರಣೆ. **ದರ್ಪ** — ಅಲ್ಪ ವಿಷಯಗಳನ್ನು ಅನುಭವಿಸಿದಷ್ಟರಿಂದಲೇ ಮಾಡಿಕೊಳ್ಳುವ ಒಂದು ರೀತಿಯ ಹೆಮ್ಮೆ. ಇದರಿಂದ ವಿವೇಚನಾಶಕ್ತಿ ಕಳೆದು ಹೋಗುವುದು. **ಅತಿಮಾನ** — ಉತ್ತಮವಾದ ವಿದ್ಯೆ, ಕುಲ, ಧನ, ಅಧಿಕಾರ ಮುಂತಾದವುಗಳಿಂದ ಬರುವ ಹೆಮ್ಮೆ. **ಕೋಪ** — ಇತರರಿಗೆ ತೊಂದರೆ ಮಾಡಲು ಪೂರ್ವಸಿದ್ಧತೆಯಂತಿರುವ ಮನಸ್ಸಿನ ಒಂದು ವಿಕೃತಾವಸ್ಥೆ. **ಒರಟುತನ** — ಸಜ್ಜನರಿಗೆ ಬೇಜಾರು ಮಾಡುವಂತಹ ನಡತೆ. **ಅಜ್ಞಾನ** — ತತ್ವದ ಬಗ್ಗೆ, ಹಾಗೂ ಕರ್ತವ್ಯಗಳ ಬಗ್ಗೆ ವಿವೇಕವಿಲ್ಲದಿರುವುದು. ಇದೆಲ್ಲ ಅಸುರಸ್ವಭಾವ. ಇದನ್ನು 'ಅಸುರೀ ಸಂಪತ್' ಎನ್ನಲಾಗಿದೆ. ಇದರ ಮತ್ತಷ್ಟು ವಿವರಣೆ ಗೀತೆಯ ಹದಿನಾರನೆಯ ಅಧ್ಯಾಯದಲ್ಲಿರುವುದು.

## ಘೋರ ನರಕಗಳು

ಪಾಪಿಗಳಿಗೆ ತಮ್ಮ ತಮ್ಮ ಪಾಪಫಲಗಳನ್ನು ಅನುಭವಿಸಲು ಯೋಗ್ಯವಾದ 'ಅಸುರ್ಯಾ' ಮೊದಲಾದ ಹೆಸರಿನ ನರಕಲೋಕಗಳು ಪ್ರಸಿದ್ಧವಾಗಿವೆ. ಅವು ಗಾಢವಾದ ಕತ್ತಲೆಯಿಂದ ಆವೃತವಾಗಿವೆ. ಅಲ್ಲಿ ಎಂದೆಂದಿಗೂ ಬೆಳಕು ಗೋಚರಿಸಲಾಗದು. ಅಲ್ಲಿ ಆನಂದದ ಹೆಸರನ್ನೂ ಕೇಳಲಾರೆವು. ಅತಿಕಠಿಣರಾದ ಅಸುರಸ್ವಭಾವದವರಿಗೂ ಸಹಿಸಲು ಅವು ಅಸಾಧ್ಯವಾದವುಗಳು ಎಂದ ಮೇಲೆ, ಮೃದು ಮಧುರವಾದ ಭಾವನೆಗಳುಳ್ಳ, ದೈವ ಸ್ವಭಾವದವರ[1] ಪಾಡೇನೆಂದು ಹೇಳೋಣ.

---

1. ಅಭಯ — ನಮ್ಮ ಬೇಕುಬೇಡಗಳ ಆಗು ಹೋಗುಗಳಿಂದಾಗುವ ದುಃಖ ಸಹಿಸಲು ಬಹಳ ಕಷ್ಟ. ಅಂತಹ ದುಃಖಕ್ಕೆ ಕಾರಣವಾದವುಗಳನ್ನು ಕಂಡರೆ ನಮಗಾಗುವ ಸೂಕ್ಷ್ಮವಾದ ದುಃಖವೇ ಭಯ. ಇಂತಹ ದುಃಖವಿಲ್ಲದಿರುವಿಕೆಯೇ ಅಭಯ. ಸತ್ವಶುದ್ಧಿ — ನಮ್ಮ ಅಂತಃಕರಣವಾದ ಮನಸ್ಸು ರಜೋಗುಣ ತಮೋಗುಣಗಳ ಜಂಜಡವಿಲ್ಲದೆ ಶುದ್ಧವಾಗಿರುವುದು. ಜ್ಞಾನಯೋಗವ್ಯವಸ್ಥೆ — ಪ್ರಕೃತಿಗಿಂತ ಆತ್ಮತತ್ವ ವಿಭಿನ್ನ ಮತ್ತು ಪರಿಶುದ್ಧ ಎಂಬ ವಿವೇಚನೆಯಲ್ಲಿ ನಿಷ್ಠೆಯಿಂದ ಮಗ್ನನಾಗಿರುವುದು. ದಾನ — ನ್ಯಾಯರೀತಿಯಲ್ಲಿ ಸಂಪಾದಿಸಿದ ಹಣ್ನದನ್ನು ಅರ್ಹರಾದವರಿಗೆ ಸಕಾಲದಲ್ಲಿ ಪ್ರೀತಿಯಿಂದ ಕೊಡುವುದು. ದಮ — ಅಭಿರುಚಿಗೆ ತಕ್ಕಂತೆ ವಿಷಯಗಳನ್ನು ಅನುಭವಿಸಲು ಮುಂದಾಗುವ ಮನಸ್ಸನ್ನು ಹಿಮ್ಮುಖಗೊಳಿಸಲು ನಿರಂತರ ಅಭ್ಯಾಸ ಮಾಡುವುದು. ಯಜ್ಞ — ಫಲದ ಬಗ್ಗೆ ಆಸೆಯಿರಿಸಿಕೊಳ್ಳದೆ ಭಗವಂತನ ಸೇವಾರೂಪವಾಗಿ ಮಹಾಯಜ್ಞಗಳನ್ನು ನಡೆಸುವುದು. ಇಲ್ಲಿ ಮಹಾಯಜ್ಞವೆಂದರೆ:— ವೇದಶಾಸ್ತ್ರಗಳ ಅಭ್ಯಾಸ, ಪ್ರಾಣಿಗಳಿಗೆ ಆಹಾರದಾನ, ಅತಿಥಿ ಸತ್ಕಾರ, ದೇವರ ಪೂಜೆ, ನಮ್ಮ ಹಿರಿಯರು ಇರುವಾಗಲೂ ಇಲ್ಲದಿರುವಾಗಲೂ ಮಾಡುವ ಅವರ ಪೂಜೆ ಎಂಬ ಐದು ಅಂಶಗಳು ಮಾತ್ರ. ಸ್ವಾಧ್ಯಾಯ — ಜಗತ್ತು ಮತ್ತು ಜಗತ್ಕಾರಣವಾದ ಪರಮಾತ್ಮ ಮತ್ತು ಇವೆಲ್ಲಕ್ಕೂ ಸಂತೋಷಕರವಾಗುವಂತೆ ನಡೆದುಕೊಳ್ಳುವ ರೀತಿ ನೀತಿಗಳು ಇವೆಲ್ಲವನ್ನೂ ವೇದಗಳು ತಿಳಿಸುತ್ತವೆ ಎಂಬ ನಿಶ್ಚಯದಿಂದ ವೇದಾಭ್ಯಾಸದಲ್ಲಿ ನಿಷ್ಠೆಯನ್ನು ತೋರುವುದು. ತಪಸ್ಸು — ದೇವರ ಪೂಜೆ ಮಾಡಲು ನಾವು ಅರ್ಹತೆಯನ್ನು ಪಡೆಯಬೇಕಾದರೆ ಮೊದಲು ಮಾಡಬೇಕಾದ ಪ್ರಾಯಶ್ಚಿತ್ತ–ವ್ರತ–ಉಪವಾಸಾದಿಗಳು. ಸರಳತೆ — ಇತರ ಬಗ್ಗೆಯೂ ನಮ್ಮ ಮನಸ್ಸು, ಮಾತು, ಆಚರಣೆ ಈ ಮೂರರಲ್ಲೂ ಶುದ್ಧವಾಗಿ ಏಕರೀತಿಯಲ್ಲಿ ನಿಷ್ಠೆಯಿಂದಿರುವುದು. ಅಹಿಂಸೆ — ಇತರರಿಗೆ ತೊಂದರೆ ಕೊಡದಿರುವುದು. ಸತ್ಯ — ಇರುವ ವಿಚಾರವನ್ನು ಯಾರಿಗೂ ಮುಂದೆಯೂ ತೊಂದರೆಯಾಗದಂತೆ ಹೇಳುವುದು. ಅಕ್ರೋಧ — ಕೋಪ ಮಾಡಿಕೊಳ್ಳದಿರುವಿಕೆ. ತ್ಯಾಗ — ಆತ್ಮಹಿತಕ್ಕೆ ಧಕ್ಕೆಯಾಗುವಂತಹ ಆಸ್ತಿ-ಪಾಸ್ತಿಗಳನ್ನೂ, ದಾನ–ಧರ್ಮ ಸ್ವೀಕಾರಗಳನ್ನೂ ಬಿಟ್ಟುಬಿಡುವುದು. ಶಾಂತಿ–ಕಣ್ಣು ಕಿವಿ ಮುಂತಾದ ಹೊರ ಇಂದ್ರಿಯಗಳ ಚಾಪಲ್ಯವನ್ನು ತಡೆಹಿಡಿಯುವ ಅಭ್ಯಾಸ. ಚಾಡಿ ಹೇಳದಿರುವಿಕೆ. ಭೂತದಯೆ — ಯಾವುದೇ ಪ್ರಾಣಿಗಳಿಗೆ ಸ್ವಲ್ಪ ದುಃಖವಾದರೂ ನಮಗೆ ಅದನ್ನು ಸಹಿಸಲಾರದಿರುವಿಕೆ, ಲೋಲುಪತೆ — ಯಾವುದೇ ವಸ್ತುಗಳ ಮತ್ತು ವಿಷಯಗಳ ಬಗ್ಗೆ ಬೇಕೇಬೇಕೆಂಬ ಆಸೆಯನ್ನು ಇಟ್ಟುಕೊಳ್ಳದಿರುವುದು. ಮೃದುತ್ವ — ಒರಟಾಗಿ ನಡೆದುಕೊಳ್ಳದಿರುವಿಕೆ. ಇದರಿಂದ ಸಜ್ಜನರ ಸಹವಾಸ ಮಾಡುವ ಅರ್ಹತೆ ಬರುವುದು. ಲಜ್ಜೆ — ಕೆಟ್ಟ ಕೆಲಸ ಮಾಡಲು ನಾಚಿಕೆ. ಚಾಪಲ್ಯವಿಲ್ಲದಿರುವಿಕೆ — ಒಳ್ಳೊಳ್ಳೆಯ ವಸ್ತುಗಳು ನಮ್ಮ ಬಳಿ ಬಂದಾಗಲೂ ಮನಸ್ಸನ್ನು ಸ್ವಲ್ಪವೂ ಚಂಚಲಮಾಡಿಕೊಳ್ಳದಿರುವುದು. ತೇಜಸ್ — ದುರ್ಜನರಿಂದ ನಮಗೆ ತಿರಸ್ಕಾರ ಬರದಂತೆ ಉತ್ತಮವಾದ ಸಬಲವಾದ ನಡತೆ ಮತ್ತು ಸ್ವಭಾವ. ಸಹನೆ — ಇತರರಿಂದ ತೊಂದರೆ ಅನುಭವಿಸಿದರೂ ಅದಕ್ಕೆ ಕಾರಣವಾದ ಅವರ ಬಗ್ಗೆ ನಮಗೆ ಮನಸ್ಸಿನಲ್ಲಿ ಯಾವುದೇ ವ್ಯತ್ಯಾಸವಾಗದಿರುವುದು. ಧೃತಿ — ಎಂತಹ ಕಷ್ಟ ಪರಿಸ್ಥಿತಿಯಲ್ಲೂ ಆಯಾ ಕರ್ತವ್ಯಗಳ ಬಗ್ಗೆ ನಿರ್ಣಯ ಕೈಗೊಳ್ಳುವ ಸಾಮರ್ಥ್ಯ. ಶುಚಿತ್ವ — ಕಣ್ಣು, ಕಿವಿ ಮುಂತಾದ ಇಂದ್ರಿಯಗಳನ್ನೂ ಕೈಕಾಲು ಮುಂತಾದ ಅಂಗಗಳನ್ನೂ, ಪರಿಸರವನ್ನೂ, ಮನಸ್ಸನ್ನೂ, ಶುಚಿಯಾಗಿ ಇಟ್ಟುಕೊಳ್ಳುವುದು. ಇದು ಶಾಸ್ತ್ರೀಯವಾಗಿರಬೇಕು ಮತ್ತು ಇದರಿಂದ ವೈದಿಕ ಕರ್ಮಗಳನ್ನು ಆಚರಿಸಲು ನಮಗೆ ಅರ್ಹತೆ ಬರುವುದು. ದ್ರೋಹ ಬಗೆಯದಿರುವುದು — ಇತರರು ತಮ್ಮ ತಮ್ಮ ಇಷ್ಟದಂತೆ ಜೀವನಕ್ಕಾಗಿ ಯಾವುದಾದರೊಂದು ಕೆಲಸ ಮಾಡುತ್ತಿದ್ದರೆ ಅದಕ್ಕೆ ಸ್ವಲ್ಪವೂ ತೊಂದರೆ ಮಾಡದಿರುವುದು. ಅತಿಗರ್ವ ಪಡದಿರುವುದು — ಅತಿಗರ್ವವೆಂದರೆ ಸಲ್ಲದ ಅಹಂಕಾರ. ಇವಿಷ್ಟೂ ದೈವ ಸ್ವಭಾವ. ಇದನ್ನೇ "ದೈವೀಸಂಪತ್" ಎನ್ನಲಾಗಿದೆ. ಇದರ ಮತ್ತಷ್ಟು ವಿವರಗಳನ್ನು ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ನೋಡಿಕೊಳ್ಳಬಹುದು.

### ನರಕಕ್ಕೆ ಪಾತ್ರರು

ಹುಟ್ಟು – ಸಾವಿನ ಚಕ್ರದಲ್ಲೇ[1] ತೊಳಲುತ್ತಿರುವ ಜನರು ತಾನು, ತನ್ನ ಹೆಂಡತಿ, ತನ್ನ ಮನೆ, ಎಂದು ಹಗಲಿರುಳೂ ಚಿಂತಿಸುವರು. ಇವರು ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳಲು ಕಾಮ್ಯಕರ್ಮಗಳನ್ನು ಆಚರಿಸುವರು. ಭೋಗ – ವಿಲಾಸಗಳಲ್ಲಿ ಮಗ್ನರಾಗಿ ಪರಮಾತ್ಮನನ್ನೇ ಮರೆತುಬಿಡುವರು. ಡಂಭಾಹಂಕಾರಾದಿಗಳಿಂದ ಮದೋನ್ಮತ್ತರಾಗುವರು. ಇಂತಹವರು ತಾವು ಮರಣಹೊಂದಿದ ನಂತರ ಮೇಲೆ ಹೇಳಿದ ಭಯಂಕರವಾದ ನರಕ ಲೋಕಗಳನ್ನು ಸೇರಿ ಚಿತ್ರ - ವಿಚಿತ್ರ - ನೋವುಗಳನ್ನು ಅನುಭವಿಸುವರು.

## ವೇದಾಂತಾಚಾರ್ಯ ಭಾಷ್ಯ

### ತಾತ್ಪರ್ಯ

ಮುಂದೆ ತಿಳಿಸಲಾಗುವ ಬ್ರಹ್ಮವಿದ್ಯೆಯ ಬಗ್ಗೆ ಶೀಘ್ರವಾಗಿ ಜನ ಪ್ರಯತ್ನಿಸಲಿ ಎಂಬುದಕ್ಕಾಗಿ ಹಿಂದೆ ತಿಳಿಸಿದಂತಹ ಬ್ರಹ್ಮಜ್ಞಾನವನ್ನು ಪಡೆಯದೆ, ಎಲ್ಲವೂ ತನ್ನದೇ ಎಂಬ ಆಸೆಯಿಂದ ಬೇರೆ ಯಾವುದೋರೀತಿಯ ಜ್ಞಾನ ಮತ್ತು ಆಚರಣೆಗಳನ್ನಿಟ್ಟುಕೊಂಡು ತಮ್ಮ ಆತ್ಮದ ಸ್ವರೂಪವನ್ನೇ ಹಾಳುಮಾಡಿಕೊಳ್ಳುತ್ತಿರುವವರಿಗೆ ನರಕ ಸಿಗುವುದು ಖಂಡಿತ ಎನ್ನುತ್ತಾನೆ.

### ಪದವಿವರಣೆ

**ಅಸುರ್ಯಾಃ** – 'ಅಸುರರ ಸ್ವತ್ತು' ಎಂಬ ಅರ್ಥದ ವ್ಯಾಕರಣನಿಯಮದಂತೆ 'ಯತ್' ಪ್ರತ್ಯಯ ಸೇರಿದೆ. ಅಸುರ್+ಯ=ಅಸುರ್ಯ ಎಂದಾಗಿ, ಅಸುರ ಸ್ವಭಾವದವರಿಗೆ ಮಾತ್ರ ಅನುಭವಿಸಲು ಇರುವ ಎಂದರ್ಥ.

**ನಾಮ** – ಎಂಬುದಕ್ಕೆ ಪ್ರಸಿದ್ಧವಾಗಿರುವುವು ಎಂದರ್ಥ.

**ತೇ** - ಆ ನರಕ ಎಂಬ ಹೆಸರಿನ ಅತಿ ಭಯಂಕರವಾದ.

**ಲೋಕಾಃ** - ಲೋಕಗಳೂ ಇವೆ.

ಮತ್ತೆ ಈಗ ಆ ಲೋಕಗಳಲ್ಲಿರುವ ವಿಶೇಷಗಳನ್ನೇ ತಿಳಿಸುತ್ತಾನೆ:–

**ಅಂಧೇನ, ತಮಸಾ, ವೃತಾಃ** - ಗಾಢವಾದ ಕತ್ತಲೆಯಿಂದ ತುಂಬಿರುವಂತಹವು.

**ತಾನ್** – ಬೆಳಕು ಮತ್ತು ಹೊಸದೃಷ್ಟಿ ಬೀಳಲು ಸ್ವಲ್ಪವೂ ಅವಕಾಶವಿಲ್ಲದ ಅವನ್ನು.

**ತೇ** – ಆ ಪರಮಾತ್ಮನ ಸ್ವರೂಪವನ್ನು ತಿಳಿಯದ ಜನರು.

---

1. ಜೀವಾತ್ಮಗಳಿಗೆ ಅವಿದ್ಯೆ, ಕರ್ಮ, ವಾಸನಾ, ರುಚಿ, ಪ್ರಕೃತಿಸಂಬಂಧ ಎಂಬ ಐದು ವಿಷಯಗಳು ಜನನ–ಮರಣಗಳಿಗೆ ಕಾರಣವಾಗಿವೆ. ಇವು ಮತ್ತೆ ಮತ್ತೆ ಒಂದರಿಂದ ಒಂದು ಆಗುತ್ತಲೇ ಇರುವುದರಿಂದ ಇದನ್ನು ಚಕ್ರದಂತೆ ಬಣ್ಣಿಸಲಾಗಿದೆ. ಇದನ್ನೇ 'ಸಂಸಾರಚಕ್ರ' ಎನ್ನುವರು. ಅವಿದ್ಯೆ – ಆತ್ಮವನ್ನು ಸ್ವತಂತ್ರ ಎಂದೂ ದೇಹವೇ ತಾನೆಂದೂ ಭ್ರಮಿಸಿರುವುದು; ಕರ್ಮ– ವಿವೇಚನೆಯಿಲ್ಲದೆ ತಮ್ಮಿಷ್ಟ ಬಂದಂತೆ ಪುಣ್ಯ-ಪಾಪ ಕೆಲಸಗಳನ್ನು ಮಾಡುವುದು; ವಾಸನಾ – ಒಳ್ಳೆಯ ಮತ್ತು ಕೆಟ್ಟ ಕೆಲಸಗಳಲ್ಲಿ ಅಭ್ಯಾಸ ಬಲದಿಂದ, ಮೈಮರೆತಿರುವಾಗಲೂ ಅಂತಹ ಕೆಲಸಗಳಿಗೆ ಪ್ರಯತ್ನಿಸುವುದು; ರುಚಿ – ಈ ಅಭ್ಯಾಸಬಲದಿಂದ ಆಯಾ ಕೆಲಸಗಳಲ್ಲಿ ಮತ್ತು ಅವುಗಳ ಫಲಿತಾಂಶಗಳಲ್ಲಿ ಚಟವೂ ಹೆಚ್ಚುವುದು; ಪ್ರಕೃತಿಸಂಬಂಧ – ನಮ್ಮ ಚಟಕ್ಕೆ ತಕ್ಕಂತೆ ದೇವರು ಮಾಡಿರುವ ಪ್ರಕೃತಿ ನಿಯಮದಂತೆ ವಿವಿಧವಾದ ಶರೀರಗಳನ್ನು ಪಡೆಯುವುದು.

**ಪ್ರೇತ್ಯ** – ತಮ್ಮ ಶರೀರದಿಂದ ಹೊರಬಿದ್ದು.

**ಅಭಿಗಚ್ಛಂತಿ** – ಎಲ್ಲ ವಿಧದಲ್ಲೂ ಎಡೆಬಿಡದೆ ಪಡೆದು ಅನುಭವಿಸುವರು.

**ಯೇ, ಕೇ, ಚ** – ದೇವಜಾತಿಯವರು, ಮನುಷ್ಯಜಾತಿಯವರು, ಹಾಗೇ ಬ್ರಾಹ್ಮಣರು, ಕ್ಷತ್ರಿಯರು, ಮುಂತಾದ ಯಾರೇ ಆಗಿರಲಿ.

### ಆತ್ಮಘಾತಿಗಳು ಯಾರು ?

**ಆತ್ಮಹನಃ** – ''ಬ್ರಹ್ಮ ಎಂಬುದಿಲ್ಲ ಎಂದೇ ತಿಳಿದುಕೊಂಡಿರುವವನಾದರೆ; ಅಂತಹವನು ಇಲ್ಲದಂತೆಯೇ ಆಗುವನು''[1] ಎಂದು ಉಪನಿಷತ್ತಿನಲ್ಲಿ ತಿಳಿಸಿರುವಂತೆ ಇದ್ದರೂ ಇಲ್ಲದಂತಹ (ಏನೊಂದು ಉಪಯೋಗಕ್ಕೂ ಬಾರದಂತಹ) ಸ್ಥಿತಿಗೆ ತಮ್ಮ ಆತ್ಮವನ್ನೇ ತಂದುಕೊಳ್ಳುವವರು.

ಶರೀರವನ್ನು ನಾಶಮಾಡಿಕೊಳ್ಳುವ ಮೂಲಕ ಅದಕ್ಕೆ ಕಾರಣವಾದ ಸಕಲಪಾಪಗಳನ್ನೂ ಈ ಪದ ಸೂಚಿಸುತ್ತದೆ.

**ಜನಾಃ** – ಹುಟ್ಟುವವರು – ಜನನ ಮರಣಗಳೆಂಬ ಸಂಸಾರಬಂಧ ಉಳ್ಳವರು ಎಂದರ್ಥ.

## ಈಶಾವಾಸ್ಯ ಪ್ರಕಾಶಿಕೆ

### ಸಾರಾರ್ಥ – ಸಂಗತಿ

ಹೀಗೆ ಮಂತ್ರಗಳ ಈ ಒಂದು ಜೋಡಿಯಿಂದ ಚಿತ್ - ಅಚಿತ್ - ಈಶ್ವರ ಎಂಬ ಮೂರು ತತ್ತ್ವಗಳನ್ನೂ ಬ್ರಹ್ಮವಿದ್ಯೆಗೆ ಅಂಗವಾದ ಕರ್ಮದ ಆಚರಣೆಯ ಬಗೆಯನ್ನೂ ಸರಿಯಾಗಿ ತಿಳಿಸಿ ಆಯಿತು.

ಈಗ ಈ ತತ್ತ್ವತ್ರಯಜ್ಞಾನವಿಲ್ಲದೆ ಯಾವುದೋ ಬೇರೆ ರೀತಿಯಲ್ಲಿ ತತ್ತ್ವವನ್ನು ಯಾರು ತಿಳಿದಿರುವರೋ, ಮತ್ತು ಕಾಮ,ಕ್ರೋಧ,ಲೋಭಾದಿಗಳಿಗೆ ಪರವಶರಾಗಿ ಶಾಸ್ತ್ರವಿರುದ್ಧವಾಗಿ ಯಜ್ಞಯಾಗಾದಿಗಳನ್ನು ಯಾರು ಮಾಡುವರೋ, ಶಾಸ್ತ್ರದಲ್ಲಿ ಮಾಡಬಾರದೆಂದು ತಿಳಿಸಿರುವುದನ್ನೂ ಮಾಡುವರೋ, ಇಂತಹ ಆತ್ಮಘಾತಿಗಳಿಗಾಗುವ ಅಧೋಗತಿಯನ್ನು ಆಚಾರ್ಯರು ತಿಳಿಸುತ್ತಿದ್ದಾರೆ.

### ಪದವಿವರಣೆ

**ಅಸುರ್ಯಾಃ** – ಅಸುರರ ಸ್ವಭಾವಕ್ಕೆ ತಕ್ಕಂತೆ ಇರುವ ಲೋಕಗಳು. ಇವನ್ನೇ ಬೃಹದಾರಣ್ಯಕದಲ್ಲೂ ''ಸ್ವಲ್ಪವೂ ಆನಂದವಿಲ್ಲವೆಂದು ಪ್ರಸಿದ್ಧವಾಗಿರುವ ಆ ಲೋಕಗಳು''[2] ಮುಂತಾಗಿ ವರ್ಣಿಸಲಾಗಿದೆ.

---

1. ಅಸನ್ನೇವ ಸ ಭವತಿ; ಅಸದ್ಬ್ರಹ್ಮೇತಿ ವೇದ ಚೇತ್. ತೈ. ಆನ. ಅನು. ೬.

2. ಅನಂದಾ ನಾಮ ತೇ ಲೋಕಾ ಅಂಧೇನ ತಮಸಾ ವೃತಾಃ ।
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಅವಿದ್ವಾಂಸೋಽಬುಧೋ ಜನಾಃ ॥
ಬೃ. ೬. ೧೧.

**ಆತ್ಮಘಾತಿಗಳು ಯಾರು ?**

**ಆತ್ಮಹನಃ** – ಬ್ರಹ್ಮಜ್ಞಾನವಿಲ್ಲದೆ ಕಾಮ್ಯಕರ್ಮಗಳನ್ನೇ ಮಾಡುವವರು. ಎಂಬುದು ಇದರ ಭಾವಾರ್ಥ.

**ಜ್ಞಾನಿಗೆ ಬ್ರಹ್ಮ ಹೊರತು ಎಲ್ಲವೂ ನರಕವೇ**

**(ಭಾ) ನರಕಸಂಜ್ಞಿತಾಃ** – ಭೂಮಿ, ಆಕಾಶ, ಸ್ವರ್ಗ, ರೌರವ ಮುಂತಾದ ಹೆಸರಿಂದ ಪ್ರಸಿದ್ಧವಾದ ನರಕ, ಈ ಎಲ್ಲವೂ ಒಂದು ರೀತಿಯಲ್ಲಿ ನರಕಲೋಕಗಳೇ.

## ಪದಾರ್ಥ ದೀಪಿಕೆ

**ಆತ್ಮಹನಃ** – ಬ್ರಹ್ಮಜ್ಞಾನವಿಲ್ಲದವರು, ಬರಿಯ ಕಾಮ್ಯಕರ್ಮಗಳಲ್ಲಿ ತೊಡಗಿರುವವರು.

**ತಾನ್, ಅಭಿಗಚ್ಛಂತಿ** – "ಅವನು ಇದ್ದರೂ ಇಲ್ಲದಂತೆಯೇ ಆಗುವನು"[1] ಇವೇ ಮುಂತಾದ ವಚನಗಳಲ್ಲಿ ತಿಳಿಸಿರುವಂತೆ 'ಅಸತ್' – ಇಲ್ಲವೇ ಇಲ್ಲ ಎನಿಸಿಕೊಳ್ಳುವರು ಮತ್ತಷ್ಟು ಅಜ್ಞಾನವನ್ನೇ ಪಡೆಯುವರು ಎಂದು ಭಾವಾರ್ಥ.

## ಸುಬೋಧಿನೀ

**ಮಂತ್ರಾರ್ಥ ಸಂಗತಿ**

ಈ ಮಂತ್ರದಲ್ಲಿ 'ಇವೆ' ಎಂಬ ಪದವೊಂದನ್ನು ಸೇರಿಸಿಕೊಳ್ಳಬೇಕು.

ಆಸುರರಿಗೆ ತಕ್ಕ ಕೆಲವು ಲೋಕಗಳಿವೆಯಷ್ಟೆ. ಸತ್ತಮೇಲೆ ಅವರು ಅಲ್ಲಿಗೇ ಹೋಗಿ ಸೇರುವರು. ಅವರು ಯಾರು ಎಂದರೆ ಯಾರು ತಮ್ಮನ್ನೇ ತಾವು ಆಯಾಸಪಡಿಸಿಕೊಳ್ಳುವರೋ ಅವರು. ಬ್ರಹ್ಮಜ್ಞಾನವಿಲ್ಲದವರು ಮತ್ತೆ ಮತ್ತೆ ಈ ಸಂಸಾರವೆಂಬ ಕಾಡಿನಲ್ಲಿ ಹುಟ್ಟಿ ಬೆಳೆದು ಕಷ್ಟಪಡುತ್ತಾ ಆಯಾಸಗೊಳ್ಳುವರಷ್ಟೆ.

**ಜ್ಞಾನಮಾರ್ಗ ತಪ್ಪಿದರೆ ಏನಾದೀತು ?**

ಬ್ರಹ್ಮಜ್ಞಾನವಿಲ್ಲದವರು ನರಕಕ್ಕೆ ಏಕೆ ಹೋಗಬೇಕು ? ಪುಣ್ಯಕರ್ಮಗಳನ್ನು ಮಾಡಿ ಸ್ವರ್ಗಕ್ಕೆ ಹೋಗಲು ಅವಕಾಶವಿಲ್ಲವೆ? ಇದಕ್ಕೆ ಉತ್ತರ – ಸ್ವರ್ಗಕ್ಕೆ ಹೋದವರೂ ಮತ್ತೆ ಇಲ್ಲಿ ಹುಟ್ಟಿಬರುತ್ತಾರಷ್ಟೆ. ಮತ್ತೆ ಜ್ಞಾನ ಮಾರ್ಗದಲ್ಲೂ ಪ್ರಯತ್ನಿಸಲು ಹಾಗೆ ಅವಕಾಶ ಆ ಜನರಿಗಿದೆ. ಇಂತಹ ಸದವಕಾಶದಲ್ಲೂ ತಪ್ಪುದಾರಿ ಹಿಡಿದು ಎಡವಿಬಿದ್ದರೆ ಅಂತಹವರಿಗೆ ಮತ್ತೆ ಸ್ವರ್ಗವೂ ಸಿಗದೆ ನರಕವೇ ಸಿಗುವುದಷ್ಟೆ. ಗಂಗೆ ಆಕಾಶದಲ್ಲಿ ಸಿಹಿಯಾಗಿ ಶುದ್ಧವಾಗಿಯೇ ಇರುವುದು. ಮಣ್ಣಿನಮೇಲೆ ಹರಿವಾಗ ಸ್ವಲ್ಪ ಕದಡಿದ್ದರೂ ಸಿಹಿಯಾಗಿಯೇ ಇರುವುದು. ಶುದ್ಧ ಮಾರ್ಗವಿಲ್ಲದೆ ಕೊನೆಗೆ ಸಮುದ್ರವನ್ನೇ ಸೇರಿದಾಗ ಅದರ ಶುದ್ಧತೆಯಾಗಲಿ ಸಿಹಿಯಾಗಲಿ ಉಳಿದಿರುತ್ತೆಯೆ? ಸಮುದ್ರದಂತೆ ಕದಡಿ ಉಪ್ಪಾಗಿ ಹೋಗುವುದಿಲ್ಲವೆ ? ಈ ರೀತಿಯೇ ಶುದ್ಧಜೀವಾತ್ಮಗಳಿಗೆ ಸರಿಯಾದ ಜ್ಞಾನ ಮಾರ್ಗ ತಪ್ಪಿಹೋದರೆ ನರಕವೇ ಗತಿ ಎಂದು ಭಾವ.

---

1. ಅಸನ್ನೇವ ಸ ಭವತಿ. ತೈ. ಆನ. ಅನು. ೬.

ಇಲ್ಲಿ ನರಕದಂತಹ ಕಷ್ಟಅನುಭವಿಸುವ ನಾಯಿ ಹಂದಿ ಮುಂತಾದ ವಿವಿಧ ಪ್ರಾಣಿಗಳ ರೂಪವನ್ನು ಪಡೆಯುತ್ತಾರೆ ಎಂದೂ ಅರ್ಥ ಮಾಡಬಹುದಾಗಿದೆ. ಇಂತಹ ದೇಹಗಳಲ್ಲಿ ಆತ್ಮಗಳು ಸೇರಿಕೊಂಡಾಗ ಮನುಷ್ಯರು ಪಡೆಯಬಹುದಾದ ಆತ್ಮಜ್ಞಾನ ಅವುಗಳಿಗೆ ಆಗದೆ ಅಜ್ಞಾನದ ಕತ್ತಲೆಯಲ್ಲೇ ಅವು ತೊಳಲಬೇಕಾಗುವುದು. ಹೀಗಾಗಿ ಆತ್ಮಗಳು ತಮ್ಮದೇಹವನ್ನೇ ಆತ್ಮವನ್ನಾಗಿ ತಿಳಿದು ದೇಹಸುಖವೊಂದರಲ್ಲೇ ಲಕ್ಷ್ಯವಿಟ್ಟು ಅದಕ್ಕಾಗಿ ವಿಪರೀತಕ್ಲೇಶಗಳನ್ನು ಅನುಭವಿಸುತ್ತಾ ಆತ್ಮಸುಖವಿಲ್ಲದೆ ಕೊಳೆಯುತ್ತಿರಬೇಕಾಗುವುದು.

# ಶ್ರೀರಂಗಾಚಾರ್ಯರ ವ್ಯಾಖ್ಯಾನ

## ಪದ ವಿವರಣೆ

**ಅಸುರ್ಯಾಃ** – ಇದು ಕೆಲವು ನರಕಲೋಕಗಳ ಹೆಸರು. ಅಸುರರ ಸ್ವಭಾವಕ್ಕೆ ತಕ್ಕದಾಗಿಯೂ, ಅವರಿಗೆ ಓತಕರವೆನಿಸುವಂತೆಯೂ ಇವೆ ಎಂಬ ಕಾರಣದಿಂದ ಇವಕ್ಕೆ ಈ ಹೆಸರು. ಇವುಗಳಿಗೆ 'ಅನಂದಾಃ'[1] ಎಂಬ ಹೆಸರಿರುವುದಾಗಿ ಕಠೋಪನಿಷತ್ತಿನಲ್ಲೂ ಹೇಳಿದೆ.

**ಅಂಧೇನ** – ಕುರುಡಾಗಿಸುವ – ಕಣ್ಣಿಗೆ ಏನೂ ಕಾಣಿಸದಂತೆ ಮಾಡುವ,

**ಅಭಿಗಚ್ಛಂತಿ** – ಅಭಿಮುಖವಾಗಿ ಹೋಗುತ್ತಾರೆ. 'ಅಪಿಗಚ್ಛಂತಿ' ಎಂಬ ಮಾಧ್ಯಂದಿನ ಪಾಠದಲ್ಲೂ ಇದೇ ಅರ್ಥ.

## ಪಾಠಾಂತರಗಳ ಸಮನ್ವಯ

'ಅಪಿ' 'ಅಭಿ' ಮುಂತಾದ 22 ಪದಗಳಿಗೆ ಉಪಸರ್ಗಗಳೆನ್ನುವರು. ಇವುಗಳಲ್ಲಿ ಪ್ರತಿಯೊಂದಕ್ಕೂ ಅನೇಕ ಅರ್ಥಗಳಿವೆ. ವ್ಯಾಕರಣ, ನಿರುಕ್ತ[2], ಸಾಹಿತ್ಯ, ಪ್ರಯೋಗ ಮತ್ತು ಪ್ರಕರಣಗಳಿಂದ ಈ ಅರ್ಥಗಳನ್ನು ತಿಳಿಯಬಹುದು.

ಇಲ್ಲಿ 'ಅಪಿ' 'ಅಭಿ' ಎಂಬ ಎರಡಕ್ಕೂ ಒಂದೇ ಅರ್ಥ ಇಟ್ಟುಕೊಂಡರೆ ಕಾಣ್ವ ಮಾಧ್ಯಂದಿನ ಎರಡು ಪಾಠಗಳಿಗೂ ಸಮಾನಾರ್ಥವನ್ನು ಹೇಳಿ ಸಮನ್ವಯಗೊಳಿಸುವಲ್ಲಿ ಸ್ವಾರಸ್ಯವೂ ಇರುತ್ತದೆ.

## ಮೂರನೆಯ ಮಂತ್ರದ ಮುಖ್ಯಗುರಿ ಏನು ?

ಜೀವಾತ್ಮಗಳೂ ಸಹ ಯಾವಾಗಲೂ ಪರಮಾತ್ಮನ ಅಧೀನ ಎಂಬುದನ್ನು ಮೊದಲ ಮಂತ್ರದಲ್ಲೇ ತಿಳಿಸಿ ಆಯಿತು. ಇದೇ ಜೀವಾತ್ಮಗಳ ಸ್ವರೂಪ. ಇದನ್ನು 'ಶೇಷತ್ವ – ಪಾರತಂತ್ರ್ಯ' ಎಂಬುದಾಗಿ ಬಳಸಲಾಗುತ್ತಿದೆ. ಇದಕ್ಕೆ ತಕ್ಕಂತೆ ನಡೆದುಕೊಳ್ಳುವ ವಿಚಾರವನ್ನು ಎರಡನೆಯ ಮಂತ್ರದಲ್ಲಿ ತಿಳಿಸಿ ಆಯಿತು. ಇದನ್ನು ತಿಳಿದುಕೊಳ್ಳದವರು ಆಧ್ಯಾತ್ಮಿಕ ಮಾರ್ಗದಲ್ಲಿ ಬೇರೆ ಏನು ತಿಳಿದಿದ್ದರೂ, ತಿಳಿಯದೆ ಇದ್ದರೂ ಸಹ ಅನರ್ಥಗಳಿಗೆ ಸಿಲುಕಿಕೊಳ್ಳುವರು. ಆದುದರಿಂದ ವಿವೇಕದಿಂದ ಜೀವಾತ್ಮಸ್ವರೂಪವನ್ನರಿತು ಅದರಂತೆ ಶೀಘ್ರವಾಗಿ ಆಧ್ಯಾತ್ಮಿಕಮಾರ್ಗದಲ್ಲಿ ಪ್ರಯತ್ನಿಸುವುದು ಒಳ್ಳೆಯದು. ಈ ವಿಷಯವನ್ನು ತಿಳಿಸುವುದೇ ಈಮಂತ್ರದ ಮುಖ್ಯವಾದ ಗುರಿ. ಅದಕ್ಕಾಗಿ ಈ ಗುರಿಯಿಲ್ಲದವರಿಗೆ ಆಗುವ ಅನರ್ಥವನ್ನು ಇಲ್ಲಿ ತಿಳಿಸಲಾಗಿದೆ.

---

1. ಅನಂದಾ ನಾಮ ತೇ ಲೋಕಾಃ. ಕಠ. ೧. ೩.
2. ವೈದಿಕ ಸಾಹಿತ್ಯದಲ್ಲಿರುವ ಪದಗಳಿಗೆ ಅರ್ಥವಿವರಿಸುವ ನಿಘಂಟು.

## ಇತರ ಗ್ರಂಥಗಳ ಸಂವಾದ

ಕೇನೋಪನಿಷತ್ತಿನಲ್ಲೂ ಇದೇ ಅರ್ಥವನ್ನು "ಇಲ್ಲಿ ಹೀಗೆ ಆತ್ಮ-ಪರಮಾತ್ಮ ವಿಚಾರವನ್ನು ತಿಳಿವತೆ ಖಂಡಿತವಾಗಿಯೂ ಸರಿಯಾದ ಅಸ್ತಿತ್ವ ಪಡೆಯಬಹುದು. ಹೀಗೆ ತಿಳಿಯದ ಪಕ್ಷಕ್ಕೆ ಬಹಳದೊಡ್ಡ ಅನರ್ಥವಾಗುವುದಷ್ಟೆ[1]." ಎಂದು ತಿಳಿಸಲಾಗಿದೆ.

"ಜೀವಾತ್ಮದ ಸ್ವರೂಪವು ಪರಾಧೀನತೆಯೇ. ಅದನ್ನು ಸ್ವತಂತ್ರತೆಯೆಂದು ತಿಳಿದುಕೊಂಡರೆ ಅದುದೊಡ್ಡ ತಪ್ಪಾದೀತು[2]" ಎಂದು ಸ್ಮೃತಿ – ಇತಿಹಾಸ ಗ್ರಂಥಗಳೂ ನಮ್ಮನ್ನು ಎಚ್ಚರಿಸುತ್ತವೆ.

---

1. ಇಹಚೇದವೇದೀದಥ ಸತ್ಯಮಸ್ತಿ, ನಚೇದಿಹಾವೇದೀನ್ಮಹತೀ ವಿನಷ್ಟಿಃ. ಕೇನ. ೨. ೫.

2. ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ ।
   ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥ ಭಾ. ಉದ್ಯೋ. ೪೨.೩೭.

  

# ಈಶಾವಾಸ್ಯೋಪನಿಷತ್

## ಮಂತ್ರ ನಾಲ್ಕು

ಅನೇಜದೇಕಂ ಮನಸೋ ಜವೀಯೋ
ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್ ।
ತದ್ಧಾವತೋಽನ್ಯಾನತ್ಯೇತಿ ತಿಷ್ಠತ್
ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥೪॥

### ಅನ್ವಯಾನುಸಾರ ಪ್ರತಿಪದಾರ್ಥ

ಏಕಂ — ಪ್ರಧಾನವಾದ ಒಂದು ವಸ್ತು; ಅನೇಜತ್ — ಸ್ವಲ್ಪವೂ ಚಲಿಸದೇ ಇರುವುದು. (ಆದರೂ); ಮನಸಃ — ಮನಸ್ಸಿಗಿಂತಲೂ; ಜವೀಯಃ — ವೇಗವಾಗಿ ಚಲಿಸುವಂತಹುದು; ಪೂರ್ವಂ — ಅನಾದಿ ಕಾಲದಿಂದಲೂ; ಅರ್ಷತ್ — ತಮ್ಮನ್ನು ಹೊಂದಿಕೊಂಡೇ ಇರುವ; ಏನತ್ — ಹಿಂದೆ 'ಈಶ' ಎಂದು ತಿಳಿಸಿರುವ ಈ ಪರಮಾತ್ಮ ವಸ್ತುವನ್ನು; ದೇವಾಃ — ದೇವತೆಗಳೂ ಸಹ; ನ, ಆಪ್ನುವನ್ — ಹೊಂದಲಾರದೆ ಇರುವರು; ತತ್ — ಅಂತಹ ಆ ವಸ್ತುವು; ತಿಷ್ಠತ್ — ಒಂದೆಡೆ ಸ್ಥಿರವಾಗಿ ನಿಂತಿರುವುದಾದರೂ; ಧಾವತಃ - ವೇಗವಾಗಿ ಓಡುತ್ತಿರುವ; ಅನ್ಯಾನ್ - ಇತರ ಎಲ್ಲ ವಸ್ತುಗಳನ್ನೂ; ಅತ್ಯೇತಿ - ಮೀರಿ ನಡೆದಿರುತ್ತದೆ; ತಸ್ಮಿನ್ - ಆ ಪರಮಾತ್ಮನ ಆಸರೆಯಲ್ಲಿಯೇ; ಮಾತರಿಶ್ವಾ - ಆಕಾಶದಲ್ಲೆಲ್ಲ ವ್ಯಾಪಿಸುವ ಈ ಗಾಳಿಯೂ; ಅಪಃ - ಸಮಸ್ತ ಜೀವರಾಶಿಗಳಿಗೆ ಮೂಲವಾದ ನೀರು ಮುಂತಾದ ಎಲ್ಲ ವಸ್ತುವನ್ನೂ; ದಧಾತಿ - ವಹಿಸಿಕೊಂಡಿದೆ.

### ಛಾಯಾಪದ್ಯ

ಅಲುಗದೊಂದಿದ ಮನಕು ವೇಗಿಯನಡೆದು[1] ಮುಂ ಸುರರಡೆಯರೈ!
ಓಡುವವ್ಯರದಿದ್ದುರ್ ಮೀರಿದೆ ಅಲ್ಲಿಹಾನಿಲ ನೀರಿಡುಂ.

## ತಾತ್ಪರ್ಯಾರ್ಥ

### ಮೂರು ನಾಲ್ಕನೆಯ ಮಂತ್ರಗಳ ಸಂಗತಿ

ಮೂರನೆಯಮಂತ್ರವು ಆತ್ಮಜ್ಞಾನರಹಿತರೂ ಅವಿವೇಕಿಗಳೂ ಭೋಗವಿಲಾಸಿಗಳೂ ಆದ ಜೀವರು, ಅತಿ ಕಠಿಣವೂ ಭಯಂಕರವೂ ಆದ ನರಕವನ್ನು ಅನುಭವಿಸುವರೆಂದು ಹೇಳಿ, ಆತ್ಮಜ್ಞಾನದ ಸಂಪಾದನೆಗೂ ವೈರಾಗ್ಯದ[2] ಕಡೆಗೂ ಅವರು ಆಸಕ್ತರಾಗುವಂತೆ ಮಾಡಿದೆ.

ಈಗ ಸಕಲಜೀವರಾಶಿಗಳಿಗಿಂತಲೂ ಭಿನ್ನನೂ ಸಕಲೈಶ್ವರ್ಯಪರಿಪೂರ್ಣನೂ ಆದ ಪರಮಾತ್ಮನಲ್ಲಿ ಪರಸ್ಪರ ವಿರುದ್ಧವಾದವುಗಳಂತೆ ತೋರುವ ಧರ್ಮಗಳನ್ನು[3] ಪ್ರಕಾಶಪಡಿಸಿ, ಆತನು ಅನಂತವೂ ಆಶ್ಚರ್ಯಕರವೂ ಆದ ಗುಣಗಳಿಂದ ಕೂಡಿದ್ದಾನೆ ಎಂದು 'ಅನೇಜತ್' ಎಂಬ ಮಂತ್ರ ಪ್ರಕಾಶಪಡಿಸುತ್ತದೆ.

### ಪರಮಾತ್ಮನ ವಿಚಿತ್ರಶಕ್ತಿ

ಪರಮಾತ್ಮನು ಸರ್ವವ್ಯಾಪಕನಾದುದರಿಂದ ಚಲಿಸದೇ ಇದ್ದಲ್ಲಿಯೇ ಇದ್ದಾನೆ. ಅತಿವೇಗವಾಗಿ ಚಲಿಸುವ ಮನಸ್ಸಿಗೂ ಸಿಲುಕದ ದೇಶದಲ್ಲೂ ಇರುವುದರಿಂದ ಈತನು ವೇಗಶಾಲಿಯು. ಪರಮಾತ್ಮನಂತೆಯೇ ನಿತ್ಯಸೂರಿ

---

1. ಅಡೆಯುವುದೆಂದರೆ ಪಡೆಯುವುದು. 2. ಬ್ರಹ್ಮವಲ್ಲದ ವಸ್ತುಗಳಲ್ಲಿ ಆಸೆಯಿಲ್ಲದಿರುವುದು. 3. ಸ್ವಭಾವಗಳನ್ನು.

ಗಳೂ,[1] ಮುಕ್ತರೂ ಇದ್ದಾರೆ. ಆದರೂ ಅವರು ಪರಮಾತ್ಮನ ಅಧೀನರು, ಅಸ್ವತಂತ್ರರು. ಪರಮಾತ್ಮನೊಬ್ಬನೇ ಸ್ವತಂತ್ರನು. ತನಗೆ ಅಧೀನರಲ್ಲದ ಬೇರೊಬ್ಬರು ಇಲ್ಲದಿರುವುದರಿಂದಲೇ ಈತನನ್ನು ಅದ್ವಿತೀಯನೆಂದೂ, ಏಕೈಕನೆಂದೂ ಕರೆಯುತ್ತಾರೆ.

ನೆಲದಲ್ಲಿ ಹುದುಗಿರುವ ನಿಧಿಯ ಮೇಲೆ ಮೇಲೆ ಸಂಚರಿಸುತ್ತಿದ್ದರೂ ಜನರು ಅದನ್ನು ಅರಿಯುವುದಿಲ್ಲ. ಅಂತೆಯೇ ಕರ್ಮಬಂಧಿತರಾದ ಸಂಕುಚಿತ ಜ್ಞಾನವುಳ್ಳ ಬ್ರಹ್ಮ-ರುದ್ರಾದಿದೇವತೆಗಳೂ ತಮ್ಮತಮ್ಮ ಹೃದಯಕಮಲದಲ್ಲಿರುವ ಪರಮಾತ್ಮನನ್ನು ಸಂಧಿಸಲಿಲ್ಲ. ನಿಂತಿರುವ ಈತನು ವೇಗವಾಗಿ ಚಲಿಸುವ ವಾಯು – ಗರುಡರನ್ನೂ ಮೀರಿ ಹೋಗುತ್ತಾನೆ. ಈ ಪರಮಾತ್ಮನು ವೈಕುಂಠ ಕ್ಷೀರಸಾಗರಗಳಲ್ಲಿ[2] ನೆಲೆಯಾಗಿ ನಿಂತಿರುವನು. ಈತನು, ಪರಮಭಕ್ತಾಗ್ರೇಸರನಾದ ಪ್ರಹ್ಲಾದನು[3] ಕರೆದೊಡನೆ ಕಂಬದಲ್ಲಿ ಗೋಚರಿಸಿದನು. ತನ್ನನ್ನೇ ಮರೆಹೊಕ್ಕ ಗಜೇಂದ್ರ[4]ನನ್ನು ರಕ್ಷಿಸಲು ಕರೆದೊಡನೆ ಅವನ ಬಳಿಗೆ ಬಂದನು. ಇವನ ವೇಗವು ಊಹೆಗೂ ನಿಲುಕಲಾರದು. ವ್ಯಾಸರ್[5] ಪರಶುರಾಮರು[6] ಮನೋವೇಗದಿಂದ ಚಲಿಸುವರೆಂಬ ಪ್ರಸಿದ್ಧಿಯನ್ನು ಪಡೆದಿರುವರು. ಅವರಿಗಿಂತಲೂ ವೇಗವಾಗಿ ಸಂಚರಿಸುವ ಬ್ರಹ್ಮ–ರುದ್ರಾದಿದೇವತೆಗಳೂ ಓಡದಿರುವ ಪರಮಾತ್ಮನನ್ನು ಓಡಿ ಓಡಿಯೂ ಸಂಧಿಸಲಿಲ್ಲ. ಪರಮಾತ್ಮನಲ್ಲಿರುವ ವಾಯುವು ಜಗತ್ತಿಗೆ ಕಾರಣವಾದ ನೀರನ್ನು ಆತನ ಶಕ್ತಿಯಿಂದಲೇ ಧರಿಸಿದೆ. ಗ್ರಹ – ನಕ್ಷತ್ರ ಮೇಘಾದಿಗಳನ್ನು ಧರಿಸಲು ಯೋಗ್ಯವಾದ ಶರೀರವಿಲ್ಲದಿದ್ದರೂ ಈ ವಾಸುದೇವನ ಆಸರೆಯಲ್ಲಿರುವ ವಾಯುವು ಗ್ರಹಾದಿಗಳನ್ನು ಎತ್ತಿಹಿಡಿದಿದೆ. ಹೀಗೆ ವಿಚಿತ್ರವಾದ ಶಕ್ತಿ[7]ಯುಳ್ಳವನು ಪರಮಾತ್ಮ. ಈತನ ವ್ಯಾಪಕತೆಯನ್ನು ತಿಳಿಸುವ ಪೌರಾಣಿಕರು,[8] ಅತಿವೇಗವಾಗಿ ಹಾರುವ ಗರುಡನ[9] ಹಾಗೆ ಲಕ್ಷ ಲಕ್ಷ ವರ್ಷ ಹಾರಿದರೂನೂ ಈತನ ತುದಿಯನ್ನು ಯಾರೂ ಕಾಣಲಾರರೆಂದು ವರ್ಣಿಸುತ್ತಾರೆ.

ಹೀಗೆ ಈ ಮಂತ್ರವು ಜೀವರ ಅನಂತತೆಯನ್ನೂ, ಪರಮಾತ್ಮನ ಅನಂತಮಹಿಮೆಯನ್ನೂ ತಿಳಿಸುತ್ತದೆ.

# ವೇದಾಂತಾಚಾರ್ಯಭಾಷ್ಯ

## ತಾತ್ಪರ್ಯಾರ್ಥ

ಎಲ್ಲದಕ್ಕೂ ಆಶ್ರಯ ಎಂದು ಹಿಂದೆ ಆರಂಭಿಸಿ ತಿಳಿಸಿದಂತಹ ಪರಮಾತ್ಮತತ್ತ್ವಕ್ಕೆ ಆಶ್ಚರ್ಯಕರವಾದ ಶಕ್ತಿ ಇದೆ ಎಂಬುದನ್ನು, 'ಇದೇನು! ಒಂದಕ್ಕೊಂದು ವಿರುದ್ಧವಾದ ಸ್ವಭಾವಗಳನ್ನು ಪಡೆದಿದೆಯಲ್ಲ!' ಎಂದು ಶಂಕಿಸುವ ಮಾತುಗಳಿಂದ ಹೊಮ್ಮಿಬರುವಂತೆ ಸ್ಪಷ್ಟಪಡಿಸುತ್ತಾನೆ, 'ಅನೇಜದೇಕಂ ಮನಸೋ ಜವೀಯಃ' ಎಂದು.

---

1. ನಿತ್ಯವಿಭೂತಿಯೆಂಬ ಶಾಶ್ವತ ದಿವ್ಯಲೋಕದಲ್ಲಿರುವ ಎಂದೆಂದಿಗೂ ಸಂಸಾರಸಂಬಂಧವಿಲ್ಲದ ಜೀವರು.
2. ಪ್ರಕೃತಿಮಂಡಲದ ಕಾರ್ಯನಿರ್ವಹಣೆಗಾಗಿ ಇರುವ ವಿಷ್ಣುವಿನ ಸ್ಥಾನಗಳಲ್ಲಿ ಒಂದು.
3. ಹಿರಣ್ಯಕಶಿಪುವಿನ ಮಗ, ಜನ್ಮತಃ ಪರಮಾತ್ಮನ ಭಕ್ತ.
4. ಅಗಸ್ತ್ಯರಿಂದ ಶಾಪಗ್ರಸ್ತನಾದ ಇಂದ್ರದ್ಯುಮ್ನನು ಆನೆಯಾಗಿ ಹುಟ್ಟಿದನು. ಅವನೇ ಗಜೇಂದ್ರ. ಪರಮಾತ್ಮನ ಭಕ್ತ.
5. ಪರಾಶರರಿಗೆ ಸತ್ಯವತಿಯಲ್ಲಿ ಜನಿಸಿದವರು. ವೇದಗಳ ವಿಭಾಗವನ್ನು ಮಾಡಿರುವವರು. ಬ್ರಹ್ಮಸೂತ್ರ ಮತ್ತು ಮಹಾಭಾರತದ ಕರ್ತೃವೂ ಆಗಿದ್ದಾರೆ. ಇವರಿಗೆ ಕೃಷ್ಣದ್ವೈಪಾಯನರೆಂದೂ, ಬಾದರಾಯಣರೆಂದೂ ಹೆಸರು.
6. ದಶಾವತಾರಗಳಲ್ಲಿ ಪ್ರಸಿದ್ಧವಾದ 6ನೆಯ ಅವತಾರ ವಿಶೇಷ. ಪರಮಾತ್ಮನ ಆವೇಶಾವತಾರ ಎಂದು ಹೇಳುತ್ತಾರೆ.
7. ಊಹಿಸಲು ಅಸಾಧ್ಯವಾದ ಶಕ್ತಿ. 8. ಸೂತ-ವೈಶಂಪಾಯನ ಮುಂತಾದವರು.
9. ಸಮಸ್ತ ವೇದಗಳಿಗೂ ಅಧಿದೇವತೆ, ಪರಮಾತ್ಮನ ವಾಹನ ಮತ್ತು ಧ್ವಜ.

## ಪದವಿವರಣೆ

**ಅನೇಜತ್** - ಚಲಿಸದೆಯೇ ಇರುವ.

ಏಕಂ - ಮುಖ್ಯವಾದ, ಅಥವಾ ತನಗೆ ಅಧೀನವಲ್ಲದ ಹಾಗೂ ತನಗೆ ಸಮಾನವಾದ ಎರಡನೆಯ ವಸ್ತುವಿಲ್ಲದ.

ಮನಸಃ, ಜವೀಯಃ - ಅತಿವೇಗವಾಗಿ ಚಲಿಸುವ ಮನಸ್ಸಿಗಿಂತಲೂ ಮೀರಿದ ವೇಗವುಳ್ಳ.

## ಪರಮಾತ್ಮನಿಗೆ ಚಲನೆ ಉಂಟೆ?

ಅಂದಮಾಗೆ ಚಲಿಸದೆಯೇ ಇರುವುದೂ, ಬಹಳವೇಗವಾಗಿ ಚಲಿಸುವುದೂ ಪರಸ್ಪರ ಹೇಗೆ ಹೊಂದಿಕೆಯಾಗು ವುದು? ಎಂದರೆ, ಆ ಪದಗಳ ಭಾವಾರ್ಥ ತಿಳಿದರೆ ಚೆನ್ನಾಗಿಯೇ ಹೊಂದಿಕೆಯಾಗುವುದು.

ಎಲ್ಲವನ್ನೂ ಅದು ತಾನೇ ತಾನಾಗಿ ಯಾವಾಗಲೂ ವ್ಯಾಪಿಸಿರುವುದರಿಂದ ಚಲಿಸದು. ಮನಸ್ಸು ಸಂಚರಿಸ ಬಹುದಾದಂತಹ ಜಾಗಗಳನ್ನು ಮೀರಿ ಅಲ್ಲೆಲ್ಲ ಇರುವುದರಿಂದ ಅದಕ್ಕೆ ಮನಸ್ಸಿಗಿಂತ ವೇಗವಿದೆ ಎಂದು ಆರೋಪ ಮಾಡಬಹುದಾಗಿದೆ. ಹೀಗೆಯೇ ಮುಂದೆ ಬರುವ ಮಾತುಗಳಿಗೂ ಹೊಂದಾಣಿಕೆಯನ್ನು ಯೋಜಿಸಿಕೊಳ್ಳಬಹುದು.

## ಪರಮಾತ್ಮನನ್ನು ಪಡೆಯಬಹುದೇ?

**ನ, ಏನತ್, ದೇವಾಃ, ಆಪ್ನುವನ್, ಪೂರ್ವಂ, ಅರ್ಷತ್**– ಮೊದಲೇ ಎಲ್ಲವನ್ನೂ ವ್ಯಾಪಿಸಿ ಪಡೆದುಕೊಂಡಿರುವ ಇದನ್ನು ದೇವತೆಗಳಾದ ಚತುರ್ಮುಖ ಮುಂತಾದವರೂ ಪಡೆಯಲಿಲ್ಲ; ಈವರೆಗೂ ಪಡೆಯಲಾಗಿಲ್ಲ.

ತಮ್ಮ ಕರ್ಮಗಳಿಂದ, ತಮ್ಮ ತಿಳುವಳಿಕೆಗೆ ಅಡ್ಡಿಮಾಡಿಕೊಂಡಿರುವ ಜೀವಾತ್ಮರೆಲ್ಲರೂ, ಎಲ್ಲೆಲ್ಲೂ ಇದ್ದು ಎಲ್ಲ ಸಮಯದಲ್ಲೂ ತಮ್ಮೊಡನೆಯೇ ಇರುತ್ತಿರುವ ಇದನ್ನು ಬ್ರಹ್ಮೋಪಾಸನೆ ಪೂರ್ಣವಾಗುವ ಮೊದಲು ತಮ್ಮದೇ ಬುದ್ಧಿವಂತಿಕೆಯಿಂದಲೂ ತಿಳಿಯಲಾರರು ಹಾಗೂ ಪಡೆಯಲಾರರು ಎಂಬುದು ಇದರ ಭಾವಾರ್ಥ ವಾದುದರಿಂದ; ಪಡೆದಿರುವುದಕ್ಕೂ ಪಡೆಯಲಾಗದುದಕ್ಕೂ ಏನೂ ವಿರೋಧವಿಲ್ಲ.

## ಎಲ್ಲೆಲ್ಲೂ ಇರುವ ಪರಮಾತ್ಮ ಏಕೆ ಎಲ್ಲರಿಗೂ ತಿಳಿಯುವುದಿಲ್ಲ?

ಹೀಗೆಯೇ ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿದೆ– "ಚಿನ್ನದ ನಿಧಿ ಇರುವಜಾಗ ತಿಳಿಯದವರು ಅದರ ಮೇಲೆ ಮೇಲೆ ಓಡಾಡುತ್ತಿದ್ದರೂ ಹೇಗೆ ಅದನ್ನು ಪಡೆಯಲಾರರೋ; ಹಾಗೆಯೇ ಎಲ್ಲ ಜನರೂ ಪ್ರತಿದಿನ ಗಾಢನಿದ್ರೆ ಯಲ್ಲಿ ಪರಮಾತ್ಮನೊಡನೆ ನಿರತರಾಗಿದ್ದೂ ಈ ಪರಮಾತ್ಮತತ್ತ್ವವನ್ನು ತಿಳಿದು ಪಡೆಯುತ್ತಿಲ್ಲ. ಅವರವರ ಕರ್ಮಗಳು ಅವರನ್ನು ಆವರಿಸಿಕೊಂಡಿರುವುದೇ ಇದಕ್ಕೆ ಕಾರಣ"[1] ಎಂದು.

---

1. ತದ್ಯಥಾ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರಂತೋ ನ ವಿಂದೇಯುರೇವಮೇವೇಮಾಸ್ಸರ್ವಾಃ ಪ್ರಜಾ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದನ್ತ್ಯನೃತೇನ ಹಿ ಪ್ರತ್ಯೂಢಾಃ. ಛಾಂ. ೮. ೩. ೨.

### ಪರಮಾತ್ಮ ಎಲ್ಲದರ ವೇಗವನ್ನೂ ಮೀರಿಸಿದೆ

**ತತ್, ಧಾವತಃ, ಅನ್ಯಾನ್, ಅತ್ಯೇತಿ, ತಿಷ್ಠತ್** – "ಯಾವನು ಮಣ್ಣಿನೊಳಗೂ ಇರುತ್ತಾ"[1] "ಯಾವನು ಜೀವಾತ್ಮರೊಳಗೂ ಇರುತ್ತಾ"[2] ಇವೇ ಮುಂತಾದ ಸಾಲಾಗಿರುವ ವಚನಗಳಿಂದ ಅದು ಎಲ್ಲೆಡೆ ಸ್ಥಿರವಾಗಿ ಇರುತ್ತದೆ. ವೇಗವಾಗಿ ಚಲಿಸುವ ಗರುಡಪಕ್ಷಿ ಮುಂತಾದವನ್ನೂ ಮೀರಿಸುತ್ತದೆ. ವೇಗವಿರುವ ವಸ್ತುಗಳು ಎಷ್ಟೆಷ್ಟು ವೇಗವಾಗಿ ಮುಂದುವರೆದರೂ, ಅಷ್ಟಕ್ಕೂ ಮುಂದಾಗಿಯೇ ಇದು ಇರುತ್ತದೆ ಎಂದರ್ಥ.

ಹಾಗೆಯೇ ಹೇಳಿಯೂ ಇದೆ – "ಮನಸ್ಸಿನಷ್ಟು ವೇಗವುಳ್ಳವನೇ ಇರಬಹುದು; ಅಂತಹವನು ಹತ್ತು ಲಕ್ಷ ವರ್ಷಗಳಷ್ಟುಕಾಲ ಗರುಡನಂತೆ ಮುಂದೆ ಮುಂದೆ ಹಾರುತ್ತಾ ಸಾಗಿದರೂ, ಜಗತ್ತಿಗೆ ಕಾರಣವಾದ ಪರಮಾತ್ಮ ತತ್ವದ ಒಂದು ಅಂಚೂ ಅವನಿಗೆ ಸಿಗಲಾರದು"[3] ಎಂದು.

ಎಲ್ಲೋ ಒಂದೆಡೆಮಾತ್ರ ಇರುವವಸ್ತುಗಳು ವೇಗವಾಗಿ ಚಲಿಸುತ್ತಿರುವ ವಸ್ತುಗಳನ್ನು ಮೀರಿಸಿ ಇರುವುದು ಸಾಧ್ಯವಿಲ್ಲ, ಅದು ಪರಮಾತ್ಮನಿಗೆ ಮಾತ್ರ ಸಾಧ್ಯ, ಎನ್ನುವುದೇ ಇಲ್ಲಿ ಆಶ್ಚರ್ಯ.

### ಎಲ್ಲದಕ್ಕೂ ಪರಮಾತ್ಮನೇ ಆಧಾರ

ಮತ್ತೊಂದು ಆಶ್ಚರ್ಯವನ್ನು ತಿಳಿಸುತ್ತಾನೆ. "ತಸ್ಮಿನ್ನಪೋ ಮಾತರಿಶ್ವಾ ದಧಾತಿ" ಎಂದು. ಅವನಲ್ಲಿಯೇ ಇರುವ ಮತ್ತು ಘರ್ಷಣೆಯಾಗದಿರುವುದಕ್ಕೆ ಅನುಕೂಲವಾಗಿ ಕಠಿಣತೆ ಇಲ್ಲದಿರುವ ಗಾಳಿಯು ನೀರೆಲ್ಲವನ್ನೂ ಹೊತ್ತುಕೊಂಡಿದೆ.

ಅಂದರೆ ಎಲ್ಲಕ್ಕೂ ಆಸರೆಯಾಗಿರುವ ಮತ್ತು ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡು ಆಳುವ ಪರಮಾತ್ಮನಿಂದಲೇ ಹಿಡಿದಿಡಲ್ಪಟ್ಟಿರುವ ಆ ಗಾಳಿಯು ಅವನ ಸಂಕಲ್ಪದಿಂದಲೇ ನೀರು, ಮೋಡ, ನಕ್ಷತ್ರ, ಗ್ರಹ, ತಾರೆಗಳು ಮುಂತಾದವೆಲ್ಲವನ್ನೂ ಹೊತ್ತಿದೆ ಎಂದು ಹೇಳಿದಂತಾಯಿತು.

ಸ್ಮೃತಿ ಗ್ರಂಥಗಳಲ್ಲೂ ಇದನ್ನು ನೆನಪಿಗೆ ತರಲಾಗಿದೆ. "ದ್ಯುಲೋಕವೂ, ಚಂದ್ರ, ಸೂರ್ಯ, ನಕ್ಷತ್ರಸಹಿತವಾದ ಆಕಾಶವೂ, ದಿಕ್ಕುಗಳೂ, ಭೂಮಿಯೂ, ಮಹಾಸಮುದ್ರವೂ, ಮಹಾತ್ಮನಾದ ಆ ವಾಸುದೇವನ ವೀರ್ಯ ಬಲದಿಂದ ನಿಂತಿವೆ"[4] ಎಂದು.

## ಈಶಾವಾಸ್ಯ ಪ್ರಕಾಶಿಕೆ

### ಪರಮಾತ್ಮ ಏಕೈಕ ಹೇಗೆ?

**ಏಕಂ** – ಶಾಸ್ತ್ರಜ್ಞರಾದ ಪಂಡಿತರಿಗೆ ತಮ್ಮ ಸ್ವತ್ತಿನಂತೆ ಅಧೀನವಾಗಿರುವ ಅಥವಾ ಹಿರಿಮೆಯಲ್ಲಿ ತನಗೆ ಸಮ ಅಥವಾ ಅಧಿಕವಾದ ಬೇರೊಂದೂ ಇಲ್ಲದಂತಹ ಎಂದು ಅಭಿಪ್ರಾಯ.

---

1. ಯಃ ಪೃಥಿವ್ಯಾಂ ತಿಷ್ಠನ್. ಬೃ. ೫. ೭. ೩.   2. ಯಃ ಆತ್ಮನಿ ತಿಷ್ಠನ್. ಬೃ. ಮಾಧ್ಯ. ೩, ೭. ೩೦.

3. ವರ್ಷಾಯುತಶತೇನಾಪಿ ಪಕ್ಷಿರಾಡಿವ ಸಂಪತನ್।
ನೈವಾನ್ತಂ ಕಾರಣಸ್ಯೇಯಾದ್ಯದ್ಯಪಿ ಸ್ಯಾನ್ಮನೋಜವಃ॥ ಅಹಿರ್ಬು. ಸಂ. ೨.೪೩.

4. ದ್ಯೌಸ್ಸಚಂದ್ರಾರ್ಕನಕ್ಷತ್ರಂ ಖಂ ದಿಶೋ ಭೂರ್ಮಹೋದಧಿಃ ।
ವಾಸುದೇವಸ್ಯ ವೀರ್ಯೇಣ ವಿಧೃತಾನಿ ಮಹಾತ್ಮನಃ॥ ಭಾ. ಅನು. ೧೪೯.

ಪರಮಾತ್ಮನಿಗೆ ಅತ್ಯಂತ ಸಮಾನತೆಯನ್ನು ಪಡೆದ ಮುಕ್ತ ಜನರೂ ಸಹ ಪರಮಾತ್ಮನಿಗೆ ಅಧೀನರೇ ಎಂಬುದು ಎರಡನೆಯದರ ತಾತ್ಪರ್ಯ. ಹೀಗೆ ಶಾಸ್ತ್ರ ತಿಳಿದವರಿಗೆ ಈ ಪರಮಾತ್ಮ ಒಂದೇ ಮುಖ್ಯಗುರಿ ಎಂದು ಮೊದಲನೆಯದರ ತಾತ್ಪರ್ಯ.

### ಪದ ವಿವರಣೆ

(ಭಾ) **ವಿದ್ಯಾಧಿಗಮ** – ಆಚಾರ್ಯೋಪದೇಶ.

**ಮಾತರಿಶ್ವಾ** – ಯಾವುದನ್ನಾದರೂ ಹೊರಬೇಕಾದರೆ ಹೊರುವವರಿಗೆ ಇರಬೇಕಾದ ಕಾಠಿಣ್ಯ ಇಲ್ಲದ ತೆಳ್ಳಗಿರುವ ಗಾಳಿ.

### ಪರಮಾತ್ಮನೇ ಜಗತ್ತಿಗೆ ಆಧಾರ

ಇಲ್ಲಿ ಪರಮಾತ್ಮನ ಬಗ್ಗೆ "ಇವನೇ ಎಲ್ಲವನ್ನೂ ಬಿಗಿಹಿಡಿದಿರುವ ಸೇತುವೆ. ಈ ಲೋಕಗಳು ಶಿಥಿಲವಾಗದೆ ಇರುವಂತೆ"[1] "ಈ ಅಕ್ಷರ ಎಂಬ ಹೆಸರಿನ ಪರಮಾತ್ಮನ ಆಜ್ಞೆಯಿಂದಲೇ ಈ ಸೂರ್ಯಚಂದ್ರರೂ (ಆಕಾಶದಲ್ಲಿ) ನೆಲೆಯಾಗಿ ಇದ್ದಾರೆ"[2] ಇವೇ ಮುಂತಾದ ಉಪನಿಷತ್ ವಚನಗಳನ್ನು ಗಮನಿಸಬಹುದು.

## ಪದಾರ್ಥ ದೀಪಿಕೆ

**ಮಾತರಿಶ್ವಾ** – ಯಾವುದು, ಮಾತರಿ – ಆಕಾಶದಲ್ಲಿ, ಶ್ವಯತಿ – ಸಂಚರಿಸುತ್ತಲೇ ಇದೆಯೋ, ಅದು – ಮಾತರಿಶ್ವಾ - ಗಾಳಿ.[3]

## ಸುಬೋಧಿನೀ

### ಪದ ವಿವರಣೆ

ಈ ಮಂತ್ರದಲ್ಲಿ ಪರಮಾತ್ಮ ಇತರ ವಸ್ತುಗಳಿಗಿಂತ ಬೇರೆ ರೀತಿಯದು ಎಂದು ತಿಳಿಸಲಾಗುವುದು. ಇದು ಚಲಿಸದೆಯೇ ಮನಸ್ಸಿಗಿಂತ ವೇಗವಾದುದು. ಈ ಕಾರಣದಿಂದಲೇ ಇದು ಒಂಟಿ ಅಂದರೆ ಇಂತಹ ಮತ್ತೊಂದು ಇಲ್ಲವಷ್ಟೆ! ಮೊದಲೇ ಎಲ್ಲೆಡೆ ಇರುತ್ತಿರುವ ಇವನನ್ನು ದೇವತೆಗಳೂ ಪಡೆಯಲಾರದೆ ಹೋದರು. ಅಂದರೆ ಸರ್ವದಾ ಪಡೆದಿರುವುದನ್ನೇ ಹೋಗಿ ಪಡೆಯುವುದು ಹೇಗೆ ಸಾಧ್ಯ? ಅದು ನಿಂತಿರುವಂತೆಯೇ ಓಡುತ್ತಿರುವ ಇತರ ಪದಾರ್ಥಗಳೆಲ್ಲವನ್ನೂ ಮೀರಿಸಿ ಮುಂದುವರೆದಿರುತ್ತದೆ. ಅಂದರೆ ಎಲ್ಲೆಡೆ ಇರುವ ವಸ್ತುವಿಗೆ ಓಡಿ ಹೋಗಿ ಒಂದೆಡೆ ಸೇರುವ ಅವಶ್ಯಕತೆಯೇ ಇಲ್ಲವಷ್ಟೆ! ಅದರ ಆಸರೆಯಲ್ಲಿರುವ ಗಾಳಿ ನೀರನ್ನು ಧರಿಸಿರುತ್ತದೆ. ಈ ಮಂತ್ರಕ್ಕೆ 'ಆಸರೆಯಲ್ಲಿರುವ' ಎಂಬ ಒಂದು ಶಬ್ದವನ್ನು ಹೆಚ್ಚಿಗೆ ಸೇರಿಸಿಕೊಳ್ಳಬೇಕು.

---

1. ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ. ಬೃ. ೪. ೪. ೨೨.
2. ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ. ಬೃ. ೩. ೮. ೯.
3. ನಿರುಕ್ತ ೭. ೭. ೨೬ ನೋಡಿ. ಆಕಾಶದಿಂದ ಗಾಳಿಯು ಹುಟ್ಟುವುದಾಗಿ ಉಪನಿಷತ್ತುಗಳಲ್ಲಿ ಹೇಳಲಾಗಿದೆ. ತೈ. ಉ. ಭೃ. ಆಕಾಶವು ಗಾಳಿಗೆ ತಾಯಿಯಂತೆ. ಅದನ್ನು ಮಾತಾ ಎನ್ನಲಾಗಿದೆಯಷ್ಟೆ.

## ಪರಮಾತ್ಮನ ವಿಚಿತ್ರ ಶಕ್ತಿ

ಪರಮಾತ್ಮ ಎನಿಸಿದ ಬ್ರಹ್ಮವು ಯಾರ ಮನಸ್ಸಿಗೂ ತಿಳಿಯದುದರಿಂದ, ಅದನ್ನು ಮನಸ್ಸಿಗೆ ಮೀರಿದ್ದು ಎನ್ನಲಾಗಿದೆ. ಎಲ್ಲ ದೇವತೆಗಳ ಒಳಗೂ ಅಂತರಾತ್ಮವಾಗಿ ಅದು ಇರುತ್ತಲೇ ಇರುವುದರಿಂದ, ಅವರು ಅದನ್ನು ಮತ್ತೆ ಪಡೆಯುವುದು ಅವಶ್ಯಕವೂ ಅಲ್ಲ, ಸಾಧ್ಯವೂ ಅಲ್ಲವಷ್ಟೆ! ಯಾರು ಎಲ್ಲೆಲ್ಲಿ ವೇಗವಾಗಿ ಓಡಿದರೂ ಅಲ್ಲೆಲ್ಲ ಬ್ರಹ್ಮ ಇರುವುದರಿಂದ ಓಡುವವರನ್ನೆಲ್ಲ ಅದು ಮೀರಿಸಿದೆ ಎನ್ನಲಾಗಿದೆ. ಮತ್ತೊಂದು ಆಶ್ಚರ್ಯವೇನೆಂದರೆ :- ಯಾವುದನ್ನು ಹೊರಲೂ ಇರಬೇಕಾದಂತಹ ಬಿಗಿಯಾದ ಮೈಕಟ್ಟೇ ಇಲ್ಲದ ಗಾಳಿಗೂ ಸಹ ಬ್ರಹ್ಮದ ಆಸರೆಯಿಂದ ಈ ಜಗತ್ತನ್ನೇ ಹೊರುವಷ್ಟು ಶಕ್ತಿ ಬಂದಿದೆ. ಹೀಗೆ ಈ ಮಂತ್ರದಲ್ಲಿ ಬ್ರಹ್ಮದ ವಿಚಿತ್ರವಾದ ಶಕ್ತಿಯನ್ನೂ ತಿಳಿಸಲಾಗಿದೆ.

## ಪರಮಾತ್ಮ ಜಗತ್ತಿಗಿಂತ ವಿಭಿನ್ನ

ಮೊದಲ ಮಂತ್ರದಲ್ಲಿ ಪರಮಾತ್ಮನಾದ ಬ್ರಹ್ಮವು ಎಲ್ಲವನ್ನೂ ವ್ಯಾಪಿಸಿ 'ಸರ್ವವ್ಯಾಪಕ' ಎನಿಸಿದೆ ಎಂದು ತಿಳಿಸಲಾಗಿತ್ತಷ್ಟೆ. ಈ ವಿಚಾರವನ್ನೇ ಈಗ ಸ್ವಲ್ಪ ವಿವರಿಸಿ 'ವ್ಯಾಪ್ಯ' ಎನಿಸಿದ ಜಗತ್ತಿಗಿಂತ ಇದು ಹೇಗೆ ವಿಭಿನ್ನವಾಗಿದೆ ಎಂಬುದನ್ನು ಸ್ಪಷ್ಟಪಡಿಸಲಾಗುವುದು.

## ವಿಭಿನ್ನತೆಯ ರೂಪರೇಖೆಗಳು

| | ವ್ಯಾಪಕ - ಬ್ರಹ್ಮ | ವ್ಯಾಪ್ಯ - ಜಗತ್ತು |
|---|---|---|
| ೧ | ಸ್ವರೂಪ - ಸ್ವಭಾವಗಳಲ್ಲಿ ಸ್ವಲ್ಪವೂ ಚಲನೆಯಾಗಲಿ ವ್ಯತ್ಯಾಸವಾಗಲಿ ಇಲ್ಲದುದು | ಸ್ವರೂಪ - ಸ್ವಭಾವಗಳಲ್ಲಿ ಚಲನೆ ಮತ್ತು ವ್ಯತ್ಯಾಸಗಳನ್ನು ಪಡೆದಿರುವುದು. |
| ೨ | ಯಾವುದೇ ರೀತಿಯಲ್ಲಿ ಭಾಗಮಾಡಲಾಗದ ಹಾಗೂ ತನ್ನಂತಹ ಬೇರೊಂದೂ ಇಲ್ಲದ ಏಕೈಕ ವಸ್ತು | ಒಂದರಂತೆ ಅನೇಕ, ಮತ್ತು ಒಂದರಂತೊಂದಲ್ಲದ ಅನೇಕ, ಮತ್ತು ತನ್ನಲ್ಲೇ ಕಾಲ ದೇಶ ಸ್ವಭಾವಗಳಿಂದ ಅನೇಕ ವಿಭಿನ್ನತೆಗಳನ್ನು ಪಡೆದಿದೆ. |
| ೩ | ಯಾರ ಮನಸ್ಸಿಗೂ ತಿಳಿಯದುದು | ಎಂತಹ ಸೂಕ್ಷ್ಮವಾಗಿದ್ದರೂ ಯಾರಾದರೊಬ್ಬರ ಮನಸ್ಸಿಗೆ ತಿಳಿಯುವಂತಹದು. |
| ೪ | ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಎಂಬ ಇಂದ್ರಿಯಗಳ ಜೊತೆಗೇ ಇದ್ದೂ ಅವುಗಳಿಗೆ ತಿಳಿಯಲಾಗದುದು. ಇಂದ್ರಿಯಗಳಿಗಿಂತ ಪ್ರಬಲವಾದ ಮನಸ್ಸಿಗೇ ತಿಳಿಯದೆಂದ ಮೇಲೆ ಇಂದ್ರಿಯಗಳಿಗೆ ತಿಳಿದೀತೆ! | ಮನಸ್ಸಿನಿಂದ ಯೋಚಿಸಿ ತಿಳಿಯುವ ಅವಶ್ಯಕತೆಯಿಲ್ಲದ ಸಂದರ್ಭದಲ್ಲಿ ನೇರವಾಗಿಯೇ ಯಾವುದಾದರೂ ಇಂದ್ರಿಯಗಳಿಗೆ ತಿಳಿಯುವುದು.[1] |
| ೫ | ಯಾವಾಗಲೂ ಎಲ್ಲೆಡೆಯೂ ಇದೆ. ಯಾವ ಪರಿಮಿತಿಗೂ ಒಳಪಟ್ಟಿರುವುದಿಲ್ಲ. | ಎಲ್ಲವೂ ಎಲ್ಲೆಡೆಯೂ ಯಾವಾಗಲೂ ಇರುವುದಿಲ್ಲ ಮತ್ತು ಯಾವುದಾದರೂ ಒಂದು ಪರಿಮಿತಿಯೊಳಗಿರುತ್ತದೆ. |

1. ಜೀವಾತ್ಮದ ಸ್ವರೂಪವು ಮಾತ್ರ ಮನಸ್ಸಿಗೆ ತಿಳಿಯುವುದಿಲ್ಲ. ಅದು ಸ್ವಯಂಪ್ರಕಾಶ ಮತ್ತು ಅತೀಂದ್ರಿಯ, ಎಂಬ ಅಂಶವನ್ನು ಇಲ್ಲಿ ಗಮನದಲ್ಲಿಟ್ಟುಕೊಳ್ಳುವುದು ಒಳಿತು.

೬ ಎಲ್ಲ ಜಗತ್ತಿಗೂ ಶಕ್ತಿಯನ್ನು ಕೊಡುವ ಮಹಾಶಕ್ತಿಯನ್ನು ಸ್ವತಂತ್ರವಾಗಿ ಪಡೆದಿದೆ.

ಯಾವ ಆಸರೆಯೂ ಇಲ್ಲದೆ ಆಕಾಶವಲ್ಲಿ ಗಾಳಿಯೂ ಸಹ ಜಗತ್ತಿಗೆ ಮೂಲಭೂತವಾದ ಮತ್ತು ಬದುಕಿಗೆ ಅವಶ್ಯಕವಾದ ನೀರೆಲ್ಲವನ್ನು ಧರಿಸಿರುವುದು ತನ್ನ ಸ್ವಂತ ಶಕ್ತಿಯಿಂದಲ್ಲ ಬ್ರಹ್ಮದ ಶಕ್ತಿಯಿಂದ. ಹೀಗೆ ಜಗತ್ತಿನ ಯಾವುದೇ ವಸ್ತುಗಳಿಗೂ ಸ್ವತಂತ್ರವಾಗಿ ಶಕ್ತಿ ಎಳ್ಳಷ್ಟೂ ಇಲ್ಲ.

ಅಥವಾ

೭ ಇದು ಸಾರ್ವಭೌಮ ಅಧಿಕಾರಿ. ಇದು ಜಗತ್ತಿನ ಎಲ್ಲವನ್ನೂ ತನ್ನ ಆಜ್ಞೆಗೆ ಒಳಪಡಿಸಿಕೊಂಡಿದೆ ಮತ್ತು ಎಲ್ಲದಕ್ಕೂ ಮುಖ್ಯ ಆಧಾರವಾಗಿದೆ.

ಅಥವಾ

ಬ್ರಹ್ಮದ ಸಾರ್ವಭೌಮಾಧಿಕಾರದ ಆಜ್ಞೆಗೆ ಹೆದರಿ ಗಾಳಿ ಬೆಳಕು ಮುಂತಾದ ಎಲ್ಲವೂ ತಮ್ಮತಮ್ಮ ಕರ್ತವ್ಯಗಳಲ್ಲಿ ನಿರತವಾಗಿದ್ದು ಜಗತ್ತಿನಲ್ಲಿ ಯಾವುದೂ ಪರಸ್ಪರ ಏರುಪೇರಾಗದಂತೆ ನೋಡಿಕೊಳ್ಳುತ್ತ ಜಗತ್ತಿಗೆ ಉಪ ಆಧಾರ[1]ಗಳೆನಿಸಿವೆ. ಇದೇ ಜಗತ್ತಿನ ಸ್ವಭಾವ.

೮ ಇದಕ್ಕೆ ಸ್ವಯಂ ಅಸ್ತಿತ್ವ ಇದೆ.

ಇದಕ್ಕೆ ಬ್ರಹ್ಮದ ಅಧೀನತೆಯೊಡನೆ ಅಸ್ತಿತ್ವ ಇದೆ.

ಈ ವಿವರಣೆಯ ಅಂಶಗಳೆಲ್ಲವೂ ಪರಮಾತ್ಮನು ಜಗತ್ತನ್ನು ವ್ಯಾಪಿಸಿರುವುದರಿಂದಾಗಿರುವ ಫಲಿತಾಂಶಗಳು. ಇದೆಲ್ಲದರ ಸಾರವನ್ನೇ ಉಪನಿಷತ್ತುಗಳಲ್ಲಿ 'ವಿಧರಣ' ಎನ್ನಲಾಗಿದೆ. ಇದರ ಪ್ರಕಾರ.

**ಧಾರಕ — ಬ್ರಹ್ಮ          ಧಾರ್ಯ — ಜಗತ್ತು**

ಎಂದು ಈ ಮಂತ್ರದಲ್ಲಿ ಸ್ಪಷ್ಟಪಡಿಸಲಾಯಿತು.

## ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಪದ ವಿವರಣೆ

ಪರಮಾತ್ಮನಿಗೆ ವಿಚಿತ್ರಶಕ್ತಿ ಇರುವುದರಿಂದ ಅವನು ಜಗತ್ತಿಗಿಂತ ವಿಭಿನ್ನ ಎಂದು ಈ ಮಂತ್ರದಲ್ಲಿ ತಿಳಿಸಲಾಗುವುದು.

**ಏಕಂ** – ಪರಮಾತ್ಮ ಎಂಬ ಹೆಸರಿನ ವಸ್ತು ಇರುವುದು ಒಂದೇ ಎಂಬುದನ್ನು ತಿಳಿಸಲು ಈ ಪದವನ್ನು ಬಳಸಲಾಗಿದೆ,

**ಅನೇಜತ್** – ತನ್ನ ಜಾಗ ಬಿಟ್ಟು ಎಂದೂ ಕದಲದುದು.

---

1. ಮುಖ್ಯವಲ್ಲದ ಆಶ್ರಯ.

**ಮನಸಃ** – ವೇಗವಾದ ವಸ್ತುಗಳ ಮಾದರಿಗಾಗಿ ಮನಸ್ಸನ್ನು ಹೇಳಲಾಗಿದೆ. ಲೋಕದಲ್ಲಿ ಮನಸ್ಸು ಬಹಳ ವೇಗವಾದುದೆಂದು ಪ್ರಸಿದ್ಧವಾಗಿದೆ.

**ಜವೀಯಃ** – 'ಜವ' ಎಂಬ ಶಬ್ದಕ್ಕೆ ವೇಗ ಮತ್ತು ವೇಗವುಳ್ಳದ್ದು ಎಂದೂ ಅರ್ಥವಿದೆ. ಈ ಎರಡು ಅರ್ಥ ಮತ್ತು ವ್ಯಾಕರಣದ ನಿಯಮಗಳಿಗೆ ಅನುಸಾರ 'ಅತಿವೇಗವುಳ್ಳದ್ದು' ಎಂದು ಈ ಪದದ ಮುಖ್ಯಾರ್ಥ.

**ದೇವಾಃ** – ಎಲ್ಲಿಗೆಂದರಲ್ಲಿಗೆ ಯಾವಾಗೆಂದರಾವಾಗ ನೆನೆಸಿಕೊಳ್ಳುವಷ್ಟರಲ್ಲೇ ಹೋಗಿ ಸೇರಬಲ್ಲ ದಿವ್ಯಶಕ್ತಿಯಿರುವ ಚತುರ್ಮುಖ ಮುಂತಾದ ದೇವತೆಗಳು.

**ಅರ್ಷತ್** – ಹೋಗುತ್ತಿರುವ.

**ನ, ಆಪ್ನುವನ್** – ಹೊಂದಲಾಗುತ್ತಿಲ್ಲ. ವೈದಿಕಸಾಹಿತ್ಯದಲ್ಲಿ ಗತಕಾಲದ ಅರ್ಥದ ಮಾತನ್ನು ವರ್ತಮಾನಕಾಲದ ಅರ್ಥದಲ್ಲೇ ಉಪಯೋಗಿಸುವ ನಿಯಮವಿದೆ. ಆದುದರಿಂದ ಈ ಪದಕ್ಕೆ ಇಲ್ಲಿ ಹೊಂದಲಾಗಿಲ್ಲ ಹೊಂದಿಲ್ಲ ಎಂಬ ಅರ್ಥಗಳನ್ನೇ ಮಾಡಬೇಕಾದುದೇನೂ ಇಲ್ಲ.

**ಅನ್ಯಾನ್** – ಹಿಂದೆ ತಿಳಿಸಿರುವ ಚತುರ್ಮುಖ ಮುಂತಾದವರನ್ನು.

**ತಿಷ್ಠತ್** – ತಾನು ನಿಂತಿರುವಂತೆಯೇ ನಿಂತಿದ್ದೂ.

**ಅತ್ಯೇತಿ** – ಅತಿಕ್ರಮಿಸುತ್ತದೆ.

**ದಧಾತಿ** – ಬೀಳದಂತೆ ಹಿಡಿದಿರುತ್ತಾನೆ. ದೇವಾಲಯದ ಗೋಪುರದ ಮೇಲೆ ಚೈತ್ರನೆಂಬುವನು ಬಾವುಟವನ್ನು ಹಿಡಿದಿದ್ದಾನೆ ಎನ್ನುವಾಗ ಗೋಪುರವೆಂಬ ಮುಖ್ಯ ಆಸರೆಯಿಲ್ಲದೆ ಚೈತ್ರನು ಹೇಗೆ ಬಾವುಟ ಹಿಡಿದಿರಲಾರನೋ, ಹಾಗೆ ಗಾಳಿಯೂ ಬ್ರಹ್ಮದ ಆಸರೆಯಿಲ್ಲದೆ ಜಗತ್ತನ್ನು ಹಿಡಿದಿಟ್ಟುಕೊಂಡಿರಲಾರದು ಎಂದು ತಿಳಿಯಬಹುದು.

## ಪರಮಾತ್ಮನಿಗೆ ಚಲನೆ ಮತ್ತು ವೇಗ ಉಂಟೆ?

ಒಂದೆಡೆ ಇರುವ ಪರಮಾತ್ಮ ತನ್ನಿಷ್ಟಬಂದಂತೆ ಬೇರೆ ಕೆಲಸಗಳಿಗಾಗಿ ಬೇರೆಡೆಯೂ ಇರುವ ಶಕ್ತಿಯನ್ನು ಪಡೆದಿದೆಯಾಗಿ, ಇಲ್ಲಿಂದಲ್ಲಿಗೆ ವೇಗವಾಗಿ ಹೋಗುವುದು ಎಂಬ ಮಾತನ್ನು ಇಲ್ಲಿ ಸುಮ್ಮನೆ ಹೇಳಲಾಗಿದೆ. ಇದೇ ರೀತಿಯ ಮಾತುಗಳು ಶ್ವೇತಾಶ್ವತರ ಮತ್ತು ಕಠ ಉಪನಿಷತ್ತುಗಳಲ್ಲೂ ಇವೆ.

ಸ್ವರೂಪದಿಂದ ಎಲ್ಲೆಡೆ ಒಂದೇರೀತಿ ಇರುವ ಪರಮಾತ್ಮ ತನ್ನ ಇಚ್ಛೆಯಂತೆ ಬೇರೆಬೇರೆ ದಿವ್ಯರೂಪಗಳನ್ನು ಎಲ್ಲಿಂದರಲ್ಲಿ ಯಾವಾಗೆಂದರಾವಾಗ ತೋರಬಹುದಾದ ಶಕ್ತಿಯನ್ನು ಪಡೆದಿದೆ. ಒಂದೆಡೆ ಒಂದುರೂಪವನ್ನು ತೋರದಿರುವಾಗ ಮತ್ತೊಂದೆಡೆ ಅದೇಕ್ಷಣದಲ್ಲಿ ಅದೇ ರೂಪವನ್ನು ಪಕ್ಕನೆ ಹೊಳೆಯುವಂತೆ ತೋರಬಹುದು. ಹೀಗೆ ಬ್ರಹ್ಮವೆನಿಸಿದ ಪರಮಾತ್ಮ ತನ್ನ ರೂಪವನ್ನು ವೇಗವಾಗಿ ಪ್ರಕಾಶಪಡಿಸುವುದು ಎಂದು ಭಾವಾರ್ಥ.

ವೈಕುಂಠ ಕ್ಷೀರಸಮುದ್ರ ಸೂರ್ಯಮಂಡಲ ಮುಂತಾದೆಡೆಗಳಲ್ಲಿ ಪರಮಾತ್ಮ ವಿವಿಧ ರೂಪಗಳಿಂದ ಪ್ರಕಾಶಿಸುತ್ತಿಲ್ಲವೆ! ಹಾಗಿರುತ್ತಿರುವಾಗಲೇ ಪ್ರಹ್ಲಾದ ಮುಂತಾದ ಭಕ್ತರಿಗೆ ಅವರವರೆಡೆಯಲ್ಲೇ ನರಸಿಂಹ ಮುಂತಾದ ಅವತಾರಗಳಿಂದ ತಕ್ಷಣ ಪ್ರಕಾಶಿಸಲಿಲ್ಲವೆ! ಗಜೇಂದ್ರಮೋಕ್ಷದ ಪ್ರಸಂಗದಲ್ಲಿ ವೈಕುಂಠದಿಂದಲೇ ವೇಗವಾಗಿ ಓಡಿ ಬರಲಿಲ್ಲವೆ! ಈ ವಿಚಾರಗಳು ಇತಿಹಾಸ–ಪುರಾಣಗಳಲ್ಲಿ ವಿಸ್ತಾರವಾಗಿವೆ.

ಇಂತಹ ವೇಗವಿದೆ ಎಂಬ ವಿಚಾರವನ್ನೇ ಈ ಮಂತ್ರದ ಈ ಮೊದಲ ಭಾಗದಲ್ಲಿ ತಿಳಿಸಿ, ಇದನ್ನೇ ಮುಂದೆ ಎರಡು ಮೂರನೆಯ ಭಾಗಗಳಲ್ಲೂ ವಿವರಿಸಲಾಗುವುದು.

## 'ಅರ್ಷತ್' ಎಂಬ ಶಬ್ದ ಸರಿಯೆ?

'ಋಷೀ-ಗತೌ' ಎಂಬುದು ಧಾತುಪಾಠ, ಅದು ಆರನೆಯಗಣದಲ್ಲಿದೆ. ಸಂಚಾರ ಅದರ ಅರ್ಥ. ಸಂಚರಿಸುತ್ತಿರುವ ವಸ್ತುವನ್ನು ತಿಳಿಸಬೇಕಾದಾಗ 'ಶತೃ' ಎಂಬ ಪ್ರತ್ಯಯ ಅದಕ್ಕೆ ಹಚ್ಚಬೇಕು. ಆಗ 'ಋಷ್ + ಅತ್' ಸೇರಿ ಋಷತ್ ಆಗುತ್ತದೆ. ಇಲ್ಲಿ 'ಋ' ಎಂಬುದು 'ಅರ್' ಆಗಬೇಕಾದರೆ ಈ ಧಾತುವನ್ನು ಒಂದನೆಯ ಗಣಕ್ಕೆ ಸೇರಿಸಬೇಕು. ವೈದಿಕಸಾಹಿತ್ಯದಲ್ಲಿ ಈ ರೀತಿ ಧಾತುಗಳನ್ನು ಗಣಾಂತರ ಮಾಡಬಹುದೆಂದು ಕಾತ್ಯಾಯನ ಮಹರ್ಷಿಗಳು ವ್ಯಾಕರಣವಾರ್ತಿಕದಲ್ಲಿ ತಿಳಿಸಿರುವರು. ಅದರಂತೆ ಅರ್+ಷತ್ – ಅರ್ಷತ್ ಎಂಬುದು ಸರಿಯಾದ ಶಬ್ದವೆನಿಸುವುದು. ಮಾಧ್ಯಂದಿನರ ಪಾಠದಲ್ಲಿ 'ಅರ್ಶತ್' ಎಂದಾಗಿದೆ. ಆಗ 'ಋಶೀ – ಗತೌ' ಎಂಬ ಧಾತುವಿನಿಂದ ಮೇಲೆ ಹೇಳಿದ ನಿಯಮದಂತೆ ಸಿದ್ಧವಾದ ಇದೂ ಸರಿಯಾದ ಶಬ್ದವೇ. ಎರಡು ಪಾಠಗಳಲ್ಲೂ ಅರ್ಥದ ವ್ಯತ್ಯಾಸ ಏನೂ ಇಲ್ಲ.[1]

## ಜಗತ್ತಿಗೆ ಮೂಲಕಾರಣ ಪರಮಾತ್ಮ

ಉಪಾಸನೆಗೆ ಅರ್ಹವಾದುದು ಜಗತ್ತಿನ ಮೂಲಕಾರಣ. ಅದು ಪರಮಾತ್ಮನೇ ಎಂಬುದನ್ನು ಈ ಮಂತ್ರದ ನಾಲ್ಕನೆಯ ಭಾಗದಲ್ಲಿ ಸ್ಪಷ್ಟಪಡಿಸಲಾಗಿದೆ. ಖಗೋಳದಲ್ಲಿ ಅನೇಕ ಬ್ರಹ್ಮಾಂಡಗಳು ತಮಗೆ ಕಾರಣವಾದ ನೀರಿನ ಆವರಣದಲ್ಲಿ ಇವೆ, (ಜಗತ್ತಿನ ಜೀವಿಗಳಿಗೆಲ್ಲ ಮೂಲವಾದ ಆ ನೀರಿಗೂ ಆಸರೆಯಾಗಿ ಇರುವವನು ಪರಮಾತ್ಮ ನಾರಾಯಣ) ಎಂಬ ವಿಚಾರವನ್ನು ಮನು ಪರಾಶರ ಮುಂತಾದವರು ಸ್ಮೃತಿ ಇತಿಹಾಸ ಪುರಾಣಗಳಲ್ಲಿ ತಿಳಿಸಿದ್ದಾರೆ. ನೀರಿನ ಆವರಣಕ್ಕೆ ಆಸರೆಯಾಗಿ ತೇಜಸ್ ಮತ್ತು ಗಾಳಿಯ ಆವರಣಗಳು ಇವೆಯಾದರೂ ಎಲ್ಲಕ್ಕೂ ಕೊನೆಯ ಮುಖ್ಯ ಆಸರೆ ಪರಮಾತ್ಮ ಎಂಬುದನ್ನು ಆ ಗ್ರಂಥಗಳಿಂದ ವಿಸ್ತಾರವಾಗಿ ತಿಳಿಯಬಹುದು.

---

1. ವೈದಿಕಸಾಹಿತ್ಯಕ್ಕೆ ಲೌಕಿಕವ್ಯಾಕರಣ ನಿಯಮಗಳು ಚಾಚೂತಪ್ಪದೆ ಅನ್ವಯಿಸುವುದಿಲ್ಲ; 'ಬಹುಳಂ' ಎಂಬ ವಿಕಲ್ಪದಂತೆ ಅನ್ವಯಿಸುತ್ತವಷ್ಟೆ. ಹೀಗೆ ಇಲ್ಲಿ ಆರನೆಯಗಣದ ಧಾತುವಿಗೇ ಗುಣವು ಬರುವುದೆಂದು ಇಟ್ಟುಕೊಂಡರೆ 'ಅರ್ಷತ್' ಎಂಬ ರೂಪ ಮತ್ತಷ್ಟು ಸುಲಭ.





# ಈಶಾವಾಸ್ಯೋಪನಿಷತ್

## ಮಂತ್ರ ಐದು

**ತದೇಜತಿ ತನ್ನೇಜತಿ ತದ್ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥೫॥**

### ಅನ್ವಯಾನುಸಾರ ಪ್ರತಿಪದಾರ್ಥ

ತತ್ – ಆ ಪ್ರಧಾನವಾದ ಪರಮಾತ್ಮತತ್ತ್ವವು; ಏಜತಿ – ಅಲುಗಾಡುವುದು; ತತ್ – ಅದೇ ವಸ್ತುವು; ನ, ಏಜತಿ – ಅಲು ಗಾಡದು; ತತ್ – ಅದು; ದೂರೇ – ದೂರದಲ್ಲೂ; ತತ್, ಉ – ಅದೇ; ಅನ್ತಿಕೇ - ಹತ್ತಿರದಲ್ಲೂ; ತತ್ – ಅದು; ಅಸ್ಯ– ನಮಗೆ ತಿಳಿದು ಬರುವ ಈ; ಸರ್ವಸ್ಯ – ಜಡಜೀವಗಳೆಲ್ಲದರ; ಅನ್ತಃ – ಒಳಗೆಲ್ಲವೂ; ತತ್, ಉ – ಅದೇ; ಅಸ್ಯ – ಈ; ಸರ್ವಸ್ಯ – ಎಲ್ಲದರ; ಬಾಹ್ಯತಃ – ಹೊರಗೆಲ್ಲವೂ (ಇದೆ).

### ಛಾಯಾಪದ್ಯ

ಅದು ಚಲಿಪುದು ಅದೆ ಚಲಿಸದು ಅದು ದೂರದಿ ಅದೆ ಸನಿಯ;
ಈ ಎಲ್ಲದರೊಳಗೂ ಅದು ಅದೆ ಎಲ್ಲಕು ಹೊರಗೂ.

## ತಾತ್ಪರ್ಯಾರ್ಥ

### ಪರಮಾತ್ಮನ ಮಹಿಮೆ

ಅಜ್ಞಾನ, ಸಂಶಯ, ವಿಪರ್ಯಯಗಳು[1] ಹೋಗಲು, ಪರಮಾತ್ಮನ ಅನಂತ ಮಹಿಮೆಗಳನ್ನು ಮತ್ತೆ ಮತ್ತೆ ಹೇಳಬೇಕು, ಮತ್ತೆ ಮತ್ತೆ ಕೇಳಬೇಕು ಎಂಬ ನಿಯಮದಂತೆ, ವೇದಪುರುಷನು 'ಅನೇಜದೇಕಂ' ಎಂಬ ಮಂತ್ರ ದಿಂದ ವಿವರಿಸಲಾದ ವಿಚಿತ್ರಾನಂತ ಶಕ್ತಿ[2]ಯುತನಾದ ಪರಬ್ರಹ್ಮನ ಅಸಾಧಾರಣ ಗುಣಗಳನ್ನೇ (ಬೇರೊಂದು ರೀತಿ ಯಲ್ಲಿ) 'ತದೇಜತಿ' ಎಂಬ ಮಂತ್ರದಿಂದ ಪ್ರಕಾಶಪಡಿಸುತ್ತಾನೆ.

### ಪರಮೈಕಾಂತಿಗಳು

ಪರಮಾತ್ಮನ ಆಜ್ಞಾಪಾಲಕರಾದ ಬ್ರಹ್ಮ–ರುದ್ರಾದಿ ದೇವತೆಗಳು ಎಷ್ಟೋ ಮಂದಿ ಇದ್ದಾರೆ. ಇಂತಹ ದೇವತೆಗಳನ್ನು ವಿಷಮ ಪರಿಸ್ಥಿತಿಯಲ್ಲೂ[3] ಮರೆಹೊಗದೆ ನಾರಾಯಣನನ್ನೇ ಮರೆಹೊಗುವ, ಆತನನ್ನೇ ಸತತ ವಾಗಿ ಚಿಂತಿಸುವ ಭಕ್ತರನ್ನು ಪರಮೈಕಾಂತಿಗಳೆಂದು ಕರೆಯುತ್ತಾರೆ.

---

1. ವಸ್ತುವನ್ನು ತಿಳಿಯದಿರುವಿಕೆ, ವಸ್ತುವಿನ ಸ್ವರೂಪವನ್ನು ನಿರ್ಣಯಿಸದಿರುವಿಕೆ, ವಸ್ತುವಿನ ಸ್ವರೂಪವನ್ನು ವ್ಯತ್ಯಾಸವಾಗಿ ತಿಳಿಯುವಿಕೆ.
2. ಊಹೆಗೂ ನಿಲುಕದ ಅಪಾರವಾದ ಸಾಮರ್ಥ್ಯ. 3. ಪರಿಹರಿಸಲು ಆಗದಿರುವ ವಿಶೇಷ ಸಂದರ್ಭ.

### ಭಕ್ತವತ್ಸಲ

ಪರಮೈಕಾಂತಿಗಳಾದ ಪ್ರಹ್ಲಾದ ದ್ರೌಪದಿ[1] ಗಜೇಂದ್ರರೇ ಮೊದಲಾದ ಭಕ್ತರ ಸಂಕಟವನ್ನು ಪರಿಹರಿಸಲು ಸರ್ವಸ್ವತಂತ್ರನಾದ ಪರಮಾತ್ಮನು ಮನಮೋಹಕವಾದ ರೂಪವನ್ನು ಧರಿಸಿ ವೇಗವಾಗಿ ಚಲಿಸುತ್ತಾನೆ. ಅಲ್ಲದೆ ಪರಮಕರುಣಾಸಾಗರನಾದ ತಾನು ಭಕ್ತರಿಗೆ ಒದಗಬಹುದಾದ ಕಷ್ಟಪರಂಪರೆಗಳನ್ನು ನೆನೆನೆನೆದು ನಡುಗುತ್ತಾನೆ.

ವಿಶಾಲತೆಗೆ ಪ್ರಸಿದ್ಧವಾದುದು ಆಕಾಶ. ಅಂತಹ ಆಕಾಶಕ್ಕಿಂತ ದೊಡ್ಡವನೂ, ಸರ್ವವ್ಯಾಪಕನೂ ಆದ ಈತನು ಚಲಿಸುವುದೇ ಇಲ್ಲ, ಈಶನು ಚಲಿಸುವುದು ತಾನೆ ಹೇಗೆ?

### ಪರಮಾತ್ಮನು ದುರ್ಲಭ ಹಾಗೂ ಸುಲಭ

ಈತನು ಡಾಂಭಿಕರೂ[2], ದುರಾಚಾರಿಗಳೂ, ದುರಭಿಮಾನಿಗಳೂ, ಇಂದ್ರಿಯಗಳ ಗುಲಾಮರೂ, ವಿಷಯ ಲಂಪಟರೂ[3] ಆದ ಜನರ ಕಣ್ಣಿಗೂ ಮನಸ್ಸಿಗೂ ನಿಲುಕದಷ್ಟು ದೂರದಲ್ಲಿದ್ದಾನೆ. ಆದುದರಿಂದ ದುರ್ಲಭನು.

ಮನಸ್ಸಿಗೆ ಸಿಲುಕದೀತನೇ, ಜಿತೇಂದ್ರಿಯರೂ[4] ತನ್ನನ್ನೇ ಸರ್ವಸ್ವವೆಂದು ಬಗೆದವರೂ ತನ್ನ ದರ್ಶನಕ್ಕೆ ಹಂಬಲಿಸುವವರೂ ಆದ ಭಕ್ತರು ತನಗಾಗಿ ಇತ್ತ ಅತ್ತ ಅಲೆದಾಡಬಾರದೆಂದು ಅವರವರ ಸಮೀಪದಲ್ಲಿ ಅವರವರ ಹೃದಯಕಮಲದಲ್ಲೇ ನೆಲೆಯಾಗಿ ನಿಂತಿದ್ದಾನೆ. ಇದರಿಂದ ಸುಲಭನು.

### ಪರಮಾತ್ಮನ ಅಂತರ್ವ್ಯಾಪ್ತಿ ಬಹಿರ್ವ್ಯಾಪ್ತಿ

ಮನೆಯ ಒಳಗಿರುವ ಮನುಷ್ಯನು ಅದೇ ಕಾಲದಲ್ಲಿ ಮನೆಯ ಹೊರಗಿರಲಾರನು. ಹೊರಗಿರುವವನು ಒಳಗಿರಲಾರನು, ಪರಮಾತ್ಮನ ವೈಚಿತ್ರ್ಯವನ್ನು ಏನೆಂದು ಹೇಳೋಣ? ಒಂದೇ ಕಾಲದಲ್ಲಿ ಜಗತ್ತಿನಲ್ಲಿರುವ ಎಲ್ಲಾ ವಸ್ತುಗಳ ಒಳಗೂ ಇದ್ದಾನೆ, ಅದೇ ಕಾಲದಲ್ಲಿ ವಸ್ತುಗಳ ಹೊರಗೂ ಇದ್ದಾನೆ. ಈತನೊಬ್ಬನೇ ಅಂತರ್ಯಾಮಿಯಾಗಿಯೂ[5], ವ್ಯಾಪಕನಾಗಿಯೂ ಇದ್ದಾನೆ. ಈತನನ್ನು ಈಶನೆಂದು ಉಪನಿಷತ್ತುಗಳು ಕರೆಯುತ್ತವೆ.

## ವೇದಾಂತಾಚಾರ್ಯಭಾಷ್ಯ

### ಮತ್ತೆ ಪರಮಾತ್ಮನ ವಿಚಿತ್ರಶಕ್ತಿ

ಚಲಿಸದೆಯೇ ಮನಸ್ಸಿಗಿಂತ ವೇಗವಾದುದು ಅದೊಂದೇ ಎಂದು ಹಿಂದೆ ಹೇಳಿದ ಅರ್ಥವನ್ನೇ ಅದರ ಬಗ್ಗೆ ಆದರ ಇರುವುದರಿಂದ ಮತ್ತೊಂದು ರೀತಿಯಿಂದಲೂ ಉಪದೇಶಿಸುತ್ತಿದ್ದಾನೆ. " ತದೇಜತಿ ತನ್ನೇಜತಿ " ಎಂದು.

---

1. ದ್ರುಪದ ಮಹಾರಾಜನ ಮಗಳು. ಅಗ್ನಿಯಲ್ಲಿ ಹುಟ್ಟಿದವಳು. ಪಾಂಡವರ ಪತ್ನಿ. ಶ್ರೀಕೃಷ್ಣನ ಪರಮಭಕ್ತಳು. ಇವಳಿಗೆ 'ಕೃಷ್ಣಾ' ಎಂದೂ ಹೆಸರು.
2. ಕೀರ್ತಿಗೋಸ್ಕರವೇ ಕರ್ಮಗಳನ್ನು ಆಚರಿಸುವವರು.
3. ಭೋಗ್ಯವಸ್ತುಗಳಲ್ಲಿ ಅತಿಯಾದ ಆಸೆಯುಳ್ಳವರು.
4. ಜ್ಞಾನೇಂದ್ರಿಯಗಳನ್ನು ಮನಸ್ಸಿನೊಡನೆ ವಶದಲ್ಲಿ ಇಟ್ಟುಕೊಂಡಿರುವವರು.
5. ಸಶರೀರವಾದ ಜೀವಾತ್ಮಗಳೆನ್ನೊಳಹೊಕ್ಕು ನಿಯಮಿಸುವವನು.

## ಪದಗಳ ವಿವರಣೆ

**ತತ್** - ಎಲ್ಲೆಲ್ಲೂ ಹರಡಿರುವ ಆ ಪರಮಾತ್ಮತತ್ತ್ವವು ಹಿಂದೆ ಹೇಳಿದಂತೆ ಬಹಳ ವೇಗವಿರುವುದೇ ಮುಂತಾದ ಕಾರಣಗಳಿಂದ

**ಏಜತಿ** - ಚಲಿಸುತ್ತದೆ - ಚಲಿಸುವುದೋ ಎನ್ನುವಂತೆ ತೋರುತ್ತದೆ.

**ತತ್ ನೈಜತಿ** – ಅದೇ ವಸ್ತು ಎಲ್ಲೆಲ್ಲೂ ಇರುವುದರಿಂದ ಚಲಿಸುವುದೇ ಇಲ್ಲ.

**ತತ್, ದೂರೇ, ತತ್, ಉ, ಅನ್ತಿಕೇ** – ಅದು ಬಹಳ ದೂರದಲ್ಲೂ ಬಹಳ ಸಮೀಪದಲ್ಲೂ ಸಹ ಇರುತ್ತಲೇ ಇದೆ.

## ಎಲ್ಲೆಲ್ಲೂ ಇರುವ ಪರಮಾತ್ಮನಲ್ಲಿ ಹತ್ತಿರ - ದೂರಗಳು ಹೇಗೆ ?

ಎಲ್ಲೆಲ್ಲೂ ಇರುವ ಈ ವಸ್ತುವಿಗೆ, ದೂರದಲ್ಲಿದೆ ಸಮೀಪದಲ್ಲಿದೆ ಎಂಬ ವ್ಯವಹಾರವನ್ನು ಅಜ್ಞರು, ಜ್ಞಾನಿಗಳು ಎಂಬ ವಿವಿಧ ಜನಗಳ ದೃಷ್ಟಿಯಿಂದ ಮಾಡಲಾಗುತ್ತದೆ.

ಹೀಗೆಯೇ ಶೌನಕಮಹರ್ಷಿಗಳೂ[1] ಹೇಳುತ್ತಾರೆ - “ ಗೋವಿಂದನ ಬಗ್ಗೆ ಮನಸ್ಸಿಲ್ಲದೆ ಲೌಕಿಕ ವಿಷಯಗಳಲ್ಲೇ ಆಸಕ್ತಿ ಇರುವವರಿಗೆ ಆ ಪರಬ್ರಹ್ಮವು ದೂರ – ಅತಿದೂರದಲ್ಲೇ ಉಳಿದು ಬಿಡುತ್ತದೆ ; ಗೋವಿಂದನಲ್ಲಿ ತನ್ಮಯತೆಯಿಂದ ತಮ್ಮ ಮನಸ್ಸೆಲ್ಲವನ್ನೂ ಒಪ್ಪಿಸಿ, ಲೌಕಿಕ ವಿಷಯಗಳನ್ನು[2] ದೂರ ಮಾಡಿರುವ ಜನರಿಗೆ ಅದು ಅತಿ ಸಮೀಪದಲ್ಲೇ ಇರುವುದಾಗಿ ತಿಳಿದು ಬರುವುದು[3] ” ಎಂದು.

## ಪರಮಾತ್ಮ ಇತರ ವಸ್ತುಗಳಂತಲ್ಲ

ಕೆಲವು ವಸ್ತುಗಳು ಕೆಲವುದರ ಒಳಗೇ ಇರುತ್ತವೆ ; ಹೊರಗಿರುವುದಿಲ್ಲ. ಮತ್ತೆ ಕೆಲವು ಹೊರಗಿರುತ್ತವೆ, ಒಳಗಿರುವುದಿಲ್ಲ. ಪರಮಾತ್ಮ ಈ ಎರಡೂ ವಿಧ ವಸ್ತುಗಳಂತಲ್ಲ ಎಂದು ತಿಳಿಸುತ್ತಾನೆ. ‘ ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ’ ಎಂದು.

## ಅಂತರ್ವ್ಯಾಪ್ತಿ – ಒಳಹರವು

**ತತ್** - ಎಲ್ಲವನ್ನೂ ವ್ಯಾಪಿಸಿರುವ ಹಿಂದೆ ತಿಳಿಸಿದ ಪರಮಾತ್ಮತತ್ತ್ವವು.

**ಅಸ್ಯ** - ವಿವಿಧ ರೀತಿಯ ಜಡ ಮತ್ತು ಜೀವವಸ್ತುಗಳ ರೂಪದಲ್ಲಿ ಅನುಭವ ಸಿದ್ಧವಾಗಿರುವ ಎಲ್ಲ ಪದಾರ್ಥಗಳ ಅಂತಃ, ಭವತಿ - ಘರ್ಷಣೆ ಆಗಲಾರದುದರಿಂದ ಒಳ ವಿಭಾಗಗಳಲ್ಲಿ ಒಂದೆಡೆ ಇದೆ. ಒಂದೆಡೆ ಇಲ್ಲ ಎನ್ನಲು ಅವಕಾಶವಿಲ್ಲದಂತೆ ಇದೆ ಎಂದರ್ಥ.

---

1. ವ್ಯಾಸರ ಶಿಷ್ಯರಲ್ಲಿ ಒಬ್ಬನು. ಋಗ್ವೇದದ ಮೂಲಪುರುಷ. ಇವನು ಸ್ಮೃತಿ ಕರ್ತೃವೂ ಆಗಿದ್ದಾನೆ.
2. ಸಾಮಾನ್ಯ ಜನರಿಗೆ ಇಷ್ಟವಾದ ಭೋಗ್ಯವಸ್ತುಗಳು.
3. ಪರಾಙ್ಮುಖಾನಾಂ ಗೋವಿಂದೇ ವಿಷಯಾಸಕ್ತಚೇತಸಾಮ್।
ತೇಷಾಂ ತತ್ಪರಮಂ ಬ್ರಹ್ಮ ದೂರಾದ್ದೂರತರೇ ಸ್ಥಿತಮ್॥
ತನ್ಮಯತ್ವೇನ ಗೋವಿಂದೇ ಯೇ ನರಾ ನ್ಯಸ್ತಚೇತಸಃ।
ವಿಷಯತ್ಯಾಗಿನಸ್ತೇಷಾಂ ವಿಜ್ಞೇಯಂ ಚ ತದನ್ತಿಕೇ॥ ವಿಷ್ಣುಧರ್ಮ. ೯೯.೧೩.

### ಬಹಿರ್ವ್ಯಾಪ್ತಿ – ಹೊರಹರವು

ಅದೇ ಎಲ್ಲ ವಸ್ತುವಿನ ಹೊರಗೂ ಇದೆ – ಪರಿಮಿತವಾದ ವಸ್ತುಗಳು ಇರುವ ಪ್ರದೇಶದಲ್ಲಿ ಹೇಗೋ ಹಾಗೆಯೇ ಇಲ್ಲದ ಪ್ರದೇಶದಲ್ಲೂ ಇದೆ ಎಂದು ತಾತ್ಪರ್ಯ.

### ಒಳವ್ಯಾಪ್ತಿ ಹೊರವ್ಯಾಪ್ತಿಗಳಿಗೆ ಆಧಾರ ವಚನ

'ತೈತ್ತಿರೀಯ[1]' ಎಂಬ ವೇದಗ್ರಂಥದಲ್ಲಿ ಎಲ್ಲ ವಿಧವಾದ ಬ್ರಹ್ಮವಿದ್ಯೆಗಳಲ್ಲೂ ಉಪಾಸನೆ ಮಾಡಲ್ಪಡುವ ವಸ್ತುವೊಂದನ್ನು ನಿರ್ಧಾರವಾಗಿ ತಿಳಿಸುವಂತಹ 'ನಾವಿರ ತಲೆಯುವನು[2]' ಎಂಬ ವಿಭಾಗದಲ್ಲಿ, 'ಈ ಜಗತ್ತಿನಲ್ಲಿ ಏನೊಂದು ಪದಾರ್ಥ ಕಂಡುಬರುವುದೋ, ಕೇಳಿಬರುವುದೋ, ಅದೆಲ್ಲದರ ಒಳಗೂ ಹೊರಗೂ ಎಲ್ಲ ಅಂಶಗಳಲ್ಲೂ ನಾರಾಯಣನು ವ್ಯಾಪಿಸಿ ನಿಂತಿರುವನು'[3] ಎಂಬುದಾಗಿ ಬಹಳ ಸ್ಪಷ್ಟವಾಗಿ ಹೇಳಲಾಗಿದೆ.

## ಈಶಾವಾಸ್ಯ ಪ್ರಕಾಶಿಕೆ

### ಪರಮಾತ್ಮನ ಬಗ್ಗೆ ಮತ್ತೆ ಮತ್ತೆ ತಿಳಿದುಕೊಳ್ಳಬೇಕು

(ಭಾ) ಮುಖಾಂತರೇಣ ಅನುಶಾಸ್ತಿ – ಮತ್ತೆ ಮತ್ತೆ ಪ್ರವಚನ ಮಾಡುವುದೂ, ಪ್ರವಚನಗಳನ್ನು ಕೇಳುವುದೂ ಅವಶ್ಯ ಕರ್ತವ್ಯ ಎಂಬುದು ಇಲ್ಲಿಯ ಅಭಿಪ್ರಾಯ.

ಶಾಸ್ತ್ರದಲ್ಲೂ ಹೀಗೇ ಹೇಳಿದೆ – 'ಲೋಕ ವ್ಯವಹಾರಗಳನ್ನೆಲ್ಲಾ ವಿಮರ್ಶಿಸಿ......ಬೇಜಾರಾಗಿ...ಬ್ರಹ್ಮದ ಬಗ್ಗೆ ತಿಳಿಯಲು ಗುರುಗಳ ಬಳಿಗೇ ಹೋಗಬೇಕು. ಆ ಗುರುವೂ ತತ್ತ್ವತಃ ಅವನಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು[4]' ಎಂದು.

ಇಲ್ಲಿ ತತ್ತ್ವತಃ ಎಂದರೆ - ನನಗೆ ತಿಳಿಯದೆ ಇರುವ ಅಂಶ, ಅರ್ಧಂಬರ್ಧ ತಿಳಿದು ಸಂಶಯಕ್ಕೆ ಒಳಗಾಗಿರುವ ಅಂಶ, ವಿರುದ್ಧವಾಗಿ ತಿಳಿದಿರುವ ಅಂಶ, ಇವೆಲ್ಲವನ್ನೂ ಸರಿಯಾಗಿ ತಿದ್ದಿ ಎಂದರ್ಥ.

---

1. ಇದು ಯಜುರ್ವೇದದ ಒಂದು ಶಾಖೆ. ಯಾಜ್ಞವಲ್ಕ್ಯರು ಅವರ ಗುರುಗಳಾದ ವೈಶಂಪಾಯನರ ಆಜ್ಞೆಯಂತೆ ವಾಂತಿ ಮಾಡಿದ ವೇದರಾಶಿಗಳನ್ನು ಕೆಲವು ಮಹರ್ಷಿಗಳು 'ತಿತ್ತಿರೀ' ಪಕ್ಷಿರೂಪವನ್ನು ಧರಿಸಿ ಗ್ರಹಿಸಿದರು ಮತ್ತು ಪ್ರವಚನ ಮಾಡಿದರು. ಆ ವೇದರಾಶಿಗಳೇ 'ತೈತ್ತಿರೀಯ' ಶಾಖೆ.

2. ಸಹಸ್ರಶೀರ್ಷಮ್. ತೈ ನಾ. ೧೦.೧.

3. ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿ ವಾ ।
ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥ ತೈ. ನಾ. ೧೧. ೧.

4. ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್। ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್ ಪ್ರಶಾಂತಚಿತ್ತಾಯ ಶಮಾನ್ವಿತಾಯ। ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್-
ಮುಂ. ೧.೨.೧೨;೧೩.

'ಪ್ರೋವಾಚ' ಎಂಬ ಮಾತಿಗೆ ಮತ್ತೆ ಮತ್ತೆ ಹೆಚ್ಚಾಗಿ ಉಪದೇಶಿಸಬೇಕು ಎಂದರ್ಥ. ಆದುದರಿಂದಲೇ 'ಅದನ್ನು ತಿಳಿಯಬೇಕಾದರೆ (ಜ್ಞಾನಿಗಳಿಗೆ) ನಮಸ್ಕರಿಸು, ಅವರ ಯೋಗಕ್ಷೇಮಾದಿಗಳ[1] ಬಗ್ಗೆಯೂ ನನ್ನ ವಿಚಾರದ ಬಗ್ಗೆಯೂ ಹೆಚ್ಚಾಗಿ ಪ್ರಶ್ನಿಸು, ಅವರನ್ನು ಶಿಷ್ಯನಾಗಿ ಉಪಚರಿಸು' ಎಂದು ಗೀತೆಯಲ್ಲಿ ಭಗವಂತ ಹೇಳಿದ ರೀತಿಯಲ್ಲಿ ಮತ್ತೆ ಮತ್ತೆ ನಮ್ಮ ತಿಳಿವು ತಿಳಿಯಾಗಲು ತತ್ತ್ವಜ್ಞಾನಿಗಳ ಬಳಿ ಮತ್ತೆ ಮತ್ತೆ ಹೋಗಿ ಕೇಳಿ ತಿಳಿಯಬೇಕು ಎಂಬುದು. ಹೀಗಿರುವುದರಿಂದಲೇ ಭಗವಂತನು (ಗೀತೆಯನ್ನು ಅರ್ಜುನನಿಗೆ[2] ಉಪದೇಶಿಸಿದ ಮೇಲೂ ಕಾಲಾಂತರದಲ್ಲಿ) 'ಅನುಗೀತೆ[3]' ಯನ್ನು ಉಪದೇಶಿಸಿದ ಎಂದು ನಮ್ಮ ಗುರುಗಳು ಹೇಳುತ್ತಾರೆ.

**(ಭಾ)** ಅಂತರ್ಭವತಿ – ಅಣು[4]ಗಳೊಳಗೆ ಪರಮಾತ್ಮನು ಒಳಹೊಗುವುದು ಸಾಧ್ಯವಿಲ್ಲವಾದರೂ ಪರಸ್ಪರ ಘರ್ಷಣೆ ಇಲ್ಲದಿದ್ದು ಪ್ರತ್ಯೇಕವಿಲ್ಲದೆ ಒಂದೆಡೆಯೇ ಇರುವುದರಿಂದಲೇ ಇಲ್ಲಿ ಅಣುಗಳೊಳಗೆ ಸೇರಿರುವನು ಎಂಬ ಮಾತನ್ನು ಉಪಯೋಗಿಸಲಾಗಿದೆ.

ಹೀಗೆ ಹೊರಗೆ ಹರಡಿರುವುದು ಅಂದರೆ ಎಲ್ಲೆಡೆ ಹರಡಿರುವ ಆಕಾಶ ಮುಂತಾದ ವಸ್ತುಗಳನ್ನು ಬಿಟ್ಟು ಉಳಿದ ವಸ್ತುಗಳ ಹೊರಗೆ ಹರಡಿರುವುದು ಎಂದೇ ಅರ್ಥ. ಆಕಾಶಾದಿಗಳ ಹೊರಗೂ ಎಂದರ್ಥವಲ್ಲ ಎಂದು ಇಲ್ಲಿ ನಾವು ತಿಳಿದುಕೊಳ್ಳಬೇಕು.

## ಪದಾರ್ಥ ದೀಪಿಕೆ

**ತತ್, ದೂರೇ, ತತ್, ಉ, ಅಂತಿಕೇ** – ಎಲ್ಲೆಲ್ಲೂ ಇರುವ ಪರಮಾತ್ಮ ಆಸುರೀಸಂಪತ್ತಿನ – ಕೆಟ್ಟಗುಣದ ಜನರಿಗೆ ದೂರವೂ – ಸಿಗದುದೂ, ದೈವೀಸಂಪತ್ತಿನ - ಒಳ್ಳೆಯ ಗುಣದ ಜನರಿಗೆ ಬಳಿಯಲ್ಲಿಯೇ ಇರುವುದೂ ಆಗಿದೆ, **ತದಂತರಸ್ಯ......ಬಾಹ್ಯತಃ** – ಅದು ಎಲ್ಲದರ ಒಳಗೂ ಇದೆ ; ಹೊರಗೂ ಇದೆ.

## ಸುಬೋಧಿನೀ

### ಪರಮಾತ್ಮನದು ವಿಚಿತ್ರಶಕ್ತಿ

ಒಂದು ವಸ್ತು ಚಲಿಸುತ್ತಿದೆ, ಚಲಿಸದೆಯೂ ಇದೆ, ಹತ್ತಿರವೂ ಇದೆ, ದೂರದಲ್ಲೂ ಇದೆ, ಒಳಗೂ ಇದೆ, ಹೊರಗೂ ಇದೆ, ಎಂದರೆ ಇದು ಹೇಗೆ ಸಾಧ್ಯ? ಈ ಮಾತುಗಳಿಗೆ ಹೀಗೆ ವಿವರಣೆ ಕೊಡಬಹುದಷ್ಟೆ.

ಚಲನೆಯ ಫಲಿತಾಂಶವೇ ಎಲ್ಲೆಡೆ ಹರಡುವುದು, ಇದು ಚಲನೆಯಿಲ್ಲದೆ ಎಲ್ಲೆಡೆಯೂ ಹರಡಿದೆಯಷ್ಟೆ. ಎಲ್ಲದರ ಅಂತರಾತ್ಮನಾಗಿ ಹತ್ತಿರವಾಗಿ ಒಳಗಿದೆ ಹಾಗೂ ಎಲ್ಲೆಡೆ ಹರಡಿರುವುದರಿಂದ ದೂರವಾಗಿ ಹೊರಗೂ ಇದ್ದೇ

---

1. ಹೊಸದಾಗಿ ವಸ್ತುವು ಸಿಕ್ಕಿದರೆ ಅದು ಯೋಗ. ಅದನ್ನು ರಕ್ಷಿಸುವುದು ಕ್ಷೇಮ.
2. ಇವನು ಪಾಂಡವರಲ್ಲಿ ಮೂರನೆಯವನು. ಇಂದ್ರನ ವರದಿಂದ ಕುಂತಿಯಲ್ಲಿ ಹುಟ್ಟಿದವನು. ದ್ರೋಣನ ಪ್ರಿಯ ಶಿಷ್ಯ.
3. ಕೃಷ್ಣನು ಅರ್ಜುನನ ಪ್ರಾರ್ಥನೆಯಂತೆ ಗೀತಾರ್ಥಗಳನ್ನು ಮತ್ತೊಮ್ಮೆ ಹೇಳಿದನು. ಅದೇ ಅನುಗೀತೆ. ಮಹಾಭಾರತದ ಅಶ್ವಮೇಧಪರ್ವದಲ್ಲಿ ಇದೆ.
4. ಅತಿಸೂಕ್ಷ್ಮವಾದ ವಸ್ತು.

ಇದೆಯಷ್ಟೆ. ಸ್ವತಃ ಅದು ಚಲಿಸದಿದ್ದರೂ ಇತರ ಜೀವಿಗಳ ಒಳಗಿರುವುದರಿಂದ ಅವು ಚಲಿಸಿದರೆ ಇದು ಚಲಿಸಿದಂತಲ್ಲವೆ ಹಾಗೂ ತನ್ನ ದಿವ್ಯವಾದ ಅವತಾರ[1] ವಿಗ್ರಹಗಳ[2] ಮೂಲಕ ಚಲಿಸುವುದಿಲ್ಲವೆ. ಇಂತಹ ವಿಚಿತ್ರ ಶಕ್ತಿ ಸ್ವಭಾವಗಳು ಈ ಪರಮಾತ್ಮನಿಗೆ ಮಾತ್ರ ಇವೆ. ಇತರ ವಸ್ತುಗಳಿಗೆ ಇಲ್ಲ. ಎಂದು ಈ ಮಂತ್ರದಲ್ಲೂ ಹಿಂದಿನ ಮಂತ್ರದಲ್ಲಿ ತಿಳಿಸಿದಂತೆಯೇ ಪರಮಾತ್ಮನ ವಿಭಿನ್ನತೆಯನ್ನು ತಿಳಿಸಿದಂತಾಯಿತು.

# ಶ್ರೀರಂಗಾಚಾರ್ಯರ ವ್ಯಾಖ್ಯಾನ

## ಪರಮಾತ್ಮನ ಕೆಲವು ಗುಣಗಳು

ಪರಮಾತ್ಮನು ಭಕ್ತರ ವಿಷಯದಲ್ಲಿ ಹಸುವು ಕರುವಿನ ಬಗ್ಗೆ ಇರುವಂತೆ ಅವರಿಗೆ ಯಾವಾಗ ಏನು ತೊಂದರೆಯಾದೀತೋ ಎಂಬಂತೆ ಕಂಪಿಸುವನು ಹಾಗೂ ಎಂತಹ ಶತ್ರುಗಳಿಗೂ ಹೆದರದೆ ನಿಷ್ಕಂಪನಾಗಿಯೂ[3] ಇರುವನು. ಭಕ್ತ ಜನರಿಗೆ ಸುಲಭನೂ ಭಕ್ತರಲ್ಲದವರಿಗೆ ದುರ್ಲಭನೂ ಆಗಿರುವನು.

## ಎಲ್ಲದರ ಒಳಗೂ ಹೊರಗೂ ಪರಮಾತ್ಮ ಹೇಗೆ ?

ಪರಮಾತ್ಮ ಅಣುಅಣುಗಳ ಒಳಗೂ ಸಂಚರಿಸುವಷ್ಟು ಸೂಕ್ಷ್ಮನೂ ಆಗಿದ್ದು, ನಾವು ಬಹಳ ಹಿರಿದೆಂದು ತಿಳಿದಿರುವ ಆಕಾಶ ಮುಂತಾದವನ್ನು ಆವರಿಸುವಷ್ಟು ಹಿರಿದಾಗಿಯೂ ಇರುವನು, ಎಂದು ಉಪನಿಷತ್ತಿನ ವಚನಗಳು ಘೋಷಿಸುತ್ತವೆ. ಈ ವಚನಗಳನ್ನು ವೇದವ್ಯಾಸರು ಬ್ರಹ್ಮಸೂತ್ರದಲ್ಲಿ ಗಮನಿಸಿ ಇಂತಹ ಶಕ್ತಿ ಸ್ವಭಾವಗಳು ಪರಮಾತ್ಮನಿಗೆ ಇರುವುದಾಗಿ ಒಪ್ಪಲೇಬೇಕೆಂದು ನಿರ್ಣಯಿಸಿದಾರೆ. ಇದೇ ರೀತಿಯ ಸ್ಮೃತಿ, ಇತಿಹಾಸ, ಪುರಾಣ ವಚನಗಳೂ, ಪ್ರಾಚೀನ ಆಚಾರ್ಯರೆಲ್ಲರ[4] ವಚನಗಳೂ ಇವೆ. ಹಾಗೂ ನಾವು ವೈಜ್ಞಾನಿಕವಾಗಿ ವಿಮರ್ಶಿಸಿದರೆ ಎಲ್ಲ ವಸ್ತುಗಳಿಗೂ ಮತ್ತೊಂದು ಪದಾರ್ಥದೊಳಗೆ ಪ್ರವೇಶಿಸಲು ಶಕ್ತಿಯಿಲ್ಲದಿದ್ದರೂ ಕೆಲವು ವಸ್ತುಗಳಿಗೆ ಅಂತಹ ಶಕ್ತಿ ಇರುವುದು ತಿಳಿದು ಬರುವುದು. ಉದಾಹರಣೆಗೆ ಗಾಜಿನೊಳಗೆ ಗಾಳಿ ನೀರು ಪ್ರವೇಶಿಸಲಾರವಾದರೂ ಬೆಳಕು ಪ್ರವೇಶಿಸಿಯೇ ತೀರುವುದು. ಬೆಳಕಿನ ಪ್ರವೇಶಕ್ಕೆ ಗಾಜಿನಲ್ಲಿ ಬಿರುಕಾಗಲಿ, ಶಿಥಿಲತೆಯಾಗಲಿ, ಟೊಳ್ಳಾಗಲಿ ಇರಬೇಕಾದ ಅವಶ್ಯಕತೆ ಇಲ್ಲವಷ್ಟೆ. ಹೀಗೆ ಅಣುಗಳೊಳಗೂ ಅಣುತರವಾಗಿ ಪರಮಾತ್ಮ ಇರಬಲ್ಲ. ಹಾಗೆಯೇ ಈ ಜಗತ್ತೆಲ್ಲವನ್ನೂ ಒಟ್ಟುಗೂಡಿಸಿದರೆ ಅದು ಪರಮಾತ್ಮನ ಒಂದು ಅಲ್ಪಾಂಶ ಎನ್ನಬಹುದು. ಆಕಾಶ, ಕಾಲ, ವೈಕುಂಠ ಮುಂತಾದ ಎಲ್ಲವೂ ಒಂದು ಪರಿಮಿತಿಗೊಳಪಟ್ಟಿರುವುವಲ್ಲವೇ? ನಿತ್ಯಮುಕ್ತರ ಜ್ಞಾನಗಳಿಗೂ ಕೆಲವು ಕಾಲಗಳಲ್ಲಿ

---

1. ಪರಮಾತ್ಮನು ಭಕ್ತರ ಅನುಗ್ರಹಕ್ಕಾಗಿ ಅವರ ಕೋರಿಕೆಯಂತೆ ರೂಪ ತಾಳುವುದು.
2. ಪ್ರಪಂಚ ತತ್ತ್ವಗಳನ್ನು ಒಟ್ಟುಗೂಡಿಸಿ ಧ್ಯಾನಕ್ಕೆ ವಿಷಯೀಕರಿಸಲು ಯೋಗ್ಯವಾದ ಪರಮಾತ್ಮನ ರೂಪ.
3. ಭಯದಿಂದ ನಡುಗದಿರುವಿಕೆ.
4. ವ್ಯಾಸ,ಬೋಧಾಯನ, ಜೈಮಿನಿ, ಟಂಕ, ದ್ರಮಿಡ, ಗುಹದೇವ, ಆಪಸ್ತಂಬ. ಭಾರುಚಿ, ಕಪರ್ದಿ, ಪರಾಂಕುಶ, ಪರಕಾಲ, ನಾಥಮುನಿ, ಯಾಮುನ ಮುನಿ, ರಾಮಾನುಜರೇ ಮುಂತಾದವರು.

ಪರಮಾತ್ಮನ ಇಚ್ಛಾಧೀನವಾಗಿ ಸಂಕೋಚ - ವಿಕಾಸಗಳು ಉಂಟೆಂಬುದು ಇತಿಹಾಸ[1] ಪುರಾಣಗಳಲ್ಲಿ[2] ಪ್ರಸಿದ್ಧ ವಾಗಿರುವುದರಿಂದ ಅವೂ ಪರಿಮಿತವಾಗಿವೆ. ಆದುದರಿಂದ ಪರಮಾತ್ಮನೊಬ್ಬನೇ ಯಾವ ಪರಿಮಿತಿಗೂ ಒಳಗಾಗದವನು.

## ನಾಲ್ಕು ಐದನೆಯ ಮಂತ್ರಗಳ ಸಾರ

ಪರಮಾತ್ಮನಿಗೆ ಎಲ್ಲದಕ್ಕಿಂತ ಪ್ರಬಲ ಮತ್ತು ಉತ್ತಮವಾದ ಶಕ್ತಿ ಇದೆ. ಪರಮಾತ್ಮನು ಎಲ್ಲದರ ಅಂತರಾತ್ಮ ಎಂಬ ಈ ಎರಡು ವಿಚಾರಗಳಿಂದ ಜಡ – ಜೀವಮಯವಾದ ಈ ಜಗತ್ತಿಗೆ ಪರಮಾತ್ಮನೇ ಆತ್ಮಾ ಎಂದೂ ಎಲ್ಲವೂ ಅವನ ಶರೀರವೆಂದೂ ತಿಳಿಸಿದಂತಾಯಿತು.

---

1. ಒಂದೆ ಕಾಲವಿಶೇಷದಲ್ಲಿ ನಡೆದ ವಿಷಯಗಳನ್ನು ಸಂಗ್ರಹಿಸಿ ಬರೆದಿರುವ ಗ್ರಂಥಗಳು. ಉದಾ: ರಾಮಾಯಣ, ಮಹಾಭಾರತ ಮುಂತಾದವು.
2. ಪ್ರಪಂಚದ ಸೃಷ್ಟಿ, ಪ್ರಳಯ, ಮನ್ವಂತರ, ರಾಜರವಂಶ ಇವುಗಳನ್ನು ತಿಳಿಸುವ ಗ್ರಂಥಗಳು. ಉದಾ: ವಿಷ್ಣುಪುರಾಣ, ವರಾಹಪುರಾಣ, ಮುಂತಾದವು.



# ಈಶಾವಾಸ್ಯೋಪನಿಷತ್

## ಮಂತ್ರ ಆರು

**ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯತಿ।**

**ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥೬॥**

### ಅನ್ವಯಾನುಸಾರ ಪ್ರತಿಪದಾರ್ಥ

ಯಃ, ತು – ಯಾವನಾದರೂ ಈ ತತ್ತ್ವ ತಿಳಿದವನ ; ಆತ್ಮನಿ, ಏವ – ಎಲ್ಲವನ್ನು ಒಳಗೂ ಹೊರಗೂ ವ್ಯಾಪಿಸಿ ಪಡೆದು ಧರಿಸಿರುವ ಪರಮಾತ್ಮವಸ್ತುವಿನ ಆಸರೆಯಲ್ಲೇ ಸರ್ವಾಣಿ - ಜಡಜೀವಗಳೆಂಬ ಎಲ್ಲ; ಭೂತಾನಿ - ವಸ್ತುಗಳನ್ನೂ; ಚ - ಮತ್ತು; ಸರ್ವಭೂತೇಷು - ಆ ಎಲ್ಲ ವಸ್ತುಗಳಲ್ಲೂ; ಆತ್ಮಾನಂ - ಪರಮಾತ್ಮನನ್ನೂ; ಅನುಪಶ್ಯತಿ - ನಿರಂತರವಾಗಿ ಪರಿಶೀಲಿಸುವನೋ (ಅವನು); ತತಃ - ಆ ಯಾವುದೇ ವಸ್ತುವಿಂದಲೂ; ನ, ವಿಜುಗುಪ್ಸತೇ - ಬೇಸರಗೊಳ್ಳುವುದಿಲ್ಲ.

### ಛಾಯಾಪದ್ಯ

ಆವನು ಎಲ್ಲಾ ಭೂತಗಳಂ ಆತ್ಮದಿ ನೋಡುತಲಿರುತಿಹನೋ

ಎಲ್ಲಾ ಭೂತಗಳೊಳಗೂ ಆತ್ಮವನದರಿಂ ಬೇಸರಗೊಳ್ಳನಲಾ

## ತಾತ್ಪರ್ಯಾರ್ಥ

### ಬ್ರಹ್ಮಾನುಸಂಧಾನಫಲ

"ಈಶಾ" ಎಂಬ ಪದದಿಂದ ತಿಳಿಸಲ್ಪಟ್ಟ ಪರಮೇಶ್ವರನು, ನಿಯಾಮಕನೂ, ಪ್ರೇರಕನೂ ಆಗಿ ಎಲ್ಲ ವಸ್ತುಗಳ ಒಳಭಾಗದಲ್ಲಿ ಅಲ್ಲದೆ ಹೊರಭಾಗದಲ್ಲೂ ಇದ್ದಾನೆಂದು ಹಿಂದಿನ ಎರಡು ಮಂತ್ರಗಳು ತಿಳಿಸುತ್ತಾ, ಆತನ ಅಂತರ್ವ್ಯಾಪ್ತಿ[1] ಬಹಿರ್ವ್ಯಾಪ್ತಿ[2]ಯನ್ನು ವಿವರಿಸಿ ಜಗತ್ತೆಲ್ಲ ಬ್ರಹ್ಮಾತ್ಮಕವೆಂದು[3] ಪ್ರಕಾಶಪಡಿಸಿದವು.

ಯಸ್ತು ಸರ್ವಾಣಿ ಎಂಬ ಮಂತ್ರವು, ಜಗತ್ತನ್ನೇ ಪರಬ್ರಹ್ಮಾತ್ಮಕವೆಂದು ಭಾವಿಸುವ ಜ್ಞಾನಿಗೆ ದೊರಕುವ ಫಲವನ್ನು ತಿಳಿಸುತ್ತದೆ.

### ಕೃಷ್ಣನ ಸಂದೇಶ

"ಸಾವಿರಾರು ಮನುಷ್ಯರಲ್ಲಿ ಒಬ್ಬನು ಮಾತ್ರ ನನ್ನ ಕಡೆಗೆ ಒಲವು ತೋರಿಸುತ್ತಾನೆ. ಒಲವು ತೋರಿದ ಸಾವಿರಾರು ಮಂದಿಯಲ್ಲಿ ಒಬ್ಬನು ಮಾತ್ರ ನನ್ನನ್ನು ಕಾಣಲು ತವಕಿಸುತ್ತಾನೆ. ತವಕಿಸುವ ಸಾವಿರಾರು ಮಂದಿಯಲ್ಲಿ ಒಬ್ಬನಾದರೂ ನನ್ನನ್ನು ಯಥಾರ್ಥವಾಗಿ ಕಾಣುವನೋ ಇಲ್ಲವೋ"ಎಂದು ಶ್ರೀಕೃಷ್ಣನು ಗೀತೆಯಲ್ಲಿ ಬ್ರಹ್ಮಜ್ಞಾನಿಯ ಅತಿವಿರಳತೆಯನ್ನು ತಿಳಿಸಿರುವನು.

---

1. ಪರಮಾತ್ಮನನ್ನೇ ಆತ್ಮನನ್ನಾಗಿ ಹೊಂದಿರುವಿಕೆ.
2. ಎಲ್ಲ ವಸ್ತುಗಳ ಆವರಿಸಿರುವಿಕೆಯನ್ನು.
3. ಪರಮಾತ್ಮನನ್ನೇ ಆತ್ಮವಾಗಿ ಉಳ್ಳದ್ದು.

### ಜ್ಞಾನಿಯ ದೃಷ್ಟಿ

ಇಂತಹ ದುರ್ಲಭನಾದ ಜ್ಞಾನಿಯು, ಚತುರ್ಮುಖ ಬ್ರಹ್ಮ ಮೊದಲಾದ ಪದಾರ್ಥಗಳೆಲ್ಲವೂ ಪರಮಾತ್ಮನಲ್ಲಿ ಅಡಗಿರುವುದಾಗಿ ಭಾವಿಸುತ್ತಾನೆ. ಅಲ್ಲದೆ ಎಲ್ಲಾ ಪದಾರ್ಥಗಳಲ್ಲಿಯೂ ನಿಯಾಮಕನೂ[1] ಪ್ರೇರಕನೂ[2] ಆದ ಏಕಾಕಾರನಾದ[3] ಪರಬ್ರಹ್ಮನನ್ನು ಕಾಣುತ್ತಾನೆ. ಅವನಿಗೆ ಜಗತ್ತಿನ ಎಲ್ಲ ವಸ್ತುವೂ ಪರಮಾತ್ಮನಂತೆ ಗೋಚರಿಸುವುದು.

### ಶಾಂತಿಯ ನೆಲೆ

ಜ್ಞಾನಿಯು ಜಗತ್ತನ್ನು ಬ್ರಹ್ಮಾತ್ಮಕವಾಗಿ ಕಾಣುವುದರಿಂದ ಪ್ರತಿಯೊಂದು ಪದಾರ್ಥವನ್ನೂ ಪೂಜ್ಯಭಾವದಿಂದಲೂ ಪವಿತ್ರಭಾವದಿಂದಲೂ ನೋಡುತ್ತಾನೆ. ಯಾವುದನ್ನೂ ಹೀನ ದೃಷ್ಟಿಯಿಂದಾಗಲೀ, ಕೀಳು ದೃಷ್ಟಿಯಿಂದಾಗಲೀ ನೋಡುವುದಿಲ್ಲ. ಇತರರಿಂದ ತನಗೆ ಕಷ್ಟ ನಷ್ಟಗಳಾಗಲೀ ಸುಖ ಸಂತೋಷಗಳಾಗಲೀ ದೊರೆತಾಗ ತನ್ನ ಪಾಪ ಪುಣ್ಯಗಳಿಗೆ ಅನುಗುಣವಾದ ಫಲವನ್ನು ಪರಮಾತ್ಮನೇ ತನ್ನ ಕೈಗಳಂತಿರುವ ಇತರರಿಂದ ಕೊಡಿಸಿದನೆಂದು ಭಾವಿಸುತ್ತಾನೆ. ಈತನು ಯಾರನ್ನೂ ದ್ವೇಷಿಸದೆ, ಮೆಚ್ಚದೆ ಶಾಂತಚಿತ್ತನಾಗಿರುತ್ತಾನೆ. ಶಾಂತಚಿತ್ತನು ಪುಣ್ಯಪಾಪಗಳನ್ನು ಸಂಪಾದಿಸುವುದಿಲ್ಲ. ಶಾಂತತೆಯಿಂದ ಶಾಶ್ವತ ಸುಖವನ್ನು ಪಡೆಯುವನು.

## ವೇದಾಂತಾಚಾರ್ಯ ಭಾಷ್ಯ

ಹೀಗೆ ಎಲ್ಲಕ್ಕೂ ಆಶ್ರಯವಾಗಿ ಒಳಗಿರುವುದರಿಂದ ಎಲ್ಲಕ್ಕೂ ಬ್ರಹ್ಮವೇ ಆತ್ಮ ಎಂದು ಹೇಳಿ ಆಯಿತು. ಈ ನಂತರ ಅದೆಲ್ಲವನ್ನೂ ಅರಿತವನಿಗೆ ಆ ಅರಿವಿನ ಸಮಯದಲ್ಲಾಗುವ ಪ್ರಯೋಜನವನ್ನು ತಿಳಿಸುತ್ತಾನೆ. "ಯಸ್ತು.....................ಜುಗುಪ್ಸತೇ" ಎಂದು.

### ಪದಗಳ ವಿವರಣೆ

ಬ್ರಹ್ಮಜ್ಞಾನಿಯ ಒಂದು ವಿಶೇಷ ಮಹತ್ವ ಇರುವುದನ್ನು ಸೂಚಿಸಲೆಂದೇ "ತು" ಎಂಬ ಪದವನ್ನು ಪ್ರಯೋಗಿಸಲಾಗಿದೆ.

**ಸರ್ವಾಣಿ, ಭೂತಾನಿ :-** ಚತುರ್ಮುಖ ಬ್ರಹ್ಮನಿಂದ ತೊಡಗಿ ಮರ, ಗಿಡ, ಕಲ್ಲು, ಮಣ್ಣಿನವರೆಗಿನ ಎಲ್ಲವನ್ನೂ.

### ಆತ್ಮಶಬ್ದದ ಸ್ವಾಭಾವಿಕವಾದ ಅರ್ಥ

ಇಲ್ಲಿರುವ ಆತ್ಮ ಶಬ್ದವನ್ನು ಕೇವಲ ಆಯಾಶರೀರಗಳಿಗೆ ಮಾತ್ರ ಆತ್ಮ ಎನಿಸುವ ಜೀವಾತ್ಮ ಎಂಬ ಅರ್ಥದಲ್ಲಿ ಹೊಂದಿಕೆಗೊಳಿಸಿ ಪ್ರಯೋಗಿಸಲು ಏನೊಂದೂ ಆಧಾರ ಇಲ್ಲದಿರುವುದರಿಂದಲೂ ಅದು ಪರಮಾತ್ಮ ವಿಷಯದ ಪ್ರಸಂಗವಾಗಿದ್ದು ಸ್ವಾಭಾವಿಕವಾದ ಅರ್ಥವೇ ಆದಂತಹ, ಎಲ್ಲದಕ್ಕೂ ಅಂತರಾತ್ಮನಾದ ಪರಮಾತ್ಮ

---

1. ಸಮಸ್ತ ವಸ್ತುಗಳನ್ನೂ ತನ್ನ ಅಧೀನದಲ್ಲಿ ಇಟ್ಟುಕೊಂಡಿರುವವನು.
2. ಎಲ್ಲ ಜೀವರಾಶಿಗಳನ್ನೂ ಕಾರ್ಯದಲ್ಲಿ ತೊಡಗಿಸುವವನು.
3. ಸ್ವರೂಪ ಮತ್ತು ಸ್ವಭಾವಗಳಲ್ಲಿ ಬದಲಾವಣೆಯಿಲ್ಲದವನು.

ಎಂಬ ಅರ್ಥದಲ್ಲೇ ಉಪಯೋಗಿಸಿಕೊಳ್ಳಬೇಕು. 'ಏವ' ಎಂಬ ಪದಕ್ಕೆ "ಎಲ್ಲಕ್ಕೂ ಭೂಮಿ ಮುಂತಾದವೇ ಆಸರೆಯಾಗಿ ಕಂಡುಬಂದರೂ, ಅವುಗಳ ಮೂಲಕ ಎಲ್ಲವೂ ಆ ಪರಮಾತ್ಮನ ಆಸರೆಯಲ್ಲೇ ಇವೆ" ಎಂದು ಅಭಿಪ್ರಾಯ.

**ಅನುದರ್ಶನ**

**ಅನುಪಶ್ಯತಿ** :— ನಿರಂತರವಾಗಿ ಮಧ್ಯೆ ವಿಚ್ಛೇದ[1] ವಿಲ್ಲದಂತೆ, ಸ್ಪಷ್ಟವಾಗಿ ಕಣ್ಣಿಗೆ ಕಟ್ಟುವಂತೆ ಮನಸ್ಸಿನಲ್ಲಿ ಭಾವಿಸಿ ಧ್ಯಾನಿಸುತ್ತಾನೆ.

**ಪರಮಾತ್ಮನಿಗೆ ಇತರ ವಸ್ತುಗಳು ಆಧಾರವಲ್ಲ**

**ಸರ್ವಭೂತೇಷು, ಚ, ಆತ್ಮಾನಂ** :— ಎಂಬ ಇದು ಪರಮಾತ್ಮವ್ಯಾಪ್ತಿಯನ್ನು ಮಾತ್ರ ತಿಳಿಸುತ್ತದೆ: ಅವನನ್ನು ಅವುಗಳಾವುವೂ ಧರಿಸಿರಲು ಸಾಧ್ಯವಿಲ್ಲ ಎಂಬುದೇ ಇದಕ್ಕೆ ಕಾರಣ.

ಇಲ್ಲಿ ಅವನು ಎಂಬ ಒಂದು ಪದವನ್ನು ಯಾವನು ಎಂದು ಹಿಂದೆ ಹೇಳಿರುವುದರ ಪ್ರತಿನಿಧಿಯಾಗಿ ಇಟ್ಟುಕೊಳ್ಳಬೇಕು.

**ಬ್ರಹ್ಮಜ್ಞಾನದ ತತ್ಕಾಲದ ಫಲ**

**ತತೋ, ನ, ವಿಜುಗುಪ್ಸತೇ** :- ಎಲ್ಲವೂ ಬ್ರಹ್ಮನಿಂದ ವ್ಯಾಪಿಸಲ್ಪಟ್ಟು, ಅವನ ಆಸರೆಯಲ್ಲಿವೆಯಾಗಿ; ಎಲ್ಲಕ್ಕೂ ಅವನೇ ನಿಜವಾದ ಆತ್ಮ, ಎಲ್ಲವೂ ಅವನ ಶರೀರ ಎಂಬುದಾಗಿ ನಿರಂತರವಾಗಿ ಚಿಂತನ ಮಾಡಿರುವುದರಿಂದ ತನ್ನ ಆತ್ಮವ ಆಸ್ತಿ ಎಂಬ ಲೌಕಿಕ ಸ್ವಭಾವದ ನಿಯಮದಂತೆ, ಆ ಪರಮಾತ್ಮನ ಐಶ್ವರ್ಯವೆನಿಸುವ ಯಾವುದೇ ಲೌಕಿಕ ಪದಾರ್ಥಗಳಿಂದ, ಅಂತಹ ಜ್ಞಾನಿಗೆ ಬೇಜಾರಾಗಲಿ ಅಸಹ್ಯಭಾವವಾಗಲಿ ಉಂಟಾಗುವುದಿಲ್ಲ. ಅವನು ಯಾವ ವಸ್ತುವನ್ನಾಗಲಿ ವಿಷಯವನ್ನಾಗಲಿ ತೆಗಳುವುದಿಲ್ಲ ಎಂದು ಭಾವಾರ್ಥ.

# ಈಶಾವಾಸ್ಯ ಪ್ರಕಾಶಿಕೆ

**ಅನುದರ್ಶನ** :— ಇದನ್ನು ನಿದಿಧ್ಯಾಸನ[2] ಎಂಬ ಪರ್ಯಾಯ ಶಬ್ದದಿಂದ ವ್ಯವಹರಿಸಲಾಗಿದೆ.

**ತತಃ** :— ಇಲ್ಲಿ 'ಏಳನೆಯ ವಿಭಕ್ತಿಯ' "ಅಲ್ಲಿ" ಎಂಬ ಅರ್ಥದಲ್ಲಿ ''ತಸಿ'' (ಅದರ ಕಡೆಯಿಂದ) ಎಂಬ ಪ್ರತ್ಯಯ ಬಂದಿದೆ. ಯಾವ ಪದಾರ್ಥದ ಬಗ್ಗೆಯೂ ಎಂದರ್ಥ.

(ಭಾ) ಸ್ವಾತ್ಮಭೂತಿನ್ಯಾಯಃ — ಸ್ವಾತ್ಮವಿಭೂತಿ ನ್ಯಾಯ.[3]

# ಪದಾರ್ಥ ದೀಪಿಕೆ

ಜಗತ್ತೆಲ್ಲವೂ ಪರಮಾತ್ಮನ ಶರೀರ ಎಂದು ಧ್ಯಾನಿಸುವ ಉಪಾಸಕನು ಯಾವುದೇ ಪ್ರಾಪಂಚಿಕ[4] ಅಂಶದ ಬಗ್ಗೆಯೂ ಅಸಹ್ಯವಾಗಲಿ, ಬೇಸರವಾಗಲಿ ಪಡಬಾರದು ಎಂದು ಈ ಮಂತ್ರ ತಿಳಿಸುತ್ತದೆ.

---

1. ಪರಮಾತ್ಮನ ಸ್ಮರಣದಲ್ಲಿ ಬೇರೆ ವಿಷಯಗಳನ್ನು ಕೂಡಿಸುವುದು.
2. ಪರಮಾತ್ಮನನ್ನು ಏಕಾಕಾರವಾಗಿ ಚಿಂತಿಸುವುದು.
3. ಜೀವಾತ್ಮನು ಪರಮಾತ್ಮನಿಗೆ ಶೇಷವೆಂದು ಧ್ಯಾನಿಸುವುದು.
4. ಕಣ್ಣಿಗೆ ಕಾಣುವ ಜಗತ್ತಿನಲ್ಲಿರುವ ವಸ್ತುಗಳು.

# ಸುಬೋಧಿನೀ

ಎಲ್ಲದಕ್ಕೂ ಪರಮಾತ್ಮನೇ ಆತ್ಮನಾಗಿದ್ದಾನೆ. ಈತನೇ ಎಲ್ಲದರ ಒಳಹೊಕ್ಕು ಸ್ವಾಮಿಯಾಗಿ ನಿಯಂತ್ರಿಸು ವವನು ಎಂಬ ನಿರ್ಣಯವನ್ನು ಮತ್ತೆ ಮತ್ತೆ ಮನಸ್ಸಿನಲ್ಲಿ ಬೇರೂರಿಸಿಕೊಳ್ಳುವವರಿಗೆ ಆಗುವ ವಿಶೇಷರೀತಿಯ ಅನುಭವಗಳನ್ನು ಈಗ ಮುಂದೆ ತಿಳಿಸಲಾಗುವುದು.

ಮಣಿಗಳು ಮಣಿಸರದಲ್ಲಿ ಸ್ವತಂತ್ರ ಮತ್ತು ಪ್ರತ್ಯೇಕ ಎಂಬಂತೆ ದೂರದಿಂದ ಕಂಡು ಬಂದರೂ, ವಾಸ್ತವ ವಾಗಿ ಒಳಗೆ ಒಂದು ದಾರಕ್ಕೆ ಅವು ಪರತಂತ್ರವಾಗಿದ್ದು ಪ್ರತ್ಯೇಕವಾಗಿ ಹರಿದು ಹಂಚಿಹೋಗಲು ಸಾಧ್ಯವಿಲ್ಲ ವಾಗಿವೆಯಷ್ಟೆ. ಹೀಗೆ ಪರಮಾತ್ಮನ ವಶದಲ್ಲಿ ಜಗತ್ತೆಲ್ಲವೂ ಇದೆ ಎಂದು ತಾತ್ವಿಕವಾದ ವಿಚಾರವನ್ನು ಭಾವಿಸು ವವರಿಗೆ ಈ ದುಃಖಮಯವಾದ ಜಗತ್ತಿನ ಯಾವುದೇ ವಿಚಾರಗಳಿಂದಲೂ ಅಸಹ್ಯವಾಗಲಿ, ಬೇಜಾರಾಗಲಿ ಉಂಟಾಗುವುದಿಲ್ಲ. ಎಲ್ಲವೂ ದೇವರ ಶರೀರವಾದುದರಿಂದ ಎಲ್ಲವನ್ನೂ ದೈವೀಭಾವನೆಯಿಂದಲೇ ಕಾಣುವನೇ ಹೊರತು ಯಾವುದನ್ನೂ ಆಕ್ಷೇಪಿಸುವುದಿಲ್ಲ ಎಂದು ಭಾವಾರ್ಥ.

# ಶ್ರೀರಂಗಾಚಾರ್ಯರ ವ್ಯಾಖ್ಯಾನ

ಪರಮಾತ್ಮ ಹೊರತು ಉಳಿದ ಎಲ್ಲವೂ ಪರಮಾತ್ಮನ ಅಧೀನದಲ್ಲೇ ಇದೆಯೆಂದು ಮನಸ್ಸಿನಲ್ಲೇ ಮುಲುಕು ಹಾಕುವಂತಹ ಜ್ಞಾನಿ ಲಕ್ಷಕ್ಕೆ ಒಬ್ಬ ಇರಬಹುದಷ್ಟೆ. ಅಂತಹವನು ಜಗತ್ತಿನಲ್ಲಿ ತನಗೆ ಏನೇ ಕೆಟ್ಟದಾದರೂ ಬೇಸ ಗೊಳ್ಳುವುದಿಲ್ಲ. ಬ್ರಹ್ಮಜ್ಞಾನಿಯು ಜಗತ್ತಿನ ಬಗ್ಗೆ ಖೇದವನ್ನು ಖೇದಕ್ಕೆ ಕಾರಣವಾದವರಲ್ಲಿ ದ್ವೇಷವನ್ನೂ ದ್ವೇಷದಿಂದ ಅವರ ಬಗ್ಗೆ ಕೆಟ್ಟದ್ದನ್ನೂ ಮಾಡುತ್ತಾ ಹೋದರೆ ಇವನೂ ಸಂಸಾರಿಗಳಿಗಿಂತ ಕಡೆಯಾಗಿ ಕೆಟ್ಟು ಹೋಗುವನಲ್ಲವೆ? ಹಾಗಾಗದಿರಲು ಜಗತ್ತಿನ ಬಗ್ಗೆ ಬೇಸರ ಅಸಹ್ಯ ಖೇದಗಳನ್ನು ಮಾಡಿಕೊಳ್ಳಬಾರದೆಂದೂ, ಹಾಗೂ ಎಲ್ಲವೂ ಪರಮಾತ್ಮನ ಶರೀರವೆಂದು ನಿಜವಾಗಿ ಭಾವಿಸಿದರೆ ಜಗತ್ತು ಸಹ ಬ್ರಹ್ಮಜ್ಞಾನಿಗೆ ಪರಮಾತ್ಮ ನಷ್ಟೇ ಪ್ರಿಯವಾದೀತಲ್ಲವೆ?

### ಪಾಠಾಂತರ ವಿಚಾರ

ಈ ಮಂತ್ರದಲ್ಲಿ 'ಆತ್ಮನ್ನೇವ' ಎಂದೂ ವಿಚಿಕಿತ್ಸತಿ' ಎಂದೂ ಮಾಧ್ಯಂದಿನರ ಪಾಠವಿದೆ. 'ಆತ್ಮನ್' ಎಂದರೆ 'ಆತ್ಮನಿ' ಎಂದೇ ಅರ್ಥ. ಸಪ್ತಮೀ ವಿಭಕ್ತಿಗೆ ಲೋಪವಾಗಿದೆಯಷ್ಟೆ.

'ವಿಚಿಕಿತ್ಸತಿ ಎಂದರೆ ಸಂಶಯ ಪಡಲಾಗದ ತತ್ತ್ವದ ಬಗ್ಗೆ ನಿಶ್ಚಯವಿರುವುದರಿಂದ ಯಾವ ಚರ್ಚೆಗಳಿಂದಲೂ ತಲೆಕೆಡಿಸಿಕೊಳ್ಳುವುದಿಲ್ಲ ಎಂದು ಭಾವಾರ್ಥ. ಆಗ 'ತತಃ' ಎಂಬ ಪದಕ್ಕೆ ಯಾವುದೇ ಜಗತ್ತಿನ ವಿಚಾರದಲ್ಲೂ ಎಂದು ಅರ್ಥ. ಇಲ್ಲಿ 'ವಿಚಿಕಿತ್ಸತಿ' ಎಂಬ ಶಬ್ದವು ಕೈಯ್ಯಟಾಚಾರ್ಯರ ವ್ಯಾಕರಣವಚನಾನುಸಾರವಾಗಿ ಸರಿ ಯಾಗಿದೆಯೆಂದೂ ತಿಳಿಯಬಹುದು.



# ಈಶಾವಾಸ್ಯೋಪನಿಷತ್

## ಮಂತ್ರ ಏಳು

ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ ವಿಜಾನತಃ।

ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ॥

### ಅನ್ವಯಾನುಸಾರ ಪ್ರತಿಪದಾರ್ಥ

ವಿಜಾನತಃ - ಮೇಲೆ ತಿಳಿಸಿದಂತಹ ವಿಶೇಷ ರೀತಿಯ ಜ್ಞಾನ ಇರುತ್ತಿರುವವನಿಗೆ; ಯಸ್ಮಿನ್ - ಪರಮಾತ್ಮನನ್ನು ಅನುಸಂಧಾನ ಮಾಡುವ ಯಾವುದೇ ಕಾಲದಲ್ಲಿ; ಆತ್ಮಾ, ಏವ - ಪರಮಾತ್ಮ ವಸ್ತುವೇ; (ಶರೀರಾತ್ಮಭಾವ ಸಂಬಂಧದಿಂದ) ಸರ್ವಾಣಿ - ಈ ಎಲ್ಲ; ಭೂತಾನಿ - ಜಡಗಳೂ ಜೀವಗಳೂ ಎಂಬ ಜ್ಞಾನವು; ಅಭೂತ್ - ಇರುವುದೋ; ತತ್ರ - ಆ ಪರಮಾತ್ಮೋಪಾಸನ ಕಾಲದಲ್ಲಿ; ಏಕತ್ವಂ - ಪರಮಾತ್ಮನೇ ಪ್ರಧಾನನೆಂದೂ ಜಡ ಮತ್ತು ಜೀವಗಳೂ ಅವನಿಗೆ ಬಿಡಿಸಲಾಗದಂತಹ ಶರೀರವಾದುದರಿಂದ ಅವನೊಡನೆ ಒಂದಾಗಿರುವುದೆಂದೂ ಈ ವಿಶಿಷ್ಟವಾದ ಏಕತೆಯನ್ನು; ಅನುಪಶ್ಯತಃ - ನಿರಂತರವಾಗಿ ಅನುಭವಿಸುತ್ತಿರುವ ಅವನಿಗೆ ಮೋಹಃ - ತಾನು ಸ್ವತಂತ್ರ ಎಂಬ ಮೋಹವು; ಕಃ - ಎಲ್ಲಿಯದು; ಶೋಕಃ – ತನ್ನದು ಎಂಬ ಕಾರಣದಿಂದಾಗುವ ದುಃಖವು; ಕಃ – ಎಲ್ಲಿಯದು; (ಎಲ್ಲವೂ ಪರಮಾತ್ಮನೇ ಎಲ್ಲವೂ ಪರಮಾತ್ಮನದೇ ಆದುದರಿಂದ ಮೋಹವಾಗಲಿ ಶೋಕವಾಗಲಿ ಸ್ವಲ್ಪವೂ ಇರುವುದಿಲ್ಲ)

### ಛಾಯಾಪದ್ಯ

ಎಲ್ಲಿ ಭೂತಗಳೆಲ್ಲ ಆತ್ಮವೆ ಆಯಿತೆಂದರಿವಾಂತನೋ;

ಅಲ್ಲಿ ಏಕತೆ ಬಿಡದೆ ನೋಳ್ಪಗೆ ಮೋಹವೇನಿರಶೋಕವೇಂ?

## ತಾತ್ಪರ್ಯಾರ್ಥ

### ಪರಬ್ರಹ್ಮಾನುಸಂಧಾನದಫಲ

ಸದ್ವಿಷಯಗಳನ್ನು ತಿಳಿದುಕೊಳ್ಳುವುದೇ ಕಷ್ಟ. ಒಂದು ರೀತಿಯಲ್ಲಿ ಅವುಗಳನ್ನು ಒಮ್ಮೆ ತಿಳಿಸುವುದರಿಂದ ಅವು ಮನಮುಟ್ಟಲಾರವು. ಮನಮುಟ್ಟಿ ಸ್ಥಿರವಾಗಿ ನಿಲ್ಲುವುದಕ್ಕಾಗಿ ಬೇರೆ ಬೇರೆ ರೀತಿಯಲ್ಲಿ ಮತ್ತೆ ಮತ್ತೆ ತಿಳಿಸಬೇಕಾಗುತ್ತದೆ.

ವೇದಪುರುಷನು ಆರನೆಯಮಂತ್ರದಿಂದ ಜಗತ್ತು ಬ್ರಹ್ಮಾತ್ಮಕವಾದುದು ಎಂದು ತಿಳಿಸಿದನು. ಹಾಗೆ ಜಗತ್ತು ಬ್ರಹ್ಮಾತ್ಮಕವಾದುದೆಂದು ತಿಳಿಯುವುದರಿಂದ ಶಾಂತಚಿತ್ತನಾಗುತ್ತಾನೆ ಎಂದೂ ಹೇಳಿದನು.

ಅದೇ ವಿಷಯವನ್ನು 'ಯಸ್ಮಿನ್ ಸರ್ವಾಣಿ' ಎಂಬ ಮಂತ್ರದಿಂದ ಮತ್ತೊಂದು ರೀತಿಯಲ್ಲಿ ವರ್ಣಿಸಿ, ಜಗತ್ತನ್ನು ಬ್ರಹ್ಮಾತ್ಮಕವೆಂದು ತಿಳಿದ ಶಾಂತನಿಗೆ ಸೇಡಾಗಲೀ, ವ್ಯಥೆಯಾಗಲೀ ಇಲ್ಲವೆಂದು ತಿಳಿಸಿ ಬ್ರಹ್ಮಚಿಂತನದ ಕಡೆಗೆ ಒಲವನ್ನು ಪ್ರೇರಿಸುತ್ತಾನೆ.

### ಆಚಾರ್ಯನ ಲಕ್ಷಣ

ಶಿಷ್ಯನು ಆಚಾರ್ಯನಿಂದ ಶಾಸ್ತ್ರಾರ್ಥಗಳನ್ನು ಕಲಿಯುತ್ತಾನೆ. ಕಲಿತ ಶಾಸ್ತ್ರಾರ್ಥವನ್ನು ಆಚಾರ್ಯನ ಕೃಪೆಯಿಂದಲೂ ಪರಮಾತ್ಮನ ಅನುಗ್ರಹದಿಂದಲೂ ಸಂದೇಹಕ್ಕೆ ಎಡೆಗೊಡದಂತೆ ನಿಷ್ಕೃಷ್ಟವಾಗಿ ತಿಳಿಯುತ್ತಾನೆ.

ತಾನು ತಿಳಿದುದನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡು ಸಾರ್ಥಕ ಬದುಕನ್ನು ನಡೆಸುತ್ತಾ ತನ್ನನ್ನು ಆಶ್ರಯಿಸಿದವರೂ ತಮ್ಮ ತಮ್ಮ ಬದುಕಿನಲ್ಲಿ ಶಾಸ್ತ್ರಾರ್ಥವನ್ನು ಮೈಗೂಡಿಸಿಕೊಂಡು[1] ನಡೆಯುವಂತೆ ಮಾಡುತ್ತಾನೆ. ಇಂತಹವನನ್ನೇ ಉಪನಿಷತ್ತುಗಳು ಆಚಾರ್ಯನೆಂದು ಕರೆಯುತ್ತವೆ.

### ಜ್ಞಾನಿಯ ಲಕ್ಷಣ

ಆಚಾರ್ಯನನ್ನು ಆಶ್ರಯಿಸಿದ ಜ್ಞಾನಿಯು ಸ್ವತಂತ್ರನಾದ ಪರಬ್ರಹ್ಮನೂ, ಸ್ವತಂತ್ರಗಳಲ್ಲದ ಇತರ ವಸ್ತುಗಳೂ ಬೇರೆಬೇರೆಯಾದುವೆಂದು ತಿಳಿಯುತ್ತಾನೆ. ಅಲ್ಲದೆ ಪರಮಾತ್ಮನು, ಎಲ್ಲ ಪದಾರ್ಥಗಳ ಒಳಗಿದ್ದು ಜಗತ್ತನ್ನೇ ತನ್ನ ಶರೀರವನ್ನಾಗಿ ಮಾಡಿಕೊಂಡಿರುವುದರಿಂದ ಜಗತ್ತನ್ನು ಒಂದಾಗಿಯೂ ಕಾಣುತ್ತಾನೆ. ಹೀಗೆ ಜಗತ್ತನ್ನೇ ಬ್ರಹ್ಮಾತ್ಮಕವಾಗಿ ಕಾಣುವ ಜ್ಞಾನಿಗೆ ಮಡದಿಮಕ್ಕಳಲ್ಲಾಗಲೀ ಮನೆಮಠಗಳಲ್ಲಾಗಲೀ ತನ್ನದು ಎಂಬ ಭಾವನೆ ಉಳಿಯುವುದಿಲ್ಲ. ಆದುದರಿಂದ ಈತನು ಲಾಭ ನಷ್ಟಗಳಲ್ಲಿ ಉಬ್ಬದೆಯೂ ಕುಗ್ಗದೆಯೂ ಶಾಂತನಾಗಿಯೇ ಇರುತ್ತಾನೆ.

### ಜನಕನ ಮಹಿಮೆ

ಇಂತಹ ಬ್ರಹ್ಮಜ್ಞಾನಿಗಳಲ್ಲಿ ಜನಕನೊಬ್ಬನು. ಈತನು ಬ್ರಹ್ಮಚಿಂತನೆಯಲ್ಲಿದ್ದಾಗ, ಈತನ ರಾಜಧಾನಿಯಾದ ಮಿಥಿಲಾನಗರವು ಸುಟ್ಟುಹೋಯಿತು ಎಂದು ಹೇಳಿದರು. ಮಮತೆಯನ್ನು ಕಳೆದುಕೊಂಡಿದ್ದ ಈತನು ಮಿಥಿಲೆಯು ಸುಟ್ಟರೇನು ನನ್ನದು ಸುಭದ್ರವಾಗಿದೆ, ನನ್ನದಾದವನು ಪರಮಾತ್ಮನೊಬ್ಬನೇ ಎಂದು ಹೇಳಿ ಶಾಂತನಾಗಿದ್ದನು.

ಶಾಂತನಾದವನಿಗೆ ಕರ್ಮದ ತೊಡಕು ಉಂಟಾಗುವುದಿಲ್ಲ ಎಂದು ಉಪದೇಶಿಸಿ ಎಲ್ಲವನ್ನೂ, ಪರಬ್ರಹ್ಮಾತ್ಮಕವನ್ನಾಗಿ ಕಾಣಬೇಕೆಂದು ಪ್ರೇರಿಸುತ್ತಾನೆ.

## ವೇದಾಂತಾಚಾರ್ಯ ಭಾಷ್ಯ

### ತಾತ್ಪರ್ಯಾರ್ಥ

ಮತ್ತೆ ಈಗ "ಎಲ್ಲವೂ ಬ್ರಹ್ಮಕ್ಕೆ ಶರೀರವಾಗಿದ್ದು ಅದನ್ನೇ ಅಂತರಾತ್ಮವನ್ನಾಗಿ ಪಡೆದಿವೆ" ಎಂಬ ಅಂಶವನ್ನು, ಎಲ್ಲವೂ ಒಂದೆಡೆಯೇ ಇವೆ ಎಂಬುದಾಗಿಯೂ, 'ಎಲ್ಲವೂ ಬ್ರಹ್ಮವೇ' ಎಂದು ಒಂದೇ ವಿಧವಾದ ವಿಭಕ್ತಿ ಪ್ರತ್ಯಯವನ್ನು ಪ್ರಯೋಗಿಸಿಯೂ, ಬಿಗಿಗೊಳಿಸುತ್ತಾನೆ. ಹಾಗೂ ಅನುದರ್ಶನವು[2] ತತ್ಕ್ಷಣದಲ್ಲೇ ನಮ್ಮ ಎಲ್ಲ ದುಃಖಗಳನ್ನೂ ಪರಿಪರಿಸುತ್ತದೆ ಎಂಬುದನ್ನೂ ತಿಳಿಸುತ್ತಾನೆ. "ಯಸ್ಮಿನ್......ಪಶ್ಯತಃ" ಎಂದು.

### ಪದವಿವರಣೆ

ಯಸ್ಮಿನ್ – ಯಾವಾಗಲಾದರೂ ಉಪಾಸನೆ ಮಾಡುತ್ತಿರುವಾಗ

ವಿಜಾನತಃ – ಇದು ಸ್ವತಂತ್ರವಾದ ಪರಮಾತ್ಮವಸ್ತು, ಇವು ಪರತಂತ್ರವಾದ ಜಡ – ಜೀವ ವಸ್ತುಗಳು ಎಂಬ ವ್ಯತ್ಯಾಸವನ್ನು ಸರಿಯಾಗಿ ಆಚಾರ್ಯನು ಉಪದೇಶಿಸಿರುವಂತೆಯೇ ನಡೆದುಕೊಳ್ಳುತ್ತಾ ಶಾಸ್ತ್ರಾಧಾರಗಳಿಂದ ವಿವೇಚಿಸಿ ತಿಳಿದುಕೊಳ್ಳುತ್ತಿರುವವನಿಗೆ.

---

1. ತಿಳಿದ ವಿಷಯವನ್ನು ಯಾವ ಸಮಯದಲ್ಲಿ ಬೇಕಾದರೂ ಜ್ಞಾಪಿಸಿಕೊಳ್ಳುವುದು. 2. ಸ್ಮರಣ.

ಆತ್ಮಾ, ಏವ, ಸರ್ವಾಣಿ, ಭೂತಾನಿ, ಅಭೂತ್ – ಪರಮಾತ್ಮನೇ ಎಲ್ಲವರೊಡಗೂಡಿದವನಾಗಿರುವುದು ಅನುಭವಕ್ಕೆ ಬರುತ್ತದೆ.

### ಬ್ರಹ್ಮ ಜಗತ್ತುಗಳಿಗೆ ಏಕತೆ ಇದೆ ಎಂಬ ಮಾತಿನ ವಿವೇಚನೆ

### ವಿಶಿಷ್ಟಪಕ್ಷ

ಲೋಕ ಮತ್ತು ಶಾಸ್ತ್ರಗಳಲ್ಲಿ ವ್ಯವಸ್ಥಿತವಾಗಿ ಬಳಕೆಯಲ್ಲಿರುವ "ನಾನು ದೇವ" "ನಾನು ಮನುಷ್ಯ" ಎಂಬ ಮಾತುಗಳಿಗೆ ನನ್ನದು ದೇವಶರೀರ, ನನ್ನದು ಮನುಷ್ಯ ಶರೀರ ನಾನು ಅವುಗಳ ಆತ್ಮ, ಆದುದರಿಂದ ನಾನೇ ದೇವ, ನಾನೇ ಮನುಷ್ಯ ಎಂಬರೀತಿಯಲ್ಲಿ ಆತ್ಮ ಶರೀರಗಳ ಒಕ್ಕೂಟವೇ ಅರ್ಥವಾಗಿ ಕಂಡುಬಂದಿರುವುದರಿಂದಲೂ, ಮುಖ್ಯವಾದ ಆತ್ಮವನ್ನು ಹೇಳುವ ಪದಕ್ಕೂ ಅದರ ವಶದಲ್ಲಿರುವ ಶರೀರವನ್ನು ಹೇಳುವ ಪದಕ್ಕೂ ಒಂದೇ ರೀತಿಯ ವಿಭಕ್ತಿಪ್ರತ್ಯಯ ಜೋಡಿಸಿಕೊಳ್ಳಬಹುದಾಗಿದೆ.

ಹೀಗೆ ಜಗತ್ತೆಲ್ಲವೂ ಬ್ರಹ್ಮದ ಶರೀರವಾದುದರಿಂದ ಬ್ರಹ್ಮವೇ ಜಗತ್ತು ಎನ್ನಲು ಪೂರ್ಣ ಅವಕಾಶವಿದೆ. ಹೀಗಿರುವಾಗ ಈ ''ಶರೀರ - ಶರೀರಿಭಾವ''[1] ಎಂಬ ಅರ್ಥವನ್ನು ಬಿಟ್ಟುಬಿಟ್ಟು ಬಾಧ, ಉಪಚಾರ, ಸ್ವರೂಪ ಎಂಬ ಅರ್ಥಗಳಿಂದ ಏಕತೆಯನ್ನು ಹೇಳುವ ಯಾವುದೇ ಪಕ್ಷವನ್ನೂ ನಾವು ಹೊರದೂಡಬೇಕು. ಆ ಪಕ್ಷಗಳು ಹೀಗಿವೆ.[2]

### ಬಾಧಪಕ್ಷ

ನಾನೇ ನಮ್ಮ ಮನೆಯ ಆಳು ಎಂಬ ಮಾತಿನಲ್ಲಿ, ನಮ್ಮ ಮನೆಯಲ್ಲಿ ಬೇರೆ ಆಳು ಯಾರೂ ಇಲ್ಲ ಎಂದು ಇತರ ಆಳುಗಳ ಅಭಾವರೂಪವಾದ ಬಾಧ ಎಂಬ ಅರ್ಥ ಇರುವಂತೆ; ಜಗತ್ತೆಲ್ಲ ಬ್ರಹ್ಮವೇ ಎಂಬಲ್ಲೂ ಬ್ರಹ್ಮ ಅಲ್ಲದೆ ಬೇರೆ ಜಗತ್ ಏನೊಂದೂ ಇಲ್ಲ ಎಂಬುದೇ ಬಾಧ. ಇದನ್ನು ಸೂಚಿಸಲೆಂದೇ ಬ್ರಹ್ಮವೇ ಜಗತ್ತು ಎಂಬ ಏಕತೆಯ ಮಾತು ಬಳಸಲಾಗಿದೆಯೆಂಬುದು ಒಂದು ಪಕ್ಷ.

### ಉಪಚಾರ ಪಕ್ಷ

ಪ್ರಜೆಗಳ ಪ್ರತಿನಿಧಿಯೇ ಪ್ರಜೆಗಳ ಬದಲಾಗಿ ಅಧಿಕಾರ ವ್ಯವಹಾರಗಳಲ್ಲಿ ನಿಲ್ಲುವಂತೆ 'ರಾಜನೇ ಪ್ರಜೆ ಎಂಬ ಬಳಕೆಯ ಮಾತಿಗೆ ಪ್ರಜೆಗಳೆಲ್ಲ ರಾಜನ ಅಧೀನ ಎಂಬ ಅರ್ಥವಿರುವಂತೆ, ಜಗತ್ತೆಲ್ಲ ಬ್ರಹ್ಮನ ಅಧೀನದಲ್ಲಿರುವುದರಿಂದ ಗೌರವಾರ್ಥವಾಗಿ ಬ್ರಹ್ಮವೇ ಜಗತ್ತು ಎಂಬ ಏಕತೆಯ ಮಾತು ಬಳಸಲಾಗಿದೆ ಎಂಬುದು ಮತ್ತೊಂದು ಪಕ್ಷ.

### ಸ್ವರೂಪಪಕ್ಷ

ಮಣ್ಣೇ ಮಡಕೆಯಾಗಿದೆ, ಮಡಕೆಯೂ ಮಣ್ಣೇ, ಎಂಬಂತೆ ಜಗತ್ತಿನ ಮೂಲಕಾರಣವಾದ ಬ್ರಹ್ಮವೂ, ಅದರ ಕಾರ್ಯರೂಪವಾದ ಜಗತ್ತೂ, ಸ್ವಲ್ಪವೂ ಬೇರೆಯಲ್ಲ; ಎಲ್ಲವೂ ಒಂದೇ, ಆದುದರಿಂದಲೇ ಬ್ರಹ್ಮವೇ ಜಗತ್ ಎಂಬ ಏಕತೆಯ ಮಾತನ್ನು ಬಳಸಲಾಗಿದೆ ಎಂಬುದು ಮತ್ತೊಂದು ಪಕ್ಷ.

---

1. ಎಲ್ಲ ರೀತಿಯಿಂದಲೂ ಹತೋಟಿಗೆ ಒಳಪಟ್ಟು ಯಾವ ರೀತಿಯಿಂದಲೂ ಬೇರ್ಪಡಿಸಲಾಗದ ಧರಿಸಿ, ಪೋಷಿಸಲ್ಪಡುವ ವಸ್ತು ಶರೀರ. ಇಂತಹ ಶರೀರಕ್ಕೆ ಒಡೆಯನೇ ಶರೀರಿ ಎಂಬ ಭಾವ.

2. ಈ ಪಕ್ಷಗಳ ವಿವರಣೆ ಗ್ರಂಥದಲ್ಲಿ ಇಲ್ಲದಿದ್ದರೂ ಅತ್ಯವಶ್ಯಕವಾದುದರಿಂದ ಗ್ರಂಥದಲ್ಲೇ ಸೇರಿಸಿ ಕೊಡಲಾಗಿದೆ.

### ಸಾಮ್ಯ ಪಕ್ಷ

ಈ ಸರೋವರವೂ ಒಂದು ಸಮುದ್ರವೇ ಆಗಿದೆ ಎಂದರೆ ಸಮುದ್ರದಂತೆ ನೌಕೆಗಳೂ ಸಂಚರಿಸುವಷ್ಟು ವಿಸ್ತಾರವಾಗಿ ಮಕರ[1], ಮಹಾಮತ್ಸ್ಯ[2], ಶಂಖ, ಹವಳ ಮುಂತಾದವುಗಳಿಂದ ತುಂಬಿದೆ ಎಂದರ್ಥ. ಇದರಂತೆ ಬ್ರಹ್ಮವೇ ಜಗತ್, ಬ್ರಹ್ಮವೇ ಜೀವ, ಎಂಬ ಮಾತುಗಳನ್ನು ಹೋಲಿಕೆಯಿಂದ ಹೇಳಬಹುದಾದ ಏಕತೆಯನ್ನು ನಿರ್ದೇಶಿಸಲು ಬಳಸಲಾಗಿದೆ ಎಂಬುದು ಮತ್ತೊಂದು ಪಕ್ಷ.

### ಅನುದರ್ಶನದ ಫಲ

**ತತ್ರ** – ಅಂತಹ ಉಪಾಸನೆಯ ಸಮಯದಲ್ಲಿ.

**ಕಃ ಮೋಹಃ ?** – ನಾನು ಬ್ರಹ್ಮದ ಶರೀರವಲ್ಲ, ನಾನೇ ಸ್ವತಂತ್ರ, ಎನ್ನುವ ಇದೇ ರೀತಿಯ ಯಾವುದೇ ತಪ್ಪು ತಿಳುವಳಿಕೆಯೂ ಉಂಟಾಗುವುದಿಲ್ಲ ಎಂದು ಅರ್ಥ.

**ಕಃ ಶೋಕಃ ?**– ಎಲ್ಲವೂ ಪರಮಾತ್ಮನ ಆಸ್ತಿಯಾಗಿರುವುದರಿಂದ ನನ್ನದೇನೂ ಇಲ್ಲ ಎಂಬ ತಿಳುವಳಿಕೆ ಸ್ಥಿರವಾಗಿ ಏರ್ಪಡುವುದರಿಂದ ಅಂತಹವನಿಗೆ ಮಕ್ಕಳೇ ಸತ್ತರೂ, ರಾಜ್ಯವೇ ಹೋದರೂ, ಒಂದಿಷ್ಟೂ ದುಃಖವಾಗುವುದಿಲ್ಲ ಎಂದರ್ಥ.

### ಅನುದರ್ಶನದ ಫಲದ ಬಗ್ಗೆ ಇತಿಹಾಸದ ಆಧಾರ

ಹಾಗೆಯೇ ಜನಕಮಹಾರಾಜ ಹೇಳುತ್ತಾನೆ, "ನನಗೆ ನನ್ನದು ಎಂದು ಏನೊಂದೂ ಇಲ್ಲದಿರುವುದೇ ಒಂದು ಐಶ್ವರ್ಯವಲ್ಲವೆ ! ಅಹಾ ! ನನ್ನ ಈ ಐಶ್ವರ್ಯಕ್ಕೆ ಎಲ್ಲಿ ಉಂಟು ! ಕೊನೆ ಉಂಟು ! ಅಬ್ಬ ! ಎಂದಿಗೂ ಅಳಿಯದೆ ಇರುವ ಮಹದೈಶ್ವರ್ಯ ಇದು. ಮಿಥಿಲಾನಗರ ಉರಿದು ಹೋದರೂ ನನ್ನ ಈ ಐಶ್ವರ್ಯವೇನೂ ಉರಿದು ಹೋಗಲಾರದಷ್ಟೆ,[3] ಎಂದು.

### ಏಕತೆ ಹಾಗೂ ಅನುದರ್ಶನ

**ಏಕತ್ವಂ ಅನುಪಶ್ಯತಃ** – ಎಲ್ಲದರೊಡಗೂಡಿರುವ ಪರಮಾತ್ಮನ ಏಕೈಕತೆಯನ್ನು ಪ್ರತ್ಯಕ್ಷವಾಗುತ್ತಿರುವಂತೆ ಧ್ಯಾನದಿಂದ ಅನುಭವಿಸುತ್ತಿರುವವನಿಗೆ.

### ಇಲ್ಲಿರುವ ಏಕ ಶಬ್ದದ ಅರ್ಥದ ನಿಷ್ಕರ್ಷೆ

### ಬಾಧಪಕ್ಷದ ಖಂಡನೆ

"ಒಡೆಯನಿಂದ ಇದೆಲ್ಲವೂ ಧರಿಸಲ್ಪಟ್ಟಿದೆ"[4] ಎಂಬ ಮಾತಿನ ಪ್ರಕಾರ ಇಲ್ಲಿರುವ ಏಕ ಶಬ್ದಕ್ಕೆ ಒಂದಲ್ಲದೆ ಎರಡನೆಯದೊಂದೂ ಇಲ್ಲ ಎಂಬ ಅರ್ಥ ಕೂಡದು. ಈಶ್ವರ ಒಬ್ಬ, ಅವನಿಂದ ವ್ಯಾಪಿಸಲ್ಪಟ್ಟವುಗಳು ಜಡ - ಜೀವಿಗಳು, ಹೀಗಿರುವ ಈ ಪದಾರ್ಥಗಳಲ್ಲಿ ಏನೊಂದನ್ನೂ ಇಲ್ಲ ಎನ್ನಲು ಯಾವನಿಗೂ ಯಾವ ರೀತಿ

---

1. ಹುಲಿಮೀನು. 2. ದೊಡ್ಡ ಮೀನುಗಳು.

3. ಅನನ್ತಂ ಬತ ಮೇ ವಿತ್ತಂ ಯಸ್ಯ ಮೇ ನಾಸ್ತಿ ಕಿಂಚನ ।
ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಂಚಿತ್ ಪ್ರದಹ್ಯತೇ ॥ ಮ. ಭಾ. ಶಾ. ೧೭-೨೨.

4. ಈಶಾವಾಸ್ಯಮಿದಂ ಸರ್ವಂ. ಈಶಾ. ೧.

ಯಿಂದಲೂ ಸಾಧ್ಯವಿಲ್ಲ ಎಂಬುದೇ ಇದಕ್ಕೆ ಕಾರಣ. ಹಾಗೂ ಈ ಎಲ್ಲ ವಿಧವಾದ ಅಸಂಖ್ಯ ವಿಭಾಗಗಳಿರುವ ಯಾವುದೇ ಪದಾರ್ಥಗಳ ಪರಸ್ಪರ ಭೇದಗಳೂ ಸುಳ್ಳು ಎಂಬ ತಿಳುವಳಿಕೆಯೂ ಆ ತಿಳುವಳಿಕೆ ಇಲ್ಲದಿರುವುದೂ ಸಹ ಯಾವುದೇ ರೀತಿಯಲ್ಲೂ ''ಎಲ್ಲವೂ ಒಂದೇ ಎಂದು" ಉಪದೇಶ ಕೊಡುವುದಕ್ಕಾಗಲಿ ಉಪದೇಶ ಪಡೆಯುವುದಕ್ಕಾಗಲಿ ಸರಿಹೊಂದುವುದಿಲ್ಲ ಎಂಬುದು ಮತ್ತೊಂದು ಕಾರಣ.

### ಸ್ವರೂಪ ಪಕ್ಷದ ಖಂಡನೆ

ಹಾಗೂ ಈ ಏಕಶಬ್ದವು ಒಂದಕ್ಕೊಂದು ವಿರುದ್ಧವಾದ ಪದಾರ್ಥಗಳಿಗೆ ವಾಸ್ತವವಾಗಿ ಏಕತೆಯನ್ನು ತಿಳಿಸುವುದು ಎಂಬುದೂ ಸರಿಯಲ್ಲ; ವಿರುದ್ಧ ವಿಚಾರಗಳಿಗೆ ಏಕತೆಯನ್ನು ಒಪ್ಪಿದರೆ ಎಲ್ಲ ವಿರುದ್ಧ ವಿಚಾರಗಳೂ ಒಂದೇ ಆಗುವುದರಿಂದ ವಿರೋಧವಿಲ್ಲ ಎಂದರೆ, ತನ್ನ ಮತ ಹಾಗೂ ಇತರ ಮತಗಳ ವಿವೇಚನೆಯು ಅನವಶ್ಯಕತೆಯೂ, ನಮ್ಮ ಮತವೇ ಇತರರ ಮತ, ಇತರರ ಮತವೇ ನಮ್ಮ ಮತ ಎಂಬ ಏರು ಪೇರೂ ಸಹ ಸಂಭವಿಸುವುದು.

### ವಿಶಿಷ್ಟ ಪಕ್ಷದ ಹಿರಿಮೆ

ಇತರ ಪದಾರ್ಥಗಳೊಡಗೂಡಿರುವ ಇದು ಒಂದೇ ಎಂಬ ಅಭಿಪ್ರಾಯವು ಎಲ್ಲ ಲೌಕಿಕ ಹಾಗೂ ವೈದಿಕವಾದ ಪ್ರಮಾಣಾಧಾರಗಳಿಗೂ ಸರಿಹೊಂದುವುದರಿಂದ ಇದನ್ನು ಒಪ್ಪಿ ಇರಿಸಿಕೊಳ್ಳಲಾಗುತ್ತಿದೆ.

### ಈ ವಿಶಿಷ್ಟ ಏಕತೆಯ ಅಂತರಂಗ[1] – ಸಂಬಂಧ

ಇಷ್ಟಾದರೂ ಈಗ ವಿಚಾರ ಮಾಡುತ್ತಿರುವ ಈ ಒಂದೆಡೆ ಇರುವವುಗಳ ಏಕತೆಯನ್ನು ನಿಗದಿಗೊಳಿಸುವುದಕ್ಕಾಗಿ, ಇದಕ್ಕೆ ಸರಿಹೊಂದುವ ಇವುಗಳ ಸಂಬಂಧದ ಬಗ್ಗೆ ಹೇಳುವುದೇ ಇಲ್ಲಿ ಮುಖ್ಯವಾಗಿ ಬೇಕಾದುದು.

### ವಿಶಿಷ್ಟ ಏಕತೆಯಲ್ಲಿ ಸಂಬಂಧವೇ ಮುಖ್ಯ ಎನ್ನಲು ಐತಿಹಾಸಿಕ ಉದಾಹರಣೆ

"ರಾಮ ಮತ್ತು ಸುಗ್ರೀವ ಇವರಿಬ್ಬರ ಏಕತೆ ಹೀಗೆ ಆಯಿತು" ಮುಂತಾದೆಡೆಗಳಲ್ಲಿ[2] ಏಕ ಶಬ್ದವನ್ನು ಅವರ ಪರ ಸ್ನೇಹ ಮುಂತಾದ ಸಂಬಂಧಗಳ ದೃಷ್ಟಿಯಿಂದಲೇ ಪ್ರಯೋಗಿಸಲಾಗಿದೆಯಲ್ಲವೆ !

### ಆರು ಮತ್ತು ಏಳನೆಯ ಮಂತ್ರ ಮುಕ್ತ ಜೀವವನ್ನು ಕುರಿತುದೋ ?

### ಮುಮುಕ್ಷು ಜೀವವನ್ನು ಕುರಿತುದೋ ?

ಒಂದು ಪಕ್ಷ ಆರು ಮತ್ತು ಏಳನೆಯ ಮಂತ್ರಗಳಾದ ಮೇಲ್ಕಂಡ ಎರಡು ಶ್ಲೋಕಗಳೂ, ಮುಕ್ತಿಯನ್ನು ಪಡೆದಿರುವ ಜ್ಞಾನಿಗಳ ಬಗ್ಗೆ ಹೇಳುತ್ತಿವೆ, ಎಂದು ಯೋಚಿಸಲು ಅವಕಾಶವಿದೆ. ಆದರೂ ಅವುಗಳ ಹಿಂದಿನ ಮಂತ್ರಗಳಿಗೆ ಅನುಸಾರವಾಗಿ ಮುಕ್ತಿಗಾಗಿ ಪ್ರಯತ್ನಿಸುತ್ತಿರುವವರ ವಿಷಯವೇ ಈ ಪ್ರಕರಣವಾದುದರಿಂದ ಈ ಮಂತ್ರಗಳೆರಡೂ ಸಹ ಮುಕ್ತಿಯನ್ನು ಅಪೇಕ್ಷಿಸುವವರ (ಹಾಗೂ ಯತ್ನಶೀಲರಾದವರ) ಹಿರಿಮೆಯನ್ನು ಹೊಗಳಲೆಂದೇ ಇಲ್ಲಿ ಬಂದಿವೆ; ಎನ್ನುವುದೇ ಸರಿಯಾಗಿದೆ.

---

1. ಜ್ಞಾನದ ಕೇಂದ್ರ. 2. ರಾಮ ಸುಗ್ರೀವಯೋರೈಕ್ಯಮ್. ರಾ. ಸು. ೩೫.

**ದರ್ಶನ ಎಂದರೆ ಪರಿಪಕ್ವವಾದ ಉಪಾಸನೆ**

ಹೀಗೆ ಮುಕ್ತಿಗಾಗಿ ಪ್ರಯತ್ನಿಸುವವನದೇ ಇಲ್ಲಿ ಸರಿಯಾದ ಪ್ರಸಂಗವಾದುದರಿಂದ, 'ಅವನಿಗೆ ಕಣ್ಣಿನಲ್ಲಿ ಕಟ್ಟಿದಂತೆ ಸ್ಪಷ್ಟವಾಗಿ ವಿಶಿಷ್ಟ ಏಕತೆಯು ಅನುಭವಕ್ಕೆ ಬರುವುದು' ಎಂಬುದೇ ಇಲ್ಲಿ ಮುಖ್ಯ ಅಭಿಪ್ರಾಯ.

ಆದುದರಿಂದ ಇಲ್ಲಿ ವೇದಶಾಸ್ತ್ರಗಳ ಸಹಾಯದಿಂದಲುಂಟಾದ ತತ್ತ್ವದಜ್ಞಾನವು ನಂತರ ತತ್ತ್ವವೇ ಕಣ್ಣಿನಲ್ಲಿ ಕಟ್ಟಿದೆಯೋ! ಎಂಬಂತಹ ಉಪಾಸನ ರೂಪವಾದ ಅನುಭವ ಜ್ಞಾನವಾಗಿ ಪರಿಣಮಿಸುವುದನ್ನೇ ಇಲ್ಲಿ ದರ್ಶನ ಎಂಬ ಮಾತಿನಿಂದ ಯೋಜಿಸಲಾಗಿದೆ.

**ದರ್ಶನವು ಸಮಾಧಿ ಸ್ಥಿತಿಯೇ ? ಅಥವಾ ಸಮಾಧಿಯು ಫಲವೇ!**

ಯೋಗಶಾಸ್ತ್ರ[1]ದಲ್ಲಿ ತಿಳಿಸಿರುವ ವಿಶೇಷಸಮಾಧಿಸ್ಥಿತಿ ಎಂಬ ಅನುಭವವೇ ಉಪಾಸಕನಿಗೆ ತತ್ಕಾಲದಲ್ಲಿ ಉಂಟಾಗುವುದರಿಂದಲೂ, ಇದನ್ನು ಅದೇ ಶಾಸ್ತ್ರದಲ್ಲಿ ಬ್ರಹ್ಮಪ್ರಾಪ್ತಿಗೆ ಒಂದು ಉಪಕರಣಮಾರ್ಗ ಎಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ, ಇಲ್ಲಿ ಹೇಳುವ ದರ್ಶನವನ್ನು "ಇದೇ ಸಮಾಧಿಯ ಫಲವಾದ ಬ್ರಹ್ಮ ಪ್ರಾಪ್ತಿಯೋ'' ಎಂದು ಸಂಶಯ ದೃಷ್ಟಿಯಿಂದ ನೋಡಬಾರದು.

ಮುಕ್ತಿ ಪಡೆಯಲು ಬೇಕಾದ ಸಾಧನ ಸಲಕರಣೆಗಳನ್ನು ಉಪದೇಶಿಸುವ ಎಲ್ಲ ಉಪನಿಷತ್ ವಚನಗಳಲ್ಲೂ ಬರುವ ಈ "ದರ್ಶನ" ಎಂಬ ಪದಕ್ಕೆ "ಉಪಾಸನೆ" ಎಂದೇ ಅರ್ಥ ಎಂದು ಶಾರೀರಕಶಾಸ್ತ್ರವೆಂಬ ಬ್ರಹ್ಮಸೂತ್ರ ಗಳ ವಿವರಣೆಯಾದ ಶ್ರೀಭಾಷ್ಯ ಗ್ರಂಥದಲ್ಲಿ ಸಕಾರಣವಾಗಿ ನಿರ್ಧರಿಸಿ ತಿಳಿಸಲಾಗಿದೆ.

## ಈಶಾವಾಸ್ಯಪ್ರಕಾಶಿಕೆ

**ಪದವಿವರಣೆ**

**ವಿಜಾನತಃ** – "ಈಶಾವಾಸ್ಯಂ" ಎಂದು ಆರಂಭಿಸಿ "ವಿಜುಗುಪ್ಸತೇ" ಎಂಬವರೆಗೆ ಹೇಳಿರುವುದನ್ನು ಗುರುವಿನ ಉಪದೇಶದ ಮೂಲಕ ಚೆನ್ನಾಗಿ ತಿಳಿದಿರುವವನಿಗೆ

**ಏಕತ್ವಂ** – ಹೀಗೆ ಈವರೆಗೆ ನಿಜವಾಗಿ ಬೇರೆ ಬೇರೆ ತತ್ತ್ವಗಳೇ ಇವು ಎಂದರಿತು, ಮತ್ತೆ ಈಗ ಇವೆಲ್ಲದಕ್ಕೂ ಏಕತೆಯನ್ನು ಅರಿಯುವುದು ಎಂದರೆ ಸಮಂಜಸವಾಗಲಾರದಲ್ಲವೆ?

ಆದುದರಿಂದ ಇಂತಹ ಭೇದಾಭೇದ ವಚನಗಳಿಗೆ ಸಮನ್ವಯ ಮಾಡುವ **ಘಟಕಶ್ರುತಿವಾಕ್ಯಗಳನ್ನು**[2] ಇಲ್ಲಿ ನಾವು ಸದುಪಯೋಗ ಮಾಡಿಕೊಳ್ಳಬೇಕು.

ಅವು "ಯಾವನಿಗೆ ಈ ಜೀವಾತ್ಮತತ್ತ್ವವೂ ಶರೀರವಾಗಿದೆಯೋ"[3] ಇವೇ ಮುಂತಾದವು.

ಇವುಗಳಲ್ಲಿ ಹೇಳಿರುವ ವಿಷಯ ಪರಮಾತ್ಮ ಮತ್ತು ಇತರ ವಸ್ತುಗಳಿಗೆ ಇರುವ ಪರಸ್ಪರ ಬಿಡಿಸಲಾರದ ಸಂಬಂಧ.

ಆದುದರಿಂದ ಭಿನ್ನವಸ್ತುಗಳ ಏಕತೆ ಇಂತಹ ಸಂಬಂಧದ ದೃಷ್ಟಿಯಿಂದ ಎಂದು ತಿಳಿದಿರಬೇಕು.

---

1. ಪರಮಾತ್ಮ, ಜೀವಾತ್ಮರುಗಳ ನಿಶ್ಚಯವಾದ ಸಂಬಂಧವನ್ನು ತಿಳಿಸುವ ಶಾಸ್ತ್ರ.
2. ಭೇದಶ್ರುತಿಗಳಿಗೂ ಅಭೇದಶ್ರುತಿಗಳಿಗೂ ವಿರೋಧವಿಲ್ಲದಂತೆ ಸಮನ್ವಯ ಸೂಚಿಸುವ ಶ್ರುತಿಗಳು ಘಟಕಶ್ರುತಿಗಳು.
3. ಯಸ್ಯಾತ್ಮಾ ಶರೀರಮ್. ಬೃ. ೫ ೭.೨೨.

### ಬಾಧಪಕ್ಷ

**ಉದಾ :–** "ಕಳ್ಳ ಎಂದರೆ ಈ ಮೋಟುಮರ" ಎಂದು [illegible] ಮೋಟುಮರವನ್ನು ನೋಡಿ ಕಳ್ಳನೆಂದು ಸಂದೇಹಪಟ್ಟು, ಹತ್ತಿರಹೋದಾಗ [illegible] ಎಂಬ ಅನುಭವ ಬಂದಾಗ ಬಾಯಲ್ಲಿ ಹೇಳುವ ಮಾತಿನಲ್ಲಿ ಕಳ್ಳ ಮತ್ತು ಮೋಟುಮರಗಳಿಗೆ [illegible] ಕಾಣು ತ್ತೇವೆ. ಆದರೆ ವಾಸ್ತವವಾಗಿ ಮೋಟುಮರದಲ್ಲಿ [illegible]. ಅದು ಸುಳ್ಳು. ಎಂದು ಭಾವ.

ಹೀಗೆ ಎಲ್ಲವೂ ಆತ್ಮವೇ ಎಂದರೆ [illegible].

### ಉಪಬೃಂಹಣಪಕ್ಷ

ರಾಜನೇ ಈ ಎಲ್ಲ ಪ್ರಜೆಯೂ ಎಂದು ಉಪಚಾರ. [illegible].

### ಸ್ವರೂಪ ಪಕ್ಷ

ಈ ಮಡಕೆಕುಡಿಕೆಗಳೆಲ್ಲವೂ ಮಣ್ಣೇ ಎಂದು ಉಪಚಾರ. ಇಲ್ಲಿ ಮಡಕೆಕುಡಿಕೆಗಳು ಮಣ್ಣಿನ ಹೊರತು ಬೇರೆ ಪದಾರ್ಥಗಳಲ್ಲವಷ್ಟೆ.

### ಸಿದ್ಧಾಂತ

ನಾನು ದೇವತೆ, ನಾನು ಮನುಷ್ಯ ಎಂಬ ಮಾತುಗಳಲ್ಲಿ ಜೀವಾತ್ಮನಿಗೆ [illegible] ಇದೆ ಎಂದೋ ಮಾನವಶರೀರ ಇದೆ ಎಂದೋ ಭಾವದಿಂದ [illegible].

## ಪದಾರ್ಥದೀಪಿಕೆ

### ಪದ ವಿವರಣೆ

**ಏಕತ್ವಂ-** ಈ ಜಗತ್ತಿಗೂ ಪರಮಾತ್ಮನಿಗೂ ಒಂದನ್ನೊಂದು ಬಿಡದೇ ಇರುವಂತಹ ನಿಕಟಸಂಬಂಧ.

**ಅನುಪಶ್ಯತಃ –** ಅನುಧ್ಯಾನಮಾಡುವವನಿಗೆ[1].

## ಸುಬೋಧಿನೀ

### ಭಾವಾರ್ಥ

ಈ ರೀತಿ ಉಪಾಸನೆಯ ಕಾಲದಲ್ಲೂ ಧ್ಯಾನಮಾಡಿದರೆ ಅಂತಹವರಿಗೆ ಯಾವುದೇ ಅಜ್ಞಾನವೂ ದುಃಖವೂ ಉಂಟಾಗುವುದಿಲ್ಲ. ಎಲ್ಲರಿಗೂ ಈ ರೀತಿ ಜಗತ್ತೆಂಬ ಶರೀರದೊಳಗಿರುವ ಪರಮಾತ್ಮನನ್ನು ಅವನ ಆ ಶರೀರ ದೊಡನೆ ಉಪಾಸನೆ ಮಾಡಬೇಕೆಂಬ ವಿಚಾರ ತಿಳಿಯದು. ಕೆಲವು ನಿಜವಾದ ತತ್ತ್ವಜ್ಞಾನಿಗಳಿಗೆ ಮಾತ್ರ ಈ ವಿಚಾರ ತಿಳಿದಿದೆ. ಈ ವಿಚಾರವನ್ನು ಎಲ್ಲ ಉಪಾಸಕರೂ ಅವಶ್ಯ ತಿಳಿದಿರಬೇಕೆಂದೂ ಈ ತಿಳುವಳಿಕೆಯಾದ ಒಡನೆಯೇ ಮೇಲೆ ಹೇಳಿದ ಉತ್ತಮ ಫಲಿತಾಂಶಗಳೂ ಸಿಗುವುವೆಂದೂ ಭಾವಾರ್ಥ.

---

1. ಸ್ಮರಣ ಮಾಡುವವನಿಗೆ.

# ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಹೇಳಿದುದನ್ನೇ ಮತ್ತೆ ಹೇಳಲು ಕಾರಣ

ಹಿಂದಿನ ಮಂತ್ರದಲ್ಲಿ ಹೇಳಿದ ವಿಚಾರವನ್ನೇ ದೃಢಪಡಿಸಲು ಮತ್ತೆ ಈ ಮಂತ್ರದಲ್ಲೂ ಹೇಳುತ್ತಾನೆ.

### ತಿಳಿದವನಿಗೆ ಎಲ್ಲವೂ ಪರಮಾತ್ಮನೇ ಹೇಗೆ?

ಪರಮಾತ್ಮನು ಜಗತ್ತಿನೊಡನೆ ಒಂದಾಗಿರುವನು ಎಂದರೆ ಜಡ –ಜೀವ–ಪರಮಾತ್ಮ ಎಂಬ ಮೂರೂ ವಸ್ತುಗಳ ಒಕ್ಕೂಟದಲ್ಲಿ ಸೇರಿರುವನು ಎಂದಷ್ಟೆ ಅರ್ಥ. ಈ ಒಕ್ಕೂಟವನ್ನು ಮೂರುವಿಧ ವಸ್ತುಗಳ ಗುಂಪೆಂಬ ಕಾರಣ "ತ್ರಿಕೂಟ" ಎಂದು ಕರೆಯೋಣ. ಈ ತ್ರಿಕೂಟದ ಸಂಬಂಧ "ಶರೀರ ಶರೀರಿ ಭಾವ" ದೇವರೇ ಮುಖ್ಯ ಆತ್ಮ, ಉಳಿದೆಲ್ಲವೂ ಅವನ ಶರೀರ ಎಂದು ಹಿಂದೆಯೇ ತಿಳಿಸಲಾಗಿದೆ. ಇದನ್ನು "ಅಪೃಥಕ್ಸಿದ್ಧಿ"[1] ಎಂದೂ ಕರೆಯಬಹುದು. ಪರಮಾತ್ಮನ ಧ್ಯಾನ ಮಾಡುವಾಗ ಈ ತ್ರಿಕೂಟರಹಸ್ಯವಾದ ಸಂಬಂಧವನ್ನೂ ಗಮನಿಸಿ ಧ್ಯಾನ ಮಾಡಬೇಕು. ಇಂತಹ ಧ್ಯಾನವನ್ನೇ ಇಲ್ಲಿ ಅನುದರ್ಶನ ಎಂದು ವಿಶೇಷವಾಗಿ ಹೇಳಲಾಗಿದೆ. ನಮ್ಮ ದೇಹ ಹೇಗೆ ನಮ್ಮ ಅಧೀನದಲ್ಲಿರುವುದೋ ಹಾಗೆ ಜಗತ್ತೆಲ್ಲ ಪರಮಾತ್ಮನ ಅಧೀನ ಎಂಬ ಈ ಸಂಬಂಧದ ಭಾವವನ್ನು ಮನಸ್ಸಿಗೆ ಚೆನ್ನಾಗಿ ತೆಗೆದುಕೊಳ್ಳಬೇಕು. ಜಗತ್ತಿನಲ್ಲಿ ಏನೇನು ನಡೆಯುವುದೋ ಅದೆಲ್ಲವೂ ಪರಮಾತ್ಮ ಪ್ರೇರಣೆ ಯಿಂದ ಎಂದೂ, ನಮಗೆ ಯಾರಿಂದ ಏನೇ ತೋರಿದರೆ ಒದಗಿದರೂ ಒಳ್ಳೆಯದೇ ಆದರೂ, ನಾವು ಮಾಡಿದ ಕರ್ಮ ಗಳಿಗೆ ತಕ್ಕಂತೆ ದೇವರು ನಮಗೆ ಕೊಡಿಸುತ್ತಿರುವ ಫಲ ಎಂದೂ ತಿಳಿದುಕೊಳ್ಳಬೇಕು. ಈ ತಿಳುವಳಿಕೆ ಬಂದರೆ ಮೋಹವಾಗಲಿ[2] ದುಃಖವಾಗಲಿ ನಮಗೆ ಉಂಟಾಗುವುದಿಲ್ಲವಷ್ಟೆ.

ಎಲ್ಲವನ್ನೂ ಪರಮಾತ್ಮ ವ್ಯಾಪಿಸಿರುವುದರಿಂದ ಎಲ್ಲವೂ ಅವನೇ ಎಂದು ಹೇಳಲಾಗಿದೆ, ಈ ವಿಚಾರದಲ್ಲಿ ಗೀತೆಯ ವಚನ ಆಧಾರವಾಗಿದೆ. ಎಲ್ಲಕ್ಕೂ ಪರಮಾತ್ಮನೇ ಕಾರಣವಾಗಿರುವುದರಿಂದಲೂ ಎಲ್ಲವೂ ಅವನೇ ಎನ್ನ ಬಹುದು. ಇದಕ್ಕೆ ಛಾಂದೋಗ್ಯ[3], ತೈತ್ತಿರೀಯ[4] ವಚನಗಳು ಆಧಾರವಾಗಿವೆ.

ಪರಮಾತ್ಮನು ಮೊದಲೇ ಸಂಕಲ್ಪಿಸಿಕೊಂಡು ಎಲ್ಲದರೊಳಗಿದ್ದು ಜೀವಾತ್ಮಗಳನ್ನು ಜಡಶರೀರಗಳೊಳಗೆ ಪ್ರವೇಶಗೊಳಿಸಿ, ಅವುಗಳ ಮೂಲಕ ಮತ್ತೆ ಪ್ರವೇಶಮಾಡಿದವನಂತಾಗಿ ವಿವಿಧ ಆಕಾರ ಹೆಸರುಗಳನ್ನು ಪಡೆಯು ತ್ತಾನೆ. ಆದುದರಿಂದ ಎಲ್ಲವಸ್ತುಗಳ ಹೆಸರೂ ಪರಮಾತ್ಮನಿಗೆ ನೇರವಾಗಿಯೇ ಒಪ್ಪುತ್ತವೆ. ಹಾಗೂ ಎಲ್ಲವೂ ಪರಮಾತ್ಮನೇ ಎಂಬ ಮಾತಿಗೆ ಎಲ್ಲದರ ಒಳಗಿರುವ ಮುಖ್ಯ ಅಂತರಾತ್ಮ ಪರಮಾತ್ಮ, ಎಲ್ಲವೂ ಅವನ ಶರೀರ ಎಂದು ಮುಖ್ಯವಾದ ಸಿದ್ಧಾಂತಾರ್ಥವನ್ನು ಇಲ್ಲಿ ನಿರ್ಣಯಮಾಡಿದಂತಾಯಿತು.

---

1. ವಸ್ತುಗಳನ್ನು ಪ್ರತ್ಯೇಕಿಸಲು ಆಗದ ಸಂಬಂಧ.
2. ವಸ್ತುವನ್ನಾಗಲಿ ಅದರ ಧರ್ಮವನ್ನಾಗಲಿ ವ್ಯತ್ಯಾಸವಾಗಿ ತಿಳಿಯುವುದು.
3. ಸಾಮವೇದದ ಒಂದು ಉಪನಿಷತ್ತು. 4. ಯಜುರ್ವೇದದ ಒಂದು ಉಪನಿಷತ್ತು.

# ಈಶಾವಾಸ್ಯೋಪನಿಷತ್

## ಮಂತ್ರ ಎಂಟು

**ಸ ಪರ್ಯಗಾಚ್ಛುಕ್ರಮಕಾಯಮವ್ರಣ–**
**ಮಸ್ನಾವಿರಂ ಶುದ್ಧಮಪಾಪವಿದ್ಧಮ್।**
**ಕವಿರ್ಮನೀಷೀ ಪರಿಭೂಸ್ಸ್ವಯಂಭೂ–**
**ರ್ಯಾಥಾತಥ್ಯತೋಽರ್ಥಾನ್ ವ್ಯದಧಾ–**
**ಚ್ಛಾಶ್ವತೀಭ್ಯಸ್ಸಮಾಭ್ಯಃ ॥೮॥**

### ಅನ್ವಯಾನುಸಾರ ಪ್ರತಿಪದಾರ್ಥ

ಕವಿಃ – ಕ್ರಾಂತದೃಷ್ಟಿಯಿಂದ[1] ಎಲ್ಲವನ್ನೂ ವಿಮರ್ಶಿಸಿ ಗ್ರಂಥಗಳನ್ನು ಬರೆಯಬಲ್ಲ ಮತ್ತು; ಮನೀಷೀ – ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಿರುವ ; ಪರಿಭೂಃ – ಇತರ ವಿಷಯವಾದ ವಿದ್ಯೆ ಉಳ್ಳವರೆಲ್ಲರನ್ನೂ ಮೀರಿಸಿ ಅವರ ದುರ್ವಾದಗಳನ್ನು ನಿವಾರಿಸಬಲ್ಲ; ಸ್ವಯಂಭೂಃ – ಪರಮಾತ್ಮತತ್ತ್ವದ ಅನುಭವದಿಂದ ತನ್ನ ಇರವನ್ನು ತಾನಾಗಿಯೇ ಪಡೆದಿರುವ; ಸಃ – ಸಮಾಧಿಯ ಸ್ಥಿತಿಯಲ್ಲೂ ಜಡ ಮತ್ತು ಜೀವಗಳೆಲ್ಲ ಪರಮಾತ್ಮನ ಶರೀರವೆಂದು ವಿಶಿಷ್ಟವಾದ ಏಕತೆಯನ್ನೇ ಗಮನಿಸುವ ಆ ಬ್ರಹ್ಮಜ್ಞಾನಿಯು; ಅಪಾಪವಿದ್ಧಂ – ಪುಣ್ಯಪಾಪಕರ್ಮಗಳ ಅಂಟು ಎಂದೂ ಎಳ್ಳಷ್ಟೂ ಇಲ್ಲದ; ಶುದ್ಧಂ – ಆದುದರಿಂದಲೇ ಅಜ್ಞಾನಾದಿಗಳಿಲ್ಲದ; ಅಕಾಯಂ – ಕರ್ಮಗಳಿಂದ ಒದಗುವಂತಹ ಹೇಯವಾದ ಯಾವುದೇ ಶರೀರವಿಲ್ಲದ; ಅವ್ರಣಂ – ಆದುದರಿಂದಲೇ ಒಂದಿಷ್ಟೂ ಘಾಸಿಯಾಗದ; ಅಸ್ನಾವಿರಂ – ಇಂದ್ರಿಯಗಳ ಸ್ರಾವವೂ ಅದಕ್ಕೆ ಕಾರಣವಾದ ನರನಾಡಿಗಳೂ ಸಹ ಇಲ್ಲದ; ಶುಕ್ರಂ – ಆದುದರಿಂದಲೇ ನಿಷ್ಕಲಂಕವೂ[2] ತೇಜಸ್ವಿಯೂ ಆದ ಪರಮಾತ್ಮತತ್ತ್ವವನ್ನು; ಪರ್ಯಗಾತ್ – ಎಲ್ಲ ರೀತಿಯಿಂದಲೂ ಪಡೆದು ಅನುಭವಿಸುತ್ತಾನೆ (ಮತ್ತು) ; ಅರ್ಥಾನ್ – ಮೇಲೆ ತಿಳಿಸಿದ ತತ್ತ್ವ ಹಿತ ಪುರುಷಾರ್ಥ ಮುಂತಾದ ಎಲ್ಲ ವಿಚಾರಗಳನ್ನೂ; ಶಾಶ್ವತೀಭ್ಯಃ – ಸ್ಥಿರವಾಗಿ ಬಹಳ ; ಸಮಾಭ್ಯಃ – ಹಿಂದಿನ ಕಾಲದಿಂದಲೂ ಸಹ ಮುಂದೆ ಬಹುಕಾಲದವರೆಗೂ ಉಪಯೋಗಕ್ಕಾಗಿ ; ಯಾಥಾತಥ್ಯತಃ – ಇರುವುದಿರುವಂತೆ ವಿವೇಚಿಸಿ ; ವ್ಯದಧಾತ್ ; ತಾನೂ ದೃಢಪಡಿಸಿಕೊಂಡು ಇತರರಿಗೂ ವಿವರಿಸಿ ತಿಳಿಸುತ್ತಾನೆ.

### ಛಾಯಾಪದ್ಯ

ಅವನು ಎಲ್ಲೆಡೆ ಸುತ್ತುವರೆದನು ಪೊಳೆವನಂ, ಮೈಯಿಲ್ಲನಂ
ಗಾಸಿಯಿಲ್ಲನ, ನರಗಳಿಲ್ಲನ, ಶುದನಂ, ಕೊಳೆಯಿಲ್ಲನಂ।
ಕವಿಯು ಮನವೆತ್ತವನು ಪರಿಪರಿಯಾಗಿ ತನ್ನೊಳೆ ನಿಂತವನ್,
ನಿಜದಿ ಪುರುಳಣೆಗೊಳಿಸಿದಂ ಚಿರಕಾಲ ನೆಲೆಯಾಗಿರುವವೋಲ್॥

## ತಾತ್ಪರ್ಯಾರ್ಥ

### ಸಾಧಕನು ತಿಳಿದಿರಬೇಕಾದುದೇನು?

"ಪರಬ್ರಹ್ಮನೇ ವಿಶ್ವಕ್ಕೆ ಪ್ರಭು; ವಿಶ್ವವೇ ಇವನ ಅಧೀನವಾದುದು; ಈತನು ವಿಶ್ವಕ್ಕೇ ಅಂತರಾತ್ಮನು; ಈತನು ಇತರ ವಸ್ತುಗಳಲ್ಲಿ ಇಲ್ಲದ ವಿಚಿತ್ರಶಕ್ತಿಸಂಪನ್ನನು[3]" ಎಂದೂ, ಜಗತ್ತನ್ನೇ ಬ್ರಹ್ಮಾತ್ಮಕವಾದುದೆಂದೂ

---

1. ವ್ಯಾಪಕವಾದ ಆಲೋಚನೆಯಿಂದ 2. ದೋಷರಹಿತವೂ

3. ಆಶ್ಚರ್ಯಕರವಾದ ಶಕ್ತಿಯಿಂದ ಕೂಡಿದವನು.

ತಿಳಿದ ಸಾಧಕನಾದ ಮುಮುಕ್ಷುವು ಬ್ರಹ್ಮಪ್ರಾಪ್ತಿಗಾಗಿ ಬ್ರಹ್ಮನಲ್ಲಿ ಅನುಸಂಧಾನ ಮಾಡುವ ಇತರ ಆಕಾರವಿಶೇಷಗಳನ್ನೂ "ಸಪರ್ಯಗಾತ್" ಎಂಬ ಮಂತ್ರದಿಂದ ತಿಳಿಸುತ್ತಾನೆ.

## ಆತ್ಮಜ್ಞಾನಿಯ ಲಕ್ಷಣ

ಜೀವಾತ್ಮ ಪರಮಾತ್ಮರ ಸ್ವರೂಪ ಸ್ವಭಾವಗಳನ್ನು ತಿಳಿದ ಮುಮುಕ್ಷುವು ಕವಿ ´ಸಾರ್ವಭೌಮರಾದ ವಾಲ್ಮೀಕಿ ವ್ಯಾಸಾದಿಗಳಂತೆ ಇತರರ ಉಪಕಾರಕ್ಕಾಗಿ ಪರಮಪುರುಷನ ದಿವ್ಯಲೀಲಾ ವಿನೋದಗಳನ್ನೂ ಅವನ ಅನಂತ ಕಲ್ಯಾಣಗುಣಗಳನ್ನೂ ಹೃದಯಸ್ಪರ್ಶಿಯಾಗಿ ಚಿತ್ರಿಸುತ್ತ ತಾನು ಕಂಡ ತತ್ತ್ವ ಹಿತ ಪುರುಷಾರ್ಥಗಳನ್ನು ಪ್ರಕಾಶಗೊಳಿಸುವ ಗ್ರಂಥಗಳನ್ನು ರಚಿಸುವನು. ಈತನು ಯೋಗಾಭ್ಯಾಸವನ್ನು ಮಾಡಿ ಶುದ್ಧವಾದ ಮನಸ್ಸಿನಿಂದ ಜೀವಾತ್ಮನ ಸ್ವರೂಪವನ್ನು ಧ್ಯಾನಿಸುವನು.

ಈತನು ವಿಷಯವೈರಾಗ್ಯದಿಂದಲೂ, ಭಗವಂತನ ಸೌಂದರ್ಯ ಸೌಶೀಲ್ಯಾದಿಗಳ ಚಿಂತನೆಯಿಂದಲೂ ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳುವನು. ಯೋಗಾಭ್ಯಾಸದಿಂದ ಜಯಿಸಲು ಸಾಧ್ಯವಾದ ಕಾಮಕ್ರೋಧವೇ ಮೊದಲಾದ ಅಂತಶ್ಶತ್ರುಗಳನ್ನು ಜಯಿಸುವನು. ಈತನು ತನ್ನ ವಾದದ ಚಾತುರ್ಯದಿಂದ ಶಾಸ್ತ್ರವಿರುದ್ಧವಾಗಿ ವಾದಿಸುವವರ ಬಾಯನ್ನು ಕಟ್ಟುವನು. ಬ್ರಹ್ಮದ ಸಾಕ್ಷಾತ್ಕಾರವಾಗುವವರೆಗೆ ಪರಮ ಪುರುಷಾರ್ಥವನ್ನೂ, ಅದನ್ನು ಪಡೆಯುವ ಉಪಾಯವಿಶೇಷವನ್ನೂ ಪರಮಪುರುಷಾರ್ಥದ ಪ್ರಾಪ್ತಿಗೆ ವಿರೋಧಿಯಾದ ವಿಷಯಗಳನ್ನೂ ಸುಸ್ಪಷ್ಟವಾಗಿ ತಿಳಿದಿರುವನು. ಈತನು ಸಂಸಾರದ ಬಂಧವು ತಪ್ಪುವವರೆಗೆ ಪುಣವಾರ್ಥ[1]ವನ್ನು ಯಥಾರ್ಥ[2]ವಾಗಿ ಹೃದಯದಲ್ಲಿ ಧರಿಸುವನು. ಕುಮತಿಗಳ ವಾದದಿಂದಲೂ ವ್ಯತ್ಯಾಸಗೊಳ್ಳದಂತಹ ಪರಮಾತ್ಮ ಮತ್ತು ಜೀವಾತ್ಮರ ವಿಷಯದಲ್ಲಿ ನಿಶ್ಚಯವಾದ ಜ್ಞಾನವುಳ್ಳವನಾಗಿರುವನು. (ಇಂತಹ ಗುಣಗಳಿಂದ ಕೂಡಿದವನನ್ನು ಆತ್ಮಜ್ಞಾನಿ ಎಂದು ಕರೆಯುವರು.)

## ಪರಮಾತ್ಮನ ಲಕ್ಷಣ

ಪರಮಾತ್ಮನು ಸ್ವಯಂಪ್ರಕಾಶವುಳ್ಳವನು.[3] ಸ್ವೇಚ್ಛೆಯಿಂದ ಸ್ವೀಕರಿಸಿದ ಸುಂದರವೂ, ಸುಕುಮಾರವೂ ಆದ ಶರೀರ ಉಳ್ಳವನು. ಪುಣ್ಯ ಪಾಪಗಳ ಫಲಾನುಭವಕ್ಕಾಗಿ ಉಂಟಾದ ಶರೀರವಿಲ್ಲದವನು. ಯಾವೊಂದು ಬಗೆಯ ರೋಗರುಜಿನಗಳೂ ಇಲ್ಲದವನು, ಸುಖದುಃಖಗಳ ಅನುಭವವನ್ನು ಉಂಟುಮಾಡುವ ನರಗಳಿಲ್ಲದವನು. ಹಸಿವು, ಬಾಯಾರಿಕೆ, ಮುಪ್ಪು, ಮರೆವು, ಶೋಕ, ಮೋಹವೆಂಬ ಆರು ವಿಧವಾದ ಅಲೆಗಳಿಲ್ಲದವನು. ಸಂಶಯ, ಅಜ್ಞಾನ ಮತ್ತು ವಿಪರೀತಜ್ಞಾನವೆಂಬ ದೋಷಗಂಧವಿಲ್ಲದವನು, ಅಜ್ಞಾನಾದಿ ದೋಷಗಳ ಕಾರ್ಯಗಳೂ, ಕಾರಣಗಳೂ ಆದ ಪುಣ್ಯಪಾಪಗಳಾದ ಕರ್ಮಗಳ ಸಂಬಂಧವಿಲ್ಲದವನು.

ಮುಮುಕ್ಷುವು ಭಗವಂತನನ್ನು ಹೀಗೆ ಅರಿತು ಅನುಸಂಧಾನ ಮಾಡಿ ಆತನನ್ನು ಪಡೆಯುವನು.

## ಮತ್ತೊಂದು ರೀತಿಯ ಅರ್ಥ

'ಸಃ' ಮೊದಲಾದ ಪದಗಳನ್ನು ಪರಬ್ರಹ್ಮನ ಪರವಾಗಿಯೂ ಶುಕ್ರಂ ಮೊದಲಾದ ಪದಗಳನ್ನು ಶುದ್ಧ ಜೀವಾತ್ಮನ ಪರವಾಗಿಯೂ ಅರ್ಥ ಮಾಡುತ್ತಾರೆ.

---

1. ಸಕಲವೇದಸಾರವಾದ 'ಓಂ' ಎಂಬ ಅಕ್ಷರವು ಚಿದಚಿತ್ತುಗಳು ಯಾವಾಗಲೂ ಪರಮಾತ್ಮನಿಗೆ ಅಧೀನ ಎಂದು ತಿಳಿಸುತ್ತದೆ.

2. ವಸ್ತುಗಳ ಸ್ವರೂಪವನ್ನು ಗುಣಗಳನ್ನೂ ಇದ್ದಂತೆಯೇ.

3. ಬೇರೆ ಪ್ರಕಾಶದ ಸಹಾಯವಿಲ್ಲದೆ ಪ್ರಕಾಶಿಸುವವನು.

### ಪರಬ್ರಹ್ಮ ಲಕ್ಷಣ

"ಪರಬ್ರಹ್ಮನು ಸರ್ವಜ್ಞನು. ಪಾಂಚರಾತ್ರಾದಿ ಆಗಮಗಳ ಉಪದೇಶಕನು. ಈತನು ಚೇತನರ ಮನಸ್ಸು ಮೊದಲಾದ ಇಂದ್ರಿಯಗಳ ಪ್ರೇರಕನು. ತನ್ನ ಸಂಕಲ್ಪ[1] ಮಾತ್ರದಿಂದ ಜಗತ್ತನ್ನು ಸೃಷ್ಟಿಸಿ ರಕ್ಷಿಸುವನು. ಈತನು ಸರ್ವವ್ಯಾಪಿಯಾದವನು. ಧರ್ಮರಕ್ಷಣೆಗಾಗಿ ದುಷ್ಟರ ಸಂಹಾರ ಮಾಡಲು ಸ್ವೇಚ್ಛೆಯಿಂದ ಮೀನು ಮೊದಲಾದ ಅವತಾರಗಳನ್ನೆತ್ತುವನು. ಕಾರ್ಯಪದಾರ್ಥವಾದ ವಿಶ್ವವನ್ನು ಅನಾದಿ ಕಾಲದಿಂದಲೂ ಪೂರ್ವಪೂರ್ವ ಕಲ್ಪಗಳಲ್ಲಿ ಇದ್ದಂತೆ ಐಂದ್ರಜಾಲಿಕನ ಮಾಯೆಯಂತೆ ಅಲ್ಲದೆ, ಯಥಾರ್ಥವಾಗಿ ಸತ್ಯವಾಗಿ ಸೃಷ್ಟಿಸುತ್ತಲಿರುವನು. ಈತನು ಅನಂತ ಆಶ್ಚರ್ಯಗುಣಗಳಿಂದ ಕೂಡಿದ್ದಾನೆ" ಎಂಬ ಮತ್ತೊಂದರ್ಥವೂ ಗೊತ್ತಾಗುತ್ತದೆ.

### ಚೇತನರು

ಚೇತನನು ಸ್ವಪ್ರಕಾಶರೂಪನು. ಪ್ರಾಕೃತಶರೀರ[2]ವಿಲ್ಲದವನಾದುದರಿಂದಲೇ ರೋಗರುಜಿನಗಳಿಲ್ಲದವನು. ಜ್ಞಾನಸ್ವರೂಪನಾದವನು. ಈತನು ಅಜ್ಞಾನಾದಿ ದೋಷರಹಿತನು. ನೋವಿನ ಅನುಭವವನ್ನು ಉಂಟುಮಾಡುವ ನರಗಳಿಲ್ಲದವನು. ಅಜ್ಞಾನದ ಕಾರ್ಯವೂ ಕಾರಣವೂ ಆದ ಪುಣ್ಯಪಾಪವಿಲ್ಲದವನು. ಇವು ಎಲ್ಲ ಚೇತನರ ಸಾಧಾರಣ ವಾದ ಗುಣಗಳು.

### ಬದ್ಧ ಚೇತನರು

ಇಂಥಾ ಚೇತನರು ಬದ್ಧರು, ಮುಕ್ತರು, ಮತ್ತು ನಿತ್ಯರು ಎಂದು ಮೂರು ಬಗೆಯಾಗಿದ್ದಾರೆ. ಅನಾದಿ ಯಾದ ಕರ್ಮಗಳ ಫಲವಾದ ಪುಣ್ಯಪಾಪಗಳನ್ನು ಅನುಭವಿಸಲು ಭೂಮಿಯಲ್ಲಿ ಶರೀರವನ್ನು ಪಡೆದು ಬಂದು ಹುಟ್ಟು– ಸಾವಿನ ಸುಳಿಯಲ್ಲಿ ಸಿಲುಕಿದವರನ್ನು ಬದ್ಧ ಚೇತನರೆನ್ನುತ್ತಾರೆ.

### ಮುಕ್ತ ಚೇತನರು

ಅನಾದಿ ಕರ್ಮವಾಸನೆಯಿಂದ ಭೂಮಿಯಲ್ಲಿ ಹುಟ್ಟಿ, ಫಲಾಪೇಕ್ಷೆಯಿಲ್ಲದೆ ಭಗವಂತನ ಪ್ರೀತ್ಯರ್ಥವಾಗಿ ವರ್ಣಾಶ್ರಮ ಧರ್ಮಗಳನ್ನು ಮಾಡುತ್ತಾ ತೈಲಧಾರೆಯಂತೆ ಎಡೆಬಿಡದೆ ಪರಮಾತ್ಮನನ್ನು ಧ್ಯಾನಿಸುತ್ತಾ, ಸಂಸಾರ ಬಂಧನದಿಂದ ಬಿಡುಗಡೆಯನ್ನು ಹೊಂದಿ, ಮತ್ತೆ ಹುಟ್ಟದವರನ್ನು ಮುಕ್ತರೆಂದು ಕರೆಯುತ್ತಾರೆ.

### ನಿತ್ಯ ಚೇತನರು

ನಿತ್ಯಚೇತನರು ಎಂದೆಂದಿಗೂ ಹುಟ್ಟದೇ ವೈಕುಂಠದಲ್ಲಿ ಪರಬ್ರಹ್ಮನ ಸೇವೆಯನ್ನು ಮಾಡುತ್ತಾ ವಿಹರಿಸು ವರು ಎಂಬ ಅರ್ಥವೂ ವ್ಯಕ್ತವಾಗುತ್ತದೆ.

## ವೇದಾಂತಾಚಾರ್ಯ ಭಾಷ್ಯ

### ಬ್ರಹ್ಮಜ್ಞಾನಿಯಲ್ಲಿರುವ ವಿಶೇಷ

ಮತ್ತೆ ಈಗ ಎಲ್ಲದರ ಒಡೆಯನು ಮತ್ತು ಎಲ್ಲ ವಸ್ತುಗಳೂ ಅವನ ಅಧೀನ ಎಂಬ ತತ್ತ್ವಗಳನ್ನು ತಿಳಿದಿರುವ ಉಪಾಸಕನಿಗೆ ಮತ್ತೂ ತಿಳಿದಿರಬೇಕಾದ ವಿಶೇಷ ಅಂಶವನ್ನು ತಿಳಿಸುತ್ತಾನೆ. "ಸಪರ್ಯಗಾತ್.........ಸಮಾಭ್ಯಃ" ಎಂದು.

---

1. ಜ್ಞಾನದ ಒಂದು ಅವಸ್ಥೆ. ಇಂತಹದು ಆಗಬೇಕು ಇಂತಹದನ್ನು ಮಾಡಬೇಕು ಎಂಬ ಜ್ಞಾನ.
2. ಪುಣ್ಯಪಾಪಗಳ ಸುಖದುಃಖಾನುಭವಕ್ಕಾಗಿ ಭೂಮಿ, ನೀರು ಮೊದಲಾದ ಐದು ಅಂಶಗಳಿಂದ ಉಂಟಾಗಿರುವ ದೇಹ.

## ಪದವಿವರಣೆ

**ಸಃ** – ಎಲ್ಲ ವಸ್ತುಗಳಿಗೂ ಬ್ರಹ್ಮವು ಅಂತರಾತ್ಮವಾಗಿದೆ ಎಂದು ಉಪಾಸನೆ ಮಾಡುವವನು.

**ಪರ್ಯಗಾತ್** – "ಬ್ರಹ್ಮವನ್ನು ತಿಳಿದವನು ತನಗಿಂತ ಶ್ರೇಷ್ಠವಾದ ಆ ಬ್ರಹ್ಮವನ್ನೇ ಪಡೆಯುವನು,"[1] ಎಂಬ ನಿಯಮದಂತೆ, ಸಮಾಧಿಸ್ಥಿತಿಯಲ್ಲಿ ಉಂಟಾದ ಅನುಭವಮಾತ್ರದಿಂದಲೇ ಬ್ರಹ್ಮವನ್ನು ಪಡೆದಿರುವನು ಎಂಬ ಅರ್ಥದಲ್ಲಿ ಈ ಮಾತು "ಇಲ್ಲೇ ಬ್ರಹ್ಮವನ್ನು ಚೆನ್ನಾಗಿ ಪಡೆಯುವನು"[2] ಎಂಬ ಮಾತಿನಂತೆ ನಡೆದ ವಿಷಯವನ್ನೇ ತಿಳಿಸುತ್ತದೆ ಎನ್ನಬಹುದು.

**ಶುಕ್ರಂ** – ಶುದ್ಧವಾಗಿ ತಾನೇ ತಾನಾಗಿ ಹೊಳೆಯುವ ರೂಪದಲ್ಲಿರುವವನನ್ನು.

**ಅಕಾಯಂ** – ಎಲ್ಲ ವಸ್ತುವೂ ಇವನ ಶರೀರ ಎನಿಸಿದರೂ ಇತರ ಜೀವಗಳಿಗಿರುವಂತೆ ಪುಣ್ಯಪಾಪಕರ್ಮಗಳಿಂದ ಉಂಟಾಗುವ ಭೌತಿಕ[3] ಶರೀರ ಇಲ್ಲದ ಇವನನ್ನು.

**ಅವ್ರಣಂ, ಅಸ್ನಾವಿರಂ** – ಆದುದರಿಂದಲೇ; ಗಾಯವಿಲ್ಲದವನೂ, ನರನಾಡಿಗಳಿಲ್ಲದವನೂ, ಆದವನನ್ನು.

**ಶುದ್ಧಂ** – ಅಜ್ಞಾನ ಮುಂತಾದ ದೋಷಗಳ ಅಲ್ಪವಾಸನೆಯೂ ಇಲ್ಲದವನನ್ನು.

**ಅಪಾಪವಿದ್ಧಂ** – ಅಜ್ಞಾನ ಮುಂತಾದವುಗಳಿಗೆ ಕಾರಣವಾದ ಪುಣ್ಯಪಾಪಗಳೆಂಬ ಯಾವುದೇ ಬಗೆಯ ಕರ್ಮಗಳ ಸಂಬಂಧವೂ ಇಲ್ಲದವನನ್ನು, ಎಂದರ್ಥ.

## ಪುಣ್ಯವೂ ಹೇಗೆ ಪಾಪವೆನಿಸುವುದು ?

"ಪುಣ್ಯವೂ ಇಲ್ಲ, ಪಾಪವೂ ಇಲ್ಲ"ಎಂದು ಆರಂಭಿಸಿ, "ಎಲ್ಲ ಪಾಪಗಳೂ ಅಲ್ಲಿಂದ ಕಳೆದು ಹೋಗುವುವು"[4] ಎಂದು ಮುಗಿಸಿರುವುದೇ ಇದಕ್ಕೆ ಕಾರಣ.

ಛಾಂದೋಗ್ಯ ಉಪನಿಷತ್ತಿನ ವಚನಗಳಲ್ಲಿ ಮೊದಲು ದುಃಖ, ಪುಣ್ಯ, ಪಾಪ ಎಂಬುದಾಗಿ ತಿಳಿಸಿರುವ ವಿವಿಧ ವಿಷಯಗಳನ್ನೂ ಕೊನೆಗೆ ಒಟ್ಟಾಗಿ ಹೇಳುವಾಗ, "ಈ ಎಲ್ಲ ಪಾಪಗಳೂ" ಎಂದಿರುವುದರಿಂದ ಇವುಗಳ ಮಧ್ಯೆ ಸೇರಿರುವ ಪುಣ್ಯವೂ ಸಹ ಪಾಪದ ಗುಂಪಿನಲ್ಲೇ ಸೇರಿದಂತಾಗುವುದು. ಹಾಗೂ ಮುಕ್ತಿಗೆ ಪಾಪವು ತಡೆಯಾಗುವಂತೆ ಸ್ವರ್ಗಾದಿ ಫಲಗಳನ್ನು ಕೊಡುವ ಪುಣ್ಯಗಳೂ ಸಹ ತಡೆಯಾಗುವುವು. ಈ ಕಾರಣದಿಂದ ಮುಕ್ತಿಯನ್ನು ಅಪೇಕ್ಷಿಸುವವನಿಗೆ ಪುಣ್ಯವು ಪಾಪದಂತೆಯೇ ಸ್ವೀಕಾರಕ್ಕೆ ಯೋಗ್ಯವಲ್ಲ.

## ಪರಮಾತ್ಮನೇ ಗುರಿ ಮತ್ತು ಸಾಧನ

ಹೀಗೆ ಯಾವುದೇ ದೋಷಗಳಿಗೂ ಕಡುವಿರೋಧಿಯೂ, ಅವು ಇಂತಿಷ್ಟೂ ಇಲ್ಲದವನೂ ಆದ ಪರಮಾತ್ಮನು ಮಾತ್ರ ಮುಕ್ತಿಯನ್ನು ಅಪೇಕ್ಷಿಸುವವನು ಪಡೆಯಬೇಕಾದ ಮುಖ್ಯ ವಸ್ತುವೂ ಪಡೆಯಲು ಸಾಧನ ಸಲಕರಣೆಯೂ ತಾನೇ ಆಗಿರುವನು.

---

1. ಬ್ರಹ್ಮವಿದಾಪ್ನೋತಿ ಪರಮ್. ತೈ. ಆನಂದ. ೧. ೧.  2. ಅತ್ರ ಬ್ರಹ್ಮ ಸಮಶ್ನುತೇ. ಕಠ. ೨. ೬. ೧೪.
3. ಪಂಚ ಮಹಾಭೂತಗಳಿಂದ ತಯಾರಾದ.
4. 'ನ ಸುಕೃತಂ ನ ದುಷ್ಕೃತಮ್' ಇತ್ಯಾರಭ್ಯ 'ಸರ್ವೇ ಪಾಪ್ಮಾನೋಽತೋ ನಿವರ್ತನ್ತೇ'. ಛಾಂ. ೮. ೪. ೧.

## ಬ್ರಹ್ಮಜ್ಞಾನಿಗೆ ತಿಳಿದಿರಬೇಕಾದ ಇತರ ವಿಚಾರಗಳು

ಪೂರ್ವಾರ್ಧದಲ್ಲಿ ಅವನು ಎಂಬ ಶಬ್ದದಿಂದ ತಿಳಿಸಲ್ಪಟ್ಟ ಬ್ರಹ್ಮಜ್ಞಾನಿಯು ಎಲ್ಲ ವಿಚಾರವನ್ನೂ ಅರಿತವನು ಎಂಬ ವಿಶೇಷವನ್ನು ಇನ್ನು ಮುಂದೆ ಹೇಳಲಾಗುತ್ತದೆ.

**ಕವಿಃ** – ವಿಷಯಗಳನ್ನೆಲ್ಲಾ ಪೂರ್ಣವಾಗಿ ತಿಳಿದು ಎಲ್ಲರನ್ನೂ ವಿಚಾರಿಸಿ ತಿಳಿಯುವಂತೆ ಹೇಳಬಲ್ಲವನು ಅಥವಾ ವ್ಯಾಸಾದಿ ಮಹರ್ಷಿಗಳಂತೆ ಶ್ರೇಷ್ಠವಾದ ಪರಮಾತ್ಮತತ್ತ್ವವನ್ನೂ ಅವರ ಗುಣಗಳನ್ನೂ ಚೆನ್ನಾಗಿ ತಿಳಿಸಿಕೊಡುವಂತಹ ಗ್ರಂಥಗಳನ್ನು ರಚಿಸಬಲ್ಲವನು ಎಂದರ್ಥ.

**ಮನೀಷೀ** - ಮನಸ್ಸನ್ನು ಹತೋಟಿಗೊಳಪಡಿಸುವಂತಹ ಜ್ಞಾನವೇ 'ಮನೀಷೆ' ಎನಿಸುವುದು. ಅದನ್ನು ಪಡೆದಿರುವವನೇ ಮನೀಷೀ. ಅಭ್ಯಾಸ ಮತ್ತು ವೈರಾಗ್ಯಗಳಿಂದ ಒಳ ಇಂದ್ರಿಯವಾದ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಿರುವವನು ಎಂದರ್ಥ.

**ಪರಿಭೂಃ** - ಸುತ್ತ ಎಲ್ಲೆಡೆಯೂ ಇರಬಲ್ಲವನೇ ಬೇರೆ ಬೇರೆ ವಿದ್ಯೆಗಳನ್ನು ಕಲಿತಿರುವವರನ್ನೆಲ್ಲ ಇವನು ಮೀರಿಸಿ ಇರುತ್ತಾನೆ ಎಂದಾಗಲಿ, ಅಡಗಿಸಲಾಗದ ಶತ್ರುಗಳಂತಿರುವ, ಆಸೆ–ಕೋಪ–ಜಿಗುಟುತನ ಮುಂತಾದವುಗಳನ್ನು ಅಡಗಿಸುವಂತಹವನು ಎಂದಾಗಲಿ, ಅರ್ಥ.

**ಸ್ವಯಂಭೂಃ** – ಬೇರೆ ಹೊರ ಪದಾರ್ಥಗಳ ಸಹಾಯವಿಲ್ಲದೆಯೇ ಇರಬಲ್ಲವನು. ಅಂದರೆ ಶಾಶ್ವತವಾದ ಜೀವಾತ್ಮವಾದ ತನ್ನ ಸ್ವರೂಪವನ್ನು ಸರಿಯಾಗಿ ಕಂಡು ತಿಳಿದಿರುವವನು ಎಂದು ಭಾವಾರ್ಥ.

**ಯಾಥಾತಥ್ಯತಃ, ಅರ್ಥಾನ್, ವ್ಯದಧಾತ್** – ಮಾನವಜೀವನದ ಉತ್ತಮವಾದ ಗುರಿಯನ್ನೂ, ಅದನ್ನು ಸ್ಥಾಪಿಸುವ ದಾರಿಯನ್ನೂ, ಅವುಗಳಿಗೆ ತಡೆಯಾಗಿರುವುದನ್ನೂ, ಇವೇ ಮುಂತಾದ ಎಲ್ಲ ವಿಷಯಗಳನ್ನೂ, ಇದ್ದುದಿದ್ದಂತೆ ತಿಳಿದು, ವಿಮರ್ಶಿಸಿ, ಮನಸಾರೆ ಒಪ್ಪಿ, ಅದರನಿರ್ಣಯವನ್ನು ಮನಸ್ಸಿನಲ್ಲಿ ಮರೆಯದೆ ಇಟ್ಟುಕೊಂಡಿರುತ್ತಾನೆ.

**ಶಾಶ್ವತೀಭ್ಯಃ, ಸಮಾಭ್ಯಃ** – ಯಾವುದೇ ಎಡರು ತೊಡರುಗಳನ್ನು ನಿವಾರಿಸಿಕೊಂಡು ನೇರವಾಗಿ ಪರಮಾತ್ಮತತ್ತ್ವವನ್ನು ಪಡೆಯುವವರೆಗೆ ಎಂದು ಭಾವಾರ್ಥ.

## ಮತ್ತೊಂದು ರೀತಿಯ ಅರ್ಥ

ಅಥವಾ ಪೂರ್ವಾರ್ಧದಲ್ಲಿರುವ 'ಇಂತಹುದನ್ನು ಎಂಬ ಅರ್ಥ ಬರುವ ದ್ವಿತೀಯಾ ವಿಭಕ್ತಿಯ ಪದಗಳೆಲ್ಲವೂ ಜೀವಾತ್ಮನನ್ನು ಕುರಿತುದಾಗಿವೆ. ಉಳಿದಿರುವ ಅಂತಹವನು' ಎಂಬ ಅರ್ಥ ಬರುವ ಪ್ರಥಮಾವಿಭಕ್ತಿಯ ಪದಗಳೆಲ್ಲವೂ ಪರಮಾತ್ಮನನ್ನೂ ಕುರಿತುದಾಗಿವೆ, ಎಂದಿಟ್ಟುಕೊಂಡೂ ವಿವರಿಸಬಹುದಾಗಿದೆ.

ಹಾಗೆ ವಿವರಿಸಿದಾಗ 'ಬೆಳಗಿರುವ' ಮುಂತಾದ ಪದಗಳು ಎಲ್ಲ ಜಡ ವಸ್ತುಗಳ ಸಂಬಂಧವಿಲ್ಲದ ಹಾಗೂ ಸ್ವಲ್ಪವೂ ಪುಣ್ಯಪಾಪಗಳ ಸಂಬಂಧವಿಲ್ಲದ ಪರಿಶುದ್ಧ ಜೀವಾತ್ಮನನ್ನೇ ಕುರಿತವಾಗುವುವು.

## ಮತ್ತೊಂದು ಪದವಿವರಣೆ

ಅಂತಹ ಪರಿಶುದ್ಧವಾದ ಜೀವತತ್ತ್ವವನ್ನು

**ಸಃ** - ಆ ಪರಮಾತ್ಮನು.

**ಪರ್ಯಗಾತ್** - ಸುತ್ತ ಆವರಿಸಿಕೊಂಡಿರುವನು. ಕವಿ ಮುಂತಾದ ಪದಗಳು ಸುಲಭವಾಗಿಯೇ ಅರ್ಥವಾಗುವುವು.

'ಯಾಥಾತಥ್ಯತ'ಃ – ಮುಂತಾದ ಭಾಗಗಳಲ್ಲಿ.

**ಅರ್ಥಾನ್** – ಹುಟ್ಟುವ ವಸ್ತುಗಳೆಲ್ಲವನ್ನೂ.

**ಶಾಶ್ವತೀಭ್ಯಃ ಸಮಾಭ್ಯಃ** – ಜಗತ್ತಿನ ನಾಶವು ಆರಂಭವಾಗುವವರೆಗೂ ಇರಲು ಸಾಧ್ಯವಾಗುವಂತೆ.

**ಯಾಥಾತಥ್ಯತಃ, ವ್ಯದಧಾತ್**– ಸತ್ಯವಾಗಿಯೇ ತನ್ನಿಂದ ಹೊರಹೊಮ್ಮಿಸಿರುವನು. ಬರೀ ಯಕ್ಷಿಣಿಗಾರನಂತೆ[1] ಇಲ್ಲದುದನ್ನು ಇರುವಂತೆ ಕಾಣಿಸುವ ಹಾಗೆ ತಯಾರಿಸಿಲ್ಲ.

## ಈಶಾವಾಸ್ಯ ಪ್ರಕಾಶಿಕೆ

**(ಭಾ) ವೇದಿತವ್ಯ ವಿಶೇಷಃ** -- ಪರಮಾತ್ಮನ ಸ್ವರೂಪದ ಬಗ್ಗೆ ವಿವೇಚನೆ ಮತ್ತು ಧ್ಯಾನಯೋಗಾದಿಗಳು.

### ದೇವರಿಗೆ ಶರೀರ ಉಂಟೆ?

**ಅಕಾಯಂ**– (ಭಾ) **ಕರ್ಮ ಶರೀರ ರಹಿತಂ**

ಪುಣ್ಯಪಾಪಗಳಿಂದ ಉಂಟಾಗುವಂತಹ ನಶ್ವರ[2] ಶರೀರವಿಲ್ಲ ಎಂದಷ್ಟೆ ಅರ್ಥ. ದೇವರಿಗೆ ದಿವ್ಯವಾದ ಹಾಗೂ ಮಂಗಳಮಯವಾದ ವಿಗ್ರಹ ಇಲ್ಲದಿಲ್ಲ ಹಾಗೂ 'ನಿನ್ನ ಒಳ್ಳೆಯದಾವುವೋ ಅವನ್ನು ನೋಡುವೆನು[3]' 'ಯಾವ ಇವನು ಸೂರ್ಯನೊಳಗೆ ಚಿನ್ನದ ಬಣ್ಣದವನೋ[4]' 'ಸೂರ್ಯನಂತೆ ಬಣ್ಣವನ್ನು ಪಡೆದಿರುವನೋ[5]' 'ಇವೇ ಮುಂತಾದ ವೇದವಚನಗಳಿಗೆ ವಿರುದ್ಧವಾಗಿ ದೇವರಿಗೆ ಶರೀರವೇ ಇಲ್ಲ ಎನ್ನಲಾಗದು.

### ಪುಣ್ಯವೂ ಪಾಪವೇ

**ಪಾಪಂ** – ಸ್ವರ್ಗಾದಿಗಳಿಗೆ ಕಾರಣವಾದ ಪುಣ್ಯವಿಶೇಷವನ್ನೂ ಸಹ ಇಲ್ಲಿ ಪಾಪದ ಗುಂಪಿಗೇ ಸೇರಿಸಿ "ಪಾಪ" ಎಂಬ ಶಬ್ದದಿಂದ ಹೇಳಲಾಗಿದೆ.

### ಕ್ರಾಂತದರ್ಶಿ ಎಂದರೇನು ?

(ಭಾ) **ಕವಿಃ– ಕ್ರಾಂತದರ್ಶೀ**– ಯೋಗಾಭ್ಯಾಸ ಬಲವಿಲ್ಲದ ಮನಸ್ಸಿನಿಂದ ತಿಳಿಯಲು ಸಾಧ್ಯವಿಲ್ಲದ ಪರಿಶುದ್ಧ ಜೀವಾತ್ಮದ ಸ್ವರೂಪವನ್ನೇ ನಿರಂತರ ಧ್ಯಾನಮಾಡುತ್ತ ಆ ಧ್ಯಾನದಿಂದ ಪರಿಪಕ್ವವಾದ ಜ್ಞಾನಯೋಗದಲ್ಲೇ ಮಗ್ನನಾದವನು.

### ಜೀವಾತ್ಮಯೋಗ

**ಮನೀಷೀ** – ಕರ್ಮಯೋಗದ ಬಗ್ಗೆ ಹಿಂದೆಯೇ "ಕುರ್ವನ್ನೇವೇಹ" ಎಂದು ಹೇಳಿ ಆಗಿದೆ. ಈಗ ಜ್ಞಾನಯೋಗದ ಫಲವಾಗಿ ಜೀವಾತ್ಮಸಾಕ್ಷಾತ್ಕಾರಕ್ಕೆ ಮಧ್ಯವರ್ತಿ ಕಾರಣವೂ ಆಗಿರುವ ಜೀವಾತ್ಮಯೋಗವನ್ನು ಇದರಿಂದ ಹೇಳಲಾಗಿದೆ.

---

1. ಮಣಿ ಮಂತ್ರಗಳಿಂದ ಆಶ್ಚರ್ಯಕರ ವಸ್ತುಗಳನ್ನು ತೋರಿಸುವವನು. 2. ರೂಪಾಂತರಗಳನ್ನು ಪಡೆಯುವ, ವ್ಯತ್ಯಾಸವಾಗುವ.
3. ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ. ಈಶಾ. ೧೬.
4. ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ. ಛಾಂ. ೧. ೬. ೬.
5. ಆದಿತ್ಯವರ್ಣಂ ತಮಸಃ ಪರಸ್ತಾತ್. ಶ್ವೇ. ೩. ೮.

ಇಲ್ಲಿ ಮನಸ್ಸನ್ನು ಯೋಗಾಭ್ಯಾಸದ ಮೂಲಕ ಜೀವಾತ್ಮನ ಕಡೆಗೆ ತಿರುಗಿಸಿರುವವನು ಮನೀಷೀ ಎಂದರ್ಥ.

ಭಗವಂತನ ಗುಣ – ವಿಭೂತಿಗಳ ಧ್ಯಾನದಲ್ಲಿ ಜೀವಾತ್ಮನಧ್ಯಾನವೂ ಒಂದಂಶವಲ್ಲವೆ. 'ಹೀಗೆ ಆನಂದಮಯ ವಾದ ತನ್ನ (ಜೀವಾತ್ಮನ) ಸ್ವರೂಪದಲ್ಲಿ ಮನಸ್ಸನ್ನು ಸಮಾಧಿಗೊಳಿಸುವ ಕ್ರಿಯೆಯನ್ನೇ ಇಲ್ಲಿ ಯೋಗ ಎಂದು ತಿಳಿಯಬೇಕು.

**ಪರಿಭೂಃ** – ಇದರ ಅರ್ಥದಿಂದ ವಿರೋಧಿ ನಿವೃತ್ತಿ[1] ಎಂಬ ಯೋಗಾಂಗ ಸೇವನೆ ತಿಳಿದು ಬರುತ್ತದೆ.

**ಸ್ವಯಂಭೂಃ** – ತನ್ನನ್ನು ನಿತ್ಯ, ಮಿಗಿಲಾದ ಸುಖದೊಡಗೂಡಿದ ಸ್ವರೂಪ ಉಳ್ಳವನು, ಎಂದು ಸಾಕ್ಷಾತ್ಕಾರ ಮಾಡಿಕೊಂಡಂಥವನು. ಯೋಗಾಭ್ಯಾಸದ ಫಲವೇ ಈ ಸಾಕ್ಷಾತ್ಕಾರ.

## ಮನಸ್ಸನ್ನು ಹಿಡಿತಕ್ಕೆ ತರುವುದು ಹೇಗೆ ?

(ಆ) **ಅಭ್ಯಾಸ ವೈರಾಗ್ಯ** – ಪರಮಾತ್ಮನ ಸೌಂದರ್ಯಾದಿಗುಣಗಳ ಧ್ಯಾನಾಭ್ಯಾಸ, ಪರಮಾತ್ಮೇತರ ವಿಷಯ ಗಳಲ್ಲಿ ವೈರಾಗ್ಯ.

ಗೀತೆಯಲ್ಲಿ 'ಖಂಡಿತವಾಗಿಯೂ ಈ ಮನಸ್ಸು ನಮ್ಮ ಹಿಡಿತಕ್ಕೆ ಸಿಗದಷ್ಟು ಚಂಚಲ. ಅಭ್ಯಾಸ[2] ಹಾಗೂ ವೈರಾಗ್ಯಗಳಿಂದ ಅದನ್ನು ಹಿಡಿತಕ್ಕೆ ತರಬಹುದು[3]' ಎಂದು ಹೇಳಿದೆ.

## ಜಪ ಎಂದರೇನು ?

**ಅರ್ಥಾನ್** – ಪ್ರಣವದ ಅರ್ಥಗಳನ್ನೂ.

"ಪರಮಾತ್ಮನನ್ನು ಕುರಿತಿರುವ ಶಬ್ದವೇ ಪ್ರಣವ ಎಂಬ ಓಂಕಾರ"[4]. "ಅದರ ಅರ್ಥವನ್ನು ಹತ್ತೆ ಮತ್ತೆ ಆವೃತ್ತಿ ಮಾಡುವುದೇ ಅದರ ಜಪ"[5] ಎಂದೂ ಸೂತ್ರದಲ್ಲಿ ಹೇಳಿರುವಂತೆ ತಿಳಿಯಬೇಕು.

## ಮತ್ತೊಂದು ರೀತಿಯ ಅರ್ಥ

**ಪರ್ಯಗಾತ್** – ಜೀವಾತ್ಮದ ಸುತ್ತಲೂ ಪರಮಾತ್ಮ ಹರಡಿಕೊಂಡಿರುವನು.

**ಕವಿಃ** – ಪಾಂಚರಾತ್ರಾದಿ[6] ಶಾಸ್ತ್ರಗಳನ್ನು ಹೇಳಿಕೊಟ್ಟವನು.

**ಮನೀಷೀ** – ಜೀವಾತ್ಮಗಳ ಮನಸ್ಸನ್ನು ತನ್ನ ಹತೋಟಿಯಲ್ಲಿ ಇಟ್ಟಿರುವವನು.

**ಪರಿಭೂಃ** – ಎಲ್ಲದರ ಹೊರಗೂ ವ್ಯಾಪಿಸಿರುವವನು.

---

1. ಕೆಟ್ಟ ಕೆಲಸಗಳನ್ನು ಮಾಡದೇ ಇರುವ ಸಂಕಲ್ಪ.
2. ಪರಮಾತ್ಮನಲ್ಲಿ ಏಕಾಕಾರತೆಯನ್ನು ಸಂಪಾದಿಸಲು ಮಾಡುವ ಮನಸ್ಸಿನ ಪ್ರಯತ್ನ.
3. ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್।
ಅಭ್ಯಾಸೇನ ಚ ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ॥ ಗೀ. ೬. ೩೫.
4. ತಸ್ಯ ವಾಚಕಃ ಪ್ರಣವಃ. ಪಾ. ಯೋ. ಸೂ. ೧. ೨೭.
5. ತಜ್ಜಪಸ್ತದರ್ಥಭಾವನಮ್. ಪಾ. ಯೋ. ಸೂ. ೧. ೨೮.
6. ಭಗವಂತನ ಅರ್ಚಾವತಾರವನ್ನು ಪೂಜಿಸುವ ಶಾಸ್ತ್ರ.

**ಸ್ವಯಂಭೂಃ** - ತನ್ನ ಸಂಕಲ್ಪ ಮಾತ್ರದಿಂದಲೇ ಮತ್ಸ್ಯ,[1] ಕೂರ್ಮ[2] ಮುಂತಾದ ನಾನಾ ರೂಪದಲ್ಲಿ ಅವತರಿಸುವವನು.

### ಪರಮಾತ್ಮನು ಸಗುಣ ಮತ್ತು ನಿರ್ಗುಣ ಹೇಗೆ ?

ಇಲ್ಲಿ "ಕವಿ" ಮುಂತಾದ ವಚನಗಳಿಂದ ಮಂಗಳಕರವಾದ ಗುಣಗಳನ್ನು ವಿಧಾನ ಮಾಡಲಾಗಿದೆ. ಛಾಂದೋಗ್ಯ ಉಪನಿಷತ್ತಿನಲ್ಲೂ "ಈ ಆತ್ಮಾ ದೋಷವಿಲ್ಲದವನು[3] ಮುಂತಾದ ಮಾತುಗಳಿಂದ ಕೆಟ್ಟ ಗುಣಗಳು ಇಲ್ಲದವನೆಂದು ಹೇಳಿ "ಇಷ್ಟವೆಲ್ಲವೂ ನೆರವೇರುವಂತಹ ಗುಣವುಳ್ಳವನು, ನೆನೆದುದೆಲ್ಲವೂ ನಡೆಯುವಂತಹ ಗುಣವುಳ್ಳವನು[4]" ಎಂದು ಮಂಗಳಕರವಾದ ಗುಣಗಳನ್ನು ವಿಧಾನ ಮಾಡಲಾಗಿದೆ. ಆದುದರಿಂದ "ಗುಣವಿಲ್ಲದವನು"[5] ಎಂಬ ಮಾತಿಗೆ ಕೆಟ್ಟ ಗುಣವಿಲ್ಲದವನು ಎಂದಷ್ಟೆ ಅರ್ಥ ಎಂಬ ಅಂಶ ಇಲ್ಲಿ ತಿಳಿದಿರಬೇಕು.

## ಪದಾರ್ಥ ದೀಪಿಕೆ

### ತಾತ್ಪರ್ಯ, ವಿವರಣೆ

" ಜೀವಾತ್ಮನು ಪರಮಾತ್ಮನನ್ನು ಮುಂದೆ ಪಡೆದೇ ಪಡೆಯುವನು. ಅದಕ್ಕಾಗಿ ಈಗಲೇ ಓಂಕಾರದ ಅರ್ಥಗಳೆಲ್ಲವನ್ನೂ ವಿವೇಚಿಸಿ ಮನಸ್ಸಿನಲ್ಲಿ ಧರಿಸಿಕೊಂಡಿರುವನು ಅಥವಾ ಶಿಷ್ಯರಿಗೆ ಉಪದೇಶಿಸಿರುವನು" ಎಂದು ಈ ಮಂತ್ರದ ತಾತ್ಪರ್ಯ.

**ಸ್ವಯಂಭೂಃ** – ಬೇರೆ ಬೇರೆ ದೇವತೆಗಳನ್ನೂ, ಇತರ ಉಪಾಯಗಳನ್ನೂ ಆಶ್ರಯಿಸಿದವರನ್ನು ತಿರಸ್ಕರಿಸುವವನು.

## ಸುಬೋಧಿನೀ

### ಸಾರಾರ್ಥ ಸಂಗತಿ

ಆರನೆಯ ಮಂತ್ರದಲ್ಲಿ ತಿಳಿಸಿದಂತಹ ಉಪಾಸಕನಿಗೆ 'ಎಲ್ಲವೂ ಪರಮಾತ್ಮನ ಶರೀರ ಅವನೇ ಎಲ್ಲ ಆತ್ಮಗಳಿಗೂ ಆತ್ಮ' ಎಂಬ ಜ್ಞಾನ ಸಿದ್ಧಿಸಿದಾಗ ಲೌಕಿಕವಾದ ಶೋಕ - ಮೋಹಗಳು ಬರಲಾರವೆಂದು ಏಳನೆಯ ಮಂತ್ರದಲ್ಲಿ ಮೊದಲನೆಯ ಸ್ತರದ ಫಲಿತಾಂಶಗಳನ್ನು ತಿಳಿಸಿ, ಈಗ ಅವನಿಗೆ ಎಲ್ಲ ರೀತಿಯಲ್ಲೂ ಪರಮಾತ್ಮನ ಅನುಭವಗಳು ಎರಡನೆಯ ಸ್ತರದಲ್ಲಿ[6] ಆಗುವುವೆಂದು ತಿಳಿಸುತ್ತಾನೆ.

---

1. ಪರಮಾತ್ಮನು ವೇದಗಳನ್ನು ಉದ್ಧಾರಮಾಡಲು ಮಾಡಿದ ಮೀನಿನ ಅವತಾರ. (ರೂಪ)
2. ದೇವತೆಗಳಿಗೆ ಅಮೃತವನ್ನು ಕೊಡಲು ಸಮುದ್ರಮಥನದಲ್ಲಿ ಮಂದರ ಪರ್ವತವನ್ನು ಎತ್ತಿ ಹಿಡಿಯಲು ಮಾಡಿದ ಆಮೆಯ ಅವತಾರ. (ರೂಪ)
3. ಏಷ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ. ಛಾಂ. ೮. ೧. ೫.
4. ಸತ್ಯಕಾಮಃ ಸತ್ಯಸಂಕಲ್ಪಃ. ಛಾಂ. ೮. ೧. ೫. 5. ನಿರ್ಗುಣಮ್. ಆತ್ಮೋಪನಿಷತ್. 6. ಎರಡನೆಯ ಮೆಟ್ಟಿಲು.

**ಪದವಿವರಣೆ**

**ಶುದ್ಧಂ** - ಹಸಿವು ನೀರಡಿಕೆ ಮುಂತಾದ ದೋಷಗಳಿಲ್ಲದವನು.

**ಪರಿಭೂಃ** - 'ಅರಿಷಡ್ವರ್ಗವನ್ನು[1]' ಜಯಿಸಿದವನು.

**ಅರ್ಥಾನ್** - ಉಪನಿಷತ್ತಿನ ವಿಚಾರಗಳನ್ನು.

**ಶಾಶ್ವತೀಭ್ಯಃ, ಸಮಾಭ್ಯಃ** - ಉಪಾಸನೆ ಪೂರ್ಣವಾಗುವಷ್ಟು ಕಾಲವೂ.

**ಮತ್ತೊಂದು ರೀತಿ ಅರ್ಥ**

ಈ ಮಂತ್ರಕ್ಕೆ ಮತ್ತೊಂದು ರೀತಿಯ ಅರ್ಥವನ್ನೂ ಮಾಡಬಹುದಾಗಿದೆ. 'ಉತ್ತಮವಾದ ತಮ್ಮ ತಮ್ಮ ಸ್ವರೂಪವನ್ನೇ ಮುಕ್ತಿಯಲ್ಲಿ ಶಾಶ್ವತವಾಗಿ ಅನುಭವಿಸುತ್ತಿರುವವರನ್ನು ಪರಮಾತ್ಮನು ಒಳಗೂ ಹೊರಗೂ ವ್ಯಾಪಿಸಿರುವನು. ಅವನೇ ಜಗತ್ತೆಲ್ಲವನ್ನೂ ಕನಸಿನಂತೆ ಆಯಾ ಕ್ಷಣದಲ್ಲಿ ಮಾತ್ರ ಕಾಣಿಸುವಂತಲ್ಲದೆ ಹಾಗೂ ಹಗ್ಗ ವನ್ನು ನೋಡಿ ಹಾವು ಎಂದು ಭ್ರಮಿಸುವಾಗ ತೋರುವ ಹಾವಿನಂತಲ್ಲದೆ ಕೆಲವು ಕಾಲದವರೆಗೆ ಶಾಶ್ವತವಾಗಿರು ವಂತೆ ಸತ್ಯವಾಗಿಯೇ ಸೃಷ್ಟಿಸಿರುವನು.

# ಶ್ರೀರಂಗಾಚಾರ್ಯರ ವ್ಯಾಖ್ಯಾನ

**ಸಾರಾರ್ಥ**

"ಪರಮಾತ್ಮ ಈಶ, ಜಗತ್ತು ಅವನ ಅಧೀನ; ಎಲ್ಲದರ ಒಳಹೊಕ್ಕು ನಿಯಂತ್ರಿಸುವವನು[2] ಅವನೇ. ಅವನಿಗಿರುವಷ್ಟು ಶಕ್ತಿ ಯಾರಿಗೂ ಇಲ್ಲ," ಎಂಬ ಜ್ಞಾನ ಬಂದರೆ ಮಾತ್ರ ಸಾಲದು; ಅದನ್ನು ಉಪಾಸಕನು ಪರ ಮಾತ್ಮಾನುಭವ ಪರ್ಯಂತ ರೂಢಿಸಿಕೊಳ್ಳಬೇಕು. ಪರಮಾತ್ಮನ ವಿವಿಧ ಗುಣ ರೂಪಗಳನ್ನು ಅನುಭವಿಸುತ್ತಾ, ಶಾಶ್ವತ ಕಾಲದವರೆಗೂ ಜನಗಳಿಗೆ ಈ ವಿಷಯಗಳು ತಿಳಿಯುವಂತೆ ತಿಳಿಸುತ್ತಾ ಅವರೂ ಪರಮಾತ್ಮಾನುಭವ ಪಡೆಯುವಂತೆ ಮಾಡಿಸುತ್ತಾ ಇರಬೇಕು. ಇದಕ್ಕಾಗಿ ಈಗ ವಿವಿಧ ರೀತಿಯಲ್ಲಾಗುವ ಪರಮಾತ್ಮಾನುಭವಗಳನ್ನು ತಿಳಿಸಲಾಗುತ್ತಿದೆ.

**ಪದವಿವರಣೆ**

**ಅಸ್ನಾವಿರಂ** - "ನಮ್ಮ ದೇಹದ ಎಲ್ಲೆಡೆ ಆಗಿರುವ ದೋಷಗಳನ್ನು ಪ್ರಸಾರಗೊಳಿಸುವುದರಿಂದ ನರನಾಡಿಗಳಿಗೆ 'ಸ್ನಾವಾ' ಎಂದು ಹೆಸರು. ಇವುಗಳ ಮೂಲಕ ದೇಹಾದ್ಯಂತದ ದುಃಖ ಅನುಭವಿಸಬೇಕಾಗುವುದು. ಇದಕ್ಕೆ ನಮ್ಮ ಪುಣ್ಯ–ಪಾಪಕರ್ಮಗಳು ಕಾರಣ. ಪರಮಾತ್ಮ ನಮ್ಮ ದೇಹದಲ್ಲೇ ಇದ್ದರೂ ಅವನಿಗೆ ಪುಣ್ಯಪಾಪಕರ್ಮಗಳಿಲ್ಲದ ಕಾರಣ ನರನಾಡಿಗಳ ಮೂಲಕ ಬರುವಂತಹ ಯಾವುದೇ ದುಃಖವೂ ಇರುವುದಿಲ್ಲ" ಎಂದು ಭಾವಾರ್ಥ.

**ಯಾಥಾತಥ್ಯತಃ**– ಪಾರಮಾರ್ಥಿಕವಾಗಿ ಎಂದರ್ಥ. ತನಗೆ ತೋಚಿದಂತಾಗಲಿ ಇತರರಿಗೆ ಬೇರೆ ರೀತಿ ಭಾವನೆ ಬರುವಂತಾಗಲಿ ಅಲ್ಲ.

---

1. ಕಾಮ–ಕ್ರೋಧ–ಲೋಭ–ಮೋಹ–ಮದ–ಮಾತ್ಸರ್ಯ.
2. ಆಜ್ಞಾಪಿಸುವವನು.

**ಪರಿಭೂಃ** – ತತ್ತ್ವಕ್ಕೆ ವಿರುದ್ಧವಾಗಿ ವಾದಿಸುವವರನ್ನು ಜಯಿಸಬಲ್ಲವನು.

**ಶಾಶ್ವತೀಭ್ಯಃ, ಸಮಾಭ್ಯಃ** – ಬಹಳ ಕಾಲದವರೆಗೂ ಉಪಯೋಗಕ್ಕೆ ಆಗುವಂತೆ ಎಂದರ್ಥ. ಇದು ಚತುರ್ಥೀ ವಿಭಕ್ತಿಯಲ್ಲಿ ಬಳಸಲಾಗಿರುವ ಶಬ್ದ.

**ಸ್ವಯಂಭೂಃ** – ತತ್ತ್ವಜ್ಞಾನದಲ್ಲಿ ನಿಷ್ಠೆಯಿಂದ ಇರುವವನು.

**ವ್ಯದಧಾತ್** - ವಿಧಾನ ಮಾಡುತ್ತಾನೆ. ಈ ಶಬ್ದವನ್ನು ವೈದಿಕವ್ಯಾಕರಣಾನುಸಾರ[1] ವರ್ತಮಾನ ಕಾಲದಲ್ಲಿ ಬಳಸಿರುವುದು. ಇಲ್ಲಿ ವಿಧಾನ ಎಂದರೆ ಇಂತಹ ವಿಚಾರಗಳನ್ನು ಅವಶ್ಯ ತಿಳಿಯಬೇಕೆಂದೂ ಅದರಂತೆ ನಡೆಯಬೇಕೆಂದೂ ಸಕಾರಣವಾಗಿ ನಿರೂಪಿಸಿ ತಿಳಿಸುವುದು. ಇಂತಹ ಕಾರ್ಯವನ್ನು ಪ್ರಸಿದ್ಧ ಬ್ರಹ್ಮಸೂತ್ರಕಾರರಾದ ವೇದವ್ಯಾಸ ಮಹರ್ಷಿಗಳು, ಸೂತ್ರವೃತ್ತಿಕಾರರಾದ ಬೋಧಾಯನ ಮಹರ್ಷಿಗಳು ಮುಂತಾದ ಅನೇಕ ಶ್ರೇಷ್ಠ ಬ್ರಹ್ಮಜ್ಞಾನಿಗಳು ಮಾಡಿರುತ್ತಾರೆ.

ಈ ಮಂತ್ರಕ್ಕೆ ಪರಮಾತ್ಮನು, ಶುದ್ಧಜೀವಾತ್ಮಸ್ವರೂಪವನ್ನೂ ವ್ಯಾಪಿಸಿದವನು ಎಂದು ಅರ್ಥ ಮಾಡಿದಾಗ:–

**ಕವಿಃ** – ಸರ್ವಜ್ಞನಾದವನು.

**ಮನೀಷೀ** – ಮನಸ್ಸಿನಲ್ಲಿ ನೆನೆಸಿಕೊಂಡ ಮಾತ್ರದಿಂದಲೇ ಎಲ್ಲವನ್ನೂ ಸಾಧಿಸಬಲ್ಲವನು.

**ಪರ್ಯಗಾತ್** – ಎಲ್ಲ ವಿಧದಿಂದಲೂ ವ್ಯಾಪಿಸಿರುವನು.

**ಯಾಥಾತಥ್ಯತಃ** - ಹಿಂದಿನ ಕಲ್ಪಗಳಲ್ಲಿ ಹೇಗಿತ್ತೋ ಹಾಗೆಯೇ ಮತ್ತೆ ಮತ್ತೆ ಸೃಷ್ಟಿ ಮಾಡುವಾಗಲೂ ಎಂದರ್ಥ.

## ಸಾರಾರ್ಥ

ಈ ಎರಡನೆಯ ರೀತಿಯ ಅರ್ಥದಿಂದ 'ಪರಮಾತ್ಮನು ಪರಿಶುದ್ಧ ಜೀವಾತ್ಮವನ್ನೂ ವ್ಯಾಪಿಸಿರುವನೆಂದೂ, ಅನಾದಿಕಾಲದಿಂದ ಅವನೇ ಮತ್ತೆ ಮತ್ತೆ ಜಗತ್ತೆಲ್ಲದರ ಸೃಷ್ಟಿಕರ್ತನೆಂದೂ ಎರಡು ವಿಚಾರಗಳನ್ನು ಸ್ವಲ್ಪ ತಿಳಿಸಿದಂತಾಗುವುದು.

---

1. ವೇದಾಕ್ಷರಗಳ ಪ್ರಕೃತಿ ಪ್ರತ್ಯಯ ವಿಭಾಗಗಳನ್ನು, ಅನ್ವಯಕ್ರಮಗಳನ್ನು, ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯಗಳನ್ನು ತಿಳಿಸುವ 'ಪ್ರಾತಿಶಾಖ್ಯವೇ' ಮೊದಲಾದ ಗ್ರಂಥಗಳು.



# ಈಶಾವಾಸ್ಯೋಪನಿಷತ್

## ಮಂತ್ರ ಒಂಬತ್ತು

ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ।

ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ॥೯॥

### ಅನ್ವಯಾನುಸಾರ ಪ್ರತಿಪದಾರ್ಥ

ಯೇ - ಯಾವುದೇ ಸಾಮಾನ್ಯ ಜನರು; ಅವಿದ್ಯಾಂ - ಜ್ಞಾನವಿಲ್ಲದೆ ಕೇವಲ ತಮ್ಮ ಭೋಗಗಳಿಗಾಗಿ ಮಾಡುವ ಕರ್ಮವನ್ನು; ಉಪಾಸತೇ- ಗೀಳಿನಿಂದ ಆಚರಿಸುವರೋ; ಅವರು. ಅನ್ಧಂ - ಅತಿಗಾಢವಾದ; ತಮಃ - ಅಜ್ಞಾನವನ್ನೂ; (ಅಂತಹ ನರಕವನ್ನೂ) ಪ್ರವಿಶನ್ತಿ - ಹೋಗಿ ಸೇರುತ್ತಾರೆ. ಯೇ - ಯಾವುದೇ ಜ್ಞಾನಿಗಳು; ವಿದ್ಯಾಯಾಂ, ಉ - ಕೇವಲ ಜ್ಞಾನದಲ್ಲಿಯೇ; ರತಾಃ - ಪ್ರೀತಿಯಿಂದ ಅಂಟಿಕೊಂಡಿರುವರೋ; ತೇ - ಅವರು; ತತಃ - ಆ 'ಅಂಧತಮಸ್' ನರಕವನ್ನೂ; ಭೂಯಃ - ಮೀರಿಸಿ ಇರುವ; ತಮಃ, ಇವ - ಅತ್ಯಂತ ಭಯಂಕರವಾದ ಅಜ್ಞಾನಮಯವಾದ ನರಕವನ್ನೇ; ಪ್ರವಿಶನ್ತಿ - ಹೋಗಿ ಸೇರುತ್ತಾರೆ.

### ಛಾಯಾಪದ್ಯ

ಕಗ್ಗತ್ತಲೆಗೇ ಸೇರುವರ್ಕೈ ಯಾರು ಅವಿದ್ಯೆಯ ಭಾವಿಪರೋ ;

ಅದಕೂ ಮಿಗಿಲೆಂಬಂತಿಪ ಕತ್ತಲೆಗಾರುರೆ[1] ವಿದ್ಯೆಯೊಳೆಳಸಿಪರೋ[2].

## ತಾತ್ಪರ್ಯಾರ್ಥ

### ಅಪಾಯದ ಬಗ್ಗೆ ತಿಳಿವಳಿಕೆ ಅವಶ್ಯ

ವೇದಪುರುಷನು ಹಿಂದಿನ ಮಂತ್ರಗಳಲ್ಲಿ ವಿಚಿತ್ರಶಕ್ತಿಯುತನಾದ ಪರಮಾತ್ಮನನ್ನು ಉದ್ದೇಶಿಸಿ, ವರ್ಣಾಶ್ರಮವಿಹಿತವಾದ ಕರ್ಮಗಳೊಡನೆ ಆಚರಿಸುವ ಪರಬ್ರಹ್ಮೋಪಾಸನೆಯನ್ನು ತಿಳಿಸಿದನು. ಒಂದೊಂದರ ಅನುಷ್ಠಾನದಿಂದ ಒದಗುವ ಅಪಾಯವನ್ನೂ ಅನಿಷ್ಟವನ್ನೂ ತಿಳಿಸದ ಹೊರತು, ಕರ್ಮಯೋಗ ಜ್ಞಾನಯೋಗಗಳನ್ನು ಪರಸ್ಪರ ಸಹಾಯಕಗಳನ್ನಾಗಿ ಒಟ್ಟುಗೂಡಿಸಿ ಮಾಡುವ ದೃಢವಾದ ಮನಸ್ಸು ಬರಲಾರದೆಂದು 'ಅಂಧಂ ತಮಃ' ಎಂಬ ಮಂತ್ರದಿಂದ ಒಂದೊಂದರಿಂದ ಒದಗುವ ಅಪಾಯವನ್ನೂ ಅನಿಷ್ಟಫಲವನ್ನೂ ತಿಳಿಸುತ್ತಾನೆ.

### ಸ್ವತಂತ್ರ ಕರ್ಮಮಾರ್ಗದ ಫಲ

ವರ್ಣಾಶ್ರಮವಿಹಿತವಾದ ಯಜ್ಞಯಾಗಾದಿ ಕರ್ಮಗಳು ಅಪೇಕ್ಷಿತ ಫಲಗಳಾದ ಮಡದಿಮಕ್ಕಳನ್ನೂ, ಐಶ್ವರ್ಯಾಧಿಕಾರಗಳನ್ನೂ ಕೊಡುತ್ತವೆ. ಇಂದ್ರಾದಿದೇವತೆಗಳು ಅನುಭವಿಸುವ ಭೋಗಗಳೂ ಕರ್ಮದಿಂದಾದ ಫಲಗಳೇ. ಇವು ಅಲ್ಪವಾದುವು; ಅಸ್ಥಿರವಾದುವು; ದುಃಖಮಿಶ್ರಿತವಾದುವುಗಳು. ಇಂತಹ ಸುಖಭೋಗಗಳನ್ನು ಅನುಭವಿಸುವ ಚೇತನರಲ್ಲಿ ರಜೋಗುಣ ತಮೋಗುಣಗಳು ಹೆಚ್ಚುಹೆಚ್ಚಾಗಿ ವೃದ್ಧಿಯನ್ನು ಹೊಂದುತ್ತವೆ. ಈ ಗುಣಗಳು ಹೆಚ್ಚಾದಂತೆ, ಮತ್ತಷ್ಟು ಹೆಚ್ಚಾಗಿ ಅಕಾರ್ಯದಲ್ಲಿ ತೊಡಗಿಸುತ್ತವೆ. ಆ ಅಕಾರ್ಯಗಳನ್ನಾಚರಿಸುವ ಚೇತನರು

---

1. ಉರೆ - ಹೆಚ್ಚಾಗಿ. 2. ಎಳಸು - ಪ್ರಯತ್ನಿಸು.

ಆ ಅಕಾರ್ಯಗಳ ಫಲವನ್ನು ಅನುಭವಿಸುವುದಕ್ಕಾಗಿ ಬಗೆಬಗೆಯಾದ ಜನ್ಮಗಳನ್ನು ಎತ್ತಿ ನರಕವನ್ನು ಅನುಭವಿಸುವರು. ಆದುದರಿಂದ ಸ್ವತಂತ್ರವಾದ ಕರ್ಮಮಾರ್ಗವು ಹಿತವಾದುದಲ್ಲ.

### ಸ್ವತಂತ್ರ ಜ್ಞಾನಮಾರ್ಗದ ಫಲ

ಕೆಲವರು ತನಗೆ ಬ್ರಹ್ಮೋಪಾಸನೆಯೊಂದೇ ಸಾಕು; ತನಗೇಕೆ ಕರ್ಮಗಳ ಜಂಝಾಟ? ಎಂದು ತಮಗೆ ವಿಹಿತವಾದ ಕರ್ಮವನ್ನು ನಿರ್ಲಕ್ಷಿಸಿ ಬ್ರಹ್ಮಚಿಂತನೆಯನ್ನೇ ಮಾಡಲು ತೊಡಗುವರು.

ಆದರೆ ವರ್ಣಾಶ್ರಮವಿಹಿತವಾದ ಕರ್ಮಗಳೆಲ್ಲವೂ ಈಶ್ವರನ ಆಜ್ಞಾರೂಪವಾದುವುಗಳು. ಈಶನೇ ಪ್ರತಿದಿನವೂ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಬೇಕೆಂದು ಅಪ್ಪಣೆ ಮಾಡಿದ್ದಾನೆ. ಹೀಗಿರುವುದರಿಂದ ಬ್ರಹ್ಮೋಪಾಸಕನು ಕರ್ಮಗಳನ್ನು ಆಚರಿಸದೆ ಪರಮೇಶ್ವರನ ಆಗ್ರಹಕ್ಕೆ[1] ಪಾತ್ರನಾಗಿ, ಇತ್ತ ಜ್ಞಾನಯೋಗದ ಸಿದ್ಧಿಯನ್ನೂ ಪಡೆಯದೆ, ಅತ್ತ ಐಹಿಕ ಸುಖಭೋಗಗಳಿಂದಲೂ ವಂಚಿತನಾಗಿ ಕರ್ಮಮಾರ್ಗದವರು ಪಡೆಯುವುದಕ್ಕಿಂತ ಹೆಚ್ಚಿನ ಕಗ್ಗತ್ತಲೆಯನ್ನು[2] ಪ್ರವೇಶಿಸುತ್ತಾನೆ.

## ವೇದಾಂತಾಚಾರ್ಯ ಭಾಷ್ಯ

### ಪೂರ್ವಾಪರ ಸಂಗತಿ – ಸಾರಾರ್ಥ

ಈವರೆಗೆ ಅಚ್ಚರಿಗೊಳಿಸುವಂತಹ ಶಕ್ತಿಗಳನ್ನು ಪಡೆದಿರುವ ಪರಮಾತ್ಮನ ಬಗ್ಗೆ ಇರುವಂತಹ ಶಾಸ್ತ್ರೀಯ ಕರ್ಮಗಳೆಂಬ ಅಂಗಗಳೊಡಗೂಡಿದ ಉಪಾಸನರೂಪವಾದ ವಿದ್ಯೆಯನ್ನು ಉಪದೇಶಿಸಿ, ಅನಂತರ ಬರಿಯ ಕರ್ಮವನ್ನೇ ಆಸರೆಯಾಗಿ ನೆಚ್ಚಿಕೊಂಡಿರುವವರನ್ನೂ, ಬರಿಯ ವಿದ್ಯೆಯನ್ನೇ ಆಸರೆಯಾಗಿ ನಂಬಿಕೊಂಡಿರುವವರನ್ನೂ, ತೆಗಳುತ್ತ, ವರ್ಣ ಮತ್ತು ಆಶ್ರಮಗಳಿಗೆ ಅನುಸಾರವಾದ ಕರ್ತವ್ಯಧರ್ಮಗಳಿಂದ ಬಲಗೊಳಿಸಲ್ಪಟ್ಟ ಉಪಾಸನರೂಪವಾದ ವಿದ್ಯೆಯಿಂದ ಮಾತ್ರ ಪರಲೋಕದಲ್ಲಿ ಸಿಗಬಹುದಾದ ಶ್ರೇಯಸ್ಸು ಸಿಗಲು ಸಾಧ್ಯ ಎನ್ನುತ್ತಿದ್ದಾನೆ; "ಅಂಧಂ......ಉಪಾಸತೇ" ಮೊದಲಾದ ವಚನದಿಂದ.

### ಪದ ವಿವರಣೆ

**ಯೇ** - ಯಾರು ಮುಕ್ತಿ ಹೊರತು ಬೇರೆ ಲೌಕಿಕವಾದ ಭೋಗಗಳ ಹಾಗೂ ಐಶ್ವರ್ಯಗಳ ಚಟಕ್ಕೆ ಸಿಕ್ಕಿಕೊಂಡವರಾಗಿ.

**ಅವಿದ್ಯಾಂ** - ಕರ್ಮವನ್ನು, ಆತ್ಮದ ಬಗ್ಗೆ ತಿಳುವಳಿಕೆ ಇಲ್ಲದೆ ಸುಮ್ಮನೆ ಕೆಲಸವನ್ನು ಮಾತ್ರ. "ಅವಿದ್ಯೆ ಎಂಬುದು ಕರ್ಮ ಎಂಬ ಹೆಸರಿನ ಮೂರನೆಯ ಒಂದುಶಕ್ತಿ[3]" ಎಂದು ಒಪ್ಪಲಾಗಿದೆ ಎಂದು ಸ್ಮೃತಿಗ್ರಂಥಗಳು ಸಾರುತ್ತವೆ.

**ಉಪಾಸತೇ** - ಒಮ್ಮನಸ್ಸಿನಿಂದ ಆಚರಿಸುತ್ತಾರೆ ಎಂದರ್ಥ.

**ಅಂಧಂ** - ಬಹಳ ಒತ್ತಾಗಿರುವ.

**ತಮಃ** - ಅಜ್ಞಾನವನ್ನು, ಅಥವಾ ಧರ್ಮ, ಅರ್ಥ, ಕಾಮಗಳೆಂಬ ಮೂರೇ, ಜೀವನದ ಗುರಿಗಳನ್ನು ಸಾಧಿಸುವವರಿಗೆ ಅನಂತರ ಒಡನೆಯೇ ಸಿಗುವ ನರಕವೆಂಬ ಲೋಕದ ಕತ್ತಲೆಯನ್ನು.

---

1. ಕೋಪ - ಕೆಡಲಿ ಎಂಬ ಭಾವನೆ. 2. ಅಜ್ಞಾನ ಮತ್ತು ದುಃಖ.

3. ಪರಮಾತ್ಮನ ಅಧೀನದಲ್ಲಿರುವ ಒಂದು ಅಂಶ. "ಅವಿದ್ಯಾ ಕರ್ಮಸಂಜ್ಞಾನ್ಯಾ ತೃತೀಯಾ ಶಕ್ತಿರಿಷ್ಯತೇ" ವಿ. ಪು. ೬.೭.೬೧.

ಬರಿಯ ಕರ್ಮಠರಿಗೆ ನರಕದುಃಖ

ಬರಿಯ ಕೆಲಸ ಕೆಲಸ ಎಂದು ಕೆಲಸಗಳಲ್ಲೇ ಮುಳುಗಿರುವವರಿಗೆ ದುಃಖವು ಪಕ್ಕದಲ್ಲೇ ಸೇರಿಕೊಂಡು ಬರುವುದು ಎಂಬ ಅಂಶವನ್ನು ಅಥರ್ವಣ ವೈದಿಕರು "ಯಜ್ಞ ಕೆಲಸಗಳೆಂಬ ಇವು ಬಿಗಿಯಿಲ್ಲದ ಮುರುಕು ತೆಪ್ಪಗಳೇ ಅಲ್ಲವೆ? ಹದಿನೆಂಟು ವಿಧವಾದ ಅಂಶಗಳುಳ್ಳ ಶಾಸ್ತ್ರೀಯ ಕರ್ಮವೂ[1] ಇವುಗಳಲ್ಲಿ ಸೇರಿರುವುದಾಗಿ ಹೇಳಲಾಗಿದೆ. ನಿಜವಾದ ಶ್ರೇಯಸ್ಸನ್ನು[2] ತಿಳಿದುಕೊಳ್ಳದೆ, ಇದನ್ನೇ ಶ್ರೇಯಸ್ಸೆಂದು ಯಾರು ಹೊಗಳಿಕೊಳ್ಳುತ್ತಿರುವರೋ; ಅವರು ಮತ್ತೆ ಮತ್ತೆ ಮುದಿತನ ಮರಣಗಳನ್ನು ಪಡೆದೇ ಪಡೆಯುವರು[3]" ಎಂದು ಹಲಿಸುತ್ತಾರೆ.

ಪದವಿವರಣೆ

**ತತಃ, ಭೂಯಃ, ಇವ, ತೇ, ತಮಃ, ಯೇ, ವಿದ್ಯಾಯಾಂ, ರತಾಃ**

ಶಾಸ್ತ್ರವಿಹಿತ ಕರ್ತವ್ಯಗಳಿಗೆ ಒಳಪಟ್ಟಿರುವ ಕರ್ಮಗಳನ್ನು ಬಿಟ್ಟು, ಬರಿಯ ವಿದ್ಯೆಯಲ್ಲಿ ಮಾತ್ರ ಆಸಕ್ತರಾಗಿರುವವರು, ಬರಿಯ ಕೆಲಸದಲ್ಲೇ ನಿಷ್ಠೆಯಿಂದಿರುವವರಿಗೆ ಸಿಗುವ "ಕಗ್ಗತ್ತಲೆ" ಎಂಬ ನರಕಕ್ಕಿಂತಲೂ ಅಧಿಕವಾದ ಕತ್ತಲೆಗೇ ಹೋಗಿ ಸೇರಿಕೊಳ್ಳುವರು.

"ಇವ" – ಎಂಬ ಪದವು ಕತ್ತಲೆಯು ಇಂತಿಷ್ಟು ಎಂಬ ಆಳತೆಯನ್ನೇ ಮಾಡಲಾಗುವುದಿಲ್ಲ ಎಂಬ ಅಂಶವನ್ನು ಸೂಚಿಸುತ್ತದೆ.

"ಉ" – ಎಂಬ ಅಕ್ಷರವು ತನ್ನ ನಂತರದ ಪದದೊಡನೆ ಸೇರಿ "ಬರಿಯ ವಿದ್ಯೆಯಲ್ಲೇ ಆಸಕ್ತರಾದವರು" ಎಂಬುದಾಗಿ ಅರ್ಥಕೊಡುತ್ತದೆ.

## ಈಶಾವಾಸ್ಯ ಪ್ರಕಾಶಿಕೆ

ಈವರೆಗೆ ಕರ್ಮಯೋಗಾದಿಗಳನ್ನು ಅಂಗವಾಗಿ ಪಡೆದಂತಹ ವಿದ್ಯೆಯನ್ನು ಉಪದೇಶಿಸಿ ಆಯಿತು. ಇಲ್ಲಿಂದ ಮುಂದೆ ಮೂರು ಶ್ಲೋಕಗಳಲ್ಲಿ ವಿದ್ಯೆಯೇ ಮುಕ್ತಿಗೆ ಸಾಧನ ಎನ್ನಲಾಗುತ್ತದೆ. ಬೃಹದಾರಣ್ಯಕದಲ್ಲೂ ಈ ಮಂತ್ರವನ್ನು ಪಠಿಸಲಾಗಿದೆ.

**ಅವಿದ್ಯಾ** – ವಿದ್ಯೆಯಲ್ಲದುದು, ಕೆಲಸ, ಬರಿಯ ಕರ್ಮ.

## ಪದಾರ್ಥ ದೀಪಿಕೆ

**ಅವಿದ್ಯಾ** – ಬ್ರಹ್ಮವಿದ್ಯೆಗೆ ಅಂಗವಾಗಿಸಿಕೊಳ್ಳದ ಕರ್ಮಯೋಗ.

**ವಿದ್ಯಾ** – ವರ್ಣಾಶ್ರಮಧರ್ಮಗಳನ್ನು ಬಿಟ್ಟು ಮಾಡುವ ಉಪಾಸನೆ.

**ಅಂಧಂತಮಃ** - ಈ ಹೆಸರಿನ ನರಕಲೋಕ.

---

1. ಶಾಸ್ತ್ರಗಳಲ್ಲಿ ವಿಹಿತವಾದ, ಫಲಾಪೇಕ್ಷೆಯಿಂದ ಕೂಡಿದ ಕೆಲಸಗಳು. 2. ಆತ್ಮಕ್ಕೆ ಹಿತಕರವಾದುದನ್ನು.

3. ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ ।
ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾಃ ಜರಾಮೃತ್ಯುಂ ತೇ ಪುನರೇವಾಪಿ ಯನ್ತಿ ॥ ಮು., ೧.೨.೭.

# ಸುಬೋಧಿನೀ

ಬರಿಯ ಕರ್ಮದಲ್ಲೂ ಬರಿಯ ಜ್ಞಾನದಲ್ಲೂ ಆಸಕ್ತರಾದವರಿಗೆ ಆಗುವ ಅನರ್ಥವನ್ನು ಈ ಮಂತ್ರದಲ್ಲಿ ತಿಳಿಸ ಲಾಗುತ್ತದೆ. ಬರಿಯ ಕರ್ಮಠರು[1] ಅನರ್ಥಕಾರಿಯಾದ ಸಂಸಾರಬಂಧವನ್ನೇ ಪಡೆಯುವರು. ಮುಕ್ತಿಗಾಗಿ ಆಶಿಸು ವವರು ಕರ್ಮಮಾಡದೆ ಬರಿಯ ಜ್ಞಾನಮಾರ್ಗಕ್ಕೆ ಬಿದ್ದರೆ ಇತ್ತ ಅಲ್ಪ ಸ್ವಲ್ಪ ಸಿಗಬಹುದಾದ ಕರ್ಮದ ಫಲವೂ ಸಿಗದೆ ಅತ್ತ ಜ್ಞಾನವೂ ಸಿದ್ಧಿಸದೆ ಕರ್ಮಠರಿಗಿಂತ ಕೀಳಾಗಿ ಮತ್ತೂ ಅನರ್ಥಕ್ಕೆ[2] ಗುರಿಯಾಗುವರು ಎಂದು ಭಾವಾರ್ಥ.

# ಶ್ರೀರಂಗಾಚಾರ್ಯರ ವ್ಯಾಖ್ಯಾನ

## ಪೂರ್ವಾಪರ ಸಂಗತಿ - ಸಾರಾರ್ಥ

ಈ ಮಂತ್ರವನ್ನು ಮಾಧ್ಯಂದಿನರು ಹನ್ನೆರಡನೆಯದನ್ನಾಗಿ ಪಠಿಸುತ್ತಾರೆ. ಇಲ್ಲಿಯವರೆಗೆ ಈ ಉಪನಿಷತ್ತಿನಲ್ಲಿ ಒಂದು ಮುಖ್ಯವಾದ ಭಾಗ ಮುಗಿದಂತಾಯಿತು. ಆ ಭಾಗದಲ್ಲಿ ಕರ್ಮಯೋಗವನ್ನೇ ಅಂಗವಾಗಿ-ಪಡೆದಿರುವ ವಿಶೇಷ ರೀತಿಯ ಜ್ಞಾನರೂಪವಾದ ಪರವಿದ್ಯೆಯನ್ನು, ಉತ್ತಮಪುರುಷಾರ್ಥವಾದ ಮುಕ್ತಿಗೆ ಮುಖ್ಯಸಾಧನವೆಂದು ತಿಳಿಸಿ ಆಯಿತು. ಇಲ್ಲಿಂದ ಮುಂದೆ ಆರು ಮಂತ್ರಗಳಲ್ಲಿ ಕರ್ಮ ಮತ್ತು ವಿದ್ಯೆಗಳ ಅಂಗಾಂಗಿಭಾವವನ್ನೂ[3], ಅದರ ಯಾವ ಒಂದು ಅಂಶವನ್ನು ಬಿಟ್ಟರೂ ಮುಕ್ತಿ ಸಿಗಲಾರದೆಂಬುದನ್ನೂ, ಮುಖ್ಯವಾಗಿ ತಿಳಿಸಲಾಗುವುದು.

## ಅವಿದ್ಯೆ ಎಂದರೆ ಇಲ್ಲಿ ಕರ್ಮ

ಈ ಮಂತ್ರದಲ್ಲಿ 'ಉ' ಎಂಬುದನ್ನು 'ಅವಿದ್ಯಾಂ' ಎಂಬುದರೊಡನೆಯೂ ಸೇರಿಸಿಕೊಂಡು 'ಅವಿದ್ಯೆಯನ್ನೇ' ಎಂದು ಅರ್ಥಮಾಡಬೇಕು. 'ಅವಿದ್ಯೆ' ಎಂದರೆ ಕರ್ಮವೇ ಹೊರತು ಅಜ್ಞಾನವಲ್ಲ. ಹನ್ನೊಂದನೆಯ ಮಂತ್ರದಲ್ಲಿ ಅವಿದ್ಯೆಯಿಂದ ಮೃತ್ಯುವನ್ನು ಗೆಲ್ಲಬಹುದೆಂಬ ಮಾತೊಂದಿದೆ. ಯಾವ ಮತ–ದರ್ಶನಗಳಲ್ಲೂ[4] ಅಜ್ಞಾನದಿಂದ ಮೃತ್ಯುವನ್ನು ಗೆಲ್ಲುವ ಮಾತೇ ಇಲ್ಲ. ಅಜ್ಞಾನದಿಂದ ಮೃತ್ಯುವಿಗೆ ತುತ್ತಾಗುವುದು ಎಲ್ಲ ಮತ ದರ್ಶನಗಳ ನಿರ್ಣಯ. ಆದುದರಿಂದ ಅವಿದ್ಯೆ ಎಂದರೆ ಅಜ್ಞಾನವಲ್ಲ, ಕರ್ಮ. ಈ ಕರ್ಮವೂ ಫಲದ ಆಸೆಯಿಲ್ಲದೆ ಕರ್ತವ್ಯ ನಿಷ್ಠೆಯಿಂದ ಮಾಡುವ ಶಾಸ್ತ್ರೀಯ ಕೆಲಸ ಎಂಬುದನ್ನು ಹಿಂದೆಯೇ ತಿಳಿಸಿ ಆಗಿದೆ.

---

1. ನಿಷ್ಠೆಯಿಂದ ಕರ್ಮಗಳನ್ನು ಮಾಡುತ್ತ ಅದರಲ್ಲೇ ಆಸಕ್ತರಾದವರು.
2. ನೆಲದ ಮೇಲೆ ಎಡವಿ ಬಿದ್ದರೆ ಆಗುವ ಏಟಿಗಿಂತ ಮರದ ಮೇಲಿಂದ ಬಿದ್ದರೆ ಏಟು ಜೋರಲ್ಲವೆ. ಈ ರೀತಿ ಬರಿಯ ಕರ್ಮ-ಜ್ಞಾನಗಳಿಂದಾಗುವ ಅನರ್ಥಗಳಲ್ಲಿ ತಾರತಮ್ಯವನ್ನು ಗಮನಿಸಬಹುದು.
3. ಮುಖ್ಯವಾದುದು ಅಂಗಿ, ಅದಕ್ಕೆ ಅಧೀನದಲ್ಲಿದ್ದು ಸಹಾಯಕವಾದುದೇ ಅಂಗ. ಇವೆರಡರ ಸಂಬಂಧ ಹಾಗೂ ಸ್ವಭಾವವೇ ಅಂಗಾಂಗಿಭಾವ.
4. ಮತ ಎಂದರೆ ಒಪ್ಪಿಗೆಯಾದ ವಿಚಾರಗಳು, ಅಭಿಪ್ರಾಯ. ದರ್ಶನವೆಂದರೆ ಅನುಭವದಿಂದ ಕಂಡುಕೊಂಡಿರುವ ತತ್ತ್ವವಿಚಾರ.

## ಪದವಿವರಣೆ

**ಉಪಾಸತೇ** – ಉಪಾಸನೆಮಾಡುತ್ತಾರೆ. ಎಂದರೆ ಪುರುಷಾರ್ಥಕ್ಕೆ[1] ಸಾಧನವನ್ನಾಗಿ ಪಡೆದು ಆಚರಿಸುತ್ತಾರೆ ಎಂದಷ್ಟೆ ಅರ್ಥ.

**ಅಂಧಂ, ತಮಃ** – ನರಕಲೋಕಗಳನ್ನು ಎಂದರ್ಥ. ಇವುಗಳ ಬಗ್ಗೆ ಮೂರನೆಯ ಮಂತ್ರದಲ್ಲೇ ತಿಳಿಸಿ ಆಗಿದೆ.

**ಪ್ರ, ವಿಶನ್ತಿ** – ಕ್ರಮ ಕ್ರಮವಾಗಿ ಹೋಗಿ ಸೇರುತ್ತಾರೆ. ವಿದ್ಯೆಗೆ ಸಹಾಯಕವಲ್ಲದ ಬರಿಯ ಕರ್ಮಗಳನ್ನು ಮಾಡಿ ಇಹಲೋಕದ ಭೋಗಗಳನ್ನು ಅನುಭವಿಸುವರು. ಈ ಅನುಭವದಿಂದ ರಜಸ್ - ತಮೋಗುಣಗಳು ಅಭಿವೃದ್ಧಿಯಾಗುವುವು. ಇವುಗಳಿಂದ ತತ್ತ್ವ – ಹಿತ ಪುರುಷಾರ್ಥಗಳ ಬಗ್ಗೆ ಸಂಶಯ ಭ್ರಮೆ ಹಾಗೂ ವಿರುದ್ಧ ರೀತಿಯ ಜ್ಞಾನಗಳು ಉಂಟಾಗುವುವು. ಇವು ಜನರನ್ನು ತಮ್ಮ ಹಿತಕ್ಕೆ ವಿರುದ್ಧವಾದ ಕೆಲಸಗಳಲ್ಲಿ ಮನಸ್ಸುಗ್ಗುವಂತೆ ಮಾಡುವುವು. ಆ ಜನರು ಆಯಾ ಕರ್ಮಾನುಸಾರ ನರಕಗಳಿಗೇ ಹೋಗಬೇಕಾಗುವುದು.

**ಭೂಯಃ, ಇವ** – ಅಧಿಕವಾಗಿಯೇ.

## ಭಾವಾರ್ಥ

ಬರಿಯ ಕರ್ಮಠರಾದವರಿಗೆ ಅವರು ಮಾಡುವ ನಿತ್ಯ-ನೈಮಿತ್ತಿಕ ಸತ್ಕರ್ಮಗಳಿಂದ ತಾತ್ಕಾಲಿಕವಾಗಿ ಅನೇಕ ಪಾಪಗಳು ಪರಿಹಾರವಾಗುತ್ತಿರುವುವು. ನಿತ್ಯ-ನೈಮಿತ್ತಿಕ ಕರ್ಮಾಚರಣೆಮಾಡದ ಬರಿಯ ಜ್ಞಾನಯೋಗ ಸಾಧಕರಿಗೆ ಕರ್ಮಾಚರಣೆಯ ತ್ಯಾಗದಿಂದ ಅನೇಕ ಪಾಪಗಳು ಅಂಟುವುವು. ಹೀಗಾಗಿ ಕರ್ಮಠರಿಗಿಂತ ಈ ಜ್ಞಾನಿಗಳು ಬಹಳ ಕಷ್ಟಗಳನ್ನು ಅನುಭವಿಸಬೇಕಾಗುವುದಲ್ಲವೆ!

---

1. ಜೀವನದ ಗುರಿ - ಇದು ಧರ್ಮ, ಅರ್ಥ, ಕಾಮ, ಮೋಕ್ಷ, ಎಂದು ನಾಲ್ಕು ವಿಧ. ಒಳ್ಳೆಯ ಕೆಲಸವೂ ಅದರಿಂದ ಬರುವ ಪುಣ್ಯವೂ ಧರ್ಮ ಎನಿಸುವುದು. ಸಮಾಜವು ಶಿಥಿಲವಾಗದೆ ಚೆನ್ನಾಗಿ ಇರಲು ಅದರ ಧಾರಣೆಗೆ ಕಾರಣವಾದ ರೀತಿ ನೀತಿಗಳೆಲ್ಲವೂ ಧರ್ಮವೇ. ಅರ್ಥವೆಂದರೆ ಹಣ-ಕಾಸು, ಆಸ್ತಿ-ಪಾಸ್ತಿ ಎಲ್ಲವೂ. ಕಾಮ ಎಂದರೆ ಇಂದ್ರಿಯಗಳ ತೃಪ್ತಿ. ಮೋಕ್ಷ ಎಂದರೆ ಧರ್ಮಾರ್ಥಕಾಮಗಳಿಗಾಗಿ ನಡೆಸುವ ಪ್ರಯತ್ನಗಳನ್ನೂ ಅವುಗಳಿಗೆ ಆಸರೆಯಾದ ದೇಹ ಇಂದ್ರಿಯಗಳನ್ನೂ ಇಹಲೋಕವನ್ನೂ ತೊರೆದು ಉಪಾಸನೆಯಿಂದ ಪರಲೋಕದಲ್ಲಿ ಪರಮಾತ್ಮನ ಸೇವೆಯಿಂದ ಪರಮಾನಂದವನ್ನು ಶಾಶ್ವತವಾಗಿ ಅನುಭವಿಸುವುದು.



# ಈಶಾವಾಸ್ಯೋಪನಿಷತ್

## ಮಂತ್ರ ಹತ್ತು

**ಅನ್ಯದೇವಾಹುರ್ವಿದ್ಯಯಾಽನ್ಯದಾಹುರವಿದ್ಯಯಾ।**
**ಇತಿ ಶುಶ್ರುಮ ಧೀರಾಣಾಂ ಯೇ ನ ಸ್ತದ್ವಿಚಚಕ್ಷಿರೇ ॥೧೦॥**

### ಅನ್ವಯಾನುಸಾರ ಪ್ರತಿಪದಾರ್ಥ

**ಯೇ** - ಯಾವ ನಮ್ಮ ಪೂರ್ವಾಚಾರ್ಯರಾದ ವೇದಪುರುಷನೇ ಮುಂತಾದ ಬ್ರಹ್ಮಜ್ಞಾನಿಗಳು; **ನಃ** - ನಮಗಾಗಿ; **ವಿಚಚಕ್ಷಿರೇ** - ವಿವರಿಸಿ ತಿಳಿಸಿರುವರೋ; **ಧೀರಾಣಾಂ** - ತಿಳುವಳಿಕೆಗೆ ತಕ್ಕ ಆಚರಣೆಯನ್ನೂ ಇಟ್ಟುಕೊಂಡಿರುವ ಅವರ; **ತತ್** - ಆ ಪುರುಷಾರ್ಥ ಮತ್ತು ಅದನ್ನು ಸಾಧಿಸುವ ವಿಚಾರದ ಮಾತನ್ನು; "**ವಿದ್ಯಯಾ** - ಬರಿಯ ಜ್ಞಾನಕ್ಕಿಂತ; **ಅನ್ಯತ್ ಏವ** - ಸಾಧನವೇ ಬೇರೆ ಎಂದು; **ಆಹುಃ** - ಎನ್ನುವರು; **ಅವಿದ್ಯಯಾ** - ಬರಿಯ ಕರ್ಮಕ್ಕಿಂತ; **ಅನ್ಯತ್** - ಸಾಧನವೇ ಬೇರೆ ಎಂದು; **ಆಹುಃ** - ಎನ್ನುವರು;" **ಇತಿ** - ಎಂಬುದಾಗಿ; **ಶುಶ್ರುಮ** - ಕೇಳಿ ತಿಳಿದಿರುವೆವು.

### ಛಾಯಾಪದ್ಯ

ಬೇರೆಯೆ ಇಹುದೆನ್ನುವರ್ಗೆ ವಿದ್ಯೆಗೆ, ಬೇರೆಯೆ ಎನುವರವಿದ್ಯೆಗು ಮೇಣ್।
ಇಂತೈ ಧೀರರಿನಾಲಿಸಿ ತಿಳಿದಿಹೆವಾರೆಮಗದ ಬಿಚ್ಚೊರೆದಿಹರೋ॥

## ತಾತ್ಪರ್ಯಾರ್ಥ

### ಮೋಕ್ಷಕ್ಕೆ ಸಾಧನ ಬೇರೆ

ಹಿಂದಿನ ಮಂತ್ರದಲ್ಲಿ ಸ್ವತಂತ್ರಗಳಾದ ಕರ್ಮಯೋಗ ಜ್ಞಾನಯೋಗಗಳಿಂದ ಅನಿಷ್ಟಫಲವು ಒದಗುತ್ತದೆ ಎಂದು ತಿಳಿಸಿದನು. ಈ ಮಂತ್ರದಲ್ಲಿ ಮೋಕ್ಷಾಭಿಲಾಷಿಯಾದ ಸಾಧಕನಿಗೆ ಸ್ವತಂತ್ರಗಳಾದ ಕರ್ಮಯೋಗ ಜ್ಞಾನ ಯೋಗಗಳಿಗಿಂತ ಮೋಕ್ಷಸಾಧಕಮಾರ್ಗವು ಭಿನ್ನವಾದುದೆಂದು ತಿಳಿಸುತ್ತಾನೆ.

### ಅಪೇಕ್ಷಿತಗಳು

ಮನುಷ್ಯನಿಗೆ ಅಪೇಕ್ಷಿತವಾದ ಇಷ್ಟಾರ್ಥಗಳು ಎರಡು. ಈ ಲೋಕದಲ್ಲಿ ಅನುಭವಿಸಬಹುದಾದ ಅಧಿಕಾರಾದಿ ಭೋಗಗಳು ಒಂದು. ಮತ್ತೊಂದು ವೈಕುಂಠದಲ್ಲಿ ಪರಮಪುರುಷನ ಕೈಂಕರ್ಯ.

### ಪ್ರೇಯಸ್ಸು

ಈ ಲೋಕದಲ್ಲಿ ಶರೀರ ಪಡೆದು ಅನುಭವಿಸುವ ಸುಖಭೋಗಗಳನ್ನು ಪ್ರೇಯಸ್ಸು ಎಂದು ಕರೆಯುತ್ತಾರೆ. ಈ ಸುಖಭೋಗಗಳು ಕ್ಷಣಿಕವಾದುವು, ಅಲ್ಪವಾದುವು, ದುಃಖಮಿಶ್ರಿತವಾದುವು ಯಜ್ಞಾದಿ ವರ್ಣಾಶ್ರಮ ಕರ್ಮಗಳು ಇಂತಹ ಸುಖಭೋಗವನ್ನು ಒದಗಿಸಿಕೊಡುತ್ತವೆ. ಮೋಕ್ಷವನ್ನು ಒದಗಿಸುವ ಸಾಧನವು ಇದಲ್ಲ. ಅದು ಜ್ಞಾನಯೋಗವನ್ನು ಅಪೇಕ್ಷಿಸದ ಕರ್ಮಯೋಗಕ್ಕಿಂತ ಬೇರೆಯಾದುದು.

### ಶ್ರೇಯಸ್ಸು

ವೈಕುಂಠಲೋಕದಲ್ಲಿ ಪರಮಾತ್ಮನ ಅನುಭವವನ್ನೂ, ಅವನ ಸೇವೆಯನ್ನೂ ಶ್ರೇಯಸ್ಸು ಎಂದು ಕರೆಯುತ್ತಾರೆ. ಇದು ದುಃಖಮಿಶ್ರಿತವಲ್ಲದುದೂ, ಶಾಶ್ವತವೂ ಆಗಿದೆ. ವೈಕುಂಠವನ್ನು ಸೇರಿ ಪರಬ್ರಹ್ಮನ ಇಂಗಿತವನ್ನರಿತು ಆವನ ಸೇವೆಯಿಂದ ಅವನೊಡನೆ ಆನಂದವನ್ನು ಪಡೆಯುವುದನ್ನೇ ಬ್ರಹ್ಮಾನಂದವೆಂದೂ ಕರೆಯುತ್ತಾರೆ.

### ಶ್ರೇಯಸ್ಸಿಗೆ ಸಾಧನ

ಈ ಎರಡು ಇಷ್ಟಾರ್ಥಗಳನ್ನೂ ಸಂಪಾದಿಸಿಕೊಳ್ಳುವ ದಾರಿಯನ್ನು ವೇದದಲ್ಲಿ ಕರ್ಮಕಾಂಡ ಜ್ಞಾನಕಾಂಡಗಳು ವಿಸ್ತಾರವಾಗಿ ತಿಳಿಸುತ್ತವೆ.

ನಾವು ವಿನಯ ಭಕ್ತಿಗಳಿಂದ ಸದಾಚಾರ್ಯರನ್ನು ಉಪಚರಿಸಿದೆವು. ಶಿಷ್ಯರಲ್ಲಿ ಅನುಗ್ರಹ ಬುದ್ಧಿಯುಳ್ಳ ಪರಮಾತ್ಮನ ಧ್ಯಾನಪರರಾದ ಆಚಾರ್ಯರು ತಮ್ಮ ಪ್ರಾಚಾರ್ಯರಿಂದ ದೊರಕಿದ ಈ ರಹಸ್ಯವನ್ನು ನಮಗೆ ತಿಳಿಸಿದರು. ಇದನ್ನು ನಾವು ಅವರಿಂದ ಕೇಳಿ ತಿಳಿದಿದ್ದೇವೆಂದು ವೇದಪುರುಷನು ತಿಳಿಸಿ, ಮೋಕ್ಷವನ್ನು ಪಡೆಯುವ ಮಾರ್ಗವು ಕರ್ಮಾನುಷ್ಠಾನವನ್ನು ಅಪೇಕ್ಷಿಸದ ಜ್ಞಾನಯೋಗಕ್ಕಿಂತ ಭಿನ್ನವಾದುದು. ಅಲ್ಲದೆ ಜ್ಞಾನಯೋಗವನ್ನು ಅಪೇಕ್ಷಿಸದ ಕರ್ಮಯೋಗಕ್ಕಿಂತಲೂ ಬೇರೆಯಾದುದು ಎಂಬ ರಹಸ್ಯವು ತನ್ನಿಂದ ಕಲ್ಪಿತವಾದುದಲ್ಲವೆಂದೂ ಸದಾಚಾರ್ಯರಿಂದ ಉಪದೇಶಿಸಲ್ಪಟ್ಟದ್ದೆಂದೂ ಸ್ಪಷ್ಟಪಡಿಸುತ್ತಾನೆ.

## ವೇದಾಂತಾಚಾರ್ಯ ಭಾಷ್ಯ

### ಮುಕ್ತಿಗೆ ಸಾಧನ ಯಾವುದು?

ಬರಿಯ ಕರ್ಮನಿಷ್ಠರಿಗೂ ನರಕ. ಬರಿಯ ವಿದ್ಯಾನಿಷ್ಠರಿಗೂ ನರಕ ಎಂದ ಮೇಲೆ ಮುಕ್ತಿಗೆ ಸಾಧಕವಾದ ದಾರಿಯಾವುದು ಎಂಬ ಬಗ್ಗೆ ಹೇಳುತ್ತಾನೆ- "ಅನ್ಯದೇವ..............ಅವಿದ್ಯಯಾ" ಎಂದು.

ಇಲ್ಲಿ 'ಬೇರೆ' ಎಂಬ ಶಬ್ದವು 'ವಿದ್ಯೆಯಿಂದ' 'ಅವಿದ್ಯೆಯಿಂದ' ಎಂಬ ಮೂರನೆಯ ವಿಭಕ್ತಿಯಲ್ಲಿರುವ ಪದಗಳೊಡನೆ ಹೊಂದುವುದಿಲ್ಲವಾದ ಕಾರಣ 'ಇಂದ' ಎಂಬ ಮೂರನೆಯ ವಿಭಕ್ತಿಯನ್ನು 'ಇಂತ' ಎಂಬ ಐದನೆಯ ವಿಭಕ್ತಿಯ ಜಾಗದಲ್ಲಿ ಉಪಯೋಗಿಸಿಕೊಳ್ಳಲು ವೈದಿಕ ಸಾಹಿತ್ಯದಲ್ಲಿ ವ್ಯಾಕರಣದ ನಿಯಮವಿರುವುದರಿಂದ ಅದರಂತೆ ಇಲ್ಲಿ ಉಪಯೋಗಿಸಲಾಗಿದೆ. ಹೀಗೆ ಇಲ್ಲಿ ವಿದ್ಯೆಗಿಂತ ಬೇರೆ ಅವಿದ್ಯೆಗಿಂತ ಬೇರೆ ಎಂದು ಅರ್ಥ.

ಹಾಗೂ ಮುಂದೆ "ಸಂಭವಕ್ಕಿಂತ ಬೇರೆಯೇ ಆದುದು" ಎಂದು ಹೇಳಿರುವುದಕ್ಕೂ 'ವಿದ್ಯೆಯಿಂದ' ಎಂದು ಇಲ್ಲಿ ಹೇಳಿರುವುದಕ್ಕೂ ಏಕರೂಪತೆ ಕಂಡುಬರುವುದರಿಂದಲೂ ಹೀಗೆ ಇಟ್ಟುಕೊಳ್ಳಬಹುದು.

ಒಟ್ಟಿನಲ್ಲಿ ಕರ್ಮದ ಸಹಾಯದ ಅವಶ್ಯಕತೆ ಇಲ್ಲದಂತಹ ಜ್ಞಾನಕ್ಕಿಂತಲೂ ಬೇರೆಯಾದ ಜ್ಞಾನವೇ ಮುಕ್ತಿಗೆ ಸಾಧನ ಎಂದು ಇಲ್ಲಿ ಹೇಳಿದಂತಾಯಿತು.

### ಪರಂಪರೆಯ ಕೊಡುಗೆ

**ಆಹುಃ** – ಹೇಳುವರು ಅಂದರೆ ಇಲ್ಲಿ ಹಿಂದಿನ ಕಾಲದ ಆಚಾರ್ಯರು ಎಂಬುದಾಗಿ ಬಿಟ್ಟು ಹೋಗಿರುವ ಪದ ಒಂದನ್ನು ನಾವು ಸೇರಿಸಿಕೊಳ್ಳಬೇಕು. ಅಥವಾ ಪ್ರಸಂಗಕ್ಕೆ ತಕ್ಕಂತೆ ಉಪನಿಷತ್ತುಗಳು ಹೇಳುತ್ತವೆ ಎಂದಾದರೂ ಇಟ್ಟುಕೊಳ್ಳಬಹುದು. ಈ ವಿಚಾರ ಇಂದೇನೂ ಹೊಸದಲ್ಲ. ಇದು ನಮ್ಮ ಹಿಂದಿನ ಆಚಾರ್ಯರ ತಲೆತಲಾಂತರ

ದಿಂದ ಪರಂಪರೆಯ ಕೊಡುಗೆಯಾಗಿ ನಮಗೆ ದೊರಕಿರುವಂತಹದು ಎಂದು ಆಚಾರ್ಯರು ಹೇಳುತ್ತಿದ್ದಾರೆ. "ಇತಿ......... ವಿಚಚಕ್ಷಿರೇ"

**ಯೇ** – ಯಾವ ಪೂರ್ವಾಚಾರ್ಯರೆಲ್ಲರೂ.

**ನಃ** – ಅನೇಕಬಾರಿ ನಮಸ್ಕಾರ ಮಾಡುವುದೇ ಮುಂತಾದ ಗೌರವ ಹಾಗೂ ಉಪಚಾರಗಳಿಂದ ಬಹಳ ಚೆನ್ನಾಗಿ ಗುರುಗಳಿಗೆ ಹಿಡಿಸಿರುವ ನಮಗೆ.

**ತತ್** – ಆ ಮುಕ್ತಿಗೆ ಸಾಧಕವಾದ ವಿಷಯದ ಪ್ರಯೋಗವನ್ನು.

**ವಿ, ಚಚಕ್ಷಿರೇ** – ವಿವೇಚನೆಯಿಂದ ವಿವರಿಸಿ ಹೇಳಿಕೊಟ್ಟಿರುವರೋ, ಅಂತಹ.

**ಧೀರಾಣಾಂ** – ಪರಮಾತ್ಮನ ಧ್ಯಾನದಲ್ಲೇ ಮಗ್ನರಾಗಿರುವ ಅವರ. ಇಲ್ಲಿ 'ಮಾತನ್ನು' ಎಂಬ ಒಂದು ಪದವನ್ನು ಹೆಚ್ಚಿಗೆ ಸೇರಿಸಿಕೊಳ್ಳಬೇಕು.

### ಆರನೆಯ ವಿಭಕ್ತಿಯ ಅಭಿಪ್ರಾಯ

ಅಥವಾ 'ನಟಿಸುವವನ ಆಲಿಸುತ್ತಾನೆ' ಎಂಬ ವಾಕ್ಯಪ್ರಯೋಗಕ್ಕೆ "ನಟಿಸುವವನ ಕಡೆಯಿಂದ ಈ ವಿಷಯವನ್ನು ತಿಳಿದುಕೊಳ್ಳುತ್ತಾನೆ" ಎಂಬ ಅರ್ಥವಿರುವಂತೆ ಧೀರಾಣಾಂ[1] ಎಂಬಲ್ಲಿ ಆರನೆಯ ಷಷ್ಠೀ ವಿಭಕ್ತಿಯನ್ನು ಐದನೆಯ ಪಂಚಮೀ ವಿಭಕ್ತಿಯ ಜಾಗದಲ್ಲಿ ಉಪಯೋಗಿಸಲಾಗಿದೆ ಎಂದು ಹೇಗೋ ಒಂದು ರೀತಿ ಅನ್ವಯ ಮಾಡಬೇಕು.

### ಧೀರರು ಯಾರು?

**ಧೀರಾಃ** – ಧಿಯಾ ರಮಂತೇ ಇತಿ ತಮ್ಮ ಜ್ಞಾನದಿಂದಲೇ ತೃಪ್ತಿಯಾಗಿರುವವರು ಎಂಬುದು ಒಂದು ರೀತಿಯ ಅರ್ಥ. ಧ್ಯಾನದಲ್ಲೇ ಮಗ್ನರಾಗಿರುವವರು ಎಂಬುದು ಮತ್ತೊಂದು ರೀತಿಯ ಅರ್ಥ.

### ಬ್ರಹ್ಮವಿದ್ಯೆ ಬಹಳ ಗಹನವಾದುದು

**ಇತಿ, ಶುಶ್ರುಮ** – ಹೀಗೆ ಕಿವಿಗೊಟ್ಟು ಕೇಳಿದ್ದೆವು. ಬ್ರಹ್ಮವಿದ್ಯೆಯು ಸಮುದ್ರವಿದ್ದಂತೆ. ಬ್ರಹ್ಮವಿದ್ಯೆಯಲ್ಲಿ ಆಳಕ್ಕಿಳಿದು ಪರೀಕ್ಷಿಸಲು ಸಾಧ್ಯವಿಲ್ಲ. ಆದುದರಿಂದಲೇ ಅದನ್ನು ಪರಿಪೂರ್ಣವಾಗಿ ತಿಳಿದುಕೊಳ್ಳಲು ಸಾಧ್ಯವಿಲ್ಲ. ಎಂಬ ಅಭಿಪ್ರಾಯದಿಂದ ಇಲ್ಲಿ ಲಿಟ್ ಉತ್ತಮಪುರುಷದ "ಶುಶ್ರುಮ" – ಕೇಳಿದ್ದೆವು ಎಂಬ ಕ್ರಿಯಾಪದವನ್ನು ಬಳಸಲಾಗಿದೆ.

## ಈಶಾವಾಸ್ಯ ಪ್ರಕಾಶಿಕೆ

### ಬ್ರಹ್ಮ ವಿದ್ಯೆಯನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ

ಬ್ರಹ್ಮ ವಿದ್ಯೆಯು ಗಹನವಾಗಿದೆಯಾಗಿ ಅದನ್ನು ಪರಿಪೂರ್ಣವಾಗಿ ತಿಳಿಯುವುದು ಸಾಧ್ಯವಾಗಲಿಲ್ಲ ಎಂಬ ಅರ್ಥವನ್ನು ಗಮನಿಸಿ ಇಲ್ಲಿ 'ಲಿಟ್' ಎಂಬ ಭೂತಕಾಲದ ಕ್ರಿಯಾಪದವನ್ನು ಬಳಸಲಾಗಿದೆ.

---

1. ಯಾವುದೋ ಒಂದು ವಿಷಯ, ಇದು ಹೇಗೆ ತಿಳಿಯಿತು ಎಂದು ಒಂದು ಪ್ರಶ್ನೆ. ಇದರ ಉತ್ತರ ಇದು ಶತ್ರುಗಳ ಕಡೆಯಿಂದ ತಿಳಿಯಿತು ಎಂದು. ಇದೇ ವಿಷಯದಲ್ಲಿ "ಯಾರ ಕಡೆಯಿಂದ ಬಂದುದು ಈ ಸಮಾಚಾರ" ಎಂದು ಪ್ರಶ್ನೆ. ಇದರ ಉತ್ತರ ಇದು ಶತ್ರುಗಳದು ಎಂದು. ಈ ಬಳಕೆಯ ಮಾತುಗಳನ್ನು ಇಲ್ಲಿ ಉದಾಹರಣೆಗೆ ತೆಗೆದುಕೊಳ್ಳಬಹುದು.

ಪರೋಕ್ಷಾರ್ಥದಲ್ಲೇ 'ಲಿಟ್' ಪ್ರತ್ಯಯವನ್ನು ಬಳಸಲಾಗುವುದು. ಪರೋಕ್ಷ ಎಂದರೆ ನಮಗೆ ನೇರವಾಗಿ ಗೊತ್ತಾಗದೆಯೇ ಇದ್ದು ಗತಿಸಿ ಹೋಗಿರುವಿಕೆ. ಒಬ್ಬರು ಹೇಳಿದ್ದನ್ನು ಪರೋಕ್ಷವಾಗಿರುವ ಮತ್ತೊಬ್ಬರು ಕಿವಿಯಾರ ಕೇಳಿಸಿಕೊಳ್ಳಲು ಸಾಧ್ಯವಿಲ್ಲವಷ್ಟೆ. ಆದುದರಿಂದ ಬ್ರಹ್ಮವಿದ್ಯೆಯನ್ನು ನಾವು ನೇರವಾಗಿ ಪೂರ್ಣ ಕೇಳಿ ತಿಳಿದಿಲ್ಲ, ಇನ್ನೂ ಎಷ್ಟೋ ತಿಳಿಯಬೇಕಾದ ಅಂಶಗಳು ಪರೋಕ್ಷವಾಗಿಯೇ ಉಳಿದಿವೆ ಎಂಬುದು ಅಭಿಪ್ರಾಯ.

## ಪದಾರ್ಥ ದೀಪಿಕೆ

(ಪ್ರಕಾಶಿಕೆಯಲ್ಲಿರುವಂತೆಯೇ ಪ್ರತಿಪದಾರ್ಥ ಇದೆ)

## ಸುಬೋಧಿನೀ

### ಪದ ವಿವರಣೆ

**ತತ್** – ಕರ್ಮ–ಜ್ಞಾನವೆರಡರ ಬಿಡಿಸಲಾಗದ ಜೋಡಿಯನ್ನು ಮುಕ್ತಿಗೆ ಸಹಾಯಕ ಸಾಧನವೆಂದು.

## ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಪಾಠಾಂತರ

ಈ ಮಂತ್ರದಲ್ಲಿ 'ವಿದ್ಯಯಾ' ಎನ್ನುವುದರ ಬದಲು 'ವಿದ್ಯಾಯಾಃ' ಎಂದೂ 'ವ್ಯಾಚಚಕ್ಷಿರೇ'[1] ಎನ್ನುವುದರ ಬದಲು 'ವಿಚಚಕ್ಷಿರೇ' ಎಂದೂ ಮಾಧ್ಯಂದಿನರು ಪಠಿಸುತ್ತಾರೆ. ಹೀಗೆ ಪಾಠ ಭೇದವಿದ್ದರೂ ಅರ್ಥದಲ್ಲಿ ಏನೂ ವ್ಯತ್ಯಾಸವಿಲ್ಲ.

### ಪೂರ್ವಾಪರ ಸಂಗತಿ

ಮುಂದೆ ಬರುವಂತಹ ಮಂತ್ರಗಳಲ್ಲಿ ಕರ್ಮ ಮತ್ತು ವಿದ್ಯೆಗಳನ್ನು ಪರಸ್ಪರ ಹೊಂದಾಣಿಕೆಯಿಂದ ಆಚರಿಸಬೇಕೆಂಬ ಮುಖ್ಯಾಂಶವನ್ನು ನಿರ್ಣಯಿಸಲಾಗುವುದು. ಅದಕ್ಕಾಗಿ ಈ ಹಿಂದೆ ಅವುಗಳ ಪ್ರತ್ಯೇಕ ಆಚರಣೆಯಿಂದಾಗುವ ದುಷ್ಪರಿಣಾಮಗಳನ್ನು ತಿಳಿಸಿ ಆಯಿತು. ಈಗ ಈ ಮಂತ್ರದಲ್ಲಿ ಕರ್ಮ ಮತ್ತು ಜ್ಞಾನಗಳನ್ನು ಆಚರಿಸಿದರೆ ಕೆಲವು ಫಲಗಳೂ ಸಹ ಪ್ರತ್ಯೇಕವಾಗಿ ಹೋಗುವುವು, ಫಲದ ಏಕಮುಖತೆ ಬರದೆಹೋಗುವುದು, ಎಂಬ ಅಂಶವನ್ನು ತಿಳಿಸಲಾಗುವುದು.

### ಪದ ವಿವರಣೆ

**ವಿದ್ಯಯಾ** – ಬರಿಯ ವಿದ್ಯೆಯಿಂದ.

**ಅನ್ಯತ್, ಏವ** – ಕರ್ಮಯೋಗದ ಸಹಾಯದಿಂದ ಸಾಧಿಸಬಹುದಾದ ಫಲಕ್ಕಿಂತ ಬೇರೆಯೇ ಫಲ ಸಿಗುವುದು.

**ಅವಿದ್ಯಯಾ** – ಬರಿಯ ಕರ್ಮದಿಂದ.

**ಅನ್ಯತ್, ಏವ** – ಬ್ರಹ್ಮವಿದ್ಯೆಯಿಂದ ಸಾಧಿಸಬಹುದಾದ ಫಲಕ್ಕಿಂತ ಬೇರೆಯೇ ಫಲ ಸಿಗುವುದು.

---

1. ಕಾಣ್ವರ ಈಗಿನ ಪ್ರಸಿದ್ಧವಾದ ಪಾಠಕ್ರಮದಲ್ಲಿ "ವಿಚಚಕ್ಷಿರೇ" ಎಂದೇ ಇದೆ. ಆದುದರಿಂದ ನಾವು "ವ್ಯಾಚಚಕ್ಷಿರೇ ಎಂಬ ಪಾಠವನ್ನು ಸ್ವೀಕರಿಸಿಲ್ಲ.

ಧೀರಾಣಾಂ – ಬ್ರಹ್ಮಜ್ಞಾನಿಗಳ.

ಇತಿ – ಈ ರೀತಿಯ ಮಾತನ್ನು.

ಶುಶ್ರುಮ – ಕೇಳಿದ್ದೇವೆ.

ತತ್ – ಪ್ರತ್ಯೇಕವಾದ ವಿದ್ಯೆ ಮತ್ತು ಅವಿದ್ಯೆಗಳಿಂದ ನಮಗೆ ಬೇಡದ ಯಾವುದೋ ಫಲಗಳು ಸಿಗುವುವು ಎಂಬ ಮಾತನ್ನು.

ಯೇ – ಯಾವ ಬ್ರಹ್ಮವೇತ್ತರಾದ ಆಚಾರ್ಯರು ಪರಂಪರೆಯಾಗಿ ಇರುತ್ತಿರುವರೋ ಅವರು.

ವಿಚಚಕ್ಷಿರೇ – ಉಪದೇಶಿಸಿದ್ದಾರೆ.

## ಫಲಭೇದ ವಿಚಾರ

ಹನ್ನೊಂದನೆಯ ಮಂತ್ರದಲ್ಲಿ ವಿದ್ಯೆ–ಅವಿದ್ಯೆಗಳಿಗೆ ಪ್ರತ್ಯೇಕ ಫಲಗಳನ್ನು ತಿಳಿಸಿ, ಮೋಕ್ಷಾಭಿಲಾಷಿಗಳಿಗೆ ಆ ಎರಡು ಫಲಗಳೂ ಒಟ್ಟಿಗೆ ಅವಶ್ಯಕ ಎಂದು ನಿರ್ಣಯಿಸಿ, ಅದಕ್ಕೆ ತಕ್ಕಂತೆ ವಿದ್ಯೆ–ಅವಿದ್ಯೆಗಳನ್ನು ಜೊತೆಜೊತೆಯಾಗಿ ಆಚರಿಸುವುದು ಅವಶ್ಯಕ ಎಂದು ಹೇಳಲಾಗುವುದಲ್ಲವೇ! ಈ ದೃಷ್ಟಿಯಿಂದ ಈಗ "ಅನ್ಯತ್" ಎಂಬುದಕ್ಕೆ ಫಲಭೇದವನ್ನೇ ಅರ್ಥಮಾಡಲಾಗಿದೆ.

## ಈ ವಿದ್ಯೆಯ ಉಪದೇಶಕ ಯಾರು ?

**ವಿಚಾರ:–** ವೈದಿಕ ಸಿದ್ಧಾಂತದ ಪ್ರಕಾರ ವೇದಗಳೂ ಪರಮಾತ್ಮನೂ ಪರಮಾತ್ಮನ ಕೆಲವು ಪರಿವಾರದವರೂ ಶಾಶ್ವತ ಸತ್ಯ ಮತ್ತು ಅನಾದಿ ಅನಂತ. ಇದರಂತೆ ವೇದೋಕ್ತ ವಿಚಾರಗಳನ್ನು ಇವರು ಹೊಸದಾಗಿ ಉಪದೇಶದಿಂದ ಪಡೆಯುವ ಅವಶ್ಯಕತೆ ಇಲ್ಲ. ಆದುದರಿಂದ ಪರಮಾತ್ಮನಾಗಲಿ ಅವನ ನಿತ್ಯ ಪರಿವಾರದ ಯಾರೊಬ್ಬರೇ ಆಗಲಿ ತಮ್ಮ ಆಚಾರ್ಯರೊಬ್ಬರಿಂದ ತಾವು ತಿಳಿದು ಅದನ್ನು ಮತ್ತೊಬ್ಬರಿಗೆ ಉಪದೇಶಿಸಲು ಸಾಧ್ಯವಿಲ್ಲವಷ್ಟೆ! ಯಾವನೋ ಒಬ್ಬ ಹುಟ್ಟು–ಸಾವುಗಳುಳ್ಳ ವ್ಯಕ್ತಿ ತನಗಿಂತ ಜ್ಞಾನಿಯಾದ ತನ್ನಂತಹ ಮತ್ತೊಬ್ಬ ಆಚಾರ್ಯರಿಂದಲೇ ಉಪದೇಶ ಪಡೆದಿರಬಹುದಲ್ಲವೇ! ಆದರೆ ಇಂತಹವರ ಉಪದೇಶಗಳು ಅನಾದಿ ಸಿದ್ಧವಾದ ವೇದಗಳಲ್ಲೇ ಹೇಗೆ ಇರಲು ಸಾಧ್ಯ? ಹಾಗೊಂದು ಪಕ್ಷ ಇರಿಸಿಕೊಂಡರೆ, ಅನಿತ್ಯರಾದ ಕಾರಣ ಅಲ್ಪಜ್ಞರೂ ಭ್ರಮೆ ಪ್ರಮಾದ ಮುಂತಾದ ದೋಷಾಯುಕ್ತರೂ ಆಗುವ ಅಂತಹ ಉಪದೇಶಕರ ಮಾತಾದ ವೇದಗಳನ್ನು ಅನಿತ್ಯ ಹಾಗೂ ಅಪ್ರಾಮಾಣಿಕ ಎನ್ನಬೇಕಾಗುವುದಲ್ಲವೆ?

**ನಿರ್ಣಯ:–** ಅಪಾಂತರತಪಸ್[1] ಎಂಬ ಮಹರ್ಷಿಗೂ ಚತುರ್ಮುಖಬ್ರಹ್ಮನಿಗೂ ಇತರ ಅನೇಕ ಋಷಿ–ಮುನಿಗಳಿಗೂ ವೇದಮಂತ್ರಗಳ ದರ್ಶನವಾಗಿದೆ. ಇದಕ್ಕೆ ಕಾರಣ ಪರಮಾತ್ಮನ ಅನುಗ್ರಹ ಹಾಗೂ ಅವರವರ ತಪೋಬಲ. ಇವರೇ ವೇದವಿದ್ಯೆಗಳ ಉಪದೇಶಕರು.

ಜಗತ್ತು ಮೂಲತಃ ನಿತ್ಯ–ಸತ್ಯವಾದರೂ ಸೃಷ್ಟಿ–ಪ್ರಳಯಗಳಿಗೆ ಸಿಲುಕಿ ವ್ಯತ್ಯಾಸವಾಗುತ್ತಾ, ಮತ್ತೆಮತ್ತೆ ಹಿಂದಿನ ರೂಪಾಂತರಗಳನ್ನೇ ಪಡೆಯುತ್ತಿರುವುದು. ಜಗತ್ತು ಸೂಕ್ಷ್ಮಾಕಾರವನ್ನು ಪಡೆಯುವುದೇ ಸೃಷ್ಟಿ. ಜಗತ್ತಿನ ಒಂದಂಶವಾದ ಧ್ವನಿರೂಪವಾದ ವೇದಶಬ್ದಗಳಿಗೂ ಈ ವಿಚಾರ ಹೊರತಲ್ಲ. ಸ್ಥೂಲದ ಸೂಚನೆ ಸೂಕ್ಷ್ಮದಲ್ಲೇ

---

1. ಇವನಿಗೇ 'ವೇದಾಚಾರ್ಯ' ಎಂದು ಹೆಸರು. ಇವನು ಸರಸ್ವತಿಯ ಪುತ್ರ. ವಿಷ್ಣುವಿನ ಅವತಾರ. ಭಾರ. ಶಾಂ. ಮೋಕ್ಷ. ೩೪೯.

ಆಡಗಿದ್ದು ಪರಮಾತ್ಮನ ಸಂಕಲ್ಪವೂ ಇದರಲ್ಲಿರುವುದರಿಂದ, ಮುಂದೆ ಹುಟ್ಟುವ ಮಹರ್ಷಿಗಳಿಗೂ ಸೂಕ್ಷ್ಮ ಶಬ್ದಗಳ ಸ್ಥೂಲಾಕಾರದ ದರ್ಶನವಾಗುವುದು ಸಹಜ ಹಾಗೂ ಸತ್ಯ. ಸತ್ಯವಾದ ಅಂಶವನ್ನು ನಿತ್ಯ ಎಂದು ಕರೆದರೆ ಏನೂ ತಪ್ಪಿಲ್ಲವಷ್ಟೆ!

ಹೀಗೆ ನಿತ್ಯ-ಸತ್ಯವಾದ ವೇದಗಳಲ್ಲೇ ಮುಂಬರುವ ಆಚಾರ್ಯ-ಮಹರ್ಷಿಗಳ ಹಾಗೂ ಅವರ ಉಕ್ತಿಗಳ ಬಗ್ಗೆ ಸೂಚನೆ ಇರಬಹುದಾಗಿಯೂ, ವೇದಗಳು ಮುಂಬರುವ ವಿಚಾರಗಳನ್ನು ಈಗಲೇ ಒಪ್ಪಿರುವ ಕಾರಣ ಮುಂದೆ ಆ ವಿಚಾರ ಹಾಗೂ ಮಾತುಗಳು ಬಂದಾಗಲೂ ಅವನ್ನು ತಮ್ಮವೇ ಎಂದು ನಿರ್ಣಯಿಸಬಹುದಾಗಿಯೂ ಇಟ್ಟುಕೊಳ್ಳಬಹುದು.

ಒಂದು ಜಗತ್ತಿನ ಒಟ್ಟು ಸೃಷ್ಟಿ-ಪ್ರಳಯಗಳ ಪರಮಾವಧಿಯ ಕಾಲವನ್ನು “ಕಲ್ಪ” ಎಂದು ಕರೆಯುತ್ತಾರೆ. ಪ್ರತಿಯೊಂದು ಕಲ್ಪದಲ್ಲೂ ವೇದಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಮಹರ್ಷಿಗಳು ಬೇರೆಬೇರೆಯೇ ಆಗಿರಬಹುದು. ಅವರಿಗೆ ಸಾಕ್ಷಾತ್ಕಾರವಾಗುವ ವೇದಗಳಲ್ಲಿ ತಮ್ಮ ಹಿಂದಿನ ಕಲ್ಪದಲ್ಲಿದ್ದವರ ವಿಚಾರಗಳೂ ಸೇರಿರುತ್ತವೆಯಷ್ಟೆ. ಹೀಗಾಗಿ ವಿದ್ಯೆಗೆ ಆಯಾಕಲ್ಪದ ಮಹರ್ಷಿಗಳೇ ಉಪದೇಶಕರೆನಿಸಿಕೊಳ್ಳುವರು. ಹಾಗೂ ಪೂರ್ವಪೂರ್ವಕಲ್ಪದ ಮಹರ್ಷಿಗಳು ಅವರಿಗೂ ಆಚಾರ್ಯರೆನಿಸಿಕೊಳ್ಳುವರು. ವೇದಗಳ ಮಾತೇ ಅವರ ಮಾತಾದುದರಿಂದ ಆಚಾರ್ಯರು ಹೇಳಿದಾರೆ ಎಂಬ ಮಾತಿಗೂ ವೇದಗಳು ಹೇಳಿವೆ ಎಂಬ ಮಾತಿಗೂ ಏನೂ ವಿರೋಧವಿಲ್ಲ. ಹಾಗೂ ವೇದಗಳ ನಿತ್ಯತ್ವಕ್ಕೆ ಏನೂ ಭಂಗವಿಲ್ಲ. ಈ ವಿಚಾರಗಳನ್ನು ಮಹಾಭಾರತದ ಶಾಂತಿಪರ್ವದ ಮೋಕ್ಷಧರ್ಮಪ್ರಕರಣದಲ್ಲಿ ನಾರಾಯಣೀಯ ಎಂಬ ವಿಭಾಗದಲ್ಲಿ ತಿಳಿಯಬಹುದಾಗಿದೆ.



# ಈಶಾವಾಸ್ಯೋಪನಿಷತ್

## ಮಂತ್ರ ಹನ್ನೊಂದು

**ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ ।**

**ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ ॥೧೧॥**

### ಅನ್ವಯಾನುಸಾರ ಪ್ರತಿಪದಾರ್ಥ

**ಯಃ** - ಇಂತಹ ಸದಾಚಾರ್ಯೋಪದೇಶ ಪಡೆದಿರುವ ಯಾವನು; **ವಿದ್ಯಾಂ** - ಬ್ರಹ್ಮೋಪಾಸನರೂಪವಾದ ಜ್ಞಾನವನ್ನು; **ಚ** - ಮತ್ತು; **ಅವಿದ್ಯಾಂ** - ನಿಷ್ಕಾಮಕರ್ಮಯೋಗರೂಪವಾದ ಅಂಗವನ್ನೂ; **ತತ್** - ಆ ಜ್ಞಾನಕರ್ಮಗಳೆಂಬ; **ಉಭಯಂ** - ಹೀಗೆ ಎರಡು ಬಿಡಿಸಲಾಗದ ಅಂಶಗಳ ಸಂಯುಕ್ತರೂಪವಾಗಿ; **ಸಹ** - ಜೊತೆ ಜೊತೆಯಾಗಿಯೇ; **ವೇದ** - ತಿಳಿದುಕೊಳ್ಳುವನೋ; **(ಸಃ)** ಅಂತಹ ಆಚಾರಶೀಲನಾದ ಜ್ಞಾನಿಯು; **ಅವಿದ್ಯಯಾ** - ನಿಷ್ಕಾಮಕರ್ಮಯೋಗದಿಂದ; **ಮೃತ್ಯುಂ** - ಆತ್ಮನ ಜ್ಞಾನಕ್ಕೆ ಮೃತ್ಯು ವಿನಂತೆ ನಾಶಕವಾದ ಪುಣ್ಯಪಾಪಕರ್ಮಗಳನ್ನು; **ತೀರ್ತ್ವಾ** - ಪೂರ್ಣವಾಗಿ ಅತಿಕ್ರಮಿಸಿ; **ವಿದ್ಯಯಾ** - ಉಪಾಸನರೂಪವಾದ ವಿದ್ಯೆಯಿಂದ; **ಅಮೃತಂ** - ಅಮೃತದಂತೆ ಶಾಶ್ವತ ಆನಂದಕರವಾದ ಬ್ರಹ್ಮವನ್ನು; **ಅಶ್ನುತೇ** - ಪಡೆದುಕೊಳ್ಳುತ್ತಾನೆ.

### ಛಾಯಾಪದ್ಯ

ವಿದ್ಯೆಯನುಮವಿದ್ಯೆಯನುಂ ಅದಾವನರಿತನೆರಡೊಡಂ।

ಅವಿದ್ಯೆಯಿಂದ ಮಿತ್ತು[1] ದಾಂಟಿ ಪಡೆವನಮೃತ ವಿದ್ಯೆಯಿಂ॥

## ತಾತ್ಪರ್ಯಾರ್ಥ

### ಮೋಕ್ಷೋಪಾಯ

"ಕುರ್ವನ್ನೇವೇಹ" ಎಂಬ ಮಂತ್ರದಲ್ಲಿ ವಿದ್ಯಾಂಗವಾದ ಕರ್ಮಾನುಷ್ಠಾನವನ್ನು ಸಂಗ್ರಹವಾಗಿ ತಿಳಿಸಲಾಯಿತು. ಒಂಬತ್ತು ಮತ್ತು ಹತ್ತನೇ ಮಂತ್ರಗಳಲ್ಲಿ ಪರಸ್ಪರ ಸಹಕಾರಿಗಳಲ್ಲದ ಕರ್ಮಯೋಗ, ಜ್ಞಾನಯೋಗಗಳ ಆಚರಣೆಯಿಂದ ಅನಿಷ್ಟಫಲವು ದೊರಕುವುದೆಂದು ತಿಳಿಸಲಾಯಿತು. ಈಗ 'ವಿದ್ಯಾಂಚ' ಎಂಬ ಮಂತ್ರದಿಂದ, ಕರ್ಮಯೋಗ ಜ್ಞಾನಯೋಗಗಳಿಂದ ದೊರಕುವ ಫಲವು ಮುಮುಕ್ಷುವಿಗೆ ಅಪೇಕ್ಷಿತವಾದುದರಿಂದ, ಅವುಗಳ ಫಲಗಳನ್ನು ಬೇರೆಬೇರೆಯಾಗಿ ತಿಳಿಸಿ ಎರಡನ್ನೂ ಒಂದು ಮತ್ತೊಂದಕ್ಕೆ ಸಹಾಯಕವಾಗುವಂತೆ ಒಟ್ಟಿಗೆ ಮಾಡಬೇಕೆಂದು ತಿಳಿಸಲಾಗುತ್ತದೆ.

### ವಿದ್ಯೆ ಮತ್ತು ಅವಿದ್ಯೆ

ಶಾಸ್ತ್ರಜ್ಞರು ಪರಬ್ರಹ್ಮೋಪಾಸನೆಯನ್ನು ವಿದ್ಯೆಯೆಂದೂ, ಫಲಾಪೇಕ್ಷೆಯಿಲ್ಲದ ಬ್ರಹ್ಮೋಪಾಸನೆಗೆ ಅಂಗವಾದ ವರ್ಣಾಶ್ರಮವಿಹಿತವಾದ ಕರ್ಮವನ್ನು ಅವಿದ್ಯೆಯೆಂದೂ ಕರೆಯುತ್ತಾರೆ.

### ವಿದ್ಯೆ ಮತ್ತು ಅವಿದ್ಯೆಯ ಅನುಷ್ಠಾನ ಫಲ

ಮುಮುಕ್ಷುವು ಸದಾಚಾರ್ಯನಿಂದ ವಿದ್ಯೆ ಮತ್ತು ಅವಿದ್ಯೆಗಳೆರಡನ್ನೂ ಪರಸ್ಪರ ಸಹಕಾರಿಗಳಂತೆ ಆಚರಿಸುವುದನ್ನು ತಿಳಿದಿದ್ದಾನೆ. ಈತನು, ಬ್ರಹ್ಮೋಪಾಸನೆಗೆ ಸಹಾಯಕವಾಗಿ ಕರ್ಮಾನುಷ್ಠಾನವನ್ನೂ, ಕರ್ಮಾನುಷ್ಠಾನಕ್ಕೆ

---

1. ಮಿತ್ತು - ಮೃತ್ಯುವನ್ನು

ಪೋಷಕವಾಗಿ ಬ್ರಹ್ಮೋಪಾಸನೆಯನ್ನೂ ಮಾಡುತ್ತಾನೆ ಹೀಗೆ ಆಚರಿಸಲ್ಪಟ್ಟ ಅವಿದ್ಯೆಯು ಬ್ರಹ್ಮಸಾಕ್ಷಾತ್ಕಾರಕ್ಕೆ ಪ್ರತಿಬಂಧಕಗಳಾದ ಪ್ರಾಚೀನ ಕರ್ಮಶೇಷಗಳನ್ನೂ ಜ್ಞಾನಸಂಕೋಚಕ್ಕೆ ಕಾರಣವಾದ ಪುಣ್ಯಪಾಪಗಳನ್ನೂ ನಾಶ ಮಾಡುತ್ತವೆ. ಇದರಿಂದ ಸ್ಥಿರವಾದ ಬ್ರಹ್ಮೋಪಾಸನೆಯು ಬ್ರಹ್ಮಸಾಕ್ಷಾತ್ಕಾರವನ್ನು ಉಂಟುಮಾಡುತ್ತದೆ. ಬ್ರಹ್ಮಸಾಕ್ಷಾತ್ಕಾರ ಪಡೆದ ಈತನು ಮೃತನಾದ ಮೇಲೆ ಮೋಕ್ಷವನ್ನು ಪಡೆದು ಬ್ರಹ್ಮಾನಂದವನ್ನು ಅನುಭವಿಸುವನು.

### ಅವಿದ್ಯೆ - ವಿದ್ಯಾಂಗ ಕರ್ಮ

ಉಪನಿಷತ್ತಿನ ಅರ್ಥವನ್ನು ವಿವರಿಸುವ ವಿಷ್ಣುಪುರಾಣದಲ್ಲಿ ಜನಕನು ಅವಿದ್ಯೆಯಿಂದ ಮೃತ್ಯುವನ್ನು ದಾಟಲು ಅನೇಕ ಯಾಗಗಳನ್ನು ಮಾಡಿದನೆಂದು ಇದೆ. ಇಲ್ಲಿ ಭಾಷ್ಯಕಾರರು ಅವಿದ್ಯೆ ಎಂದರೆ ವಿದ್ಯಾಂಗವಾದ ಕರ್ಮವೆಂದು ಅರ್ಥಮಾಡಿದ್ದಾರೆ. ಮನುಸ್ಮೃತಿಕಾರರೂ "ತಪಸಾ ಕಲ್ಮಷಂ ಹಂತಿ" ಎಂಬಲ್ಲಿ ಇದೇ ಅರ್ಥವನ್ನು ಪ್ರಕಾಶಪಡಿಸಿದ್ದಾರೆ.

ಆದ್ದರಿಂದ ಕರ್ಮಯೋಗವನ್ನು ಜ್ಞಾನಯೋಗಕ್ಕೆ ಸಹಕಾರಿಯನ್ನಾಗಿಯೂ ಜ್ಞಾನಯೋಗವನ್ನು ಕರ್ಮಯೋಗಕ್ಕೆ ಉಪಕಾರವಾಗಿಯೂ ಆಚರಿಸಬೇಕು. ಹೀಗೆ ಆಚರಿಸುವುದನ್ನು ಅಂಗಾಂಗಿಭಾವವೆಂದು ಕರೆಯುತ್ತಾರೆ.

## ವೇದಾಂತಾಚಾರ್ಯ ಭಾಷ್ಯ

### ಅವತಾರಿಕೆ

"ಬೇರೆ" ಎಂದು ಮೊದಲಾಗುವ ಹಿಂದಿನ ಮಂತ್ರದಲ್ಲಿ ಸಂಕ್ಷಿಪ್ತವಾಗಿ ಹೇಳಿದುದನ್ನೇ ಈಗ ವಿವರಿಸುತ್ತಿದ್ದಾನೆ. "ವಿದ್ಯಾ............ಸಹ" ಎಂದು.

### ಪ್ರತಿಪದಾರ್ಥ ಮತ್ತು ವಿಶೇಷ

**ಯಃ** – ಇರುವುದಿರುವಂತೆಯೇ ಹಿರಿಯರು ಉಪದೇಶ ಮಾಡಿರುವುದನ್ನು ಪಡೆದಿರುವ ಯಾವನೇ ಆಗಲಿ.

**ವಿದ್ಯಾಂ** – ಪರಮಾತ್ಮನ ಉಪಾಸನರೂಪವಾದ ಜ್ಞಾನವನ್ನು.

**ಅವಿದ್ಯಾಂ** – ಆ ಉಪಾಸನೆಗೆ ಸಹಾಯಕ ಅಂಗಗಳಾದ ಶಾಸ್ತ್ರೀಯಕೆಲಸಗಳ ರೂಪದಲ್ಲಿರುವ ಕರ್ಮವನ್ನು.

**ಚ** – ಸ್ವಲ್ಪವೂ ಒಂದಕ್ಕೊಂದು ವಿರೋಧ ಬರುವ ಪ್ರಸಂಗವೇ ಇಲ್ಲದಂತಹ, ಪರಸ್ಪರ ಅವಿಭಾಜ್ಯ[1] ಅಂಗಾಂಗಿಗಳಾದ ಈ ಜ್ಞಾನ–ಕರ್ಮಗಳೆರಡನ್ನು, **ಸಹ, ವೇದ** - ಸಹಾಯಕ ಅಂಗಕಾರ್ಯಗಳನ್ನೂ, ಸಹಾಯ ಪಡೆಯುವ ಪ್ರಧಾನವಾದ "ಅಂಗಿ" ಎನಿಸುವ ಉಪಾಸನೆಯನ್ನೂ "ಆಚರಿಸಲೇಬೇಕು" ಎಂಬ ಅಂಶದಲ್ಲಿ ಇವೆರಡು ವಿಚಾರಗಳಿಗೂ ಸಮಾನತೆ ಇರುವುದರಿಂದ, ಎರಡರಲ್ಲಿ ಯಾವುದೊಂದನ್ನೂ ಬಿಡದೆ ಜೊತೆಜೊತೆಯಲ್ಲೇ ತಿಳಿದುಕೊಂಡಿರಬೇಕು.

### ಕರ್ಮವನ್ನು ಬಿಟ್ಟು ಜ್ಞಾನವನ್ನೇ ಇಟ್ಟುಕೊಳ್ಳಬಹುದೆ?

ಹೀಗೆ ಈ ಮಾತು ಎರಡರ ವಿಚಾರದಲ್ಲೂ ಏನೂ ವ್ಯತ್ಯಾಸ ಮಾಡದೆ ತಿಳಿಯಲೇ ಬೇಕು ಎಂಬ ಅರ್ಥದಲ್ಲಿ ಬಂದಿದೆಯೇ ಹೊರತು; ಕರ್ಮವನ್ನು ಬಿಟ್ಟುಬಿಡುವುದಕ್ಕಾಗಿಯೂ ಜ್ಞಾನವನ್ನು ಇಟ್ಟುಕೊಳ್ಳುವುದಕ್ಕಾಗಿಯೂ ಅವಶ್ಯವಾಗಿ ತಿಳಿದಿರಬೇಕು ಎಂಬ ಅರ್ಥದಲ್ಲಿ ಖಂಡಿತವಾಗಿಯೂ ಬಂದಿಲ್ಲ.

---

1. ಬೇರ್ಪಡಿಸಲಾಗದ.

ಹಿಂದೆ ಕರ್ಮವನ್ನು ತೆಗಳಿರುವುದರಿಂದ ಕರ್ಮದ ಸಹಾಯ ಸ್ವಲ್ಪವೂ ಬೇಕಿಲ್ಲದ ಜ್ಞಾನವೇ ಮುಕ್ತಿಗೆ ಸಾಧನ ಎನ್ನುವುದೇ ಸರಿಯಾಗುವುದಿಲ್ಲವೆ? ಎಂದು ಕೇಳಬಹುದು; ಹಾಗಾದರೆ ಹಿಂದೆ ಜ್ಞಾನವನ್ನೂ ತೆಗಳಿರುವುದರಿಂದ ನಾವು ಬಿಡಬೇಕಾದ ಈ ಎರಡನ್ನೂ ಕಟ್ಟಿಕೊಳ್ಳಲೇಬೇಕು ಎಂದು ಹೇಳಬೇಕಾದ ಕೆಟ್ಟ ಪ್ರಸಂಗ ಇದಾಗುವುದು. ಹಾಗೂ ಆದರೆ; ಈ ನಂತರದ ವಚನವೆಲ್ಲ ಇದರ ಜೊತೆ ಸೇರದೆ ಕಳಚಿಬೀಳುವುದು.

"ಅವಿದ್ಯಯಾ............ಅಶ್ನುತೇ" ಎಂಬುದನ್ನು (ಈಗ ವಿವರಿಸಲಾಗುತ್ತದೆ).

**ಅವಿದ್ಯಯಾ** -- ಉಪಾಸನವಿದ್ಯೆಗೆ ಸಹಾಯಕ ಅಂಗವೆಂದು ಶಾಸ್ತ್ರದಲ್ಲಿ ವಿಧಿಸಿರುವ ಕೆಲಸದಿಂದ.

**ಮೃತ್ಯುಂ** – "ಮರಣಸ್ಥಿತಿಯೇ ಇದೂ" ಎನ್ನಬಹುದಾದ, ಹಾಗೂ ಜ್ಞಾನವೆಲ್ಲವೂ ಸಂಕುಚಿತವಾಗುವ ಸ್ಥಿತಿಯನ್ನು ಅಂದರೆ ಇಂತಹ ಸ್ಥಿತಿಗೆ ಕಾರಣವಾಗಿ ನಾವು ಹಿಂದೆ ಮಾಡಿರುವ ಪುಣ್ಯಪಾಪಕರ್ಮವನ್ನು, ಈಗಿರುವ ಸಂಸಾರಬಂಧವನ್ನು ಇನ್ನೂ ಅಜ್ಞಾನದಲ್ಲಿಯೇ ಮುಳುಗಿರುವ ಸ್ಥಿತಿಯನ್ನು.

**ತೀರ್ತ್ವಾ** – ಒಂದು ಚೂರೂ ಉಳಿಯದಂತೆ(ಈ ಸಂಸಾರ ಮಂಡಲದಲ್ಲೇ) ಒದರಿಬಿಟ್ಟು. ಅದನ್ನು ದಾಟಿ ಮೇಲಿನ ಲೋಕಕ್ಕೆ ಏರಿ.

**ವಿದ್ಯಯಾ** – ಹಿಂದೆ ಹೇಳಿದಂತೆ ಪರಮಾತ್ಮನ ಅನುದರ್ಶನರೂಪವಾದ ಜ್ಞಾನದಿಂದ.

**ಅಮೃತಂ, ಅಶ್ನುತೇ** – "ಇದೇ ಅಮೃತವೂ ಅಭಯವೂ ಇದೇ ಬ್ರಹ್ಮ[1]" ಮುಂತಾದ ವಚನಗಳಲ್ಲಿ ಮರಣ, ಭಯ ಮುಂತಾದ ಯಾವುದೇ ದೋಷಗಳೂ ಇಲ್ಲದಿರುವುದಾಗಿ ತಿಳಿದು ಬರುವ ಪರಮಾತ್ಮನನ್ನು ಪಡೆಯುತ್ತಾನೆ ಎಂದರ್ಥ.

## ಅಮೃತ ಎಂದರೆ ಮುಕ್ತಿ ಎಂದೂ ಅರ್ಥ

ಇಲ್ಲಿ ಅಮೃತ ಎಂಬ ಪದಕ್ಕೆ – ಸಂಸಾರ ಮಂಡಲದಿಂದ ಬಿಡುಗಡೆ – ಮುಕ್ತಿ ಎಂದು ಅರ್ಥ ಹೇಳಿದರೂ; "ಸಂಸಾರ ಬಂಧವನ್ನು ಬಿಟ್ಟು" ಎಂದು ಹಿಂದೆ ಹೇಳಿದುದೂ, ಈಗ "ಸಂಸಾರ ಬಂಧದಿಂದ ಬಿಡುಗಡೆಯಾಗಿ" ಎಂದು ಹೇಳುತ್ತಿರುವುದೂ ಒಂದೇ ಆಗಿ ಮತ್ತೆ ಮತ್ತೆ ಹೇಳಿದ್ದನ್ನೇ ಹೇಳಿದಂತಾಗುವುದಿಲ್ಲವೇ? ಎಂದು ಆಕ್ಷೇಪಿಸಲು ಅವಕಾಶವಿಲ್ಲ. "ಅಜ್ಞಾನದ ಸ್ಥಿತಿಯನ್ನು ಹಾಗೂ ಅದಕ್ಕೆ ಕಾರಣವಾದ ಸಂಸಾರ ಬಂಧವನ್ನೂ ಬಿಟ್ಟು ದಾಟಿ" ಎಂಬುವುದಕ್ಕೆ ಈ ಮುಕ್ತಿ ಸಾಧನೆಯ ಸಲಕರಣೆಗಳಿಗೆ ಇರುವ ಅಡ್ಡಿಯನ್ನು ಬಿಡಿಸಿಕೊಳ್ಳುವುದು ಎಂದೂ. "ಅಮೃತವನ್ನು ಪಡೆಯುತ್ತಾನೆ" ಎಂಬುದಕ್ಕೆ ನಮ್ಮ ಗುರಿಯಾದ ಬ್ರಹ್ಮನನ್ನು ತಲುಪುವುದಕ್ಕೆ ಇರುವಂತಹ ಅಡ್ಡಿಯನ್ನು ಬಿಡಿಸಿಕೊಳ್ಳುವುದು ಎಂದೂ ಅರ್ಥ ಬರುವುದರಿಂದ ಪುನರುಕ್ತಿಗೆ ಅವಕಾಶವಿಲ್ಲ ಎಂಬುದೇ ಇದಕ್ಕೆ ಕಾರಣ.

## ಮಾಯೆಯಲ್ಲಿ ಸಿಲುಕಿರುವವರಿಗೆ ಮುಕ್ತಿ ಜ್ಞಾನದಿಂದ ಮಾತ್ರ ಎಂಬುದು ಸರಿಯೆ?

ಇಲ್ಲಿ ಅಜ್ಞಾನ ಎಂಬ ಮಾಯೆಯಿಂದ ಸಂಸಾರಬಂಧವನ್ನು ಪಡೆದಿರುವರು ಯಾರೋ; ಅವರು ಕೇವಲ ಜ್ಞಾನದಿಂದ ಮುಕ್ತಿಯನ್ನು ಪಡೆಯುವರು ಎಂದು ವಿವರಣೆ ನೀಡುವಂತಹ ಕೆಲವರು, ಏನೊಂದೂ ಅಡೆತಡೆ ಇಲ್ಲದೆ ತಮ್ಮಿಷ್ಟ ಬಂದಂತೆ ಇಲ್ಲಿರುವ ಪದಗಳ ಹಾಗೂ ವಾಕ್ಯಗಳ ಸ್ವಾರಸ್ಯವನ್ನೂ, ಈ ಸ್ವಾರಸ್ಯವಾದ ಮಾತು

---

1. ಏತದಮೃತಮಭಯಮೇತದ್ಬ್ರಹ್ಮ. ಛಾಂ. ೪.೧೫.೧.

ಗಳನ್ನೇ ಬಲಪಡಿಸಿ ವಿವರಿಸುವಂತಹ ಇತಿಹಾಸ ಪುರಾಣ ವಚನಗಳನ್ನೂ ಚೆನ್ನಾಗಿ ಮರೆತು ಬಿಟ್ಟು, ತಾವೇ ಕೃತಕವಾಗಿ ತಯಾರಿಸಿಕೊಂಡಿರುವ ಮಾಯೆ ಎಂಬ ಅಜ್ಞಾನದಿಂದ ತಮ್ಮಷ್ಟಕ್ಕೆ ತಾವೇ ಮೃತ್ಯು ರೂಪವಾದ ಈ ಸಂಸಾರದಲ್ಲೇ ಸೇರಿಕೊಂಡು ಇರುತ್ತಾರೆ.

### ಜ್ಞಾನ, ಕರ್ಮ ಎರಡೂ ಅತ್ಯವಶ್ಯಕ ಎನ್ನಲು ಐತಿಹಾಸಿಕ ಆಧಾರ

ಪ್ರಕೃತವಾದ ಮಂತ್ರವಚನವನ್ನೇ ಅನುಸರಿಸಿ ನೆನಪಿಟ್ಟುಕೊಂಡು ಅದರಂತೆಯೇ ವಿಷ್ಣು ಪುರಾಣದಲ್ಲೂ ಹೇಳಲಾಗಿದೆ.

"ಆ ಕೇಶಿಧ್ವಜ ಎಂಬ ಜನಕರಾಜನೂ ಸಹ ಶಾಸ್ತ್ರಜ್ಞಾನವನ್ನೇ ಅವಲಂಬಿಸಿ ತನಗೆ ಪರಮಾತ್ಮೋಪಾಸನೆಯು ಅನುದರ್ಶನ ರೂಪವಾಗಿ ಫಲಿಸಬೇಕು ಎಂಬ ದೃಢಮನಸ್ಸಿಟ್ಟುಕೊಂಡು, ಅದಕ್ಕೆ ಅಡ್ಡಿಯಾಗಿರುವ ಹಿಂದಿನ ಪುಣ್ಯ ಪಾಪಗಳನ್ನು ಕಳೆದುಕೊಳ್ಳುವುದಕ್ಕಾಗಿ, ಸ್ವರ್ಗ ಮುಂತಾದ ಯಾವುದೇ ಕ್ಷುದ್ರಫಲಗಳ ಆಸೆಯನ್ನೂ ಬಿಟ್ಟು, ಆಯಾ ಶಾಸ್ತ್ರೋಕ್ತವಾದ ಕರ್ಮಗಳನ್ನು ಆಚರಿಸುವ ಕ್ರಮದಿಂದಲೇ ಅನೇಕ ಯಜ್ಞಯಾಗಗಳನ್ನೂ ನೇರವೇರಿಸಿದ"[1] ಎಂದು.

### ಇಲ್ಲಿ ಅವಿದ್ಯೆ ಎಂದರೆ ಕರ್ಮ

ಪ್ರಕೃತ ಈ ಮಂತ್ರದಲ್ಲಿರುವ "ಅವಿದ್ಯಾ" ಎಂಬ ಪದಕ್ಕೆ ಹಿಂದುಮುಂದಿನ ಪ್ರಸಂಗಗಳ ನೆಲೆಗಟ್ಟೂ, ಅವುಗಳಿಗೆ ಹೊಂದಿಕೊಳ್ಳುವಂತಹ ಸ್ವಭಾವವೂ ಇರುವುದರಿಂದ; ಪರಮಾತ್ಮೋಪಾಸನರೂಪವಾದ ಜ್ಞಾನಕ್ಕೆ ಸಹಾಯಕ ಅಂಗವಾದಂತಹ ಶಾಸ್ತ್ರೀಯ ಕರ್ಮಗಳೇ ಅರ್ಥ.

### ಅವಿದ್ಯೆಯನ್ನು ಕರ್ಮ ಎನ್ನಲು ಆಚಾರ್ಯರ ವಚನದ ಆಧಾರ

"ಇಲ್ಲಿ 'ಅವಿದ್ಯೆ' ಎಂಬ ಶಬ್ದದ ನೇರವಾದ ಅರ್ಥ ಆಯಾ ವರ್ಣ ಮತ್ತು ಆಶ್ರಮಗಳಿಗೆ ತಕ್ಕಂತಹ ಶಾಸ್ತ್ರೋಕ್ತವಾದ ಕೆಲಸಗಳು"[2] ಎಂದೂ, ಮತ್ತು "ಮೃತ್ಯುವನ್ನು ದಾಟಿ ಹೋಗುವ ಸಲಕರಣೆಯೆಂದು ಪ್ರಸಿದ್ಧವಾದ ಈ 'ಅವಿದ್ಯೆ' ಎಂದರೆ; ಜ್ಞಾನಕ್ಕಿಂತ ಬೇರೆಯಾದ ಹಾಗೂ ಶಾಸ್ತ್ರೋಕ್ತವಾದ ಕರ್ಮವೇ[3]" ಎಂದೂ ಹೇಳುತ್ತಾರೆ.

ಹೀಗೆ ಬ್ರಹ್ಮಸೂತ್ರದ ಶ್ರೀಭಾಷ್ಯದಲ್ಲಿ ಆಚಾರ್ಯ ರಾಮಾನುಜರು ಸ್ಪಷ್ಟವಾಗಿ ಹೇಳಿರುತ್ತಾರೆ.

### ಅವಿದ್ಯೆ-ಕರ್ಮ ಎಂಬುದರ ಸಮರ್ಥನೆ

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಎಂಬ ವರ್ಣೀಯ ವ್ಯಕ್ತಿಗಳ ಸಹಯೋಗ ಇರುವಾಗ; ಒಬ್ಬ ಕ್ಷತ್ರಿಯನನ್ನೋ ವೈಶ್ಯನನ್ನೋ ಶೂದ್ರನನ್ನೋ ಗುರುತಿಸಲು "ಬ್ರಾಹ್ಮಣನಲ್ಲದವನು" "ಅಬ್ರಾಹ್ಮಣ" ಮುಂತಾದ ಮಾತನ್ನು ಉಪಯೋಗಿಸುವಾಗ ; "ಅಲ್ಲ" ಎಂಬ ಮಾತಿಗೆ ಬ್ರಾಹ್ಮಣನನ್ನು ನಿಷೇಧಿಸುವುದಕ್ಕಿಂತ ಬ್ರಾಹ್ಮಣೇತರರನ್ನು ಸ್ವೀಕರಿಸುವುದೇ ಮುಖ್ಯವಾದ ಅಭಿಪ್ರಾಯ.

---

1. ಇಯಾಜ ಸೋಽಪಿ ಸುಬಹೂನ್ ಯಜ್ಞಾನ್ ಜ್ಞಾನವ್ಯಪಾಶ್ರಯಃ ।
ಬ್ರಹ್ಮವಿದ್ಯಾಮಧಿಷ್ಠಾಯ ತರ್ತುಂ ಮೃತ್ಯುಮವಿದ್ಯಯಾ ॥ ವಿ. ಪು. ೬. ೬. ೧೨.
2. ಅತ್ರ ಅವಿದ್ಯಾಶಬ್ದಾಭಿಹಿತಂ ವರ್ಣಾಶ್ರಮವಿಹಿತಂ ಕರ್ಮ. ಶ್ರೀಭಾಷ್ಯ. ೧. ೧. ೧. ಲಘುಸಿದ್ಧಾಂತ.
3. ಮೃತ್ಯುತರಣೋಪಾಯತಯಾ ಪ್ರತೀತಾಽವಿದ್ಯಾ ವಿದ್ಯೇತರದ್ವಿಹಿತಂ ಕರ್ಮೈವ ಶ್ರೀಭಾಷ್ಯ. ೧. ೧. ೧.

ಹೀಗೆಯೇ 'ವಿದ್ಯೆ, ಅವಿದ್ಯೆ ' ಎಂಬ ಶಬ್ದಗಳ ಸಹಯೋಗ ' ಇರುವಾಗ; ವಿದ್ಯೆ ಎಂದರೆ ಜ್ಞಾನ ಎಂಬ ಅರ್ಥ ನಿಶ್ಚಯವಾಗಿರುವಾಗ; ಜ್ಞಾನಕ್ಕೆ ಸಮೀಪವರ್ತಿಯೂ ಅಂಗವೂ ಆಗಿರುವ ಕರ್ಮವನ್ನೇ ಇಲ್ಲಿ ಅವಿದ್ಯೆ–ವಿದ್ಯೆಯಲ್ಲದುದು ಎಂದು ಹೇಳಲಾಗಿದೆ ಎಂದು ಶ್ರೀಭಾಷ್ಯಕಾರರ ವಚನದ ಅಭಿಪ್ರಾಯ.

### ಅವಿದ್ಯೆ ಎಂದರೆ ಕರ್ಮ ಎಂದು ಒಪ್ಪಿದರೆ ಮಾತ್ರ ಇತಿಹಾಸ – ಪುರಾಣ ವಚನಗಳ ಸಮನ್ವಯ

ಇದೇ ರೀತಿ ಅರ್ಥಮಾಡಿದರೆ ಮಾತ್ರ

"ಕಾಯಕ್ಲೇಶರೂಪವಾದುದು ತಪಸ್ಸು. ಉಪಾಸನರೂಪವಾಗಿ ಪರಿಪಕ್ವವಾಗಬಲ್ಲ ಜ್ಞಾನ ಎಂದರೆ ವಿದ್ಯೆ. ಈ ಎರಡೂ ಬ್ರಾಹ್ಮಣನಿಗೆ ಪಾರಲೌಕಿಕವಾದ ಹಿತವನ್ನು ಉಂಟುಮಾಡುವುವು. ತಪಸ್ಸಿನಿಂದ ಪುಣ್ಯ–ಪಾಪ ದೋಷಗಳನ್ನು ಬಡಿದು ಹಾಕುತ್ತಾನೆ. ವಿದ್ಯೆಯಿಂದ ಮುಕ್ತಿಯನ್ನೂ ಪರಮಾತ್ಮನನ್ನೂ ಪಡೆದುಕೊಳ್ಳುತ್ತಾನೆ.[1]"

ಈ ಮನುಸ್ಮೃತಿ ವಚನವೂ. ಹೀಗೆ ವೇದ ಉಪನಿಷತ್ತುಗಳ ವಚನಗಳನ್ನು ಬಲಪಡಿಸುವತಂಹ ಇಂತಹ ಇತಿಹಾಸ – ಪುರಾಣ – ವಚನಗಳೂ ಇದಕ್ಕೆ ಸರಿ ಹೊಂದುತ್ತವೆ.

### ಜ್ಞಾನ- ಕರ್ಮಗಳ ಸಮಜೋಡಿ: (ಸಮಸಮುಚ್ಚಯವಾದ)

ಇಲ್ಲಿ ಯಾರೋ ಇತರ ಕೆಲವರು ಕರ್ಮ ಮತ್ತು ಜ್ಞಾನಗಳೆಂಬ ಈ ಎರಡು ಉಪಕರಣಗಳೂ ಪ್ರಧಾನವಾಗಿಯೂ, ಸ್ವತಂತ್ರವಾಗಿಯೂ ಇವೆಯಾಗಿ, ಇವುಗಳ ಸರಿಸಮಾನವಾದ ಜೋಡಿಯನ್ನೂ, ಇದಕ್ಕೆ ತಕ್ಕಂತೆ 'ಮೃತ್ಯುವನ್ನು ದಾಟುವುದು, ಮುಕ್ತಿಯನ್ನು ಪಡೆಯುವುದು' ಎಂಬ ಎರಡು ಸ್ವತಂತ್ರವಾದ ಪ್ರಯೋಜನಗಳ ಜೋಡಿಯನ್ನೂ, ಈ ಮಂತ್ರಕ್ಕೆ ಅರ್ಥವಾಗಿ ವಿವರಿಸುವರು.

### ಸಮಸಮುಚ್ಚಯದ ಖಂಡನೆ

ಕರ್ಮವು ಅಂಗ ಎಂದರೆ ಜೋಡಿಯಲ್ಲಿ ಅದು ಪ್ರಧಾನ ಅಂಶವಲ್ಲ. ಜ್ಞಾನವು ಅಂಗಿ ಎಂದರೆ ಜೋಡಿಯಲ್ಲಿ ಅದೇ ಪ್ರಧಾನಾಂಶ ಎಂದೂ, ಮೃತ್ಯುವನ್ನು ದಾಟುವುದೂ ವಿಶೇಷ ರೀತಿಯ ಜ್ಞಾನದಿಂದಲೇ ಎಂದೂ ಸ್ಪಷ್ಟವಾಗಿ ವಿವರಿಸಿ ತಿಳಿಸುವ ಉಪನಿಷತ್ತುಗಳು, ಹಾಗೂ ಇತಿಹಾಸ ಪುರಾಣಗಳು, ಬ್ರಹ್ಮಸೂತ್ರಗಳು ಇವೆಲ್ಲವರ ವಚನಗಳ ಸಮೂಹದ ಸಹಾಯದಿಂದ ಶ್ರೀಭಾಷ್ಯವನ್ನನುಸರಿಸಿ, ಇವರಿಗೆಲ್ಲ ಸರಿಯಾದ ಮಾರುತ್ತರ ಕೊಡಬೇಕು.

### ಜ್ಞಾನ ಕರ್ಮಗಳ ಸಮವಲ್ಲದ ಜೋಡಿ (ವಿಷಮ ಸಮುಚ್ಚಯವಾದ)

(ಜ್ಞಾನವು ನಾಯಕನ ಹಾಗೆ, ಕರ್ಮವು ಅದರ ಅನುಯಾಯಿಯ ಹಾಗೆ)

ಜ್ಞಾನವು ಕರ್ಮಗಳ ಈ ಸಮವಲ್ಲದ ಜೋಡಿಯನ್ನೇ ಮುಕ್ತಿಯ ಉಪಕರಣವಾಗಿ ಸ್ವೀಕರಿಸುವ ಪಕ್ಷದವರಿಗೂ ಕೂಡ ಇವೆರಡರಲ್ಲಿ ಪ್ರತಿಯೊಂದೂ ತನ್ನ ತನ್ನ ಭಾಗದ ಕಾರ್ಯವನ್ನು ತನ್ನ ಸಮಯದಲ್ಲೇ ನೇರವಾಗಿ ನೆರವೇರಿಸಿ ಕೊಡುತ್ತದೆ. ಈ ಕಾರಣದಿಂದ ಫಲಿತಾಂಶದಲ್ಲಿ ಯಾವುದೇ ಏರುಪೇರೂ ಆಗದು ಎಂದು ಸಮನ್ವಯ ಮಾಡಲು ಅವಕಾಶವಿದೆ.

---

1. ತಪೋ ವಿದ್ಯಾ ಚ ವಿಪ್ರಸ್ಯ ನಿಶ್ರೇಯಸಕರಾವುಭೌ ।
ತಪಸಾ ಕಲ್ಮಷಂ ಹನ್ತಿ ವಿದ್ಯಯಾಽಮೃತಮಶ್ನುತೇ॥ ಮನು. ೧೧. ೧೦೪.

### ವಿಷಮ ಸಮುಚ್ಚಯವಾದದ ಖಂಡನೆ (ಪರ ಪಕ್ಷ ಖಂಡನೆ)

ಹೀಗಿರುವಾಗ ಇಲ್ಲಿ ಮಾತ್ರ ಬೇರೆ ಅಡ್ಡದಾರಿ ಹಿಡಿದು ಹೋಗುವುದು ಅಂದರೆ ನಾವು ಈಗ ಮಾಡುವ ಕರ್ಮವು ಯಾವಾಗಲೋ ಮುಖ್ಯಫಲಕಾಲದಲ್ಲಿ ಅದೃಷ್ಟ ರೂಪದಲ್ಲಿ ಒದಗಿ ಬಂದು ಜ್ಞಾನದ ಫಲಕ್ಕೆ ತಾನೂ ಕಾರಣವಾಗುತ್ತದೆ ಎಂಬ ಪಕ್ಷವನ್ನು ಅನುಸರಿಸುವುದು ಮೀಮಾಂಸೆ ಮತ್ತು ವೇದಾಂತದ ನ್ಯಾಯ ನಿಯಮಗಳನ್ನು ಚೆನ್ನಾಗಿ ತಿಳಿದವರಿಗೆ ಒಪ್ಪಿಗೆಯಾಗದ ವಿಷಯ.

## ಈಶಾವಾಸ್ಯ ಪ್ರಕಾಶಿಕೆ

**(ಭಾ) ಸಂಗ್ರಹೇಣ** – ಸಾಮಾನ್ಯವಾಗಿ.

### ಮತ್ತೆ ಕರ್ಮಯೋಗವನ್ನು ವಿವರಿಸಲು ಏನು ಕಾರಣ?

ಈ ಹಿಂದೆಯೇ ಕುರ್ವನ್ನೇವೇಹ ಎಂಬ ಮಂತ್ರದಲ್ಲಿ ಕರ್ಮಯೋಗವು ಪರಿಶುದ್ಧಾತ್ಮ ಸ್ವರೂಪದರ್ಶನವನ್ನು ಉಂಟುಮಾಡಿಸಿ ಅದರ ಮೂಲಕ ಪರಮಾತ್ಮ ದರ್ಶನರೂಪವಾದ ಪರಭಕ್ತಿಯನ್ನು ಉಂಟುಮಾಡುವುದು ಎಂದು ತಿಳಿಸಿ ಆಗಿದೆ.

ಈಗ ಇಲ್ಲಿ ಜ್ಞಾನಿಯು ತನಗೆ ಭಕ್ತಿಯೋಗ ಉಂಟಾದ ಮೇಲೂ ನಿತ್ಯನೈಮಿತ್ತಿಕ ಕರ್ಮಗಳನ್ನು ಅವುಗಳ ಕರ್ಮಯೋಗವೇಷವನ್ನು ಕಳಚಿ ಹಾಕಿ ತಪ್ಪದೆ ಆಯಾ ಕಾಲಗಳಲ್ಲಿ ಆಚರಿಸಬೇಕೆಂದೂ, ಅವುಗಳಿಂದ ಪಾಪಪರಿಹಾರವಾಗಿ ಆ ಮೂಲಕ ಭಕ್ತಿಯೋಗವು ಬೆಳೆದು ಪೂರ್ಣವಾಗುವುದೆಂದೂ ಹೇಳಲಾಗುತ್ತದೆ. ಇದಕ್ಕೆ ಕಾರಣ ಇಲ್ಲಿ ಜೊತೆ ಜೊತೆಗೆ ಎಂಬ ಅರ್ಥದ ಸಹ ಎಂಬ ಪದ ಇದೆ. ಇದರಲ್ಲಿ ಸ್ವಾರಸ್ಯವೂ ಇದೆ, ಎಂಬುದು. ಹೀಗಿಟ್ಟುಕೊಂಡರೆ ಇಲ್ಲಿ ಪುನರುಕ್ತಿಯೂ ಆಗಲಾರದು.[1]

**ಅವಿದ್ಯಾ** – ಅಂಗವಾದ ಕರ್ಮ.

**(ಭಾ) ಪ್ರಾಕ್ತನಕರ್ಮ** – ಪುಣ್ಯಪಾಪರೂಪವಾದುದು.

**(ಭಾ) ಅನುದರ್ಶನ** – ಉಪಾಸನೆ.

### ಬಿಡುಗಡೆಯ ಎರಡು ಅಂಶಗಳು

**ಅಮೃತಂ ಅಶ್ನುತೇ** – ಬಿಡುಗಡೆ ಹೊಂದುತ್ತಾನೆ.

**ತೀರ್ತ್ವಾ** – ದಾಟಿ ಎಂದರೆ, ಮುಕ್ತಿಸಾಧನಗಳಿಗೆ ಇರುವ ಅಡಚಣೆಗಳನ್ನು ಬಿಡಿಸಿಕೊಂಡು ಎಂದೂ, ಮುಂದೆ 'ಅಮೃತಂ, ಅಶ್ನುತೇ' ಎನ್ನುವುದಕ್ಕೆ ಪರಮಾತ್ಮನನ್ನು ಪಡೆಯಲು ಅಡಚಣೆಯಾಗಿರುವ ಎಲ್ಲ ಪಾಪಗಳಿಂದಲೂ ಬಿಡಿಸಿಕೊಂಡು ಎಂದೂ ಅರ್ಥವ್ಯತ್ಯಾಸವಿದೆ[2]

---

1. ಅಂಗಾಂಗಿಭಾವ ನಿರೂಪಿಸಲು ಪೂರ್ವಭಾವಿಯಾಗಿ ಖಂಡಿಸಬೇಕಾದ ಇತರರ ಅಭಿಪ್ರಾಯಗಳ ಬಗ್ಗೆ ಇಲ್ಲಿ ಏನೊಂದೂ ಬರೆದಿಲ್ಲ.
2. ಅರ್ಥವ್ಯತ್ಯಾಸವಿರುವುದರಿಂದ ಪುನರುಕ್ತಿಯಾಗಲಾರದು ಎಂದು ಅಭಿಪ್ರಾಯ. ಇಲ್ಲಿ ವೇದಾಂತಾಚಾರ್ಯರು ತಿಳಿಸಿರುವ ಮೊದಲನೆಯ ಅನ್ವಯಾರ್ಥವನ್ನು ಇವರು ಸ್ವೀಕರಿಸಿದಂತೆ ತೋರುವುದಿಲ್ಲ.

### ಇಯಾಜ ವ್ಯಾಖ್ಯಾನ

**ಜ್ಞಾನವ್ಯಪಾಶ್ರಯಃ** – ಶಾಸ್ತ್ರವಾಕ್ಯಗಳನ್ನು ಕಿವಿಯಾರ ಕೇಳಿ ಪರಮಾತ್ಮನ ಬಗ್ಗೆ ಸ್ವಲ್ಪ ತಿಳುವಳಿಕೆ ಇರುವ.

**ಸಃ** – ಆ ಜನಕನೂ.

**ಬ್ರಹ್ಮವಿದ್ಯಾಂ** – ನಿದಿಧ್ಯಾಸನರೂಪವಾದ ಉಪಾಸನೆಯನ್ನು.

**ಅಧಿಷ್ಠಾಯ** – ಫಲವಾಗಿ ಪಡೆಯಬೇಕೆಂದು ನಿರ್ಧರಿಸಿ, ಭಕ್ತಿಯೋಗದ ಉತ್ಪತ್ತಿಯನ್ನಪೇಕ್ಷಿಸಿ ಎಂದರ್ಥ.

**ಮೃತ್ಯುಂ** – ಭಕ್ತಿ ಹುಟ್ಟಲು ಅಡಚಣೆ ಮಾಡುವ ಹಳೆಯ ಪುಣ್ಯಪಾಪಗಳನ್ನು.

**ಅವಿದ್ಯಯಾ** – ಫಲದ ಅಪೇಕ್ಷೆ ಇಲ್ಲದೆ ಉಪಾಸನೆಗೆ ಅಂಗವಾಗಿ ಮಾಡುವ ಶಾಸ್ತ್ರೀಯ ಕೆಲಸಗಳಿಂದ.

**ತರ್ತುಂ** – ನಾಶಮಾಡಲು.

**ಬಹೂನ್, ಯಜ್ಞಾನ್** – ಜ್ಯೋತಿಷ್ಟೋಮ ಮುಂತಾದುವುಗಳನ್ನು (ಯಾಗಗಳನ್ನು).

**ಇಯಾಜ** – ಮಾಡಿದನು (ಯಜಿಸಿದನು).

'ಅಡಿಗೆ ಬೇಯಿಸಿದನು' ಎನ್ನುವಂತೆ ಇಲ್ಲೂ ಯಾಗಗಳನ್ನು ಯಜಿಸಿದನು ಎಂಬ ಪ್ರಯೋಗ ಆಗಿದೆ. ಅಡಿಗೆ ಮಾಡಿದನು ಎಂದು ಅರ್ಥೈಸುವಂತೆ ಯಾಗ ಮಾಡಿದನು ಎಂದು ಅರ್ಥೈಸಬೇಕಷ್ಟೆ.

### ಕಷಾಯಪಕ್ತಿ ವ್ಯಾಖ್ಯಾನ

ಹಾಗೂ ಹೇಳಲಾಗಿದೆಯಲ್ಲವೆ? – "ದೋಷಗಳನ್ನು ಬೇಯಿಸುವುವು ಕರ್ಮಗಳು, ಜ್ಞಾನವೇ ಉತ್ತಮವಾದ ಗುರಿ ತಲುಪಿಸುವ ಸಲಕರಣೆ"[1] ಎಂದು.

**ಕರ್ಮಾಣಿ** – ಪೂರ್ಣ ಭಗವದಾರಾಧನ ರೂಪವಾಗಿದ್ದು, ಸ್ವರ್ಗಾದಿಫಲಗಳ ಆಸೆಬಿಟ್ಟು ಮಾಡುವ ಶಾಸ್ತ್ರೀಯ ಕೆಲಸಗಳು.

**ಕಷಾಯಸ್ಯ, ಪಕ್ತಿಃ** – ಎರಡು ವಿಧವಾದ ಪಾಪ ಹಾಗೂ ಅದರಿಂದ ಉಂಟಾಗುವ ಕಾಮಕ್ರೋಧಾದಿಗಳಿಗೆ, ನಾಶವನ್ನು ಮಾಡುವ ಕಾರಣಗಳು.

**ಜ್ಞಾನಂ, ತು, ಪರಮಾ ಗತಿಃ** – ಜ್ಞಾನವೂ ಉತ್ತಮಮಾರ್ಗ ಹಾಗೂ ಗುರಿಯನ್ನು ತಲುಪಿಸುವ ಸಲಕರಣೆ.

"ಪಕ್ತಿ" "ಗತಿ" ಎಂಬ ಈ ಎರಡು ಜಾಗದಲ್ಲೂ ಉಪಕರಣಗಳನ್ನೇ ಫಲಿತಾಂಶ ಎಂಬ ಅಭಿಪ್ರಾಯದಿಂದ ಫಲವನ್ನಾಗಿಯೇ ಉಪಚಾರಕ್ಕಾಗಿ ಹೇಳಲಾಗಿದೆ. "ದೋಷವು ಕರ್ಮಗಳಿಂದ ಬೆಂದರೆ ನಂತರ ಜ್ಞಾನವು ಮುಂದು ವರೆಯುತ್ತದೆ."[2] ಮುಂತಾದ ಸಹಾಯಕ ವಿವರಣೆಗಳು ಇಲ್ಲಿ ಹೊಂದಿಕೆಯಾಗಿವೆ ಎಂಬುದನ್ನೂ ಗಮನಿಸಬೇಕು.

## ಪದಾರ್ಥ ದೀಪಿಕೆ

**೬೩** – (ಈಶಾವಾಸ್ಯ ಪ್ರಕಾಶಿಕೆಯಲ್ಲಿರುವಂತೆಯೇ ಪ್ರತಿಪದಾರ್ಥ ಇದೆ.)

---

1. ಕಷಾಯಪಕ್ತಿಃ ಕರ್ಮಾಣಿ ಜ್ಞಾನಂ ತು ಪರಮಾ ಗತಿಃ. ಭಾರತ.
2. ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ. ಭಾರತ.

# ಸುಬೋಧಿನೀ

## ಪದವಿವರಣೆ

**ಸಹ** – ಜೊತೆಯಾಗಿಯೇ, ಜೊತೆಯಾಗುವುದು ಎಂದರೆ ಇಲ್ಲಿ ಒಂದೇ ಫಲಿತಾಂಶ ಪಡೆದಿರುವಿಕೆ, ಒಂದೇ ಫಲಿತಾಂಶ ಪಡೆಯುವ ಎರಡರಲ್ಲಿ ಒಂದು ಅಂಗವೂ ಮತ್ತೊಂದು ಅಂಗಿಯೂ ಆಗಿರುತ್ತದೆಯಷ್ಟೆ.[1]

**ಅವಿದ್ಯಯಾ** – ಕರ್ಮದಿಂದ.

**ಮೃತ್ಯುಂ** – ವಿದ್ಯೆಗೆ ವಿರೋಧಿಯಾದ ಪಾಪಗಳನ್ನು.

**ವಿದ್ಯಯಾ** – ಲಭಿಸಿದ ಉಪಾಸನೆಯಿಂದ.

**ಅಮೃತಂ** – ಬಿಡುಗಡೆಯನ್ನು.

# ಶ್ರೀರಂಗಾಚಾರ್ಯರ ವ್ಯಾಖ್ಯಾನ

## ಮಂತ್ರದ ಸ್ಥಾನಪಲ್ಲಟ

ಈ ಮಂತ್ರವನ್ನು ಮಾಧ್ಯಂದಿನರು ಹದಿನಾಲ್ಕನೆಯ ಮಂತ್ರವನ್ನಾಗಿ ಪಠಿಸುತ್ತಾರೆ.

## ಹನ್ನೊಂದು ಮಂತ್ರಗಳ ಸಾರಾರ್ಥ

೧. ವಿದ್ಯೆಯ ಮುಖ್ಯಲಕ್ಷಣವಾದ ಉತ್ತಮ ಹಾಗೂ ಇತರ ತತ್ತ್ವಗಳ ವಿವೇಚನಾ ಪೂರ್ವಕವಾದ ಜ್ಞಾನದ, ಸಂಕ್ಷೇಪವಿದೆ.

೨. ವಿದ್ಯೆಗೆ ಅಂಗವಾದ ಕರ್ತವ್ಯನಿಷ್ಠೆಯ ಅವಶ್ಯಕತೆಯನ್ನು ತಿಳಿಸಲಾಯಿತು.

೩. ತತ್ತ್ವಜ್ಞಾನ, ಕರ್ತವ್ಯ ನಿಷ್ಠೆ, ಎರಡೂ ಇಲ್ಲದವರಿಗೆ ಆಗುವ ಹಾನಿಯನ್ನು ತಪ್ಪಿಸಲು ಅಂತಹ ನಿಷ್ಠೆಯ ಅವಶ್ಯಕತೆಯನ್ನು ದೃಢಪಡಿಸಲು ಸೂಚನೆಯನ್ನು ಕೊಡಲಾಗಿದೆ.

೪–೮. ಮೊದಲ ಮಂತ್ರದಲ್ಲಿ ಸಂಕ್ಷೇಪವಾಗಿ ತಿಳಿಸಿದ ತತ್ತ್ವವಿಜ್ಞಾನದ ಸ್ವಲ್ಪ ವಿಸ್ತೃತ ವಿವರಣೆಯೂ ತತ್ತ್ವ ನಿಷ್ಠೆಯ ಕಾಲದಲ್ಲಾಗುವ ಫಲಿತಾಂಶವಾದ ಮೋಹ ಶೋಕಗಳ ವಿನಾಶವೂ ತಿಳಿಸಲ್ಪಟ್ಟಿವೆ.

೯–೧೦. ಎರಡನೆಯ ಮಂತ್ರದಲ್ಲಿ ಸಂಕ್ಷೇಪವಾಗಿ ತಿಳಿಸಿದ ಕರ್ಮಾನುಷ್ಠಾನದ ವಿಶೇಷ ರೀತಿಯನ್ನು ಸ್ಪಷ್ಟಗೊಳಿಸಲು ಸಹಾಯಕವಾಗಿ ಕರ್ಮ–ಜ್ಞಾನಗಳ ಪ್ರತ್ಯೇಕ ಆಚರಣೆಯಿಂದ ನಮಗೆ ಬೇಡವಾದ ಪ್ರತ್ಯೇಕ ಫಲಗಳು ಬರುವ ಸಂಭವವಿದೆ ಎಂಬ ವಿಚಾರವನ್ನು ತಿಳಿಸಲಾಗಿದೆ.

೧೧. ಕರ್ಮ – ಜ್ಞಾನಗಳ ಪ್ರತ್ಯೇಕ ಫಲಗಳ ವಿವೇಚನೆ, ಹಾಗೂ ಪ್ರತ್ಯೇಕಫಲದೃಷ್ಟಿಯನ್ನು ಬಿಟ್ಟು ಫಲಗಳ ಸಹಭಾವ ದೃಷ್ಟಿಯನ್ನೂ ಅದಕ್ಕೆ ತಕ್ಕಂತೆ ಸಾಧನಗಳಾದ ಕರ್ಮ-ಜ್ಞಾನಗಳ ಸಹ ಭಾವವನ್ನೂ ದೃಢಪಡಿಸಿಕೊಳ್ಳುವ ವಿಚಾರವನ್ನೂ ಸ್ಪಷ್ಟಪಡಿಸಲಾಗಿದೆ.

---

1. ಅಂಗಿ ಎಂದರೆ ಪ್ರಧಾನವಾದುದು. ವಿದ್ಯೆಪ್ರಧಾನ, ಅವಿದ್ಯೆಯು ಅದರ ಅಂಗ.

### ಪದ ವಿವರಣೆ

**ಯಃ** – ಮೋಕ್ಷಾಭಿಲಾಷಿಯಾದ ಯಾವನು.

**ಅವಿದ್ಯಾಂ** – ಕರ್ಮಯೋಗವನ್ನು.
[ವಿದ್ಯೆಯು ಹೇಗೆ ಅದೃಷ್ಟರೂಪವಾದ ಫಲಿತಾಂಶಕ್ಕೆ ಸಹಾಯಕ ಸಾಧನವಾಗುವುದೋ, ಹಾಗೆಯೇ ಕರ್ಮಯೋಗವೂ ಸಹಾಯಕ ಸಾಧನ. ಹೀಗೆ ವಿದ್ಯೆಯ ಹೋಲಿಕೆ ಇದಕ್ಕೂ ಇದೆಯಾಗಿ ಇದನ್ನು ಅವಿದ್ಯೆ ಎಂದು ಕರೆಯಬಹುದಾಗಿದೆ. 'ಅ' ಎಂದರೆ ಇಲ್ಲಿ ಹೋಲಿಕೆ ಎಂದರ್ಥ.]

**ವೇದ** – ತಿಳಿಯುತ್ತಾನೋ, ತಿಳಿವಳಿಕೆಯು ಆಚರಣೆಯ ರೂಪದಲ್ಲಿ ಫಲಿಸಬೇಕಾದುದು ಅತ್ಯವಶ್ಯಕವಾದುದರಿಂದ 'ಆಚರಿಸುತ್ತಾನೋ' ಎಂದರ್ಥ.

**ಸಃ** – ಅವನು. ಈ ಪದವನ್ನು ಇಲ್ಲಿ ಹೆಚ್ಚಿಗೆ ಸೇರಿಸಿಕೊಳ್ಳಬೇಕು.

**ಅಮೃತಂ** – ಪರಮಾತ್ಮನನ್ನು.

ಈ ಮಂತ್ರದಲ್ಲಿ ಅವಿದ್ಯೆ, ಮೃತ್ಯು ಎಂಬ ಶಬ್ದಗಳಿಗೆ ಭಗವದ್ರಾಮಾನುಜರು ಶ್ರೀಭಾಷ್ಯದ[1] ಜಿಜ್ಞಾಸಾಧಿಕರಣದ ಲಘು ಸಿದ್ಧಾಂತದಲ್ಲಿ ತಿಳಿಸಿರುವ ವಿವರಣೆಯನ್ನು ಗಮನಿಸಬೇಕು.

## ಭಾವಾರ್ಥ

ಅವಿದ್ಯೆಯ ಆಚರಣೆಗೆ ಮೃತ್ಯುವನ್ನು ಗೆಲ್ಲುವುದೇ ಫಲ. ವಿದ್ಯೆಯ ಆಚರಣೆಗೆ ಅಮೃತವನ್ನು ಪಡೆಯುವುದೇ ಫಲ. ಮೃತ್ಯುವನ್ನು ಗೆಲ್ಲದೆ ಅಮೃತಲಾಭವಾಗದ ಕಾರಣ ಅಮೃತಲಾಭಕ್ಕೆ ಸಾಧನವಾದ ವಿದ್ಯೆಗೆ ಮೃತ್ಯುವನ್ನು ಗೆಲ್ಲುವ ಸಾಧನವಾದ ಅವಿದ್ಯೆಯನ್ನೂ ಜೊತೆಗೂಡಿಸಿ ಆಚರಿಸಬೇಕು. ಮೃತ್ಯುವನ್ನು ಗೆಲ್ಲದೆ ವಿದ್ಯೆಯೂ ಸಿಗದು. ವಿದ್ಯೆಯಿಲ್ಲದೆ ಅಮೃತಲಾಭವಾಗದು. ಹೀಗೆ ಅವಿದ್ಯೆಯೂ ಅಮೃತಲಾಭಕ್ಕೆ ಒಂದು ಸಹಾಯಕಕಾರಣ.

### ಕರ್ಮದಿಂದ ಪಿತೃಲೋಕ, ವಿದ್ಯೆಯಿಂದ ದೇವಲೋಕ

ವಿದ್ಯೆಯಿಂದ ದೇವಲೋಕವನ್ನು ಪಡೆಯಬಹುದೆಂದೂ, ಕರ್ಮದಿಂದ ಪಿತೃಲೋಕವನ್ನು ಪಡೆದು ಮತ್ತೆ ಸಂಸಾರವನ್ನೇ ಪಡೆಯಬೇಕಾಗುವುದೆಂದೂ, ವೇದವಚನಗಳು ತಿಳಿಸುತ್ತವೆ. ಈ ವಚನಗಳಲ್ಲಿರುವ ಕರ್ಮಶಬ್ದಕ್ಕೆ ವಿದ್ಯೆಗೆ ಅಂಗವಲ್ಲದ ಬರಿಯ ಕೆಲಸಗಳೆಂದಷ್ಟೆ ಅರ್ಥ. ದೇವಲೋಕವೆಂದರೆ ದೇವದೇವನಾದ ಪರಮಾತ್ಮನ ಲೋಕವೆಂದೇ ಅರ್ಥ.

### ಕರ್ತವ್ಯನಿಷ್ಠರಿಗೆ ಮಾತ್ರ ಬ್ರಹ್ಮವಿದ್ಯೆಯ ಸಿದ್ಧಿ

ಬೃಹದಾರಣ್ಯಕ ಶ್ವೇತಾಶ್ವತರ ಮುಂತಾದ ಉಪನಿಷತ್ತುಗಳಲ್ಲಿ ಗೃಹಸ್ಥಾಶ್ರಮವನ್ನು ತ್ಯಾಗಮಾಡಿದ ಸನ್ಯಾಸಿಗಳಿಗೆ ಬ್ರಹ್ಮವಿದ್ಯೆಯನ್ನು ಉಪದೇಶಮಾಡಿರುವ ಸಂದರ್ಭಗಳಿವೆ ನಿಜ. ಆದರೆ ಅಲ್ಲಲ್ಲೇ "ಕುಟುಂಬದಲ್ಲಿ ಶುಚಿಯಾದ

---

1. ಶ್ರೀಭಾಷ್ಯದಲ್ಲಿ ಹಾಗೂ ಅದರ ವ್ಯಾಖ್ಯಾನವಾದ ಶ್ರುತಪ್ರಕಾಶಿಕೆಯಲ್ಲಿರುವ ಈ ಮಂತ್ರದ ವಿವರಣೆಗಳನ್ನು ಮುಂದೆ ಗ್ರಂಥದಲ್ಲೇ ಕೊಡಲಾಗುವುದು.

ಸ್ಥಳದಲ್ಲಿ "ನಿಯಮದಿಂದಿರುವವರಿಗೆ"[1], ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆಂದೂ, 'ಮಗನಿಗೂ ಶಿಷ್ಯನಿಗೂ ಅಲ್ಲದೆ ಬೇರೆಯವರಿಗೆ ಉಪದೇಶಿಸಕೂಡದು"[2] ಎಂದೂ, ವಚನಗಳು ಸ್ಪಷ್ಟವಾಗಿವೆ. 'ಗೃಹಸ್ಥಕರ್ಮಗಳನ್ನೇ ಆಯುಸ್ಸುಪೂರ್ತಿ ಮಾಡಬೇಕೆಂದೂ, ಹೀಗಿದ್ದರೇನೇ ಮುಕ್ತಿಯೂ ಪರಮಾತ್ಮ ಪ್ರಾಪ್ತಿಯೂ ಆಗುವುದೆಂದೂ,[3] ನಿರ್ಣಯಿಸಲಾಗಿದೆ. ಇದೆಲ್ಲವನ್ನೂ ಗಮನಿಸಿಯೇ ವ್ಯಾಸರು ಬ್ರಹ್ಮಸೂತ್ರದಲ್ಲಿ ಎಲ್ಲ 'ಆಶ್ರಮ'ದವರಿಗೂ ವಿದ್ಯೆಯ ಉಪದೇಶವುಂಟು. ಪ್ರತಿ ಆಶ್ರಮದವರಿಗೂ ಅವರವರಿಗೆ ತಕ್ಕ ಕರ್ತವ್ಯಕರ್ಮಗಳಿವೆ. ಅವನ್ನು ಅವರು ವಿದ್ಯೆಗೆ ಅಂಗವಾಗಿ ಆಚರಿಸಲೇಬೇಕು. ಗೃಹಸ್ಥರು ಯಜ್ಞಯಾಗಾದಿಗಳನ್ನು ಅಂಗವಾಗಿ ಆಚರಿಸುವಂತೆ ಸನ್ಯಾಸಿಗಳು ಜಪತಪಾದಿಗಳನ್ನು ಅಂಗವಾಗಿ ಆಚರಿಸಲೇಬೇಕು. ಯಜ್ಞಯಾಗಾದಿ ಕೆಲವು ಕರ್ಮಗಳಷ್ಟೆ ಸನ್ಯಾಸಿಗಳಿಗಿಲ್ಲ. ವಿಧಾಯಕವಾದ ವಿಹಿತವಾದ ಕರ್ಮವನ್ನು ಚೆನ್ನಾಗಿ ಆಚರಿಸುವವನೇ ಸರಿಯಾದ ವಿದ್ಯಾವಂತ. ವಿದ್ಯಾಂಗವಾದ ಕರ್ಮಗಳಿಂದ ಯಾವ ಉಪಾಸಕನಿಗೂ ವಿನಾಯಿತಿಯಿಲ್ಲ. ವಿದ್ಯೆಗೂ ಕರ್ಮಕ್ಕೂ ಎಂದಾದರೂ ವಿರೋಧವಾದರಲ್ಲವೆ ವಿನಾಯಿತಿಯ ಅವಶ್ಯಕತೆ. ವಿದ್ಯೆಗೂ ಕರ್ಮಕ್ಕೂ ಎಂದಿಗೂ ವಿರೋಧಲೇಶವೂ ಇಲ್ಲ. ಆದುದರಿಂದ ಅವಿದ್ಯೆ ಎಂಬ ಕರ್ಮವು ವಿದ್ಯೆಗೆ ಅಗತ್ಯವಾದ ಅಂಗ ಎಂದು ಸಿದ್ಧವಾಗುತ್ತದೆ. ಈ ಬಗ್ಗೆ ವಿಷ್ಣುಪುರಾಣ, ಗೀತೆ, ಮನುಸ್ಮೃತಿ ಮುಂತಾದ ಗ್ರಂಥಗಳ ಅನೇಕ ವಚನಗಳು ಪ್ರಮಾಣಾಧಾರಗಳಾಗಿವೆ.

## ಶ್ರೀಭಾಷ್ಯದಲ್ಲಿರುವ ವಿವರಣೆ

### ಭಕ್ತಿ ಎಂದರೇನು ?

ಪರಮಾತ್ಮನು ನಮ್ಮ ಕಣ್ಣಿನಲ್ಲೇ ಸದಾ ಕಟ್ಟಿರುವಂತೆ ಆಗಬೇಕು. ಇದೇ ಇಹಲೋಕದಲ್ಲಾಗುವ ಪರಮಾತ್ಮದರ್ಶನ. ಇದು ಪರಮಾತ್ಮನ ಬಗ್ಗೆ ನಾವು ಮಾಡುವ ಧ್ಯಾನದ ಕೊನೆಯ ಹಂತ. ಎಡೆಬಿಡದೆ ನೆನೆಸಿಕೊಳ್ಳುವುದೇ ಧ್ಯಾನ. ಈ ನೆನಪು ಪ್ರೀತಿ–ಆದರ–ಗೌರವಗಳಿಂದ ಕೂಡಿರಬೇಕಾದುದು ಅವಶ್ಯ. ಹೀಗೆ ಪರಮಾತ್ಮನ ಬಗ್ಗೆ ನಮ್ಮ ಪ್ರೀತಿರೂಪವಾದ ಜ್ಞಾನವು ಕೊನೆಯ ಹಂತ ಮುಟ್ಟಿದರೆ ಅದನ್ನೇ ಭಕ್ತಿ ಎನ್ನಲಾಗುವುದು. ಪರಲೋಕದಲ್ಲಿ ಪರಮಾತ್ಮನನ್ನು ಪಡೆದು ಅವನ ಸೇವೆ ಮಾಡುವ ಒಂದೇ ಉದ್ದೇಶ್ಯದಿಂದ ಭಕ್ತಿಯನ್ನು ಮಾಡಿದರೆ ಆದು ಅನನ್ಯಭಕ್ತಿ ಎನಿಸುತ್ತದೆ. ಇದನ್ನು ನಾವು ಈ ದೇಹವನ್ನು ಬಿಡುವವರೆಗೂ ಆಚರಿಸುತ್ತಿರಬೇಕು.

### ಭಕ್ತಿಗೆ ಸಹಾಯಕಗಳು

ಈ ಭಕ್ತಿಗೆ ಸಹಾಯಕವಾಗಿ ವರ್ಣಾಶ್ರಮಗಳಿಗೆ ತಕ್ಕ ಕರ್ಮಗಳನ್ನು ಬದುಕಿರುವವರೆಗೂ ಆಚರಿಸಲೇಬೇಕು. ಬ್ರಹ್ಮಸೂತ್ರಕಾರರಾದ ವ್ಯಾಸಮಹರ್ಷಿಗಳೂ ವಾಕ್ಯಕಾರರಾದ ಬ್ರಹ್ಮನಂದಿಮುನಿಗಳೂ ಭಾಷ್ಯಕಾರರಾದ ದ್ರಮಿಡಾಚಾರ್ಯರೂ ಈ ವಿಷಯವನ್ನು ಹೀಗೆ ಸ್ಪಷ್ಟಪಡಿಸಿದಾರೆ :– 'ಶಾಂತಿ, ವಿವೇಕ, ವೈರಾಗ್ಯ, ಶ್ರದ್ಧೆ, ಅಭ್ಯಾಸಗಳನ್ನೂ, ಆತ್ಮಗುಣಗಳನ್ನೂ ಬೆಳೆಸಿಕೊಂಡಿರುವ ನಿಯಮಶೀಲನಾದವನಿಗೆ ಪರಮಾತ್ಮದರ್ಶನಪರ್ಯಂತವಾದ ಭಕ್ತಿ ಹುಟ್ಟಬೇಕಾದರೆ, ಮೊದಲಿನಿಂದಲೂ ಕರ್ಮಾನುಷ್ಠಾನ ಅತ್ಯವಶ್ಯಕ' ಎಂದು. ಈ ವಿಷಯದಲ್ಲಿ 'ವಿದ್ಯಾಂ ಚಾವಿದ್ಯಾಂ ಚ' ಎಂದು ಮೊದಲಾಗುವ ವೇದವಚನವೂ ಆಧಾರವಾಗಿದೆ.

---

1. ಕುಟುಂಬೆ ಶುಚೌ ದೇಶೇ...... ......ನಚಪುನರಾವರ್ತತೇ. ಛಾಂ. ೮. ೧೫. ೧.
2. ನಾಪ್ರಶಾಂತಾಯ ದಾತವ್ಯಂ ನಾಪುತ್ರಾಯಾಶಿಷ್ಯಾಯ ವಾ ಪುನಃ. ಶ್ವೇ. ೬. ೨೨.
3. ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ. ೩. ೪. ೪೭.

### ಪದವಿವರಣೆ

**ಅವಿದ್ಯಯಾ** – ಕರ್ಮದಿಂದ, ಇಲ್ಲಿ ಅವಿದ್ಯೆ ಎಂದರೆ ವರ್ಣಾಶ್ರಮಗಳಿಗೆ ಉಚಿತವಾಗಿ ಶಾಸ್ತ್ರವು ವಿಧಿಸಿರುವ ಕರ್ಮ.

**ಮೃತ್ಯುಂ** – ಜ್ಞಾನದ ಉತ್ಪತ್ತಿಗೆ ಅಡಚಣೆಯಾಗಿರುವ ಹಳೆಯ ಪುಣ್ಯ–ಪಾಪಗಳನ್ನು.

**ತೀರ್ತ್ವಾ** – ಹೋಗಲಾಡಿಸಿ.

**ವಿದ್ಯಯಾ** – (ಉಪಾಸನಾರೂಪವಾದ) ಜ್ಞಾನದಿಂದ.

**ಅಮೃತಂ** – ಪರಮಾತ್ಮನನ್ನು.

**ಅಶ್ನುತೇ** – ಪೂರ್ಣವಾಗಿ ಪಡೆಯುತ್ತಾನೆ.

### ಕರ್ಮವೇ ಅವಿದ್ಯೆ, ಪುಣ್ಯ-ಪಾಪಗಳೇ ಮೃತ್ಯು.

ಇಲ್ಲಿ ಮೃತ್ಯುವನ್ನು ದಾಟಿಹೋಗಲು ಸಾಧನವಾದ ಅವಿದ್ಯೆಯು ವಿದ್ಯೆಗಿಂತ ಭಿನ್ನವಾದ ಹಾಗೂ ಅವಶ್ಯ ಆಚರಿಸಬೇಕಾದ ಕರ್ಮ. ಈ ಬಗ್ಗೆ 'ಇಯಾಜ......ತರ್ತುಂ ಮೃತ್ಯುಮವಿದ್ಯಯಾ'[1] ಎಂಬ ಐತಿಹಾಸಿಕವಚನ ಗಮನಾರ್ಹವಾಗಿದೆ. ಈ ವಚನದಲ್ಲಿ ಮೃತ್ಯು ಎಂದರೆ ಜ್ಞಾನಕ್ಕೆ ವಿರೋಧಿಗಳಾದ ಪುಣ್ಯ ಮತ್ತು ಪಾಪಗಳು. ಅನಿಷ್ಟ ಫಲವನ್ನು ಕೊಡುವುದರಿಂದ ಬ್ರಹ್ಮಜ್ಞಾನಕ್ಕೆ ಪಾಪವು ವಿರೋಧಿಯಾಗುವಂತೆ ಪುಣ್ಯವೂ ವಿರೋಧಿಯೇ. ಆದುದರಿಂದ ಎರಡನ್ನೂ ಒಂದು ದೃಷ್ಟಿಯಲ್ಲಿ 'ಪಾಪ' ಎಂದೇ ಹೇಳಬಹುದಲ್ಲವೇ. ಈ ಪಾಪವೇ ಮೃತ್ಯು.

### ಧರ್ಮ ಒಂದರಿಂದಲೇ ಪಾಪದ ಪರಿಹಾರ

ಪುಣ್ಯ–ಪಾಪಗಳೆರಡನ್ನೂ ಪಾಪ ಎಂದು ತಿಳಿಸಿ ಆಯಿತು. ಇವು ರಜೋಗುಣ, ತಮೋಗುಣಗಳನ್ನು ಬೆಳೆಸಿ ಅವುಗಳ ಮೂಲಕ ಜ್ಞಾನಕ್ಕೆ ವಿರೋಧವನ್ನು ಒಡ್ಡುವುವು. ಸತ್ತ್ವಗುಣದಿಂದ ಜ್ಞಾನವು ಹುಟ್ಟುವುದು. ಜ್ಞಾನವು ಯಾವ ವಿರೋಧವೂ ಇಲ್ಲದೆ ಹುಟ್ಟಿ ಬೆಳೆಯಬೇಕಾದರೆ ಆ ಪಾಪ ಕರ್ಮಗಳನ್ನು ಹೊಡೆದುರುಳಿಸಲೇ ಬೇಕು. ಇದಕ್ಕಾಗಿ ಪ್ರಬಲವಾದ ಸಾತ್ತ್ವಿಕ ಕರ್ಮಗಳ ಆಚರಣೆ ಮಾಡಲೇಬೇಕು. ಫಲದ ಬಗ್ಗೆ ಆಸೆಯಿಟ್ಟು ಕೊಳ್ಳದೆ ಮಾಡುವ ಕರ್ಮವೇ ಸಾತ್ತ್ವಿಕ ಕರ್ಮ. ಇದನ್ನೇ 'ಧರ್ಮ' ಎಂದು ಕರೆಯಲಾಗಿದೆ. 'ಧರ್ಮ ಒಂದರಿಂದಲೇ ಪಾಪದ ಪರಿಹಾರ'[2] ಎಂಬುದು ವೇದದಲ್ಲಿ ಘೋಷಿತವಾಗಿರುವ ನಿತ್ಯ–ಸತ್ಯ ವಚನ.

ಹೀಗೆ ಪರಮಾತ್ಮನನ್ನು ಪಡೆಯಬೇಕಾದರೆ ಭಕ್ತಿರೂಪವಾದ ಜ್ಞಾನ ಅವಶ್ಯಕ. ಅದಕ್ಕೆ ಕರ್ಮವಂತೂ ಅತ್ಯವಶ್ಯಕ ಎಂದು ಸಿದ್ಧವಾಯಿತು.

## ಶ್ರುತಪ್ರಕಾಶಿಕೆ

### ಜ್ಞಾನಕ್ಕೆ ಕರ್ಮದ ಆವಶ್ಯಕತೆ ಏಕೆ?

ಸಾಕ್ಷಾತ್ಕಾರದ ಮಟ್ಟಕ್ಕೆ ಏರುವ ಜ್ಞಾನವೇ ಮುಕ್ತಿಗೆ 'ಉಪಾಯ'. ಮುಕ್ತಿಯೆಂದರೆ ಈ ಪ್ರಕೃತಿಯಿಂದ ಬಿಡುಗಡೆಯಷ್ಟೇ ಅಲ್ಲದೆ ಪ್ರಕೃತಿಯಿಂದಾಚೆಯ ಲೋಕದಲ್ಲಾಗುವ ಪರಮಾತ್ಮನ ಅನುಭವ ಸೇವಾಭಾಗ್ಯವೂ ಆನಂದವೂ ಅರ್ಥವೆಂದು ಇಟ್ಟುಕೊಳ್ಳೋಣ. ಇದೇ 'ಉಪೇಯ'. ಉಪಾಯವೆಂದರೆ ಸಾಧನ–ಸಲಕರಣೆ. ಉಪೇಯವೆಂದರೆ ನಾವು ಪಡೆಯಬೇಕಾದ ಫಲಿತಾಂಶ-ಮುಖ್ಯಗುರಿ. ಸಾಧನಗಳ ವಿರೋಧಿಯಾದ ಕೆಲವು ಪುಣ್ಯ

---

1. ವಿ. ಪು. ೬. ೬. ೧೨.

2. ಧರ್ಮೇಣ ಪಾಪಮಪನುದತಿ ತೈ. ನಾ. ೬. ೬೩.

ಪಾಪಗಳನ್ನು ಶಾಸ್ತ್ರವಿಹಿತವಲ್ಲದ ಕರ್ಮಗಳಿಂದಾಗಲಿ ಜ್ಞಾನದಿಂದಾಗಲಿ ನಿವಾರಿಸಲು ಸಾಧ್ಯವಿಲ್ಲ. ಇವುಗಳ ನಿವಾರಣೆಗೆ ಶಾಸ್ತ್ರವಿಹಿತವಾದ, ತ್ರಿವಿಧ ತ್ಯಾಗ ಪೂರ್ವಕವಾದ, ವಿದ್ಯೆಗೆ ಅಂಗವಾಗುವಂತಹ, ಕರ್ಮಗಳೇ ಆಗಬೇಕು. ಇಂತಹ ಕರ್ಮಗಳಿಂದ ಆ ಪುಣ್ಯ-ಪಾಪಗಳು ಕಳೆದ ನಂತರವೇ ವಿದ್ಯಾರೂಪವಾದ ಜ್ಞಾನವು ಹುಟ್ಟುವುದು. ಈ ಜ್ಞಾನವು ಹುಟ್ಟಿದ ಮೇಲೆ ಗುರಿಮುಟ್ಟುವ ಮೊದಲು ಮಧ್ಯೆ ಬರುವಂತಹ ಅಡಚಣೆಗಳನ್ನು ಆ ಜ್ಞಾನವೇ ಸ್ವತಃ ನಿವಾರಿಸಿಕೊಂಡು ಫಲಿತಾಂಶದ ಕಡೆಗೆ ನಮ್ಮನ್ನು ಒಯ್ಯುತ್ತದೆ. ವಿದ್ಯೆ ಹುಟ್ಟುವ ಮೊದಲೇ ಆಗುವ ಅಡಚಣೆಗಳನ್ನು ಹುಟ್ಟದೇ ಇರುವ ವಿದ್ಯೆಯು ಹೇಗೆ ನಿವರಿಸಿಕೊಳ್ಳಲಾದೀತು. ಆದುದರಿಂದಲೇ ವಿದ್ಯಾರೂಪವಾದ ಜ್ಞಾನಕ್ಕೆ ಕರ್ಮ ಅತ್ಯವಶ್ಯಕ.

### ಜ್ಞಾನ-ವಿದ್ಯೆಗಳ ಸೂಕ್ಷ್ಮ ವ್ಯತ್ಯಾಸ

'ಇಯಾಜ' ಎಂಬ ಪುರಾಣ ವಚನದಲ್ಲಿರುವ ಜ್ಞಾನ ಮತ್ತು ವಿದ್ಯೆ ಎಂಬ ಶಬ್ದಗಳಿಗೆ ಇರುವ ಸೂಕ್ಷ್ಮವಾದ ಅರ್ಥ ವ್ಯತ್ಯಾಸವನ್ನು ಅದೇ ಪ್ರಕರಣದಲ್ಲಿ ತಿಳಿಸಲಾಗಿದೆ. ಪುಸ್ತಕದ ಓದಿನಿಂದ, ಯಾರಾದರೂ ಹೇಳಿಕೊಟ್ಟುದರಿಂದ ಬರುವ ತಿಳಿವಳಿಕೆಯೇ ಜ್ಞಾನ. ಅನುಭವದಿಂದಲೂ ವಿವೇಕದಿಂದಲೂ ಪರಿಷ್ಕೃತವಾದ ಉಪಾಸನಾ ರೂಪವಾದ ಜ್ಞಾನವೇ ವಿದ್ಯೆ.

### ಚಕಾರಗಳ ಅರ್ಥ

'ವಿದ್ಯಾಂ ಚ, ಅವಿದ್ಯಾಂ ಚ' ಎಂದರೆ ವಿದ್ಯೆಯನ್ನೂ ವಿದ್ಯೆಯ ವಿರೋಧಿಗಳನ್ನೂ, ಅವಿದ್ಯೆಯನ್ನೂ ಅವಿದ್ಯೆಯ ವಿರೋಧಿಗಳನ್ನೂ ಎಂದರ್ಥ. ವಿದ್ಯೆ ಎಂದರೆ ಬ್ರಹ್ಮವಿದ್ಯೆ. ಇದರ ವಿರೋಧಿಗಳು, ಬ್ರಹ್ಮವಿದ್ಯೆಯಲ್ಲದ ಇತರ ವಿಷಯಗಳ ಜ್ಞಾನವೂ ಅವುಗಳಿಂದಾಗುವ ಕಾಮ-ಕ್ರೋಧಾದಿಗಳೂ. ಅವಿದ್ಯೆ ಎಂದರೆ ವಿದ್ಯೆಗೆ ಅಂಗವಾದ ಕರ್ಮ. ಇದರ ವಿರೋಧಿಗಳು ಸಂಸಾರಕ್ಕೆ ಕಾರಣವಾಗುವಂತಹ ಹಾಗೂ ಫಲದ ಆಸೆಯಿಂದಲೇ ಮಾಡುವ ಶಾಸ್ತ್ರೀಯ ಕರ್ಮಗಳು, ಮತ್ತು ಅಶಾಸ್ತ್ರೀಯ ಪಾಪಕರ್ಮಗಳು. ಇವುಗಳನ್ನು ಬಿಡಲೂ ಪುನಃ ಮಾಡದಿರಲೂ ಇವುಗಳ ಬಗ್ಗೆಯೂ ತಿಳಿವಳಿಕೆ ಅತ್ಯವಶ್ಯ. ಹಾಗೂ ಸಾಧನಮಾರ್ಗದಲ್ಲಿ ಹೆಜ್ಜೆಹೆಜ್ಜೆಗೂ ಈ ಕರ್ಮ-ಜ್ಞಾನಗಳು ಅವಶ್ಯಕ ಎಂಬ ಭಾವದಿಂದ ಇಲ್ಲಿ ಎರಡು ಚಕಾರಗಳನ್ನು ಉಪಯೋಗಿಸಲಾಗಿದೆ ಎಂದೂ ಹೇಳಬಹುದು.

### ಎಷ್ಟರ ಮಟ್ಟಿಗೆ ಕರ್ಮದ ಅವಶ್ಯಕತೆ ?

ಆದುದರಿಂದ ಇಲ್ಲಿ ವಿದ್ಯೆಯನ್ನು ಕಲಿಯಬೇಕೆಂಬ ಆಸೆಯುಂಟಾಗಲು ಮಾತ್ರ ಕರ್ಮದ ಸಹಾಯ ಅವಶ್ಯಕ ಎಂದಾಗಲಿ, ವಿದ್ಯೆಯಿಂದ ಅಮೃತದಂತಹ ಫಲಿತಾಂಶ ಪಡೆಯುವ ಮಧ್ಯೆ ಏನಾದರೂ ತೊಂದರೆಯಾದರೆ ಅದರ ನಿವಾರಣೆಗೆ ಕರ್ಮ ಅವಶ್ಯ ಎಂದಾಗಲಿ, ಇಟ್ಟುಕೊಂಡು ಕರ್ಮದ ಅವಶ್ಯಕತೆಯನ್ನು ಸಾಧಿಸಬಾರದು. ವಿದ್ಯೆ ಒಂದು ಕ್ಷಣದಲ್ಲಾಗಲಿ, ಒಂದು ದಿವಸದಲ್ಲಾಗಲಿ, ತಿಂಗಳು-ವರ್ಷಗಳಲ್ಲಾಗಲಿ, ಉಂಟಾಗುವಂತಹದಲ್ಲ. ಅದಕ್ಕೆ ನಿರಂತರ ಅಭ್ಯಾಸ ಬೇಕು, ಪರಮಾತ್ಮನ ಅನುಗ್ರಹದಿಂದ ಅದು ಜೀವನದ ಕೊನೆಯಗಳಿಗೆಯಲ್ಲಿ ಸಿದ್ಧವಾಗಬಹುದಷ್ಟೆ. ಆದ ಕಾರಣ ಬದುಕಿರುವವರೆಗೂ ಪ್ರತಿಯೊಬ್ಬ ವ್ಯಕ್ತಿಗೂ ವಿದ್ಯಾಸಿದ್ಧಿಗೆ ತನ್ನ ಅರ್ಹತೆಗೆ ತಕ್ಕ ಶಾಸ್ತ್ರೀಯ ಕರ್ಮಾಚರಣೆ ಅತ್ಯವಶ್ಯಕ.

# ಈಶಾವಾಸ್ಯೋಪನಿಷತ್

## ಮಂತ್ರ ಹನ್ನೆರಡು

**ಅಂಧಂ ತಮಃ ಪ್ರವಿಶಂತಿ ಯೇಽ ಸಂಭೂತಿ ಮುಪಾಸತೇ।**

**ತತೋ ಭೂಯ ಇವತೇ ತಮೋ ಯ ಉ ಸಂಭೂತ್ಯಾಂ ರತಾಃ ॥೧೨॥**

### ಅನ್ವಯಾನುಸಾರ ಪ್ರತಿಪದಾರ್ಥ

**ಯೇ** - ಸಾಮಾನ್ಯ ಜ್ಞಾನಿಗಳಾದ ಯಾರೇ ಆಗಲಿ; **ಅಸಂಭೂತಿಂ** - ಕೇವಲ ಪ್ರಕೃತಿ ಸಂಬಂಧವಾದ ನಾಶವನ್ನು; **ಉಪಾಸತೇ** - ಅಪೇಕ್ಷಿಸಿ ಪರಬ್ರಹ್ಮನ ಉಪಾಸನೆ ಮಾಡುವರೋ; (ಅವರು) **ಅನ್ಧಂ, ತಮಃ** - ಗಾಢವಾದ ಅಜ್ಞಾನರೂಪವಾದ ನರಕವನ್ನೂ ಮತ್ತು; **ಯೇ** - ಯಾರು; **ಸಂಭೂತ್ಯಾಂ ಉ** - ಕೇವಲ ಭೌತಿಕವಾದ ಶರೀರದಲ್ಲೇ; **ರತಾಃ** - ಚಟ ಬೆಳಸಿಕೊಂಡು ತತ್ಪರರಾಗಿರುವರೋ; **ತೇ** - ಅವರು; **ತತಃ** - ಆ ಅಂಧತಮಸ್‌ಗಿಂತಲೂ; **ಭೂಯಃ** - ಅಧಿಕವಾಗಿ ಭಯಂಕರವಾದ; **ತಮಃ ಇವ** - ಅಜ್ಞಾನರೂಪವಾದ ನರಕವನ್ನೇ; **ಪ್ರವಿಶನ್ತಿ** - ಹೋಗಿ ಸೇರುತ್ತಾರೆ.

### ಛಾಯಾಪದ್ಯ

ಕಗ್ಗತ್ತಲೆಗೇ ಸೇರುವರ್ಕೈ ಯಾರು ನಿರೋಧವ ಭಾವಿಪರೋ।

ಅದಕೂ ಮಿಗಿಲೆಂಬಂತಿಹ ಕತ್ತಲೆಗಾರು ವಿಕಾಸದೊಳೆಳಸಿಹರೋ॥

## ತಾತ್ಪರ್ಯಾರ್ಥ

### ಪರಬ್ರಹ್ಮ ಪ್ರಾಪ್ತಿಗೆ ಫಲಾನುಸಂಧಾನದ ಅವಶ್ಯಕತೆ

ಈಶಾವಾಸ್ಯೋಪನಿಷತ್ತು ಪರಬ್ರಹ್ಮನನ್ನು ಪಡೆಯಲು ಮುಮುಕ್ಷುವು ಅನುಸರಿಸಬೇಕಾದ ಉಪಾಸನಾ ಕ್ರಮವನ್ನು ತಿಳಿಸುತ್ತದೆ.

### ಪರಬ್ರಹ್ಮನ ಸ್ವರೂಪ ಮತ್ತು ತ್ರಿವಿಧ ತ್ಯಾಗ

ಉಪಾಸಕನು ಮೊದಲನೆಯ ಮಂತ್ರದಲ್ಲಿ ತಿಳಿಸಿದಂತೆ, ಪರಬ್ರಹ್ಮನು ವಿಶ್ವದಲ್ಲೆಲ್ಲಾ ಹರಡಿದ್ದಾನೆಂದು ಭಾವಿಸಬೇಕು. "ಈ ಕರ್ಮದ ಫಲವು ತನಗಲ್ಲವೆಂದೂ ಮಾಡುವವನು ತಾನಲ್ಲವೆಂದೂ ಈ ಕರ್ಮಗಳ ಸಂಬಂಧವು ತನಗಿಲ್ಲವೆಂದೂ ಭಾವಿಸಿ, ವಿಹಿತವಾದ ಕರ್ಮಗಳೆಲ್ಲವನ್ನೂ ಮಾಡಬೇಕು. ಯಾರೊಬ್ಬರ ವಸ್ತುವನ್ನೂ ಅಪೇಕ್ಷಿಸ ಬಾರದು". ಇದು ಉಪಾಸಕನಿಗೆ ಮೊದಲನೆಯ ಮೆಟ್ಟಿಲು.

### ಕರ್ಮ ಬಂಧಕವಲ್ಲ

ಎರಡನೆಯ ಮಂತ್ರದಲ್ಲಿ ಹೇಳಿದಂತೆ, ತ್ರಿವಿಧ ತ್ಯಾಗದೊಡನೆ ಮಾಡುವ ಕರ್ಮಗಳು ಬಂಧನಕ್ಕೆ ಕಾರಣ ವಾಗದಿರುವುದರಿಂದ ಈತನು ಬದುಕಿರುವವರೆಗೂ ತನಗೆ ವಿಹಿತವಾದ ಕರ್ಮಗಳನ್ನು ಆಚರಿಸುತ್ತಲೇ ಇರಬೇಕು. ಇದು ಉಪಾಸಕನ ಎರಡನೆಯ ಹಂತ.

### ಭೋಗದ ಪರಿಣಾಮ

ಐಹಿಕ ಭೋಗಗಳನ್ನು ಅಪೇಕ್ಷಿಸಿದ ಕರ್ಮಾಚರಣೆಯೂ ಶಾಸ್ತ್ರನಿಷಿದ್ಧವಾದ ಕರ್ಮಾನುಷ್ಠಾನವೂ ಅನೇಕ ನರಕಗಳನ್ನು ಕೊಡುತ್ತದೆ ಎಂದು ಭಾವಿಸಿ ಭೋಗವನ್ನು ಅಪೇಕ್ಷಿಸದೆ ನಿಷಿದ್ಧ ಕೆಲಸಗಳನ್ನು ಮಾಡದೆ ಉಪಾಸನೆ

ಮಾಡಬೇಕು. ಇದು ಮೂರನೆಯ ಮೆಟ್ಟಿಲು.

### ದೇವನು ಭಕ್ತವತ್ಸಲನು

ನಾಲ್ಕು ಮತ್ತು ಐದನೇ ಮಂತ್ರಗಳಲ್ಲಿ ತಿಳಿಸಿದಂತೆ ಉಪಾಸಕನು ಪರಬ್ರಹ್ಮನ ಅಸಾಧಾರಣ ಶಕ್ತಿಗಳನ್ನು ಅನುಸಂಧಾನ ಮಾಡುತ್ತಾ, ಪರಬ್ರಹ್ಮನು ಭಕ್ತರಿಗೆ ಸುಲಭಸಾಧ್ಯನೂ ಭಕ್ತರಿಗೊದಗುವ ಕಷ್ಟವನ್ನು ನೆನೆದು ಕಂಪಿಸುವವನೆಂದೂ ಅನುಸಂಧಾನ ಮಾಡುವುದನ್ನು ನಾಲ್ಕನೆಯ ಮೆಟ್ಟಿಲು ಎನ್ನಬಹುದು.

### ಬ್ರಹ್ಮಾತ್ಮಕವಾದ ಜಗತ್ತು

ಸಾಧಕನು ಆರು, ಏಳನೇ ಮಂತ್ರಗಳಲ್ಲಿ ತಿಳಿಸಿರುವಂತೆ ಸರ್ವ ವಸ್ತುಗಳಲ್ಲಿ ಪರಮಾತ್ಮನಿರುವನೆಂದೂ ಪರಮಾತ್ಮನಲ್ಲಿ ಸರ್ವವಸ್ತುಗಳಿವೆಯೆಂದೂ ಭಾವಿಸಿ ಎಲ್ಲವನ್ನೂ ಪರಬ್ರಹ್ಮಾತ್ಮಕವಾಗಿ ಅನುಸಂಧಾನ ಮಾಡುತ್ತಾ ಒದಗುವ ಸುಖ ದುಃಖಗಳಿಗೆ ಮನಸ್ಸನ್ನು ಕೊಡದೆ ತನ್ನ ಉಪಾಸನೆಯನ್ನು ಮುಂದುವರಿಸಬೇಕು. ಇದನ್ನು ಸಾಧಕನ ಐದನೆಯ ಹಂತವೆನ್ನಬಹುದು.

### ಪರಬ್ರಹ್ಮ ಮತ್ತು ಪ್ರತ್ಯಗಾತ್ಮ[1] ಸ್ವರೂಪ

ಸಾಧಕನು ಪರಬ್ರಹ್ಮನ ವಿಶೇಷಗುಣಗಳನ್ನೂ, ಶುದ್ಧ ಜೀವಾತ್ಮನ ಲಕ್ಷಣಗಳನ್ನೂ ಅನುಸಂಧಾನ ಮಾಡುತ್ತಾ ತನ್ನ ಒಳಗೂ ಹೊರಗೂ ಪರಮಾತ್ಮನಿದ್ದಾನೇದು ಭಾವಿಸುತ್ತಾ ತನ್ನ ನೈಜಸ್ವರೂಪವನ್ನು ಮನನ ಮಾಡುತ್ತಾ ಉಪಾಸನೆ ಮಾಡಬೇಕು. ಇದನ್ನು ಆರನೆಯ ಮೆಟ್ಟಿಲು ಎನ್ನಬಹುದು.

### ಕರ್ಮಯೋಗದಿಂದ ಕೂಡಿದ ಜ್ಞಾನಯೋಗ.

ಒಂಭತ್ತು, ಹತ್ತು ಮತ್ತು ಹನ್ನೊಂದನೆಯ ಮಂತ್ರಗಳಲ್ಲಿ ವೇದ ಪುರುಷನು ಅತಿ ರಹಸ್ಯವಾದ ಕರ್ಮಯೋಗ ಜ್ಞಾನಯೋಗಗಳ ಅಂಗಾಂಗಿ ಭಾವದಿಂದ ಕೂಡಿದ ಆಚರಣೆಯನ್ನು ತಿಳಿಸಿದನು.

ಈತನು, "ಪೂರ್ವಾಚಾರ್ಯರು ಇದನ್ನು ತನಗೆ ತಿಳಿಸಿದರೆಂದು" ಹೇಳಿ ಅದರ ಮಹತ್ತ್ವವನ್ನು ಬೋಧನೆ ಮಾಡಿದ್ದಾನೆ. ಆದರಂತೆ ಕರ್ಮಯೋಗ ಜ್ಞಾನಯೋಗಗಳನ್ನು ಪರಸ್ಪರೋಪಕಾರಕಗಳಂತೆ ಉಪಾಸಕನು ಆಚರಿಸಬೇಕು.

### ರಹಸ್ಯ

ಅತಿ ಸುಲಭವಾಗಿ ಮನಸ್ಸಿಗೆ ಗೋಚರಿಸದ ವಿಷಯವನ್ನು ರಹಸ್ಯವೆಂದು ಕರೆಯುತ್ತಾರೆ. ರಹಸ್ಯಗಳೆಲ್ಲವೂ ತಮ್ಮ ತಮ್ಮ ಸ್ವಾನುಭವದಿಂದ ಮಾತ್ರ ಗೋಚರಿಸತಕ್ಕವುಗಳು. ಮತ್ತೊಬ್ಬರ ಉಪದೇಶ ಮಾತ್ರದಿಂದಲೇ ಗೋಚರಿಸತಕ್ಕವುಗಳಲ್ಲ. ರಹಸ್ಯಗಳು ಸ್ವಾನುಭವದಿಂದಲೇ ಗೋಚರಿಸತಕ್ಕವುಗಳಾದರೂ ಸಿದ್ಧ ಪುರುಷರ ಮಾರ್ಗದರ್ಶನವನ್ನು ಅಪೇಕ್ಷಿಸುತ್ತವೆ.

ಸಿದ್ಧ ಪುರುಷರಲ್ಲಿ ನಮಗೆ ಪ್ರೀತಿ, ವಿಶ್ವಾಸ, ಭಕ್ತಿಗಳಿದ್ದರೆ ಅವರು ತೋರಿಸಿದ ಮಾರ್ಗದಲ್ಲಿ ಉಪಾಸನೆ ಮಾಡಿ ಸ್ವಾನುಭವದಿಂದ ರಹಸ್ಯವನ್ನು ತಿಳಿಯಬಹುದು.

ಕರ್ಮಯೋಗ ಜ್ಞಾನಯೋಗಗಳನ್ನು ಒಟ್ಟೊಟ್ಟಿಗೆ ಒಂದು ಮತ್ತೊಂದಕ್ಕೆ ಪರಿಪೋಷಕವಾಗುವಂತೆ ಉಪಾಸನೆ ಮಾಡಬೇಕು.

---

1. ಜೀವಾತ್ಮಾ.

## ಜ್ಞಾನ ಯೋಗ

ಪರಬ್ರಹ್ಮನೇ ಎಲ್ಲಕ್ಕೂ ಕಾರಣನು. ಅವನೇ ಮಾಡಿಸುವವನು ಎಂದು ಭಾವಿಸಿ ಅವನ ಗುಣಾಷ್ಟಕಗಳನ್ನೂ ಅದ್ಭುತಶಕ್ತಿಯನ್ನೂ ಸ್ಮರಿಸುವುದೇ ಜ್ಞಾನಯೋಗ.

## ಕರ್ಮಯೋಗ

ತನ್ನ ಸ್ವರೂಪದ ಜ್ಞಾನವನ್ನು ಅನುಸಂಧಾನ ಮಾಡುತ್ತಾ, ಶಾಸ್ತ್ರವಿಹಿತವಾದ ಕರ್ಮಗಳನ್ನು ತ್ರಿವಿಧ ತ್ಯಾಗದೊಡನೆ ಆಚರಿಸುವ ಕರ್ಮಾಚರಣೆಯನ್ನು ಕರ್ಮಯೋಗವೆನ್ನುವರು.

## ಅಮೃತ ಲಾಭ

ಒಂದು ಮತ್ತೊಂದಕ್ಕೆ ಪರಿಪೋಷಕವಾದ ಕರ್ಮಯೋಗ ಜ್ಞಾನಯೋಗದಿಂದ ಉಪಾಸಕನಿಗೆ ಪರಬ್ರಹ್ಮಾನುಭವವು ಉಂಟಾಗುವುದು. ಆಗ ಉಪಾಸಕನಿಗೆ ತಾನು ಪರಬ್ರಹ್ಮನಿಗೆ ಶರೀರವಾದವನು ಎಂಬ ಭಾವನೆ ಬರುತ್ತದೆ. ಈ ಭಾವನೆಯನ್ನು ಕೊಂಡಾಡಲು ವೇದಪುರುಷನು ಇದನ್ನೇ ಅಮೃತವೆಂದು ಕರೆದಿದ್ದಾನೆ. ಈ ರಹಸ್ಯ ಜ್ಞಾನವನ್ನು ಏಳನೆಯ ಹಂತವೆನ್ನಬಹುದು.

ಹೀಗೆ ಹನ್ನೊಂದು ಮಂತ್ರಗಳಿಂದ ಉಪಾಸ್ಯನಾದ ಪರಮಾತ್ಮನನ್ನೂ, ಅವನನ್ನು ಪಡೆಯಲು ಸಾಧಕವಾದ ಉಪಾಸನಾಕ್ರಮವನ್ನೂ ವಿವರಿಸಿ ಮತ್ತೆ ಮೂರು ಮಂತ್ರಗಳಲ್ಲಿ ಪ್ರತಿಬಂಧನಿವೃತ್ತಿ ಮತ್ತು ಬ್ರಹ್ಮಾನುಭವ ಎಂಬ ಅವಾಂತರಫಲಗಳೆರಡನ್ನೂ ಒಟ್ಟಿಗೆ ಅನುಸಂಧಾನಮಾಡುವ ಆವಶ್ಯಕತೆಯನ್ನು ತಿಳಿಸಲು ೧೨ನೇ ಮಂತ್ರದಲ್ಲಿ ಒಂದೊಂದರ ಆಚರಣೆಯಿಂದ ಒದಗುವ ಅನಿಷ್ಟವನ್ನು ತಿಳಿಸುತ್ತಾನೆ.

## ಚಿತ್ತವೃತ್ತಿ-ಯೋಗ

ಮಾನ, ದಂಭ ಅಹಂಕಾರಾದಿಗಳನ್ನು ಚಿತ್ತವೃತ್ತಿಯೆಂದು ಕರೆಯುತ್ತಾರೆ. ಚಿತ್ತವೃತ್ತಿಯು ಬ್ರಹ್ಮಾನುಭವಕ್ಕೆ ಅಡ್ಡಿಯನ್ನು ಉಂಟುಮಾಡುತ್ತವೆ.

ಈ ಚಿತ್ತವೃತ್ತಿಯ ತಡಗಟ್ಟುವಿಕೆಯನ್ನು ಯೋಗವೆಂದು ಕರೆಯುತ್ತಾರೆ.

## ಯೋಗಾಭ್ಯಾಸ ಮತ್ತು ಬ್ರಹ್ಮಾನುಭವ

ಯಾವ ಮುಮುಕ್ಷುವು ತಾನು ಬ್ರಹ್ಮನಿಗೆ ಶರೀರ ಭೂತನಾದವನು ಎಂದು ನೆನೆಯದೆ ಬ್ರಹ್ಮಾನುಭವಕ್ಕೆ ವಿರೋಧಿಗಳಾದ ದಂಭಾಹಂಕಾರಾದಿಗಳನ್ನು ಯೋಗ ಮಾತ್ರದಿಂದ ನಾಶಮಾಡಲು ಪ್ರಯತ್ನ ಮಾಡುತ್ತಾನೋ ಅವನು ಗಾಢವಾದ ಕತ್ತಲೆಯನ್ನು ಪ್ರವೇಶಿಸುತ್ತಾನೆ.

ಯಾವನು ಬ್ರಹ್ಮಾನುಭವಕ್ಕೆ ಸಹಾಯಕವಾದ ಯೋಗಾಭ್ಯಾಸ ಮಾಡದೆ ಬ್ರಹ್ಮಾನುಭವದಲ್ಲೇ ಆಸಕ್ತನಾಗುವನೋ ಅವನೂ ಅತಿಗಾಢವಾದ ಕತ್ತಲೆಯನ್ನು ಪ್ರವೇಶಿಸುತ್ತಾನೆ ಎಂದು ಹೇಳಿ ಈ ಮಂತ್ರದಲ್ಲಿ ಒಂದೊಂದನ್ನೇ ಆಚರಿಸುವುದರಿಂದ ಬ್ರಹ್ಮಾನುಭವವೂ ಸಿದ್ಧಿಸದೆ ದಂಭಾಹಂಕಾರಾದಿಗಳು ಹೋಗದೆ ಸಂಸಾರ ಚಕ್ರದಲ್ಲಿ ಸಿಲುಕಿ ದುಃಖವನ್ನು ಅನುಭವಿಸುತ್ತಾನೆಂದು ತಿಳಿಸಿದನು. ವಿರಕ್ತರಾದ ಸನ್ಯಾಸಿಗಳಲ್ಲೂ ಮಾನದಂಭಾದಿಗಳನ್ನು ಕಾಣುವುದರಿಂದ ಅದರ ನಾಶಕ್ಕೆ ಯೋಗಾಭ್ಯಾಸ ಅವಶ್ಯಕ.

ಶ್ರೀರಂಗಾಚಾರ್ಯರು ೧೨, ೧೩, ೧೪ನೇ ಮಂತ್ರಗಳಿಗೆ ಮತ್ತೊಂದು ರೀತಿಯಲ್ಲಿ ಅರ್ಥವನ್ನು ವಿವರಿಸಿದ್ದಾರೆ.

## ೧೨ನೆಯ ಮಂತ್ರ

### ಅವಾಂತರ ಫಲಾನುಸಂಧಾನದ ಪರಿಣಾಮ

ವೇದಪುರುಷನು ಹಿಂದಿನ ಮೂರು ಮಂತ್ರಗಳಲ್ಲಿ ವಿದ್ಯೆ ಅವಿದ್ಯೆಗಳನ್ನು ಸ್ವತಂತ್ರವಾಗಿ ಆಚರಿಸುವುದರಿಂದ ಅನಿಷ್ಟ ಫಲಗಳು ದೊರಕುತ್ತವೆ ಎಂದು ತಿಳಿಸಿ ಇವುಗಳನ್ನು ಪರಸ್ಪರ ಪರಿಪೋಷಕಗಳನ್ನಾಗಿ ಆಚರಿಸಬೇಕೆಂದು ಉಪದೇಶಿಸಿದನು. ಹೀಗೆ ಆಚರಿಸುವುದರಿಂದ ಕರ್ಮಯೋಗದಿಂದ ಪ್ರಾಚೀನ ಕರ್ಮಗಳನ್ನು ಕಳೆದುಕೊಂಡು ಜ್ಞಾನಯೋಗದಿಂದ ಪರಬ್ರಹ್ಮಾನುಭವವನ್ನು ಪಡೆಯುವನೆಂದು ಬೋಧಿಸಿದನು.

ಈ ಮುಂದಿನ ಅಂಧಂತಮಃ ಮೊದಲಾದ ಮೂರು ಮಂತ್ರಗಳಿಂದ ಉಪಾಸನಾಕಾಲದಲ್ಲಿ ಮೋಕ್ಷಕ್ಕಿಂತ ಬೇರೆಯಾದ ಅವಾಂತರ ಫಲಗಳನ್ನು ಒಟ್ಟಿಗೆ ಉದ್ದೇಶಿಸಿ ಉಪಾಸನೆ ಮಾಡಬೇಕೆಂದು ತಿಳಿಸಲು ೧೨ನೇ ಮಂತ್ರದಲ್ಲಿ ಒಂದೊಂದೇ ಅವಾಂತರ ಫಲಗಳ ಉದ್ದೇಶದ ಉಪಾಸನೆಯಿಂದ ಅನಿಷ್ಟ ಫಲವು ದೊರಕುವುದೆಂದು ತಿಳಿಸುತ್ತಾನೆ.

### ಅಸಂಭೂತಿ - ಎಂದೆಂದಿಗೂ ಶರೀರ ಬೇಡವೆಂಬ ಉದ್ದೇಶದ ಫಲ

ಶರೀರದಿಂದಲೇ ಪುಣ್ಯಪಾಪಗಳು ಉಂಟಾಗುತ್ತವೆ. ಈ ಪುಣ್ಯಪಾಪಗಳ ಫಲವನ್ನು ಅನುಭವಿಸುವುದಕ್ಕಾಗಿ ಜೀವಾತ್ಮರು ಶರೀರವನ್ನು ಪಡೆದು ಸುಖದುಃಖವನ್ನು ಅನುಭವಿಸುತ್ತಾ ಸಂಸಾರ ಚಕ್ರದಲ್ಲಿ ಸಿಲುಕಿ ತೊಳಲುತ್ತಾರೆ. ಆದ್ದರಿಂದ ತಮಗೆ ಎಂದೆಂದಿಗೂ ಶರೀರದ ಸಂಬಂಧವು ಬೇಡವೇಬೇಡವೆಂದು ಬಗೆದು ಕೆಲವರು ಉಪಾಸನೆ ಮಾಡುತ್ತಾರೆ. ಅವರು ತಮ್ಮ ಉದ್ದೇಶಕ್ಕೆ ಅನುಗುಣವಾಗಿ ಎಂದೆಂದಿಗೂ ಶರೀರ ಒದಗದ ಕೈವಲ್ಯವನ್ನು ಪಡೆಯುತ್ತಾರೆ. ಕೈವಲ್ಯವೆಂದರೆ ಕೇವಲ ಸ್ವಾತ್ಮಾನುಭವ. ಕೈವಲ್ಯವನ್ನು ಪಡೆದವರು ಮತ್ತೆ ಪರಮಾತ್ಮನನ್ನು ಪಡೆಯಲಾರರು. ಆದುದರಿಂದ ಕೈವಲ್ಯಾಭಿಲಾಷಿಗಳು ಘೋರವಾದ ಕತ್ತಲೆಯನ್ನು ಸೇರುವರೆಂದು ತಿಳಿಸಿದನು.

### ಸಂಭೂತಿ - ಶರೀರ ಬೇಕೆಂಬ ಉದ್ದೇಶದ ಫಲ

ಮತ್ತೆ ಕೆಲವು ಮುಮುಕ್ಷುಗಳು ತಮಗೆ ಎಂದೆಂದಿಗೂ ಶರೀರ ಬರಬಾರದು ಎಂಬ ಅವಾಂತರ ಫಲವನ್ನು ಅಪೇಕ್ಷಿಸದೆ ಪರಮಾತ್ಮನ ಸೇವೆ ಮಾಡಲು ಶರೀರವು ಸಹಾಯಕವಾದುದು ಎಂದು ಯೋಚಿಸಿ ಶರೀರವನ್ನು ಅಪೇಕ್ಷಿಸುತ್ತಾರೆ. ಅವರು ತಮ್ಮ ಉದ್ದೇಶಕ್ಕೆ ಅನುಗುಣವಾಗಿ ಶರೀರವನ್ನು ಪಡೆದು ಆ ಶರೀರದಿಂದ ಸುಖಭೋಗಗಳನ್ನು ಅನುಭವಿಸುತ್ತಾ, ಪುಣ್ಯಪಾಪಗಳನ್ನು ಆಚರಿಸುತ್ತಾ, ಹುಟ್ಟು ಸಾವಿನ ದವಡೆಗೆ ಸಿಲುಕಿ ಕೊನೆಗೆ ಪರಮಾತ್ಮನನ್ನೇ ಮರೆಯುತ್ತಾರೆ. ಆದ್ದರಿಂದ ಕೇವಲ ಸಂಭೂತಿ ಉಪಾಸಕರೂ ಅಧಿಕವಾದ ಕತ್ತಲೆಯನ್ನು ಪ್ರವೇಶಿಸುತ್ತಾರೆ.

## ವೇದಾಂತಾಚಾರ್ಯ ಭಾಷ್ಯ

ಹಿಂದೆ ಹೇಳಿದ ಈ ಎಲ್ಲ ಕಾರಣಗಳಿಂದ ಹೀಗೆ ನಮ್ಮ ಉಪಾಸನೆಗೆ ವಿಷಯವಾಗಿರುವ ಪರಮಾತ್ಮ ಎಂಬ ತತ್ತ್ವವನ್ನು, ಎಲ್ಲ ಅಂಗಗಳೊಡನೆ ಕೂಡಿ ಪರಿಪೂರ್ಣವಾದ ಉಪಾಸನೆ ಎಂಬ ನಮ್ಮ 'ಹಿತ'ವನ್ನೂ 'ಪುರುಷಾರ್ಥ' ಎಂದು ಕರೆಯುವ ಶ್ರೇಷ್ಠವೂ ಕೊನೆಯದೂ ಆದ ಫಲಿತಾಂಶದ ನಮ್ಮ ಗುರಿಯನ್ನೂ ಉಪದೇಶಿಸಿ ಆಯಿತು.

ನಮಗೆ ಬೇಕಾದ ಫಲಿಶಾಂಶದ ಗುರಿ – ಕಬ್ಬಿನ ಜಲ್ಲೆಯಂತೆ ಪೂರ್ಣರಸಮಯವಾದುದು. ಈ ಫಲಿತಾಂಶದ ಗುರಿಯಲ್ಲಿ ನಮಗಿರುವ ಅಡ್ಡಿ ಆತಂಕಗಳ ನಿವಾರಣೆ ಒಂದು ಗಿಣ್ಣು ಇದ್ದಂತೆ. ಪರಮಾತ್ಮನ ಅನುಭವ ಮತ್ತೊಂದು ಗಿಣ್ಣಿದ್ದಂತೆ. ಈ ಎರಡನ್ನೂ ಒಟ್ಟಿಗೆ ಮನಸ್ಸಿನಲ್ಲಿ ಚಿಂತನೆ ಮಾಡುವುದು ಉಪಾಸನೆಗೆ ಅತ್ಯವಶ್ಯಕವಾಗಿ ಸ್ವೀಕಾರಾರ್ಹವಾದ ಅಂಶ ಹಾಗೂ ಅಂಗ, ಎಂಬ ವಿಷಯವನ್ನು ಈ ನಂತರ ಮೂರು ಶ್ಲೋಕಗಳಲ್ಲಿ ಹೇಳ ಲಾಗುತ್ತದೆ.

ಅವುಗಳಲ್ಲಿ ಮೊದಲ ಈ ಶ್ಲೋಕದಲ್ಲಿ ಫಲಿತಾಂಶದ ಒಂದೊಂದೇ ಭಾಗವನ್ನು ಚಿಂತನ ಮಾಡುವುದು ಸರಿ ಯಲ್ಲ ಎಂದು ಅಂತಹ ಪ್ರತ್ಯೇಕವಾದ ಚಿಂತನವನ್ನು ತೆಗಳುತ್ತಿದ್ದಾನೆ.

"ಅಂಧಂ...............ರತಾಃ" ಎಂದು.

### ಸಂಭೂತಿಯ ಅರ್ಥ ಮತ್ತು ಆಧಾರ ವಚನಗಳು

''ಇತ್ತ ಕಡೆಯಿಂದ ಮಹಾ ಪ್ರಯಾಣ ಮಾಡಿ (ಅಂದರೆ ಸತ್ತು) ಸಮೀಪದಲ್ಲೇ (ಪರಮಾತ್ಮನನ್ನು) ಎದಿರುಗೊಂಡವನಾಗಿ ಆಗುವೆನು"[1].

"ಹೊಲಸಾದ ಈ ಶರೀರವನ್ನು ಒದರಿ ಹೊರದೂಡಿ ಕೃತಾರ್ಥನಾಗಿ, ಪರಮಾತ್ಮನೆಂಬ ಪ್ರಕಾಶವಾದ ಆಸರೆಯ ಜಾಗವನ್ನು ಪ್ರೀತಿಯಿಂದ ಎದಿರುಗೊಂಡು ಪಡೆಯುವನು"[2].

ಇವೇ ಮುಂತಾದ ಉಪನಿಷತ್ ವಚನಗಳಲ್ಲಿ ಪರಮಾತ್ಮನನ್ನು ಪಡೆಯುವುದು ಎಂಬ ಈ 'ಸಂಭೂತಿ' ಯನ್ನು ತಿಳಿಸಲಾಗಿದೆ.

### ಅಸಂಭೂತಿಯ ಅರ್ಥ

'ಸಂಭೂತಿಯಲ್ಲದುದು' ಎಂದು ಅಸಂಭೂತಿಯನ್ನು ಸಂಭೂತಿಯಿಂದ ಹೊರಪಡಿಸಿ ಹೇಳುವ ಈ 'ಅಸಂ ಭೂತಿ' ಎಂಬ ಪದ ಆ ಪರಮಾತ್ಮನ ಪ್ರಾಪ್ತಿಗೆ ಅಂದರೆ ಪಡೆಯುವಿಕೆಗೆ ಮೊದಲು ಸಮೀಪಕಾಲದಲ್ಲೇ ಅಡ್ಡಿ ಆತಂಕಗಳ ನಿವಾರಣೆಯೂ ಆಗುವುದನ್ನು ನೇರವಾಗಿ ತಿಳಿಸುತ್ತದೆ. ಈ ನಂತರದ ಮಂತ್ರದಲ್ಲೂ ಸಹ 'ಸಂಭೂತಿ ಯನ್ನೂ ವಿನಾಶವನ್ನೂ' ಎಂದು ಮತ್ತೆ ಹೇಳಲಾಗುವುದನ್ನೂ ಇಲ್ಲಿ ಗಮನಿಸಬಹುದಲ್ಲವೇ!

### ಅಸಂಭೂತಿ ಸಂಭೂತಿಯ ಭಾವವಲ್ಲ

ಹೇಗೂ ಇಲ್ಲಿ ಅಸಂಭೂತಿ ಎಂಬ ಪದಕ್ಕೆ ಬ್ರಹ್ಮ ಪ್ರಾಪ್ತಿಯು ಇನ್ನೂ ಉಂಟಾಗಿರುವುದಿಲ್ಲ ಎಂದಾಗಲಿ, ನಾಶವಾಯಿತು ಎಂದಾಗಲಿ, ಅರ್ಥವನ್ನು ನಿರೂಪಿಸಲಾಗದು. ಪರಮಾತ್ಮನನ್ನು ಅಥವಾ ಮುಕ್ತಿಯನ್ನು ಪಡೆ ಯಲು ಮುಖ್ಯ ಸಲಕರಣೆ ಎಂದು 'ಸಂಭೂತಿ' ಯನ್ನು ಕುರಿತು ಹೇಳಿರುವಾಗ; ಅಂತಹ ಪ್ರಾಪ್ತಿಗೆ ಪೂರ್ವ ಭಾವಿಯಾಗಿ ಸಂಭೂತಿಯ ಹುಟ್ಟದಿರುವಿಕೆಯನ್ನಾಗಲಿ ನಾಶವನ್ನಾಗಲಿ ಪ್ರಾಪ್ತಿಗೆ ಇರುವ ಅಡ್ಡಿ ಆತಂಕಗಳನ್ನು ದಾಟಲು ಅಂದರೆ, ನಿವಾರಿಸಲು ಸಲಕರಣೆ ಎಂದು ಹೇಳುವುದು ಎಷ್ಟೂ ಸೂಕ್ತವಲ್ಲ.

ಇಲ್ಲಿಯೂ ದಾಟುವುದು ಎಂಬ ಮಾತಿಗೆ ಗುರಿ ತಲುಪುವುದು ಎಂಬ ಅರ್ಥವನ್ನು ಹಿಂದೆಯೇ ತಿಳಿಸಿದಂತೆ ಎತ್ತಿ ದೂರ ಎಸೆದು ಬಿಡಬೇಕು.

---

1. ಏತಮಿತಃ ಪ್ರೇತ್ಯಾಭಿಸಂಭವಿತಾಸ್ಮಿ. ಛಾಂ. ೩.೧೪.೪.

2. ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮಿ. ಛಾಂ. ೮.೧೩.೧.

## ಈಶಾವಾಸ್ಯ ಪ್ರಕಾಶಿಕೆ

ಹೀಗೆ 'ಸಮಾಧಿ ಸ್ಥಿತಿ' ಯನ್ನು ಫಲದ ಮೇಲೆ ಆಸೆಯಿಲ್ಲದೆ ಮಾಡುವ ನಮ್ಮ ನಿತ್ಯ – ನೈಮಿತ್ತಿಕ ಕಾರ್ಯಗಳಿಂದ ಸಾಧಿಸಿಕೊಳ್ಳಬಹುದೆಂಬ ಅಂಶ ತಿಳಿಸಿ ಆಯಿತು. ಈ ನಂತರ ಮೂರು ಶ್ಲೋಕಗಳಲ್ಲಿ ನಾವು ಸಮಾಧಿ ಸ್ಥಿತಿಯನ್ನು ಪಡೆಯಲು ಮಾಡಬಾರದ ಕೆಲಸಗಳನ್ನು ಬಿಡುವುದು ಎಂಬ ಕರ್ತವ್ಯ ಅತ್ಯವಶ್ಯಕ ಅಂಗ ಎಂಬ ಅಂಶವನ್ನು ಹೇಳುತ್ತಿದ್ದಾನೆ.

ಮತ್ತು ಹಿಂದೆ ಹೇಳಿದಂತೆ ಈಗಲೂ ಒಂದೊಂದು ಅಂಶವನ್ನು ಮಾತ್ರ ಆಚರಿಸುವವರನ್ನು ತೆಗಳುತ್ತಾನೆ.

ಬೇರೆ ಆಧಾರ ಗ್ರಂಥಗಳಲ್ಲಿ ಸಂಭೂತಿ ಎಂದರೆ ಅನುಭವ ಎಂದು ಹೇಳಿದಂತಾಯಿತು. ಇಲ್ಲಿ ಸಂಭೂತಿ ಎಂದರೆ ಸಮಾಧಿ ರೂಪವಾದ ಉಪಾಸನೆ ಎಂದರ್ಥ. ಆದುದರಿಂದ ಅಸಂಭೂತಿ ಎಂಬ ಪದಕ್ಕೆ ಸಮಾಧಿಗಿಂತ ಬೇರೆಯಾಗಿದ್ದು ಅದರ ಸಹಾಯಕ ಅಂಗವಾಗಿ ಶಾಸ್ತ್ರ ನಿಷಿದ್ಧ ವಿಷಯಗಳ ನಿವೃತ್ತಿ ಎಂಬುದು ಅರ್ಥ. ಇದೇ ನಿವೃತ್ತಿ ಎಂಬ ಶಬ್ದವನ್ನೂ ಪ್ರಯೋಗಿಸಲಾಗುವುದು ಎಂಬುದೂ ಗಮನಾರ್ಹ.

**ಯೇ** – ಯಾವ ಕೆಲವು ಉಪಾಸಕರು ಹೀಗೆ ಯೋಗಕ್ಕೆ ವಿರೋಧಿಗಳಾದ ದುರಭಿಮಾನ, ಆಷಾಢಭೂತಿತನ, ಹಿಂಸೆ, ಕಳ್ಳತನ ಮುಂತಾದ ನಿಷಿದ್ಧ ವಿಷಯಗಳ ನಿವೃತ್ತಿಯನ್ನು ಮಾತ್ರ ಆಚರಿಸಿ ಅದನ್ನೇ ಚಿಂತನೆ ಮಾಡುವರೋ ಎಂದರ್ಥ.

**ಯೇ** – ಹಾಗೇ ಯಾರು ಬರಿಯ ಬ್ರಹ್ಮಾನುದರ್ಶನ ಎಂಬ ಅನುಭವ ರೂಪವಾದ ಸಮಾಧಿಯನ್ನು ಮಾತ್ರ ಚಿಂತನೆ ಮಾಡುವರೋ ಎಂದರ್ಥ.

## ಪದಾರ್ಥ ದೀಪಿಕೆ

ಪ್ರಕಾಶಿಕೆಯಲ್ಲಿರುವಂತೆಯೇ ಪ್ರತಿಪದಾರ್ಥ ಇದೆ.

**ಸಂಭೂತಿಃ** – ಸಮಾಧಿ.

**ಅನ್ಧಂತಮಃ** – ಅಜ್ಞಾನ.

## ಸುಬೋಧಿನೀ

### ಪದವಿವರಣೆ–ಸಾರಾರ್ಥ

ಕರ್ಮ ಜ್ಞಾನಗಳ ಅಂಗಾಂಗಿ ಭಾವವನ್ನೇ ಈ ಮಂತ್ರದಲ್ಲಿ ಮತ್ತೆ ಹೇಳಲಾಗುವುದು. ವೇದಗಳು ಎಂದೂ ಸೋಮಾರಿಗಳಲ್ಲವಷ್ಟೆ![1]. ಇಲ್ಲಿ 'ಸಂಭೂತಿ' ಎಂದರೆ ಹುಟ್ಟಿ ಅಳಿಯುವ ಕರ್ಮಗಳು. 'ಅಸಂಭೂತಿ' ಎಂದರೆ ಹುಟ್ಟು ಸಾವಿಲ್ಲದ ಆತ್ಮಸ್ವರೂಪ.

ಸಂಸಾರದಿಂದ ಬಿಡುಗಡೆಯಾದರೆ ಸಾಕೆಂಬ ಆಸೆಯಿಂದ ಯಾರು ಆತ್ಮಸ್ವರೂಪದ ಚಿಂತೆಯಲ್ಲೇ ಮಗ್ನರಿದ್ದು ಕರ್ಮಗಳನ್ನು ಬಿಟ್ಟುಬಿಟ್ಟಿರುವರೋ ಅವರು ಜ್ಞಾನನಿಷ್ಠೆಯು ಸಿಗದೆ ಮತ್ತೆ ಸಂಸಾರದಲ್ಲೇ ಸಿಲುಕಿಕೊಳ್ಳುವರು. ಬರಿಯಕರ್ಮದಲ್ಲೇ ನಿರತರಾದವರು ಸಂಸಾರದಲ್ಲೂ ವಿಷಯಗಳಿಗೆ ಪರವಶರಾಗಿ ಮುಂದೆ ನರಕಗಳನ್ನೂ ಅನುಭವಿಸಬೇಕಾಗುವುದು.

---

1. ವೇದಗಳು ಯಾವುದನ್ನೂ ಸೋಮಾರಿತನವಿಲ್ಲದೆ ಮತ್ತೆ ಮತ್ತೆ ಒತ್ತಿ ಹೇಳುತ್ತಿರುತ್ತವೆ ಎಂದು ಭಾವ.

### ಅಪಾಯದ ಎಚ್ಚರಿಕೆ

ಅಥವಾ ಈವರೆಗೆ ಮೋಕ್ಷಕ್ಕೆ ಸಲಕರಣೆ ಎನಿಸಿದ ಉಪಾಸನೆಯನ್ನೂ ಅದರ ಅಂಗವಾದ ಕರ್ಮವನ್ನೂ ತಿಳಿಸಿ ಆಯಿತಷ್ಟೆ. ಇನ್ನು ಮುಂದೆ ಉಪಾಸಕನಾದವನಿಗೆ ಉಪಾಸನೆಯ ಫಲಿತಾಂಶದ ಎರಡು ಸ್ತರಗಳಾದ ಪ್ರತಿಬಂಧಕದ ನಾಶ ಹಾಗೂ ಪರಮಾತ್ಮಲಾಭ ಈ ಎರಡನ್ನೂ ಜೊತೆಜೊತೆಗೇ ಚಿಂತನೆ ಮಾಡಬೇಕೆಂದು ತಿಳಿಸುವ ಸಲುವಾಗಿ ಅವುಗಳ ಚಿಂತನೆಯಿಂದಾಗುವ ಅಪಾಯದ ಎಚ್ಚರಿಕೆ ಕೊಡಲಾಗುವುದು.

### ಪದವಿವರಣೆ

'ಸಂಭೂತಿ' ಎಂದರೆ ಪರಮಾತ್ಮಲಾಭ. ಅಸಂಭೂತಿ' ಎಂದರೆ ಪೂರ್ವಭಾವಿಯಾಗಿ ಆಗುವ ಪ್ರಕೃತಿಸಂಬಂಧದ ಪೂರ್ಣ ನಿವೃತ್ತಿ.

### ಅಸಂಭೂತಿಚಿಂತನೆಯ ಫಲ

ಯಾರು ಪ್ರಕೃತಿಸಂಬಂಧದ ನಿವೃತ್ತಿಯಾದರೆ ಮಾತ್ರ ಸಾಕೆಂದು ಪರಮಾತ್ಮಲಾಭವನ್ನು ಅಪೇಕ್ಷಿಸದೆ ಇರುವರೋ, ಅವರು ಪರಮಾತ್ಮಾನುಭವವಿಲ್ಲದ ಕೈವಲ್ಯಸ್ಥಾನವನ್ನು ಪ್ರವೇಶಿಸುವರು. ಅಲ್ಲಿ ಪರಮಾತ್ಮಾನುಭವದ ಆನಂದವಿಲ್ಲದುದರಿಂದ ಅದನ್ನೂ ಕಗ್ಗತ್ತಲೆಯ ನರಕ ಎಂದೇ ಕರೆಯಲಾಗಿದೆ.

### ಸಂಭೂತಿಚಿಂತನೆಯ ಫಲ

ಪೂರ್ಣ ಪ್ರಕೃತಿಸಂಬಂಧದ ನಿವೃತ್ತಿಯನ್ನು ಅಪೇಕ್ಷಿಸದೆ ಬರಿಯ ಪರಮಾತ್ಮಲಾಭವನ್ನೇ ಚಿಂತಿಸುವ ಜನರಿಗೆ ಇತ್ತ ಉಪಾಸನೆಯೂ ಸಿದ್ಧಿಸದೆ ಅತ್ತ ಪ್ರಕೃತಿಸಂಬಂಧವೂ ನಾಶವಾಗದೆ ಬದುಕಿಯೂ ಸತ್ತವರಂತೆ ಅವರ ಸ್ಥಿತಿ ಬಹಳ ಶೋಚನೀಯವಾಗುವುದು.

### ಸಾರಾರ್ಥ

ಉಪಾಸಕನಿಗೆ ಪರಲೋಕದ ಮಾರ್ಗದಲ್ಲಿ ಮುನ್ನಡೆಯುವ ಬಗ್ಗೆ ಹೇಗೆ ಮೊದಲೇ ಅರಿವು ಇದ್ದು ಪ್ರತಿದಿನ ಅದರ ಚಿಂತನೆಯು ಉಪಾಸನೆಯ ಅಂಗವೆನಿಸಿರುವುದೋ ಹಾಗೆಯೇ ಪ್ರಕೃತಿಸಂಬಂಧದ ಪೂರ್ಣನಿವೃತ್ತಿ ಹಾಗೂ ಪರಮಾತ್ಮಲಾಭ ಈ ಎರಡರ ಬಗೆಗೂ ಅರಿವು ಚಿಂತನೆಗಳು ಅಂಗವಾಗಿ ಒಡಗೂಡಿ ನಡೆಯಬೇಕು. ಈ ಅಂಶವನ್ನು "ಸಲ್ಲದ ಶರೀರವನ್ನು ಬಿಸುಟು ಸಲ್ಲುವ ಆತ್ಮನಾದ ನಾನು ಪರಮಾತ್ಮನ ಹಾಗೂ ಅವನ ಲೋಕಕ್ಕೆ ಅಭಿಮುಖವಾಗಿ ಹೊಸ ಜೀವನಕ್ಕೆ ಸಜ್ಜಾಗುವೆನು" ಎಂದು ಉಪನಿಷತ್ತಿನಲ್ಲೇ ಹೇಳಲಾಗಿದೆ. ಇವೆರಡರಲ್ಲಿ ಯಾವ ಒಂದರ ಚಿಂತನೆ ಇಲ್ಲವಾದರೂ ಉಪಾಸನೆಯು ಸಿದ್ಧಿಸದು ಅದರ ಫಲವೂ ಸಿಗದು. ಎಂಬ ಅರ್ಥವನ್ನು ಈ ಮಂತ್ರವು ನಿರ್ಣಯಿಸುತ್ತದೆ.

## ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಮಂತ್ರದ ಸ್ಥಾನಪಲ್ಲಟ

ಈ ಮಂತ್ರವನ್ನು ಒಂಬತ್ತನೆಯ ಮಂತ್ರವನ್ನಾಗಿ ಮಾಧ್ಯಂದಿನರು ಪಠಿಸುತ್ತಾರೆ.

## ಪೂರ್ವಾಪರ ಸಂಗತಿ

ಈ ಹಿಂದೆ ಪರಮಪುರುಷಾರ್ಥವಾದ ಪರಮಾತ್ಮನನ್ನು ಪಡೆಯುವುದಕ್ಕೆ ಪರಮಹಿತವಾದ ಸಾಧನವನ್ನಾಗಿ ಕರ್ಮಾಂಗಕವಾದ ಪರಮಾತ್ಮೋಪಾಸನರೂಪವಾದ ವಿದ್ಯೆಯನ್ನು ತಿಳಿಸಿ ಆಯಿತು. ಇಲ್ಲಿಂದ ಮುಂದೆ ಮೂರು ಮಂತ್ರಗಳಲ್ಲಿ ಇತರ ಪುರುಷಾರ್ಥಗಳಾದ ಐಶ್ವರ್ಯ – ಕೈವಲ್ಯಗಳನ್ನು ಆಸೆಪಡದೆ, ಅವುಗಳನ್ನೂ ತ್ಯಾಗಮಾಡಿಯೇ ಪರಮಾತ್ಮನನ್ನು ಪಡೆಯಬೇಕಾದುದರಿಂದ ಆ ಇತರ ಪುರುಷಾರ್ಥಗಳಲ್ಲಿರುವ ದೋಷಗಳನ್ನೂ, ಅವುಗಳಲ್ಲೇ ಮಗ್ನರಾದವರಿಗೆ ಆಗುವ ಅನರ್ಥಗಳನ್ನೂ ತಿಳಿಸಿ ಈ ವಿಚಾರವೆಲ್ಲವನ್ನೂ ಸಹ ವಿದ್ಯೆಗೆ ಅಂಗವಾಗಿ ಚಿಂತನೆ ಮಾಡ ಬೇಕೆಂದು ತಿಳಿಸಲಾಗುವುದು.

## ಅಸಂಭೂತಿ

"ಪರಿಪೂರ್ಣವಾಗಿ ಪ್ರಕೃತಿಯ ಸಂಬಂಧವು ಹೋಗುವವರೆಗೂ ಶರೀರದ ಸಂಬಂಧವು ಇರುವುದು. ಆದ ರಿಂದ ಸುಖ ದುಃಖ ಎರಡೂ ಅಂಟಿ ಬರುವುದಷ್ಟೆ"[1] ಇಂತಹ ತೊಂದರೆಗಳ ಪೂರ್ಣನಿವೃತ್ತಿಯೇ ಕೈವಲ್ಯ ವೆಂಬ ಮುಕ್ತಿ. (ಇದರಲ್ಲಿ ಪರಮಾತ್ಮಾನುಭವರೂಪವಾದ ಸಂಭೂತಿಯಿಲ್ಲವಾದ್ದರಿಂದ ಇದನ್ನೇ ಅಸಂಭೂತಿ ಎನ್ನ ಬಹುದು) ಪ್ರಕೃತಿಸಂಬಂಧದಿಂದಾದ ಶರೀರದ ಪೂರ್ಣನಾಶ, ಇದಕ್ಕೆ ಅವಶ್ಯಕವಾದುದರಿಂದ ಇದನ್ನೇ ವಿನಾಶ ವೆಂದೂ ಕರೆಯಬಹುದು. ಅಸಂಭೂತಿ ಎಂದರೂ ಅಸಂಭವ ಎಂದರೂ ವ್ಯಾಕರಣಾನುಸಾರ ಅರ್ಥ ಒಂದೇ. ಈ ಅಸಂಭೂತಿಯಲ್ಲಿ ಬ್ರಹ್ಮಾನುಭವಕ್ಕೆ ಕೊಂಚವೂ ಅವಕಾಶವಿಲ್ಲದುದರಿಂದ ಇಂತಹ ಅಜ್ಞಾನದ ಸ್ಥಿತಿಯನ್ನು 'ಅಂಧತಮಸ್' ಎಂಬ ನರಕಕ್ಕೆ ಸಮಾನವಾಗಿ ಇಲ್ಲಿ ತಿಳಿಸಲಾಗಿದೆ.

## ಸಂಭೂತಿ

ಐಹಿಕ ಮತ್ತು ಸ್ವರ್ಗಾದಿ ಸುಖಭೋಗಗಳ ಆಸೆಯಿಂದ ದೇಹಸಂಬಂಧರೂಪವಾದ ಸಂಭೂತಿಯನ್ನೇ ಮುಖ್ಯಗುರಿಯಾಗಿ ಚಿಂತನೆ ಮಾಡುವವರಿಗೆ ತಮ್ಮ ತಮ್ಮ ಆನಂದವನ್ನು ಮಾತ್ರ ಅನುಭವಿಸುವ ಅವಕಾಶವಿರುವ ಕೈವಲ್ಯಕ್ಕಿಂತ ಅಲ್ಪವಾದ ಆನಂದವೇ ಸಿಗುವುದರಿಂದಲೂ, ಇಂತಹ ಲೌಕಿಕಭೋಗಗಳಿಗೆ ಆಸರೆಯಾದ ಶರೀರವು ದುಃಖಮಿಶ್ರಿತವಾಗಿ ಕ್ಲೇಶಗಳ ಪರಂಪರೆಯನ್ನೇ ಬೆಳಸುವಂತಹುದಾಗಿ ಇರುವುದರಿಂದಲೂ ಇದೆಲ್ಲವನ್ನೂ 'ಅನ್ಧತಮಸ್' ಎಂಬ ನರಕಕ್ಕಿಂತ ಕಡೆಯಾದುದೆಂದು ತಿಳಿಸಲಾಗಿದೆ. ಸಂಭೂತಿ – ಸಂಭವ ಶಬ್ದಗಳಿಗೆ ಅರ್ಥದಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಇದನ್ನು ಸಾಮಾನ್ಯವಾದ 'ವಿಗ್ರಹ ಪರಿಗ್ರಹ' ಎಂದು ಇಟ್ಟುಕೊಳ್ಳೋಣ. ವಿಗ್ರಹ ವೆಂದರೆ ಶರೀರ. ಪರಿಗ್ರಹ ಎಂದರೆ ಪಡೆಯುವುದು.

---

1. ನ ಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ,
ಅಶರೀರಂ ವಾ ವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ. ಛಾಂ. ೮. ೧೨. ೧



# ಈಶಾವಾಸ್ಯೋಪನಿಷತ್

## ಮಂತ್ರ ಹದಿಮೂರು

**ಅನ್ಯದೇವಾಹುಸ್ಸಂಭವಾದನ್ಯದಾಹುರಸಂಭವಾತ್ ।**

**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ ವಿಚಚಕ್ಷಿರೇ ॥೧೩॥**

### ಅನ್ವಯಾನುಸಾರ ಪ್ರತಿಪದಾರ್ಥ

**ಯೇ** - ಈ ಪುರುಷಾರ್ಥದ ಸೂಕ್ಷ್ಮತಾರತಮ್ಯತಿಳಿದಿರುವ ಯಾವ ನಮ್ಮ ಪೂರ್ವಾಚಾರ್ಯರು; **ನಃ** – ನಮಗಾಗಿ ಕಾರುಣ್ಯದಿಂದ; **ವ್ಯಾಚಚಕ್ಷಿರೇ** – ಸೂಕ್ಷ್ಮಗಳನ್ನು ವಿವರಿಸಿ ತಿಳಿಸಿರುವರೋ; **ಧೀರಾಣಾಂ** – ಜ್ಞಾನ ಮತ್ತು ಅನುಷ್ಠಾನಗಳನ್ನು ಬೆಳಸಿಕೊಂಡಿರುವ, ಅವರ; **ತತ್** – ಆ ಸೂಕ್ಷ್ಮವಿಚಾರದ ಮಾತನ್ನು; "**ಸಂಭವಾತ್** – ಕೇವಲ ಭೌತಿಕ ಶರೀರ ಲಾಭದಿಂದ; **ಅನ್ಯತ್, ಏವ** – ಫಲವೇ ಬೇರೆ; **ಆಹುಃ** – ಎನ್ನುವರು; **ಅಸಂಭವಾತ್** – ಭೌತಿಕ ಶರೀರ ನಾಶದಿಂದ; **ಅನ್ಯತ್** – ಫಲಬೇರೆ; **ಆಹುಃ** – ಎನ್ನುವರು;" **ಇತಿ** – ಎಂಬುದಾಗಿ; **ಶುಶ್ರುಮ** – ಕೇಳಿ ತಿಳಿದಿರುವೆವು.

### ಛಾಯಾಪದ್ಯ

ಬೇರೆಯೆ ಇಹುದೆನ್ನುವರು ನಿರೋಧಕೆ ಬೇರೆಯೆ ಎನುವರ್ ವಿಕಾಸಕು ಮೇಣ್॥
ಇಂತೈ ಧೀರರಿನಾಲಿಸಿ ತಿಳಿದಿಹೆವಾರೆಮಗದ ಬಿಚ್ಚೊರೆದಿಹರೋ॥

## ತಾತ್ಪರ್ಯಾರ್ಥ

"ಬ್ರಹ್ಮಪ್ರಾಪ್ತಿಯನ್ನೇ ಮೋಕ್ಷವೆಂದು ಕರೆಯುತ್ತಾರೆ; ಉಪಾಸನಾ ಕಾಲದಲ್ಲಾಗುವ, ಕೇವಲ ಬ್ರಹ್ಮಾನುಭವ ಚಿಂತನೆಗಿಂತಲೂ ಬೇರೆಯಾದುದು ಮೋಕ್ಷಕ್ಕೆ ಸಾಧನ; ಅಲ್ಲದೆ ಕೇವಲ ದಂಭಾಹಂಕಾರಾದಿಗಳ ನಾಶರೂಪವಾದ ಉಪಾಸನೆಗಿಂತಲೂ ಬೇರೆಯಾದುದು ಈ ಮೋಕ್ಷಕ್ಕೆ ಸಾಧನ", ಎಂಬ ರಹಸ್ಯವನ್ನು ವಿದ್ವದಗ್ರೇಸರರಾದ ನಮ್ಮ ಆಚಾರ್ಯರು ವಿನೀತರಾದ ನಮಗೆ ತಿಳಿಸಿರುವರು.

### ಅಥವಾ

ಶರೀರವಿಲ್ಲದಿದ್ದಲ್ಲಿ ಸೇವೆ ಮಾಡಲಾರೆವು. ಸೇವೆಮಾಡಲು ಸಹಾಯಕವಾದುದು ಶರೀರ ಎಂಬ ಉದ್ದೇಶಮಾತ್ರದಿಂದ ಕೂಡಿದ ಉಪಾಸನೆಯು ಶರೀರವನ್ನು ದೊರಕಿಸುತ್ತದೆ. ಈ ಫಲವು ಕೈವಲ್ಯಕ್ಕಿಂತ ಬೇರೆಯಾದುದು.

ಶರೀರವೇ ಎಲ್ಲ ಸುಖದುಃಖಗಳಿಗೂ ಕಾರಣವಾದುದು. ಆದುದರಿಂದ ನಮಗೆ ಎಂದೆಂದಿಗೂ ಶರೀರ ಸಂಬಂಧ ಬೇಡವೇ ಬೇಡವೆಂಬ ಉದ್ದೇಶಮಾತ್ರದಿಂದ ಮಾಡುವ ಉಪಾಸನೆಯಿಂದ ಆತ್ಮಾನುಭವರೂಪವಾದ ಕೈವಲ್ಯವು ದೊರಕುತ್ತದೆ. ಇದು ಸಂಭೂತಿಯ ಉಪಾಸನೆಯಿಂದ ದೊರಕುವ ಶರೀರ ಲಾಭಕ್ಕಿಂತಲೂ ಬೇರೆಯಾದುದು ಎಂಬುದಾಗಿ ತಿಳಿಸುತ್ತಾ, ಒಟ್ಟಿಗೆ ಉಪಾಸನೆ ಮಾಡದೆ ಸ್ವತಂತ್ರವಾಗಿ ಆಚರಿಸಲ್ಪಡುವ ಸಂಭೂತಿ ಮತ್ತು ಅಸಂಭೂತಿಗಳ ಉಪಾಸನೆಯಿಂದ ದೊರಕುವ ಫಲಗಳು ಬೇರೆ ಬೇರೆ ಎಂದು ವಿದ್ವಾಂಸರಲ್ಲಿ ಅತಿನಿಪುಣರಾದ ಆಚಾರ್ಯರು ನಮಗೆ ತಿಳಿಸಿದರೆಂದು ಶ್ರೀರಂಗಾಚಾರ್ಯರು ಅಭಿಪ್ರಾಯ ಪಡುತ್ತಾರೆ.

# ವೇದಾಂತಾಚಾರ್ಯಭಾಷ್ಯ

"ಅನ್ಯದೇವ ........... ವ್ಯಾಚಚಕ್ಷಿರೇ ಎಂದು. ಇಲ್ಲಿ ಅದನ್ನು ಎಂಬ ಪದವು, ಮುಂದೆ ಒಟ್ಟಿಗೆ ಸೇರಿಸಿ ಮನಸ್ಸಿನಲ್ಲಿ ಚಿಂತನೆ ಮಾಡಬೇಕೆಂದು ಹೇಳುವ ಎರಡು ವಿಚಾರಗಳ ಜೋಡಿಯನ್ನು ಸೂಚಿಸುತ್ತದೆ.

# ಈಶಾವಾಸ್ಯ ಪ್ರಕಾಶಿಕೆ

ಹಾಗಾದರೆ ಮುಕ್ತಿಗೆ ಸಾಧನ ಸಲಕರಣೆಗಳೇನು? ಎಂಬ ಅಂಶವನ್ನು ತಿಳಿಸುತ್ತಾನೆ.

**ಸಂಭವಃ** – ಸಂಭೂತಿ. **ಅಸಂಭವಃ** – ಅಸಂಭೂತಿ. ಬರಿಯ ಸಂಭೂತಿಯಾಗಲೀ ಅಸಂಭೂತಿಯಾಗಲೀ ಮುಕ್ತಿಗೆ ಸಾಧನವಲ್ಲ. ಇವೆರಡಕ್ಕಿಂತ ಬೇರೊಂದು ಮುಕ್ತಿ ಸಾಧನ ಇದೆ ಎಂದು ಉಪನಿಷತ್ತುಗಳು ಘೋಷಿಸುತ್ತಿವೆ ಎಂದರ್ಥ.

# ಪದಾರ್ಥ ದೀಪಿಕೆ

ಈ ಮಂತ್ರದಲ್ಲಿ ಸಂಭವಾಸಂಭವಗಳಿಗಿಂತ ಬೇರೊಂದು ಸಾಧನ ಮೋಕ್ಷಕ್ಕೆ ಇದೆ ಎಂದೂ, ಸಂಭವಾಸಂಭವಗಳಿಗೆ ಬೇರೆಯೇ ಫಲಗಳಿವೆಯೆಂದೂ, ತಿಳಿಸಲಾಗುವುದು.

**ಸಂಭವಃ** – ಸಂಭೂತಿ – ಬ್ರಹ್ಮಾನುಭವ.

# ಸುಬೋಧಿನೀ

### ಪದವಿವರಣೆ

**ಸಂಭವಾತ್** – ಬರಿಯ ಕರ್ಮಕ್ಕಿಂತ.

**ಅಸಂಭವಾತ್** – ಉಪಾಸಿಸಲ್ಪಡುವ ಆತ್ಮಕ್ಕಿಂತ ಅಂದರೆ ಬರಿಯ ಆತ್ಮೋಪಾಸನೆಗಿಂತ.

**ತತ್** – ಕರ್ಮಜ್ಞಾನಗಳ ಜೋಡಿಯೇ ಮೋಕ್ಷಸಾಧನ.

### ಅಥವಾ

**ಸಂಭವಾತ್** – ಉಪಾಸನೆಯಲ್ಲಿ ನಾವು ಚಿಂತಿಸುವ ಫಲಿತಾಂಶದ ಒಂದು ಸ್ವರವೆನ್ನಬಹುದಾದ ಪರಮಾತ್ಮಲಾಭಕ್ಕಿಂತ ಅಂದರೆ ಪರಮಾತ್ಮಲಾಭವನ್ನು ಮಾತ್ರ ಚಿಂತಿಸುವುದಕ್ಕಿಂತ.

**ಅಸಂಭವಾತ್** – ನಾವು ಚಿಂತಿಸುವ ಪ್ರತಿಬಂಧಕನಿವೃತ್ತಿಗಿಂತ, ಅಂದರೆ ಬರಿಯ ಪ್ರತಿಬಂಧಕನಿವೃತ್ತಿಯ ಚಿಂತನೆಗಿಂತ.

**ಅನ್ಯತ್, ಏವ** – ಬೇರೆಯೇ ಮೋಕ್ಷಸಾಧನ.

**ತತ್** – ಮೋಕ್ಷಸಾಧನವಾದ ವಿಶೇಷ ರೀತಿಯ ಚಿಂತನೆಯನ್ನು.

### ಭಾವಾರ್ಥ

ಬರಿಯ ಇಷ್ಟಪ್ರಾಪ್ತಿಯನ್ನಾಗಲಿ ಬರಿಯ ಅನಿಷ್ಟನಿವೃತ್ತಿಯನ್ನಾಗಲಿ ಚಿಂತಿಸಿದರೆ ಮೋಕ್ಷ ಆಗದು. ಈ ಮೋಕ್ಷಕ್ಕಾಗಿ ಈ ಎರಡರ ಚಿಂತನೆಯೂ ಅವಶ್ಯಕ.

# ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಮಂತ್ರದ ಸ್ಥಾನಪಲ್ಲಟ, ಪಾಠಾಂತರ.

ಈ ಮಂತ್ರವನ್ನು ಮಾಧ್ಯಂದಿನರು ಹತ್ತನೆಯ ಮಂತ್ರವನ್ನಾಗಿಯೂ, 'ವ್ಯಾಚಚಕ್ಷಿರೇ' ಎಂಬುದನ್ನು 'ವಿಚಚಕ್ಷಿರೇ' ಎಂಬುದಾಗಿಯೂ ಪಠಿಸುತ್ತಾರೆ.[1] ಎರಡು ಪಾಠಗಳಿಗೂ ಅರ್ಥಮಾತ್ರ ಒಂದೇ.

### ಭಾವಾರ್ಥ

ಸಂಭೂತಿ–ಅಸಂಭೂತಿಗಳ ಪ್ರತ್ಯೇಕ ಚಿಂತನದಿಂದ ಪ್ರತ್ಯೇಕ ವಿರುದ್ಧ ಫಲಗಳು ಸಿಗುವುವೇ ಹೊರತು ಫಲಗಳಲ್ಲಿ ಏಕಮುಖತೆ ಎಂದಿಗೂ ಬರದಷ್ಟೆ. ಆದುದರಿಂದ ಇಂತಹ ಚಿಂತನೆ ಮಾಡಲೇಬಾರದು.

---

1. ಹತ್ತನೆಯ ಮಂತ್ರದ ಟಿಪ್ಪಣಿ ನೋಡಿ.



# ಈಶಾವಾಸ್ಯೋಪನಿಷತ್

## ಮಂತ್ರ ಹದಿನಾಲ್ಕು

**ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಂ ಸಹ।**

**ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಽಮೃತಮಶ್ನುತೇ ॥೧೪॥**

**ಅನ್ವಯಾನುಸಾರ ಪ್ರತಿಪದಾರ್ಥ**

ಯಃ - ಸದಾಚಾರ್ಯರ ಉಪದೇಶದಿಂದ ಈ ಸೂಕ್ಷ್ಮವನ್ನು ತಿಳಿದಿರುವ ಯಾವನು; ಸಂಭೂತಿಂ - ಇಹ ಲೋಕದಲ್ಲಿ ಬ್ರಹ್ಮಾನುಭವವನ್ನೂ ಅದಕ್ಕೆ ಅನುಗುಣವಾದ ಭೌತಿಕ ಶರೀರಲಾಭವನ್ನೂ ಪರಲೋಕದಲ್ಲಿ ಬ್ರಹ್ಮಪ್ರಾಪ್ತಿಯನ್ನೂ ಅದಕ್ಕೆ ಅನುಗುಣವಾದ ದಿವ್ಯಶರೀರವನ್ನೂ; ಚ - ಮತ್ತು; ವಿನಾಶಂ - ಇಹ ಪರಗಳಲ್ಲಿ ಬ್ರಹ್ಮಾನುಭವಕ್ಕೆ ವಿರೋಧಿಯಾದ ಪ್ರಕೃತಿ ಸಂಬಂಧದ ನಾಶವನ್ನೂ ಪರದಲ್ಲಿ ಪರಮಾತ್ಮಕೈಂಕರ್ಯೋಪಯೋಗಿಗಳಾದ ದಿವ್ಯಶರೀರ ಸ್ವರೂಪ ಸ್ವಭಾವಾದಿಗಳ ಪೂರ್ವಭಾವಿ ಇಲ್ಲದಿರುವಿಕೆಯನ್ನೂ; ತತ್- ಆ ಸಾಧಕ ಮತ್ತು ಬಾಧಕದ ಅಭಾವ ಎಂಬ; ಉಭಯಂ _ ಪರಸ್ಪರ ಹೊಂದಿಕೊಂಡಿರುವ ಎರಡು ಅಂಶಗಳ ಜೋಡಿಯನ್ನೂ; ಸಹ - ಜೊತೆ ಜೊತೆಯಾಗಿಯೇ; ವೇದ-ತಿಳಿದಿರುವನೋ ಅವನು; ವಿನಾಶೇನ - ಬಾಧಕಗಳಾದ ಭೌತಿಕ ಶರೀರ ಮತ್ತು ಭೌತಿಕ ಫಲಗಳ ನಾಶ ಮತ್ತು ಕೈಂಕರ್ಯಲಾಭವಿಲ್ಲದ ಕೇವಲ ಪ್ರಕೃತಿಸಂಬಂಧನಾಶರೂಪವಾದ ಕೈವಲ್ಯದ ಅಭಾವದ ಚಿಂತನದಿಂದ; ಮೃತ್ಯುಂ - ಬ್ರಹ್ಮಾನುಭವ ವಿರೋಧಿಯಾದ ಸಂಸಾರವನ್ನೂ ಕೈವಲ್ಯವನ್ನೂ; ತೀರ್ತ್ವಾ - ಉಲ್ಲಂಘಿಸಿ; ಸಂಭೂತ್ಯಾ - ಇಹದಲ್ಲಿ ಬ್ರಹ್ಮಾನುಭವ, ಅದರಿಂದ ದಿವ್ಯಶರೀರ ಲಾಭ, ಅದರಿಂದ ಪರದಲ್ಲಿ ಬ್ರಹ್ಮಾನುಭವ ಉಂಟಾಗುವುದರಿಂದ; ಅಮೃತಂ - ಕೈಂಕರ್ಯಪರ್ಯಂತವಾದ ಬ್ರಹ್ಮಪ್ರಾಪ್ತಿ ಮತ್ತು ಬ್ರಹ್ಮಾನುಭವಗಳನ್ನು; ಅಶ್ನುತೇ - ವ್ಯಾಪಕವಾಗಿ ಪಡೆಯುತ್ತಾನೆ.

**ಛಾಯಾಪದ್ಯ**

ವಿಕಾಸಮಂ ನಿರೋಧಮುಮದಾವನರಿತನೆರಡೊಡಂ.

ನಿರೋಧದಿಂದ ಮಿತ್ತ್ತ ದಾಂಟಿ ಪಡೆವನಮೃತವಿಕಾಸದಿಂ.

## ತಾತ್ಪರ್ಯಾರ್ಥ

ಮುಮುಕ್ಷುವು, ಬ್ರಹ್ಮಾನುಭವ ಮತ್ತು ಬ್ರಹ್ಮಾನುಭವದ ವಿರೋಧಿಗಳ ನಾಶ ಇವೆರಡನ್ನೂ ಒಟ್ಟಿಗೆ ಅನುಸಂಧಾನ ಮಾಡುತ್ತಾ ಉಪಾಸನೆ ಮಾಡಬೇಕೆಂದು ಈ ಮಂತ್ರದಿಂದ ತಿಳಿಸುತ್ತಾನೆ.

ಮುಮುಕ್ಷುವು ಬ್ರಹ್ಮಾನುಭವದ ಅನುಸಂಧಾನವನ್ನೂ ದಂಭಾಹಂಕಾರಾದಿಗಳನ್ನು ನಾಶಮಾಡುವ ಯೋಗಾಭ್ಯಾಸವನ್ನೂ ಒಟ್ಟಿಗೆ ಸಾಧನೆ ಮಾಡಬೇಕು. ಹೀಗೆ ಸಾಧನೆ ಮಾಡಿದಾಗ ಯೋಗಾಭ್ಯಾಸದಿಂದ ಬ್ರಹ್ಮಪ್ರಾಪ್ತಿಗೆ ಅಡ್ಡಿಯಾದ ದಂಭಾಹಂಕಾರಾದಿಗಳನ್ನು ಕಳೆದುಕೊಂಡು ಪರಿಪೂರ್ಣ ಬ್ರಹ್ಮಾನುಭವದಿಂದ ಬ್ರಹ್ಮಪ್ರಾಪ್ತಿರೂಪವಾದ ಮೋಕ್ಷವನ್ನು ಪಡೆಯುತ್ತಾನೆ.

ಇಲ್ಲಿಯವರೆಗೆ ದಂಭಾಹಂಕಾರಾದಿಗಳ ನಾಶಕ್ಕಾಗಿ ಯಾವ ಕ್ರಮವನ್ನೂ ತಿಳಿಸದೇ ಇರುವುದರಿಂದ ಯೋಗಾಭ್ಯಾಸದ ಆವಶ್ಯಕತೆಯನ್ನು ತಿಳಿಸಿದನು.

ಇದನ್ನೇ ಉಪಾಸಕನ ಎಂಟನೆಯ ಮೆಟ್ಟಲು ಎನ್ನಬಹುದು.

**ಅಥವಾ**

ಶರೀರದ ಸಂಪರ್ಕವೇ ಬೇಡ ಮತ್ತು ಶರೀರ ಬೇಕು ಎಂಬ ಎರಡು ಅವಾಂತರಫಲಗಳನ್ನು ಉದ್ದೇಶಿಸಿ ಉಪಾಸನೆ ಮಾಡುವುದರಿಂದ ಉಪಾಸಕನು ತನಗೆ ಎಂದೆಂದಿಗೂ ಶರೀರದ ಸಂಬಂಧ ಬೇಡವೆಂಬ ಅವಾಂತರಫಲದ

ಈ ಬಯಕೆಯಿಂದ ಕರ್ಮಸಂಬಂಧದಿಂದ ಬರಬಹುದಾದ ಶರೀರಗಳನ್ನು ಕಳೆದುಕೊಳ್ಳುತ್ತಾನೆ. ಅಲ್ಲದೆ ಶರೀರ ಬೇಕೆಂಬ ಫಲೋದ್ದೇಶದಿಂದ ಪರಮಾತ್ಮನ ಸೇವೆಗೆ ಉಪಯುಕ್ತವಾದ ಶುದ್ಧಸತ್ತ್ವಮಯವಾದ ಕರ್ಮದ ಸೋಂಕಿಲ್ಲದ ಶರೀರವನ್ನು ಪಡೆದು ಪರಮಾತ್ಮನ ಸೇವೆಯನ್ನು ಮಾಡುತ್ತಾನೆ.

"ಉಪಾಸಕನು ವೈಕುಂಠವನ್ನು ಸೇರಿ ಅಪ್ರಾಕೃತಶರೀರ ಪಡೆದು ಪರಮಾತ್ಮನ ಇಂಗಿತವನ್ನು ಅರಿತು ಸೇವೆಮಾಡುತ್ತಾ ಬ್ರಹ್ಮಾನಂದವನ್ನು ಪಡೆಯುತ್ತಾನೆ" ಎಂದು ಕೆಲವರು ಅರ್ಥಮಾಡುತ್ತಾರೆ.

## ವೇದಾಂತಾಚಾರ್ಯಭಾಷ್ಯ

ಇಲ್ಲಿಯೂ ಬೇರೆ ಎಂದು ಹಿಂದೆ ಹೇಳಿದುದನ್ನೇ ವಿವರಿಸುತ್ತಾ, ಹಿಂದೆ ಹೇಳಿದ ಎರಡು ವಿಷಯಗಳೆರಡನ್ನೂ ಒಟ್ಟಿಗೆ ಚಿಂತನೆ ಮಾಡುವುದು ಉಪಾಸನೆಗೆ ಒಂದು ಅಂಗ ಎಂದು ಹೇಳುತ್ತಿದ್ದಾನೆ. "ಸಂಭೂತಿಂ............ ಸಹ" ಎಂದು.

ಈ ಚಿಂತನಕ್ಕೆ ಪ್ರಯೋಜನವನ್ನು ತೋರಿಸಿಕೊಟ್ಟು, ಅದು ಅತ್ಯವಶ್ಯ ಮಾಡಬೇಕಾದುದು ಎಂಬ ಅಂಶವನ್ನು ಬಿಗಿಗೊಳಿಸಿ ನಿಲ್ಲಿಸುತ್ತಾನೆ "ವಿನಾಶೇನ............ಅಶ್ನುತೇ" ಎಂದು.

ಅಡ್ಡಿ ಆತಂಕಗಳ ನಿವಾರಣೆಯನ್ನೇ ಚಿಂತನ ಮಾಡುತ್ತಾ ಆದರಿಂದಲೇ ಆ ಅಡ್ಡಿ ಆತಂಕಗಳನ್ನು ಇಲ್ಲದಂತೆ ಅಡಗಿಸಿ, ಪರಮಾತ್ಮನ ಪ್ರಾಪ್ತಿಯನ್ನೇ ಚಿಂತನಮಾಡುತ್ತಾ ಪರಮಾತ್ಮನನ್ನೇ ಪಡೆಯುತ್ತಾನೆ.

### ಉಪಾಸನೆಯ ಫಲ ಆದರ ಅಂಗಗಳಿಗೆ ಹೇಗೆ ಅನ್ವಯಿಸುವುದು ?

"ಸಂಭೂತಿ"ಯನ್ನೂ "ವಿನಾಶ"ವನ್ನೂ ಚಿಂತನ ಮಾಡುವುದು ಪ್ರಧಾನವಾದ ಉಪಾಸನೆಗೆ ಅಂಗವಾಗಿರುವಾಗ, ಉಪಾಸನೆಯ ಫಲವಾದ ಅಡ್ಡಿ ಆತಂಕ ನಿವಾರಣೆಯೂ ಪರಮಾತ್ಮನ ಪ್ರಾಪ್ತಿಯೂ ಈ ಚಿಂತನಕ್ಕೆ ಫಲ ಎಂದು ಇಲ್ಲಿ ಹೇಳಿರುವುದು, ಅಂತಹ ಉತ್ತಮ ಸಹಾಯಕವಾಗಿರುವ ಚಿಂತನವನ್ನು ಸ್ವಲ್ಪ ಹೊಗಳಬೇಕಾದುದು ಇಲ್ಲಿ ನಮ್ಮ ಉಚಿತ ಕರ್ತವ್ಯ ಎಂಬ ಕಾರಣದಿಂದ.

### ಸಂಭೂತಿ, ವಿನಾಶಗಳಿಗೆ ಮತ್ತೊಂದು ರೀತಿಯ ಅರ್ಥವೂ ಫಲವೂ.

ಅಥವಾ "ವಿನಾಶದಿಂದ ಮೃತ್ಯುವನ್ನು ದಾಟಿ" ಎಂಬಲ್ಲಿ ವಿನಾಶಶಬ್ದಕ್ಕೆ ಗರ್ವ – ಆಷಾಢಭೂತಿತನ ಮುಂತಾದ ಹಾಗೂ ಕೊಲೆ – ಕಳ್ಳತನ ಮುಂತಾದ ನಮ್ಮ ಹೊರ ಇಂದ್ರಿಯಗಳ ವ್ಯವಹಾರಗಳ ಪರಿಪೂರ್ಣ ನಾಶವೇ ಅಭಿಪ್ರಾಯ. ಹೀಗೆ ಒಪ್ಪಿ ಹೇಳಿದರೆ ಮಾತ್ರ ಹಿಂದೆ ಹೇಳಿದ ಒಂದೇ ತರಹದ ಪದಗಳಿಗೆ ಒಂದೇ ತರಹದ ಅರ್ಥ ಹೇಳಿದಂತಾಗುವುದು.

( ಹಿಂದೆ ' ಅಸಂಭೂತಿ' - ಸಂಭೂತಿಯಲ್ಲದುದು ಅಂದರೆ ಪ್ರತಿಬಂಧಕದ ವಿನಾಶ ಎಂದೂ, 'ಸಂಭೂತಿ' ಎಂದರೆ ಬ್ರಹ್ಮಪ್ರಾಪ್ತಿ ಎಂದೂ ಅರ್ಥೈಸಲಾಗಿದೆ. ಹಾಗೂ ಸಂಭೂತಿಯಿಂದ ಅಮೃತಲಾಭ ಎಂದರೆ ಬ್ರಹ್ಮಪ್ರಾಪ್ತಿ ಅಥವಾ ಮುಕ್ತಿಲಾಭ ಎಂದೂ ಅರ್ಥೈಸಲಾಗಿದೆ. ಅಂದರೆ (ಸಂಭೂತಿ) ಬ್ರಹ್ಮಪ್ರಾಪ್ತಿಯಿಂದ (ಅಮೃತ) ಬ್ರಹ್ಮಪ್ರಾಪ್ತಿ ಉಂಟಾಗುವುದೆಂದಹಾಗಾಯಿತು )

ಇಲ್ಲಿ ಮೊದಲನೆಯ ಬ್ರಹ್ಮಪ್ರಾಪ್ತಿ ಇಹಲೋಕದಲ್ಲೇ ಪರಮಾತ್ಮನ ಸಾಕ್ಷಾತ್ಕಾರವಾದಂತಾಗುವ ಉಪಾಸನ ಜ್ಞಾನ. ನಂತರದ ಬ್ರಹ್ಮಪ್ರಾಪ್ತಿಯೇ ಪರಲೋಕದಲ್ಲಾಗುವ ಬ್ರಹ್ಮಾನುಭವ. ಮೊದಲ ಬ್ರಹ್ಮಪ್ರಾಪ್ತಿಗೆ ಅಡ್ಡಿಯಾಗಿರುವ ಪುಣ್ಯ, ಪಾಪ – ಕರ್ಮದೋಷಗಳ ನಾಶವೇ ಇಲ್ಲಿ 'ಅಸಂಭೂತಿ,ಅಸಂಭವ, ವಿನಾಶ' ಎಂದು ಹೇಳಿದರೆ

ಹಿಂದಿನ ಮೂರು ಮಂತ್ರಗಳ ಪದ – ವಾಕ್ಯಗಳ ಏಕರೂಪ ಶೈಲಿಯೂ ಸಾರ್ಥಕವಾಗುತ್ತದೆ ಎಂಬುದು ಆಚಾರ್ಯರ ಅಭಿಪ್ರಾಯ ಎಂದು ತೋರುವುದು.)

ಆದುದರಿಂದ 'ಶಾಸ್ತ್ರೀಯಕರ್ಮಗಳಿಗೆ ವಿರುದ್ಧವಾದವುಗಳನ್ನು ಬಿಡುವುದೂ ಉಪಾಸನೆಯ ಒಂದು ಅಂಶ' ಎಂದು ಆಚರಿಸಬೇಕು ಮತ್ತು ಚಿಂತನಮಾಡಬೇಕು. ಇದರಿಂದ ಉಪಾಸನೆಯ ಪರಿಪಕ್ವಾವಸ್ಥೆಯಾದ ಸಾಕ್ಷಾತ್ಕಾರ ವೆಂಬ ಸಮಾಧಿಸ್ಥಿತಿಗೆ ಅಡ್ಡಿಯಾಗಿರುವ ನಮ್ಮ ಪುಣ್ಯ ಪಾಪಗಳೆಲ್ಲವೂ ಕಳೆದುಹೋಗುವುವು. ನಂತರ ಸಮಾಧಿ ಸ್ಥಿತಿ ಉಂಟಾಗುವುದು. ಅದೇ ಪರಮಾತ್ಮಾನುಭವ, 'ಬ್ರಹ್ಮಸಂಭೂತಿ'. ಅದನ್ನೇ ಅವನು ಪಡೆಯುತ್ತಾನೆ.

**ಸಂಭೂತಿ, ವಿನಾಶಗಳಿಗೆ ಇತರರು ಹೇಳುವ ಅರ್ಥ ಸರಿಯಲ್ಲ.**

ಇಲ್ಲಿ 'ಸಂಭೂತಿ' ಮತ್ತು 'ವಿನಾಶ' ಎಂಬ ಪದಗಳಿಗೆ ಕ್ರಮವಾಗಿ 'ಸೃಷ್ಟಿ' 'ಪ್ರಳಯ' ಎಂಬ ಅಭಿಪ್ರಾಯ ಇಟ್ಟುಕೊಂಡು, 'ಸೃಷ್ಟಿಧ್ಯಾನ' ಎಂದರೆ ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನನ್ನೂ ಒಳಗೊಂಡು ಈ ಸ್ಥೂಲ ವಾದ ಪ್ರಕೃತಿಯ ಧ್ಯಾನಮಾಡುವುದರಿಂದ ಮೃತ್ಯುವನ್ನು ದಾಟುವುದು ಎಂದರೆ ಪ್ರಕೃತಿ ಮಂಡಲದಲ್ಲೇ ಅಣಿ ಮಾದಿ ಶಕ್ತಿಗಳನ್ನು ಪಡೆದು, ನಿರ್ಭಯವಾಗಿ ತನ್ನಿಷ್ಟ ಬಂದಂತೆ ಸ್ವತಂತ್ರವಾಗಿರುವುದು, ಹಾಗೂ, 'ಪ್ರಳಯ ಧ್ಯಾನ' ದಿಂದ ಅಂದರೆ ಪ್ರಳಯಕಾಲದಲ್ಲೂ ಇರುವ ಸೂಕ್ಷ್ಮವಾದ ಪ್ರಕೃತಿಯ ಧ್ಯಾನದಿಂದ 'ಅಮೃತಪ್ರಾಪ್ತಿ' ಎಂದರೆ ಈ ಪ್ರಕೃತಿಯೊಳಗೇ ಪೂರ್ಣಲಯವಾಗಿ ಹೋಗುವುದು ಎಂದೂ ಕೆಲವರು ಅರ್ಥ ಹೇಳುತ್ತಾರೆ. ಹೀಗೆ. ಹೇಳಲು ಇಲ್ಲಿ ಸ್ವಲ್ಪವೂ ಔಚಿತ್ಯವು ಕಾಣಿಸುವುದಿಲ್ಲ.

## ಈಶಾವಾಸ್ಯ ಪ್ರಕಾಶಿಕೆ

ಹಿಂದೆ ಮುಕ್ತಿಗೆ ಸಾಧನವು ಬೇರೆ ಒಂದು ಎಂಬುದನ್ನೇ ಇಲ್ಲಿ ಸ್ಪಷ್ಟಪಡಿಸುತ್ತಿದ್ದಾನೆ. **ಸಂಭೂತಿ** – ಸಮಾಧಿ ರೂಪವಾದ ಪರಮಾತ್ಮಾನುಭವ. **ವಿನಾಶ** – ದುರಭಿಮಾನ ಮೊದಲಾದವೂ ಹೊರ ವಿಷಯಗಳಲ್ಲಿ ನಮಗಿರುವಾಸೆಯಿಂದ ಇಂದ್ರಿಯಗಳನ್ನು ಸಡಿಲಗೊಳಿಸಿಕೊಳ್ಳುವುದು ಇವೇ ಮುಂತಾದವೂ ಯೋಗಕ್ಕೆ ವಿರೋಧಿ ಗಳು. ಇವುಗಳ ನಾಶವೆಂದರೆ ಇವುಗಳನ್ನು ಆಚರಿಸದೆ ಇರುವುದಷ್ಟೆ.

ಈ ಸಂಭೂತಿ ವಿನಾಶಗಳೆರಡನ್ನೂ ಜೋಡಿಯಾಗಿ ಆಚರಿಸುವ ಬಗೆಯನ್ನು ಯಾವನು ತಿಳಿದು ಆಚರಿಸ ಬಲ್ಲನೋ ಅವನು ಆ ನಿಷಿದ್ಧಸೇವನೆಗಳ ತ್ಯಾಗದಿಂದ ಸಮಾಧಿಗೆ ಪ್ರತಿಬಂಧಕವಾದ ಪಾಪಗಳನ್ನು ಜಯಿಸಿ ಈ ನಂತರ ಉಂಟಾಗುವ ಸಮಾಧಿಯಿಂದ ಪರಮಾತ್ಮನ ಪ್ರಾಪ್ತಿರೂಪವಾದ ಅದೇ ಸಮಾಧಿಯನ್ನೇ ಪಡೆಯುತ್ತಾನೆ ಎಂದು ಅಭಿಪ್ರಾಯ.

ಇಲ್ಲಿ ಹೇಳಿರುವ ಡಂಭಾಚಾರಾದಿಗಳ ತ್ಯಾಗವನ್ನೇ ಬೃಹದಾರಣ್ಯಕೋಪನಿಷತ್ತಿನಲ್ಲೂ "ಆದುದರಿಂದ ಬ್ರಾಹ್ಮಣನಾದವನು ಪಾಂಡಿತ್ಯವನ್ನು ಚೆನ್ನಾಗಿ ಪಡೆದು, ನಂತರವೂ .ಬಾಲ್ಯದಲ್ಲಿ ಚಿಕ್ಕ ಮಕ್ಕಳು ಹೇಗೆ ಕಪಟವರಿ- ಯದೆನಿಷ್ಕಪಟಿಯಾಗಿರುವುವೋ ಹಾಗೆ ಇರಬೇಕು."[1] ಎಂಬ ಮಾತಿನಲ್ಲಿ 'ಬಾಲ್ಯೇನ' ಎಂಬ ಶಬ್ದದಿಂದ ಉಪಾಸನೆಗೆ ಅಂಗವಾಗಿ ಹೇಳಲಾಗಿದೆ.

ಇಲ್ಲಿ ಸಂಭೂತಿ ಎಂದರೆ ಸೃಷ್ಟಿಕರ್ತನಾಗಿ ಪರಮಾತ್ಮನಿಂದ ಸೃಷ್ಟಿಯಾದ ಹಿರಣ್ಯಗರ್ಭನೆಂಬ ಚತು ರ್ಮುಖನನ್ನೂ, ವಿನಾಶ ಎಂದರೆ ವಿಗಡಣೆಯೇನನ್ನೂ ಪಡೆಯದೆ ತನ್ನ ಮೂಲರೂಪದಲ್ಲೇ ಇರುವ ಪ್ರಕೃತಿ-

1. 'ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್'. ಬೃ. ೩. ೫. ೧.

ಯನ್ನೂ ಉಪಾಸನೆ ಮಾಡಲು ಹೇಳಿ ಕೊಡಲಾಗುತ್ತದೆ ಎಂದು ಕೆಲವರ ವಿವರಣೆ. ಆದರೆ ಈ ವಿಧವಾದ ಉಪಾಸನೆಗಳಿಂದ ಮೃತ್ಯುವನ್ನು ಜಯಿಸುವುದಾಗಲಿ ಅಮೃತತ್ತ್ವವನ್ನು ಪಡೆಯುವುದಾಗಲಿ ಸಾಧ್ಯವಿಲ್ಲವಾದುದರಿಂದ ಈ ಅಂಶದಲ್ಲಿ ಔಚಿತ್ಯವು ಕಂಡು ಬರುವುದಿಲ್ಲ.

## ಪದಾರ್ಥ ದೀಪಿಕೆ

**ಅಸಂಭೂತಿ** – ಬ್ರಹ್ಮಾನುಭವ.

## ಸುಬೋಧಿನೀ

### ಪದವಿವರಣೆ

**ಸಂಭೂತಿಂ** – 'ಅಸಂಭೂತಿಂ' ಎಂದು ಇಲ್ಲಿ ಇಟ್ಟುಕೊಳ್ಳಬೇಕು. ಉಪನಿಷತ್ತಿನಲ್ಲಿ 'ಅ' ಕಾರವನ್ನು ಬಿಟ್ಟು ಪಠಿಸಲಾಗಿದೆಯಷ್ಟೆ. ಅಸಂಭೂತಿ ಎಂದರೆ ಆತ್ಮೋಪಾಸನೆ, ಜ್ಞಾನ ಎಂದು ಭಾವ.

**ವಿನಾಶಂ** – ಹುಟ್ಟುವ ವಸ್ತುವಿಗಲ್ಲವೆ ವಿನಾಶವು. ಆದುದರಿಂದ ನಾವು ಉತ್ಪಾದಿಸುವ ಕರ್ಮಗಳನ್ನೇ ಇಲ್ಲಿ ವಿನಾಶವಾಗುವ ವಸ್ತುಗಳೆಂಬ ಅರ್ಥದಲ್ಲಿ 'ವಿನಾಶ' ಎಂದು ಕರೆಯಲಾಗಿದೆ.

**ಉಭಯಂ, ಸಹ, ವೇದ** – ಈ ಎರಡನ್ನೂ ಅಂಗಾಂಗಿಭಾವದಿಂದ ಯಾವನು ತಿಳಿಯುವನೋ.

**ಅಥವಾ**

**ಸಂಭೂತಿಂ** – ಪರಮಾತ್ಮಲಾಭವೆಂಬ ಫಲಿತಾಂಶದ ಸ್ವರವನ್ನೂ.

**ವಿನಾಶಂ** – ಪ್ರಕೃತಿಸಂಬಂಧದ ಪರಿಪೂರ್ಣ ವಿನಾಶವೆಂಬ ಸ್ವರವನ್ನೂ.

**ಉಭಯಂ, ಸಹ, ವೇದ,** – ಜೊತೆ ಜೊತೆಗೇ ಚಿಂತಿಸಬೇಕೆಂದು ಯಾವನು ತಿಳಿಯುವನೋ.

## ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಮಂತ್ರದ ಸ್ಥಾನಪಲ್ಲಟ

ಈ ಮಂತ್ರವನ್ನು ಮಾಧ್ಯಂದಿನರು ಹನ್ನೊಂದನೆಯ ಮಂತ್ರವನ್ನಾಗಿ ಪಠಿಸುತ್ತಾರೆ.

### ಸಂಭೂತಿ, ವಿನಾಶಗಳು

ಸಂಭೂತಿಯೆಂದರೆ ಹಿಂದೆ ಸಾಮಾನ್ಯವಾಗಿ 'ವಿಗ್ರಹಪರಿಗ್ರಹ' ಎಂದು ಹೇಳಿದುದನ್ನು ಇಲ್ಲಿ ವಿಶೇಷ ರೀತಿಯ 'ದಿವ್ಯವಿಗ್ರಹಪರಿಗ್ರಹ' ಎಂದಿಟ್ಟುಕೊಳ್ಳಬೇಕು[1].

ವಿನಾಶವೆಂದರೆ ಯಾವುದೊಂದರ ನಾಶವೂ ಅಲ್ಲ. ಸಿದ್ಧಾಂತದಲ್ಲಿ ಎಲ್ಲವೂ ಸತ್ಯವಾಗಿದ್ದು ಯಾವುದೊಂದೂ ನಾಶವಾಗುವುದಿಲ್ಲವಾದರೂ, ರೂಪಾಂತರ ಮಾತ್ರ ಎಲ್ಲದಕ್ಕೂ ಉಂಟೆಂದು ಒಪ್ಪಿ, ಅದನ್ನೇ ನಾಶವೆಂದು

---

1. ಸಂದರ್ಭಕ್ಕೆ ಅನುಸಾರವಾಗಿ, ಪ್ರಾಣಿಸಾಮಾನ್ಯವನ್ನು ತಿಳಿಸುವ ಪಶು ಶಬ್ದಕ್ಕೆ ಪ್ರಾಣಿವಿಶೇಷವಾದ ಆಡು ಎಂದು ಅರ್ಥ ಮಾಡುತ್ತಾರೆ. ಇದೇ ಸಾಮಾನ್ಯ ವಿಶೇಷ ನ್ಯಾಯ.

ಕರೆಯಲಾಗುವುದಷ್ಟೆ. ಇದು ಸಕಲ ವೈದಿಕ ಸಮ್ಮತವಾದ ಸತ್ಕಾರ್ಯವಾದದ[1] ನಿರ್ಣಯವಷ್ಟೆ. ಆದುದರಿಂದ ಇಲ್ಲಿ ವಿನಾಶವೆಂದರೆ ಸಾಮಾನ್ಯವಾದ ಭೌತಿಕ ವಿಗ್ರಹಪರಿಗ್ರಹದ ನಿವೃತ್ತಿಯಷ್ಟೆ.

## ಪರಮಾತ್ಮಾನುಭವ

ಪರಮಾತ್ಮನ ಅನುಭವವೆಂದರೆ ಅವನ ಗುಣಗಳನ್ನು ಚೆನ್ನಾಗಿ ಅನುಭವಿಸಿ, ಅವನ ಬಗ್ಗೆ ಪ್ರೀತಿಯು ತಾನಾಗಿ ಹೊಮ್ಮಿಬಂದು, ಆ ಪ್ರೀತಿಯಿಂದ ಮುನ್ನುಗ್ಗಿ, ಅವನ ಎಲ್ಲವಿಧವಾದ ಸೇವೆಯನ್ನೂ ಮಾಡುತ್ತ, ಆ ಸೇವೆಯಿಂದಲೇ ಸರ್ವದಾ ಸಂತೋಷಪಡುತ್ತಿರುವುದು.

## ಸಂಭೂತಿ ವಿನಾಶಗಳ ಅಂಗಾಂಗಿಭಾವ

ಇಂತಹ ಸೇವೆ ಮಾಡಲು ದಿವ್ಯಶರೀರಗಳು ಅವಶ್ಯಕವಷ್ಟೆ. "ಮುಕ್ತಿಗೆ ಸಂದ ಜೀವಾತ್ಮನು ಒಂದಾಗಿ ಮೂರಾಗಿ ಐದಾಗಿ ಆಗುವನು"[2] ಎಂಬ ಕ್ರಮದಲ್ಲಿ ಅವನು ವಿವಿಧ ದಿವ್ಯಶರೀರಗಳನ್ನು ಧರಿಸುವನೆಂದೂ ನಿರ್ಣಯಿಸಲಾಗಿದೆಯಷ್ಟೆ. ಹಾಗೂ ಕರ್ಮಾನುಸಾರ ಬರುವಂತಹ ಭೌತಿಕ ಶರೀರಗಳ ಪೂರ್ಣ ಅಭಾವಸ್ಥಿತಿಯು ಬಂದ ಮೇಲೇ ದಿವ್ಯಶರೀರಗಳು ಬರುವುವು. ಭೌತಿಕ ಶರೀರಗಳ ಪೂರ್ಣ ಅಭಾವಸ್ಥಿತಿಯಲ್ಲೇ ಇದ್ದುಬಿಟ್ಟರೆ ಅದು ಬರಿಯ ಕೈವಲ್ಯವೆನಿಸಿ ಪರಮಾತ್ಮನ ಸೇವಾನುಭವಗಳಿಗೆ ಅವಕಾಶವೇ ಇಲ್ಲದಾಗುವುದು. ಆದುದರಿಂದ ಭೌತಿಕ ಶರೀರದ ನಿವೃತ್ತಿ ಮತ್ತು ದಿವ್ಯಶರೀರದ ಲಾಭ ಈ ಎರಡನ್ನೂ ಅಂಗಾಂಗಿಭಾವದಿಂದ ಚಿಂತನೆ ಮಾಡಬೇಕು.[3]

## ಸಾರಾರ್ಥ

ಒಟ್ಟಿನಲ್ಲಿ ಬರಿಯ ಸಂಭೂತಿಚಿಂತನೆಯಿಂದ ಬರುವ ಲೌಕಿಕ ಸುಖಭೋಗೈಶ್ವರ್ಯಗಳನ್ನೂ, ಬರಿಯ ಅಸಂಭೂತಿಚಿಂತನೆಯಿಂದ ಬರುವ ಕೈವಲ್ಯಸ್ಥಿತಿಯನ್ನೂ ಪರಮಾತ್ಮಾನುಭವವೊಂದೇ ಗುರಿಯಿರುವ ಬ್ರಹ್ಮವಿದ್ಯಾನಿಷ್ಠನು ತ್ಯಜಿಸಲೇಬೇಕು. ಹಾಗೂ ವಿಶೇಷರೀತಿಯಃ ಸಂಭೂತಿಯ ಚಿಂತನೆಗೆ ಅಸಂಭೂತಿಯ ಚಿಂತನೆಯನ್ನೂ ಅಂಗವಾಗಿಸಿಕೊಂಡು ಉಪಾಸನೆಯನ್ನು ಬಲಗೊಳಿಸಿಕೊಳ್ಳಬೇಕು. ಹೀಗಾದರೇನೇ ಸೂಕ್ಷ್ಮಪ್ರಕೃತಿಸಂಬಂಧದ ಸಂಪೂರ್ಣನಾಶವೂ ದಿವ್ಯಶರೀರಲಾಭದಿಂದ ಪರಮಾತ್ಮಾನುಭವಕೈಂಕರ್ಯವೂ ಸಾಧ್ಯವಾಗುವುದು.

---

1. ಎಲ್ಲ ವಸ್ತುಗಳೂ ಯಾವುದಾದರೊಂದು ರೂಪದಲ್ಲಿ ಇದ್ದೇ ಇರುತ್ತವೆ ಎಂಬ ನಿರ್ಣಯ.

2. ಸ ಏಕಧಾ ಭವತಿ, ತ್ರಿಧಾ ಭವತಿ, ಪಂಚಧಾ ಭವತಿ. ಛಾಂ. ೭. ೨೬. ೨.

3. ಶ್ರೀರಂಗಾಚಾರ್ಯರು ಈ ಪ್ರಸಂಗದಲ್ಲಿ ಪೂರ್ವಾಚಾರ್ಯರ ಕೆಲವು ಸೂಕ್ಷ್ಮವಾದ ಮಾತುಗಳನ್ನೇ ಅನುಸರಿಸಿ ತಮ್ಮ ಅಭಿಪ್ರಾಯವನ್ನು ವಿಸ್ತಾರವಾಗಿ ಮಂಡಿಸಿ, ಅದೇ ಪೂರ್ವಾಚಾರ್ಯರ ಸ್ಥೂಲವಾದ ಮಾತುಗಳನ್ನು ಖಂಡಿಸಿ ಬರೆದಿರುತ್ತಾರೆ. ಇಂತಹ ವಾದ ಶೈಲಿಗೇ ಪ್ರಾಶಸ್ತ್ಯಕೊಡುವಂತಹ ವಾದ-ವಿವಾದಗಳ ಯುಗ ಈಗ ಮುಗಿದಿರುವಂತೆ ನಮಗೆ ತೋರುತ್ತದೆ. ಆದುದರಿಂದ ಆ ವಿಚಾರಗಳನ್ನು ನಾವು ಅನವಶ್ಯಕವೆಂದು ಅನುವಾದಿಸಿಲ್ಲ. ಸಿದ್ಧಾಂತದ ನಿರ್ಣೀತ ಅಂಶಗಳಲ್ಲಿ ಯಾವುದೇ ಆಚಾರ್ಯರಿಗೂ ಅಭಿಪ್ರಾಯಭೇದವಿಲ್ಲ. ಇರಲು ಸಾಧ್ಯವೂ ಇಲ್ಲ. ಯಾರೇ ಆಗಲಿ ಅಂತಹ ದೋಷಪೂರಿತವಾದ ಅಭಿಪ್ರಾಯಭೇದಗಳಿಗೇ ಪ್ರಾಶಸ್ತ್ಯಕೊಡಲೂ, ಅವುಗಳ ಖಂಡನ-ಮಂಡನೆಗಳಿಂದ ರಾಗ-ದ್ವೇಷಾದಿಗಳ ಅಭಿವೃದ್ಧಿಯಾಗಲೂ ಅವಕಾಶಕೊಡದೆ, ಸಮಾಧಾನಕರವಾಗಿ ಒಪ್ಪುವಂತಹ ಸಿದ್ಧಾಂತದ ಮಾತುಗಳನ್ನೇ ಆಡುವರೋ, ಅವರೇ ಸಾಧು-ಸಜ್ಜನರು. 'ಸಂಧಿಮಿಚ್ಛಂತಿ ಸಾಧವಃ' 'ಸಮಾದಧತಿ ಸಜ್ಜನಾಃ' ಎಂಬ ನೀತಿ ವಚನಗಳು ಇಲ್ಲಿ ಗಮನಾರ್ಹವಾಗಿವೆ. ಹಾಗೂ ಇಂತಹ ಸಜ್ಜನರ ಆವಶ್ಯಕತೆ ಎಂದಿಗಿಂತಲೂ ಇಂದು ಹೆಚ್ಚಾಗಿದೆ. ಅಂತಹವರನ್ನು ಅನುಸರಿಸುವುದು ನಮ್ಮೆಲ್ಲರಿಗೂ ಹಿತ.

# ಈಶಾವಾಸ್ಯೋಪನಿಷತ್

## ಮಂತ್ರ ಹದಿನೈದು

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ ।**

**ತತ್ ತ್ವಂ ಪೂಷನ್! ಅಪಾವೃಣು ಸತ್ಯಧರ್ಮಾಯ ದೃಷ್ಟಯೇ ॥೧೫॥**

### ಅನ್ವಯಾನುಸಾರ ಪ್ರತಿಪದಾರ್ಥ

ಸತ್ಯಸ್ಯ - ಸತ್ಯಶಬ್ದದ ಅರ್ಥವಾದ ಪರಿಶುದ್ಧಜೀವಾತ್ಮನ; ಮುಖಂ - ಪ್ರಧಾನ ಇಂದ್ರಿಯವಾದ ಮನಸ್ಸು; ಹಿರಣ್ಮಯೇನ- ಚಿನ್ನದಂತೆ ರಾಗರಂಜಿತವಾದ, ರಜೋಗುಣ ತಮೋಗುಣಮಯವಾದ; ಪಾತ್ರೇಣ - ಭೌತಿಕ ಭೋಗ್ಯಪದಾರ್ಥರೂಪವಾದ ಮುಚ್ಚಳದಿಂದ; ಅಪಿಹಿತಂ - ಮುಚ್ಚಲ್ಪಟ್ಟಿರುವುದು; ಪೂಷನ್ - ಎಲೈ! ಸೂರ್ಯಮಂಡಲದೊಳಿರುವ ಪರಮಾತ್ಮನೇ !; ತ್ವಂ - ನೀನೇ; ತತ್ - ಆ ಮುಚ್ಚಳವನ್ನು; ಸತ್ಯಧರ್ಮಾಯ - ಪರಿಶುದ್ಧ ಜೀವಾತ್ಮನ ಸ್ವಭಾವವಾದ; ದೃಷ್ಟಯೇ - ಜ್ಞಾನವಿಕಾಸ ರೂಪವಾದ ಪ್ರಕಾಶದ ದರ್ಶನಕ್ಕಾಗಿ ; ಅಪಾವೃಣು - ತೆರೆ.

### ಅಥವಾ

ಸತ್ಯಸ್ಯ - ಸತ್ಯಸ್ವರೂಪವಾದ ಪರಮಾತ್ಮನನ್ನು; ಮುಖಂ - ಪಡೆಯಲು ಮುಖ್ಯದ್ವಾರವಾದ ಜ್ಞಾನವಿಕಾಸವು; ಹಿರಣ್ಮಯೇನ - ಚಿನ್ನದಂತೆ ಭೋಗ್ಯವೆಂದು ತಿಳಿದಿರುವ; ಪಾತ್ರೇಣ - ಭೋಗಕ್ಕೆ ಆಸರೆಯಾದ ಶರೀರ ಇಂದ್ರಿಯಾದಿಗಳಿಂದ; ಅಪಿಹಿತಂ - ಮುಚ್ಚಲ್ಪಟ್ಟಿದೆ; ಪೂಷನ್- ಎಲೈ ! ಸೂರ್ಯಮಂಡಲದೊಳಿರುವ ಪರಮಾತ್ಮನೇ!; ತ್ವಂ - ನೀನೇ; ತತ್ - ಆ ಮುಚ್ಚಳವನ್ನು ; ಸತ್ಯಧರ್ಮಾಯ - ಸತ್ಯವಾದ ನಿನ್ನ ಸ್ವರೂಪರೂಪಾದಿಗಳ; ದೃಷ್ಟಯೇ - ದರ್ಶನವಾಗುವುದಕ್ಕಾಗಿ ; ಅಪಾವೃಣು - ತೆರೆ.

### ಛಾಯಾಪದ್ಯ

ಚಿಂಬೊನ್ನಿನಾ ಪಾತ್ರದಿಂದೆ ಸತ್ಯದಾ ಮುಖ ಮುಚ್ಚಿದೆ.

ಅದ ನೀ ತೆರೆಯೈ ಪೂಷನ್ ! ಸತ್ಯಧರ್ಮವ ದರ್ಶಿಸಲ್.

## ತಾತ್ಪರ್ಯಾರ್ಥ

### ಪ್ರಾರ್ಥನೆ

ಬ್ರಹ್ಮಾನುಭವಯೋಗಗಳಲ್ಲಿ ಸಿದ್ಧಿಪಡೆದ ಮುಮುಕ್ಷು ತನ್ನ ಶರೀರ ಕಳೆಯುವವರೆಗೂ ತನ್ನ ಜೀವಿತ ಕಾಲದಲ್ಲಿ ಕರ್ಮಯೋಗ ಜ್ಞಾನಯೋಗಗಳನ್ನು ಮಾಡುತ್ತಾ ತನ್ನ ಮನದಿಷ್ಟ ಕೊಡುವವನು ಪರಬ್ರಹ್ಮನೆಂದೇ ಭಾವಿಸಿ, ಆತನನ್ನು ಪ್ರಾರ್ಥಿಸುತ್ತಾನೆ. ಉಪನಿಷತ್ತುಗಳ ಅರ್ಥವನ್ನು ವಿವರವಾಗಿ ವಿವರಿಸುವ ಗೀತೆ ಮೊದಲಾದುವು, ಪರಮಾತ್ಮನೇ ಉಪಾಯವೆಂದೂ ಆತನ ಅನುಗ್ರಹವಿಲ್ಲದೆ ಪರಮಾತ್ಮನನ್ನು ಪಡೆಯಲಾಗದೆಂದೂ ತಿಳಿಸುತ್ತವೆ. ಆದುದರಿಂದ ಮುಮುಕ್ಷುವು ಪರಬ್ರಹ್ಮನನ್ನು ಕಳಕಳಿಯಿಂದ ಪ್ರಾರ್ಥಿಸುತ್ತಾನೆ.

ಆಶ್ರಯಿಸಿದವರೆಲ್ಲರನ್ನೂ ರಕ್ಷಿಸುವವನೇ ಪೂಷನ್. ಪೂಷನು ತನ್ನನ್ನು ಆಶ್ರಯಿಸಿದವರ ಗುಣಸ್ವಭಾವಗಳನ್ನೂ, ಜಾತಿಕುಲಗಳನ್ನೂ ಎಣಿಸದೆ ಎಲ್ಲರನ್ನೂ ಪರಿಪಾಲಿಸುವನು.

ಸಹಸ್ರನಾಮಗಳಿಂದ ಕೊಂಡಾಡಿದ ವಿಷ್ಣುವೇ! ನಿನ್ನನ್ನು ಪೂಷನ್ ಎಂದೂ ಕರೆಯುವರು. ಅಂತಹ ಹೆಸರುಳ್ಳ ನೀನು ಹೆಸರಿಗೆ ತಕ್ಕಂತೆ ಆಶ್ರಿತರ ದುಃಖವನ್ನು ಪರಿಹರಿಸಿದ್ದೀಯೆ. ಪರಿಹರಿಸುತ್ತಲೂ ಇರುವೆ. ಪ್ರಭು ! ನನ್ನಲಿ ಏಕೆ ನಿನಗೆ ಔದಾಸೀನ್ಯ? ನನ್ನನ್ನು ರಕ್ಷಿಸು.

ನಾನು ನಿನ್ನ ದರ್ಶನ ಪಡೆಯಬೇಕೆಂದು ಬಹಳ ಕಾಲದಿಂದ ಹಂಬಲಿಸುತ್ತಾ ಇದ್ದೇನೆ. ಪ್ರಯತ್ನಗಳನ್ನೂ ಮಾಡುತ್ತಲಿದ್ದೇನೆ. ನನ್ನ ಪ್ರಯತ್ನಗಳೆಲ್ಲವೂ ವ್ಯರ್ಥವಾಗಿವೆ.

ನನ್ನ ಮನಸ್ಸು ನಿನ್ನನ್ನು ನೋಡಬೇಕೆಂದು ಹಂಬಲಿಸಿದರೂ ಐಹಿಕ ಭೋಗಗಳು ನನ್ನನ್ನು ಒರಸೆಳೆದು ನಶ್ವರವಾದ ಆಸೆಯಲ್ಲಿ ಸಿಲುಕಿಸುತ್ತಿವೆ. ನಿನ್ನನ್ನು ಕಾಣದಂತೆ ಮಾಡಿವೆ. ನನ್ನ ಮನಸ್ಸನ್ನು ಆವರಿಸಿರುವ ಸುಖ ಭೋಗವೆಂಬ ಚಿನ್ನದ ಪಾತ್ರೆಯನ್ನು ದೂರಸರಿಸು. ನಿನ್ನ ಅನುಗ್ರಹವಿಂದಲೇ ಮನಸ್ಸನ್ನು ಜಯಿಸಬಲ್ಲೆನು. ಪ್ರಭುವೇ! ನೀನೇ ನನ್ನ ಮನಸ್ಸನ್ನು ನಿನ್ನೆಡೆಗೆ ತಿರುಗಿಸಿಕೋ.

ನೀನು ಆಶ್ರಿತವತ್ಸಲ, ದಯಾಸಾಗರ, ಎಂಬ ಬಿರುದು ಹೊತ್ತವನು. ಪ್ರಭು! ನಿನ್ನ ಬಿರುದನ್ನು ಉಳಿಸಿಕೊಳ್ಳುವುದಕ್ಕಾದರೂ ಸ್ವರ್ಣ ಪಾತ್ರೆಯನ್ನು ದೂರಸರಿಸು. ನನ್ನ ಮನಸ್ಸು ನಿನ್ನಲ್ಲಿ ನೆಲೆಗೊಳ್ಳುವಂತೆ ಮಾಡು ಎಂದು ಪ್ರಾರ್ಥಿಸುತ್ತಾನೆ.

ಪರಮಾತ್ಮನ ಅನುಗ್ರಹವಿಲ್ಲದೆ ಮನಸ್ಸನ್ನು ಜಯಿಸಲಾರೆವು ಎಂದರ್ಥ.

## ವೇದಾಂತಾಚಾರ್ಯಭಾಷ್ಯ

### ಪ್ರಾರ್ಥನಾ ಮಂತ್ರಗಳು

ಹೀಗೆ ತನ್ನ ಫಲಿತಾಂಶದ ಗುರಿ ಮುಟ್ಟುವವರೆಗೆ ಸಾಂಗವಾಗಿ ಬ್ರಹ್ಮವಿದ್ಯೆಯನ್ನು ನಿಷ್ಠೆಯಿಂದ ಆಚರಿಸುವವನಿಗೆ ನಿತ್ಯವೂ ಹೇಳಿಕೊಂಡು ಚಿಂತನಮಾಡಬೇಕಾದ ನಾಲ್ಕು ಮಂತ್ರಗಳನ್ನು ಈ ನಂತರ ಹೇಳಿಕೊಡಲಾಗುತ್ತಿದೆ.

**ದೇವರು ಅಂದರೆ ಪರಮಾತ್ಮ ಒಬ್ಬನೇ,**

**ಬೇರೆ ಬೇರೆ ದೇವತೆಗಳ ಹೆಸರೆಲ್ಲವೂ ಮುಖ್ಯವಾಗಿ ಪರಮಾತ್ಮನದೇ.**

ಅವುಗಳಲ್ಲಿಯೂ 'ಪೂಷನ್' (ಅಂದರೆ ಸೂರ್ಯ) ಇವೇ ಮುಂತಾದ ಇಂತಹ ಎಲ್ಲ ಪದಗಳೂ, ಮುಖ್ಯಾರ್ಥವಾದ ಪರಮಾತ್ಮನನ್ನೇ ತಿಳಿದು ಚಿಂತನ ಮಾಡುತ್ತಿರುವವರಿಗೆ ಸೂರ್ಯ ಮುಂತಾದ ಆಯಾ ದೇವತೆಗಳ ಮೂಲಕವಾಗಿ ಆಗಲಿ, ನೇರವಾಗಿಯೇ ಆಗಲಿ ಎಲ್ಲರೊಳಗಿರುವ ಪರಮಾತ್ಮನವರೆಗೂ ಅರ್ಥವನ್ನು ಕೊಡುತ್ತವೆ. ಹಾಗೆ ಒಪ್ಪಿದರೇನೇ ಇಲ್ಲಿ 'ಯಮ, ಸೂರ್ಯ' ಮುಂತಾದ ಪದಗಳಿಗೆಲ್ಲ ಈ ರೀತಿ ಪರಮಾತ್ಮನೆಂಬ ಒಂದೇ ವಸ್ತು ಅರ್ಥ ಎಂಬ ಸ್ವಾರಸ್ಯವಾದ ಹೊಂದಾಣಿಕೆಯಾಗುವುದಲ್ಲವೆ!

### ಭಾವಾರ್ಥ

ಆ ಪ್ರಾರ್ಥನಾ ಮಂತ್ರಗಳ ಮಧ್ಯೆ ಈ ಮೊದಲ ಮಂತ್ರದಲ್ಲಿ ತನ್ನನ್ನು ಆಶ್ರಯಿಸಿದವರಿಗೆ ಎಲ್ಲ ವಿಧವಾದ ಪೋಷಣೆ ಸಹಾಯಗಳನ್ನೂ ಮಾಡುವವನು ಎಂಬ ಅರ್ಥವಿರುವ 'ಪೂಷನ್' ಎಂಬ ಪದದ ಸೂಚನೆಯಂತೆ ಪರಮಾತ್ಮನನ್ನು ಕುರಿತು ಈಗ ಆಗಬೇಕಾಗಿರುವ ಸಮಾಧಿಯ ಅಡ್ಡಿ ಆತಂಕಗಳ ನಿವಾರಣೆಯನ್ನೇ ಬೇಡಿಕೊಳ್ಳುತ್ತಿದಾನೆ. "ಹಿರಣ್ಮಯೇನ ............ ದೃಷ್ಟಯೇ" ಎಂದು.

**ಇಲ್ಲಿ 'ಸತ್ಯ' ಎಂದರೆ ಜೀವಾತ್ಮ.**

ಸತ್ಯ ಎಂಬ ಶಬ್ದ ಇಲ್ಲಿ ಜೀವಾತ್ಮ ಎಂಬ ಅರ್ಥದಲ್ಲಿದೆ.

ಇದಕ್ಕೆ:–

"ಅದು (ಬ್ರಹ್ಮ) ಪಾರಮಾರ್ಥಿಕವಾಗಿ ಸತ್ಯವಾಗಿಯೂ, ಅನೃತವಾಗಿಯೂ, ಸತ್ಯವೇ ಹುಟ್ಟಿತು"[1] "ನಂತರ ಹೆಸರು. ಸತ್ಯದ ಸತ್ಯ. ಪ್ರಾಣಗಳೇ ಸತ್ಯ. ಅವುಗಳಿಗೂ ಇವನು ಸತ್ಯ."[2]

ಇವೇ ಮುಂತಾದ ಉಪನಿಷತ್ತುಗಳ ವಚನದಲ್ಲಿ ಸತ್ಯ ಶಬ ವನ್ನು ಜೀವಾತ್ಮನ ಬಗ್ಗೆಯೂ ಪ್ರಯೋಗಿಸಲಾಗಿರುವುದೇ ಕಾರಣ.

## ಪರಮಾತ್ಮ ತಿಳಿಯದಿರಲು ಕಾರಣವೇನು?

ಅಂತಹ ಜೀವಾತ್ಮ ತತ್ತ್ವದ ಮುಖಂ – ಕಣ್ಣು, ಕಿವಿ ಮುಂತಾದ ಅನೇಕ ಇಂದ್ರಿಯಗಳಿಗೆ ಪ್ರೇರಕವಾಗಿ ಆಸರೆಯಾಗಿರುವುದರಿಂದ, ಮುಖ ಎಂದರೆ ಮುಖದಂತೆ ಮುಖ್ಯ ಎನ್ನಬಹುದಾದ ಮನಸ್ಸು.

**ಹಿರಣ್ಮಯೇನ, ಪಾತ್ರೇಣ, ಅಪಿಹಿತಂ** – ಆಸೆಯಾಗುವಂತಹ ಒಳ್ಳೆಯ ಬಣ್ಣದ ಚಿನ್ನದ ಪದಾರ್ಥಗಳಂತೆಯೇ ಆಕರ್ಷಕವಾದ ವಿವಿಧ ಬಯಕೆಗಳ ರೂಪದಲ್ಲಿರುವ ಈ ಪ್ರಕೃತಿಯು 'ರಜಸ್' ಎಂಬ ಗುಣವು ಪರಮಾತ್ಮನ ಬಗ್ಗೆ ನಮ್ಮ ಮನಸ್ಸು ಪ್ರಯತ್ನ ಶೀಲವಾಗುವುದಕ್ಕೆ ಅಡ್ಡಿಯಾಗಿ ನಿಂತು, ಮನಸ್ಸನ್ನೇ ಮುಚ್ಚಳದಿಂದ ಮುಚ್ಚುವಂತೆ ಮುಚ್ಚಿ ಬಿಡುತ್ತದೆ. ಹಾಗೇ ಈಗಲೂ ಆಗಿದೆ.

ಒಳಗೆ ಪರಮಾತ್ಮನೇ ಇದ್ದರೂ ಅವನನ್ನು ತಿಳಿಯಲಾಗದಂತ ಮನಸ್ಸನ್ನು ನಮ್ಮ ಬೇರೆ ಬೇರೆ ಬಯಕೆಗಳು ತಡೆ ಹಿಡಿದಿವೆ ಎಂದರ್ಥ.

## ಹೆಚ್ಚಿನ ಅರ್ಥಗಳ ಸೂಚನೆ

ಇಲ್ಲಿ 'ರಜಸ್' ಎಂದು ನಮ್ಮ ಬಯಕೆ, ಸುಖ, ಸಂತೋಷ, ಮುಂತಾದವನ್ನು ಹೇಳಿರುವುದು, "ತಮಸ್" ಎಂಬ ಕೋಪ, ನೋವು, ದುಃಖ ಮುಂತಾದವನ್ನೂ ಸೂಚಿಸುತ್ತದೆ.

ಒಳ್ಳೆಯ ಬಣ್ಣದ ಚಿನ್ನದಂತಿರುವ ಎಂಬ ಶಬ್ದವೂ, ನಮ್ಮ ನಮ್ಮ ಪುಣ್ಯ ಪಾಪ ಕರ್ಮಾನುಸಾರವಾಗಿ ನಮಗೆ ಸಿಗುವ ಭೋಗವಸ್ತುಗಳೆಲ್ಲವನ್ನೂ ಸೂಚಿಸುತ್ತದೆ.

## ಪದವಿವರಣೆ

**ತತ್** _ ಜೀವಾತ್ಮನಿಗೆ ಮುಖದಂತೆ ಮುಖ್ಯವಾಗಿರುವ ಆ ಮನಸ್ಸನ್ನು.

**ಪೂಷನ್** _ ತನ್ನ ನಂಬಿದವರನ್ನು ಕಾಪಾಡುವ ಶಕ್ತಿಯನ್ನೂ ಸ್ವಭಾವವನ್ನೂ ಪಡೆದಿರುವವನೇ!

**ಅಪಾವೃಣು** _ ಮುಚ್ಚಳ ತೆಗೆದಿರಿಸು. ಏಕೆ? ಎಂದರೆ :–

**ಸತ್ಯಧರ್ಮಾಯ,** – ಸತ್ಯದ ಎಂದರೆ ಜೀವಾತ್ಮನ, ಧರ್ಮಾಯ ಎಂದರೆ ಆಸರೆಯಲ್ಲೇ ಇರುವ ಹಾಗೂ ಸ್ವಭಾವವಾದ.

**ದೃಷ್ಟಯೇ** – ಹಿಂದೆ ಹೇಳಿದ ಪರಮಾತ್ಮನ ಅನುದರ್ಶನ ರೂಪವಾದ ಅನುಭವ ಉಂಟಾಗುವುದಕ್ಕಾಗಿ.

---

1. ಸತ್ಯಂ ಚಾನೃತಂಚ ಸತ್ಯಮಭವತ್ ತೈ. ಆನ. ೬. ೩.
2. ಅಥ ನಾಮಧೇಯಂ ಸತ್ಯಸ್ಯ ಸತ್ಯಂ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮ್. ಬೃ. ೪. ೩. ೬.

# ಈಶಾವಾಸ್ಯ ಪ್ರಕಾಶಿಕೆ

## ಹದಿನೈದು ಹದಿನಾರನೆಯ ಮಂತ್ರಗಳ ಅವತಾರಿಕೆ

ಹೀಗೆ ಈವರೆಗೆ ಆಚಾರ್ಯನೊಬ್ಬನು ಸಾಂಗವಾಗಿ ಭಕ್ತಿಯೋಗವನ್ನು ಉಪದೇಶಿಸಿ, ಈನಂತರ ಭಕ್ತಿ ಯೋಗದಲ್ಲಿ ದೃಢವಾಗಿ ನಿಷ್ಠೆಯಿಂದಿರುವವನಿಗೆ ಸರ್ವದಾ ಹೇಳಿಕೊಂಡಿರಬೇಕಾದ ಎರಡು ಮಂತ್ರಗಳನ್ನು ಉಪ ದೇಶಿಸುತ್ತಾನೆ.

### ಪೂಷನ್ ಶಬ್ದದ ಒಳ ಅರ್ಥ

**ಪೂಷನ್** – ಎಲೈ ಸೂರ್ಯನ ಅಂತರಾತ್ಮನಾದವನೇ!

ಈ ಬಗ್ಗೆ "ಯಾವನು ಸೂರ್ಯನಲ್ಲೂ ಇರುತ್ತಾ" ಎಂದು ಆರಂಭಿಸಿ "ಸೂರ್ಯನನ್ನು ಒಳಹೊಕ್ಕು ಅಂತರ್ಯಾಮಿಯಾಗಿದ್ದು ಅವನಿಂದ ಎಲ್ಲವನ್ನೂ ಮಾಡಿಸುತ್ತಿರುವನೋ![1]" ಎಂದು ವೇದವೇ ಹೇಳುತ್ತದೆ.

ಹಾಗೂ "ಶಾಸ್ತ್ರವಾದ ವೇದದಲ್ಲಿ ಹೇಳಿರುವಂತೆ, ಉಪದೇಶಿಸಲಾಗುತ್ತಿದೆ, ಏನೆಂದರೆ – ವಾಮದೇವ ಋಷಿಯಂತೆ"[2] ಎಂದು ನ್ಯಾಯವಾಕ್ಯವೂ ಇದೆ.

### ಅಥವಾ

**ಪೂಷನ್** – ಪೋಷಣ ಮಾಡುವವನು, ಆಶ್ರಿತರನ್ನು ಪೋಷಿಸುವವನು ಎಂದರ್ಥ. ಇದು ಪರಮಾತ್ಮನ ಸ್ವಭಾವ. (ಸೂರ್ಯನ ಮೂಲಕ, ಅವನ ಅಂತರ್ಯಾಮಿ ಪರಮಾತ್ಮ ಎಂದು ಬಳಸಿ ಅರ್ಥ ಹೇಳುವುದಕ್ಕಿಂತ) "ನೇರವಾಗಿಯೇ ಪರಮಾತ್ಮನೆಂದು ಅರ್ಥ ಹೇಳಿದರೂ ಏನೂ ವಿರೋಧವಿಲ್ಲ ಎಂದು ಜೈಮಿನಿ ಹೇಳಿರುವರೆಂದು"[3] (ವ್ಯಾಸರೇ) ಬ್ರಹ್ಮಸೂತ್ರಗಳಲ್ಲಿ ತಿಳಿಸಿರುತ್ತಾರಲ್ಲವೆ?

### ಸತ್ಯ ಎಂದರೆ ಜೀವಾತ್ಮ

ಪ್ರಕೃತಿಗೆ ಸ್ವರೂಪವೇ ವ್ಯತ್ಯಾಸವಾಗುವಂತೆ ಈ ಜೀವನಿಗೆ ವ್ಯತ್ಯಾಸವಾಗುವುದಿಲ್ಲ ಎಂಬರ್ಥದಲ್ಲಿ ಜೀವಾತ್ಮನನ್ನು 'ಸತ್ಯ' ಎಂದು ಕರೆಯಲಾಗಿದೆ.

### ಹಿರಣ್ಮಯ ಪಾತ್ರ ಯಾವುದು?

ಹಿರಣ್ಮಯ ಎಂದರೆ ಇಲ್ಲಿ ನಮ್ಮ ನಮ್ಮ ಕರ್ಮಾನುಸಾರವಾಗಿ ನಾವು ನಮಗೆ ಇಷ್ಟವಾಗಿ ಅನುಭೋಗಿಸುತ್ತಿರುವ ಎಲ್ಲ ವಸ್ತುಗಳೂ ಎಂದು ಭಾವಾರ್ಥ.

---

1. 'ಯ ಆದಿತ್ಯೇ ತಿಷ್ಠನ್' ಇತ್ಯಾರಭ್ಯ 'ಯ ಆದಿತ್ಯಮಂತರೋ ಯಮಯತಿ' ಬೃ. ೫. ೭. ೩.

2. ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್. ಬ್ರ. ಸೂ. ೧ ೧. ೩೦.
ಅಂದರೆ ವಾಮದೇವ ಋಷಿಯು ತನ್ನ ಹಾಗೂ ಸೂರ್ಯನ ಅಂತರ್ಯಾಮಿಯೂ ಪರಮಾತ್ಮನೇ ಆದುದರಿಂದ ''ನಾನೇ ಸೂರ್ಯ'' ಎಂದು ಹೇಳಿಕೊಂಡಿದ್ದಾನೆ. ಇಲ್ಲಿ ಶರೀರದ ಹೆಸರು ಪರಮಾತ್ಮನಿಗೂ ಸಲ್ಲುವುದು ಎಂಬ ಅಂಶವನ್ನು ಪ್ರಕೃತಕ್ಕೆ ಉಪಯೋಗಿಸಿಕೊಂಡು, ಪೂಷನ್ ಎಂದರೆ ಸೂರ್ಯನ ಅಂತರ್ಯಾಮಿ ಪರಮಾತ್ಮ ಎಂದು ಅರ್ಥ ಮಾಡಬೇಕು ಎಂದು ಅಭಿಪ್ರಾಯ.

3. ಸಾಕ್ಷಾದಪ್ಯವಿರೋಧಂ ಜೈಮಿನಿಃ. ಬ್ರ. ಸೂ. ೧, ೨. ೨೮.

ತ್ವಂ – ನೀನು ಎಂದರೆ ಇಲ್ಲಿ ಎಲ್ಲ ಜೀವಾತ್ಮಗಳ ಇಂದ್ರಿಯಗಳನ್ನೂ ತನ್ನ ಹತೋಟಿಯಲ್ಲಿಟ್ಟುಕೊಂಡಿರುವುದರಿಂದ "ಹೃಷೀಕೇಶ" ಎಂದು ಹೆಸರಾಂತವನು ಎಂಬುದು ಸೂಚ್ಯವಾದ ಭಾವಾರ್ಥ.

ದೃಷ್ಟಯೇ – ದೃಷ್ಟಿ ಎಂದರೆ ದರ್ಶನ. ಪರಮಾತ್ಮನಾದ ನಿನ್ನ ದರ್ಶನಕ್ಕಾಗಿ ಎಂದರ್ಥ.

## ಪದಾರ್ಥ ದೀಪಿಕೆ

(ಅವತಾರಿಕೆಯು ಪ್ರಕಾಶಿಕೆಯಲ್ಲಿರುವಂತೆಯೇ ಇದೆ)

ಸತ್ಯಧರ್ಮಾಯ – ಜೀವಾತ್ಮನ ಧರ್ಮಭೂತಜ್ಞಾನದ ಪ್ರಸಾರಕ್ಕೂ.

ದೃಷ್ಟಯೇ – ಪರಮಾತ್ಮನ ದರ್ಶನಕ್ಕೂ.

## ಸುಬೋಧಿನೀ

### ಪ್ರಾರ್ಥನೆ ಶರಣಾಗತಿ

ಈ ಮಂತ್ರದಲ್ಲಿ ಉಪಾಸನೆಯು ಸಿದ್ಧಿಸಲು ಅವಶ್ಯಕವಾದ ಪ್ರಾರ್ಥನೆಯ ರೀತಿಯನ್ನು ತಿಳಿಸಲಾಗುತ್ತದೆ. ಪ್ರಾರ್ಥನೆಯೊಂದೇ ಉಪಾಸನೆಗೆ ಮುಖ್ಯ ಸಲಕರಣೆ. ಪರಮಾತ್ಮನು ನಮ್ಮ ಪ್ರಾರ್ಥನೆಗೆ ವಶನಾಗದಿದ್ದರೆ ನಾವು ಕರ್ಮಯೋಗ ಮುಂತಾದುವನ್ನು ಸಹ ನೆರವೇರಿಸಲಾಗುವುದಿಲ್ಲ. ಆದುದರಿಂದಲೇ ಆಧ್ಯಾತ್ಮಿಕ ಸಾಧನಮಾರ್ಗದಲ್ಲಿ ನಾವು ವಶಪಡಿಸಿಕೊಳ್ಳಬೇಕಾದ ವಿಷಯಗಳನ್ನು ಇಂದ್ರಿಯ, ಮನಸ್ಸು, ಬುದ್ಧಿ, ಆತ್ಮಮಹತ್, ಅವ್ಯಕ್ತ, ಪುರುಷ, ಎಂದು ಕ್ರಮವಾಗಿ ತಿಳಿಸುತ್ತಾ ಉಪನಿಷತ್ತು ಪರಮಪುರುಷನಾದ ಪರಮಾತ್ಮನನ್ನೇ ಅವೆಲ್ಲದರಲ್ಲೂ ಮುಖ್ಯ ಎಂದಿದೆ.[1] ಪರಮಾತ್ಮನು ಪ್ರಸನ್ನನಾಗದೆ, ನಾವು ನೂರಾರು ರೀತಿ ಸಾವಿರಾರು ಬಾರಿ ಪ್ರಯತ್ನಿಸಿದರೂ ಸಹ ನಮ್ಮ ಮನಸ್ಸಿನ ನೈರ್ಮಲ್ಯ ಮುಂತಾದ ಏನೊಂದೂ ಸಿದ್ಧಿಸದು. ಇದನ್ನೇ ಗೀತೆಯಲ್ಲೂ "ನನಗೆ ಶರಣಾಗತರಾದವರು ಮಾತ್ರ ನನ್ನ ಮಾಯೆಯನ್ನು ದಾಟಬಲ್ಲರು[2]" ಎಂದು ಹೇಳಲಾಗಿದೆ.

### ಪದವಿವರಣೆ

ಸತ್ಯ – ಎಂದರೆ ಇಲ್ಲಿ ಜೀವಾತ್ಮ ಅಥವಾ ಪರಮಾತ್ಮ ಅಥವಾ ಎರಡೂ ಎಂದಿಟ್ಟುಕೊಳ್ಳಬಹುದು.

ಮುಖ – ಎಂದರೆ ಬಾಗಿಲು, ಪ್ರವೇಶಸ್ಥಾನ, ಪ್ರಸರಣಮಾರ್ಗ ಎಂದರ್ಥ. ಆತ್ಮಸ್ವರೂಪವನ್ನು ಮನಸ್ಸಿನ ಮೂಲಕ ಗ್ರಹಿಸಬಹುದಾದುದರಿಂದ[3] ಮನಸ್ಸನ್ನು ಇಲ್ಲಿ ಮುಖ ಎನ್ನಲಾಗಿದೆ.

---

1. ಇಂದ್ರಿಯಾಣಿ ಪರಾಣ್ಯಾಹುಃ ಇಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ ॥
ಮಹತಃ ಪರಮವ್ಯಕ್ತಂ ಅವ್ಯಕ್ತಾತ್ ಪುರುಷಃ ಪರಃ ।
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥
ಕಠ. ೧. ೩. ೧೦; ೧೧.

2. ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರನ್ತಿ ತೇ ॥
ಗೀ. ೭. ೧೪.

3. ೫೧ ನೇ ಪುಟದ ಟಿಪ್ಪಣಿ ಗಮನಿಸಿ.

ಆತ್ಮಸ್ವರೂಪವು ಮನಸ್ಸಿಗೆ ಕಾಣದೆ ಮರೆಯಾಗುವಂತೆ ಮನಸ್ಸನ್ನು ಬೇರೆಡೆಗೆ ಆಕರ್ಷಿಸುವ ಶಬ್ದ - ಸ್ಪರ್ಶಾದಿ ವಿಷಯಗಳನ್ನು ಇಲ್ಲಿ ಚಿನ್ನದ ಪಾತ್ರೆ ಎನ್ನಲಾಗಿದೆ.

### ತಾತ್ಪರ್ಯಾರ್ಥ

ಇಂದ್ರಿಯಗಳು ನಮ್ಮ ಮನಸ್ಸನ್ನು ಬಲಾತ್ಕಾರದಿಂದ ಅಪಹರಿಸಿ ಎತ್ತಲೋ ಕೊಂಡೊಯ್ಯುವುವು. ನಾವೇನು ಮಾಡಲೂ ಸಾಧ್ಯವಿಲ್ಲ. ಎಲೈ ದೇವರೇ! ಸರ್ವರಕ್ಷಕನಾದ ನೀನೇ ನಮ್ಮನ್ನು ಈ ತೊಂದರೆಯಿಂದ ಪಾರುಮಾಡು ಎಂದು ಇಲ್ಲಿ ಪ್ರಾರ್ಥಿಸಲಾಗುತ್ತಿದೆಯಷ್ಟೆ.

### ಪ್ರಾರ್ಥನೆಯ ಮುಖ್ಯಗುರಿ

ಮನಸ್ಸು ವಿವಿಧ ವಿಷಯಗಳ ಸಂಪರ್ಕಾಭ್ಯಾಸದಿಂದ ದೋಷಪೂರಿತವಾಗಿದೆಯಾಗಿ, ಆ ವಿಷಯವಾಸನೆಯನ್ನು ಕಳಚಿದರೆ ಸಾಕು. ಮನಸ್ಸು ನಿರ್ಮಲವಾಗಿ ಉಪಾಸನೆಗೆ ಅನುಕೂಲವಾದೀತು. ಈ ಉಪಾಸನೆಯ ಮುಖ್ಯ ಸ್ತರವನ್ನೇ ಇಲ್ಲಿ 'ದೃಷ್ಟಿ' ಎನ್ನಲಾಗಿದೆ. ದೃಷ್ಟಿ ಎಂದರೆ ದರ್ಶನ. ಅದೇ ಸಾಕ್ಷಾತ್ಕಾರ. ಆತ್ಮ ಹಾಗೂ ಪರಮಾತ್ಮನ ಸಾಕ್ಷಾತ್ಕಾರವೇ ಆಧ್ಯಾತ್ಮಿಕ ಮಾರ್ಗದ ಐಹಿಕಗುರಿ. ಈ ಸಾಕ್ಷಾತ್ಕಾರವೂ ಸಹ ಆತ್ಮದ ಸ್ವಾಭಾವಿಕವಾದ ಗುಣಧರ್ಮಗಳನ್ನು ಪರದಲ್ಲಿ ಹೊರಹೊಮ್ಮಿಸುತ್ತದೆ. ಅವುಗಳೇ 'ಸತ್ಯಧರ್ಮ'. ಆತ್ಮವೇ ಸತ್ಯ. ಅದಕ್ಕಾಗಿಯೇ ಉಪಾಸನೆಯಲ್ಲಿ 'ದೃಷ್ಟಿ' ಮುಖ್ಯ. ಆ ದೃಷ್ಟಿಗೆ ನಮ್ಮ ಮನಸ್ಸು ಅನುಕೂಲವಾಗಲೆಂದೇ ಇಂದ್ರಿಯ ವಿಷಯಗಳ ಸಂಪರ್ಕನಿವಾರಣೆ. ಆ ನಿವಾರಣೆಗಾಗಿಯೇ ಪರಮಾತ್ಮನಲ್ಲಿ ಈ ಪ್ರಾರ್ಥನೆ.

'ಸತ್ಯ' ಎಂದರೆ ಎಂದೆಂದಿಗೂ ಇರುವ ವಸ್ತು. 'ಧರ್ಮ' ಎಂದರೆ ನಮ್ಮ ಶ್ರೇಯಸ್ಸಿಗೆ ಸಾಧನ. ಧರ್ಮವು 'ಸಿದ್ಧ' ಹಾಗೂ 'ಸಾಧ್ಯ' ಎಂದು ಎರಡು ಬಗೆಯಾದುದು. ನಮ್ಮ ದಿನನಿತ್ಯದ ಕರ್ತವ್ಯಗಳಿಂದ ತೊಡಗಿ ಉಪಾಸನೆ ಮುಗಿಯುವವರೆಗೂ ನಾವು ಆಚರಿಸುವ ಎಲ್ಲವೂ 'ಸಾಧ್ಯಧರ್ಮ' ಎನಿಸುವುದು. ಇವೆಲ್ಲದರಿಂದ ಪ್ರಸನ್ನನಾಗುವ ಪರಮಾತ್ಮನೊಬ್ಬನೇ 'ಸಿದ್ಧಧರ್ಮ'. ಹೀಗೆ ಪರಮಾತ್ಮನ ಪ್ರಸನ್ನತೆಗಾಗಿ ದೃಷ್ಟಿರೂಪವಾದ ಉಪಾಸನೆಯು ಅವಶ್ಯಕ.

**'ಸತ್ಯಧರ್ಮಾಯ ದೃಷ್ಟಯೇ'** ಎಂಬುದರ ಈ ಎರಡು ರೀತಿಯ ವಿವರಣೆಯಲ್ಲೂ ಸಹ "ಸೌದೆಗಾಗಿ ಹೋಗುತ್ತಿದಾನೆ" ಎಂಬ ಬಳಕೆಯ ಮಾತಿನಲ್ಲಿ 'ಹೋಗುವುದು ಸೌದೆ ಎಂಬ ಪ್ರಯೋಜನಕ್ಕಾಗಿ' ಎಂದರ್ಥವಾಗುವಂತೆ, ಆತ್ಮದರ್ಶನವು ಆತ್ಮಧರ್ಮದ ಆವಿರ್ಭಾವಕ್ಕಾಗಿಯೇ ಎಂದು ತಿಳಿಯಬೇಕು.

**ಅಥವಾ** ಸತ್ಯವೆನಿಸಿದ ಪರಮಾತ್ಮನನ್ನು ಪಡೆಯಲು ಮುಖ್ಯಸಾಧನವಾದ ದೃಷ್ಟಿರೂಪವಾದ ಉಪಾಸನೆಯನ್ನೇ ಇಲ್ಲಿ ಸತ್ಯಧರ್ಮ ಎನ್ನಲೂಬಹುದು.

## ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಮಂತ್ರದ ಸ್ಥಾನಪಲ್ಲಟ, ಪಾಠಾನ್ತರ

ಈ ಮಂತ್ರವನ್ನು ಮಾಧ್ಯಂದಿನರು ಹದಿನೇಳನೆಯ ಮಂತ್ರವನ್ನಾಗಿಯೂ ಮಂತ್ರದ ಉತ್ತರಾರ್ಧವನ್ನು "ಯೋऽಸಾವಾದಿತ್ಯೇ ಪುರುಷಸ್ಸೋऽಸಾವಹಂ, ಓಂ ಖಂ ಬ್ರಹ್ಮ" ಎಂದೂ ಪಠಿಸುತ್ತಾರೆ. ಈ ಪಾಠಾಂತರದ ವಿವರಣೆಯನ್ನು ಹದಿನಾರನೆಯ ಮಂತ್ರವನ್ನು ವಿವರಿಸುವಾಗ ತಿಳಿಸುವೆವು.

## ನಾಲ್ಕು ಮಂತ್ರಗಳೂ, ಅಧಿಕಾಂಶಗಳೂ

ಇಲ್ಲಿಯವರೆಗೆ ಸಾಂಗವಾಗಿ ಉಪಾಸನೆಯ ರೀತಿಯನ್ನು ತಿಳಿಸಿಯಾಯಿತಷ್ಟೆ. ಇಲ್ಲಿಂದ ಮುಂದೆ ಉಪಾಸನೆಯ ಕಾಲದಲ್ಲಿ ಹೇಳಬೇಕಾದ 'ಕರಣಮಂತ್ರ' ಗಳನ್ನು ತಿಳಿಸಿಕೊಡಲಾಗುವುದು. ಈ ಮಂತ್ರಗಳು ಉಪಾಸನೆಯ ಮುಖ್ಯಲಕ್ಷ್ಯವಾದ ಪರಮಾತ್ಮನನ್ನು ಕುರಿತು ಉಪಾಸಕನು ಮಾಡುವ ಪ್ರಾರ್ಥನಾ ರೂಪವಾಗಿವೆ. ಈ ಮಂತ್ರಗಳಲ್ಲಿ "ಇತಿ, ಉಪಾಸತೇ, ವೇದ, ವಾ, ಸಃ, ಅಮೃತಂ, ಅಶ್ನುತೇ" ಎಂಬ ಪದಗಳನ್ನು ಹೆಚ್ಚಿಗೆ ಸೇರಿಸಿಕೊಂಡರೆ, ಈ ಮಂತ್ರಗಳು ಈ ಸಂದರ್ಭಕ್ಕೆ ಹೊಂದಿಕೊಳ್ಳುತ್ತವೆ. 'ಯಾವನು ಈ ರೀತಿ ಪ್ರಾರ್ಥನಾ ಮಂತ್ರಗಳನ್ನು ತಿಳಿದು ಉಪಾಸನೆ ಮಾಡುವನೋ, ಅವನಿಗೀಗ ಮೋಕ್ಷಸಾಮ್ರಾಜ್ಯವು ಸಿಗುವುದು' ಎಂದರ್ಥ. ಈ ಉಪನಿಷತ್ತು ಆಚಾರ್ಯನೊಬ್ಬನ ಉಪದೇಶದ ಮಾತಿನಂತಿರುವುದರಿಂದ ಅದಕ್ಕೆ ತಕ್ಕಂತೆ ಹೀಗೆ ಮಾಡಬೇಕಷ್ಟೆ. ಹಾಗಲ್ಲದೆ ಈ ಮಂತ್ರಗಳನ್ನು ಹೊಂದಿಸಲಾಗುವುದಿಲ್ಲ.

### ಸಾರಾರ್ಥ ವಿವರಣೆ

ಈ ಮಂತ್ರದಿಂದ ಸೂರ್ಯಮಂಡಲದೊಳಗಿರುವ ಪರಮಾತ್ಮನಾದ ನಾರಾಯಣನನ್ನು ಕುರಿತು ಪ್ರಾರ್ಥಿಸಲಾಗುತ್ತಿದೆ. ಇಂತಹ ಪರಮಾತ್ಮನಿಗೆ ಸುಂದರವಾದ ಸಾಲಂಕೃತವಾದ ದಿವ್ಯಶರೀರವು ಇರುವುದಾಗಿಯೂ, ಅದು ಚಿನ್ನದಂತೆ ಹೊಳೆಯುತ್ತ ಬಹಳ ಆಕರ್ಷಕವಾಗಿರುವುದಾಗಿಯೂ, ಉಪನಿಷದ್ ವಚನಗಳು ಸಾರುತ್ತಿವೆ. ಪರಮಾತ್ಮನು ಜಡಜೀವಗಳೆಲ್ಲದರ ಆತ್ಮನೆಂದೂ, ಅವೆಲ್ಲವೂ ಅವನ ಶರೀರವೆಂದೂ ಹಿಂದೆಯೇ ತಿಳಿದಾಗಿದೆ. ಇವನ ದಿವ್ಯರೂಪದ ಹೊರಮೈಯನ್ನೇ ನಾವು ಜಡಜೀವಗಳೆಂದಿಟ್ಟುಕೊಳ್ಳೋಣ. ಹಾಗೂ ಜಡತತ್ತ್ವದ ಅನುಭವರೂಪವಾದ ಐಶ್ವರ್ಯವೂ ಜೀವತತ್ತ್ವದ ಅನುಭವರೂಪವಾದ ಕೈವಲ್ಯವೂ ನಮಗೆ ಅತ್ಯಂತ ಆಕರ್ಷಕವಾಗಿ ಕಂಡುಬರುವುವಷ್ಟೆ. ಹೀಗೆ ಪರಮಾತ್ಮನ ಶರೀರದ ಈ ಒಂದೊಂದೇ ಅಲ್ಪಾಂಶಗಳಿಗೆ ಮನಸೋತು ಪರಿಪೂರ್ಣಪರಮಾತ್ಮನುಭವರೂಪವಾದ ಮುಖ್ಯ ಪುರುಷಾರ್ಥದಿಂದ ನಾವು ವಂಚಿತರಾಗುವ ಸಂಭವವಿದೆ ಹಾಗೂ ನಮ್ಮ ಬುದ್ಧಿಯನ್ನು ಬೇರೆಡೆ ಸೆಳೆಯುವ ಮತದರ್ಶನ ಸಿದ್ಧಾಂತಗಳು ಜಗತ್ತಿನಲ್ಲಿ ಸಾಕಷ್ಟು ಹರಡಿವೆ. ಅವುಗಳ ಕಡೆ ನಾವು ಮನಗೊಡದೆ ಪರಮವೈದಿಕಸಿದ್ಧಾಂತವಾದ 'ಭಾಗವತ ಧರ್ಮ' ವೆಂಬ ವಿಶಿಷ್ಟದರ್ಶನದ ಅಧ್ಯಯನವನ್ನೂ ಅಭ್ಯಾಸವನ್ನೂ ಅದರಿಂದ ನಮ್ಮ ಬುದ್ಧಿಗೆ ಶುದ್ಧಿಯನ್ನೂ ಪರಿಪಕ್ವತೆಯನ್ನೂ ಪಡೆಯಬೇಕು. ಇಂತಹ ಬುದ್ಧಿಯೋಗವನ್ನು ಆ ಪರಮಾತ್ಮನೇ ನಮಗೆ ಕೊಡುವನೆಂದು ತಿಳಿಸಿರುವನಷ್ಟೆ. ಅವನನ್ನೇ 'ಸತ್ಯ' 'ಸತ್ಯ' ಎಂದು ಅನೇಕ ಸಲ ಉಪನಿಷತ್ತುಗಳು ಮುಖ್ಯವಾಗಿ ತಿಳಿಸಿವೆ. ಅವನು ಉಪದೇಶಿಸಿದ ದರ್ಶನ ಸಿದ್ಧಾಂತವೇ 'ಸತ್ಯಧರ್ಮ'. ಇದರ, ಜ್ಞಾನದಿಂದಲೇ ಪರಮಾತ್ಮನ ಸಾಕ್ಷಾತ್ಕಾರವಾದೀತು.

ಹೀಗೆ ಈ ಮಂತ್ರದಲ್ಲಿ ಪರಮಾತ್ಮನ ಸಾಕ್ಷಾತ್ಕಾರರೂಪವಾದ ದರ್ಶನವನ್ನೂ ಅದಕ್ಕೆ ಸಹಾಯಕವಾದ ಭಾಗವತಸಿದ್ಧಾಂತರೂಪವಾದ ದರ್ಶನವನ್ನೂ ಒಟ್ಟಿಗೆ ಪ್ರಾರ್ಥಿಸಿದಂತಾಯಿತಷ್ಟೆ.



# ಈಶಾವಾಸ್ಯೋಪನಿಷತ್

## ಮಂತ್ರ ಹದಿನಾರು

**ಪೂಷನ್! ಏಕರ್ಷೇ! ಯಮ! ಸೂರ್ಯ! ಪ್ರಾಜಾಪತ್ಯ!**
**ವ್ಯೂಹ ರಶ್ಮೀನ್ ಸಮೂಹ ತೇಜೋ, ಯತ್ ತೇ -**
**ರೂಪಂ ಕಲ್ಯಾಣತಮಂ ತತ್ ತೇ ಪಶ್ಯಾಮಿ !**
**ಯೋ ಅಸಾವಸೌ ಪುರುಷಸ್ಸೋಽಹಮಸ್ಮಿ ॥೧೬॥**

### ಅನ್ವಯಾನುಸಾರ ಪ್ರತಿಪದಾರ್ಥ

**ಪ್ರಾಜಾಪತ್ಯ** - ಚತುರ್ಮುಖ ಬ್ರಹ್ಮನಿಗೆ ಪುತ್ರರಾದ ಪ್ರಜಾಪತಿಗಳಲ್ಲಿ ಒಬ್ಬನಾದ ಕಶ್ಯಪಮಹರ್ಷಿಗೆ ಮಗನಾಗಿ ಅವತರಿಸಿದವನೇ ; **ಸೂರ್ಯ** - ಎಲ್ಲರಿಗೂ ಸಮೃದ್ಧಿಯನ್ನು ಕೊಡುವವನೇ ; **ಪೂಷನ್**- ಲೋಕಕ್ಕೆಲ್ಲ ಪೋಷಕನಾದವನೇ; **ಏಕರ್ಷೇ** - ಏಕೈಕನಾಗಿ ಇಂದ್ರಿಯಾತೀತನಾಗಿ ಅತೀಂದ್ರಿಯ ವಿಷಯಗಳನ್ನೆಲ್ಲ ಬಲ್ಲವನೇ ; **ಯಮ** - ಸೂರ್ಯನೊಳಗೂ ಸಮಸ್ತಜೀವರಾಶಿಯೊಳಗೂ ಅಂತರ್ಯಾಮಿಯಾಗಿರುವ ಎಲೈ ಪರಮಾತ್ಮನೇ ; **ರಶ್ಮೀನ್** - ಭಕ್ತರನ್ನು ಆಕರ್ಷಿಸಿ ವಶದಲ್ಲಿ ಇಡಲು ಉಪಯೋಗವಾಗುವ ನಿನ್ನ ಸೌಮ್ಯವಾದ ಕಿರಣಗಳನ್ನು ; **ವ್ಯೂಹ** - ಅಣಿಯಾಗಿ ಜೋಡಿಸಿಕೋ ; **ತೇಜಃ** - ಶತ್ರುಗಳನ್ನು ಅಡಗಿಸುವಂತಹ ತೀಕ್ಷ್ಣವಾದ ಪ್ರಕಾಶವನ್ನು; **ಸಮೂಹ** - ಒಂದೆಡೆ ಸೇರಿಸಿಕೋ; **ತೇ** - ನಿನಗೆ **ಕಲ್ಯಾಣತಮಂ** - ಅತ್ಯಂತ ಮಂಗಳಮಯವಾದ; **ರೂಪಂ** _ ದಿವ್ಯವಿಗ್ರಹ ರೂಪವು **ಯತ್** - ಯಾವುದಿದೆಯೋ; **ತೇ** - ನಿನ್ನ; **ತತ್** - ಅದೇ ರೂಪವನ್ನು; **ಪಶ್ಯಾಮಿ** - ನೋಡುತ್ತೇನೆ; **ಯಃ** - ಯಾವನು; **ಅಸೌ** - ಸೂರ್ಯಮಂಡಲಾನ್ತರ್ಯಾಮಿಯಾದ; **ಪುರುಷಃ** - ಮಹಾಪುರುಷನಾದ ನಾರಾಯಣನೋ; **ಸಃ** _ ಅಂತಹ; **ಅಸೌ** - ಸೂರ್ಯಮಂಡಲಾನ್ತರ್ಯಾಮಿಯಾದವನೇ; **ಅಹಂ** - ನನ್ನ ಅಂತರ್ಯಾಮಿಯಾದುದರಿಂದ ಅವನೇ ನಾನಾಗಿ; **ಅಸ್ಮಿ** - ಆಗಿರುವೆನು.

### ಛಾಯಾಪದ್ಯ

ಎ ಪೂಷನ್! ಏಕಋಷೀ! ಯಮ! ಸೂರ್ಯ! ಪ್ರಜೆಯೊಡೆಯ!
ಅಣಿಗೊಳಿಸಿಡು ಕಿರಣಗಳಂ, ಒಗ್ಗೂಡಿಸು ತೇಜವನೂ.
ಆವುದು ನಿನ ನಲ್‌ರೂಪವೊ; ಅದ ಕಾಣುವೆ ನಿನಗ್ಗೆ,
ಆವೀವೀ ಪುರುಷನೊ; ಅವ ನಾನಾಗಿಯೇ ಇರುವೆಂ.

## ತಾತ್ಪರ್ಯಾರ್ಥ

ಪರಮಾತ್ಮನ ದರ್ಶನಕ್ಕೆ ಕಾತುರನಾದ ಮುಮುಕ್ಷುವು ದಯಾಸಾಗರನಾದ ಪರಮಾತ್ಮನ ಕರುಣೆಯಿಂದ, ಐಹಿಕ ಭೋಗಗಳ ಆಸೆ ಹೋದರೂ, ಪರಮಾತ್ಮನ ಉಗ್ರವಾದ ತೇಜಸ್ಸನ್ನು ನೆನೆದು, ಪರಮಾತ್ಮನನ್ನು ನೋಡಲಾರನೆಂದು ಬಗೆದು ಮತ್ತೆ ದೈನ್ಯದಿಂದ ಬೇಡುತ್ತಾನೆ.

ಪೋಷಕನೂ ಸರಿಸಾಟಿಯಿಲ್ಲದವನೂ ಆದ ಎಲೈ ಋಷಿಯೇ! ಋಷಿಯಾದವನು ಭೂತ, ವರ್ತಮಾನ, ಭವಿಷ್ಯತ್ ಕಾಲಗಳಲ್ಲಿರುವ ಎಲ್ಲಾ ವಸ್ತುಗಳನ್ನು ನೋಡಬಲ್ಲನಷ್ಟೇ? ಋಷಿಗೆ ಗೋಚರಿಸದ ಯಾವ ವಸ್ತು ತಾನೇ ಇದ್ದೀತು? ಇಂತಹ ಋಷಿಯೂ ಪೋಷಕನೂ ಆಗಿ ನೀನೇಕೆ ನನ್ನ ಮನದಳಲನ್ನು ಅರಿಯಲಿಲ್ಲ?

ನೀನು ಜಗತ್ತಿಗೇ ಒಡೆಯನು. ಒಡೆಯನಾದವನು ತನ್ನ ಆಶ್ರಿತರ ಸುಖ ದುಃಖಗಳನ್ನು ತನ್ನದನ್ನಾಗಿ ಭಾವಿಸುವನು. ಪ್ರಭು! ನಾನು ಇಷ್ಟೊಂದು ಹಂಬಲಿಸುತ್ತಿದ್ದರೂ ನನ್ನ ನೋವು ನಿನಗೇಕೆ ಮುಟ್ಟಲಿಲ್ಲ?

ಎಲೈ ಪ್ರಜೆಗಳ ಪತಿಯೇ, ಪತಿಯಾದವನು ತನ್ನ ಮರೆಹೊಕ್ಕವರನ್ನು ಮರೆಯುವನೇ? ನಾನೂ ನಿನ್ನ ಪ್ರಜೆಯಲ್ಲವೇ? ನಿನ್ನ ದರ್ಶನಕ್ಕಾಗಿ ಹಗಲಿರುಳೂ ತವಕಿಸುತ್ತಿದ್ದೇನೆ. ನಿನ್ನ ಅತಿ ತೀಕ್ಷ್ಣವಾದ ಕಿರಣಗಳನ್ನು ಉಪಸಂಹಾರ ಮಾಡು. ನಾನು ನಿನ್ನನ್ನು ನೋಡಲು ಅನುವಾಗುವಂತೆ ನಿನ್ನ ಕಾಂತಿಯನ್ನು ಒಟ್ಟುಗೂಡಿಸು. ನಾನು, ನಿನ್ನ ಮಂಗಳಕರವೂ, ಮನಮೋಹಕವೂ ಆದ ರೂಪವನ್ನು ನೋಡುತ್ತೇನೆ. ಸ್ವಾಮಿ, ನಿನ್ನನ್ನು ನೋಡುವ ಹಕ್ಕು ನನಗಿದೆ. ನಾನು ನಿನ್ನವನಲ್ಲವೇ? ಪ್ರಪಂಚವನ್ನೇ ಶರೀರವನ್ನಾಗಿ ಹೊಂದಿರುವ ನಿನಗೆ ನಾನೂ ಶರೀರವಲ್ಲವೇ? ಬ್ರಹ್ಮಾತ್ಮಕನಾದ ನಾನು ಪುರುಷಸೂಕ್ತಗಳಿಂದ ಕೊಂಡಾಡಲ್ಪಟ್ಟ ಪುರಾಣಪುರುಷನಾದ ನೀನೇ ಆಗಿದ್ದೇನೆ. ಆದ್ದರಿಂದ ನಿನ್ನ ದರ್ಶನಕ್ಕೆ ಸಹಾಯಕನಾಗು ಎಂದು ಬೇಡುತ್ತಾನೆ.

ಸಾಧಕನು ಹೀಗೆ ಬದುಕಿನ ಕೊನೆಯವರೆಗೆ ಪ್ರಾರ್ಥಿಸುತ್ತಿರಬೇಕೆಂಬುದು ವೇದಪುರುಷನ ಸಂದೇಶ. ಇದನ್ನೇ ಸಾಧಕನ ಒಂಭತ್ತನೆಯ ಅವಸ್ಥೆ ಎನ್ನಬಹುದು.

## ವೇದಾಂತಾಚಾರ್ಯ ಭಾಷ್ಯ

### ಭಾವಾರ್ಥ

ಮತ್ತೆ ಹಿಂದೆ ಹೇಳಿದ ಅನುದರ್ಶನ ರೂಪವಾದ ಉಪಾಸನಜ್ಞಾನದಿಂದಲೇ ತಿಳಿಯಬೇಕಾದ ಪರಮಾತ್ಮತತ್ತ್ವದ ಗುಣ - ಸ್ವಭಾವ - ಮುಂತಾದ ವಿಶೇಷಗಳನ್ನು ತಿಳಿಸುತ್ತ, ಅನುದರ್ಶನದಲ್ಲಿ ಅವಶ್ಯಕವಾದ ಕೆಲವು ಗುಣ ವಿಶೇಷಗಳನ್ನು ಉಂಟುಮಾಡುವಂತೆ ದೇವರನ್ನು ಬೇಡಿಕೊಳ್ಳುತ್ತಿದ್ದಾನೆ. "ಪೂಷನ್ ಪಶ್ಯಾಮಿ" ಎಂದು,.......

### ಪದ ವಿವರಣೆ

**ಏಕರ್ಷೇ** - ತನಗೆ ಸಮಾನವಾದ ಬೇರೆಯ ಯಾವ ವ್ಯಕ್ತಿಯೂ ಇಲ್ಲದುದರಿಂದ ಅದ್ವಿತೀಯನೆನಿಸಿ, ಅತೀಂದ್ರಿಯನೆನಿಸಿ ಇಂದ್ರಿಯಗಳ ಸಹಾಯವಿಲ್ಲದೆಯೇ ಇಂದ್ರಿಯಾತೀತ ವಿಷಯಗಳನ್ನೂ ತಿಳಿಯಬಲ್ಲವನಾದವನೇ!

**ಯಮ** - ಎಲ್ಲದರ ಒಳಹೊಕ್ಕು ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡು ನಡೆಸುವವನೇ!

**ಸೂರ್ಯ** - ತನ್ನ ಭಕ್ತರಾದವರ ಬುದ್ಧಿಯನ್ನು ಚೆನ್ನಾಗಿ ಕುದುರಿಸುವವನೇ !

**ಪ್ರಾಜಾಪತ್ಯ** - ಜಗತ್ತಿನ ವ್ಯಷ್ಟಿಸೃಷ್ಟಿ[1] ಕರ್ತನಾದ ಚತುರ್ಮುಖಬ್ರಹ್ಮ ಅಥವಾ ಅವನ ಮಾನಸಪುತ್ರರಾದ ಭೃಗು, ದಕ್ಷ, ಮುಂತಾದ ಪ್ರಜಾಪತಿಗಳಿಂದ ಹುಟ್ಟಿರುವ ಈ ಪ್ರಪಂಚದ ಎಲ್ಲಕ್ಕೂ ಅಂತರಾತ್ಮನಾಗಿರುವವನೇ!

---

1. ಪ್ರಪಂಚವನ್ನು ಸೃಷ್ಟಿಸಬೇಕೆಂದು ಸಂಕಲ್ಪಿಸಿದ ಪರಮಾತ್ಮನು ಪ್ರಕೃತಿಯಿಂದ ಮಹತ್ತು, ಅಹಂಕಾರ, ಆಕಾಶ, ವಾಯು, ತೇಜಸ್ಸು, ನೀರು, ಮಣ್ಣುಗಳನ್ನು ಸೃಷ್ಟಿಮಾಡಿ ಆಕಾಶಾದಿಗಳಲ್ಲಿ ಪ್ರತಿಯೊಂದನ್ನೂ ಅರ್ಧಭಾಗಮಾಡಿ, ಆ ಅರ್ಧಗಳೊಡನೆ ಉಳಿದ ಅರ್ಧ ಭಾಗಗಳನ್ನು ನಾಲ್ಕು ಭಾಗಮಾಡಿ ಒಂದೊಂದು ಭಾಗವನ್ನು ಒಂದೊಂದು ಅರ್ಧಭಾಗದೊಡನೆ ಸೇರಿಸಿದನು. ಇದನ್ನು 'ಪಂಚೀಕರಣ'ವೆನ್ನುತ್ತಾರೆ. ಇವುಗಳಿಂದ ಬ್ರಹ್ಮಾಂಡವನ್ನು ಸೃಷ್ಟಿಸಿದನು. ಇದನ್ನು 'ಸಮಷ್ಟಿ ಸೃಷ್ಟಿ' ಎನ್ನುತ್ತಾರೆ, ಬ್ರಹ್ಮಾಂಡದಿಂದ ಬ್ರಹ್ಮನು ಉತ್ಪನ್ನನಾಗಿ ಸಮಸ್ತ ಜಗತ್ತನ್ನೂ ಸೃಷ್ಟಿಸಿದನು ಇದಕ್ಕೆ 'ವ್ಯಷ್ಟಿಸೃಷ್ಟಿ' ಎಂದು ಹೆಸರು.

**ಅಥವಾ:-** ಈ ಪ್ರಾಜಾಪತ್ಯಶಬ್ದದಲ್ಲಿ ಕೊನೆಯ ಅಂಶವಾದ 'ಯ' ಎಂಬ ಪ್ರತ್ಯಯದ ಅರ್ಥವು ಇಲ್ಲಿ ನಮಗೆ ಅನಪೇಕ್ಷಿತ ಎಂಬ ಅಭಿಪ್ರಾಯ ಇಟ್ಟುಕೊಂಡರೆ; ಪ್ರಜೆಗಳೆಲ್ಲದರ ಒಡೆಯನೇ! ಎಂದು ಅರ್ಥ.

**ವ್ಯೂಹ, ರಶ್ಮೀನ್, ಸಮೂಹ, ತೇಜಃ-** ನಿನ್ನ ನಿಜರೂಪವನ್ನು ತೋರಿಸಿಕೊಳ್ಳಲು ಸಹಾಯಕಗಳಾದ, ನಿನ್ನ ಉರಿಯುವ ಕಿರಣಗಳನ್ನು ಕಳಚಿಬಿಡು; ಹೊಳೆಯುವ ಕಾಂತಿಯನ್ನು ಒಗ್ಗೂಡಿಸಿಕೋ.

**ಯತ್** - "ಸೂರ್ಯನಂತಹ ಬಣ್ಣದ"[1] ಎಂದು ಮೊದಲಾಗಿ ಉಪನಿಷತ್ತಿನಲ್ಲಿ ಪ್ರಸಿದ್ಧವಾಗಿರುವ.

**ಕಲ್ಯಾಣತಮಂ** - ಎಲ್ಲ ಒಳ್ಳೆಯವುಗಳನ್ನೂ ಮೀರಿಸಿದಷ್ಟು ಒಳ್ಳೆಯ ಹಾಗೂ ಒಳ್ಳೆಯದೆಲ್ಲಕ್ಕೂ ಆಸರೆ ಎಂಬ ಅರ್ಥದಲ್ಲಿ "ಶುಭಾಶ್ರಯ" ಎನಿಸಿರುವ.

**ತೇ** - ನಿನ್ನ

**ತತ್** - ಆ ದಿವ್ಯವಾದ ಆಕೃತಿಯನ್ನು

**ಪಶ್ಯಾಮಿ** - ನೋಡುತ್ತಿರುವೆನು.

## ವರ್ತಮಾನಕಾಲನಿರ್ದೇಶದ ವಿಮರ್ಶೆ

ಮುಂದಿನ ವಾಕ್ಯದಲ್ಲಿರುವಂತೆ ತಾತ್ಕಾಲಿಕವಾಗಿ ಈ ರೀತಿಯ ಭಾವನೆಯನ್ನು ಮಾಡುವುದಷ್ಟೆ. ಮುಂದೆ ಹೇಳಿರುವುದನ್ನೇ ಇಲ್ಲೂ ಅನುಕರಣೆಮಾಡಿ ಹೇಳಲಾಗಿದೆ ಎಂಬುದು, "ನೋಡುತ್ತಿರುವೆನು" ಎಂಬ ವರ್ತಮಾನ ಕಾಲದ ನಿರ್ದೇಶನದಿಂದ ತಿಳಿದು ಬರುವುದು.

ಇದು ಬೇಡಿಕೊಳ್ಳುವ ಸಂದರ್ಭ ಎಂದಿಟ್ಟುಕೊಂಡರೆ 'ನೋಡುತ್ತ ಇರುವೆನು' ಎಂಬಲ್ಲಿ ವರ್ತಮಾನ ಕಾಲದ ಅರ್ಥದಲ್ಲಿ ಪ್ರಯೋಗವಾದ 'ಉತ್ತ' ಎಂಬ (ಲಟ್) ಅಂಶವನ್ನು 'ನೋಡಲೇಬೇಕು' ಎಂಬ ವಿಧಿ ಪ್ರಯೋಗದಲ್ಲಿ ನಿರ್ಧಾರ ರೂಪವಾದ 'ಏ' ಎಂಬ (ಲಙ್) ಅಂಶಕ್ಕೆ ಬದಲಾಯಿಸಿಕೊಳ್ಳಬೇಕು. ಹೀಗೆ ಮಾಡಿದರೆ; ಹೇಳಿದುದನ್ನೇ ಮತ್ತೆ ಹೇಳಿದಂತಾಗುವುದಿಲ್ಲ.

ಹೀಗೆ ಹೇಳುವ ಪಕ್ಷಕ್ಕೆ ಆ ಅನುದರ್ಶನ ಕಾಲದಲ್ಲಾಗುವ ವಿಶೇಷಾನುಭವವನ್ನು ಸೂಚಿಸಲೇದೇ 'ಯಾವಗಲೂ ನೋಡುತ್ತಿರುವೆನು' ಎಂಬ ರೀತಿಯಲ್ಲಾಗಲಿ, ಕೃತಕ ನಿರ್ಬಂಧಗಳೇನೂ ಇಲ್ಲದೆ, ಈ ಮಾತು ಸ್ವಾಭಾವಿಕವಾಗಿ ಬಂದಿದೆ ಎಂದಿಟ್ಟುಕೊಳ್ಳಬೇಕು. ಆಗ "ನಾವು ಪರಮಾತ್ಮನಿಗೆ ಬಹಳ ವಿಧೇಯರಾದ ಸೇವಕರು" ಎಂಬ ಮಾತು ನಮ್ಮ ಸ್ವರೂಪಕ್ಕೆ ತಕ್ಕಂತಹ ಮಾತಾಗಿ ಉಳಿಯುತ್ತದೆ.

## ಇವನು ಇವನು ಎಂಬ ಪುನರುಕ್ತಿಯ ಭಾವಗಳು

ಇನ್ನು ಮುಂದೆ ನಮ್ಮ ಅಂತರಾತ್ಮನನ್ನು ನಾನೇ ಎಂಬಂತೆ ಭಾವಿಸಬೇಕು ಎಂಬ ಅಂಶವನ್ನು ಹೇಳುತ್ತಿದ್ದಾನೆ. 'ಯೋಽಸಾವಸೌ............ ಅಸ್ಮಿ' ಎಂದು.

1. ಇಲ್ಲಿ ಅಸೌ, ಅಸೌ – ಇವನು ಇವನು ಎಂಬ ಪುನರುಕ್ತಿಯು ಅವನ ವಿಷಯದಲ್ಲಿ ನಮಗಿರಬೇಕಾದ ಶ್ರದ್ಧೆ-ಆದರಗಳನ್ನು ಸೂಚಿಸುವ ಸಲುವಾಗಿ.

---

1: ಆದಿತ್ಯ ವರ್ಣಮ್, ಶ್ವೇ. ೩. ೮.

2. ಅಥವಾ "ಯಾವ ಇವನು ನಮ್ಮ ಕಣ್ಣು - ಕಿವಿ - ಮುಂತಾದ ಇಂದ್ರಿಯಗಳಿಗೆ ತಿಳಿದುಬರುವುದಿಲ್ಲವೋ; ಅತಿ ಸೂಕ್ಷ್ಮವಾಗಿದ್ದು, ಸ್ವಲ್ಪವೂ ಕಾಣಿಸಿಕೊಳ್ಳದಂತೆಯೇ ಶಾಶ್ವತವಾಗಿ ಇರುವನೋ; ಎಲ್ಲ ಜೀವಿಗಳಿಗೂ ಜಡಗಳಿಗೂ ಸಹ ಒಮ್ಮೈಯಾಗಿದ್ದುಕೊಂಡು, ಯಾರಿಗೂ ಇವನು ಹೀಗಿದಾನೆ ಎಂದು ಯೋಚಿಸಲೂ ಸಿಗದಂತೆ ಇರುವನೋ; ಅಂತಹ ಇವನು ತನ್ನಷ್ಟಕ್ಕೆ ತಾನೇ ಸ್ವತಂತ್ರವಾಗಿ (ಉದ್ಭವಿಸಿ) ಮೇಲೆದ್ದು ಕಾಣಿಸಿಕೊಂಡನು"[1]

ಇವೇ ಮುಂತಾದ ಮಾತಿನ ಸರಣಿಯಂತೆ 'ಯಾವನೋ; ಅವನೇ', ಎಂಬ ಶಬ್ದಗಳಲ್ಲಿ ಒಂದೊಂದರೊಡನೆ 'ಇವನು, ಇವನು' ಎಂಬ ಎರಡು ಶಬ್ದಗಳಲ್ಲಿ ಒಂದೊಂದನ್ನು ಮಾತ್ರ ವಿಂಗಡಿಸಿ ಜೋಡಿಸಿ ಅರ್ಥ ಹೇಳಿಕೊಳ್ಳಬೇಕು.

3. ಅಥವಾ - ಯಾವ ಇಂದ್ರಿಯಗಳಿಗೂ ತಿಳಿದು ಬರದಂತಹ ವಿಚಾರಗಳಿಗೆ ಯಾವ ಆಧಾರಗಳಿವೆಯೋ; ಅವುಗಳಿಂದ ತಿಳಿಯಲು ಸಾಧ್ಯನಾದವನು ಎಂಬುದು ಈ 'ಇವನು, ಇವನು' ಎಂಬ ಎರಡು ಪದಗಳಿಗೂ ಅರ್ಥ.

## ಇಲ್ಲಿ ಪುರುಷ ಎಂದರೆ ಪರಮಾತ್ಮ

**ಪುರುಷಃ** - ಪರಿಪೂರ್ಣತೆ, ಅನಾದಿಯಾಗಿ ಹಿಂದಿನಿಂದಲೂ ಇರುವಿಕೆ, ಇವೇ ಮುಂತಾದ ಗುಣವುಳ್ಳವನು. ಸೂರ್ಯನಂತೆ ಹೊಳೆಯುವ ದಿವ್ಯಶರೀರವನ್ನು ಪಡೆದಿರುವವನು. ಎಲ್ಲ ವೇದಗಳಲ್ಲೂ ವೇದಗಳ ಎಲ್ಲ ಶಾಖೆಗಳಲ್ಲೂ ಇದ್ದು ನಾರಾಯಣನನ್ನು ಬಿಟ್ಟು ಬೇರೆ ಯಾವುದನ್ನೂ ಪ್ರಧಾನವಾಗಿ ಹೇಳದೆ ಇರುವ 'ಪುರುಷ ಸೂಕ್ತ' ಎಂಬ ಮಂತ್ರ ಭಾಗಗಳಲ್ಲೂ ಇಂತಹ ಇತರ ಮಂತ್ರ ಭಾಗಗಳಲ್ಲೂ ಪ್ರಸಿದ್ಧಿ ಪಡೆದಿರುವ ಮಹಾಪುರುಷ.

## "ಸೋಽಹಂ" ಎಂಬುದರ ನಿಜವಾದ ಅರ್ಥ

**ಸಃ, ಅಹಂ, ಅಸ್ಮಿ** – ಅಹಂ - ನಾನು ಎಂಬ ಶಬ್ದಕ್ಕೆ ಇಲ್ಲಿ ಜೀವಾತ್ಮದ ಮೂಲಕ ಅದರ ಅಂತರಾತ್ಮನಾದ ನಾರಾಯಣನವರೆಗೂ ಅರ್ಥ. ಆದುದರಿಂದಲೇ ಅಸ್ಮಿ - ಆಗಿರುವೆನು ಎಂಬುದೂ ಸಹ ತಮ್ಮನ್ನು ತಾವೇ ತಿಳಿದುಕೊಳ್ಳಬಲ್ಲ ಜೀವಾತ್ಮಗಳಾದ ನಮ್ಮೆಲ್ಲರ ಒಳಗಿರುವ ಪರಮಾತ್ಮನನ್ನೇ ಕೊನೆಯ ನಿರ್ಧಾರಿತ ಅರ್ಥವಾಗಿ ತಿಳಿಸುತ್ತದೆ.

ವ್ಯಾಕರಣನಿಯಮವೂ ಸಹ "ನಾವು ಎಂಬ ಅರ್ಥವೇ ಪ್ರಧಾನವಾಗಿದ್ದು, ಆ ಅರ್ಥದ ಪದದ ಜೊತೆಯಾಗಿರುವ ಯಾವುದೇ ಕ್ರಿಯಾಪದದ ಅಂಶಗಳಿಗೆ, ಉತ್ತಮ ಪುರುಷ ಎಂದು ಸಂಕೇತದ ಹೆಸರಿನಿಂದ ಬಳಸಲಾಗುವ "ಎನು " ಎವು" ಎಂಬ ಅಂಶಗಳು ಪ್ರತ್ಯಯವಾಗಿ ಸೇರುತ್ತವೆ"[2] ಎಂದಿಷ್ಟೇ ಅಲ್ಲವೆ ಇರುವುದು!

ನಾವು ಎಂಬುವುದಕ್ಕೆ ಪರಿಶುದ್ಧವಾದ ಜೀವಾತ್ಮಗಳಾದ ನಮ್ಮ ಮೂಲಕ ನಮ್ಮೊಳಗಿರುವ ಪರಮಾತ್ಮನವರೆಗೂ ಅರ್ಥ ಹೇಳಿದ ಮಾತ್ರಕ್ಕೆ 'ಎವು' ಎಂಬ ಉತ್ತಮ ಪುರುಷ ಪ್ರತ್ಯಯವೇನೂ ಕಳಚಿ ಹೋಗಲಾರದು.

---

1. ಯೋಽಸಾವತೀಂದ್ರಿಯಗ್ರಾಹ್ಯಸ್ಸೂಕ್ಷ್ಮೋಽವ್ಯಕ್ತಸ್ಸನಾತನಃ।
ಸರ್ವಭೂತಮಯೋಽಚಿನ್ತ್ಯಸ್ಸ ಏಷ ಸ್ವಯಮುದ್ಬಭೌ॥ ಮನು. ೧.೭.

2. ಅಸ್ಮದ್ಯುತ್ತಮಃ, ಶೇಷೇ ಪ್ರಥಮಃ, ಅಷ್ಟಾ. ೧.೪.೧೦.೭.೧೦೫.

### "ತತ್ ತ್ವಮಸಿ" ವಾಕ್ಯಾರ್ಥ

### ಸಿದ್ಧಾಂತ ಪಕ್ಷ

### ವ್ಯಾಕರಣ ನಿಯಮಗಳ ವಿವೇಚನೆ

ಹೀಗೆಯೇ **"ತತ್, ತ್ವಂ, ಅಸಿ"**–ಅದು ನೀನಾಗಿರುವಿ,ಇವೇ ಮೊದಲಾದ ಪ್ರಯೋಗಗಳಲ್ಲಿ ಆಗಿರುವಿ ಎಂಬ ಪದವನ್ನೂ ಸಮರ್ಥಿಸಿಕೊಳ್ಳಬೇಕು. ಅಲ್ಲಿಯೂ ಸಹ "ನೀನು-ನೀವು ಎಂಬ ಅರ್ಥವೇ ಪ್ರಧಾನವಾಗಿದ್ದು, ಆ ಅರ್ಥವ ಪದವು ಜೊತೆಗಿದ್ದರೂ ಸರಿ; ಇಲ್ಲದಿದ್ದರೂ ಸರಿ; ತನಗೆ ಸಮಾನವಾದ ವಿಭಕ್ತಿಯಲ್ಲಿಯೇ ಬಳಸಲಾಗುವುದಿದ್ದರೆ; ಅಂತಹ ಕ್ರಿಯಾಪದಗಳಿಗೆ "ಇರಿ" ಎಂಬ ಮಧ್ಯಮ ಪುರುಷವೆನಿಸುವ ಪ್ರತ್ಯಯಗಳು ಬರುತ್ತವೆ"[1] ಎಂದಿಷ್ಟೆ ಅಲ್ಲವೆ ವ್ಯಾಕರಣದ ನಿಯಮ ಇರುವುದು.

ನೀನು-ನೀವು ಎಂಬ ಪದಗಳ ಅರ್ಥರೂಪದಲ್ಲಿ ನಮ್ಮೆದುರಿಗೇ ಇರುವ ಜೀವಾತ್ಮಗಳ ಮೂಲಕ ಅನೆಲ್ಲದರ ಒಳಗಿರುವ ಪರಮಾತ್ಮನವರೆಗೂ ಆ ಪದಗಳಿಗೆ ಅರ್ಥ ಒಪ್ಪಿದ ಮಾತ್ರಕ್ಕೆ ಮಧ್ಯಮ ಪುರುಷದ ಪ್ರತ್ಯಯಗಳೇನೂ ಕಳಚಿ ಬೀಳಲಾರವು.

ಪ್ರಪಂಚದ ಬಳಕೆಯ ಮಾತುಗಳಲ್ಲೂ (ನಾನು ನೀನು, ನೀನೇ ನಾನು, ನಮ್ಮಿಬ್ಬರಲ್ಲಿ ಅಂತಹ ಭೇದವೇನೂ ಇಲ್ಲ: ಐಕಮತ್ಯವಿರಲಿ ಎಂಬ ಅಭಿಪ್ರಾಯದಿಂದ) ನೀನೇ ನಾನಾಗಿರುವೆನು, ನಾನೇ ನೀನಾಗಿರುವಿ, ಎಂಬ ಔಪಚಾರಿಕವಾದ ಪ್ರಯೋಗಗಳನ್ನು ಮಾಡುವಾಗ; ನಾವು ಯಾವ ನಿರ್ದಿಷ್ಟವಾದ ಅಂಶವನ್ನು ಕುರಿತು ಹೇಳಬೇಕಾಗಿರುವುದೋ, ಅದನ್ನನುಸರಿಸಿಯೇ ಮಧ್ಯಮ ಮತ್ತು ಉತ್ತಮ ಪುರುಷಗಳ ಪ್ರಯೋಗ ಮಾಡುವ ವ್ಯವಸ್ಥೆ ಇದೆ. ತಮ್ಮದೇ ಅರ್ಥವನ್ನು ಮುಖ್ಯವಾಗಿ ಉದ್ದೇಶಿಸಿ ಪ್ರಯೋಗಿಸಿದ್ದಾಗ ಮಾತ್ರ ನೀವು–ನಾವು-ಮುಂತಾದ ಪದಗಳು ಜೊತೆ ಪದಗಳೆನಿಸುವುವು ಎಂಬುದೇ ವ್ಯಾಕರಣ ಸೂತ್ರಗಳ ಅಭಿಪ್ರಾಯ. ಇದರ ಪ್ರಕಾರ ಹಿಂದೆ ಹೇಳಿದ ವ್ಯವಸ್ಥೆಯಂತೆ ಇಲ್ಲಿಯೂ ಅದೇ ವ್ಯವಸ್ಥೆ ಸರಿಹೊಂದುವುದು.

### ಶ್ರೀಭಾಷ್ಯದ ವಚನ ಸಿದ್ಧಾಂತಕ್ಕೆ ಅನುಸಾರವಾಗಿದೆ

ಶ್ರೀಭಾಷ್ಯದಲ್ಲಾದರೋ 'ಅದು ನೀನಾಗಿರುವಿ' ಎಂಬ ಮಾತನ್ನು ವಿವರಿಸಿ ತಿಳಿಸುವಾಗ, ಇಲ್ಲಿ ಯಾವುದನ್ನೋ ಕುರಿತು ಏನೊಂದನ್ನೂ ವಿಧಿಸುತ್ತಿಲ್ಲ" ಎಂಬುದು ನಿಜ. ಆದರೆ–"ಅದು ನೀನಾಗಿರುವಿ ಎಂಬ ಈ ಮಾತು ಹಿಂದೆ ಹೇಳಲಾಗಿರುವುದನ್ನೇ ಈಗ ವಿಚಾರ ವಿಮರ್ಶೆಯನ್ನು ಮುಗಿಸುವಾಗ ಮತ್ತೆ ಒತ್ತಿ ಹೇಳುವ ಮಾತಾಗಿದೆಯೇ ಹೊರತು, ಇದು ಈ ವಿಷಯವನ್ನು ಕುರಿತು ಹೊಸ ಮಾತಲ್ಲ' ಎಂಬುದು ಈ ಭಾಷ್ಯದ ಮಾತಿನ ಅರ್ಥ ಎಂಬುದೂ ಸ್ಪಷ್ಟವಾಗಿ ಅಲ್ಲೇ ನಿರೂಪಣೆ ಮಾಡಲಾಗಿದೆಯಲ್ಲವೆ![2]

### "ತತ್ ತ್ವಮಸಿ" ವಾಕ್ಯಾರ್ಥ, ಪಕ್ಷಾಂತರ ವಿವೇಚನೆ ೧

ಕೆಲವರು ಮಾತ್ರ 'ಅದು ನೀನಾಗಿರುವಿ'[3] 'ಅವನು ನಾನಾಗಿರುವೆನು'[4] ಮುಂತಾದ ಮಾತುಗಳಲ್ಲಿ ಅದು–

---

1. ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ, ಅಷ್ಟಾ ೧ ೪. ೧೦೫.
2. ನಾತ್ರ ಕಿಂಚಿದುದ್ದಿಶ್ಯ ಕಿಮಪಿ ವಿಧೀಯತೇ, ಶ್ರೀಭಾಷ್ಯ. ೧. ೧. ೧. ಕೊನೆ.
3. ತತ್ತ್ವಮಸಿ. ಛಾಂ. ೬. ೮. ೭.
4. ಸೋಽಹಮಸ್ಮಿ. ಈಶಾ. ೧೬.

ಅವನು–ಎಂಬ ಅಂಶಗಳು ಕಾರಣವಸ್ತುವನ್ನು ಕುರಿತವು, ನೀನು–ನಾನು ಎಂಬ ಅಂಶಗಳು ಕಾರ್ಯವಸ್ತುವನ್ನು ಕುರಿತವು. ಮಣ್ಣಿನ ಮುದ್ದೆ ಕಾರಣ, ಮಡಕೆ ಅದರ ಕಾರ್ಯವಸ್ತು, ಬ್ರಹ್ಮವೇ ಕಾರಣ, ಜಗತ್ತೆಲ್ಲ ಅದರ ಕಾರ್ಯ ವಸ್ತು. ಮುದ್ದೆಯ ಆಕಾರ – ಮಡಕೆಯ ಆಕಾರಗಳೆರಡನ್ನೂ ಬಿಟ್ಟು, ಮಣ್ಣನ್ನು ಮಾತ್ರ ಕುರಿತು ಯೋಚಿಸಿ ದರೆ ಕಾರಣ-ಕಾರ್ಯಗಳೆರಡೂ ಮಣ್ಣೆಂಬ ಒಂದೇರೂಪದಲ್ಲಿ ಕಂಡು ಬರುತ್ತವೆ. ಇದೇ ವಸ್ತುಗಳ ಸ್ವರೂಪದ ಏಕತೆ. ಹೀಗೆ ಬ್ರಹ್ಮದ ಯಾವುದೇ ಜ್ಞಾನ-ಆನಂದ–ಮುಂತಾದ ಗುಣವಿಶೇಷಗಳನ್ನೂ, ಜಗತ್ತಿನ ಅಜ್ಞಾನ ದುಃಖ-ಮುಂತಾದ ದೋಷವಿಶೇಷಗಳನ್ನೂ, ಬಿಟ್ಟು ಬರಿಯ ವಸ್ತು ಎಂಬ ಭಾವನೆಯಿಂದ ನೋಡಿದರೆ; "ಯಾವುದು ಬ್ರಹ್ಮವೋ ಅದೇ ಜಗತ್, ಯಾವುದು ಬ್ರಹ್ಮವೋ ಅದೇ ನಾನೂ", ಎಂಬ ಅಭಿಪ್ರಾಯವನ್ನು ಈ ಮಾತಿಗೆ ಅರ್ಥ ವಾಗಿ ಹೇಳುತ್ತಾರೆ.

ಆದರೆ ಅವರ ಅಭಿಪ್ರಾಯವನ್ನು ಕತ್ತಿಯಂತಹ ಅಸಿ ಎಂಬ ಪದವೂ ಅಸ್ಮಿ ಎಂಬ ಪದವೂ ತುಂಡರಿಸು ತ್ತದೆ. ಅಂತಹವರು 'ನೀನು' ಎಂದರೆ ಆ ಮಾತನ್ನು ಕೇಳಿಸಿ ಕೊಳ್ಳುವವನ್ನಾಗಲೀ, 'ನಾನು' ಎಂದರೆ ತನ್ನನ್ನೇ ಭಾವಿಸಿಕೊಳ್ಳುವವನ್ನಾಗಲಿ ನೀನು–ನಾನು ಎಂಬ ಶಬ್ದಗಳಿಗೆ ಅರ್ಥವಲ್ಲ ಎನ್ನಬೇಕಾದೀತು. ಅವರ ಅಭಿಪ್ರಾಯ ದಲ್ಲಿ ಎಲ್ಲವೂ ಒಂದೇ ಆಗಿದ್ದು, ಯಾರನ್ನೂ ಯಾವನೂ 'ಅಸಿ'–ಆಗಿರುವಿ ಎಂಬ ಪದದಿಂದ 'ನೀನು' 'ನೀನು' ಎಂದು ಕತ್ತಿಯಿಂದ ಚುಚ್ಚುವಂತೆ ಚುಚ್ಚಿ ಎಚ್ಚರಿಸಬೇಕಾಗಿಲ್ಲ; ಹಾಗೂ ಅಸ್ಮಿ, ಆಗಿರುವೆನು ಎಂಬ ಪದದಿಂದ 'ನಾನು' 'ನಾನು' ಎಂದು ಪ್ರತ್ಯೇಕ ಭಾವನೆ ಮಾಡಿಕೊಳ್ಳಬೇಕಾಗಿಲ್ಲವಷ್ಟೆ!

### 'ತತ್ತ್ವಮಸಿ' ವಾಕ್ಯಾರ್ಥ, ಪಕ್ಷಾಂತರ ವಿವೇಚನೆ ೨

ಹೀಗಿದ್ದರೂ ಕೆಲವರು ಅದು ನೀನು ಎಂಬ ಎರಡು ವಸ್ತುಗಳಲ್ಲೂ ಮಧ್ಯವರ್ತಿ ಅವಧಿಗಳಂತಹ ಭೇದಕ ಅಂಶಗಳನ್ನು – ಕಾರಣವಾಗಿರುವಿಕೆ, ಕಾರ್ಯವಸ್ತುವಾಗಿರುವಿಕೆ ಮುಂತಾದ ಉಪಾಧಿಗಳನ್ನು, ಅದು – ಅವನು ಮುಂತಾದ ಪದಗಳೊಡನೆ ಪಕ್ಕಕ್ಕೆ ಸೇರಿಸಿಕೊಂಡು ಬಳಸಲಾಗಿವೆ. ಆದುದರಿಂದ ಆಗಿರುವಿ, ಆಗಿರುವೆನು ಮುಂತಾದ ಪ್ರಯೋಗಗಳೂ ಸರಿಯೆನಿಸುವುವು ಎನ್ನಬಹುದು.

ಆದರೆ ನೀನು ನಾನು ಎಂಬ ಬಳಕೆಗೆ ಕಾರಣವಾದ 'ಎದುರಿಗೆ ಕಾಣಿಸುತ್ತಿರುವಿಕೆ' 'ಎದುರುಗೊಂಡು ನೋಡುತ್ತಿರುವಿಕೆ' ಮುಂತಾದ ಅಂಶಗಳನ್ನು ಬಿಡದೆ ಅರ್ಥವಾಗಿ ಹೇಳಿಯೂ 'ಅದು ನೀನೇ' 'ಅವನು ನಾನೇ' ಎಂಬ ಮಾತುಗಳಲ್ಲಿ ಎರಡು ವಸ್ತುಗಳಿಗೂ ಏಕತೆಯನ್ನು ನಿರೂಪಿಸಿ ತೋರಿಸಲು ಸಾಧ್ಯವಿರುವಾಗ; ತ್ಯಜಿಸ ಬೇಕಾದ ಉಪಾಧಿಗಳನ್ನು ವ್ಯವಹಾರಕ್ಕಾಗಿ ಸ್ವೀಕರಿಸುವುದಕ್ಕಿಂತ, ಈ ಸಾಧ್ಯವಿರುವ ಸರಿಯಾದ ದಾರಿಯಲ್ಲಿ ಸಾಗುವುದೇ ಲೇಸಲ್ಲವೆ!

### 'ತತ್ತ್ವಮಸಿ' ವಾಕ್ಯಾರ್ಥ, ಪಕ್ಷಾಂತರ ವಿವೇಚನೆ ೩

ಜಗತ್ತಿನ ಮೂಲವಸ್ತು ಸತ್. ಅದೇ ಬ್ರಹ್ಮ. ಬರಿಯ ಆ 'ಸತ್' ಎಂಬ ವಸ್ತು ಅಂಶಿ. ಅದರ ಅಂಶಗಳೇ ಕಾರಣತೆ ಮತ್ತು ಕಾರ್ಯತೆ. ಇವೆರಡರ ಸಂಯೋಜನೆಯೇ 'ಅದು ನೀನೇ' 'ಅವನು ನಾನೇ' ಮುಂತಾದ ಮಾತು ಗಳ ಅರ್ಥ ಎನ್ನುವವರೂ ಇದ್ದಾರೆ. ಹಾಗೆ ಒಪ್ಪಿದರೆ; ಈ ಮಾತುಗಳಲ್ಲಿ ಕಾರ್ಯತೆ – ಕಾರಣತೆಗಳಲ್ಲದ ನೀನು – ನಾನು ಎಂಬ ಬೇರೆ ಅಲ್ಪಾಂಶಗಳನ್ನು ಬೆರೆಸಲು ಸಾಧ್ಯವಾಗುವುದಿಲ್ಲ.

ಹಿಂದೆ ಹೇಳಿದ 'ಸತ್ ಎಂಬ ಅಂಶಿವಸ್ತು ಒಂದೇ ಕಾರಣತೆ – ಕಾರ್ಯತೆಗಳನ್ನು ಪಡೆದಿದ್ದು, ವಿಶಿಷ್ಟವಾದ ಅದೊಂದನ್ನೇ ಈ 'ಅದು ನೀನು' 'ಅವನು ನಾನು' ಎಂಬ ಪದಗಳು ಹೇಳುವುವು ಎನ್ನುವವರು ಕೆಲವ ರುಂಟು; ಈ ಪಕ್ಷದಲ್ಲೂ (ಎಲ್ಲ ಪದಗಳೂ ಹೀಗೆ ವಿಶಿಷ್ಟವಾದ ಒಂದೇ ಅರ್ಥ ಹೇಳುವುದರಿಂದ ಒಂದೇ ಪದ

ಸಾಕಾಗಿದ್ದು ಅನೇಕ ಪದಗಳ ಅವಶ್ಯಕತೆಯೇ ಇಲ್ಲವಾಗಿ) ನೀನು ನಾನು ಎಂದೆಲ್ಲ ಹೇಳುವ ಅವಶ್ಯಕತೆಯೇ ಇರದು.

ನೀನಾಗಿರುವಿಕೆ ನಾನಾಗಿರುವಿಕೆಗಳನ್ನು ಪಡೆದಿರುವ ವಸ್ತು, ಅದು ಅಥವಾ ಅವನು ಎಂದು ಅರ್ಥೈಸಿದರೆ; 'ಅದು ಆಗಿದೆ' 'ಅವನು ಆಗಿರುವನು' ಎಂದು ಪ್ರಥಮಪುರುಷದ ಪ್ರತ್ಯಯವಾದ 'ಎ' 'ಅನು' ಎಂಬುದರ ಪ್ರಯೋಗ ಮಾಡಬೇಕಿತ್ತಲ್ಲವೆ! ಎಂಬ ಆಕ್ಷೇಪ ಅವರ ಮೇಲೆ ಬೀಳುವುದು ಖಚಿತ.

ಬೇರೆ ಬೇರೆಯಾಗಿ ಕಣ್ಣಿಗೆ ಕಾಣಿಸುವ ಮಡಕೆ ಚಾಲು ಮುಂತಾದವುಗಳಿಗೂ ಮಣ್ಣಿನ ಮುದ್ದೆಯ ಒಂದು ರೂಪಾಂತರವಾದ ದೊಡ್ಡ ಬಾನಿಗೂ ಏಕತೆಯ ಹೊಂದಾಣಿಕೆ ಎಂದಿಗೂ ಸಾಧ್ಯವಿಲ್ಲ.

## ಮೂರು ಪಕ್ಷಗಳ ವಿಮರ್ಶೆ

ಆದುದರಿಂದ ನೀನು–ನಾನು ಎಂಬ ಅರ್ಥಗಳನ್ನೂ, 'ಸತ್' ವಸ್ತುವಿನ 'ಸತ್ತಾ'-ಇರುವಿಕೆ ಮುಂತಾದ ಆಕಾರ ಸ್ವಭಾವಗಳನ್ನು, ಶಾಶ್ವತವೆಂದು ಒಪ್ಪಿ ಗುರುತಿಸುವುದಾಗಲಿ, ಉಪದೇಶಿಸುವುದಾಗಲಿ, ತನ್ನಷ್ಟಕ್ಕೆ ಭಾವಿಸಿಕೊಳ್ಳುವುದಾಗಲಿ ಅವರೆಲ್ಲರ ಮತದಲ್ಲೂ ಸಾಧ್ಯವಿಲ್ಲ. ಒಟ್ಟಿನಲ್ಲಿ ಹೇಗೂ ಅವರು 'ಅದು ನೀನಾಗಿರುವಿ'[1] 'ಅವನು ನಾನಾಗಿರುವೆನು[2]' ಮುಂತಾದ ಪ್ರಯೋಗಗಳನ್ನು ಹೊಂದಿಸಿಕೊಳ್ಳುವುದು ಪಾರಮಾರ್ಥಿಕವಾಗಿ ಸಾಧ್ಯ ವಿಲ್ಲ.

ಮುಕ್ತಿಶಾಸ್ತ್ರದಲ್ಲಿ ದೃಷ್ಟಿವಿಧಾನ ಸ್ವೀಕಾರಾರ್ಹವಲ್ಲ. ಒಂದು ವಸ್ತುವನ್ನು ಅದು ಹಾಗಿಲ್ಲದಿದ್ದರೂ ಹಾಗಿದೆಯೆಂದು ಭಾವಿಸುವ 'ದೃಷ್ಟಿವಿಧಾನ' ವನ್ನು, ಮುಕ್ತಿಗಾಗಿಯೇ ಕಲಿಯುವ ಬ್ರಹ್ಮೋಪಾಸನ–ವಿದ್ಯೆಗಳಲ್ಲಿ ಯಾವ ವೇದಾಂತಿಯೂ ಸಹ ಒಪ್ಪುವುದಿಲ್ಲವಷ್ಟೆ.

## 'ತತ್ತ್ವಮಸಿ' ವಾಕ್ಯಾರ್ಥ, ಪಕ್ಷಾಂತರ ವಿವೇಚನೆ ೪

ರಾಜನಲ್ಲದಿದ್ದರೂ ರಾಜನ ಅಧೀನದಲ್ಲಿರುವ ಸಮರ್ಥವ್ಯಕ್ತಿ ಎಂಬ ಅಭಿಪ್ರಾಯದಿಂದ 'ನೀನೇ ರಾಜ ನಾಗಿರುವಿ' 'ನಾನೇ ರಾಜನಾಗಿರುವೆ' ಎಂದು ಗೌಣಾರ್ಥವಾಗಿ ಮಾತುಗಳನ್ನು ಬಳಸುವಂತೆ ಇಲ್ಲಿಯೂ 'ಅದೇ ನೀನು' 'ಅವನೇ ನಾನು' ಎಂಬ ಮಾತುಗಳಲ್ಲಿ ಮಧ್ಯಪುರುಷವಾದ ಇರು+'ಇ' ಮತ್ತು ಉತ್ತಮ ಪುರುಷವಾದ ಇರು+'ಎ' ಎಂಬ ಪ್ರತ್ಯಯಗಳನ್ನು ಒಂದು ಪಕ್ಷ ಸಮಂಜಸವಾಗಿ ಬಳಸಬಹುದಾಗಿದೆ.

ಅವರೂ ಲೌಕಿಕ ಹಾಗೂ ವೈದಿಕ ಸಾಹಿತ್ಯಗಳಲ್ಲಿ ದೇವತೆ ಮನುಷ್ಯ ಮುಂತಾದ ಪದಗಳಿಗೆ ಆಯಾ ದೇವ ಮನುಷ್ಯಾದಿ ಶರೀರದೊಳಗಿರುವ ಜೀವಾತ್ಮಗಳನ್ನು ಕುರಿತಾಗಿ ಅರ್ಥ ಹೇಳುವ ನ್ಯಾಯವಾದ ಬಳಕೆಯ ಪ್ರಯೋ ಗಗಳಿದ್ದು, ಇದರಂತೆಯೇ ಇದು ಪಕ್ಷಿ ಎನ್ನುವಾಗ ಆ ಪಕ್ಷಿವ್ಯಕ್ತಿಯಲ್ಲಿ ವಿಶೇಷಣವಾಗಿ ಸೇರಿರುವ 'ಪಕ್ಷಿತ್ವ' ಎಂಬ ಜಾತಿಯನ್ನೂ ಆ ಜಾತಿಗೆ ಆಸರೆಯಾಗಿ ವಿಶೇಷ್ಯ ಎನಿಸುವ ಪಕ್ಷಿವ್ಯಕ್ತಿಯನ್ನೂ ಸಹ ಸೇರಿಸಿ ಪಕ್ಷಿಶಬ್ದದ ವಿಶಿಷ್ಟ ಅರ್ಥವನ್ನಾಗಿ ಹೇಳುವುದೂ, ಇದು ಬಿಳಿಯದು ಎನ್ನುವಾಗ ಬಿಳಿಯ ಬಣ್ಣವನ್ನೂ ಅದಕ್ಕೆ ಆಸರೆಯಾದ ವಸ್ತುವನ್ನೂ ಸಹ ಸೇರಿಸಿ ಬಿಳಿಯದು ಎಂಬ ಪದದ ವಿಶಿಷ್ಟ ಅರ್ಥವಾಗಿ ಹೇಳುವುದೂ, ಲೋಕ ವ್ಯವಹಾರ

---

1. ತತ್ತ್ವಮಸಿ. ಛಾಂ. ೬.೮.೭.
2. ಸೋಽಹಮಸ್ಮಿ. ಈಶಾ. ೧೬.

ದಲ್ಲೂ ಶಾಸ್ತ್ರ ವ್ಯವಹಾರದಲ್ಲೂ ಸಹಜಸಿದ್ಧವಾಗಿರುವುದರಿಂದ, ಗೌರವಾರ್ಥ ಇಲ್ಲದ ಹೊಗಳಿಕೆಯ ಮಾತಿನಂತಹ ನಿರೂಪಣೆಯನ್ನು ಬಳಸಲು ಒಪ್ಪುವುದು ಸಮಂಜಸವಾಗದು. ಈ ಕಾರಣದಿಂದ ಈ ಉಪಚಾರಪಕ್ಷವನ್ನು ಅನುಸರಿಸಲಾಗದು.

### 'ತತ್ತ್ವಮಸಿ' ವಾಕ್ಯಾರ್ಥ, ಪಕ್ಷಾಂತರ ವಿವೇಚನೆ ೫

ಹಾಗಾದರೆ ಇಲ್ಲಿ ಬೇರೆ ಹೀಗೊಂದು ರೀತಿ ಸಮನ್ವಯ ಮಾಡಬಹುದಲ್ಲವೆ! ಅದೇನೆಂದರೆ:–

ಪುರುಷ ಶಬ್ದಕ್ಕೆ ಜೀವಾತ್ಮಗಳಿಗಿಂತ ಬೇರೆಯಾದ ಪರಮಾತ್ಮ ಎಂದು ಅರ್ಥ ಹೇಳಿ, ಜೀವಾತ್ಮನನ್ನು ಕುರಿತಾದ ಪದಗಳನ್ನೂ ಪರಮಾತ್ಮನನ್ನು ಕುರಿತಾದ ಪದಗಳನ್ನೂ ಹೊಂದಿಸುವ ಕಷ್ಟದ ದಾರಿಯನ್ನು ಬಿಟ್ಟುಬಿಡೋಣ. ಇವನೇ ಜೀವಾತ್ಮ, ಇವನೇ ಜೀವಾತ್ಮ ಎಂದು ಯಾವ ಜೀವವನ್ನು ಪ್ರಕೃತಿಯ ಕಿಂಚಿತ್ತೂ ಸಂಬಂಧವಿಲ್ಲದೆ ಪರಿಶುದ್ಧನಾದ ಪುರುಷ ಎಂದು ಗುರುತಿಸಬಹುದೋ, ಆ ಜೀವಾತ್ಮತತ್ತ್ವವೇ ನಾನು ಎಂಬ ಅರ್ಥದಲ್ಲಿ 'ಯಃ, ಅಸೌ, ಅಸೌ, ಪುರುಷಃ, ಸಃ, ಅಹಂ, ಅಸ್ಮಿ' ಎಂಬ ಮಾತನ್ನು ಅನ್ವಯಿಸೋಣ, ಎಂದು.

ಈ ಕ್ರಮವೂ ಸರಿಯಲ್ಲ "ಅದು ನೀನಾಗಿರುವಿ"[1] "ನೀನೇ ನಾನಾಗಿರುವೆ"[2] ಮುಂತಾದ ಮಾತುಗಳನ್ನು ಇಲ್ಲಿ ಹೇಳಿದ ರೀತಿಯಿಂದ ಸಮನ್ವಯಗೊಳಿಸಲು ಸಾಧ್ಯವಿಲ್ಲದಿದ್ದು, ಅಲ್ಲಿ ಹಿಂದೆ ಸಮನ್ವಯ ಮಾಡಿದಂತೆ ಇಲ್ಲಿಯೂ ಮಾಡಿಕೊಳ್ಳುವುದು ಮಾತಿನ ಶೈಲಿಗೆ ಹೊಂದಿಕೊಂಡು ಸಮಂಜಸವಾಗುತ್ತಿರುವುದೇ ಇದಕ್ಕೆ ಕಾರಣ.

### "ತತ್ತ್ವಮಸಿ" ವಾಕ್ಯಾರ್ಥ, ಪಕ್ಷಾಂತರ ವಿವೇಚನೆ ೬

ಬ್ರಹ್ಮೋಪಾಸನೆಯ ವಿದ್ಯೆಯನ್ನು ಅಭ್ಯಾಸ ಮಾಡುವಾಗ ಪರಮಾತ್ಮತತ್ತ್ವವನ್ನು ಅರಿತು ಭಾವಿಸುವಂತೆ, ಅದರ ಅಂಗವಾಗಿ ಜೀವಾತ್ಮತತ್ತ್ವವನ್ನೂ ಅರಿತು ಭಾವಿಸಬೇಕಾಗಿರುವುದರಿಂದ, ಪರಮಾತ್ಮನನ್ನು ಒಳಗೊಂಡಿರುವ ಪರಿಶುದ್ಧ ಜೀವಾತ್ಮನೇ ನಾನು ಎಂಬುದಾಗಿ ಇಲ್ಲಿ ಅರ್ಥ ಮಾಡಲೂ ಅವಕಾಶವಿದೆ. ಆದರೆ 'ಅದು' ಎಂಬ ಪದಕ್ಕೆ 'ಅದರ ಅಧೀನ' ಎಂಬ ಅದಕ್ಕೆ ಸಂಬಂಧಿಸಿದ ಹೆಚ್ಚಿನ ಅರ್ಥ ಹೇಳಬೇಕಾಗಿ ಬಂದು ಇಲ್ಲಿ ಇದೊಂದು ಅಧಿಕಪ್ರಸಂಗಿತನವಾದೀತು.

## ಈಶಾವಾಸ್ಯಪ್ರಕಾಶಿಕೆ

### ಅವತಾರಿಕೆ

ಅನುದರ್ಶನವನ್ನೂ, ಅದರ ಸಲಕರಣೆಯೊಂದನ್ನೂ ಬೇಡಿಕೊಳ್ಳುತ್ತಿದ್ದಾನೆ. 'ಮತ್ತೆ....ತಿಳಿಸುತ್ತ,' (ಈ ಭಾಗ ವೇದಾಂತಾಚಾರ್ಯರ ಭಾಷ್ಯದಂತೆಯೇ ಇದೆ.)

### ಕೆಲವು ಪದಗಳ ವಿಶೇಷಾರ್ಥ

**ಏಕರ್ಷೇ** – 'ಏಕಶ್ಚಾಸೌ ಋಷಿಶ್ಚ' ಎಂದು ಇದನ್ನು ಬಿಡಿಸಿ ಹೇಳಬೇಕು. ಇದರ ಅರ್ಥ – ತನ್ನಂತಹ ಬೇರಾರೂ

---

1. ತತ್ತ್ವಮಸಿ. ಛಾಂ. ೬. ೮. ೭.

2. ತ್ವಂ ವಾ ಅಹಮಸ್ಮಿ. 'ಜಾಬಾಲಾಃ' ಇತಿ ಶಂಕರಭಾಷ್ಯೇ. ೩.೩.೩೭.

ಇಲ್ಲದುದರಿಂದ ಏಕಾಕಿಯೂ, (ಅತೀಂದ್ರಿಯನಾಗಿ ಹಾಗೂ ಇಂದ್ರಿಯ ಸಹಾಯವಿಲ್ಲದೆಯೇ) ಅತೀಂದ್ರಿಯವಾದ ಎಲ್ಲವನ್ನೂ ತಿಳಿದಿರುವವನೂ ಎಂದು. "ಅವನಂತೆ ನೋಡುವವನು ಬೇರೆ ಯಾವನೂ ಇಲ್ಲ."[1] ಎಂದು ವೇದವೂ ಹೇಳಿದೆ.

**ಯಮ** – ಎಲ್ಲವನ್ನೂ ತನ್ನ ಆಜ್ಞೆಯ ನಿಯಮಕ್ಕೆ ಒಳಪಡಿಸಿಕೊಂಡಿರುವವನು. "ಯಾವನು ಭೂಮಿಗೂ ಒಳಹೊಕ್ಕು ಅಂತರ್ಯಾಮಿಯಾಗಿದ್ದು ಆಳುವನೋ, ಯಾವನು ಜೀವಾತ್ಮನಿಗೂ ಒಳಹೊಕ್ಕು ಅಂತರ್ಯಾಮಿಯಾಗಿದ್ದು ಆಳುವನೋ"[2] ಇವೇ ಮುಂತಾದ ವೇದವಚನಗಳೂ ಈ ಬಗ್ಗೆ ಇವೆ.

**ಪ್ರಾಜಾಪತ್ಯ** – (1) ಪ್ರಜಾಪತಿ ಎಂದರೆ ಚತುರ್ಮುಖ. ಅವನ ಮಕ್ಕಳೇ ಪ್ರಾಜಾಪತ್ಯರು. ಅವರೆಲ್ಲರಿಗೂ ಅಂತರ್ಯಾಮಿಯಾದವನು. (2) ಅಥವಾ – ವಿಶ್ವಾನರನನ್ನೇ ವೈಶ್ವಾನರ ಎನ್ನುವಂತೆ ಪ್ರಜಾಪತಿಯನ್ನೇ ಪ್ರಾಜಾಪತ್ಯ ಎನ್ನಬಹುದು. (3) ಪ್ರಜಾಪತಿ ಎಂದರೆ ಪ್ರಜೆಗಳ ಒಡೆಯ. ಅವನೇ ವಿಷ್ಣು "ಪ್ರಜಾಪತಿಯು ಸಂಚರಿಸುತ್ತಿದಾನೆ ಗರ್ಭದಲ್ಲಿ ಒಳಗೇ[3]" ಎಂದು ವೇದ ಸಾರುತ್ತಿದೆಯಷ್ಟೇ.

**ರಶ್ಮೀನ್** – ನಿನ್ನ ದಿವ್ಯರೂಪವನ್ನು ಕಾಣಲು ಸಹಾಯಕವಲ್ಲದೇ ಇರುವ ನಿನ್ನ ತೀಕ್ಷ್ಣವಾದ ಕಿರಣಗಳನ್ನು.

**ವ್ಯೂಹ** – ಕಳಚಿ ಎಸೆ.

**ತೇಜಃ** – ನಿನ್ನನ್ನು ಕಾಣಲು ಸಹಾಯಕವೂ, ಸೌಮ್ಯವೂ, ಸುಂದರವೂ, ಉತ್ತಮವೂ ಆದ ನಿನ್ನ ತೇಜಸ್ಸನ್ನು.

**ಸಮೂಹ** – ಒಗ್ಗೂಡಿಸಿಕೋ.

**ಯತ್** – "ಸೂರ್ಯನ ಬಣ್ಣದಂತಹ ಬಣ್ಣವಿರುವ, ಹಾಗೂ ಕತ್ತಲೆಗಿಂತ ಆಚೆ ಇರುವ"[4] ಮುಂತಾದ ಉಪನಿಷತ್ ವಚನಗಳಲ್ಲಿ ಪ್ರಸಿದ್ಧವಾಗಿರುವ.

**ತೇ** – 'ಆನಂದ ತುಂಬಿರುವುದೇ ಬ್ರಹ್ಮ'[5] ಎಂದು ಅನುಭವಿಸಲು ಉತ್ತಮೋತ್ತಮವಾಗಿರುವ ನಿನ್ನ.

**ಕಲ್ಯಾಣತಮಂ** – (1) ಸೌಂದರ್ಯ ಮುಂತಾದ ಉತ್ತಮ ಗುಣಗಳಿಂದ ಕೂಡಿ ಎಲ್ಲರಿಗೂ ಬಹಳ ಬೇಕಾಗಿರುವ.
(2) ಎಲ್ಲ ಗುಣಗಳಿಗಿಂತಲೂ ಹೆಚ್ಚಾಗಿ (ಸ್ವಯಂ) ಮಂಗಳಕರವಾಗಿರುವ.
(3) ಒಳ್ಳೆಯದೆಲ್ಲಕ್ಕೂ ಆಸರೆಯಾಗಿ "ಶುಭಾಶ್ರಯ" ಎನಿಸಿರುವ.

**ತೇ** – ನಿನ್ನ.

**ಯತ್** – ಯಾವ.

**ದಿವ್ಯಂ** – ದಿವ್ಯವಾದ.

**ರೂಪಂ** – ರೂಪವುಂಟೋ;

---

1. ನಾನ್ಯೋSತೋSಸ್ತಿ ದ್ರಷ್ಟಾ. ಬೃ. ೫. ೭. ೨೩.
2. ಯಃ ಪೃಥಿವೀಮಂತರೋ ಯಮಯತಿ.........ಯ ಆತ್ಮಾನಮಂತರೋ ಯಮಯತಿ. ಶತಪಥ. ೧೪. ೫. ೮; ೩೦.
3. ಪ್ರಜಾಪತಿಶ್ಚರತಿ ಗರ್ಭೇ ಅಂತಃ. ತೈ. ಆ. ೩. ೧೩.
4. ಆದಿತ್ಯವರ್ಣಂ ತಮಸಃ ಪರಸ್ತಾತ್. ಪು. ಸೂ.
5. ಆನಂದೋ ಬ್ರಹ್ಮ. ತೈ ಭೃ. ೬. ೧.

**ತತ್** — (ಅದನ್ನು)

**ಪಶ್ಯಾಮಿ** – ನೋಡುವೆನು. ಹೀಗೆ 'ಪಶ್ಯೇಯಂ' ಎಂಬ 'ಲಿಙ್' ಅರ್ಥದ ಪ್ರಯೋಗಕ್ಕೆ ಬದಲು ಈ ಪ್ರಯೋಗ ಎಂದು ತಿಳಿಯಬೇಕು[1]. ಈ ಬದಲಾವಣೆ ವೈದಿಕ ವ್ಯಾಕರಣಾನುಸಾರ ವೈದಿಕಸಾಹಿತ್ಯಕ್ಕೆ ತಕ್ಕದ್ದಾಗಿದೆ. ನೋಡಬಯಸುವೆನು ಎಂದು ಇದರ ಭಾವಾರ್ಥ.

### ಪರಮಾತ್ಮನಿಗೆ ದಿವ್ಯರೂಪ, ಶರೀರ, ಗುಣ ಮುಂತಾದವು ಉಂಟೇ?

"ದೇಹವಿಲ್ಲದವನನ್ನು ಗಾಯವಿಲ್ಲದವನನ್ನು"[2] "ಶರೀರವಿಲ್ಲದವನಾದರೂ ಶರೀರಗಳೊಳಗೇ"[3] "ಕೈಕಾಲಿಲ್ಲದವನಾದರೂ ವೇಗವಾಗಿ ಓಡುವವನೂ, ಓಡಿ ಹಿಡಿಯುವವನೂ"[4] ಇವೇ ಮುಂತಾದ (ಉಪನಿಷತ್ತಿನ) ಸಾಮಾನ್ಯವಾದ ಮಾತುಗಳೆಲ್ಲವೂ, ಜೀವಾತ್ಮಗಳಿಗೆ ಅವುಗಳ ಪುಣ್ಯಪಾಪಗಳಿಗನುಸಾರವಾಗಿ ಬಂದು ಸೇರಿಕೊಳ್ಳುವ ರಕ್ತ ಮಾಂಸಾದಿಗಳಿಂದ ಹೊಲಸಾದ ಈ ದೇಹಗಳಂತಹ ದೇಹವಿಲ್ಲದವನು ಎಂಬ ವಿಶೇಷಾರ್ಥದಲ್ಲಿ ಪ್ರಯೋಗವಾಗಿವೆ.

ಈ ವಿಶೇಷಾರ್ಥಗಳಿಗೆ ಆಧಾರ ವಚನಗಳು ಇವು :– "ಹುಟ್ಟದವನಾದರೂ", "ಹುಟ್ಟದವನೂ ವ್ಯತ್ಯಾಸವಾಗದಂತಹ ಸ್ವರೂಪವುಳ್ಳವನೂ ಸಹ ಆಗಿದ್ದರೂ, "ಇವನಿಗೆ ಈ ಜಡಪ್ರಕೃತಿಯಿಂದಾಗುವಂತಹ ದೇಹವು ಇಲ್ಲವೇ ಇಲ್ಲ"[5] ಇತ್ಯಾದಿ.

### ಉಂಟು ಇಲ್ಲಗಳ ಚರ್ಚೆ
### ವಿಷಯ

ಅಂದ ಹಾಗೆ ಇಲ್ಲಿ ಒಂದು ವಿಷಯ ಚರ್ಚಿಸಬೇಕಾಗಿದೆ. ಪರಮಾತ್ಮನಿಗೆ ಗುಣಗಳಿವೆ; ಶರೀರಗಳಿವೆ ಇನ್ನೂ ಎಲ್ಲವೂ ಇವೆ ಎಂದು ಶಾಸ್ತ್ರದಲ್ಲಿ ಹೇಳಿದೆ. ಅವನಿಗೆ ಗುಣವೊಂದೂ ಇಲ್ಲ; ಹೆಸರೂ ಇಲ್ಲ ಏನೂ ಇಲ್ಲ ಎಂದೂ ಹೇಳಿದೆ.[6]

---

1. ವಿಧಿ, ನಿಮಂತ್ರಣ, ಆಮಂತ್ರಣ, ಅಧೀಷ್ಟ, ಸಂಪ್ರಶ್ನ, ಪ್ರಾರ್ಥನೆ, ಎಂಬ ಅರ್ಥಗಳಲ್ಲಿ 'ಲಿಙ್' ಎಂಬ ಅಂಶವನ್ನು ಸೇರಿಸಿದ ಕ್ರಿಯಾಪದವನ್ನು ಉಪಯೋಗಿಸಲಾಗುವುದು.

2. ಅಕಾಯಮವ್ರಣಮ್. ಈಶಾ. ೮.

3. ಅಶರೀರಂ ಶರೀರೇಷು. ಕಠ. ೧೨ ೨೨.

4. ಅಪಾಣಿಪಾದೋ ಜವನೋ ಗ್ರಹೀತಾ. ಶ್ವೇ. ೩.೧೯.

5. ಅಜಾಯಮಾನಃ. ತೈ. ಪು. ಸೂ.
ಅಜೋಽಪಿ ಸನ್ನವ್ಯಯಾತ್ಮಾ. ಗೀ. ೪. ೬.
ನ ಚಾಸ್ಯ ಪ್ರಾಕೃತಾ ಮೂರ್ತಿಃ. ವರಾಹ. ಪು. ೭೫.೪೨.

6. ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷಃ. ಛಾಂ. ೧.೬.೬.
ಸರ್ವಕರ್ಮಾ ಸರ್ವಗಂಧಃ. ಛಾಂ. ೩.೧೪.೪; ಪತಿಂ ವಿಶ್ವಸ್ಯಾತ್ಮೇಶ್ವರಂ. ತೈ. ನಾ. ೧೧.೩.
ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ. ಶ್ವೇ. ೬.೮. ತಸ್ಯ ಹವಾ ಏತಸ್ಯ ಬ್ರಹ್ಮಣೋ ನಾಮ ಸತ್ಯಮ್. ಛಾಂ. ೮.೩.೪. ತಸ್ಯೋದಿತಿ ನಾಮ. ಛಾಂ. ೧ ೬.೭.
ನಿರ್ಗುಣಂ; ನಿರಂಜನಮ್. ಆತ್ಮೋಪನಿಷತ್; ಶ್ವೇ. ೬.೧೯.
ಅವಿಕಾರಾಯ. ವಿ. ಪು. ೧. ೨. ೧. ನೇಹ ನಾನಾಸ್ತಿ ಕಿಂಚನ. ಕಠ. ೨.೧. ೧೧.
ನಿಷ್ಕಲಂ ನಿಷ್ಕ್ರಿಯಮ್. ಶ್ವೇ. ೬. ೧೯. ಅಗೋತ್ರಮವರ್ಣಮ್. ಮುಂ. ೧.೧.೬.

## ಆಕ್ಷೇಪ

ಇಂತಹ ಮಾತುಗಳಲ್ಲಿ ನಾವು ಸ್ವಲ್ಪ ಯೋಚಿಸಿ ನೋಡಿದರೆ ಇಲ್ಲಿ 'ಇದೆ' 'ಇಲ್ಲ' ಎಂಬ ಮಾತುಗಳು ಪರಸ್ಪರ ವಿರೋಧಿಗಳಾಗಿ ತಿಳಿದು ಬರುತ್ತವೆ. ಏನಾದರೊಂದು ಇದೆ ಎಂಬ ವಿಚಾರ ಮೊದಲು ಬಂದರೆ, ನಂತರ ಇಲ್ಲ ಎಂಬ ವಿಚಾರ ಮಾಡಬಹುದು. ಹೀಗೆ 'ಇದೆ' ಎನ್ನುವುದನ್ನು 'ಇಲ್ಲ' ಎನ್ನುವ ಮಾತು ನಿವಾರಿಸುತ್ತದೆ. ಹೀಗಾಗಿ ಗುಣ–ಗಿಣ ಏನೂ ಪರಮಾತ್ಮನಿಗೆ ಇಲ್ಲ ಎನ್ನುವುದೇ ನಿಶ್ಚಯವಾಗುವುದು. ಇದಕ್ಕೆ ಆಧಾರವಾಗಿ "ಅಪಚ್ಛೇದ" ಎಂಬ ಒಂದು ವೈದಿಕನ್ಯಾಯ ನಿಯಮ[1] ಮೀಮಾಂಸಾಶಾಸ್ತ್ರದಲ್ಲಿದೆ. ಆದುದರಿಂದ ಪರಮಾತ್ಮನಿಗೆ ನಾಮ - ರೂಪ - ಗುಣ - ವಿಗ್ರಹ - ಇತ್ಯಾದಿಗಳೇನಿವೆಯೆಂದರೂ ಅವೆಲ್ಲಾ ಸುಳ್ಳು, ಬರಿಯ ಮಾಯೆ ಎಂದಿಟ್ಟುಕೊಳ್ಳಲೇಬೇಕಲ್ಲವೆ? ಎಂದು ಆಕ್ಷೇಪಿಸಬಹುದು.

---

1. ಅಪಚ್ಛೇದನ್ಯಾಯ:- "ಪಂಚರ್ತ್ವಿಜಃ ಸಮನ್ವಾರಬ್ಧಾಃ ಪ್ರಸರ್ಪನ್ತಿ, ಅಧ್ವರ್ಯುಂ ಪ್ರಸ್ತೋತಾನ್ವಾರಭತೇ, ಪ್ರಸ್ತೋತಾರಂ ಪ್ರತಿಹರ್ತಾ, ಪ್ರತಿಹರ್ತಾರಮುದ್ಗಾತಾ, ಉದ್ಗಾತಾರಂ ಬ್ರಹ್ಮಾ, ಬ್ರಹ್ಮಾಣಂ ಯಜಮಾನಃ"–ಎಂಬ ವಾಕ್ಯದಲ್ಲಿ ಅಧ್ವರ್ಯು ಪ್ರಸ್ತೋತೃ, ಪ್ರತಿಹರ್ತೃ, ಉದ್ಗಾತೃ, ಬ್ರಹ್ಮ, ಯಜಮಾನ (ಯಜಮಾನನಾದಮೇಲೆ ಬ್ರಹ್ಮ – ಎಂಬ ಪಕ್ಷವೂ ಉಂಟು) ಈ ಕ್ರಮದಲ್ಲಿ ಋತ್ವಿಜರು ಒಬ್ಬರ ಕಚ್ಚೆಯನ್ನೊಬ್ಬರು ಮುಟ್ಟಿಕೊಂಡು (ಜ್ಯೋತಿಷ್ಟೋಮಯಾಗದ ಪ್ರಾತಃಸವನದಲ್ಲಿ ಹೋಗುತ್ತಿರಬೇಕು. ಈ ಅನ್ವಾರಂಭಣವು ವಿಚ್ಛಿನ್ನವಾದರೆ (ಸ್ಪರ್ಶವು ತಪ್ಪಿದರೆ) (೧) ಬಹಿಷ್ಪವಮಾನದಲ್ಲಿ ಹೋಗುತ್ತಿರುವವರೊಳಗೆ ಉದ್ಗಾತೃವಿಗೆ ಅಪಚ್ಛೇದವಾದರೆ ದಕ್ಷಿಣೆಯಿಲ್ಲದೆ ಯಜ್ಞವನ್ನು ಮುಗಿಸಿ, ಮತ್ತೊಂದು ಯಜ್ಞವನ್ನು ಮಾಡಿ, ಹಿಂದಿನ ಯಜ್ಞದಲ್ಲಿ ಕೊಡಬೇಕಾಗಿದ್ದ ದಕ್ಷಿಣೆಯನ್ನೇ ಕೊಡಬೇಕು. (೨) ಪ್ರತಿಹರ್ತೃವಿಗೆ ಅಪಚ್ಛೇದವಾದರೆ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡಬೇಕು. – ಎಂದು ಶಾಸ್ತ್ರ. ಇಲ್ಲಿ ಉದ್ಗಾತೃ ಪ್ರತಿಹರ್ತೃಗಳಿಗೆ ಬೇರೆ ಬೇರೆ ಪ್ರಯೋಗಗಳಲ್ಲಿ ಅಪಚ್ಛೇದವಾದರೆ ಆಯಾ ಪ್ರಾಯಶ್ಚಿತ್ತ ಶಾಸ್ತ್ರದಂತೆ ಮಾಡಬೇಕು. ಒಂದೇ ಪ್ರಯೋಗದಲ್ಲಿ ಒಟ್ಟಿಗೆ ಅಪಚ್ಛೇದವಾದರೆ, ಉದ್ಗಾತೃ ಪ್ರಾಯಶ್ಚಿತ್ತ; ಏಕೆಂದರೆ ಅವನೇ ವರ್ಗಪ್ರಧಾನನು. ಪ್ರಧಾನಾಪಚ್ಛೇದಕ್ಕೆ ಪ್ರಾಯಶ್ಚಿತ್ತವು ಬೇಕಾಗುತ್ತದೆ. ಒಂದೇ ಪ್ರಯೋಗದಲ್ಲಿ ಒಂದಾಗುತೊಂದರ ಅಪಚ್ಛೇದವಾದರೆ ಹಿಂದಿನ ಪ್ರಾಯಶ್ಚಿತ್ತವು ದುರ್ಬಲ, ಮುಂದಿನದು ಪ್ರಬಲ ಎಂದು 'ಪೌರ್ವಾಪರ್ಯೇ ಪೂರ್ವ ದೌರ್ಬಲ್ಯಂ ಪ್ರಕೃತಿವತ್" (ಜೈ. ೬. ೫. ೫೪) ಎಂಬ ಸೂತ್ರದಲ್ಲಿ ಹೇಳಿದೆ. ಇಲ್ಲಿ ಮೊದಲನೆಯದಕ್ಕೆ ಇನ್ನೂ ವಿರೋಧಿಯು ಉತ್ಪನ್ನವಾಗಿಲ್ಲವಾದ್ದರಿಂದ ಮೊದಲನೆಯದೇ ಪ್ರಬಲ, ಎರಡನೆಯದು ತನ್ನ ಪ್ರತಿಪಕ್ಷವಿರುವಾಗಲೇ ಹುಟ್ಟುವುದರಿಂದ ದುರ್ಬಲ, ಎಂಬುದು ಪೂರ್ವಪಕ್ಷ; ಆದರೆ ಮೊದಲನೆಯದಕ್ಕೆ ಹುಟ್ಟುವ ಕಾಲದಲ್ಲಿ ವಿರೋಧಿಯು ಇರುವುದಿಲ್ಲವಾದ್ದರಿಂದ ಅದು ಏನನ್ನೂ ಬಾಧಿಸದೆಯೇ ಹುಟ್ಟಬಹುದು; ಎರಡನೆಯದಾದರೋ, ಹುಟ್ಟುವಾಗ ತನಗೆ ವಿರೋಧಿಯಿರುವುದರಿಂದ ಅದನ್ನು ಬಾಧಿಸದೆ ಹುಟ್ಟುವುದೇ ಆಗುವುದಿಲ್ಲವಾದ್ದರಿಂದ ಮೊದಲಿನದನ್ನು ಬಾಧಿಸಿಯೇ ಹುಟ್ಟುವುದು. ಆದ್ದರಿಂದ ಇದು ಅನನ್ಯಥಾಸಿದ್ಧವಾಗಿರುತ್ತದೆಯಾಗಿ ಇದೇ ಪ್ರಬಲ ಎಂದು ಸಿದ್ಧಾಂತ. (ಶ್ರು. ಪ್ರ.)

## ಸಮಾಧಾನ

ಆದರೆ ಈ ಆಕ್ಷೇಪ ಸರಿಯಿಲ್ಲ. ಮೀಮಾಂಸಾಶಾಸ್ತ್ರದಲ್ಲೇ ಮತ್ತೆರಡು ವಿಶೇಷ ನಿಯಮಗಳಿವೆ. ಒಂದು "ಉತ್ಸರ್ಗಾಪವಾದ"[1] ಮತ್ತೊಂದು "ಭಾಗಪಶು"[2] ಎಂದು. ಇದರಂತೆ 'ಇಲ್ಲ' ಎನ್ನುವುದನ್ನು ಸಾಮಾನ್ಯವಾದ ಮಾತನ್ನಾಗಿಯೂ 'ಇದೆ' ಎನ್ನುವುದನ್ನು ವಿಶೇಷವಾದ ಮಾತನ್ನಾಗಿಯೂ ಇಟ್ಟುಕೊಳ್ಳಬೇಕು. ವಿಶೇಷವಾದ ಮಾತನ್ನೂ, ವಿಷಯವನ್ನೂ ಸಾಮಾನ್ಯವಾದ ಮಾತು ತಳ್ಳಿಹಾಕಲಾರದು. ಹಾಗೂ ತಳ್ಳಿಹಾಕಬೇಕಾದ ಅಂಶಗಳು ಇಲ್ಲಿ ಕೆಲವು ವಿಶೇಷ ಅಂಶಗಳ ಹೊರತು ಉಳಿದವುಗಳು ಮಾತ್ರ. ಹೀಗೆ ಇಲ್ಲಿ 'ಗುಣಗಳಿಲ್ಲ' ಎಂದರೆ ಹೊಲಸಾದ ಯಾವುದೇ ಗುಣಗಳಿಲ್ಲ ಎಂದೂ, 'ಗುಣ ಮುಂತಾದವು ಇವೆ' ಎಂದರೆ ಉತ್ತಮವಾದ ದಿವ್ಯವಾದ ಗುಣ ಮುಂತಾದವೆಲ್ಲವೂ ಇವೆ ಎಂದೂ ನಿರ್ಣಯಿಸಬೇಕು. ಇದೇ ವೈದಿಕ ನಿಯಮಗಳಿಗೆ ಅನುಸಾರವಾದುದೂ ನ್ಯಾಯಸಮ್ಮತವೂ ಆದ ವಿಚಾರ.

## ಉಂಟು ಇಲ್ಲಗಳಿಗೆ ವಿರೋಧವಿಲ್ಲ

ಹೀಗೆ ಇಲ್ಲಿ 'ಉಂಟು' ಎಂಬ ಮಾತಿಗೆ ವಿಷಯ ಸದ್ಗುಣಾದಿಗಳು, 'ಇಲ್ಲ' ಎಂಬ ಮಾತಿಗೆ ವಿಷಯ ದುರ್ಗುಣಾದಿಗಳು ಎಂದು ತಿಳಿಯಬೇಕು. ಹಾಗೂ ವಿಷಯವೇ ಬೇರೆಬೇರೆಯಾಗಿರುವುದರಿಂದ 'ಉಂಟು' 'ಇಲ್ಲ' ಎಂಬ ಮಾತುಗಳು ಒಂದೇ ವಿಷಯದಲ್ಲಿ ಇಲ್ಲದುದರಿಂದ ಪರಸ್ಪರ ವಿರೋಧ ಎಂಬುದು ಇಲ್ಲವೇ ಇಲ್ಲ.

---

1. **ಉತ್ಸರ್ಗಾಪವಾದ ನ್ಯಾಯ :-** ಸಾಮಾನ್ಯ ಶಾಸ್ತ್ರಕ್ಕೆ ಶಬ್ದೋಪಾತ್ತವಾದ ವಿಶೇಷದೊಡನೆ (ವಿಶೇಷಶಾಸ್ತ್ರದೊಡನೆ) ವಿರೋಧವು ಪ್ರಸಕ್ತವಾಗುವುದಾಗಿದ್ದರೆ ಅಂಥ ವಿರೋಧವನ್ನು ಪರಿಹರಿಸುವುದಕ್ಕಾಗಿ ಸಾಮಾನ್ಯಶಾಸ್ತ್ರಕ್ಕೆ ಶಬ್ದೋಪಾತ್ತ ವಿಶೇಷವ್ಯತಿರಿಕ್ತ ವಿಷಯದಲ್ಲಿ ಪ್ರವೃತ್ತಿಯನ್ನು ಸ್ವೀಕರಿಸುವಿಕೆ ಉತ್ಸರ್ಗಾಪವಾದ ನ್ಯಾಯವೆನಿಸಿಕೊಳ್ಳುವುದು.

   ಹಿಂಸಾಸಾಮಾನ್ಯವನ್ನು ಪ್ರತಿಷೇಧಿಸುವ 'ಮಾ ಹಿಂಸ್ಯಾತ್ ಸರ್ವಾ ಭೂತಾನಿ' ಎಂಬ ಸಾಮಾನ್ಯಶಾಸ್ತ್ರಕ್ಕೆ ಹಿಂಸಾವಿಶೇಷವನ್ನು ವಿಧಿಸುವ 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬ ವಿಶೇಷಶಾಸ್ತ್ರದೊಡನೆ ಪ್ರಸಕ್ತವಾಗುವ ವಿರೋಧವನ್ನು ಪರಿಹರಿಸುವುದಕ್ಕಾಗಿ ವಿಹಿತ ಹಿಂಸಾವ್ಯತಿರಿಕ್ತವಿಷಯದಲ್ಲಿ ಸಾಮಾನ್ಯಶಾಸ್ತ್ರಕ್ಕೆ ಪ್ರವೃತ್ತಿಯನ್ನು ನ್ಯಾಯದರ್ಶಿಗಳು ಸ್ವೀಕರಿಸಿರುವರಷ್ಟೆ ?

   ಮತ್ತು – ಹೋಮಸಾಮಾನ್ಯಕ್ಕೆ ಅಧಿಕರಣ ಪ್ರದೇಶವನ್ನು ವಿಧಿಸುವ 'ಯದಾಹವನೀಯೇ ಜುಹೋತಿ' ಎಂಬ ಸಾಮಾನ್ಯಶಾಸ್ತ್ರಕ್ಕೆ ಹೋಮವಿಶೇಷದಲ್ಲಿ ಏಕಹಾಯನೀ ಗೋವಿನ ಪದದೇಶವನ್ನು ಅಧಿಕರಣವಾಗಿ ವಿಧಿಸುವ 'ಪದೇ ಜುಹೋತಿ' ಎಂಬ ವಿಶೇಷಶಾಸ್ತ್ರದೊಡನೆ ಪ್ರಸಕ್ತವಾಗುವ ವಿರೋಧವನ್ನು ಪರಿಹರಿಸುವುದಕ್ಕಾಗಿ ಪದಹೋಮವ್ಯತಿರಿಕ್ತ ವಿಷಯದಲ್ಲಿ ಆಹವನೀಯ ಶಾಸ್ತ್ರಕ್ಕೆ ಪ್ರವೃತ್ತಿಯನ್ನು ಸ್ವೀಕರಿಸಿರುವರಷ್ಟೆ?

2. ಸಾಮಾನ್ಯಶಾಸ್ತ್ರಕ್ಕೆ ವಿಶೇಷಶಾಸ್ತ್ರದೊಡನೆ ಪ್ರಸಕ್ತವಾಗುವ ವಿರೋಧವನ್ನು ಪರಿಹರಿಸುವುದಕ್ಕಾಗಿ ಶಬ್ದೋಪಾತ್ತವಾದ ವಿಶೇಷಮಾತ್ರದಲ್ಲಿಯೇ ಸಾಮಾನ್ಯಶಾಸ್ತ್ರಕ್ಕೆ ಪರ್ಯವಸಾನವನ್ನು ಸ್ವೀಕರಿಸುವಿಕೆ 'ಸಾಮಾನ್ಯವಿಶೇಷನ್ಯಾಯ' ಅಥವ 'ಭಾಗಪಶು ನ್ಯಾಯ' ಎನಿಸಿಕೊಳ್ಳುವುದು. "ಪಶುನಾ ಯಜೇತ" ಎಂಬ ಸ್ಥಳದಲ್ಲಿ ಪಶುಸಾಮಾನ್ಯಬೋಧಕವಾದ ಪಶುಶಬ್ದಕ್ಕೆ 'ಛಾಗಸ್ಯ ವಪಾಯಾ ಮೇದಸೋಽನುಬ್ರೂಹಿ' ಎಂಬ ಮಂತ್ರವರ್ಣಬಲದಿಂದ ಛಾಗರೂಪವಾದ ಪಶುವಿಶೇಷ್ಯದಲ್ಲಿಯೇ ಪರ್ಯವಸಾನವನ್ನು ಸ್ವೀಕರಿಸಿರುವರಷ್ಟೆ?

   ಪ್ರಯುಕ್ತವಾಗಿರುವ ಸಾಮಾನ್ಯಶಬ್ದದಿಂದಲೇ ವಿಶೇಷಕ್ಕೂ ಬೋಧೆ ಸಂಭವಿಸುವುದಾಗಿದ್ದರೂ ವಿಶೇಷಶಬ್ದವನ್ನು ಪ್ರಯೋಗಿಸಿದ್ದರೆ ಅಂಥ ವಿಶೇಷಬೋಧಕಶಬ್ದಕ್ಕೆ ವೈಯರ್ಥ್ಯವು ಬಾರದಿರುವುದಕ್ಕಾಗಿ ಉಕ್ತ ವಿಶೇಷವ್ಯತಿರಿಕ್ತ ವಿಷಯಕತ್ವವನ್ನು ಸಾಮಾನ್ಯಶಬ್ದಕ್ಕೆ ಸ್ವೀಕರಿಸುವಿಕೆ 'ಗೋಬಲೀವರ್ದನ್ಯಾಯ' ಎನಿಸಿಕೊಳ್ಳುವುದು. ತತ್ತ್ವಶುದ್ಧಿ. ಪು. ೫೩೧.

## ಪ್ರಮಾಣಾಧಾರ

"ಬ್ರಹ್ಮದ ಗುಣ, ವಿಕಾರ, ಶರೀರಭೇದಗಳು, ಕರ್ಮಗಳು ಮುಂತಾದವುಗಳ ಬಗ್ಗೆ ಉಂಟು ಇಲ್ಲ ಎಂಬ ಮಾತುಗಳೇನಿವೆಯೋ ಅವುಗಳೆಲ್ಲ ಪರಸ್ಪರ ಬೇರೆ ಬೇರೆ ವಿಷಯಗಳನ್ನು ಒಳಗೊಂಡಿವೆಯಾಗಿ ವಿರೋಧದ ಲೇಶಾಂಶವನ್ನೂ ಪಡೆಯಲಾರವು. ಆದುದರಿಂದ ಇಲ್ಲಿ ವಿಧಿವಾಕ್ಯಗಳನ್ನು ನಿಷೇಧ ವಾಕ್ಯಗಳು ಬಾಧಿಸಲಾರವು"[1] ಎಂದು ವರದಾಚಾರ್ಯರು ತತ್ತ್ವಸಾರ ಗ್ರಂಥದಲ್ಲಿ ಹೇರುವರು.

## 'ಅಸೌ' ಪದಗಳ ಅನ್ವಯ

**"ಯಃ ಅಸೌ ಪುರುಷಃ, ಅಹಂ ಸಃ ಅಸೌ ಅಸ್ಮಿ"**– ಯಾವ ಈ ಮಹಾಪುರುಷನೊಬ್ಬನಿರುವನೋ; ನಾನು ಅದೇ ಈ ಮಹಾಪುರುಷನಾಗಿರುವೆನು ಎಂದು ವಿಂಗಡಿಸಿ ಅನ್ವಯಿಸಿಕೊಳ್ಳಬೇಕು.

## ಪುರುಷ ಎಂದರೆ ಇಲ್ಲಿ ಪರಮಾತ್ಮ

ಇಲ್ಲಿ ಪುರುಷ ಎಂಬ ಶಬ್ದಕ್ಕೆ ಜೀವಾತ್ಮ ಎಂಬ ಅರ್ಥ ಮಾಡಬಾರದೇಕೆ? "ಪ್ರಕೃತಿ ಮತ್ತು ಪುರುಷ (ಜೀವಾತ್ಮ) ಈ ಎರಡನ್ನೂ ಅನಾದಿ ಎಂದೇ ತಿಳಿ"[2] "ಯೋಗವೂ ಯೋಗವರಿತವರನ್ನು ಮುನ್ನಡೆಸುವವನೂ ಪ್ರಕೃತಿ ಮತ್ತು ಪುರುಷ (ಜೀವಾತ್ಮ) ರಿಗೆ ಒಡೆಯನೂ"[3] ಮುಂತಾದ ಕಡೆ ಈ ಅರ್ಥ ಪ್ರಸಿದ್ಧವಾಗಿದೆಯಲ್ಲ ಎನ್ನಬಹುದು. ಆದರೂ "ಆ ಪುರುಷ (ಪರಮಾತ್ಮ) ನಿಂದಲೇ ಈ ಎಲ್ಲವೂ ತುಂಬಿದೆ."[4] "ಹಿಂದೆಯೂ ನಾನು ಇಲ್ಲೇ ಇದ್ದೆ ಎಂದು. ಆದುದರಿಂದಲೇ ಪುರುಷ (ಪರಮಾತ್ಮ) ನಿಗೆ ಪುರುಷತ್ವ"[5] "ಹಿರಿಯ ಒಡೆಯನಲ್ಲವೆ ಪುರುಷ (ಪರಮಾತ್ಮ), ಸತ್ವಗುಣವನ್ನು ಹೆಚ್ಚಿಸುವವನೂ ಇವನೇ"[6] ಮುಂತಾದ ವೇದವಚನಗಳಿಂದ, ಪೂರ್ಣತೆ, ಪೂರ್ವಕಾಲದಿಂದಲೇ ಇರುವಿಕೆ ಮುಂತಾದ ಗುಣವಿರುವವನಾಗಿ ನಾಲ್ಕುವೇದಗಳಲ್ಲೂ ಇರುವ ಪುರುಷ ಸೂಕ್ತದಿಂದ ಪ್ರಸಿದ್ಧನಾಗಿ ತಿಳಿದು ಬರುವ ಮಹಾಪುರುಷ (ಪರಮಾತ್ಮ)ನೇ ಇಲ್ಲಿ 'ಪುರುಷ' ಎಂಬ ಶಬ್ದದ ಅರ್ಥ ಎಂದು ಅಭಿಪ್ರಾಯ.[7]

## ಅಹಂ ಶಬ್ದದ ವಿಶೇಷಾರ್ಥ

'ಅಹಂ' ಎಂದರೆ ನಾನು ಎಂದಷ್ಟೆ ಅರ್ಥವಲ್ಲ. ನನ್ನೊಳಗಿರುವ ಪರಮಾತ್ಮ ಎಂದು ಅರ್ಥ. ಹೀಗೆ "ಹೆಚ್ಚಿನ ಅಂಶ ಸೇರಿಸಿದರೂ ಮೂಲತಃ ಇರುವ ಅಂಶಕ್ಕೆ ಏನೂ ಹಾನಿಯಿಲ್ಲವಷ್ಟೆ."[8] ಎಂಬ ನಿಯಮವನ್ನು ಇಲ್ಲಿ ಗಮನಿಸಬಹುದು.

---

1. ಯದ್ಬ್ರಹ್ಮಣೋ ಗುಣವಿಕಾರಶರೀರಭೇದ ಕರ್ಮಾದಿಗೋಚರ ವಿಧಿಪ್ರತಿಷೇಧವಾಚಃ।
ಅನ್ಯೋನ್ಯಭಿನ್ನವಿಷಯಾ ನ ವಿರೋಧಗಂಧಮರ್ಹನ್ತಿ ತನ್ನ ವಿಧಯಃ ಪ್ರತಿಷೇಧಬಾಧ್ಯಾಃ॥ ತತ್ತ್ವಸಾರ. ೬೯.
2. ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ. ಗೀ. ೧೩.೧೯.
3. ಯೋಗೋ ಯೋಗವಿದಾಂ ನೇತಾ ಪ್ರಧಾನಪುರುಷೇಶ್ವರಃ. ಸಹಸ್ರನಾಮಾಧ್ಯಾಯ.
4. ತೇನೇದಂ ಪೂರ್ಣಂ ಪುರುಷೇಣ ಸರ್ವಂ. ಶ್ವೇ. ೩.೯.
5. ಪೂರ್ವಮೇವಾಹಮಿಹಾಸಮಿತಿ. ತತ್ಪುರುಷಸ್ಯ ಪುರುಷತ್ವಂ. ಯ. ತೈ. ಆರ. ೧.
6. ಮಹಾನ್ ಪ್ರಭುರ್ವೈ ಪುರುಷಸ್ಸತ್ತ್ವಸ್ಯೈಷ ಪ್ರವರ್ತಕಃ. ಶ್ವೇ. ೩.೧೨.
7. ಇಲ್ಲಿಂದ ಮುಂದೆ ವೇದಾಂತಾಚಾರ್ಯ ಭಾಷ್ಯದಲ್ಲಿರುವ ವಿಚಾರಗಳನ್ನೇ ವ್ಯತ್ಯಾಸದಿಂದ ಸರಳಗೊಳಿಸಲಾಗಿದೆ. ಈ ಅಂಶಗಳನ್ನು ಮೂಲ ಗ್ರಂಥ ನೋಡಿ ತಿಳಿಯಬಹುದು.
8. ಅಧಿಕಂ ತು ಪ್ರವಿಷ್ಟಂ ನ ತು ತದ್ಧಾನಿಕರಮ್, ಇತಿ ನ್ಯಾಯಃ.

# ಪದಾರ್ಥ ದೀಪಿಕೆ

ಯತ್ತೇ.........................ಸೋಽಹಮಸ್ಮಿ:-

ಅವನ ದಿವ್ಯರೂಪದ ದರ್ಶನವು ನನಗಾದ ಕಾರಣದಿಂದ, ಅವನ ರೂಪಕ್ಕೆ ಸಮನಾದ ರೂಪವನ್ನೇ ನಾನು ಪಡೆದವನಾಗಿರುವೆನು.

ಈ ಅಂಶವು "ನನಗೆ ಸಮಾನವಾದ ಧರ್ಮ (ರೂಪ) ಗಳನ್ನು ಪಡೆದವರು"[1] "ನನಗೆ ಅತ್ಯಂತ ಸಮನಾಗುತ್ತಾನೆ"[2] ಇವೇ ಮುಂತಾದ ಉಪನಿಷತ್ ವಚನಗಳಿಂದ ತಿಳಿದುಬರುತ್ತದೆ.

ಒಟ್ಟಿನಲ್ಲಿ ಪರಮಾತ್ಮನ ಸಾರೂಪ್ಯವನು ಜೀವಾತ್ಮ ಪಡೆಯುವನು ಎಂಬುದು ತಾತ್ಪರ್ಯ.

# ಸುಬೋಧಿನೀ

## ಪೂರ್ವಾಪರ ಸಂಗತಿ

ಹಿಂದಿನ ಮಂತ್ರದಲ್ಲಿ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಮನಸ್ಸು ನಿರ್ಮಲವಾಗಲೆಂದು ಪ್ರಾರ್ಥಿಸಿ ಆಯಿತಷ್ಟೆ. ಹೀಗೆ ಮನಸ್ಸು ಎಷ್ಟೇ ನಿರ್ಮಲವಾದರೂ; ಪರಮಾತ್ಮನ ದಿವ್ಯರೂಪದ ಕಣ್ಣು ಕುಕ್ಕುವ ಕಾಂತಿಯನ್ನು, ಕಣ್ಣು ತಡೆದುಕೊಳ್ಳಲಾರದು. ಆದುದರಿಂದ ಅಂತಹ ತೀಕ್ಷ್ಣವಾದ ಕಾಂತಿಯನ್ನು ಒಳಸೆಳೆದುಕೊಳ್ಳುವಂತೆ ಈಗ ಆ ಪರಮಾತ್ಮನನ್ನೇ ಪ್ರಾರ್ಥಿಸಲಾಗುತ್ತದೆ.

## ಪದವಿವರಣೆ

**ಪೂಷನ್** – ಎಲ್ಲವೂ ಪರಮಾತ್ಮನ ಶರೀರವೆನಿಸಿದ್ದು ಆ ಶರೀರವನ್ನು ಕುರಿತು ಹೇಳುವ ಎಲ್ಲ ಶಬ್ದಗಳೂ ಸಹ ಶರೀರಿಯಾದ ಪರಮಾತ್ಮನನ್ನೇ ಕುರಿತು ಹೇಳುವುದರಿಂದ, ಪೂಷನ್ ಎಂದರೂ ಸೂರ್ಯದೇವನ ಶರೀರಿಯಾದ ಪರಮಾತ್ಮನೇ ಎಂದರ್ಥ.

**ಏಕರ್ಷೇ** – ಋಷಿ ಎಂದರೆ ಅತೀಂದ್ರಿಯ ವಿಚಾರವೆಲ್ಲ ತಿಳಿಯಬಲ್ಲವನು. ಹೀಗೆ ತಿಳಿಯಬಲ್ಲ ಏಕೈಕ ವ್ಯಕ್ತಿ ಇವನು, ಅಂದರೆ ಎಲ್ಲವನ್ನೂ ಎಲ್ಲೆಂದರಲ್ಲಿ ಯಾವಾಗಬೇಕಾದರೂ ತಾನೇ ನೇರವಾಗಿ ಯಾವ ಇಂದ್ರಿಯಗಳ ಸಹಾಯವೂ ಇಲ್ಲದೆಯೇ ತಿಳಿದು ಅನುಭವಿಸಬಲ್ಲವನು ಪರಮಾತ್ಮನೊಬ್ಬನೇ ಎಂದು ಭಾವಾರ್ಥ.

**ಯಮ** – ಎಲ್ಲವನ್ನೂ ಒಳಹೊಕ್ಕು ನಿಯಂತ್ರಿಸುವವನು ಎಂದರ್ಥ.

**ಸೂರ್ಯ** – ಆಶ್ರಿತರೆಲ್ಲರ ಬುದ್ಧಿಯನ್ನೂ ಪ್ರೇರಿಸುವಾತ ಎಂದರ್ಥ.

**ಪ್ರಾಜಾಪತ್ಯ** – ಪ್ರಜೆಗಳೊಡೆಯ. ವಿಶ್ವಕ್ಕೇ ಒಡೆಯ ಎಂಬ ಈ ವಿಚಾರವನ್ನು ಉಪನಿಷತ್ತಿನಲ್ಲೇ ಹೇಳಲಾಗಿದೆ.

**ರಶ್ಮೀನ್** – ನಿನ್ನ ದಿವ್ಯದೇಹದ ತೀಕ್ಷ್ಣಕಾಂತಿಗಳನ್ನು.

**ವ್ಯೂಹ** – ಒಂದು ಕ್ಷಣದ ಮಟ್ಟಿಗಾದರೂ ಹಿಂತೆಗೆದುಕೋ.

---

1. ಮಮ ಸಾಧರ್ಮ್ಯಮಾಗತಾಃ. ಗೀ. ೧೪.೨.

2. ಪರಮಂ ಸಾಮ್ಯಮುಪೈತಿ. ಮುಂ. ೩.೧.೩

**ತೇಜಃ** – ನಮ್ಮ ಕಣ್ಣಿಗೆ ಹಿತಕರವಾದ ಕಾಂತಿಯನ್ನು.

**ಸಮೂಹ** – ಒಗ್ಗೂಡಿಸಿಕೋ.

**ಯತ್, ಕಲ್ಯಾಣತಮಂ, ತೇ, ರೂಪಂ** – ಎಲ್ಲರಿಗೂ ಒಳ್ಳೆಯದಾದ ಆಕಾರವು ನಿನಗೆ ಯಾವುದುಂಟೋ.

**ತತ್, ಪಶ್ಯಾಮಿ** – ಅದನ್ನು ನೋಡಬೇಕು.

**ಭಾವಾರ್ಥ**

ಕೋಟ್ಯಾಂತರ ಸೂರ್ಯರ ಒಕ್ಕೂಟದ ತೇಜಸ್ಸಿನಂತೆ ಉಗ್ರವಾದ ನಿನ್ನ ತೇಜಸ್ಸನ್ನು ಒಳಗಡಗಿಸಿಕೊಂಡು, ನಮ್ಮಂತಹವರೆಲ್ಲರ ಕಣ್ಣಿಗೂ ಸೌಮ್ಯವಾಗಿ ಚೆನ್ನಾಗಿ ಕಾಣುವ ತೇಜಸ್ಸನ್ನು ಹೊಮ್ಮಿಸಿ, ಅಮೃತಮಯವಾಗಿ ಸಂತಸಗೊಳಿಸುವಂತಹ ನಿನ್ನ ದಿವ್ಯರೂಪವನ್ನು ನನ್ನ ಕಣ್ಣಿನಲ್ಲಿ ಕಟ್ಟಿಬರುವಂತೆ ಮಾಡು.

**ಪರಮಾತ್ಮನಿಗೆ ರೂಪ ಆಕಾರ ವಿಗ್ರಹ ಉಂಟೆ?**

ಇಂತಹ ದಿವ್ಯತೇಜಸ್ಸನ್ನು ಎದುರಿಸಲಾರದ ಕೆಲವರು ಪರಮಾತ್ಮನಿಗೆ ಅಂತಹ ತೇಜಸ್ಸಿಗೆ ಆಸರೆಯಾದ ಯಾವುದೇ ರೂಪ –ಆಕಾರ– ವಿಗ್ರಹ ಇಲ್ಲವೆಂದು ಕಣ್ಣುಕಾಣದೆ ಹೇಳಿ ಬಿಡುವರು. ಆದರೆ ವೈದಿಕಸಾಹಿತ್ಯವು ಆರು ಗುಣಗಳ ಪೂರ್ಣತೆಯನ್ನೂ ಪಡೆದಿರುವ ಪರಮಾತ್ಮನಿಗೆ ದಿವ್ಯವಾದ ರೂಪ– ಆಕಾರ– ವಿಗ್ರಹಗಳು ಇವೆ ಎಂದು ತಿಳಿಸಿಕೊಡುತ್ತದೆ.

**ಈ ಬಗ್ಗೆ ಶ್ರುತಿ ಸ್ಮೃತಿ ವಚನಗಳು**

"ಈ ಸೂರ್ಯನೊಳಗೆ ಚಿನ್ನದಮಯವಾದ ಯಾವ ವ್ಯಕ್ತಿಯೊಂದು ಕಾಣುತ್ತಿದೆಯೋ, ಅದಕ್ಕೆ ಚಿನ್ನದಂತಹ ಮೀಸೆಯಿದೆ, ಚಿನ್ನದಂತಹ ಕೂದಲಿದೆ, ಅಡಿಯಿಂದ ಮುಡಿಯವರೆಗೂ ಬರಿಯ ಚಿನ್ನದ ಬಣ್ಣದ್ದೇ ಆಗಿದೆ."[1]

"ಈ ಪ್ರಪಂಚವೆಲ್ಲವೂ ಹುಟ್ಟುವ ಮೊದಲು ಪುರುಷಾಕಾರವಾದ ಪರಮಾತ್ಮನ ರೂಪವೇ ಆಗಿತ್ತು"[2]

"ಕತ್ತಲೆಯ ಆಚೆ ಸೂರ್ಯನಂತಹ ಹೊಳೆಯುವ ಬಣ್ಣವುಳ್ಳವನು."[3]

"ಎಲ್ಲ ಕೆಲಸಗಳನ್ನೂ ನಿರ್ವಹಿಸುವ, ಎಲ್ಲ ಸುಗಂಧಗಳನ್ನೂ ಮೈಗೂಡಿಸಿಕೊಂಡಿರುವ, ಎಲ್ಲ ರಸಗಳಿಂದಲೂ ಪೂರ್ಣನಾದವನು".[4]

"ಯಾವಾಗ ಜ್ಞಾನಿಯು ಚಿನ್ನದ ಬಣ್ಣದ ಅವನನ್ನು ದರ್ಶನಮಾಡುತ್ತಾನೋ".[5]

"ಚಿನ್ನದಂತಹ ಕಾಂತಿಯಿರುವ, ಹಾಗೂ ಕನಸಲ್ಲವಾದರೂ ಕನಸಿನಂತೆಯೇ ನಮ್ಮ ಜ್ಞಾನಕ್ಕೆ ತಿಳಿದು ಬರುವ".[6]

ಇವೇ ಮುಂತಾದ ಉಪನಿಷತ್ತೂ, ಮನುವಚನಗಳೂ ಹೇರಳವಾಗಿ ಇವೆ.

---

1. ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ ಆಪ್ರಣಖಾತ್ಸರ್ವ ಏವ ಸುವರ್ಣಃ. ಛಾಂ. ೧.೬.೬.

2. ಆತ್ಮೈವೇದಮಗ್ರ ಆಸೀತ್ಪುರುಷ ವಿಧಃ. ಐತರೇಯ. ೧.೧.೧. 3. ಆದಿತ್ಯವರ್ಣಂ ತಮಸಸ್ತು ಪಾರೇ. ಪು. ಸೂ.

4. ಸರ್ವಕರ್ಮಾ ಸರ್ವಗಂಧಃ ಸರ್ವರಸಃ. ಛಾಂ. ೩.೧೪.೪. 5. ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಮ್. ಮುಂ. ೩.೧.೩.

6. ರುಕ್ಮಾಭಂ ಸ್ವಪ್ನಧೀಗಮ್ಯಮ್. ಮನು. ೧೨.೧೨೨.

### ಪದವಿವರಣೆ

**ಯಃ, ಅಸೌ, ಪುರುಷಃ, ಅಹಂ, ಸಃ, ಅಸೌ, ಅಸ್ಮಿ—**

ಸಕಲ ಜಗತ್ತನ್ನೂ ವ್ಯಾಪಿಸಿರುವವನೆಂದು ಪ್ರಕೃತ ಉಪನಿಷತ್ತಿನಲ್ಲಿ ಯಾವ ವ್ಯಕ್ತಿಯನ್ನು ಹೇಳಲಾಗಿದೆಯೋ, ನಾನೂ ಆ ಇಂತಹ ವ್ಯಕ್ತಿಯೇ ಆಗಿರುವೆನು.

### ಭಾವಾರ್ಥ

ಈ ಮಾತಿನಿಂದ ಜೀವಾತ್ಮನಿಗೆ ತಾನು ಸ್ವತಂತ್ರ ಎಂಬ ಭ್ರಮೆ ಕಳೆಯುವುದು. ಹೀಗೆ ನಾನು ಪರಮಾತ್ಮನಿಗೆ ಪರತಂತ್ರ ಎಂಬ ತನ್ನ ಸ್ವರೂಪವನ್ನು ಚಿಂತನೆ ಮಾಡುವ ನನಗೆ ಪರಮಾತ್ಮನು ತನ್ನ ಮಂಗಳಕರವಾದ ದಿವ್ಯ ರೂಪವನ್ನು ತೋರಿಸಲಿ ಎಂದು ಈ ಮಂತ್ರದ ಭಾವಾರ್ಥವು ಹೊಂದಿಕೊಳ್ಳುವುದು.

### ಅಥವಾ

ಯಾವ ಈ ವ್ಯಕ್ತಿಗೆ ಪಾಪವಿಲ್ಲದಿರುವಿಕೆ, ಮುಪ್ಪಿಲ್ಲದಿರುವಿಕೆ, ಸಾವಿಲ್ಲದಿರುವಿಕೆ, ದುಃಖವಿಲ್ಲದಿರುವಿಕೆ, ಹಸಿವಿಲ್ಲದಿರುವಿಕೆ, ಬಾಯಾರಿಕೆ ಇಲ್ಲದಿರುವಿಕೆ, ಇಷ್ಟಬಂದ ಭೋಗವಸ್ತುಗಳನ್ನು ಪಡೆಯಲು ಯಾವ ವಿಘ್ನವೂ ಇಲ್ಲದಿರುವಿಕೆ, ತನ್ನ ಇಷ್ಟಕ್ಕೆ ಯಾವ ವಿರೋಧವೂ ಇಲ್ಲದಿರುವಿಕೆ,[1] ಎಂಬ ಮಾತಿನಿಂದ ಸ್ವಾಭಾವಿಕವಾದ ತನ್ನ ರೂಪವಿರುವುದಾಗಿ ತಿಳಿದು ಬರುತ್ತದೆಯೋ ಅಂತಹ ಪರಿಶುದ್ಧರೂಪದ ಜೀವಾತ್ಮನೇ ನಾನು ಎಂದರ್ಥ.

ಈ ಮಾತಿನಿಂದ ನಾನು ದೇವತೆ, ನಾನು ಮನುಷ್ಯ, ನಾನು ಪ್ರಾಣಿ ಎಂಬ ರೀತಿಯಲ್ಲಿ ಈ ದೇಹಾಕಾರವೇ ಆತ್ಮ ಎಂಬ ಭ್ರಮೆಯೆಲ್ಲವನ್ನೂ ಬಿಟ್ಟು ಪರಿಶುದ್ಧವಾದ ಆತ್ಮದ ಸ್ವರೂಪವನ್ನು ಚಿಂತನ ಮಾಡಲು ಹೇಳಿದಂತಾಗುವುದು.

ಹೀಗೆ ಪ್ರಕೃತಿಯ ರೂಪಾಂತರವಾದ ಈ ದೇಹಾದಿಗಳಿಗಿಂತಲೂ ಪ್ರತ್ಯೇಕವಾದ ಆತ್ಮ ನಾನು ಎಂಬ ಜ್ಞಾನವನ್ನು ಪಡೆದಿರುವುದರಿಂದ ನಿನ್ನನ್ನು ನೋಡುವ ಅರ್ಹತೆಯನ್ನೂ ಗಳಿಸಿರುವ ನನಗೆ ನಿನ್ನ ದಿವ್ಯರೂಪವನ್ನು ತೋರಿಸು ಎಂದು ಭಾವಾರ್ಥ.

## ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಪಾಠಾಂತರ ಅಭಿಪ್ರಾಯ

ಈ ಮಂತ್ರ ಮಾಧ್ಯಂದಿನರ ಪಾಠ ಕ್ರಮದಲ್ಲಿ ಇಲ್ಲವೇ ಇಲ್ಲ, ಕಾಣ್ವರು ಇದನ್ನು ಹದಿನಾರನೆಯ ಮಂತ್ರವಾಗಿ ಪಠಿಸಿರುತ್ತಾರೆ. ಆದರೂ ಮಾಧ್ಯಂದಿನರು ಇದೇ ಮಂತ್ರದ ಉತ್ತರಾರ್ಧದ ಅಂಶವನ್ನೂ ಸ್ವಲ್ಪ ಬದಲಾಯಿಸಿ ಹಿರಣ್ಮಯೇನ ಪಾತ್ರೇಣ ಎಂಬ ಹಿಂದಿನ ಮಂತ್ರದ ಉತ್ತರಭಾಗವಾಗಿ ಪಠಿಸುತ್ತಿದ್ದಾರೆ. ಈ ಮಂತ್ರದಲ್ಲಿ ಪರಮಾತ್ಮನು ನನಗೆ ತನ್ನ ದಿವ್ಯ ರೂಪವನ್ನು ತೋರಿಸಲಿ ಎಂದು ಪ್ರಾರ್ಥಿಸಲಾಗುವುದು.

---

1. ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋऽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ. ಛಾಂ. ೮. ೭. ೧.

## ಪದವಿವರಣೆ

**ಪ್ರಾಜಾಪತ್ಯ** :– ಕಶ್ಯಪ ಎಂಬ ಪ್ರಜಾಪತಿಗೆ ಅದಿತಿ ಎಂಬ ಪತ್ನಿಯಲ್ಲಿ ಮಗುವಾಗಿ ಹುಟ್ಟಿದವನೇ.

**ಸೂರ್ಯ** -- ಲೋಕದ ಎಲ್ಲರ ಬುದ್ಧಿಯನ್ನು ಪ್ರೇರಿಸುವಾತನೇ.

**ಪೂಷನ್** - ಲೋಕವನ್ನೆಲ್ಲ ಪೋಷಿಸುವ 'ಪೂಷಾ' ಎಂಬ ದೇವತೆಯನ್ನೂ ತನ್ನ ಶರೀರವಾಗಿಸಿಕೊಂಡಿರುವವನೇ.

**ಏಕರ್ಷೇ** – ಅತೀಂದ್ರಿಯವಾದೆಲ್ಲವನ್ನೂ ತಿಳಿದವನೆಂದರ್ಥ. "ಯಾವನು ಎಲ್ಲವನ್ನೂ ತಿಳಿದವನು, ಎಲ್ಲವನ್ನೂ ಪಡೆದವನು"[1] ಎಂಬ ವೇದವಚನದಲ್ಲಿ ಹೇಳಿರುವ ಗುಣವುಳ್ಳವನೇ ಎಂದು ಭಾವಾರ್ಥ.

**ಯಮ** – ಎಲ್ಲವನ್ನೂ ಒಳಹೊಕ್ಕು ನಿಯಂತ್ರಿಸುವ ಪರಮಾತ್ಮನೇ.

**ರಶ್ಮೀನ್** – ನಿನಗೆ ಆಸರೆಯಾಗಿರುವ ಈಸೂರ್ಯಮಂಡಲದ ಅತಿತೀಕ್ಷ್ಣವಾಗಿ ಎಲ್ಲೆಡೆ ಹರಡಿರುವ, ತೇಜಸ್ಸುಗಳನ್ನು.

**ವ್ಯೂಹ** – ಎಲ್ಲಾದರೊಂದೆಡೆ ಸೇರಿಸಿಡು.

**ತೇಜಃ** – ನಿನ್ನ ದಿವ್ಯರೂಪದಿಂದ ಎಲ್ಲೆಡೆ ಪ್ರಸರಿಸಿರುವ ಪ್ರಭಾಮಂಡಲವನ್ನು.

**ಸಮೂಹ** – ಎಲ್ಲಾದರೊಂದೆಡೆ ಸೇರಿಸಿಡು.

**ಯತ್, ಕಲ್ಯಾಣತಮಂ** – ಜಗತ್ತಿನ ಒಳ್ಳೆಯವುಗಳಲ್ಲೆಲ್ಲ ಬಹಳ ಒಳ್ಳೆಯದಾದ ಯಾವ.

**ತೇ** – ನಿನ್ನ. **ರೂಪಂ** – ಭೌತಿಕವಲ್ಲದ ದಿವ್ಯವಾದ ವಿಗ್ರಹವು.

**(ಅಸ್ತಿ)** – ಇದೆಯೋ.

**ತೇ** – ನಿನ್ನ, **ತತ್** – ಅಂತಹ ರೂಪವನ್ನೇ.

**ಪಶ್ಯಾಮಿ** – ನೋಡಬಯಸುತ್ತೇನೆ.

## ಭಾವಾರ್ಥ

ನಿನ್ನ ಆಸರೆಯಾದ ಸೂರ್ಯಮಂಡಲದ ತೀಕ್ಷ್ಣಕಾಂತಿಯೂ ನನ್ನ ಕಣ್ಣನ್ನು ಕುಕ್ಕುವುದರಿಂದ ನಿನ್ನನ್ನು ನೋಡಲಾರೆ. ನಿನ್ನ ದಿವ್ಯರೂಪದ ಪ್ರಭಾವಲಯವು ಎಲ್ಲೆಡೆ ಹರಡಿರುವುದರಿಂದ ನಿನ್ನನ್ನು ಸುಲಭವಾಗಿ ನೋಡಲಾರೆ. ಈ ನಿನ್ನ ಎರಡು ವಿಧವಾದ ತೇಜಸ್ಸನ್ನೂ ನೀನು ಸ್ವಲ್ಪ ಅಡಗಿಸಿಕೊಂಡರೆ ಮಾತ್ರ ನಿನ್ನ ರೂಪವನ್ನು ಕಾಣಲಾದೀತು. ಹಾಗೆ ಮಾಡಿ ನಿನ್ನ ರೂಪವನ್ನು ತೋರಿಸು ಎಂಬ ಪ್ರಾರ್ಥನೆ ಇದು.

## ಪರಮಾತ್ಮನನ್ನು ದರ್ಶನಮಾಡಲು ಅರ್ಹತೆ ಏನು?

ವೇದಾಧ್ಯಯನ, ತಪಸ್ಸು, ದಾನ, ಪೂಜೆಗಳಾವುವೂ ಪರಮಾತ್ಮನ ದರ್ಶನಕ್ಕೆ ಮುಖ್ಯ ಕಾರಣಗಳಲ್ಲವೆಂದೂ, ಪರಮಾತ್ಮನನ್ನು ತಾತ್ತ್ವಿಕವಾಗಿ ತಿಳಿದುಕೊಂಡು ಅವನಲ್ಲಿಗೆ ಹೋಗಿ ಸೇರಲು "ಅನನ್ಯಭಕ್ತಿ" ಅತ್ಯವಶ್ಯಕ ಎಂದೂ ಗೀತೆಯಲ್ಲಿ ಹೇಳಿದೆ.

---

1. ಯಸ್ಸರ್ವಜ್ಞಸ್ಸರ್ವವಿತ್. ಮುಂ. ೨. ೨. ೭.

'ಅನನ್ಯಭಕ್ತಿ' ಎಂದರೆ ಎಲ್ಲ ರೀತಿಯಲ್ಲೂ ನಾವು ಪರಮಾತ್ಮನಿಗೆ ಅಧೀನರೆಂಬ ಜ್ಞಾನದಿಂದ ಎಲ್ಲ ವಿಚಾರದಲ್ಲೂ ಪರಮಾತ್ಮನಿಗೆ ಅಧೀನವಾಗಿ ಅವನ ದಾಸರಾಗಿಯೇ ನಡೆದುಕೊಳ್ಳುವುದು. ಈ ಅರ್ಹತೆ ಇದೆ ಎಂಬ ವಿಚಾರವನ್ನು ಈ ಮಂತ್ರದ ಕೊನೆಯ ಭಾಗದಲ್ಲಿ ಸ್ಪಷ್ಟಪಡಿಸಲಾಗುವುದು.

### ಪದವಿವರಣೆ

**ಅಸೌ, ಅಸೌ** – ನಮಗೆ ಬಹಳದೂರದಲ್ಲಿರುವ ಸೂರ್ಯಮಂಡಲದ ಒಳಗಿರುವ.

**ಪುರುಷಃ** - ಚಿನ್ನದಮಯವಾದ ವ್ಯಕ್ತಿಯೂ

**ಯಃ** – ಯಾವ ನೀನೇ ಅಹುದೋ

**ಅಹಂ** – ನಾನು

**ಸಃ** – ಅಂತಹ ನೀನಾಗಿಯೇ

**ಅಸ್ಮಿ** – ಇರುವೆನು. ನಿನ್ನನ್ನೇ ಆತ್ಮವನ್ನಾಗಿ ಪಡೆದವನು ನಾನು ಎಂದರ್ಥ.

### ಅರ್ಹತೆಗೆ ತಕ್ಕ ಆಚರಣೆ ಆವಶ್ಯಕ

ಇಲ್ಲಿ ನಾನು ಅವನು ಎಂದು ಒಂದೇ ವಿಭಕ್ತಿಯ ಪದಗಳನ್ನು ಬಳಸಿರುವುದರಿಂದ ನಮಗೂ ಪರಮಾತ್ಮನಿಗೂ ಇರುವ ಏಕತೆಯನ್ನು ತಿಳಿಸಲಾಗಿದೆ. ಈ ಏಕತೆಯು ನಮಗೂ ನಮ್ಮ ಶರೀರಕ್ಕೂ ಇರುವಂತೆಯೇ ಪರಮಾತ್ಮನಿಗೂ ನಮಗೂ ಇರುವುದು. ನಮ್ಮ ಶರೀರವನ್ನು ನಾವು ನಿಯಂತ್ರಿಸುವಂತೆ ಪರಮಾತ್ಮ ನಮ್ಮನ್ನೆಲ್ಲ ನಿಯಂತ್ರಿಸುವವನು. ಆದುದರಿಂದ ಆತ್ಮವಾದ ನಮಗೂ ಅವನು ಆತ್ಮ. ನಾವೆಲ್ಲ ಅವನ ಶರೀರವಷ್ಟೆ.

ಜಗತ್ತಿನ ಎಲ್ಲ ಚಿತ್, ಅಚಿತ್ ವಸ್ತುಗಳೂ ಪರಮಾತ್ಮನಿಗೆ ಶರೀರವಾಗಿವೆ ಎಂಬ ವಿಚಾರವು "ಯಾವನಿಗೆ ಎಲ್ಲ ವಸ್ತುಗಳೂ ಶರೀರಗಳೋ"[1] ಇವೇ ಮುಂತಾದ ವಚನಗಳಿಂದ ತಿಳಿದು ಬಂದಿದೆಯಾದರೂ ಜೀವಾತ್ಮನಿಗೆ ಈ ತಿಳಿವಳಿಕೆಯೂ ಅದರಂತೆ ಆಚರಣೆಯೂ ಅವಶ್ಯಕವಾದುದರಿಂದ, ಈ ಆವಶ್ಯಕತೆ ಅಚಿತ್ ವಸ್ತುಗಳಿಗಿಲ್ಲವಾಗಿ ಜೀವಾತ್ಮಗಳಾದ ನಾವು ಮಾತ್ರ ಹೀಗೆ ಆಚರಿಸಿ ನಮ್ಮ ಈ ಸ್ವರೂಪವನ್ನು ಚಿಂತಿಸಬೇಕು. ಈ ವಿಚಾರವನ್ನೇ ಅಸ್ಮಿ–ಆಗಿರುವೆನು ಎಂಬ ಪದವು ತಿಳಿಸುತ್ತದೆ.

ಈ ವಿಚಾರವನ್ನೇ ಮನುವೂ "ಅವಿವಾದ"[2] ಎಂಬ ಪದದಿಂದ ತನ್ನ ಸ್ಮೃತಿ ಗ್ರಂಥದಲ್ಲಿ ತಿಳಿಸಿರುತ್ತಾನೆ. ಇದೇ ಪರವಿದ್ಯೆಯ ಸಾರ, ಹಾಗೂ ಭಕ್ತಿಯ ಉತ್ಕೃಷ್ಟವಾದ ಸ್ತರ.

---

1. ಯಸ್ಯ ಸರ್ವಾಣಿ ಭೂತಾನಿ ಶರೀರಮ್. ಬೃ. ೫. ೭.

2. ನಮ್ಮ ಹೃದಯದಲ್ಲಿರುವ ಪರಮಾತ್ಮನೇ ನಮ್ಮ ಸ್ವಾಮಿ. ನಾವೆಲ್ಲ ಅವನ ದಾಸಾನುದಾಸರು. ಅವನ ಆಜ್ಞೆಯಂತೆಯೇ ನಾವು ನಡೆಯಬೇಕು. ನಾವು ಸ್ವತಂತ್ರರಲ್ಲ. ಅವನೊಡನೆ ''ನೀನು ನಮ್ಮ ಸ್ವಾಮಿಯಲ್ಲ, ನಾವು ಸ್ವತಂತ್ರರು, ನೀನು ಹೇಳಿದಂತೆ ಕೇಳುವವರಲ್ಲ'' ಎಂಬ ವಿವಾದ ನಮಗೆ ಇರಬಾರದು. ಇದೇ ಪರಮಾತ್ಮನನ್ನು ದರ್ಶಿಸಲು ನಮಗಿರಬೇಕಾದ ಅರ್ಹತೆ.
ಯಮೋ ವೈವಸ್ವತೋ ರಾಜಾ ಯಸ್ತವೈಷ ಹೃದಿ ಸ್ಥಿತಃ ।
ತೇನ ಚೇದವಿವಾದಸ್ತೇ ಮಾ ಗಂಗಾಂ ಮಾ ಕುರೂನ್ ಗಮಃ॥ ಮನು. ೮. ೯೨.

## ಶರೀರಿವಾಚಕ ಶಬ್ದಗಳು ಶರೀರವನ್ನು ಕುರಿತು ಇರಬಹುದೇ?

ಈ ಮಂತ್ರದಲ್ಲಿ ನಾನು ಆ ಪರಮ ಪುರುಷನೇ ಆಗಿರುವೆನು ಎಂಬ ಮಾತು ಬಂದಿದೆಯಷ್ಟೆ. ಈ ಪೂತಿಸಲ್ಲಿ ಜೀವಾತ್ಮನೇ ಪರಮಾತ್ಮ ಎಂಬ ಅಪಾರ್ಥಕ್ಕೆ ಅವಕಾಶವಾಗದಂತೆ 'ಆ ಪುರುಷನೇ' ಎಂಬ ಪದಕ್ಕೆ ಆ ಪರಮ ಪುರುಷನನ್ನೇ ಆತ್ಮವನ್ನಾಗಿ ಪಡೆದಿರುವವನು ಎಂಬುದಾಗಿ ಅರ್ಥೈಸಲಾಗಿದೆ. ಶರೀರವನ್ನು ಕುರಿತು ಹೇಳುವ ಪದಗಳೆಲ್ಲವೂ ಶರೀರಿಯಾದ ಆತ್ಮನನ್ನೂ ಅವನಿಗೂ ಶರೀರಿಯಾದ ಪರಮಾತ್ಮನನ್ನೂ ಕುರಿತುದಾಗಿವೆ ಎಂದು ನಮ್ಮ ಸಿದ್ಧಾಂತದ ನಿರ್ಣಯು ಎಲ್ಲ ಶಬ್ದಗಳೂ ಅಪರ್ಯವಸಾನವೃತ್ತಿಯಿಂದ[1] ಪರಮಾತ್ಮನನ್ನೇ ತಿಳಿಸಿಕೊಡುವುವು ಎನ್ನಲಾಗಿದೆಯಲ್ಲವೆ. ಹೀಗಿರುವಾಗ ಪರಮಾತ್ಮ ವಾಚಕಗಳಾದಶಬ್ದಗಳು ಶರೀರವಾದ ಜೀವಾತ್ಮನನ್ನಾಗಲಿ ಜಡ ದೇಹವನ್ನಾಗಲಿ ತಿಳಿಸಿಕೊಡುವ ಬಗೆ ಹೇಗೆ ಎಂದು ಪ್ರಶ್ನಿಸಬಹುದು. ಒಂದು ಪದಕ್ಕೆ ಶರೀರ ಶರೀರಿ ಎಲ್ಲವೂ ಅರ್ಥವಾಗಿರುವಾಗ ಪ್ರಯೋಗದಲ್ಲಿ ಯಾವುದು ಮುಖ್ಯವೆನಿಸುವುದೋ ಆ ಅರ್ಥಕ್ಕೆ ತಕ್ಕಂತೆ ಎಲ್ಲ ಅರ್ಥಗಳನ್ನೂ ಸಮನ್ವಯಗೊಳಿಸುವುದು ಎಲ್ಲ ಶಾಸ್ತ್ರಗಳ ನಿಯಮವಲ್ಲವೆ. ಹಾಗೆ ಎಲ್ಲಾದರೂ ಶರೀರವನ್ನು ಕುರಿತೇ ಹೇಳಬೇಕಾದಾಗ ಶರೀರಿವಾಚಕಪದಕ್ಕೆ ಅಂತಹ ಶರೀರಿಯನ್ನು ಪಡೆದಿರುವ ಶರೀರ ಎಂದು ಅರ್ಥೈಸುವುದರಿಂದ ಏನೂ ತಪ್ಪಿಲ್ಲ.[2]

## ಪ್ರಮಾಣಾಧಾರ—ಉದಾಹರಣೆ

ವಿಷ್ಣುಪುರಾಣದಲ್ಲಿ ಈ ಜ್ಞಾನಸ್ವರೂಪಿ ಜೀವಾತ್ಮನು ವಾಸುದೇವ ಶಬ್ದ ವಾಚ್ಯನಾದ ಪರಮಾತ್ಮನನ್ನೇ ತನಗೆ ಆತ್ಮವನ್ನಾಗಿ ಪಡೆದವನು ಎಂಬ ಅರ್ಥದಲ್ಲಿ 'ಜ್ಞಾನವೂ ಆ ವಾಸುದೇವನೇ'[3] ಎಂಬ ಮಾತನ್ನು ಬಳಸಲಾಗಿದೆ. ಭಗವದ್ರಾಮಾನುಜರು ಶ್ರೀ ಭಾಷ್ಯದ ಜಿಜ್ಞಾಸಾಧಿಕರಣದಲ್ಲಿ ಈ ಮಾತನ್ನು ಉದಾಹರಿಸಿ ವಿಮರ್ಶಿಸಿ

---

1. ಪ್ರತಿಯೊಂದು ಪದಗಳಿಗೂ ಅರ್ಥವನ್ನು ಬೋಧನೆ ಮಾಡುವ ಶಕ್ತಿಯಿದೆ. ಹೀಗೆ ಬೋಧನೆ ಮಾಡುವ ಕಾಲದಲ್ಲಿ ಪದಾರ್ಥದ ವಿಶೇಷಣದವರೆಗೂ, ಬೋಧಿಸುವ ಶಬ್ದ ಶಕ್ತಿಯನ್ನು ಪರ್ಯವಸಾನ ವೃತ್ತಿ ಎಂದು ಕರೆಯುತ್ತಾರೆ. ಮತ್ತು ಪದಾರ್ಥದ ವಿಶೇಷಣ ಸಹಿತ ವಿಶೇಷ್ಯದವರೆಗೂ ಬೋಧಿಸುವ ಶಬ್ದ ಶಕ್ತಿಯನ್ನು ಅಪರ್ಯವಸಾನ ವೃತ್ತಿ ಎಂದು ಕರೆಯುತ್ತಾರೆ.

   ಪರ್ಯವಸಾನ ವೃತ್ತಿ. ಉದಾ:– ಘಟದಲ್ಲಿರುವ ಘಟತ್ವ ಮಾತ್ರ ತೋರುವಿಕೆ.

   ಅಪರ್ಯವಸಾನವೃತ್ತಿ. ಉದಾ:–ಘಟದಲ್ಲಿರುವ ಘಟತ್ವ ಮಾತ್ರ ತೋರದೆ ಘಟದಲ್ಲಿ ವಿಶೇಷ್ಯವಾಗಿರುವ ಅಂತರ್ಯಾಮಿಯಾದ ಪರಮಾತ್ಮನ ತೋರುವಿಕೆ.

   ಹಾಗೆಯೇ ಪ್ರಕೃತ ಶರೀರ ವಿಶಿಷ್ಟನಾಗಿರುವ ಜೀವನಿಗೆ ಅಂತರ್ಯಾಮಿಯೂ ಅವನ ಸತ್ತಾ ಹೇತುವೂ ಆಗಿರುವವನು ಸರ್ವೇಶ್ವರನು. ಜೀವನು ಶರೀರಕ್ಕೆ ವಿಶೇಷ್ಯನಾಗಿ ಸರ್ವೇಶ್ವರನಿಗೆ ವಿಶೇಷಣನಾಗಿರುವವನು. ಸರ್ವೇಶ್ವರನಿಗೆ ಮತ್ತೊಂದು ಅಂತರ್ಯಾಮಿ ಇಲ್ಲದ್ದರಿಂದ ಅವನು ಮುಖ್ಯ ವಿಶೇಷ್ಯನಾಗಿಯೇ ಇರುವನು. ಆದ್ದರಿಂದ ಸಮಸ್ತ ಶಬ್ದಕ್ಕೂ ಪರಮಾತ್ಮನವರೆಗೆ ಬೋಧನೆ ಮಾಡುವ ಶಕ್ತಿಯಿದೆ ಎಂಬುದೇ ಅಪರ್ಯವಸಾನ ವೃತ್ತಿ.

2. ಲೋಕ ವ್ಯವಹಾರದಲ್ಲಿ ಸಹ ಇಂತಹ ಪ್ರಯೋಗಗಳು ಬೇಕಾದಷ್ಟಿವೆಯಲ್ಲವೆ. ಇವೆಲ್ಲ ಕಾಗೆಗಳು ಎನ್ನುವಾಗ ಕಾಗೆಜಾತಿಯ ಶರೀರಗಳಲ್ಲಿ ನಮ್ಮ ಲಕ್ಷ್ಯವಿರುವುದಷ್ಟೆ. ಇವೆಲ್ಲವೂ ಜೀವಿಗಳು ಎನ್ನುವಾಗ ಈ ಕಾಗೆ ಜಾತಿಯ ಶರೀರಗಳೆಲ್ಲವು ಜೀವಾತ್ಮಗಳನ್ನು ಪಡೆದಿವೆ ಎಂದರ್ಥವಾಗುವುದು. ಇವೆಲ್ಲವೂ ಪರಮಾತ್ಮನೇ ಎನ್ನುವಾಗ ಕಣ್ಣೆದುರಿಗಿರುವ ಕಾಗೆ ಶರೀರಗಳು ತಮ್ಮೊಳಗಿನ ಜೀವಾತ್ಮಗಳೊಳಗೆ ಪರಮಾತ್ಮನನ್ನೂ ಪಡೆದಿವೆ ಎಂದರ್ಥವಾಗುವುದು. ಶಾಸ್ತ್ರ ಅನುಭವಗಳಿಂದ ಶರೀರ ಬೇರೆ ಜೀವಾತ್ಮ ಬೇರೆ ಪರಮಾತ್ಮ ಬೇರೆ ಎಂದು ತಿಳಿದವನಿಗೆ ಈ ಅರ್ಥಗಳು ಬಹಳ ಸುಲಭ.

3. ಜ್ಞಾನಂ ಸ ವಾಸುದೇವಃ ವಿ. ಪು. ೨. ೧೨. ೪೨.

ಅರ್ಥೈಸಿರುವರು. ಅವರ ಮಾತು ಹೀಗಿದೆ – "ಅದೂ ವಾಸುದೇವನ ಶರೀರವಾದುದರಿಂದ ಅವನನ್ನೇ ಆತ್ಮವನ್ನಾಗಿ ಪಡೆದಿರುವುದು[1] ಎಂದು. ಇದೇ ಪುರಾಣಕ್ಕೆ ವ್ಯಾಖ್ಯಾನ ಬರೆದ ವಿಷ್ಣುಚಿತ್ತಾಚಾರ್ಯರೂ ಸಹ 'ಎಲ್ಲವೂ ಅಚ್ಯುತನೇ' ಎಂಬ ಮಾತಿಗೆ ಎಲ್ಲವೂ 'ಅಚ್ಯುತನನ್ನೇ ಆತ್ಮವನ್ನಾಗಿ ಪಡೆದಿರುವುದು'[2] ಎಂದೇ ಅರ್ಥೈಸಿರುವರು. 'ಎಲ್ಲವೂ ವಿಷ್ಣುವೇ'[3] ಎಂಬ ಮಾತಿಗೆ ಪುರಾಣ ಘಟ್ಟದಲ್ಲಿ ಭಗವದ್ರಾಮಾನುಜರು ವಿವರಿಸುತ್ತಾ ಹೇಳುವ ಮಾತಿದು "ಜಗತ್ತಿನಲ್ಲಿ ಇದೆ ಇಲ್ಲ ಎನ್ನಬಹುದಾದ ಎಲ್ಲವೂ ವಿಷ್ಣುವಿನ ಶರೀರವಾದುದರಿಂದ ಅವನನ್ನೇ ಆತ್ಮವನ್ನಾಗಿ ಪಡೆದಿರುವುದು[4] ಎಂದು ಹೀಗೆಯೇ ಅವರು 'ಸರ್ವತ್ರ ಪ್ರಸಿದ್ಧಿ' ಎಂಬ ಅಧಿಕರಣದಲ್ಲಿ 'ಇದೆಲ್ಲವೂ ಬ್ರಹ್ಮವೇ ಅಲ್ಲವೇ![5] ಎಂಬ ಉಪನಿಷತ್‌ವಚನದಲ್ಲಿ ಬ್ರಹ್ಮ ಎಂದರೆ ಬ್ರಹ್ಮಾತ್ಮಕ ಎಂದೇ ಅರ್ಥವಿರಿಸಿಕೊಂಡಿದ್ದಾರೆ. ಗೀತಾ ಭಾಷ್ಯದಲ್ಲೂ "ಜೀವಾತ್ಮವೂ ನಾನೇ ಎಂದು ತಿಳಿ"[6] ಎಂಬ ಮಾತನ್ನು ವಿವರಿಸುವಾಗ "ಜೀವಾತ್ಮವೂ ನನ್ನನ್ನೇ ಆತ್ಮವನ್ನಾಗಿ ಪಡೆದಿದೆ"[7] ಎಂದು ತಿಳಿ ಎಂದೇ ಅರ್ಥೈಸಿರುವರು.

## ಪುರುಷ ಎಂದರೆ ಪರಮಾತ್ಮ

ಪುರುಷ ಎಂದರೆ ಇಲ್ಲಿ ಜೀವಾತ್ಮನಲ್ಲ. 'ಅಸೌ' ಈ ದೂರದಲ್ಲಿರುವ ಎಂಬ ನಿರ್ದೇಶನ ಇಲ್ಲಿರುವುದರಿಂದ ಅದರಂತೆ ದೂರದಲ್ಲಿರುವ ಸೂರ್ಯಮಂಡಲದೊಳಗೆ ಅಂತರ್ಯಾಮಿಯಾದ ಪರಮಾತ್ಮನೇ ಆ ಪುರುಷ ಎಂದು ನಿರ್ಣಯಿಸಬಹುದು,

ಹಾಗೂ 'ಹಿರಣ್ಮಯೇನ' ಎಂಬ ಮಂತ್ರದಲ್ಲೇ ಮಾಧ್ಯಂದಿನರು "ಯೋಸಾವಾದಿತ್ಯೇ ಪುರುಷಸ್ಸೋಸಾವಹಂ" ಎಂದು ಪಠಿಸಿರುವುದನ್ನು ಗಮನಿಸಬೇಕು. ಇಲ್ಲಿ ಸ್ಪಷ್ಟವಾಗಿ ಸೂರ್ಯನೊಳಗಿರುವ ಪುರುಷ ಎನ್ನಲಾಗಿದೆ. ಸೂರ್ಯನೊಳಗಿನ ಪುರುಷ ಯಾವ ಜೀವಾತ್ಮನೂ ಅಲ್ಲ. ಅವನು ಸರ್ವಾಂತರ್ಯಾಮಿ ಪರಮಾತ್ಮ ನಾರಾಯಣ ಅವನನ್ನೇ ನಾನೂ ಅಂತರ್ಯಾಮಿಯನ್ನಾಗಿ ಪಡೆದಿರುವವನು ಎಂದರ್ಥ.

'ಯತ್ ತೇ ರೂಪಂ ಕಲ್ಯಾಣತಮಂ' – ಯಾವ ನಿನ್ನ ರೂಪವು ಬಹಳ ಒಳ್ಳೆಯದೋ ಎಂಬ ಮಾತೂ ಗಮನಾರ್ಹ. ಇಲ್ಲಿ ಛಾಂದೋಗ್ಯೋಪನಿಷತ್ತಿನ ಅಂತರಾದಿತ್ಯ ವಿದ್ಯೆಯಲ್ಲಿ ಸ್ಪಷ್ಟವಾಗಿರುವ ಪರಮಾತ್ಮನ ಆ ಒಳ್ಳೆಯ ರೂಪವನ್ನೇ ಕುರಿತು ಹೇಳಲಾಗುತ್ತಿದೆ. "ಯಾವ ಇವನು ಸೂರ್ಯನ ಒಳಗೇ ಚಿನ್ನಮಯವಾದ ವ್ಯಕ್ತಿಯಾಗಿ ಕಾಣಿಸುತ್ತಿರುವನೋ; ಚಿನ್ನದ ಮೀಸೆಯುಳ್ಳವನೋ ಚಿನ್ನದ ಕೂದಲುಳ್ಳವನೋ ಅಡಿಯಿಂದ ಮುಡಿಯವರೆಗೆ ಪೂರ್ಣ ಚಿನ್ನದಬಣ್ಣವುಳ್ಳವನೋ; ಅವನಿಗೆ ಸೂರ್ಯನಿಂದ ಅರಳಿಸಲ್ಪಟ್ಟ ತಾವರೆ

---

1. ತಚ್ಚ ವಾಸುದೇವ ಶರೀರಮಿತಿ ತದಾತ್ಮಕಮ್. ಶಾ. ಭಾ. ೧.೧.೧.
2. ಏಕೋಽಚ್ಯುತ ಏವ - ತದಾತ್ಮಕಮಿತ್ಯರ್ಥ:. ವಿ. ಪು. ವ್ಯಾ.
3. ಜ್ಯೋತಿಂಷಿ ವಿಷ್ಣು:. ವಿ. ಪು.೨. ೧೨. ೩೭.
4. ಅತ್ರಾಸ್ತ್ಯಾತ್ಮಕಂ ನಾಸ್ತ್ಯಾತ್ಮಕಂ ಚ ಜಗದನ್ತರ್ಗತಂ ವಸ್ತು ವಿಷ್ಣೋ:
ಕಾಯತಯಾ ವಿಷ್ಣ್ವಾತ್ಮಕಮ್. ಶಾ. ಭಾ. ಜಿ. ಅ. ಪುರಾಣಘಟ್ಟ.
5. ಸರ್ವಂ ಖಲ್ವಿದಂ ಬ್ರಹ್ಮ. ಛಾಂ. ೩. ೧೩. ೧.
6. ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ. ಗೀ. ೧೩.೨.
7. ದೇವಮನುಷ್ಯಾದಿ ಕ್ಷೇತ್ರೇಷು ವೇದಿತೃತ್ವೈಕಾಕಾರಂ ಕ್ಷೇತ್ರಜ್ಞಂ ಚ, ಮಾಂ ವಿದ್ಧಿ –
ಮದಾತ್ಮಕಂ ವಿದ್ಧಿ. ಗೀ. ರಾ. ಭಾ. ೧೩.೨.

ಹೂ ಹೇಗೆ ಇರುತ್ತವೆಯೊ ಹಾಗೆಯೇ ಇರುವ ಎರಡು ಕಣ್ಣುಗಳೂ ಇವೆ, ಅವನಿಗೆ 'ಉತ್' ಎಂದು ಹೆಸರು."[1] ಎಂಬುದು ಅಲ್ಲಿಯ ಮಾತು. ಈ ಬಣ್ಣನೆಯ ವಿವರಗಳು ಯಾವುವೂ ಯಾವ ಜೀವಾತ್ಮನಿಗೂ ಸಂಬಂಧಿಸಿಲ್ಲ. ಅದು ಪರಮಾತ್ಮನಿಗೇ ವಿಶಿಷ್ಟವಾಗಿರುವ ದಿವ್ಯರೂಪಕ್ಕೆ ಸಂಬಂಧಿಸಿದವು

ಈ ವಿಚಾರವನ್ನು ಬ್ರಹ್ಮಸೂತ್ರದಲ್ಲೇ ವ್ಯಾಸಮಹರ್ಷಿಗಳು ಎತ್ತಿಕೊಂಡು ಇಂತಹ ಪುರುಷನೇ ಜಗತ್ಕಾರಣನಾದ ಪರಮಾತ್ಮ ಎಂದು ನಿರ್ಣಯಿಸಿರುವರು.

ಮಾಧ್ಯಂದಿನರ ಪಾಠದಲ್ಲೂ 'ಓಂ ಖಂ ಬ್ರಹ್ಮ' ಎಂಬ ಮಾತು ಮುಖ್ಯವಾಗಿರುವುದನ್ನು ಗಮನಿಸಬೇಕು. ಅಂತಹ ಮಹಾಪುರುಷನನ್ನು ಓಂಕಾರದಿಂದ ಕರೆಯಬೇಕು. ಇದು ಅವನ ಮುಖ್ಯವಾದ ಹೆಸರು. ಅವನು ಆಕಾಶದಂತೆ ಎಲ್ಲೆಡೆ ಹರಡಿರುವನು. ಅವನೇ ಎಲ್ಲಕ್ಕಿಂತ ಹಿರಿದಾದ ಪರಮಾತ್ಮ ಎಂದು ಈ ಮಾತಿನ ಸಾರಾರ್ಥ.

## ಈಶಾವಾಸ್ಯವಿದ್ಯೆ—ಅಂತರಾದಿತ್ಯವಿದ್ಯೆ

ಈ ಮಂತ್ರದಲ್ಲಿ ಪ್ರಾಜಾಪತ್ಯ, ಸೂರ್ಯ, ಪೂಷ, ಎಂಬ ವಿಶೇಷಣಗಳು ಸರ್ವನಿಯಾಮಕನಾದ ಪರಮಾತ್ಮನೊಬ್ಬನನ್ನೇ ಕುರಿತಾಗಿವೆ. ಸೂರ್ಯಮಂಡಲದೊಳಿರುವ ಪರಮಪುರುಷನಾದ ಪರಮಾತ್ಮನ ದಿವ್ಯರೂಪದ ಚಿಂತನೆಯೇ ಈ ಈಶಾವಾಸ್ಯವಿದ್ಯೆಯಲ್ಲಿ ಮುಖ್ಯವಾಗಿ ಕಾಣುವುದು. ಪರಮಾತ್ಮನು ಲೋಕವನ್ನೆಲ್ಲ ಪೋಷಿಸುವನೆಂದೂ ಬುದ್ಧಿಯನ್ನು ಪ್ರಚೋದಿಸುವನೆಂದೂ ಹೇಳಿರುವುದು ಅವನ ಈ ಎರಡು ಗುಣಗಳನ್ನು ಅವನ ರೂಪದಲ್ಲಿ ಚಿಂತನೆ ಮಾಡಬೇಕೆಂಬುದಕ್ಕಾಗಿ ಈ ರೀತಿ ಪೋಷಣೆ ಪ್ರಚೋದನೆಗಳನ್ನು ಮಾಡಬೇಕಾದರೆ ಅದು ಸರ್ವನಿಯಾಮಕನಾದ ಪರಮಾತ್ಮನಿಗೇ ಸಾಧ್ಯ. ಅದನ್ನೇ 'ಯಮ' ಎಂದೂ 'ಈಶ' ಎಂದೂ ಸಮಾನಾರ್ಥಕವಾದ ಪದಗಳಿಂದ ತಿಳಿಸಿ ಕೊಡಲಾಗಿದೆ. ಇದನ್ನೇ ಅಂತರಾದಿತ್ಯವಿದ್ಯೆ ಎಂದು ಕರೆಯುತ್ತಾರೆ.

---

1. ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ, ಆಪ್ರಣಖಾತ್ಸರ್ವ ಏವ ಸುವರ್ಣಃ। ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ತಸ್ಯೋದಿತಿ ನಾಮ। ಛಾ. ೧.೬.೬; ೭.

  

# ಈಶಾವಾಸ್ಯೋಪನಿಷತ್

## ಮಂತ್ರ ಹದಿನೇಳು

**ವಾಯುರನಿಲಮಮೃತಂ, ಅಥೇದಂ ಭಸ್ಮಾಂತಂ ಶರೀರಮ್।**
**ಓಮ್**
**ಕ್ರತೋ ! ಸ್ಮರ, ಕೃತಂ ಸ್ಮರ, ಕ್ರತೋ ! ಸ್ಮರ, ಕೃತಂ ಸ್ಮರ ॥೧೭॥**

**ಅನ್ವಯಾನುಸಾರ ಪ್ರತಿಪದಾರ್ಥ**

**ಅಮೃತಂ** – ಶಾಶ್ವತವೂ ಕೇವಲ ಆನಂದ ರೂಪವೂ ಆದ ಪರಿಶುದ್ಧ ಜೀವಾತ್ಮತತ್ತ್ವವು; **ವಾಯುಃ** – ತನ್ನ ಪರವಿದ್ಯೆ ಅಥವಾ ಕರ್ಮಕ್ಕೆ ಅನುಸಾರವಾಗಿ ಎಲ್ಲೆಂದರಲ್ಲಿ ಇರುವಂತಹದು ಮತ್ತು; **ಅನಿಲಂ** - ಈ ಪ್ರಕೃತಿಮಂಡಲವನ್ನು ಬಿಟ್ಟಿರುವಂತಹದು ಹಾಗೂ ಪರಮಾತ್ಮನ ಆಸರೆಯನ್ನು ಪ್ರಧಾನವಾಗಿ ಗಮನಿಸದೆ ಕೈವಲ್ಯಸ್ಥಾನದಲ್ಲಿ ಸ್ವತಂತ್ರವಾಗಿರಲೂ ಅವಕಾಶವಿರುವಂತಹದು; **ಅಥ** – ಇಂತಹ ಸ್ವಾತಂತ್ರ್ಯ ಸ್ವಲ್ಪವೂ ಇಲ್ಲದ ಜಡವಾದ; **ಇದಂ** – ಕಣ್ಣಿಗೆ ಕಾಣಿಸುತ್ತಿರುವ ಈ; **ಶರೀರಂ** – ದೇಹವು; **ಭಸ್ಮಾಂತಂ** – ಕೊನೆಗೆ ಬೂದಿಯಾಗಿಯೋ ಮಣ್ಣಾಗಿಯೋ ಉಳಿಯುವಂತಹದು; **ಓಂ** – ಓಂಕಾರಕ್ಕೆ ಪ್ರಧಾನಾರ್ಥವಾದ ಎಲೈ! ನಾರಾಯಣನೇ! **ಕ್ರತೋ**– ಜ್ಞಾನಯಜ್ಞವರಾಹರೂಪಿಯಾಗಿ ಅವತರಿಸಿರುವವನೇ; **ಸ್ಮರ** – ನೀನೇ ಹೇಳಿರುವಂತೆ ನಮ್ಮನ್ನು ಕರುಣೆಯಿಂದ ನೆನಸಿಕೋ; **ಕೃತಂ** – ನಾನೇನಾದರೂ ಅನುಕೂಲ ಮಾಡಿದ್ದರೆ ಅದನ್ನಾಗಲಿ, ನೀನೇ ಏನಾದರೂ ಮಾಡಿದ್ದರೆ ಮಾಡುವುದಿದ್ದರೆ ಅದನ್ನಾಗಲೀ ಸರ್ವಜ್ಞನಾದ ನೀನೇ; **ಸ್ಮರ** – ಸ್ವತಃ ನೆನೆಸಿಕೋ.

**ಛಾಯಾಪದ್ಯ**

ವಾಯುವನಿಲವಮೃತವೈ, ಇದೀಗ ಕಾಯ ಬೂದಿಯೈ.
ಓಂ ಕ್ರತೂ! ನೆನಪಿಡು. ಮಾಡಿರುವುದ ನೆನಪಿಡು.
ಓ ಕ್ರತೂ! ನೆನಪಿಡು. ಮಾಡಿರುವುದ ನೆನಪಿಡು.

## ತಾತ್ಪರ್ಯಾರ್ಥ

ಉಪಾಸಕನು ಪರಬ್ರಹ್ಮನ ದಿವ್ಯಮಂಗಳರೂಪವನ್ನು ನೋಡಬೇಕೆಂದು ಹಿಂದಿನ ಮಂತ್ರಗಳಲ್ಲಿ ಮನಕರಗುವಂತೆ ಪ್ರಾರ್ಥಿಸಿದನು. ಕಳಕಳಿಯಿಂದ ಆತನ ಸೇವೆ ಮಾಡಬೇಕೆಂಬ ಕಾತುರತೆಯನ್ನು ವ್ಯಕ್ತಪಡಿಸಿ, ತನಗೆ ಇತರ ಆಸೆಗಳಿಲ್ಲವೆಂದೂ ಸ್ಪಷ್ಟಪಡಿಸಿದನು.

ಉಪಾಸಕನು ಈ ಮಂತ್ರದಲ್ಲಿ, ತಾನು ಪರಬ್ರಹ್ಮನ ಸೇವಕನೆಂದೂ, ಪರಬ್ರಹ್ಮನನ್ನು ಪಡೆಯುವ ವಿಶೇಷವಾದ ಅರ್ಹತೆಗಳು ಯಾವುವೂ ತನ್ನಲ್ಲಿ ಇಲ್ಲವೆಂದೂ ಪ್ರಕಾಶಪಡಿಸುತ್ತಾ, ಪರಬ್ರಹ್ಮನ ಸೇವೆಗಾಗಿ ತನ್ನನ್ನು ಕರೆದುಕೊಳ್ಳಬೇಕೆಂದೂ, ಪರಮಪುರುಷನನ್ನು ಬೇಡುತ್ತಾನೆ.

ಪ್ರಣವ ರೂಪನೂ, ಯಜ್ಞಸ್ವರೂಪಿಯೂ ಆದ ಪರಬ್ರಹ್ಮನೇ! ನಾನು ಕರ್ಮಾನುಗುಣವಾಗಿ ಅನೇಕ ಯೋನಿಗಳಲ್ಲಿ ಸಂಚರಿಸಿದೆನು. ಸ್ಥಿರವಾದ ನೆಲೆಯನ್ನು ಕಳೆದುಕೊಂಡು ನಿನ್ನನ್ನು ಅಗಲಿ ಎಲ್ಲೆಲ್ಲೋ ಅಲೆದಾಡಿದೆನು. ನಿನ್ನ ಕೃಪೆಗೆ ಪಾತ್ರನಾದ ಮೇಲೆ, ಪ್ರಾಕೃತ ಶರೀರ ಹೋದಮೇಲೆ ನಾನೂ ನಿನ್ನಂತೆ ಅಮೃತನಲ್ಲವೇ; ನಿತ್ಯನಲ್ಲವೇ? ನಿನ್ನನ್ನಗಲಿಸಿದ ಈ ಕರ್ಮಶರೀರವು ಕೊನೆಯಲ್ಲಿ ಬೂದಿಯೋ, ಮಣ್ಣೋ, ಕ್ರಿಮಿಗಳ ಮಲವೋ ಆಗಿ ಹೋಗುತ್ತದೆ. ಇಂತಹ ಶರೀರ ನೋಡಿ ನನ್ನನ್ನು ದೂರ ಮಾಡಬೇಡ.

ಎಲೈ ಯಜ್ಞರೂಪಿಯೇ; ನಿನ್ನನ್ನು ಪಡೆಯುವ ಅರ್ಹತೆ ಇಲ್ಲವೆಂದೇ ನಾನು ನಂಬಿದೇನೆ. ಸರ್ವಜ್ಞನಾದ ನೀನು ನಾನೇನಾದರೂ ಒಳ್ಳೆಯದನ್ನು ಮಾಡಿದ್ದರೆ ನನ್ನನ್ನು ಅನುಗ್ರಹಿಸುವ ಬುದ್ಧಿಯಿಂದಲಾದರೂ ಅವುಗಳನ್ನು ನೆನೆದುಕೋ ಎಂದು ಬೇಡುತ್ತಾನೆ. ಅಲ್ಲದೆ ಪರಮಾತ್ಮನು ಕೊಟ್ಟ ಆಶ್ವಾಸನವನ್ನು ಪರಮಾತ್ಮನಿಗೆ ಜ್ಞಾಪಿಸುತ್ತಾ ಮತ್ತೆ ಬೇಡುತ್ತಾನೆ. ಎಲೈ ಪರಮಪುರುಷನೇ: ನೀನು ಚೇತನರು ಮಾಡಿದ ಒಳ್ಳೆಯ ಕೆಲಸಗಳನ್ನು ನೆನದು ತನ್ನಲ್ಲಿ ಕರೆದುಕೊಳ್ಳುವನೆಂದು[1] ಭರವಸೆಕೊಟ್ಟಿಲ್ಲವೇ? ನಿನ್ನ ಮಾತಿನಂತಲಾದರೂ ನನ್ನ ಒಳ್ಳೆಯ ಕೆಲಸಗಳನ್ನು ಸ್ಮರಿಸಿಕೋ. ನಿನ್ನಲ್ಲಿಗೆ ಕರೆದುಕೋ ಎಂದು ಬೇಡುತ್ತಾನೆ. ಹಲವಾರು ಬಾರಿ ಪ್ರಾರ್ಥಿಸಿ ತನ್ನ ಕಾತುರತೆಯನ್ನು ಪ್ರಕಾಶಪಡಿಸುತ್ತಾನೆ.

## ವೇದಾಂತಾಚಾರ್ಯ ಭಾಷ್ಯ

ಅನಂತರ ಪರಿಶುದ್ಧವಾದ ಜೀವಾತ್ಮದ ಸ್ವರೂಪವನ್ನು ಸಾಂಕೇತಿಕವಾಗಿ ತಿಳಿಸಲಾಗುತ್ತಿದೆ. "ವಾಯುರನಿಲಮಮೃತಮ್" ಎಂದು.

### ಪದವಿರವಣೆ

**ವಾಯುಃ** – ಉಪಾಸನ ಎಂಬ ವಿದ್ಯೆ ಮತ್ತು ಪುಣ್ಯಪಾಪಕರ್ಮಗಳಿಗೆ ತಕ್ಕಂತೆ ಅಲ್ಲಲ್ಲಿ (ಲೋಕಲೋಕಾಂತರಗಳಲ್ಲಿ) ಸಂಚರಿಸುವ ಸ್ವಭಾವ ಇರುವುದರಿಂದ ವಾಯು ಎಂದರೆ ಇಲ್ಲಿ ಜೀವಾತ್ಮ.

**ಅನಿಲಃ** – (ತನಗೆ ತನಗಿಂತ ಬೇರೆಯಾದ ಜಡ ಪ್ರಕೃತಿಯು) ಆಸರೆಯಿಲ್ಲದಿರುವಾಗ (ಎಲ್ಲಿಯೂ ಇಲ್ಲಿ ಹೀಗೆ ಮಾಡಕೂಡದು, ಮಾಡಬೇಕು ಎಂದಾಗಲಿ, ಇರಕೂಡದು ಎಂದಾಗಲಿ) ಯಾವುದೇ ನಿರ್ಬಂಧಕ್ಕೆ ಸಿಲುಕಿರಬೇಕಾದಂತಹ ಅವಶ್ಯಕತೆ ಇಲ್ಲದುದರಿಂದ 'ಅನಿಲ್' ಎಂದರೆ (ಪರಿಶುದ್ಧವಾದ) ಜೀವಾತ್ಮ.

**ಅಮೃತಮ್** – ತನಗೆ ಆಸರೆಯಾಗಿದ್ದ ಅನೇಕ ದೇಹಗಳು ಸಾಯುತ್ತಿದ್ದರೂ ಸಹ ತಾನು ಮಾತ್ರ ಸಾಯದೇ ಉಳಿದೇ ಇರುವವನು.

### ಅಮೃತ ಶಬ್ದದ ಅರ್ಥ, ವಿವೇಚನೆ

ಮರಣವಿಲ್ಲದುದು ಎಂಬ ಅಂಶ ಮುಪ್ಪಿಲ್ಲದುದು ಮುಂತಾದ ಸ್ವಭಾವಗಳಿಗೂ ಸೂಚಕವಾಗಿದೆ. ಹೀಗೆ ಹೇಳಲು ಆಧಾರ "ಮುಪ್ಪಿಲ್ಲದವ, ಸಾವಿಲ್ಲದವ, ದುಃಖವಿಲ್ಲದವ,"[2] ಎಂದು ಜೊತೆಯಲ್ಲಿ ಹೇಳಿರುವ ಪರಿಶುದ್ಧ ಜೀವಾತ್ಮನ ಬಗ್ಗೆ ವಿವರಣೆ ನೀಡುವಂತಹ ಪ್ರಜಾಪತಿಯ ಮಾತು.

### ಅಮೃತ ಎಂದರೆ ಗಾಳಿಯಲ್ಲ

ಇಲ್ಲಿ ವಾಯು – ಅನಿಲ – ಅಮೃತ ಎಂದು ಹೇಳಿರುವುದು, "ವಾಯುವೂ, ಆಕಾಶವೂ, ಈ ಅಮೃತ"[3] ಎಂದು ಬೇರೆ ಉಪನಿಷತ್ತಿನಲ್ಲಿ ಹೇಳಿರುವುದನ್ನೇ ಗಮನದಲ್ಲಿಟ್ಟುಕೊಂಡು ಹೇಳುತ್ತಿರುವಂತಿದೆ. ಆದುದರಿಂದ ಬರಿದೆ ವಾಯು ಎಂದರೆ ಪ್ರಸಿದ್ಧವಾದ ಗಾಳಿ ಎಂಬ ಅರ್ಥವಿಲ್ಲ. ಇಲ್ಲೂ ಅನಿಲ, ಅಮೃತ ಪದಗಳನ್ನು

---

1. ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂ ಗತಿಮ್. ವ. ಚ. ಶ್ಲೋ.
2. ವಿಜರೋ ವಿಮೃತ್ಯುರ್ವಿಶೋಕಃ. ಛಾಂ. ೮.೭.೧.
3. ವಾಯು ಶ್ಚಾಂತರಿಕ್ಷಂ ಚೈತದಮೃತಮ್. ಛಾಂ. ೮.೭.೧.

ವಾಯು ಪರವಾಗಿ ಅರ್ಥೈಸಬಹುದಲ್ಲವೆ! ಎಂದು ಆಕ್ಷೇಪಿಸಬಾರದು. ಹಾಗೊಂದು ಪಕ್ಷ ಒಪ್ಪಿದರೆ ಇಲ್ಲಿ ಹಿಂದೆ ಮುಂದೆ ಇರುವ ಮಾತುಗಳು ಹೊಂದುವುದೇ ಇಲ್ಲ.

### ಅಮೃತ ಎಂದರೆ ಪರಮಾತ್ಮನಲ್ಲ

ಒಂದು ಪಕ್ಷ ಈ ಪದಗಳಿಗೆಲ್ಲ ನೇರವಾಗಿ ಅಥವಾ ಜೀವಾತ್ಮನ ಮೂಲಕವಾಗಿ ಪರಮಾತ್ಮನೇ ಅರ್ಥ ಎಂಬುದನ್ನು ಒಪ್ಪಲು ಅವಕಾಶವಿದೆ. ಆದರೆ ಈ ರೀತಿ ಅರ್ಥಮಾಡುವುದಕ್ಕಿಂತ ನಶ್ವರವಾದ ದೇಹವನ್ನು ಹೇಳಿ ಅನಂತರ ಇದನ್ನು ಹೇಳಿರುವುದರಿಂದ ದೇಹಕ್ಕಿಂತಲೂ ಬೇರೆಯಾದ ಶುದ್ಧವಾದ ಜೀವಾತ್ಮ ಇಲ್ಲಿ ಹೇಳಲ್ಪಟ್ಟಿದೆ ಎಂದು ಅರ್ಥಮಾಡುವುದೇ ಒಳಿತು. ಆದುದರಿಂದ ಜೀವಾತ್ಮ ಎಂದು ಅರ್ಥ ಮಾಡುವ ಪಕ್ಷವೇ ಉತ್ತಮ.

### ಅಮೃತ ಎಂದರೆ ಪ್ರಾಣವಲ್ಲ

ಅನಿಲರೂಪವಾದ ವಾಯುವೇ ಪ್ರಾಣ, ಅದನ್ನೇ ಇಲ್ಲಿ ಹೇಳಲಾಗಿವೆ ಎಂದು ಅರ್ಥೈಸುವುದರಿಂದ ಇಲ್ಲಿ ಸ್ವಲ್ಪವೂ ಉಪಯೋಗವಿಲ್ಲ.

### ಅಮೃತ ಎಂದರೆ ಜೀವಾತ್ಮ ಎನ್ನಲು ಇತರ ಆಧಾರಗಳು

ಈ ಪ್ರಸಂಗದಲ್ಲಿ ಶ್ವೇತಾಶ್ವತರೋಪನಿಷತ್ತನ್ನು ಕಲಿತವರೂ ಸಹ ಅನುಭವಿಸುವ ನಾವು, ಅನುಭವಿಸಲ್ಪಡುವ ವಿಷಯಗಳು, ನಮ್ಮ ಮತ್ತು ಈ ಎಲ್ಲದರ ನಿಯಾಮಕನಾದ ಅಧಿಪತಿ ಈ ಮೂರು ಅಂಶಗಳ ಬಗ್ಗೆಯೂ ವಿವೇಚಿಸುವಾಗ,[1] ದೇಹವನ್ನು ಅನುಭವಿಸುವುದು ದೇಹವೇ ಅಲ್ಲ; ದೇಹಕ್ಕಿಂತ ಬೇರೆಯಾಗಿ ದೇಹದೊಳಗೆ ಸೇರಿಕೊಂಡಿರುವ ಜೀವ, ಅವನನ್ನು 'ಅಮೃತ' ಎಂದು ನಿರ್ದೇಶಿಸಲಾಗುವುದು ಎಂದೂ ತಿಳಿಸುತ್ತಾರೆ.

'ಪ್ರಧಾನ' ಎಂಬ ಹೆಸರಿನ ಈ ಜಡವಾದ ಪ್ರಕೃತಿ ವ್ಯತ್ಯಾಸವಾಗುತ್ತಲೇ ಇರುವುದರಿಂದ 'ಕ್ಷರ' ಎನಿಸುವುದು. ಕ್ಷರಕ್ಕಿಂತ ಬೇರೆಯಾದ ವಸ್ತುವಾಗಿದ್ದು, 'ಅಕ್ಷರ' ಎನಿಸಿ, ಕ್ಷರವನ್ನು ತಾನು ಅನುಭವಿಸುವ ಸಲುವಾಗಿ ತನ್ನೆಡೆಗೆ ಎಳೆದುಕೊಳ್ಳುವವನು, ಸಾಯದೆ ಉಳಿದುಕೊಂಡೇ ಇರುವುದರಿಂದ, 'ಅಮೃತ' ಎಂದು ನಿರ್ದೇಶಿಸಬಹುದಾದ ಈ ಜೀವಾತ್ಮ. ಈ ಕ್ಷರವಸ್ತುವನ್ನೂ, ಆತ್ಮವಸ್ತುವನ್ನೂ ತನ್ನ ಹತೋಟಿಯಲ್ಲಿಟ್ಟುಕೊಂಡು ಒಬ್ಬ ದೇವನು ಆಳುತ್ತಿದ್ದಾನೆ"[2] ಎಂದೂ ಮತ್ತು "ಈ ಕ್ಷರವಸ್ತುವೇ ಅವಿದ್ಯೆ, ಅಮೃತ ವಸ್ತುವೇ ವಿದ್ಯೆ. ಈ ವಿದ್ಯೆ – ಅವಿದ್ಯೆಗಳನ್ನು ವಶದಲ್ಲಿಟ್ಟುಕೊಂಡಿರುವವನು ಯಾವನೋ, ಅವನು ಇವುಗಳಿಗಿಂತ ಬೇರೆಯಾದ ಒಬ್ಬ"[3] ಎಂದೂ ತಿಳಿಸುತ್ತಾರೆ.

### ಪೂರ್ವಾಪರ ಸಂಗತಿ

ಹೀಗೆ ತನ್ನನ್ನು ತನ್ನಷ್ಟಕ್ಕೆ ತಾನೇ ತಿಳಿದುಕೊಳ್ಳಬಲ್ಲ ಜೀವಾತ್ಮನ ಸ್ವರೂಪಕ್ಕೆ "ಈ ಜ್ಞಾನಿಯಾದ ವಸ್ತು ಹುಟ್ಟದು ಅಥವಾ ಸಾಯದು" ಮುಂತಾದ ವಚನಗಳಲ್ಲಿ ಪ್ರಸಿದ್ಧವಾಗಿರುವ ಈ 'ಸಾವಿಲ್ಲದಿರುವಿಕೆಯನ್ನು'

1. ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾ. ಶ್ವೇ. ೧.೧೨.
2. ಕ್ಷರಂ ಪ್ರಧಾನಂ ಅಮೃತಾಕ್ಷರಂ ಹರಃ ಕ್ಷರಾತ್ಮಾನಾವೀಶತೇ ದೇವ ಏಕಃ. ಶ್ವೇ. ೧.೧೦.
3. ಕ್ಷರಂ ತ್ವವಿದ್ಯಾ ಹ್ಯಮೃತಂ ತು ವಿದ್ಯಾ ವಿದ್ಯಾವಿದ್ಯೇ ಈಶತೇಯಸ್ತು ಸೋಽನ್ಯಃ. ಶ್ವೇ. ೫.
4. ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್. ಕಠ. ೧.೨.೧೮.

ಈವರೆಗೆ ಹೇಳಿ, ನಂತರ ತನ್ನ ಶರೀರವನ್ನು ತಿಳಿದುಕೊಂಡು ಆಳುತ್ತಿರುವ ಜೀವಾತ್ಮದ ಈ ನಶ್ವರವಾದ ದೇಹವು ಸತ್ತೇ ಸಾಯುವುದು ಎಂಬ ಅಂಶವನ್ನು ತಿಳಿಸುತ್ತಿದ್ದಾನೆ. "ಅಥ ... ಶರೀರಮ್" ಎಂಬುದರಿಂದ.

### 'ಅಥ' ಎಂಬುದರ ಭಾವಾರ್ಥಗಳು

ಹಿಂದೆ ಹೇಳಿದುದಕ್ಕಿಂತ ತೀರ ಬೇರೆಯಾದ ವಿಷಯ ಈಗ ಹೇಳಲಾಗುವುದು ಎಂಬುದನ್ನು ತಿಳಿಸುವ ಸಲುವಾಗಿ ಇಲ್ಲಿ 'ಅಥ' – 'ಈ ನಂತರ' ಎಂಬ ಪದವನ್ನು ಉಪಯೋಗಿಸಲಾಗಿದೆ.

ಅಥವಾ – ಜೀವವು ಈ ಶರೀರವನ್ನು ಬಿಟ್ಟು ಹೋದ ಮೇಲೆ ಎಂದೂ ಅರ್ಥ ಮಾಡಬಹುದು.

ಅಥವಾ – ಪುಣ್ಯ ಪಾಪಗಳಿಗೆ ತಕ್ಕಂತೆ ಅವುಗಳ ಹತೋಟಿಗೊಳಪಟ್ಟು ಏರ್ಪಟ್ಟಿರುವ ಈ ಎಲ್ಲ ವಿಧವಾದ ಶರೀರಗಳೂ ಎಂಬುದಾಗಿ ತಿಳಿಸಲೋಸುಗ 'ಒಟ್ಟು' ಎಂಬ ಅರ್ಥದಲ್ಲಿ ಈ ಅಥ ಶಬ್ದವನ್ನು ಬಳಸಲಾಗಿದೆ ಎನ್ನಬಹುದು.

ಸ್ಮೃತಿ ಗ್ರಂಥಗಳಲ್ಲೂ ಈ ಅಂಶವನ್ನು ನೆನಪಿಸಿ ಕೊಡಲಾಗಿದೆ. "ಗಂಗೆಯಲ್ಲಿ ಮರಳಿನ ಕಣಗಳೆಷ್ಟೋ, ಮೋಡ ಮಳೆಗರೆಯುವಾಗ ನೀರಿನ ಧಾರೆಗಳೆಷ್ಟೋ, ಹಾಗೆಯೇ ಈ ಲೋಕದಲ್ಲಿ ಬದುಕಿ ಬಾಳಿ ಗತಿಸಿಹೋದ ಅಜ್ಜಂದಿರಂತಹ ಚತುರ್ಮುಖ ಬ್ರಹ್ಮರನ್ನೂ ಸಹ ಲೆಕ್ಕಮಾಡಿ ಹೇಳಲು ಸಾಧ್ಯವಿಲ್ಲ"[1] ಹಾಗೂ "ಚತುರ್ಮುಖ ಬ್ರಹ್ಮ ಮುಂತಾದ ಎಲ್ಲರೂ ಪ್ರಳಯದಲ್ಲಿ ನಾಶವಾಗಿ ಹೋಗಿದ್ದಾಗ"[2] ಎಂಬ ವಚನಗಳಿಂದ ನೆನಪಿಸಲಾಗಿದೆ.

### ಪದವಿವರಣೆ

**ಇದಮ್** - ಇಲ್ಲಿ ನಮ್ಮ ಇಂದ್ರಿಯಗಳಿಗೆ ಗೋಚರವಾಗುವ ಈ ಸ್ಥೂಲ ಶರೀರಗಳು ಮಾತ್ರ ನಾಶವಾಗುತ್ತವೆ ಎಂದು ತಿಳಿಸಿ, ಈ ಸ್ಥೂಲ ಶರೀರದ ಮೂಲ ವಸ್ತುವೂ, ಸೂಕ್ಷ್ಮವೂ ಆದ ಜಡ ಪ್ರಕೃತಿಯ ಅಂಶಗಳೂ, ಅಣುವಾದ ಜೀವಾತ್ಮಗಳೂ ಸಹ ಪರಮಾತ್ಮನಿಗೆ ಶರೀರವಾಗಿದ್ದರೂ; ಅವು ಶಾಶ್ವತವಾದುದರಿಂದ ಅವುಗಳ ಮೂಲ ಸ್ವರೂಪಕ್ಕೆ ಎಂದೂ ನಾಶವಿಲ್ಲ ಎಂದು ಪ್ರಮಾಣಾಧಾರಗಳಿಂದ, ಬಿಡಿಯಾಗಿ ತಿಳಿದು ಇವುಗಳ ವ್ಯತ್ಯಾಸ ತೋರಿಸುವ ಸಲುವಾಗಿ ಶರೀರವನ್ನು ಇದು (ಇದಂ) ಎಂದು ನಿರ್ದೇಶಿಸಿರುವುದು.

**ಭಸ್ಮಾಂತಮ್** - 'ಕೊನೆಗೆ ಬೂದಿಯಾಗುವುದು' ಎಂದರೆ ಅಗ್ನಿ ಸಂಸ್ಕಾರ ಪಡೆಯುವುದು ಎಂದಷ್ಟೇ ಅರ್ಥ.

ಅಥವಾ - ಬೇರೆಯ ಗ್ರಂಥಗಳಲ್ಲಿ "ಮೃತ ಶರೀರ ಮಾಂಸ ಭಕ್ಷಕಗಳಿಗೆ ಆಹಾರವಾದರೆ; ಮಲವಾಗಿಯೋ, ಕೊಳೆತು ಗೊಬ್ಬರವಾಗಿಯೋ, ಹುಳಿತು ಹುಳುಗಳಾಗಿಯೋ, ಸುಟ್ಟು ಬೂದಿಯಾಗಿಯೋ; ಆದೀತು"[3] ಎಂದು ಹೇಳಿರುವುದೆಲ್ಲಕ್ಕೂ ಇದು ಸೂಚಕವಾಗಿದೆ.

**ಶರೀರಮ್** - ನಮ್ಮ ಮೈ ಒರುಬರುತ್ತ ವ್ಯತ್ಯಾಸವಾಗಿ ಶಿಥಿಲವಾಗುತ್ತ ಸವೆಯುತ್ತಲೇ ಹೋಗುವುದರಿಂದ, 'ಶರೀರ' ಎನಿಸುತ್ತದೆ. ಈ ವಿಷಯವನ್ನು, 'ಶರೀರ' ಎಂಬ ಪದದ ಗಹನವಾದ ಅರ್ಥವನ್ನೂ ಮತ್ತು ವ್ಯಾಕರಣಾನುಸಾರ ರಚನೆಯನ್ನೂ ನೋಡಿ ತಿಳಿದುಕೊಳ್ಳಬಹುದು.

---

1. ಗಂಗಾಯಾಂ ಸಿಕತಾ ಧಾರಾ ಯಥಾವರ್ಷತಿ ವಾಸವೇ । ಶಕ್ಯಾ ಗಣಯಿತುಂ ಲೋಕೇ ನ ವ್ಯತೀತಾಃ ಪಿತಾಮಹಾಃ ॥
2. ಬ್ರಹ್ಮಾದಿಷು ಪ್ರಲೀನೇಷು. ಮ. ಭಾ.
3. ಕಲೇಬರಂ ವಿಟ್ ಕ್ರಿಮಿ ಭಸ್ಮ ಸಂಜ್ಞಿತಮ್. ಭಾಗವತ. ೧೦. ಸ್ಕಂಧ. ತ್ಯಾಗೇ ಕೃತೇ ಕ್ರವ್ಯಾದಭಕ್ಷಿತಂ ಶರೀರಂ ವಿಟ್‌ಸಂಜ್ಞಿತಂ ಭವತಿ; ಖನನೇ ಕ್ರಿಮಿಸಂಜ್ಞಿತಂ; ದಾಹೇ ಭಸ್ಮಸಂಜ್ಞಿತಂ ಭವತಿ. ಈ. ಪ್ರ. ಪು. ೨೮.

## ಓಂಕಾರದ ಅರ್ಥ

ಹೀಗೆ "ಅನುಭವಿಸುವವನನ್ನೂ (ತನ್ನನ್ನೂ) ಅನುಭವಿಸಬೇಕಾದುದನ್ನೂ, ತನ್ನ ಒಡೆಯನನ್ನೂ ತಿಳಿದು"[1] ಎಂಬ ಉಪನಿಷತ್ ವಚನದಲ್ಲಿ ತಿಳಿಸಿರುವಂತೆ ಕ್ರಮವಾಗಿ ಈವರೆಗೆ ಜಡ - ಜೀವಗಳೆರಡನ್ನೂ ವಿವೇಚಿಸಿ ಹೇಳಿ ನಂತರ ಜಡ - ಜೀವಗಳೆಲ್ಲದರ ಪ್ರೇರಕನೂ ನಿಯಾಮಕನೂ ಆದ ಮಹಾಪುರುಷನೆನಿಸಿರುವ ಪರಮಾತ್ಮನನ್ನು ಇಲ್ಲಿ ಅವಶ್ಯ ತಿಳಿಸಬೇಕಾಗಿರುವುದರಿಂದ ಓಂಕಾರದ ಮೂಲಕ ಎತ್ತಿ ತೋರಿಸಿ ಕೊಡುತ್ತಿದ್ದಾನೆ, 'ಓಮ್' ಎಂದು.

"ಯಾವನು ಈ ಪರಮಪುರುಷನೆನಿಸಿದ ಪರಮಾತ್ಮನನ್ನು ಮೂರು ಮಾತ್ರಾಕಾಲವುಳ್ಳ (ಅ+ಉ+ಮ್) ಎಂಬ ಮೂರಕ್ಷರಗಳ ಸಂಯೋಜನೆಯಿಂದುಂಟಾದ 'ಓಮ್' ಎಂಬ ಒಂದೇ ಅಕ್ಷರದ ಮೂಲಕ ಭಕ್ತಿ - ಶ್ರದ್ಧೆಗಳಿಂದ ಮನಸ್ಸಿನಲ್ಲೇ ಧ್ಯಾನ ಮಾಡುವನೋ"[2] ಎಂದು, ಅಥರ್ವಣವೇದವನ್ನು ಕಲಿತವರೂ ಪಠಿಸುತ್ತಾರೆ.

"ಕ್ಲೇಶ - ಕರ್ಮ - ವಿಪಾಕ - ಆಶಯಗಳ ಸ್ಪರ್ಶ ಕಿಂಚಿತ್ತೂ ಇಲ್ಲದ ಒಬ್ಬ ಪುರುಷನೇ ಈಶ್ವರ. ಅವನು ಹಿಂದಿನವರೆಲ್ಲರಿಗೂ ಗುರು. ಅವನು ಈ ಕಾಲದಲ್ಲಿದ್ದ, ಈ ಕಾಲದಲ್ಲಿದ್ದಾನೆ, ಈ ಕಾಲದಲ್ಲಿರುವುದಿಲ್ಲ ಎಂದು ಯಾವುದೇ ಕಾಲಕ್ಕೆ ಒಳಪಟ್ಟಿಲ್ಲದಿರುವುದೇ ಇದಕ್ಕೆ ಕಾರಣ."[3] "ಅವನನ್ನು ತಿಳಿಸುವ ಮಾತೇ 'ಪ್ರಣವ' (ಓಂಕಾರ) ",[4] ಎಂದು ಯೋಗಸೂತ್ರಗಳಲ್ಲೂ ಹೇಳಲಾಗಿದೆ.

ಸರ್ವಜ್ಞನಾದ ರುದ್ರನೂ ಸಹ "ಎಲೈ ಬ್ರಾಹ್ಮಣರೇ! 'ಓಂ' ಎಂದು ಯಾವಾಗಲೂ ಹೇಳಿರಿ. (ಅದರ ಅರ್ಥವಾದ) ಕೇಶವನನ್ನು ಧ್ಯಾನಿಸಿರಿ"[5] ಎಂದು ಹೇಳಿರುವನು.

ಪರಮಾತ್ಮನೂ ಸಹ ತಾನೇ ಗೀತೆಯಲ್ಲಿ "ಸಂಕ್ಷಿಪ್ತವಾಗಿ 'ಓಂ' ಎಂಬ ಒಂದು ಅಕ್ಷರರೂಪವಾಗಿರುವ ವೇದವನ್ನು ಪಠಿಸುತ್ತ ನನ್ನನ್ನೇ ಕಣ್ಣಿನಲ್ಲಿ ಕಟ್ಟಿದಂತೆ ಧ್ಯಾನಿಸುತ್ತ"[6] ಎಂದು ಹಾಡಿರುವನು.

ಹೀಗೆ ಇಂತಹ ಅನೇಕ ವಚನಗಳನ್ನು ಎಲ್ಲೆಡೆಯೂ ನಾವು ಕಾಣಬಹುದು.

## ಉಪಾಸಕನ ಪ್ರಾರ್ಥನೆ.

ಈ ನಂತರ ಯಜ್ಞರೂಪಿಯೂ. ಜ್ಞಾನ ಯಜ್ಞದಿಂದ ತಿಳಿದು ಬರುವಂತಹವನೂ, ಆರು ಗುಣಗಳಿಂದ ಪೂರ್ಣನೂ ಆದ ಪರಮಾತ್ಮನನ್ನು ಎದಿರುಗೊಳ್ಳುವಂತಾಗಲು, ಅವನದೇ ಆದ ಕರುಣೆಯನ್ನು ಅಪೇಕ್ಷಿಸಿ ಬೇಡಿಕೊಳ್ಳುತ್ತಿದ್ದಾನೆ. "ಕ್ರತೋ!......ಸ್ಮರ" ಎಂದು.

---

1. ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ. ಶ್ವೇ. ೧.೧೨.
2. ಯಃ ಪುನರೇತಂ ತ್ರಿಮಾತ್ರೇಣ ಓಮಿತ್ಯೇತೇನೈವಾಕ್ಷರೇಣ ಪರಮಪುರುಷಮಭಿಧ್ಯಾಯೀತ. ಪ್ರ. ೫.೫.
3. ಕ್ಲೇಶಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷವಿಶೇಷ ಈಶ್ವರಸ್ಸ ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್॥ ಪಾತ. ಯೋ. ೧.೨೪.
4. ತಸ್ಯ ವಾಚಕಃ ಪ್ರಣವಃ. ಪಾತ. ಯೋ ೧.೨೭.
5. ಓಮಿತ್ಯೇವಂ ಸದಾವಿಪ್ರಾಃ ಪಠಧ್ವಂ ಧ್ಯಾತಕೇಶಮ್. ಹ.ಪು.
6. ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್. ಗೀ. ೮.೧೩.

## ಕ್ರತು ಎಂಬುದರ ಭಾವಾರ್ಥ

**ಕ್ರತೋ!** - ವಿಶೇಶ ರೀತಿಯ ಯಜ್ಞದ ಅಂತರಾತ್ಮನಾಗಿ ಆ ರೂಪದಲ್ಲಿರುವವನೇ!

ಅಂತೆಯೇ ಹೇಳಲಾಗಿದೆ - "ನಾನೇ ಕ್ರತು, ನಾನೇ ಯಜ್ಞ"[1] ಎಂದು.

"ಈಲೋಕದಲ್ಲಿ ಯಾವ ರೀತಿಯ ಕ್ರತುವನ್ನು (ಉಪಾಸನೆಯನ್ನು) ಮಾಡುವನೋ; ಮರಣಾನಂತರ ಇಲ್ಲಿಂದ ಹೋದಮೇಲೂ ಅಂತಹ ಫಲವೇ ಸಿಗುವುದು"[2] "ಅಂತಹವನು ಕ್ರತುವನ್ನು (ಉಪಾಸನೆಯನ್ನು) ಮಾಡಬೇಕು"[3] "ಈ ರೀತಿ ಕ್ರತುವನ್ನು (ಉಪಾಸನೆಯನ್ನು) ಮಾಡುವವನೇ ಅಲ್ಲವೆ"[4] ಇವೇ ಮುಂತಾದ ವಚನಗಳಲ್ಲಿ ಹೇಳಿರುವಂತೆ ಇಲ್ಲೂ ಹಿಂದುಮುಂದಿನ ವಿಚಾರಗಳ ಸಂದರ್ಭದಿಂದಲೇ 'ಕ್ರತು' ಎಂಬ ಶಬ್ದಕ್ಕೆ ಉಪಾಸನೆ ಎಂದು ಅರ್ಥ ಮಾಡಬಹುದಾಗಿದೆ. ಈ ಉಪಾಸನರೂಪವಾದ ಜ್ಞಾನಕ್ಕೆ ತಿಳಿದು ಬರುವ ಪರಮಾತ್ಮನನ್ನು "ಕ್ರತು" ಎಂದೂ ಕರೆಯುವುದು ಈ ಕಾರಣದಿಂದ ಗೌರವಾರ್ಥವಾಗಿ ಎಂದಿಟ್ಟುಕೊಳ್ಳಬಹುದು.

## ಸ್ಮರಣೆ ಎಂತಹುದು?

**ಸ್ಮರ** - ಕರುಣೆಯಿಂದ ಮನಸ್ಸಿಟ್ಟು ನಮ್ಮ ಬಗ್ಗೆ ನೋಡು. "ಎಲೈ ಕೇಶವನೇ! ಪ್ರೀತಿ ತುಂಬಿದ ಮನಸ್ಸಿನಿಂದ ನಮ್ಮನ್ನು ಹೇಗೆ ನೆನೆಸಿಕೊಳ್ಳುತ್ತಿರುವೆಯೋ!"[5] ಎಂಬಂತೆ ಇದೂ.

ವರಾಹಮೂರ್ತಿಯಾದ ಭಗವಂತನೂ – "ಮನಸ್ಸು ಇದ್ದಾಗ" ಎಂದು ಆರಂಭಿಸಿ "ಒಂದಿಷ್ಟೂ ಚಲಿಸಲಾಗದೆ ಮರದ ಕೊರಡಂತೆಯೂ, ಕಲ್ಲಿನಂತೆಯೂ ಜಡವಾಗಿ ಬಿದ್ದುಕೊಂಡು ಸಾಯುತ್ತಿರುವ ಅಂತಹ ನನ್ನ ಭಕ್ತನನ್ನೂ ನಾನೇ ನೆನಪಿಟ್ಟುಕೊಂಡು ಉತ್ತಮವಾದ ಲೋಕಗಳಿಗೆ ಕರೆದೊಯ್ಯುವೆನು"[6] ಎಂದು ಹೇಳಿದ್ದಾನೆ.

ಎಲ್ಲವನ್ನೂ ಎಲ್ಲ ಸಮಯದಲ್ಲೂ ನೇರವಾಗಿ ಪ್ರತ್ಯಕ್ಷದಿಂದಲೇ ತಿಳಿದುಕೊಳ್ಳುತ್ತ, ಇರುವ ಪರಮಾತ್ಮನಿಗೆ ನೆನೆಸಿಕೊಳ್ಳುವ ಅವಶ್ಯಕತೆಯೇ ಇಲ್ಲವಲ್ಲ! ಎನ್ನಬಹುದು. ಆದರೆ ಇಲ್ಲಿಯ ನೆನಪು ಹಿಂದೆ ತಾನು ಮಾಡಿರುವುದನ್ನೇ ಮತ್ತೆ ವಿಮರ್ಶಿಸಿ ಪ್ರತ್ಯಕ್ಷ ಮಾಡಿಕೊಳ್ಳುವುದೇ ಆಗಿದೆ. ( ನಮ್ಮೆಲ್ಲರ ನೆನಪಿನಂತೆ ಮರೆತುಹೋದುದನ್ನು ಜ್ಞಾಪಿಸಿಕೊಳ್ಳುವುದಲ್ಲ. )

**ಕೃತಂ, ಸ್ಮರ** – ಮಾಡಿದುದನ್ನು ನೆನೆಸಿಕೋ ಎಂಬ ಮಾತಿಗೂ ಇದೇ ಅಭಿಪ್ರಾಯ.

---

1. ಅಹಂ ಕ್ರತುರಹಂ ಯಜ್ಞಃ. ಗೀ. ೯.೧೬. ಕ್ರತು – ಜ್ಯೋತಿಷ್ಟೋಮ ಮುಂತಾದ ವಿಶೇಷ ರೀತಿಯ ಯಜ್ಞ. ಯಜ್ಞ – ಸಾಮಾನ್ಯವಾಗಿ ನಿತ್ಯಕರ್ಮಗಳಲ್ಲಿ ಸೇರಿರುವ ಅತಿಥಿಸತ್ಕಾರ ಮುಂತಾದ ಪಂಚಮಹಾಯಜ್ಞ.)
2. ಯಥಾ ಕ್ರತುರಸ್ಮಿನ್ ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ. ಛಾಂ. ೩.೧೪.೧.
3. ಸ ಕ್ರತುಂ ಕುರ್ವೀತ. ಛಾಂ. ೩.೧೪.೧.
4. ಏವಂ ಕ್ರತುರ್ಹ. ಶಾಂಡಿಲ್ಯ ಅಗ್ನಿರಹಸ್ಯ.
5. ಸ್ನೇಹಪೂರ್ಣೇನ ಮನಸಾ ಯನ್ನಃ ಸ್ಮರಸಿ ಕೇಶವ. ಭಾರತ.
6. ಸ್ಥಿತೇ ಮನಸಿ ಸುಸ್ವಸ್ಥೇ ಶರೀರೇ ಸತಿ ಯೋನರಃ। ಧಾತುಸಾಮ್ಯೇ ಸ್ಥಿತೇಸ್ಮರ್ತಾ ವಿಶ್ವರೂಪಂಚ ಮಾಮಜಂ॥
ತತಸ್ತಂ ಮ್ರಿಯಮಾಣಂ ತು ಕಾಷ್ಠಪಾಷಾಣಸನ್ನಿಭಮ್।
ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂ ಗತಿಮ್ ॥ ವ.ಚ.ಶ್ಲೋ.

ನಾನು ಯಾವುದಾದರೂ ಅಲ್ಪವಾದ ಅನುಕೂಲ ಕಾರ್ಯವನ್ನು ಮಾಡಿದ್ದ ಪಕ್ಷಕ್ಕೆ, ಅದನ್ನಾದರೂ ನೆನಸಿ ಕೊಂಡು ಕೃತಜ್ಞನಾದ ನೀನು ನನ್ನನ್ನು ಕಾಪಾಡು ಎಂದು ಭಾವ.

ಅಥವಾ ಈವರೆಗೂ ನೀನೇ ನನಗೆ ಎಲ್ಲ ಅನುಕೂಲಗಳನ್ನು ಒದಗಿಸಿದ್ದು ಈಗಲೂ ಇನ್ನು ಮುಂದೆಯೂ ಮಾಡಿಕೊಡು ಎಂದರ್ಥ.

ಈ ಬಗ್ಗೆ ಹೀಗೆಯೇ ಸ್ಮೃತಿ ಗ್ರಂಥಗಳಲ್ಲಿ "ಹುಟ್ಟುವಾಗಲೇ ಮನುಷ್ಯನನ್ನು"[1] ಮುಂತಾದ ಕಡೆಗಳಲ್ಲಿ ನೆನಪು ಕೊಡಲಾಗಿದೆ. "ಶಾಶ್ವತವಾಗಿ ನನ್ನೊಡನೆ ಯೋಗವನ್ನು ಅಪೇಕ್ಷಿಸುವವರಿಗೆ"[2] ಇತ್ಯಾದಿಯಾಗಿ ಭಗವಂತ ತಾನಾಗಿ ಹೇಳಿಯೂ ಇದ್ದಾನೆ.

"ಎಲೈ ಕ್ರತುವೇ! ನೆನಸಿಕೋ, ಮಾಡಿದ್ದನ್ನು ನೆನಸಿಕೋ!"[3] ಎಂಬ ಮಾತನ್ನು ಮತ್ತೆ ಇಲ್ಲಿ ಪುನರುಚ್ಚಾರಣೆ ಮಾಡಿರುವುದು, ಈ ಮೇಲೆ ಹೇಳಿದ ಪ್ರಾರ್ಥನೆಯು ಶೀಘ್ರವಾಗಿ ಕೈಗೂಡಲಿ ಎಂಬ ಅಭಿಪ್ರಾಯದಿಂದ.

# ಈಶಾವಾಸ್ಯ ಪ್ರಕಾಶಿಕೆ

## ಹದಿನೇಳು ಹದಿನೆಂಟು ಮಂತ್ರಗಳ ಅವತಾರಿಕೆ

ಈವರೆಗೆ ಹಿರಿಯ ಕಿರಿಯ ತತ್ವಗಳನ್ನು ವಿವೇಚಿಸಿ ಆಯಿತು. ಹಾಗೂ ಪರಲೋಕದ ಸುಖಗಳಲ್ಲೂ ಅತಿ ಉತ್ತಮವಾದುದು ಮೋಕ್ಷ. ಅದನ್ನು ಪಡೆಯಲು ಸಾಂಗವಾದ ಭಕ್ತಿಯೋಗ ಸಹಾಯಕ. ಈ ಭಕ್ತಿಯೋಗದಲ್ಲೇ ನಿರತನಾದವನಿಗೆ ಈ ಹಿಂದಿನ ಎರಡು ಮಂತ್ರಗಳ ಅರ್ಥವನ್ನು ತಿಳಿದುಕೊಂಡು ಸರ್ವದಾ ಹೇಳುತ್ತಿರಲು ಅರ್ಹವಾಗಿವೆ ಎಂದೂ ಹೇಳಿ ಆಯಿತು.

ಈಗ ತಿಳುವಳಿಕೆ ಹಾಗೂ ಶಕ್ತಿಯಿಲ್ಲದ ಕಾರಣ ಭಕ್ತಿಯೋಗವನ್ನು ಮಾಡಲಾಗದವರು, ದೇವರೇ ಗತಿ ಎಂದು ಶರಣಾಗತರಾಗಬಹುದು. ಅವರು ಆಚರಿಸಬೇಕಾದ ಅಂಶಗಳನ್ನು ಈ ಮುಂದಿನ ಎರಡು ಮಂತ್ರಗಳಲ್ಲಿ ಉಪದೇಶಿಸಲಾಗುತ್ತಿದೆ.

## ಇವು ಶರಣಾಗತಿ ಮಂತ್ರಗಳೇ?

ವೇದಾಗಮಗಳಲ್ಲಿ ಆಚಾರ್ಯರಾರೂ ಈ ಎರಡು ಮಂತ್ರಗಳೂ ಶರಣಾಗತಿ ಮಂತ್ರಗಳು ಎಂದು ಸ್ಪಷ್ಟ ಶಬ್ದಗಳಿಂದ ಹೇಳಿಲ್ಲ. ಆದರೂ ಬುದ್ಧಿವಂತರಿಗೆ ಅರ್ಥ ಸಾಮರ್ಥ್ಯದಿಂದ ಇವು ಶರಣಾಗತಿ ಮಂತ್ರಗಳು ಎಂದು ಸುಲಭವಾಗಿಯೇ ವೇದ್ಯವಾಗುತ್ತವೆ. ಆದ್ದರಿಂದ ಶರಣಾಗತಿ ಪರವಾಗಿಯೇ ಇಲ್ಲಿ ಮಂತ್ರಗಳಿಗೆ ಅರ್ಥಮಾಡಲಾಗಿದೆ.

ಇಲ್ಲಿ ವೇದಾಂತಾಚಾರ್ಯರ ಭಾಷ್ಯದ ಕೊನೆಯಲ್ಲಿ "ವಿದ್ವಾಂಸರಾಗಿರುವ ಕೆಲವು ವಿದ್ಯಾರ್ಥಿಗಳನ್ನು ತೃಪ್ತಿಪಡಿಸಲು ಈರೀತಿ ವ್ಯಾಖ್ಯಾನವನ್ನು ವಿಸ್ತರಿಸಿ ಬರೆಯಲಾಗಿದೆ"[4] ಎಂದು ಒಂದು ಮಾತಿದೆ. ಇದರಿಂದ ತಮ್ಮ

---

1. ಜಾಯಮಾನಂಹಿ ಪುರುಷಮ್. ಮ. ಭಾ. ಶಾಂ. ೩೫೮.
2. ತೇಷಾಂ ಸತತಯುಕ್ತಾನಾಂ. ಗೀ. ೧೦.೧೦.
3. ಕ್ರತೋಸ್ಮರಂ ಕೃತಂ ಸ್ಮರ. ಈಶಾ.
4. ವ್ಯಕ್ತ್ಯಾ ವ್ಯಕ್ತೇ ವಾಜಿನಾಂ ಸಂಹಿತಾನ್ತೇ ವ್ಯಾಖ್ಯಾಮಿತ್ಥಂ ವಾಜಿವಕ್ತ್ರಪ್ರಸಾದಾತ್ ।
ವೈಶ್ವಾಮಿತ್ರೋ ವಿಶ್ವಮಿತ್ರಂ ವ್ಯತಾನೀದ್ವಿದ್ವಚ್ಛಾತ್ರ ಪ್ರೀತಯೇ ವೇಂಕಟೇಶಃ ॥ ವೇ. ಭಾ. ೧೮ನೇ ಮಂತ್ರ.

ಗ್ರಂಥವು ವಿಚಾರವಂತರಾದ ವಿದ್ವಾಂಸರಿಗೆ ಮಾತ್ರ ತಿಳಿಯಲು ಅರ್ಹವೆಂದೂ ಇವರಲ್ಲಿ ಸಾಮಾನ್ಯ ಜನರಿಗೆ ತಿಳಿಯಲಾರದಂತಹ ಗುಪ್ತವಾದ ವಿಚಾರಗಳೂ ಕೆಲವು ಇವೆ ಎಂದೂ ಅಭಿಪ್ರಾಯ ಸೂಚಿತವಾಗಿದೆ.

ಹೀಗೆ ಆಚಾರ್ಯರಿಗೆ ಒಪ್ಪಿಗೆಯಾಗಿರುವುದರಿಂದ ಈ ಎರಡು ಮಂತ್ರಗಳನ್ನೂ ಶರಣಾಗತಿ ಪರವಾಗಿ ವಿವರಿಸಲಾಗುವುದು. ಶರಣಾಗತಿಯನ್ನು ಸ್ಪಷ್ಟವಾಗಿ ವಿವರಿಸುವ ಎರಡು ಖಂಡಗಳಿರುವ ದ್ವಯ ಎಂಬ ಮಂತ್ರವಿದೆ. ಅದರ ಅರ್ಥವನ್ನೇ ಈ ಎರಡು ಮಂತ್ರಗಳಲ್ಲಿ ಇರುವುದಾಗಿ ತಿಳಿಸಿವೆ. ಹದಿನೇಳನೆಯ ಮಂತ್ರ ದ್ವಯಮಂತ್ರದ[1] ಮೊದಲ ಭಾಗದ ಅರ್ಥವನ್ನೂ, ಹದಿನೆಂಟನೆಯ ಮಂತ್ರ ಎರಡನೆಯ ಭಾಗದ ಅರ್ಥವನ್ನೂ ತಿಳಿಸುವುದು.

ದ್ವಯದಲ್ಲಿ ಪರಿಶೋಧಿಸಿ ಹೇಳುವ ಐದು ಪ್ರಧಾನಾರ್ಥಗಳನ್ನೂ ವಾಕ್ಯಗಳ ವಿಭಿನ್ನ ಯೋಜನೆಗಳಿಂದಾಗುವ ಅರ್ಥಗಳೆಲ್ಲವನ್ನೂ ಸಹ ನಾವು ಈ ಎರಡು ಮಂತ್ರಗಳಲ್ಲಿ ಕಾಣಬಹುದು.

### ದ್ವಯಮಂತ್ರದ ಐದು ಮುಖ್ಯಾರ್ಥಗಳು

ಆ ಐದು ಅರ್ಥಗಳು ಇವು:-

1. ನಾವು ಮುಖ್ಯಗುರಿಯಾಗಿ ಪಡೆಯಬೇಕಾಗಿರುವ ಪರಮಾತ್ಮ ಮತ್ತು ಅವನ ರೂಪಗಳು,
2. ಪಡೆಯಲು ಸಿದ್ಧವಾಗಿ ಕಾದಿರುವ ನಮ್ಮ ಪರಿಶುದ್ಧವಾದ ರೀತಿ,
3. ಪಡೆಯಲು ನಾವು ಬಳಸಬೇಕಾದ ಸಾಧನ,
4. ಪಡೆದುದರಿಂದಾಗುವ ಫಲ, 5. ಪಡೆಯಲು ಇರುವ ಅಡಚಣೆಗಳು.[2]

### ಶರಣಾಗತಿಯೇ ಜ್ಞಾನ ಮತ್ತು ಯೋಗದ ಸಾರ,

"ಪರಮಾತ್ಮನನ್ನು ಪಡೆಯಲು ಬೇರೆ ಯಾವುದೇ ರೀತಿಯ ಸಲಕರಣೆಯೂ ಇಲ್ಲದಂತಾಗಿ, ಈ ನಮ್ಮ ದೇಹ ಮುಂತಾದುದರ ಬಗ್ಗೆ ತಿಳುವಳಿಕೆ ಇರುವ ನಮ್ಮನ್ನು ಪರಮಾತ್ಮನೊಬ್ಬನ ಆಸರೆಯಲ್ಲೇ ಇಡಬೇಕು; (ಅಂದರೆ ಅವನಿಗೇ ಒಪ್ಪಿಸಬೇಕು). ಇದೇ ನಿಜವಾದ ಜ್ಞಾನ, ಇದೇ ನಿಜವಾದ ಯೋಗ, ಉಳಿದ ವಿಚಾರಗಳೆಲ್ಲ ಬರಿಯ ಗ್ರಂಥಗಳನ್ನು ಹೆಚ್ಚಿಸಿ ಬರೆಯುವ ಒಂದು ಕಲೆ ಮಾತ್ರ.[3] ಇವೇ ಮುಂತಾದ ಶಾಸ್ತ್ರ ವಚನಗಳನ್ನು ಗಮನಿಸೋಣ.

### ಶರಣಾಗತನಿಗೆ ತತ್ತ್ವತ್ರಯಜ್ಞಾನ ಅವಶ್ಯಕ

ಯಜ್ಞಯಾಗಾದಿಗಳಲ್ಲಿ ಪರದೇವತೆಯಾದ ಪರಮಾತ್ಮನಿಗೆ ಅಗ್ನಿಯ ಮೂಲಕ 'ಸಮಿತ್'[4] ಗಳನ್ನು ಅರ್ಪಿಸುವಾಗ ಅವುಗಳ ಮೇಲೆ ಮಂತ್ರವನ್ನು ಉಚ್ಚರಿಸುತ್ತಾ ಶುದ್ಧವಾದ ನೀರನ್ನು ಚಿಮುಕಿಸಿ ಸಂಸ್ಕರಿಸಿಯೇ ಅರ್ಪಿಸುವಂತೆ, ಜೀವಾತ್ಮವೆನಿಸಿದ ನಮ್ಮನ್ನೂ ಸಹ, ನಮ್ಮ ಪರಿಶುದ್ಧವಾದ ಸ್ವರೂಪವನ್ನು ಇರುವುದಿರುವಂತೆ ತಿಳಿದು

---

1. ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ. ಶ್ರೀಮತೇ ನಾರಾಯಣಾಯ ನಮಃ ದ್ವ. ಉ. ಸಂಪ್ರದಾಯಸ್ಥರು ಶರಣಾಗತಿ ಮಂತ್ರವೆಂದು ಕರೆಯುತ್ತಾರೆ.
2. ಪ್ರಾಪ್ಯಸ್ಯ ಬ್ರಹ್ಮಣೋ ರೂಪಂ ಪ್ರಾಪ್ತುಶ್ಚ ಪ್ರತ್ಯಗಾತ್ಮನಃ ।
ಪ್ರಾಪ್ತ್ಯುಪಾಯಂ ಫಲಂ ಪ್ರಾಪ್ತೇಸ್ತಥಾ ಪ್ರಾಪ್ತಿವಿರೋಧಿ ಚ॥ ಸಾತ್ವತ. ಸಂ.
3. ಸರ್ವೋಪಾಯವಿನಿರ್ಮುಕ್ತಂ ಕ್ಷೇತ್ರಜ್ಞಂ ಬ್ರಹ್ಮಣಿ ನ್ಯಸೇತ್ ।
ಏತತ್ ಜ್ಞಾನಂ ಚ ಯೋಗಶ್ಚ ಶೇಷೋऽನ್ಯೋ ಗ್ರಂಥವಿಸ್ತರಃ ॥
4. ಅರಳಿ, ಮುತ್ತುಗ ಇತ್ಯಾದಿ ಕಡ್ಡಿಗಳು.

ಕೊಂಡು ಈ ತಿಳುವಳಿಕೆಯಿಂದಲೇ ಹದಮಾಡಿಕೊಂಡು ಪರಮಾತ್ಮನಿಗೆ ಒಪ್ಪಿಸಬೇಕೆಂದು ಹೇಳಿದೆ. "ಇದನ್ನು ಅನುಸರಿಸಿ, ಇಲ್ಲಿಯೂ ಶರೀರ ಇಂದ್ರಿಯಾದಿಗಳಾವುವೂ ಆತ್ಮವಲ್ಲ. ಇವುಗಳೊಡನೆ ಸ್ವಲ್ಪವೂ ಸಂಬಂಧವಿಲ್ಲದ ಪರಿಶುದ್ಧವಾಗಿಯೂ, ಪ್ರಕಾಶವುಳ್ಳದ್ದಾಗಿಯೂ, ಜ್ಞಾನವಾಗಿಯೂ, ಜ್ಞಾನಿಯಾಗಿಯೂ ಇರುವ ಜೀವಾತ್ಮಗಳೇ ನಾವು" ಎಂಬ ಅಂಶವನ್ನು ಮೊದಲು ಪರಿಶೋಧಿಸಿ ತಿಳಿಯಬೇಕು. ಅನಂತರ ಪರಮಾತ್ಮನಲ್ಲಿ ಆತ್ಮವನ್ನು ಅರ್ಪಿಸಿ ಅವರವರ ಅರ್ಹತೆಗೆ ಸರಿಯಾಗಿ ಮಾಡಬೇಕಾದ ಪ್ರಾರ್ಥನೆಯನ್ನೂ ತಿಳಿಸಲಾಗುತ್ತದೆ.

"ಅನುಭವಿಸುವವ (ಜೀವಾತ್ಮ)ನು (ತನ್ನನ್ನೂ) ಅನುಭವಿಸಬೇಕಾಗಿರುವುದನ್ನೂ, (ಅನುಭವಿಸಲು) ಪ್ರೇರಣೆ ಮಾಡುವವ (ಪರಮಾತ್ಮ)ನನ್ನೂ ತಿಳಿದುಕೊಂಡು"[1] ಇವೇ ಮುಂತಾದ ಬೇರೆ ಬೇರೆ ವೇದ ಮಂತ್ರಗಳಲ್ಲಿ ಹೇಳಿರುವಂತೆ, ಚೈತನ್ಯವಿದ್ದೇ ಇರುವ ಜೀವಾತ್ಮ ಜಡವಾದ ದೇಹ (ಪ್ರಕೃತಿ) - ಎಲ್ಲಕ್ಕೂ ಒಡೆಯನಾದ ಪರಮಾತ್ಮ ಎಂಬ ಮೂರು ತತ್ತ್ವಗಳ ಜ್ಞಾನಬೇಕೆಂದು ಇಲ್ಲೂ ತಿಳಿಸಲಾಗುತ್ತದೆ.

## ವಾಯು ಎಂದರೆ ಜೀವಾತ್ಮ

**ವಾಯುಃ** – ತನ್ನ ಜ್ಞಾನ, ಕರ್ಮಗಳಿಗೆ ಅನುಸಾರವಾಗಿ ಪರಮಾತ್ಮನ ಇಚ್ಛೆಯಂತೆ ಅಲ್ಲಲ್ಲೇ ಸಂಚರಿಸುವ ಸ್ವಭಾವ ಇರುವುದರಿಂದ ಆತ್ಮನಿಗೆ ವಾಯು ಎಂದು ಹೆಸರು. ಇದರಿಂದ ಜೀವನು ಅಣುವಿನಷ್ಟೇ ಇರುವನೆಂದೂ ಪರಮಾತ್ಮನಿಗೇ ಅಧೀನ ಎಂದೂ ತಿಳಿಸಿದಂತಾಯಿತು. "ವಾ" ಎಂಬ ಮೂಲ ಶಬ್ದವು ಚಲನೆ ಮತ್ತು ವಾಸನೆಯನ್ನು ಹೊತ್ತು ತರುವಿಕೆ ಎಂಬ ಅರ್ಥಗಳಲ್ಲಿದೆ.

## ಅಮೃತಂ ಎಂದರೆ ಜೀವಾತ್ಮ

**ಅಮೃತಂ** – ಪ್ರಾಣಹೋಗಿ ದೇಹಗಳ ಸಂತತಿಯು ನಾಶವಾದರೂ ಈ ಜೀವಾತ್ಮನು ಮಾತ್ರ ತನ್ನ ಸ್ವರೂಪದಲ್ಲಾಗಲಿ ಸ್ವಭಾವದಲ್ಲಾಗಲಿ ಸ್ವಲ್ಪವೂ ನಾಶವಿಲ್ಲದವನು ಎಂದರ್ಥ.

"ಎಳ್ಳಷ್ಟೂ ನಾಶವಿಲ್ಲದವನೇ ಈ ಜೀವಾತ್ಮ. ನಾಶವಿಲ್ಲದಿರುವಿಕೆಯೋ ಅನುಚ್ಛಿತ್ತಿಧರ್ಮಾ"[2]

"ವಿಶೇಷ ರೀತಿಯ ಜ್ಞಾನಿಯಾದ ಜೀವಾತ್ಮನಿಗೆ ವಿಶೇಷ ಜ್ಞಾನದ ಲವಲೇಶ ನಾಶವೂ ಇರುವುದಿಲ್ಲ"[3]

## ಅನುಚ್ಛಿತ್ತಿಧರ್ಮಾ ಎಂಬುದರ ವಿವರಣೆ

**ಅನುಚ್ಛಿತ್ತಿಧರ್ಮಾ** – ಉಚ್ಛಿತ್ತಿ ಎಂದರೆ ವಿನಾಶ. ಅನುಚ್ಛಿತ್ತಿ ಎಂದರೆ ವಿನಾಶವಿಲ್ಲದ ವಸ್ತು. ಹೀಗೆ ವಿನಾಶವಿಲ್ಲದ ವಸ್ತುವೊಂದು ಯಾವನಿಗೆ ಧರ್ಮವಾಗಿದೆಯೋ, ಅಂದರೆ ಸ್ವಭಾವವಾಗಿ ವಿಶೇಷಣವಾಗಿ ಇದೆಯೋ, ಅಂತಹವನು ಅನುಚ್ಛಿತ್ತಿಧರ್ಮನ್ ಎನಿಸುವನು. ಅಂತಹ ಧರ್ಮವೇ ಜ್ಞಾನ. ಹೀಗೆ ನಾಶವಾಗದಂತಹ ಜ್ಞಾನವನ್ನು ಪಡೆದವನು ಜೀವಾತ್ಮ ಎಂದು ಸಿದ್ಧವಾಗುವುದು. "ಆದುದರಿಂದಲೇ ಈ ರೀತಿ ಜ್ಞಾನವೇ ಸ್ವಭಾವವಾದ ಜೀವಾತ್ಮನಿಗೆ ಸ್ವಾಭಾವಿಕವಾದ ಜ್ಞಾನವೇ ಬೇರೆ ಬೇರೆ ಪದಾರ್ಥಗಳೊಡನೆ ಉಂಟಾಗುವ ಸಂಬಂಧದಿಂದ ಬೇರೆ ಬೇರೆ ಜ್ಞಾನಗಳ ರೂಪವನ್ನು ಪಡೆಯುತ್ತದೆ"[4] ಎಂದು ಯಾಮುನಾಚಾರ್ಯರೂ ಸ್ಪಷ್ಟವಾಗಿ ತಿಳಿಸಿರುವರು.

---

1. ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ. ಶ್ವೇ. ೧.೧೨.
2. ಅವಿನಾಶೀ ವಾ ಅರೇಽಯಮಾತ್ಮಾ ಅನುಚ್ಛಿತ್ತಿಧರ್ಮಾ. ಬೃ. ೬.೫.೧೪.
3. ನವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ. ಬೃ. ೬.೪.೩೦.
4. ತದೇವಂ ಚಿತ್ಸ್ವಭಾವಸ್ಯ ಪುಂಸಃ ಸ್ವಾಭಾವಿಕೀಚಿತಿಃ।
ತತ್ತತ್ಪದಾರ್ಥ ಸಂಸರ್ಗಾತ್ತತ್ತದ್ವಿತ್ತಿತ್ವಮಶ್ನುತೇ ॥ ಆ. ಸಿದ್ಧಿ. ೨೩.

ಈವರೆಗೆ ಇಲ್ಲಿ ಹೇಳಿದ "ಅಮೃತವಾಗಿರುವಿಕೆ" ಎಂಬ ಅರ್ಥವು "ಪಾಪವಿಲ್ಲದಿರುವಿಕೆ" ಮುಂತಾದ ವಿಷಯುಗಳಿಗೂ ಸೂಚಕವಾಗಿದೆ. ಪರಿಶುದ್ಧ ಜೀವಾತ್ಮದ ಬಗ್ಗೆ ಪ್ರಜಾಪತಿಯ ಮಾತುಗಳಿವೆಯಷ್ಟೆ. ಅವುಗಳಲ್ಲಿ "ಯಾವ ಆತ್ಮನು ಪಾಪವಿಲ್ಲದವನೂ, ಮುಪ್ಪಿಲ್ಲದವನೂ, ಮರಣವಿಲ್ಲದವನೂ, ದುಃಖವಿಲ್ಲದವನೂ, ಹಸಿವಿಲ್ಲದವನೂ, ಬಾಯಾರಿಕೆಯಿಲ್ಲದವನೂ, ನಿಜವಾಗಿ ಸಿದ್ಧಿಸುವಂತಹ ಕಾಮನೆಗಳುಳ್ಳವನೂ, ನೆನೆದುದೆಲ್ಲ ನಡೆದು ಹೋಗುವಂತಹ ಶಕ್ತಿಯುಳ್ಳವನೂ"[1] ಎಂಬ ಮಾತು ಗಮನಾರ್ಹ.

'ವಾಯುಃ' ಎಂಬ ಪದವನ್ನು ಪುಲ್ಲಿಂಗದಲ್ಲಿ ಪಠಿಸಲಾಗಿರುವುದರಿಂದ 'ಅನಿಲಂ' 'ಅಮೃತಂ' ಎಂಬ ಎರಡು ಪದಗಳನ್ನೂ ಪುಲ್ಲಿಂಗಕ್ಕೇ ಬದಲಾಯಿಸಿಕೊಳ್ಳಬೇಕು.

## 'ಹರ' ಎಂದರೆ ಜೀವಾತ್ಮ

ತನಗೆ ಅನುಭವಿಸಲು ಬೇಕಾದಂತೆ ಪ್ರಕೃತಿಯನ್ನು ಸೆಳೆದುಕೊಂಡು ಅಳವಡಿಸಿಕೊಳ್ಳುವುದರಿಂದ ಜೀವಾತ್ಮನೇ "ಹರ" ಎನಿಸಿದ್ದಾನೆ ಎಂದರ್ಥ.[2]

## ಸ್ಮೃತಿಗ್ರಂಥದಲ್ಲಿ 'ಅಘ' ಶಬ್ದದ ವಿವರಣೆ

ಚತುರ್ಮುಖ ಬ್ರಹ್ಮ ಮುಂತಾದ ಎಲ್ಲರೂ ಪ್ರಳಯದಲ್ಲಿ ನಾಶವಾಗಿದ್ದಾಗಲೂ, ಸ್ಥಾವರ – ಜಡವಸ್ತುಗಳು, ಜಂಗಮ – ಜೀವವಸ್ತುಗಳು (ತಮ್ಮ ಆಕಾರಗಳನ್ನು ಕಳೆದುಕೊಂಡು) ನಾಶವಾಗಿದ್ದಾಗಲೂ, ವಿಶ್ವದ ಅಂತರಾತ್ಮನೊಬ್ಬ ಮಾತ್ರ ಸ್ಥಿರವಾಗಿ ಉಳಿದಿರುತ್ತಾನೆ. ಅವನೇ ಎಂದೆಂದಿಗೂ ವ್ಯತ್ಯಾಸವೊಂದಿಷ್ಟೂ ಇಲ್ಲದ ನಾರಾಯಣ"[3] ಎಂದು ಸ್ಮೃತಿಗ್ರಂಥದಲ್ಲಿ ಹೇಳಲಾಗಿದೆ.

## "ಭಸ್ಮಾಂತಂ ಶರೀರಂ" ವಿವರಣೆ

ಭಸ್ಮವಾಗುವುದು ಎಂಬ ಮಾತು 'ಮಣ್ಣಾಗುವುದು' ಮುಂತಾದ ವಿಚಾರಗಳಿಗೂ ಸೂಚಕ. ಅಥವಾ "ಮೃತ ಶರೀರವು ಮಲವಾಗಿಯೋ – (ಮಲವಾಗಿ ಮತ್ತು ಗೊಬ್ಬರವಾಗಿ) ಹುಳುವಾಗಿಯೋ, ಬೂದಿಯಾಗಿಯೋ ಆಗಿ ಆಯಾ ಹೆಸರು ಪಡೆದಿರುತ್ತದೆ"[4] ಎಂಬ ಅಂಶಗಳಿಗೆ ಸೂಚಕ.

ಮೃತ ಶರೀರವು ಮಾಂಸ ಭಕ್ಷಕಗಳಿಗೆ ಆಹಾರವಾದರೆ ನಂತರ ಮಲವಾಗಿ, (ಅಥವಾ ಆಹಾರವಾಗುವ ಮುಂಚೆಯೇ ಕೊಳೆತರೆ ಗೊಬ್ಬರವಾಗಿ) ಹೂತರೆ ಹುಳುವಾಗಿ, (ಹುಳುತು ಮಣ್ಣಾಗಿ) ಸುಟ್ಟರೆ ಬೂದಿಯಾಗಿ, ಆಗುವುದು.

ಕೆಲವು ಶರೀರಗಳು ಕಣ್ಣೆದುರಿಗೆ ನಾಶವಾಗುತ್ತಿವೆ. ಹಾಗೆ ನಾಶವಾಗದಿರುವ ಸಂದರ್ಭದಲ್ಲೂ ಊಹೆಯಿಂದ ಅದನ್ನು ತಿಳಿಯಬಹುದು. ಊಹೆಯಿಂದ ಮುಂದಾಗುವ ನಾಶವನ್ನೂ ತಿಳಿಯಬಾರದು ಎನ್ನುವುದಿದ್ದರೆ ಯಾರೂ ಶತ್ರುಗಳ ಮೇಲೆ ಶಸ್ತ್ರಗಳನ್ನು ಪ್ರಯೋಗಿಸಲೇಬಾರದು. ಶತ್ರು ಪ್ರಯೋಗಿಸಿದ ಶಸ್ತ್ರಗಳನ್ನು ನಾವು ತಡೆಯಲೂ ಬಾರದಲ್ಲವೇ.

---

1. ಏಷತೇ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸಃ ಸತ್ಯಕಾಮಸ್ಸತ್ಯಸಂಕಲ್ಪಃ. ಬೃ. ೫.೭.೩.
2. ಕ್ಷರಂ ಪ್ರಧಾನಮಮೃತಾಕ್ಷರಂಹರಃ. ಶ್ವೇ. ೧.೧೦.
3. ಬ್ರಹ್ಮಾದಿಷು ಪ್ರಲೀನೇಷು ನಷ್ಟೇ ಸ್ಥಾವರಜಂಗಮೇ ।
ಏಕಸ್ತಿಷ್ಠತಿ ವಿಶ್ವಾತ್ಮಾ ಸ ತು ನಾರಾಯಣೋಽವ್ಯಯಃ ॥ ಪರಾಶರ ಸ್ಮೃತಿ.
4. ಕಲೇಬರಂ ವಿಟ್ ಕ್ರಿಮಿಭಸ್ಮಸಂಜ್ಞಿತಮ್. ಭಾಗವತ. ೧೦. ಸ್ಕಂಧ.

## ಶರೀರದ ತ್ಯಾಗದ ಬಗ್ಗೆ ಕಾರಣಗಳು

ಈ ರೀತಿ ಶರೀರವು ಹೇಗಿದ್ದರೂ ನಾಶವಾಗಿಯೇ ಆಗುವುದು ಎಂಬ ವಿಚಾರ ನಮಗೆ ಲೋಕವ್ಯವಹಾರದಿಂದಲೇ ತಿಳಿದಿರುವಾಗ ಮತ್ತೆ ಇಲ್ಲಿ ಏಕೆ ಉಪದೇಶಿಸಲಾಗುತ್ತಿದೆ ಎಂದು ಕೇಳಬಹುದು. ಆದರ ಬಗ್ಗೆ ಹೇಳುವೆವು.

(1) ಪ್ರ – ದೇಹ ಬೇರೆ ಆತ್ಮ ಬೇರೆಯೇ?

ಉ – ಹೌದು. ಶರೀರ ಸಾಯುವುದು. ಆತ್ಮ ಸಾಯದು.
ಸಾಯದುದೂ, ಸಾಯುವಂಥದೂ ಎಂದೆಂದೂ ಬೇರೆ ಬೇರೆಯೇ ಅಲ್ಲವೇ.

(2) ಪ್ರ – ದೇಹವನ್ನು ಹಿತಮಿತ ಆಹಾರಾದಿಗಳಿಂದಲೂ ರಸಾಯನ ಸೇವನೆಯಿಂದಲೂ ಸ್ಥಿರವಾಗಿ ಉಳಿಸಿಕೊಳ್ಳಬಹುದಲ್ಲವೆ?

ಉ – ಇಲ್ಲ.

(3) ಪ್ರ – ನಮ್ಮ ದೇಹದ ಬಗ್ಗೆ ಹೆಚ್ಚು ಆಸಕ್ತಿ ಇರಬೇಡವೆ?

ಉ – ಬೇಡ. ಅದರ ಬಗ್ಗೆ ವೈರಾಗ್ಯವೇ ಮುಖ್ಯ ಇರಬೇಕು.

(4) ಪ್ರ – ಮುಕ್ತಿಗಾಗಿ ಈ ದೇಹ ನಾಶವಾಗಲೇ ಬೇಕಲ್ಲವೇ?
ಅದು ಏಕೆ ಈಗಲೇ ಆಗುತ್ತಿಲ್ಲ? ಮತ್ತು ದೇಹದ ಪರಿಪೂರ್ಣನಾಶ ಹೇಗೆ ಸಾಧ್ಯ? ಅದಕ್ಕೆ ಉಪಾಯವೇನು?

ಉ – ದೇಹ ನಾಶವಾಗಲೇ ಬೇಕು. ನಾಶಕ್ಕೆ ಕಾರಣ ಒದಗಿ ಬಂದಾಗ ನಾಶವಾಗುವುದು. ಅಂತಹ ಕಾರಣ 'ಪರಮಾತ್ಮೋಪಾಸನೆ' ಮುಂತಾದವು. ಇದರಿಂದ ದೇಹದ ಪರಿಪೂರ್ಣನಾಶ (ದೇಹದ ಸೂಕ್ಷ್ಮ ಅಂಶಗಳ ಸಂಬಂಧ ಒಂದು ಚೂರೂ ಆತ್ಮನಿಗಿಲ್ಲದಂತಾಗುವಿಕೆ) ಆಗುವುದು.

(5) ಪ್ರ – ದೇಹದಲ್ಲೇ ಕೆಲವು ಕಾಲ ಸುಖವಾಗಿದ್ದು ನಂತರ ಯಾವಾಗಲಾದರೂ ದೇಹ ಬಿಡಲು ಪ್ರಯತ್ನಿಸಬೇಕೇ? ಅಥವಾ ಶೀಘ್ರವಾಗಿಯೇ ದೇಹ ಬಿಡಲು ಉಪಾಸನೆಯ ಪ್ರಯತ್ನ ಮಾಡಬೇಕೆ?

ಉ – ಶೀಘ್ರವಾಗಿಯೇ ಉಪಾಸನೆಗೆ ಪ್ರಯತ್ನ ಮಾಡಬೇಕು.

ಹೀಗೆ ಇಲ್ಲಿ ಹೇಳಿರುವ ಹಾಗೂ ಹೇಳದೆ ಬಿಟ್ಟಿರುವ ಪ್ರಯೋಜನಕಾರಿಗಳಾದ ಕಾರಣಗಳನ್ನು ಗೀತೆಯ ಎರಡನೆಯ ಅಧ್ಯಾಯದ ರಾಮಾನುಜಭಾಷ್ಯದ ವಿವರಣೆಯಾದ ತಾತ್ಪರ್ಯ ಚಂದ್ರಿಕಾ ಗ್ರಂಥದಲ್ಲಿ ನೋಡಿ ತಿಳಿಯಬಹುದು.

## ಓಂಕಾರದ ಅರ್ಥ

ಅಥವಾ – ಶರೀರವನ್ನೂ ಆತ್ಮವನ್ನೂ ವಿವೇಚಿಸಿದ ನಂತರ ಈಗ ಪರಿಶುದ್ಧ ಜೀವಾತ್ಮನನ್ನು ಅಕಾರದ ಅರ್ಥವಾದ ಪರಮ ಪುರುಷ (ಪರಮಾತ್ಮ)ನಿಗೆ ಸಮರ್ಪಿಸುತ್ತಿದ್ದಾನೆ. 'ಓಂ' ಎಂದು.

ಪ್ರಣವ (ಓಂಕಾರವು) ಆತ್ಮ ಸಮರ್ಪಣ ಮಂತ್ರ ಎಂಬ ವಿಚಾರ "ಪ್ರಣವವೇ ಬಿಲ್ಲು, ಆತ್ಮವೇ ಬಾಣ, ಪರಮಾತ್ಮನೇ ಅದರ ಗುರಿ ಎಂದು ಹೇಳಲಾಗುತ್ತದೆ. ಓಂ ಎಂದು ಆತ್ಮವನ್ನು ಜೋಡಿಸಬೇಕು. ಎಚ್ಚರಿಕೆ

ಯಿಂದ ಗುರಿಹೊಡೆಯಬೇಕು, ಬಾಣದಂತೆ ಅದರೊಳಗೇ ಸೇರಲು ಸಾಧ್ಯ"[1] ಇವೇ ಮುಂತಾದ ವಚನೆಗಳಲ್ಲಿ ಪ್ರಸಿದ್ಧವಾಗಿದೆ.

### 'ಕ್ರತು' ಶಬ್ದಾರ್ಥ

**ಕ್ರತೋ!** – ಜ್ಯೋತಿಷ್ಟೋಮ ಮುಂತಾದ ಕೆಲಸಗಳ ರೂಪದಲ್ಲಿರುವವನೇ! ಹಾಗೆ ಹೇಳಲಾಗಿದೆ. "ನಾನೇ ಕ್ರತು, ನಾನೇ ಯಜ್ಞ"[2] ಎಂದು ಗೀತೆಯಲ್ಲಿ ಹೇಳಿದೆ. (ಯಜ್ಞ ಎಂದರೆ ಇಲ್ಲಿ ಪಂಚಮಹಾಯಜ್ಞಗಳು.)

ಅಥವಾ

**ಕ್ರತೋ!** – ಭಕ್ತಿಯ ರೂಪದಲ್ಲಿರುವವನೇ![3]

ರಕ್ಷಕನಾದ ಪರಮಾತ್ಮನನ್ನು 'ಭಕ್ತಿಯೋಗಕ್ಕೆ' ಬದಲು (ಸಲಕರಣೆಯಾಗಿ) ಇಟ್ಟುಕೊಳ್ಳಬೇಕೆಂಬ ಅಂಶವನ್ನು "ಎಲೈ ಕ್ರತೂ" ಎಂಬ ಕರೆಯಿಂದ ತಿಳಿದುಕೊಳ್ಳಬಹುದು ಎಂಬುದು ಅಂತರಂಗಾಭಿಪ್ರಾಯ.

17-18ನೇ ಮಂತ್ರಗಳಿಗೆ ವರಾಹ ಚರಮಶ್ಲೋಕಗಳೆರಡೂ ಪೋಷಕಗಳು.

ಇಲ್ಲಿಯ ಪ್ರಾರ್ಥನೆಗಳಲ್ಲಿ "ನೆನಪಿಟ್ಟುಕೋ" "ಕರೆದೊಯ್" ಎಂಬ ಎರಡು ಪ್ರಧಾನ ಅಂಶಗಳಿಗೆ ಸರಿಯಾದ ಉತ್ತರ ಎಂಬಂತೆ ವರಾಹ ಚರಮಶ್ಲೋಕದಲ್ಲಿ "ನೆನಪಿಟ್ಟುಕೊಳ್ಳುವೆನು" "ಕರೆದೊಯ್ಯುವೆನು" ಎಂಬ ಎರಡು ಅಂಶಗಳೂ ಸರಿಸಮನಾಗಿದ್ದು, ಈ 17-18ನೇ ಮಂತ್ರಗಳ ವಿವರಣೆಯನ್ನು ಸ್ಪಷ್ಟಗೊಳಿಸಿ ಪೋಷಿಸುತ್ತವೆ.

## ಪದಾರ್ಥ ದೀಪಿಕೆ

### ಅವತಾರಿಕೆ

ಈ ಮಂತ್ರದಲ್ಲಿ ದೇಹ ಇಂದ್ರಿಯಗಳಿಗಿಂತ ಬೇರೆಯಾದ ಜೀವಾತ್ಮನನ್ನು ಪರಮಾತ್ಮನಿಗೆ ಒಪ್ಪಿಸಿ ತಮ್ಮ ತಮ್ಮ ಅರ್ಹತೆಗೆ ತಕ್ಕಂತೆ ಪ್ರಾರ್ಥಿಸಿಕೊಳ್ಳಲಾಗುತ್ತದೆ.

**ಅಥ** - ಜೀವವು ದೇಹಬಿಟ್ಟು ಹೊರಟಮೇಲೆ.[4]

**ಓಂ** - ಎಲೈ ಪ್ರಣವ ಸ್ವರೂಪಿಯೇ[5].

ಕ್ರತೋ ಸ್ಮರ ಕೃತಂ ಸ್ಮರ.[6]

**ಕೃತಂ** - ನನ್ನ ಪ್ರಾರಬ್ಧ ಕರ್ಮಗಳಿಂದಾಗಿ ಮೈಮನಗಳೆಲ್ಲ ಮರಗಟ್ಟಿ ಕಲ್ಲಾಗಿವೆಯಲ್ಲವೆ ಇಂತಹ ಸ್ಥಿತಿಗೆ ಬಂದಿರುವ ನನ್ನನ್ನು.

---

1. ಪ್ರಣವೋ ಧನುಶ್ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
 ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥ ಅಹಿರ್ಬು. ಸಂ.
2. ಅಹಂಕ್ರತುರಹಂ ಯಜ್ಞಃ. ಗೀ. ೯.೧೬.
3. ವೇದಾಂತಾಚಾರ್ಯಭಾಷ್ಯದಲ್ಲಿ 'ಉಪಾಸನೆ' ಎಂಬ ಶಬ್ದವನ್ನು ಕ್ರತು ಎಂಬ ಅರ್ಥದಲ್ಲಿ ಬಳಸಲಾಗಿದೆ. ಅದೇ ಅರ್ಥದಲ್ಲಿ 'ಭಕ್ತಿ', 'ಭಕ್ತಿಯೋಗ' ಎಂಬ ಶಬ್ದಗಳನ್ನು ಬಳಸಲಾಗಿದೆ.
4. ಪ್ರಕಾಶಿಕೆಯಲ್ಲಿರುವ ವಿಸ್ತೃತಭಾಗದಲ್ಲಿ ಇಷ್ಟು ಮಾತ್ರ ಸ್ವೀಕರಿಸಿದಂತಿದೆ.
5. ಇದು ವೇದಾಂತಾಚಾರ್ಯ ಭಾಷ್ಯದಲ್ಲಿರುವ ಅರ್ಥ.
6. ಪ್ರಕಾಶಿಕೆಯಲ್ಲಿರುವ ಅರ್ಥಗಳನ್ನೇ ಸ್ವೀಕರಿಸಲಾಗಿದೆ.

# ಸುಬೋಧಿನೀ

## ಸಾರಾರ್ಥ ಸಂಗತಿ

ಈ ನಂತರ ಉಪಾಸಕನು ಪ್ರಕೃತಿತತ್ವ ಆತ್ಮತತ್ವಗಳ ಬಗ್ಗೆ ವಿವೇಚನೆಯನ್ನೂ ತನ್ನ ಅನ್ತ್ಯಕಾಲದಲ್ಲಿ ಮಾಡಬಹುದಾಮುದರ ನೆನಪನ್ನೂ ಈ ಉಪಾಸನ ಕಾಲದಲ್ಲೇ ಮಾಡಬೇಕೆಂದು ತಿಳಿಸಲಾಗುವುದು.

## ಪದವಿವರಣೆ

**ಕ್ರತೋ** - "ಯಜ್ಞವೇ ವಿಷ್ಣು"[1] ಎಂಬ ಶ್ರುತಿವಚನದಂತೆ ಇದು ಪರಮಾತ್ಮನನ್ನು ಕುರಿತ ನಮ್ಮ ಕರೆ.

**ಸ್ಮರ** - ನಿನ್ನನ್ನು ಅನುಸ್ಮರಣೆ ಮಾಡುತ್ತಿರುವ ನನ್ನನ್ನೂ ನೆನೆಸಿಕೋ.

**ಕೃತಂ** - ನಿನ್ನ ಪ್ರೀತಿಗಾಗಿ ಕರ್ಮಯೋಗದಿಂದ ಹಿಡಿದು ಭಕ್ತಿಯೋಗದ ಪೂರ್ತಿ ನಾನು ಮಾಡಿರುವುದನ್ನೆಲ್ಲ.

**ಸ್ಮರ** - ನೆನೆಸಿಕೋ. ಇದೇ ನಿನ್ನ ಕೃಪಾಕಟಾಕ್ಷಬೀರಲು ತಕ್ಕ ಸಮಯ ಎಂದು ಭಾವ.

ಈ ವಿಚಾರದಲ್ಲಿ ಹೆಚ್ಚು ಆದರ ಇರುವುದರಿಂದ ಈ ಒಟ್ಟು ಮಾತನ್ನು ಎರಡು ಸಲ ಪಠಿಸಲಾಗಿರುವುದು.

## ಪಾಠಾಂತರ

ಕೆಲವರು ಕ್ರತೋಃ – ಉಪಾಸನದ ಎಂಬರ್ಥದ ಪಾಠವನ್ನು ಗ್ರಹಿಸುತ್ತಾರೆ. ಅವರ ಅಭಿಪ್ರಾಯದಲ್ಲಿ 'ಕೃತಂ' ಎಂದರೆ ಉಪಾಸನೆಗೆ ಅಂಗವಾದ ದೇವರ ಪೂಜಾರೂಪವಾದ ಕರ್ಮ ಎಂದರ್ಥ.

## ಮತ್ತೊಂದು ರೀತಿ ಅರ್ಥ

ಈ ೧೭–೧೮ ಮಂತ್ರಗಳೆರಡೂ ಉಪಾಸನೆ ಮಾಡಲಾಗದವರಿಗೆ ಶರಣಾಗತಿ ಮಾಡುವ ರೀತಿಯನ್ನು ತಿಳಿಸುತ್ತದೆ.

ಆತ್ಮವು ಪರಮಾತ್ಮನಿಗೆ ಅರ್ಪಿತವೆಂದು ಭಾವಿಸುವುದೇ ಶರಣಾಗತಿ. ಇದನ್ನು 'ಓಂ' ಎಂಬ ಮಂತ್ರವನ್ನು ಹೇಳುತ್ತ ಮಾಡಬೇಕು[2] ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸುವ ಮೊದಲು ಅದಕ್ಕೆ ಪ್ರೋಕ್ಷಣ ಮುಂತಾದ ಸಂಸ್ಕಾರಗಳನ್ನು ಮಾಡುವಂತೆ ನಮ್ಮ ಜೀವಾತ್ಮಕ್ಕೆ ನಾವೇ ಜ್ಞಾನದಿಂದ ಸಂಸ್ಕರಿಸಬೇಕು. ಆತ್ಮವು ದೇಹಾತಿರಿಕ್ತ ಹಾಗೂ ಪರಿಶುದ್ಧ ಎಂದೂ, ಪರಮಾತ್ಮನಿಗೆ ಪರತಂತ್ರ ಎಂದೂ ಜ್ಞಾನವನ್ನು ರೂಢಿಸಿಕೊಂಡರೆ ಅದೇ ಅತ್ಯುತ್ತಮ ಸಂಸ್ಕಾರ. ಇದನ್ನೇ ಈ ಹಿಂದೆ ತಿಳಿಸಲಾಯಿತು. ಸಮರ್ಥರಾದ ಕೆಲವರು ಮಾತ್ರ ಧೀರರಾಗಿ ಯೋಗಾಭ್ಯಾಸದಲ್ಲಿ ಮುಂದುವರೆದು ಧಾರಣಾಭ್ಯಾಸದಿಂದ ಏಕಾಗ್ರವಾದ ಮನಸ್ಸಿಗೆ ನಿನ್ನನ್ನೇ ಸದಾ ಹಚ್ಚಿಕೊಂಡು ಕಡೆಗಾಲದಲ್ಲೂ ನಿನ್ನನ್ನೇ ನೆನಪಿಟ್ಟುಕೊಳ್ಳಬಲ್ಲರು. ನಾನಂತೂ ಏನೊಂದೂ ಇಲ್ಲದ ಅಶಕ್ತ. ನಿನ್ನನ್ನು ಅಂತ್ಯಕಾಲದಲ್ಲೂ ನೆನೆಯಲಾರೆನಷ್ಟೆ. ಉಚಿತ ಸಮಯದಲ್ಲಿ ನೀನೇ ನನ್ನನ್ನೂ ನೆನೆಸಿಕೋ. ಏನೂ ಇಲ್ಲದ ನನ್ನನ್ನು ಮುಕ್ತಿಗೆ ಏರಿಸುವ ನಿನಗೆ ಏನಾದರೊಂದು ನೆಪಬೇಕಾದರೆ ಈಗ ಮಾಡುತ್ತಿರುವ ಈ ನನ್ನ ಭಾವನೆಯನ್ನೇ ನಿನ್ನ ಕರ್ತವ್ಯಕ್ಕೆ ಅನುಕೂಲವೆಂದು ಭಾವಿಸಿ ಇದನ್ನು ಒಂದು ವೇಳೆ ನಾನು ಮರೆತರೂ ನನ್ನ ಕಡೆಗಾಲಕ್ಕೆ ನೀನೇ ಇದನ್ನೂ ಜ್ಞಾಪಿಸಿಕೋ ಎಂದು ಭಾವಾರ್ಥ.

---

1. ಯಜ್ಞೋ ವೈ ವಿಷ್ಣುಃ. ತೈ. ಸಂ. ೩.೫.೪.

2. ಬ್ರಹ್ಮಣೇ ತ್ವಾ ಮಹಸ ಓಮಿತ್ಯಾತ್ಮಾನಂ ಯುಂಜೀತ. ತೈ. ಅಂ. ೫೧ ಅನು.

# ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಮಂತ್ರದ ಸ್ಥಾನಪಲ್ಲಟ – ಪಾಠಾಂತರ

ಈ ಮಂತ್ರವನ್ನು ಮಾಧ್ಯಂದಿನರು ಹದಿನೈದನೆಯ ಮಂತ್ರವನ್ನಾಗಿಯೂ, ಇದರ ಉತ್ತರಾರ್ಧವನ್ನು 'ಓಂ ಕ್ರತೋಸ್ಮರ ಕ್ಲಿಬೇ ಸ್ಮರ ಕೃತಂ ಸ್ಮರ' ಎಂದೂ ಪಠಿಸುವರು.

### ಸಾರಾರ್ಥ

ಉಪಾಸಕನಿಗೆ ಈ ಈಶಾವಾಸ್ಯವಿದ್ಯೆಯಲ್ಲಿ ತಿಳಿಸುವ ಉಪಾಸನೆಯು ಅವನಿಗೆ ತಕ್ಕ ರೀತಿಯಲ್ಲಿ ಫಲಿಸ ಬೇಕಲ್ಲವೆ. ಹಾಗಾಗದೆ ಇಹ ಲೋಕದ ಐಶ್ವರ್ಯವನ್ನೋ ಪರಲೋಕದ ಕೈವಲ್ಯವೆಂಬ ಒಂಟಿ ಬಾಳನ್ನೋ ಅವನು ಪಡೆದರೆ ಏನು ಸುಖ. ಆದುದರಿಂದ ಐಶ್ವರ್ಯ ಕೈವಲ್ಯಗಳನ್ನು ಆಶಿಸದೆ ಪರಮಾತ್ಮನ ಸೇವಾ ಸೌಭಾಗ್ಯವೊಂದನ್ನೇ ಉಪಾಸಕನು ಪ್ರಾರ್ಥಿಸಬೇಕಷ್ಟೆ. ಈ ಮುಂದಿನ ಎರಡು ಮಂತ್ರಗಳಲ್ಲೂ ಇಂತಹ ಪ್ರಾರ್ಥನೆಯೇ ಸಾರವಾದ ಅಂಶ.

### ಸಂಗತಿ

ಇಹಲೋಕದ ಐಶ್ವರ್ಯವು ಒಮ್ಮೆಯಾದಾಗಲಾದರೂ ನಾಶವಾಗಬಹುದು. ನಂತರ ವೈರಾಗ್ಯದಿಂದ ನಮ್ಮ ಮನಸ್ಸು ಪರಮಾತ್ಮನ ಕಡೆ ತಿರುಗಬಹುದು. ಕೈವಲ್ಯದಲ್ಲಿ ತನ್ನೊಬ್ಬನ ಶಾಶ್ವತವಾದ ಆನಂದವೇ ಮುಖ್ಯ ಗುರಿಯಾಗಿರುವುದರಿಂದ ಈ ಗುರಿಮುಟ್ಟಿದ ಮೇಲೆ ಪರಮಾತ್ಮನ ಕಡೆ ಮನಸ್ಸು ಎಂದೂ ತಿರುಗಲು ಅವಕಾಶ ವಿಲ್ಲ. ಹೀಗೆ ಐಶ್ವರ್ಯಕ್ಕಿಂತ ಕೈವಲ್ಯವು ಉಪಾಸಕನಿಗೆ ದೊಡ್ಡ ತೊಡರಾಗುವುದು. ಆದುದರಿಂದ ಈ ಮಂತ್ರದಲ್ಲಿ ಮೊಟ್ಟಮೊದಲು ಅದರ ಪರಿಹಾರ ಆಗಲೆಂದು ಪ್ರಾರ್ಥಿಸಲಾಗುವುದು.

### ಕೈವಲ್ಯದ ಬಗ್ಗೆ ಉಭಯ ವೇದಾಂತಗಳ ಐಕಮತ್ಯ

ಭಟ್ಟನಾಥರೆಂಬ[1] ದಿವ್ಯಸೂರಿವರ್ಯರು ತಮ್ಮ ಮೊದಲ ದಿವ್ಯಪ್ರಬಂಧದ[2] ಸಿರಿನುಡಿಯ ನಾಲ್ಕನೇ ಪದ್ಯದಲ್ಲೇ ಈ ವಿಚಾರ ಮಾಡುತ್ತಾ, ಕೈವಲ್ಯವನ್ನು ಬಯಸುವವರಿಗೆ ಇಂತಹ ದುರ್ಗತಿ ಬರುವುದರಿಂದ ಮೊಟ್ಟಮೊದಲು ಅವರನ್ನೇ ಕುರಿತು ಉಪದೇಶಿಸುತ್ತಾರೆ.[3] ಹೀಗೆಯೇ "ಪೂರ್ಣವಾಗಿ ಈ ಪ್ರಕೃತಿಯ ಸಂಬಂಧ ತೊಲಗಿದಾಗ

---

1. ಇವರಿಗೆ ಪೆರಿಯಾಳ್ವಾರ್, ವಿಷ್ಣುಚಿತ್ತಃ ಎಂದೂ ಹೆಸರುಂಟು. ಇವರು ಕ್ರೋಧನವರುಷ, ಜ್ಯೇಷ್ಠಮಾಸ, ಶುಕ್ಲಪಕ್ಷ, ಏಕಾದಶಿ ಸ್ವಾತಿನಕ್ಷತ್ರ. ಭಾನುವಾರ ಶ್ರೀವಿಲ್ಲಿಪುತ್ತೂರಿನಲ್ಲಿ ಅವತರಿಸಿದರು. ಇವರನ್ನು ಗರುಡಾಂಶವೆಂದು ಕೆಲವರು ಹೇಳುತ್ತಾರೆ.
2. ಆಳ್ವಾರುಗಳು ಪರಮಾತ್ಮನನ್ನು ಕುರಿತು ಭಕ್ತಿಯಿಂದ ತಮಿಳಿನಲ್ಲಿ ಹಾಡಿರುವ ಹಾಡುಗಳು.
3. ಏಡುನಿಲತ್ತಿಲ್ ಇಡುವತನ್ ಮುನ್ನಮ್ ವನ್ದು
   ಎಙ್ಗಳ್ ಕುಳಾಮ್ ಪುಕುನ್ದು ।
   ಕೂಡುಮ್ ಮನಂ ಉಡೈಯೀರ್‌ಕಳ್ ವರಮ್ಪೊಳಿ
   ವನ್ದೊಲ್ಲೈಕ್ಕೂಡುಮಿನೋ ।
   ನಾಡುಮ್ ನಗರಮುಂ ನನ್ಕರಿಯ
   ನಮೋ ನಾರಾಯಣಾಯ ಎನ್ರು ।
   ಪಾಡುಮ್ ಮನಮುಡೈಪ್ಪತ್ತರುಳ್ಳೀರ್
   ವನ್ದು ಪಲ್ಲಾಂಡು ಕೂರುಮಿನೇ ॥ ತಿರುಪಲ್ಲಾಂಡು. ೪. ಗಾಥಾ.

ಜೀವಾತ್ಮನಿಗೆ ಮೋಕ್ಷ ಸಿಕ್ಕೇ ಸಿಗುವುದು. ಇದು ಬಿಡುಗಡೆಯ ನಂತರ ಸ್ವತಂತ್ರ ಒಂಟಿ ಜೀವನ. ಇಷ್ಟರಲ್ಲೇ ಇವನು ಗುರಿಯಿಟ್ಟು ನಡೆದರೆ ಸಾಲದು. ಅದು ಅವನನ್ನು ಆ ಮಟ್ಟದಲ್ಲೇ ಉಳಿಸಿಬಿಡುವುದು. ಇಂತಹ ಕೆಟ್ಟ ಸಂದರ್ಭ ಯಾರಿಗೂ ಬರಬಾರದಷ್ಟೆ. ಆದುದರಿಂದ ಸಮಾಜ ಜೀವಿಯಾದ ಮಾನವನು ಈ ಒಂಟಿ ಜೀವನದ ಅಪಾಯವನ್ನು ತಪ್ಪಿಸಿಕೊಳ್ಳಲು ಈಗಿಂದೀಗಲೇ "ಪರಮಾತ್ಮನಿಗೆ ತಾನು ಅತ್ಯಂತ ಪರತಂತ್ರ ತಾನು ಎಂದಿಗೂ ಸ್ವತಂತ್ರನಲ್ಲ. ಸ್ವತಂತ್ರ ಜೀವನ ಬಯಸಲಾರೆ" ಎಂದು ನಿರ್ಧರಿಸಿ ಪರಮಾತ್ಮನಿಗೆ ಶರಣಾಗಬೇಕು"[1] ಎಂದು

---

1. ಅತ್ತ್ರತು ಪತ್ತ್ರನಿಲ್, ಉತ್ತ್ರತು ವೀಡುಯಿರ್ ।
ಶೆತ್ತ್ರತು ಮುನ್ನುರಿಲ್, ಅತ್ತಿರೈ ಪತ್ತ್ರೆ ॥ ತಿರುವಾ. 1ಶತಕ. 2ದಶಕ. 5ಗಾಥಾ.

ವಿವರಣೆ:- ಪತ್ತು - ವಿಷಯ ಸಂಬಂಧವು, ಅತ್ತ್ರದು ಎನಿಲ್ - ಬಿಟ್ಟುಹೋದರೆ, ಉಯಿರ್ - ಆತ್ಮತತ್ತ್ವವು, ವೀಡು - (ಕೈವಲ್ಯವೆಂಬ) ಮೋಕ್ಷವನ್ನು, ಉತ್ತ್ರದು- ಹೊಂದುವುದು. ಅದು - ಆ ಕೈವಲ್ಯವೆಂಬ ಮೋಕ್ಷವನ್ನು, ಶೆತ್ತು - ಬಿಟ್ಟು, ಮುನ್ ಉರಿಲ್ - ಶಾಶ್ವತವಾದ ಅದ್ವಿತೀಯ ಪುರುಷಾರ್ಥವನ್ನು ಹೊಂದಬೇಕಾದರೆ, ಅತ್ತು - ಇತರ ಸಂಗವನ್ನು ಬಿಟ್ಟು, ಇರೈ - ಸರ್ವೇಶ್ವರನನ್ನೇ, ಪತ್ತು - ಆಶ್ರಯಿಸು.
ಪ್ರಕೃತಿಪ್ರತ್ಯಾಸತ್ತಿ ನಿವೃತ್ತೌ ಪ್ರಾಪ್ತ ಏವ ಭವತಿ ಮೋಕ್ಷಂ ಚೇತನಃ ।
ತಾವನ್ಮಾತ್ರಾಪೇಕ್ಷಾಯಾಂ ತಸ್ಯಕೈವಲ್ಯಪುರುಷಾರ್ಥ ಏವ ಪರ್ಯವಸಾನಂ ಭವತಿ॥
ತತ್ಪ್ರಸಂಗಂ ನಿರ್ಧೂಯ ಸ್ವರೂಪಾನುಗುಣಪರಮ ಪುರುಷಾರ್ಥ ಪ್ರೇಪ್ಸಾಯಾನ್ತು ಪ್ರಥಮಮೇವ ।
ತದೇಕಯೋಗ್ಯತಯಾ ಸ್ವಾತ್ಮಾನಂ ನಿವೇದ್ಯಭಗವಂತಂ ಪ್ರಪದ್ಯೇತ॥ ಶ್ರೀ ರಂ. ಮೂ. ಪು. 75.

ಮಂತ್ರ ಹದಿನೇಳು

ಪರಾಂಕುಶರೆಂಬ[1] ದಿವ್ಯಸೂರಿವರ್ಯರೂ ತಮ್ಮ ಸಿರಿಬಾಯಿನುಡಿ ಎಂಬ ದಿವ್ಯ ಪ್ರಬಂಧದ ಮೊದಲನೇ ಕಾಂಡದ

---

1. ಪರಾಂಕುಶ – ಶ್ರೀ ಪರಾಂಕುಶಮುನಿವರ್ಯರು ತಿರುನ್ನಲ್‌ವೇಲಿ ಜಿಲ್ಲೆಗೆ ಸೇರಿದ ತಾಮ್ರಪರ್ಣೀ ನದೀ ತೀರದಲ್ಲಿರುವ ತಿರುಕ್ಕುರುಕೂರ್ ಅಥವಾ ಆಳ್ವಾರ್ ತಿರುನಗರಿಯೆಂಬ ದಿವ್ಯ ಕ್ಷೇತ್ರದಲ್ಲಿ ಜನಿಸಿದರು. ಇವರು ತಿರುವಳುದಿವಳನಾಡಿಗೆ ಸೇರಿದ "ಕಾರಿಯಾರ್" ಎಂಬ ಮಹನೀಯರಿಗೆ ಪುತ್ರರಾಗಿ ಚತುರ್ಥವರ್ಣದಲ್ಲಿ ಕಲಿಯುಗಾರಂಭದಲ್ಲಿ ಪ್ರಮಾದಿಸಂವತ್ಸರ, ವೃಷಭ ಮಾಸ – ಪೂರ್ಣಿಮಾ – ಶುಕ್ರವಾರ – ವಿಶಾಖಾನಕ್ಷತ್ರದಲ್ಲಿ – ಕರ್ಕಟಲಗ್ನದಲ್ಲಿ ಜನಿಸಿದರು. ಇವರು ವಿಷ್ವಕ್ಸೇನಾಂಶಭೂತರಾಗಿ ಅವತರಿಸಿದರೆಂದು ಪೂರ್ವಸಂಪ್ರದಾಯಜ್ಞರು ಹೇಳುತ್ತಾರೆ. ಕಾರಿಯಾರೆಂಬ ಮಹನೀಯರು ಮಲೆಯಾಳ ದೇಶದಲ್ಲಿ ತಿರುವಣ್‌ಪರಿಶಾರಮ್ – ಎಂಬ ಕ್ಷೇತ್ರದಲ್ಲಿ ವಾಸಮಾಡುತ್ತಿದ್ದ ತಿರುವಾಳ್‌ಮಾರ್ಬ – ಎಂಬ ಮಹಾತ್ಮರ ಪುತ್ರಿಯಾದ ಉಡೈಯನಂಗೆಯಾರ್ – ಎಂಬ ಕನ್ಯೆಯನ್ನು ವಿವಾಹ ಮಾಡಿಕೊಂಡರು. ಆ ಕನ್ಯೆಯು ಕ್ರಮೇಣ ಗರ್ಭವತಿಯಾಗಿ ತಿರುಕ್ಕುರುಙ್ಗುಡಿ ಕ್ಷೇತ್ರಾಧಿಪನಾದ ಭಗವಂತನ ಪ್ರಸಾದದಿಂದ ಶಠಾರಿ – ಎಂಬ ಪುತ್ರರತ್ನವನ್ನು ಪಡೆದಳು. ಈ ಶಿಶುವು ಹುಟ್ಟಿದಾರಭ್ಯ ಕಣ್ಣು ಮುಚ್ಚಿಕೊಂಡೇ ಸ್ತನ್ಯಪಾನವೂ ಇಲ್ಲದೆ ಇದ್ದಾಗ್ಯೂ ಶರೀರಪುಷ್ಟಿಯೊಡನೆ ದಿವ್ಯತೇಜಃಪುಂಜವಾಗಿ ಪ್ರಕಾಶಿಸುತ್ತ ಮೌನದಿಂದ ಯೋಗಧ್ಯಾನದಲ್ಲೇ ಇದ್ದಿತು. ಈ ಶಿಶುವಿಗೆ ಶ್ರೀಕುರುಕಾಪುರೀಶ್ವರನಾದ ಪೊಲಿನ್ದುನಿನ್ನಪಿರಾನ್ – ಎಂಬ ಭಗವಂತನ ದೇವಾಲಯದಲ್ಲಿಯೇ ನಾಮಕರಣವನ್ನು ಮಾಡಿ 'ಮಾರನ್' – ಎಂಬ ಹೆಸರನ್ನು ಇಟ್ಟು ಆ ದೇವಸ್ಥಾನದಲ್ಲೇ ಚಿಂಚಾವೃಕ್ಷದ (ಹುಣಸೇಮರದ) ಕೆಳಗೆ ತೊಟ್ಟಿಲನ್ನು ಕಟ್ಟಿ ಬಿಟ್ಟರು. ಈ ಶಿಶುವು ನಿರಾಹಾರವಾಗಿಯೇ ದಿನೇದಿನೇ ಪ್ರವರ್ಧಮಾನವಾಗಿ ಮೌನದೊಡನೆಯೇ ಪದ್ಮಾಸನದಲ್ಲಿ ಕುಳಿತು ಯೋಗಧ್ಯಾನದಲ್ಲಿ ಕಣ್ಣು ಮುಚ್ಚಿಕೊಂಡೇ ದಕ್ಷಿಣಹಸ್ತದಿಂದ ಜ್ಞಾನಮುದ್ರೆಯನ್ನು ತೋರಿಸುತ್ತಾ ೧೬ ಸಂವತ್ಸರಗಳವರೆಗೆ ಬೆಳೆಯುತ್ತಿತ್ತು. ಈ ಆಶ್ಚರ್ಯವನ್ನು ನೋಡಿ ಎಲ್ಲರೂ ಅತ್ಯಂತ ವಿಸ್ಮಿತರಾಗುತ್ತಿದ್ದರು. ಈ ಮೌನಿಯಾದ ಬಾಲಕನನ್ನು ನೋಡಿ ಮಾತಾಪಿತೃಗಳು ಬಹು ಚಿಂತಾಕ್ರಾಂತರಾಗಿದ್ದರು. ಹೀಗಿರಲು ಮಧುರಕವಿ–ಎಂಬ ಮಹಾನುಭಾವರು ಉತ್ತರದೇಶಯಾತ್ರೆಯನ್ನು ಮಾಡುತ್ತಾ ಗಂಗಾತೀರದಲ್ಲಿರುವಾಗ ಒಂದು ದಿನ ರಾತ್ರಿ ಕಾಲದಲ್ಲಿ ಅವರಿಗೆ ದಕ್ಷಿಣದಿಕ್ಕಿನಲ್ಲಿ ಒಂದು ದಿವ್ಯ ತೇಜಃಪುಂಜವು ಕಂಡಿತು. ಆ ದಿವ್ಯ ತೇಜಸ್ಸನ್ನು ಪ್ರತಿದಿನವೂ ರಾತ್ರಿಕಾಲದಲ್ಲಿ ನೋಡುತ್ತ ಅವರು ಅತಿ ವಿಸ್ಮಿತರಾಗಿ ದಕ್ಷಿಣದಿಕ್ಕಿಗೆ ಯಾತ್ರೆಯನ್ನು ಮಾಡುತ್ತ ರಾತ್ರಿಯಲ್ಲಿ ಆ ತೇಜಸ್ಸನ್ನೇ ಅನುಸರಿಸಿ ಪ್ರಯಾಣಮಾಡಿ, ಶ್ರೀಕುರುಕಾಪುರಿಯೆಂಬ ಆಳ್ವಾರ್– ತಿರುನಗರಿಗೆ ಬಂದು ರಾತ್ರಿಯಲ್ಲಿ ನೋಡಲು ದಕ್ಷಿಣ ದಿಕ್ಕಿನಲ್ಲಿ ಆ ತೇಜಸ್ಸು ಕಾಣದೆ ಇದ್ದುದರಿಂದ, ಆ ಕ್ಷೇತ್ರದಲ್ಲಿಯೇ ಏನೋ ಒಂದು ದಿವ್ಯ ತೇಜಃಪುಂಜವು ಇರಬಹುದೆಂದು ಊಹಿಸಿ–"ಈ ಊರಿನಲ್ಲಿ ಏನು ಆಶ್ಚರ್ಯ ಎಂದು ವಿಚಾರಿಸಿದರು. ಆಗ ದೇವಾಲಯದಲ್ಲಿ ಚಿಂಚಾವೃಕ್ಷದ ಕೆಳಗೆ ಮೌನದಿಂದ ಯೋಗಧ್ಯಾನದಲ್ಲಿ ಕುಳಿತಿರುವ ಬಾಲಕನ ವೃತ್ತಾಂತವನ್ನು ತಿಳಿದು ಅಲ್ಲಿಗೆ ಹೋಗಿ ಅತ್ಯದ್ಭುತವಾದ ಆ ದಿವ್ಯ ತೇಜಃಪುಂಜವಾದ ಬಾಲಕನನ್ನು ನೋಡಿ ವಿಸ್ಮಯಪಟ್ಟು ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ಕಣ್ಣು ತೆರೆಯುವಂತೆ ನಾನಾ ವಿಧವಾದ ಉಪಾಯಗಳನ್ನು ಮಾಡಿ, ಕ್ರಮೇಣ ಒಂದು ಪ್ರಶ್ನೆಯನ್ನು ಮಾಡಿದರು.

'ಶೆತ್ತತ್ತಿನ್ ವಯಿತ್ತಿಲ್ ಶಿರಿಯದು ಪಿರನ್ದಾಲ್ ಎತ್ತೈತ್ತಿನ್ರೆಂಗೇ ಕಿಡಕ್ಕುಮ್' – ಎಂದು ಇವರು ಕೇಳಲು ಶ್ರೀ ಶಠಾರಿ ಮುನಿವರ್ಯರು - 'ಅತ್ತೈತ್ತಿನ್ರು ಅಂಗೇ ಕಿಡಕ್ಕುಮ್' – ಎಂದು ಉತ್ತರವನ್ನು ಹೇಳಿದರು. (ಶೆತ್ತದು - ಅಚೇತನವಾದ ಶರೀರ. ಶಿರಿಯದು – ಅಣುವಾದ ಜೀವಾತ್ಮಾ. 'ಪ್ರಾಕೃತವಾದ ಈ ಶರೀರದಲ್ಲಿ ಜೀವಾತ್ಮನು ಹುಟ್ಟಿ ಯಾವುದನ್ನು ತಿಂದು ಎಲ್ಲಿ ಜೀವಿಸುವನು?' ಎಂದು ಪ್ರಶ್ನೆ- 'ಪ್ರಾಕೃತ ವಸ್ತುವಾದ ಅನ್ನವನ್ನೇ ತಿಂದು ಪ್ರಾಕೃತ ಸುಖದುಃಖಗಳನ್ನೇ ಅನುಭವಿಸಿ ಶರೀರರೂಪವಾದ ಪ್ರಕೃತಿಯಲ್ಲೇ ವಾಸಮಾಡಿ ಜೀವಿಸುತ್ತಾನೆ - ಎಂದು ಉತ್ತರ.) ಅದನ್ನು ಕೇಳಿ ಮಧುರಕವಿಯಾಳ್ವಾರು ಈ ಶಠಾರಿಮುನಿವರ್ಯರು ಸರ್ವಜ್ಞರಾದ ಮಹಾತ್ಮರೆಂದು ತಿಳಿದು ಇವರನ್ನೇ ಆಶ್ರಯಿಸಿ ಉಪಚರಿಸುತ್ತಿದ್ದರು. ಆಗ ಶ್ರೀಮನ್ನಾರಾಯಣನು ತನ್ನ ದಿವ್ಯಾತ್ಮಸ್ವರೂಪವನ್ನೂ ದಿವ್ಯಮಂಗಳವಿಗ್ರಹವನ್ನೂ ದಿವ್ಯಗುಣಗಳನ್ನೂ ಶ್ರೀಪರಾಂಕುಶ ಮುನಿವರ್ಯರಿಗೆ ಪ್ರಕಾಶಪಡಿಸಿ ಪರಮಾನಂದ ಉಂಟುಮಾಡಲು, ಆ ಆನಂದಾನುಭವದಿಂದ ಇವರು ಅಮೃತಪರೀವಾಹರೂಪವಾದ 4 ಪ್ರಬಂಧಗಳನ್ನು 4 ವೇದಗಳ ಸಾರರೂಪವಾಗಿ ಶ್ರೀಭಗವದನುಗ್ರಹದಿಂದಲೇ ದಿವ್ಯಜ್ಞಾನದಿಂದ ಶ್ರೀಮಧುರಕವಿ ಆಳ್ವಾರ್‌ಗೆ ಉಪದೇಶಿಸಿದರು. ಇವರಿಂದ ರಚಿತವಾದ ಪ್ರಬಂಧಗಳು ತಿರುವಿರುತ್ತಮ್, ತಿರುವಾಶಿರಿಯಮ್, ಪೆರಿಯ ತಿರುವಂದಾದಿ ಮತ್ತು ತಿರುವಾಯ್ಮೊಳಿ. ಇವು ನಾಲ್ಕೂ ನಾಲ್ಕು ವೇದಗಳ ಸಾರವಾಗಿರುತ್ತವೆ.

ಎರಡನೆ ಸಿರಿನುಡಿಯು ಐದನೆಯ ಪದ್ಯದಲ್ಲಿ ಈ ರೀತಿ ತಿಳಿಸಿರುತ್ತಾರೆ. ಕೈವಲ್ಯಕ್ಕೆ ಹೋಗಿ ಸೇರಿದ ಮೇಲೆ ಈ ರೀತಿ ಶರಣಾಗುವ ಅರ್ಹತೆಯು ಅವಕಾಶ ಕಳೆದುಹೋಗುತ್ತದೆ ಎಂಬುದೇ ಈ ರೀತಿ ಹೇಳಲು ಕಾರಣ.

## ಐಶ್ವರ್ಯ ಕೈವಲ್ಯಗಳ ತಾರತಮ್ಯ

ಇದೇ ಉಪನಿಷತ್ತಿನ ಹನ್ನೆರಡನೆಯ ಮಂತ್ರದಲ್ಲಿ ಅಸಂಭೂತಿಯ ಉಪಾಸಕರೆಂಬ ಕೈವಲ್ಯಾಪೇಕ್ಷಿಗಳಿಗಿಂತ ಸಂಭೂತಿಯ ಉಪಾಸಕರೆಂಬ ಐಶ್ವರ್ಯಾಪೇಕ್ಷಿಗಳನ್ನು ಸ್ವಲ್ಪ ಕೆಳಮಟ್ಟದ್ದವರೆಂದು ಹೇಳಲಾಗಿದೆ. ಅದಕ್ಕೆ ಐಶ್ವರ್ಯದಿಂದ ಬರುವ ಸುಖಕ್ಕಿಂತ ಆತ್ಮಾನುಭವದಿಂದಾಗುವ ಸುಖವೇ ಹೆಚ್ಚಿನದು ಎಂಬುದೇ ಕಾರಣ. ಈಗ ಈ ಮಂತ್ರದಲ್ಲಿ ಪರಮಾತ್ಮನನ್ನು ಪಡೆಯಲು ತೊಡರಾಗುವುದರಲ್ಲಿ ಐಶ್ವರ್ಯಕ್ಕಿಂತ ಕೈವಲ್ಯವೇ ಕ್ರೂರ ಎಂಬ ಅಭಿಪ್ರಾಯದಿಂದ ಅದನ್ನೇ ಮೊದಲು ವಿಚಾರ ಮಾಡಲಾಗಿದೆ.

## ವಾಯು–ಜೀವಾತ್ಮ

**ವಾಯುಃ** - ಎಂದರೆ ಇಲ್ಲಿ ಪ್ರಾಣವಾಯುವಿನೊಡಗೂಡಿರುವ ಜೀವಾತ್ಮ. ಈ ಬಗ್ಗೆ "ಪ್ರಾಣವೇ ಆಸೆಗಿಂತ ಹೆಚ್ಚಿನದು"[1] ಎಂದೂ, 'ಪ್ರಾಣಗಳೇ ಸತ್ಯ'[2] ಎಂದೂ ಉಪನಿಷತ್ತುಗಳಲ್ಲಿ ಪ್ರಾಣಶಬ್ದದಿಂದಲೇ ಜೀವಾತ್ಮನನ್ನು ವ್ಯವಹರಿಸಲಾಗಿದೆ ಎಂಬುದು ಗಮನಾರ್ಹ.

## ಅನಿಲ – ಜೀವಾತ್ಮ

**ಅನಿಲಂ** - ಎಂದರೂ ಜೀವಾತ್ಮನೇ. 'ಇಲಾ' ಎಂದರೆ ಭೂಮಿ. ಭೂಮಿಯ ಸಂಬಂಧವಿಲ್ಲದವನು 'ಅನಿಲ'. ಇಲಾಶಬ್ದ ಪಂಚಭೂತಗಳಿಗೂ ಸೂಚಕವಾದುದು. ಐದು ಭೂತಸೂಕ್ಷ್ಮಗಳ ಸಂಬಂಧವೂ ಇಲ್ಲದವನು ಎಂದೂ, ಪಾಂಚಭೌತಿಕ ಶರೀರವನ್ನು ಬಿಟ್ಟವನು ಎಂದೂ ತಾತ್ಪರ್ಯ.

ಅಥವಾ 'ಇಲಾ' ಎಂದರೆ ಈ ಪ್ರಕೃತಿ. ಇದು ಜೀವಾತ್ಮನನ್ನು ಮೋಹಗೊಳಿಸಿ ಆಕರ್ಷಿಸುತ್ತದೆ. ಈ ವಿಚಾರವನ್ನು "ಒಡೆಯನಲ್ಲದವಳಿಂದ ಮೋಹಿತನಾಗಿ ದುಃಖಿಸುತ್ತಾನೆ[3]" "ಹುಟ್ಟು ಸಾವಿಲ್ಲದ ಆ ಒಬ್ಬೊಬ್ಬನೂ (ಮೇಕೆಯಂತೆ ಆ ಪ್ರಕೃತಿಯೆಂಬ ಆಡನ್ನು) ಪ್ರೀತಿಯಿಂದ ಅನುಭವಿಸಿ (ನಂತರ ಸುಮ್ಮನೆ ಜೊತೆಗೆ ಮಲಗಿ) ಪಶ್ಚಾತ್ತಾಪ ಪಡುತ್ತಾನೆ."[4] ಇವೇ ಮುಂತಾದ ಉಪನಿಷತ್ತಿನ ವಚನಗಳು ಸ್ಪಷ್ಟಪಡಿಸಿವೆ. ಹಾಗಾಗಿ ಅನಿಲಂ ಎಂದರೆ ಪ್ರಕೃತಿಯನ್ನು ಪೂರ್ಣ ಬಿಟ್ಟವನು ಎಂದರ್ಥ.

## ಅಮೃತ–ಜೀವಾತ್ಮ

**ಅಮೃತಂ** – ಎಂದರೆ ಜೀವಾತ್ಮತತ್ತ್ವ. ಇದು ಎಂದೂ ಮರಣಿಸದ ವಸ್ತುವಾಗಲಾರದು. ಮರಣ ಇದಕ್ಕಿಲ್ಲ ಎಂದರ್ಥ. ಮರಣವಿಲ್ಲವೆಂದರೆ ಅದರ ಪೂರ್ವಸ್ಥಿತಿಯಲ್ಲಿ ಕಾಣುವಂತಹ ಮುಪ್ಪು, ನರೆ, ಸವೆತಗಳೂ ಹಸಿವು ಬಾಯಾರಿಕೆ ಮುಂತಾದವುಗಳೂ ಇಂತಹ ಯಾವುದೇ ದೋಷಗಳೂ ಇಲ್ಲವೆಂದು ಭಾವ. ಇಂತಹ ಶುದ್ಧ ಸ್ಥಿತಿಯೇ ಮುಕ್ತಿಯಲ್ಲೂ ಜೀವಾತ್ಮನಿಗಿರುವುದಾಗಿ ಉಪನಿಷತ್ತುಗಳಲ್ಲಿ[5] ಹೇಳಲಾಗಿದೆ. ಈ ಸ್ಥಿತಿಯಲ್ಲಿ

---

1. ಪ್ರಾಣೋ ವಾ ಆಶಾಯಾ ಭೂಯಾನ್. ಛಾಂ. ೭. ೧೫. ೧.

2. ಪ್ರಾಣಾ ವೈ ಸತ್ಯಮ್. ಬೃ. ೪. ೩. ೬.  3. ಅನೀಶಯಾ ಶೋಚತಿ ಮುಹ್ಯಮಾನಃ ; ಮುಂ. ೩. ೧. ೨.

4. ಅಜೋ ಹ್ಯೇಕೋ ಜುಷಮಾಣೋಽನುಶೇತೇ. ತೈ. ೬ ೧೦. ೫; ಶ್ವೇ. ೪. ೫.

5. ಏಷ ತೇ ಆತ್ಮಾ ಅಪಹತಪಾಪ್ಮಾ ವಿಜರೋವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಸ್ಸತ್ಯಸಂಕಲ್ಪಃ ಛಾಂ. ೮. ೭. ೧.

ಜೀವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ. ಅವನಿಗೆ ಯಾವ ಲಿಂಗವೂ ಇಲ್ಲ. ಎಂಬುದನ್ನು ಸೂಚಿಸಲೆಂದೇ ಇಲ್ಲಿ ನಪುಂಸಕಲಿಂಗದ ಪದವನ್ನು ಬಳಸಲಾಗಿದೆ. "ಸ್ತ್ರೀ ಪುರುಷ ನಪುಂಸಕ ಎಂಬ ಯಾವುದೇ ವಿಶೇಷ ಚಿಹ್ನೆಯಿಲ್ಲದಿರುವಾಗ ಸಾಮಾನ್ಯವಾಗಿ ನಪುಂಸಕ ಲಿಂಗವನ್ನು ಬಳಸಬೇಕು"[1] ಎಂಬ ವ್ಯಾಕರಣ ನಿಯಮವೂ ಇದೆ.

### ಪದವಿವರಣೆ

**ಅಥ** – ಈ ರೀತಿ ಶುದ್ಧ ಸ್ಥಿತಿಯನ್ನು ಈ ಜೀವಾತ್ಮ ತಲುಪಿದಾಗ.

**ಇದಂ** – ಈ ಪ್ರಕೃತಿಯೊಳಗೆ ಈವರೆಗೆ ಜೀವಾತ್ಮನ ಜೊತೆಗಿದ್ದ.

**ಶರೀರಂ** – ಶಿಥಲವಾಗಿ ಹೋಗುವುದೇ ಸ್ವಭಾವವಾಗಿರುವ ಈ ದೇಹವು.

**ಭಸ್ಮಾಂತಂ** – ಬೂದಿಯಾಗಿ ಹೋಗುವುದು. ಅಂದರೆ ಪೂರ್ಣವಾಗಿ ನಾಶವಾಗುವುದು.

ಆ ಜೀವಾತ್ಮನಿಗೆ ಮತ್ತೆ ಅಂತಹ ದೇಹ ಬರದು ಎಂದು ಭಾವ.

### ದೇಹದ ಬಗ್ಗೆ ದೇವರಿಗೆ ತಿಳಿಸಬೇಕೆ?

ಈ ರೀತಿ ಆಗುವ ವಿಚಾರವನ್ನು ದೇವರಿಗೇಕೆ ನಾವು ತಿಳಿಸಬೇಕು ಎಂಬ ಪ್ರಶ್ನೆಯೊಂದು ಇಲ್ಲಿಬರಬಹುದು. ನಮಗೆ ಈ ಪ್ರಕೃತಿಯಲ್ಲಿದ್ದೇ ಸೇವೆಮಾಡಲು ದೇವರೇ ಈವರೆಗೆ ಕೊಟ್ಟಿದ್ದ ದೇಹವು ಇನ್ನಿಲ್ಲವಷ್ಟೆ. ಈ ಮುಂದೆಯೂ ಅವನ ಸೇವೆ ಮಾಡಲು ದಿವ್ಯಶರೀರವೊಂದನ್ನು ಅವನೇ ಕರುಣಿಸಬೇಕು, ಎಂಬ ಭಾವವನ್ನು ತಿಳಿಸಲೆಂದೇ ಈ ಮಾತು ಬಂದಿದೆ ಎಂದು ಇದಕ್ಕೆ ತಕ್ಕ ಉತ್ತರ ಇದು.

### ಓಂಕಾರದ ಅನುಸಂಧಾನ

ಎಲ್ಲ ಬ್ರಹ್ಮವಿದ್ಯೆಗಳಲ್ಲೂ ಉಪಕರಣವೆನಿಸಿದೆ ಓಂಕಾರ, ಇದನ್ನು ಹೇಳುತ್ತಾ ನಮ್ಮ ಪ್ರಾರ್ಥನೆಗಳನ್ನು ಪರಮಾತ್ಮನಿಗೆ ತಿಳಿಸಬೇಕಾದುದು ಅವಶ್ಯಕರ್ತವ್ಯ.

ಓಂಕಾರವು ಎಲ್ಲ ವೇದಶಾಸ್ತ್ರ ಪ್ರಮಾಣಾಧಾರಗಳಿಗೂ ಮೂಲಾಧಾರ, ಅ+ಉ+ಮ್ ಅಂಶಗಳ ಒಕ್ಕೂಟವೇ 'ಓಮ್' ಎಂದಾಗಿದೆ. ಇದನ್ನು ಹೇಳಿದರೆ ಕೈವಲ್ಯವೂ ವೈಕುಂಠದಲ್ಲಿ ಪರಮಾತ್ಮನ ಸೇವಾಭಾಗ್ಯವೂ ಸಿಗುವುದು ಇದರ ಅಕ್ಷರಸ್ವರೂಪದ ಧ್ಯಾನ ಅನುಸಂಧಾನವನ್ನೂ ಇದರ ಸಾರವಾದ ಅರ್ಥದ ಅನುಸಂಧಾನವನ್ನೂ ನಾವು ಮಾಡಬೇಕಷ್ಟೆ. ನಾರಾಯಣಾಷ್ಟಾಕ್ಷರಮಂತ್ರಕ್ಕೆ ಅಂಗವಾದ ಇದೇ ಓಂಕಾರದ ಅರ್ಥವನ್ನು ರಹಸ್ಯಗ್ರಂಥಗಳಲ್ಲಿ ವಿಸ್ತಾರವಾಗಿ ತಿಳಿಸಲಾಗಿದೆ. ಕೇವಲ ಓಂಕಾರವನ್ನು ನೆನಸಿಕೊಂಡ ಮಾತ್ರಕ್ಕೆ ಪರಮಾತ್ಮ ಸೇವಾನಂದ ರೂಪವಾದ ಪರಮಪದ ವೈಕುಂಠಲಾಭವು ಆಗಲಾರದು. ನಾವೆಲ್ಲ ಪರಮಾತ್ಮನ ಅಧೀನ. ನಮ್ಮ ಜೀವನವೆಲ್ಲ ಅವನ ಸೇವೆಗಾಗಿಯೇ; ಅವನ ಆನಂದಕ್ಕಾಗಿಯೇ ಮುಡಿಪಾಗಿದೆ ಎಂಬ ವಿಚಾರವೇ ಓಂಕಾರದ ಸಾರಾರ್ಥ. ಈ ಅರ್ಥದ ನೆನಪು ನಮಗಿದ್ದರೆ ಮಾತ್ರಸಾಲದು. ನಮ್ಮನ್ನು ತನ್ನವರೆಂದು ಸೇವೆಗಾಗಿ ಸ್ವೀಕರಿಸುವ ಆ ಪರಮಾತ್ಮನಿಗೂ ಆಗಬೇಕಲ್ಲವೆ[2]. ಆದುದರಿಂದಲೇ ಕ್ರತುರೂಪಿಯಾದ ಪರಮಾತ್ಮನಿಗೆ ಸೇವಕರಾದ ನಾವು ಈಗಲೇ ಆ ನೆನಪುಕೊಡುವ ಸೇವೆಯನ್ನು ಮಾಡಲೇಬೇಕು.[3]

---

1. ಸಾಮಾನ್ಯೇ ನಪುಂಸಕಮ್. ವಾ. ೫೦೪೩. ಸ ನಪುಂಸಕಮ್. ಪಾ. ಸೂ. ೨. ೪. ೧೭.
2. ಶಕುಂತಲೆಗೆ ದುಷ್ಯಂತ ತನ್ನ ಸ್ವಾಮಿಯೆಂಬ ಅರಿವಿದ್ದರೂ ಅವನಿಗೆ ಇವಳು ತನ್ನವಳೆಂಬ ನೆನಪಿಲ್ಲದಾಗ ಹೇಗೆ ಅವನ ಸೇವಾಭಾಗ್ಯ ಆಗ ಅವಳಿಗೆ ಸಿಗಲಿಲ್ಲವೋ ಹಾಗಾಗಬಾರದು. ಸ್ವಾಮಿಯಾದ ಪರಮಾತ್ಮನು ನಮ್ಮನ್ನು ನಮದೆಲ್ಲವನ್ನೂ ನೆನಸಿಕೊಳ್ಳುವುದು ನಮ್ಮ ಉಜ್ಜೀವನದಲ್ಲಿ ಬಹಳ ಮುಖ್ಯ ಘಟ್ಟ ಎಂಬ ರಹಸ್ಯಾರ್ಥವನ್ನು ಇಲ್ಲಿ ಗಮನಿಸಬಹುದು.
3. ಇಲ್ಲಿ ಎಲ್ಲೆ ಕ್ರತುರೂಪಿ ಪರಮಾತ್ಮನೇ ನೀನೇ ಓಂಕಾರವನ್ನೂ ಓಂಕಾರದ ಅರ್ಥವನ್ನೂ ಗಮನಿಸಿ ನಮ್ಮನ್ನು ಸ್ವೀಕರಿಸು ಎಂಬ ರೀತಿಯಲ್ಲಿ ಪದಗಳನ್ನು ವ್ಯಾಖ್ಯಾನಕಾರರು ಅನ್ವಯಿಸಿರುತ್ತಾರೆ.

### ಯಜ್ಞವೂ ಪರಮಾತ್ಮನ ಶರೀರವೇ?

**ಕ್ರತೋ** – ಯಜ್ಞವೆನಿಸುವ ವಿಶೇಷಕ್ರಿಯೆಗಳಿಗೂ ಅಂತರಾತ್ಮನಾಗಿ ಆ ರೂಪದಲ್ಲಿರುವವನೇ ಎಂದರ್ಥ.

ಇಲ್ಲಿ ಪರಮಾತ್ಮನಿಗೆ, ದ್ರವ್ಯ (ಗುಣ ಕ್ರಿಯೆಗಳಿಗೆ ಆಸರೆಯಾದ ವಸ್ತುವು) ಮಾತ್ರ ಶರೀರವಾಗುವುದೆಂದು ಸಿದ್ಧಾಂತವಾಗಿದೆಯಾಗಿ, ಕ್ರಿಯಾರೂಪವಾದ ಯಜ್ಞವು ಹೇಗೆ ಅವನ ಶರೀರವಾದೀತು? ಅದರ ಅಂತರಾತ್ಮ ಅವನು ಹೇಗಾದಾನು? ಎಂಬ ಪ್ರಶ್ನೆ ಸಹಜವಾಗಿ ಬರಬಹುದು. ಗುಣಕ್ರಿಯೆಗಳ ಆಸರೆಗೆ ಆಸರೆಯಾಗಿದ್ದರೂ ಸರಿ ಅಂತಹ ಮುಖ್ಯ ಆಸರೆಗೆ ಉಳಿದೆಲ್ಲವೂ ಶರೀರವೆನಿಸಲು ಏನೂ ತೊಂದರೆಯಿಲ್ಲವಷ್ಟೆ ಎಂಬುದೇ ಇದಕ್ಕೆ ತಕ್ಕ ಉತ್ತರ.

ಈ ಜೀವಾತ್ಮಗಳ ಉಜ್ಜೀವನವೆಂಬ ಯಜ್ಞವನ್ನು ನೆರವೇರಿಸುವವನು ಪರಮಾತ್ಮನೇ. ಆದುದರಿಂದ ಅವನನ್ನೇ ಮುಖ್ಯವಾಗಿ ಯಜ್ಞ – ಕ್ರತು ಎಂಬುದಾಗಿ ಕರೆಯಬಹುದು.

### ಕೃತಜ್ಞತೆ, ಕರ್ತವ್ಯ

ಈ ರೀತಿ ಅತ್ಯಂತ ಪರತಂತ್ರತೆಯಿಂದಲೂ ಆಕಿಂಚನತೆಯಿಂದಲೂ ನಾವು ಅವನನ್ನು ಪ್ರಾರ್ಥಿಸುವುದೂ ಸಹ ಒಂದು ವಿಧವಾಗಿ ಪರಮಾತ್ಮನಿಗೆ ಕೃತಜ್ಞತೆಯನ್ನು ಸಲ್ಲಿಸುವ ವಿಧಾನವಷ್ಟೆ. ಇವರಲ್ಲಿ ನಮ್ಮ ಕರ್ತೃತ್ವವಾಗಲಿ ಸಂಗವಾಗಲಿ ಫಲದ ಆಸೆಯಾಗಲಿ ಕಿಂಚಿತ್ತೂ ನಮಗಿಲ್ಲ ಎಂಬ ಸಾತ್ವಿಕ ತ್ಯಾಗ ಭಾವನೆಯೂ ಅಡಗಿರುತ್ತದೆ.[1]

**ಕೃತಂ, ಸ್ಮರ** – ನಾವು ಮಾಡಿರುವಂತಹ ಈ ಓಂಕಾರ ಚಿಂತನೆಯು ಉಪಾಸನಾಂಗವಾಗಿರುತ್ತದೆ ಎಂಬುದರಿಂದ ಆ ಉಪಾಸನೆಯನ್ನು ನೀನು ಜ್ಞಾಪಿಸಿಕೋಡು ಸಾರ್ಥಕ ಪಡಿಸು ಎಂದು ಭಾವ. ಈ ಮಂತ್ರಭಾಗವನ್ನು ಆದರ ಗೌರವಗಳಿಂದ ಎರಡು ಸಲ ಪಠಿಸಲಾಗಿದೆ.

### ಪಾಠಾಂತರ, ಸಾರಾರ್ಥ

ಮಾಧ್ಯಂದಿನರು 'ಕ್ರತೋ' ಎಂಬುದರ ಬದಲು 'ಕ್ಲಿಬೇ' ಎಂದು ಪಠಿಸುವರು. ಕ್ಲಿಬೇ ಅಂದರೆ ಪಾರತಂತ್ರ್ಯ ಎಂದರ್ಥ. "ನಮಗಿರುವ ಧಾರ್ಷ್ಟ್ಯವನ್ನು ಪರಿಹರಿಸಲು ಈ ಓಂಕಾರಾರ್ಥವನ್ನು ಗಮನಿಸು"[2] ಎಂದರ್ಥ.

ನಾವು ಕೈವಲ್ಯಸ್ಥಾನದಲ್ಲಿ ನಮ್ಮಿಷ್ಟಕ್ಕೆ ಸ್ವತಂತ್ರವಾಗಿ, ಆನಂದ ಅನುಭವಿಸಬಹುದಾದರೂ, ಆ ಒಂಟಿ ಜೀವನ ನಡೆಸಬೇಕಾದ ಕೆಟ್ಟ ಪರಿಸ್ಥಿತಿ ಉಪಾಸಕರಾದ ನಮಗೆ ಬರದಿರಲಿ. ನಿನಗೆ ಪೂರ್ಣವಾಗಿ ನಾವು ಶರಣಾಗಿರುವೆವು ಎಂಬ ವಿಷಯು ನಿನ್ನ ನೆನಪಿನಲ್ಲಿರಲಿ ಎಂದು ಭಾವ.

೧೨ - ೧೩ - ೧೪ ನೇ ಮಂತ್ರಗಳಿಂದ ಪುರುಷಾರ್ಥ ತತ್ತ್ವರಹಸ್ಯವನ್ನು ತಿಳಿದುಕೊಂಡಿರುವ ಉಪಾಸಕನಿಗೆ ಆ ಪುರುಷಾರ್ಥದಲ್ಲಿ ಏಕನಿಷ್ಠೆಯನ್ನೂ ಬಲವನ್ನೂ ಈ ಮಂತ್ರದಿಂದ ದೃಢಗೊಳಿಸಲಾಯಿತು.

---

1. ಇದೇ ಈ ಉಪನಿಷತ್ತಿನಲ್ಲಿರುವ ಸಾರಾರ್ಥ ಎಂಬುದು ಒಂದನೇ ಮಂತ್ರದ ವಿವರಣೆಯಿಂದ ತಿಳಿಯುವುದು.

2. 'ಧಾರ್ಷ್ಟ್ಯ' ಎಂದರೆ ಹೇಳಿದಂತೆ ಕೇಳದಿರುವುದು ಮುನ್ನುಗ್ಗುವುದು, ಮೇಲ್ಬೀಳುವುದು ಬಲಾತ್ಕರಿಸುವುದು, ವಿರುದ್ಧವಾಗಿ, ಆಚರಿಸುವುದು, ತನ್ನಿಷ್ಟಬಂದಂತೆ ನಡೆದುಕೊಳ್ಳುವುದು ಇತ್ಯಾದಿ ಸ್ವಭಾವಗಳು. 'ಅಧಾರ್ಷ್ಟ್ಯ' ಎಂದರೆ ಇತರರಿಗೆ ಅನುಕೂಲವಾಗಿ ನಡೆದುಕೊಳ್ಳುವುದು. ನಾವು ಪರಮಾತ್ಮನಿಗೆ ಅನುಕೂಲವಾಗಿ ನಡೆದುಕೊಳ್ಳಬೇಕಷ್ಟೆ. ಇದೇ ಆತ್ಮಸ್ವರೂಪಕ್ಕೆ ತಕ್ಕ ಓಂಕಾರಾರ್ಥ' ಕ್ಲೀಬತ್ವ' 'ಅಧಾರ್ಷ್ಟ್ಯ' ಶಾಲೀನತೆ' ಪಾರತಂತ್ರ್ಯ' ಇವೆಲ್ಲ ಪರ್ಯಾಯ ಶಬ್ದಗಳು.

# ಈಶಾವಾಸ್ಯೋಪನಿಷತ್

## ಮಂತ್ರ ಹದಿನೆಂಟು

**ಅಗ್ನೇ ! ನಯ ಸುಪಥಾ ರಾಯೇ ಅಸ್ಮಾನ್**

**ವಿಶ್ವಾನಿ ದೇವ ! ವಯುನಾನಿ ವಿದ್ವಾನ್।**

**ಯುಯೋಧ್ಯಸ್ಮಜ್ಜುಹುರಾಣಮೇನೋ**

**ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥೧೮॥**

ಇತಿ ಶ್ರೀ ಶುಕ್ಲಯಜುರ್ವೇದಪ್ರಥಮಶಾಖಾಯಾಂ ಕಾಣ್ವಸಂಹಿತಾಯಾಂ

ಚತ್ವಾರಿಂಶಾಧ್ಯಾಯರೂಪಾ ಈಶಾವಾಸ್ಯೋಪನಿಷತ್

ಸಂಪೂರ್ಣಾ



**ಅನ್ವಯಾನುಸಾರ ಪ್ರತಿಪದಾರ್ಥ**

ಅಗ್ನೇ - ಅಗ್ನಿದೇವನಿಗೆ ಅಂತರ್ಯಾಮಿಯೂ ಎಲ್ಲವನ್ನೂ ಮುನ್ನಡೆಸುವವನೂ ಆದ ಎಲೈ! ಪರಮಾತ್ಮನೇ; ರಾಯೇ - ಬ್ರಹ್ಮಾನುಭವ ಕೈಂಕರ್ಯರೂಪವಾದ ಮೋಕ್ಷಸಾಮ್ರಾಜ್ಯೈಶ್ವರ್ಯಕ್ಕಾಗಿ; ಅಸ್ಮಾನ್ - ನಮ್ಮನ್ನೂ ನಮ್ಮವರನ್ನೂ ಸಹ; ಸುಪಥಾ - ಇಹದಲ್ಲಿ ಸನ್ಮಾರ್ಗದಲ್ಲೂ, ಪರದಲ್ಲಿ ಅರ್ಚಿರಾದಿ ದಿವ್ಯಮಾರ್ಗದಲ್ಲೂ; ನಯ - ಕರೆದುಕೊಂಡುಹೋಗು; ದೇವ - (ಅದಕ್ಕಾಗಿ) ಲೀಲಾವಿಭೂತಿಯಿಂದ ಆಟವಾಡುವವನೂ ನಿತ್ಯವಿಭೂತಿಯಿಂದ ಉತ್ಕೃಷ್ಟವಾಗಿ ಬೆಳಗುತ್ತಿರುವವನೂ ಆದ ಎಲೈ! ದಿವ್ಯಪುರುಷನೇ; ವಿಶ್ವಾನಿ - ಎಲ್ಲ ವಿಧವಾದ; ವಯುನಾನಿ - ಉಪಾಸನೆಗಳ ರೀತಿಗಳನ್ನು; ವಿದ್ವಾನ್ - ಚೆನ್ನಾಗಿ ಬಲ್ಲ (ನೀನೇ), ಜುಹುರಾಣಂ - ನಮ್ಮನ್ನು ಡೊಂಕುದಾರಿಗೆಳೆದು ಕ್ಷುದ್ರರನ್ನಾಗಿಸುವ; ಏನಃ - ಪಾಪವೆಲ್ಲವನ್ನೂ; ಅಸ್ಮಾತ್ - ನಮ್ಮ ಬಳಿಯಿಂದ; ಯುಯೋಧಿ - ಬಿಡಿಸಿ ಹೊಡೆದೋಡಿಸು; ತೇ - ಇಂತಹ ಪ್ರಾಪಕನಾದ ನಿನಗೆ; ಭೂಯಿಷ್ಠಾಂ - ನಾವು ಮಾಡುವ ಇದೇ ಬಹಳ ದೊಡ್ಡದೆಂದು ಭಾವಿಸಬಹುದಾದ; ನಮಉಕ್ತಿಂ - ನಮಸ್ಕಾರ ಎಂಬ ಈ ಒಂದು ಮಾತನ್ನಷ್ಟೇ; ವಿಧೇಮ - ಆಡಬಲ್ಲೆವು; ಹಾಗೂ (ತೇ _ ಪರಮಪುರುಷನೂ ಪ್ರಾಪ್ಯನೂ ಆದ ನಿನಗೆ; ಭೂಯಿಷ್ಠಾಂ - ಪುನಃ ಪುನಃ ನಿರಂತರವಾಗಿ ಘೋಷಿಸುವಂತಹ; ನಮಃಉಕ್ತಿಂ _ ಮೋಕ್ಷಸಾಮ್ರಾಜ್ಯದಲ್ಲಿ ನಿತ್ಯ ಕೈಂಕರ್ಯಚಿಹ್ನವಾದ 'ನಮಃ ನಮಃ' ಎಂಬ ಶಬ್ದವನ್ನೇ; ವಿಧೇಮ) - ಮಾಡುತ್ತಾ ಪುಷ್ಟರೂ ಆಗುವೆವು.

ಇಲ್ಲಿಗೆ ಶ್ರೀಶುಕ್ಲಯಜುರ್ವೇದದ ಮೊದಲನೆಯ ಶಾಖೆಯಾದ ಕಾಣ್ವಸಂಹಿತೆಯಲ್ಲಿ

ನಲವತ್ತನೆಯ ಅಧ್ಯಾಯವಾದ ಈಶಾವಾಸ್ಯೋಪನಿಷತ್ತು

ಪೂರ್ಣವಾಯಿತು.



**ಛಾಯಾಪದ್ಯ**

ಅಗ್ನೀ ! ನಮ ಸರಿದಾರಿಯೊಳ್ಸಿರಿವರೆ ನಡೆಸೋ !
ಓ ದೇವನೆ ! ನೀನರಿತವ ಸಾಧನೆಯರಿವೆಲ್ಲಂ.
ಬಿಡಿ, ಬಿಡಿಸೋ ನಮ್ಮಿಂ ನಮಸುತ್ತಿರುವೀ ಪಾಪಂ,
ನಿನಗಿಡುವೆವು ನುಡಿಯೊಂದನೆ ಹೆಚ್ಚಿನ ನಮೊ ಎಂಬಾ.
(ಹೆಚ್ಚಿನ ನಮೊ ಎಂಬಾ)

**ಈಶಾವಾಸ್ಯದ ಹಿರಿಮೆ**

ಈಶಾವಾಸ್ಯವು ಎಲ್ಲಾ ಜನತೆಗು ಆಶಾದಾಸ್ಯವ ಬಿಡಿಸುವುದು.
ಈಶನ ಸೇವೆಯ ನಿಷ್ಠೆಯು ಬಲದಲಿ ಈಶನ ದರ್ಶನ ಕೊಡಿಸುವುದು.

## ನಿಗಮನ

ಕನ್ನಡನಾಡಿನ ಗಡಿಬೆಳಗಾವಿಯ ಸಿರಿನರಸಿಂಹನ ಪುರದೊಳಗೆ.
ಅರೆಯರ್‌ದಾಸನು ರಚಿಸಿದನಿದನು ಸದಾನಂದಾನಾಯಕಗೆ

ಇಲ್ಲಿಗೆ ಈಶಾವಾಸ್ಯೋಪನಿಷತ್ತಿನ ಛಾಯಾಪದ್ಯಾನುವಾದ ಮುಗಿಯಿತು.



# ತಾತ್ಪರ್ಯಾರ್ಥ

## ಪ್ರಾರ್ಥನೆ

ತಾನು ಮಾಡಿದ ಕೆಲಸಗಳಲ್ಲಿ ಒಳ್ಳೆಯದನ್ನು ಮಾತ್ರ ಅನುಗ್ರಹ ಬುದ್ಧಿಯಿಂದ ಸ್ಮರಿಸಿಕೊಳ್ಳುವಂತೆ ಹಿಂದಿನ ಮಂತ್ರದಲ್ಲಿ ಮುಮುಕ್ಷುವು ಪರಮಾತ್ಮನನ್ನು ಪ್ರಾರ್ಥಿಸಿದನು. ಈ ಮಂತ್ರದಲ್ಲಿ ತನ್ನ ಒಳ್ಳೆಯ ಕೆಲಸವನ್ನು ನೆನೆದ ಪರಮಾತ್ಮನು ಮುಮುಕ್ಷುವಾದ ತನ್ನನ್ನು ಇಷ್ಟಾರ್ಥದ ಬಳಿಗೆ ಸನ್ಮಾರ್ಗದಲ್ಲಿ ಕರೆದುಕೊಂಡು ಹೋಗಬೇಕೆಂದು ಬೇಡುತ್ತಾನೆ.

ಎಲೈ ದೇವನೇ ! ನೀನು ನಿನ್ನ ಭಕ್ತರು ಅಪೇಕ್ಷಿಸುವ ಚತುರ್ವಿಧ ಪುರುಷಾರ್ಥಗಳನ್ನೂ ದೊರಕಿಸಿಕೊಡಲು ಅನೇಕ ಅವತಾರಗಳನ್ನು ಎತ್ತುವೆ. ಆ ಅವತಾರಗಳೆಲ್ಲವೂ ನಿನಗೆ ಕ್ರೀಡೆಗಳಾಗಿವೆ. ಪ್ರಹ್ಲಾದನ ಇಷ್ಟಾರ್ಥವನ್ನು ನೆರವೇರಿಸಿಕೊಡಲು ಕಂಬದಲ್ಲಿ ನರಸಿಂಹನಾಗಿ ಅವತಾರ ಮಾಡಿದೆ. ದ್ರೌಪದಿಯ ಆಸೆ ತೀರಿಸಲು ಕೃಷ್ಣನಾಗಿ ಬಂದೆ. ಭಕ್ತರ ಇಷ್ಟಾರ್ಥಗಳನ್ನು ಸಾಧಿಸಿಕೊಡುವ ಎಲ್ಲ ಉಪಾಯಗಳನ್ನೂ ತಿಳಿದ ಚತುರ ವಿದ್ವಾಂಸನು ನೀನು. ನಾನೋ ನಿನ್ನನ್ನು ಬಿಟ್ಟರೆ ದಿಕ್ಕಿಲ್ಲದವನು. ನಿನ್ನನ್ನೇ ರಕ್ಷಕನೆಂದು ನಂಬಿರುವವನು ಈ ನಾನು ಕರ್ಮಯೋಗ ಜ್ಞಾನಯೋಗಗಳ ಪರಿಪೂರ್ತಿಗಾಗಿ ಸಂಪತ್ತನ್ನು ಅಪೇಕ್ಷಿಸುತ್ತಿರುವೆನು. ನಾನು ಅಪೇಕ್ಷಿಸುವ ಸಂಪತ್ತು ಹೊಸದೇ ನಲ್ಲ. ದೇಶಿಕರ ಅಜ್ಜ, ಮುತ್ತಜ್ಜಂದಿರು ಕೂಡಿಸಿಟ್ಟ ಧನ. ಭಾಷ್ಯಕಾರರು ಅಪೇಕ್ಷಿಸಿದ ಧನ, ಜನಕನು ಪಡೆದ ಧನ. ದೇವನೇ ಆ ಹಣವು ನೀನೇ ಅಲ್ಲವೇ. ನಿನ್ನನ್ನು ಪಡೆಯಲು ಅಡ್ಡಿ ಆತಂಕವನ್ನು ಉಂಟುಮಾಡದ ಸನ್ಮಾರ್ಗದಲ್ಲೂ ಮತ್ತು ಸುಲಭವಾದ, ಕೆಡಕಿಲ್ಲದ ಮಾರ್ಗದಲ್ಲೂ ಕರೆದುಕೊಂಡು ಹೋಗು. ಚತುರನಾದ ಮಾರ್ಗದರ್ಶಕನಲ್ಲವೇ ನೀನು. ಆದ್ದರಿಂದಲೇ ನಿನ್ನನ್ನು ಅಗ್ನಿ ಎಂದು ಕರೆಯುತ್ತಾರೆ. ನನ್ನ ಇಷ್ಟಾರ್ಥವನ್ನು ದೊರಕಿಸಿಕೊಡು.

ಕರುಣಾಳುವೇ ! ನಾನು ನಿನ್ನ ಆಜ್ಞೆಗೆ ವಿರೋಧವಾಗಿ ಮಾಡಬಾರದ ಕೆಲಸಗಳನ್ನು ಮಾಡುತ್ತಲಿದ್ದೇನೆ. ಮಾಡಬೇಕಾದ ಕಾರ್ಯಗಳನ್ನು ಬಿಡುತ್ತಲೂ ಇದ್ದೇನೆ. ಈ ದೋಷಗಳಿಂದ ಉತ್ಪನ್ನವಾದ ಪಾಪಗಳು ನನ್ನನ್ನು ಮುತ್ತಿಕಾಡುತ್ತಿವೆ; ಪೀಡಿಸುತ್ತಿವೆ. ಸರ್ವಪಾಪವಿನಾಶಕನಾದ ನಿನಗೆ, ಪ್ರಭುವೇ ಈ ನನ್ನ ಪಾಪಗಳನ್ನು ನಾಶ ಮಾಡುವುದು ಯಾವ ಲೆಕ್ಕದ ಕೆಲಸ. ಪಾಪಗಳಿಂದ ಬಿಡಿಸು ಎಂದು ಮತ್ತೂ ಬೇಡಿದನು.

ದೇವ ! ನೀನು ಸಕಲವಾದ ಇಷ್ಟಾರ್ಥಗಳಿಂದ ಪರಿಪೂರ್ಣನಾದವನು. ನಿನಗೆ ಬೇಕಾದ ಯಾವ ವಸ್ತುವೂ ಉಳಿದಿರುವುದಿಲ್ಲ. ಅಷ್ಟೇಕೆ ನೀನು ಲಕ್ಷ್ಮೀಪತಿಯೇ ಆಗಿದ್ದೀಯೆ. ಇಂತಹ ನಿನಗೆ ನಾನು ಕೊಡುವುದು ತಾನೇ ಏನಿದೆ? ನಾನೋ ನಿನ್ನ ಕಣ್ಣಿಗೂ ಬೀಳದ ನಿರ್ಭಾಗ್ಯನು. ನಿನ್ನನ್ನು ನಮಃ ಎಂಬ ಮಾತಿನಿಂದ ಪುನಃ ಪುನಃ ಪ್ರಾರ್ಥಿಸುತ್ತೇನೆ. ನಿನಗೆ ಕೊಡಬಹುದಾದ ನನ್ನಲ್ಲಿ ಉಳಿದಿರುವ ಕಾಣಿಕೆ ಇದೊಂದೇ ಆಗಿದೆ. ಇದನ್ನೇ ಸ್ವೀಕರಿಸಿ ನಿನ್ನ ಪಾದಾರವಿಂದವನ್ನು ಕರುಣಿಸು ಎಂದು ಮುಮುಕ್ಷುವು ಬೇಡುವನು.

# ನಿಗಮನ

ಹೀಗೆ ಮುಮುಕ್ಷುವು ಎಡೆಬಿಡದೆ ತನ್ನ ಮರಣಕಾಲವವರೆಗೂ ಪರಮಾತ್ಮನನ್ನು ಬೇಡುತ್ತಾ, ತನಗೆ ವಿಹಿತ ವಾದ ಕರ್ಮಯೋಗ ಜ್ಞಾನಯೋಗಗಳನ್ನು ಮಾಡುತ್ತಾ. ಪರಮಾತ್ಮನ ಸೇವೆಯನ್ನು ಅಪೇಕ್ಷಿಸುತ್ತಾ ಕಾಲಕಳೆ ದರೆ ಅಂತ್ಯದಲ್ಲಿ ಪರಮಾತ್ಮನು ದೊರಕುವನು ಎಂದು ಈಶಾವಾಸ್ಯೋಪನಿಷತ್ತು ಸಾಂಗವಾದ ಬ್ರಹ್ಮವಿದ್ಯೆ ಯನ್ನು ಉಪದೇಶಿಸಿತು.

  

# ವೇದಾಂತಾಚಾರ್ಯ ಭಾಷ್ಯ

## ಸಾರಾರ್ಥ

ಅಗ್ನಿಶಬ್ದದಿಂದ ಹೇಳಲಾಗುವ ಪರಮಾತ್ಮನನ್ನು ಕುರಿತು ನನ್ನ ಇಷ್ಟಾರ್ಥವನ್ನು ನೆರವೇರಿಸಿಕೊಡು ಎಂದು ಪುನಃ ಪ್ರಾರ್ಥಿಸುತ್ತಿದ್ದಾನೆ. 'ಅಗ್ನೇ!...... ವಿಧೇಮ' ಎಂದು.

## ಎಲ್ಲ ಶಬ್ದಗಳಿಗೂ ಪರಮಾತ್ಮನೇ ಅರ್ಥ

**ಅಗ್ನೇ!** – ಅಗ್ನಿಯನ್ನು ಶರೀರವಾಗಿ ಉಳ್ಳವನೇ! ಇದಕ್ಕೆ 'ಯಾವನಿಗೆ ಅಗ್ನಿಯು ಶರೀರವಾಗಿದೆಯೋ'[1] ಎಂಬ 'ಅಂತರ್ಯಾಮಿಬ್ರಾಹ್ಮಣ'ದ[2] ಮಾತು ಪ್ರಮಾಣ.

ಮುನ್ನಡೆಸುವ ಶಕ್ತಿ ಮುಂತಾದ ಗುಣಗಳನ್ನು ಪಡೆದ ಪರಮಾತ್ಮನೂ ಎಂದು ಹೇಳಬಹುದು. ಹೀಗೆ ಅರ್ಥಮಾಡಲು 'ಆಯಾವಸ್ತುಗಳ ಮೂಲಕವಲ್ಲದೆ ನೇರವಾಗಿಯೇ ಎಲ್ಲ ಶಬ್ದಗಳಿಗೂ ಪರಮಾತ್ಮನೇ ಅರ್ಥ ಎಂದು ಹೇಳಿದರೂ ಏನೂ ವಿರೋಧವಿಲ್ಲ ಎಂಬ'[3] ಜೈಮಿನಿಮಹರ್ಷಿಯ[4] ಮಾತು ನಮಗೆ ಸಹಾಯಕ.

## ಪದವಿವರಣೆ

**ನಯ** – ಪ್ರವರ್ತಿಸುವಂತೆ ಮಾಡು, ಮುನ್ನಡೆಸು ಎಂದರ್ಥ.

**ಸುಪಥಾ** – ಒಳ್ಳೆಯದಾರಿಯಲ್ಲಿ, ಶಾಸ್ತ್ರ ಹಾಗೂ ಸ್ವರೂಪಕ್ಕೆ ಸ್ವಲ್ಪವೂ ವಿರೋಧವಿಲ್ಲದಂತಹ ಸಾಧನೆಗಳಲ್ಲಿ ಎಂದು ಭಾವ.

**ರಾಯೇ** – ನಿನ್ನ ಉಪಾಸನೆ ಮುಗಿಯುವವರೆಗೂ ಇರಬೇಕಾದ ಈ ನಮ್ಮ ಶರೀರವನ್ನು ಕಾಪಾಡಿಕೊಳ್ಳಲೂ, ಮತ್ತು ನಿನ್ನ ಪೂಜೆ ಮೊದಲಾದುವುಗಳಿಗೆ ಬೇಕಾಗಿರುವ ಮತ್ತು ಅನುಕೂಲವಾಗಿರುವ ಐಶ್ವರ್ಯಕ್ಕಾಗಿ.

## ಜ್ಞಾನಿಗಳ ನಿಜವಾದ ಐಶ್ವರ್ಯ

ಇದು ಉಪಾಸನೆಯ ವಿಚಾರಕ್ಕಾಗಿಯೇ ಇರುವ ಪ್ರಕರಣ. ಆದ್ದರಿಂದ 1)"ಕಳ್ಳನ ಕೈಗೆ ಸಿಗದಂತಹ, ಪಾಳೇಗಾರರಿಗೆ ಮುಟ್ಟುಗೋಲು ಹಾಕಿಕೊಳ್ಳಲಾಗದಂತಹ, ಅಥವಾ ಯಾವ ರಾಜಮಹಾರಾಜರೂ ಕೊಡುಗೆಯಾಗಿ ಕೊಡಲಾಗದೆ, ಅಣ್ಣತಮ್ಮಂದಿರು ಆಸ್ತಿಯಂತೆ ಹಂಚಿಕೊಳ್ಳಲಾಗದ, ಶಾಶ್ವತವಾದ ಐಶ್ವರ್ಯವನ್ನು ಸಂಪಾದಿಸು"[5]

---

1. ಯಸ್ಯಾಗ್ನಿಶ್ಶರೀರಂ. ಬೃ. ೫. ೭. ೫.
2. ಪ್ರಸಿದ್ಧವಾದ ಉಪನಿಷತ್ತುಗಳಲ್ಲಿ ಒಂದಾದ ಬೃಹದಾರಣ್ಯಕದ ಬ್ರಾಹ್ಮಣ ಭಾಗದಲ್ಲಿ ಅಂತರ್ಯಾಮಿಯಾದ ಪರಮಪುರುಷನ ವಿಷಯವಾದ ಸಂಭಾಷಣೆಯನ್ನು ಒಳಗೊಂಡ ಭಾಗಕ್ಕೆ 'ಅಂತರ್ಯಾಮಿ ಬ್ರಾಹ್ಮಣ' ಎಂದು ಹೆಸರು.
3. ಸಾಕ್ಷಾದಪ್ಯವಿರೋಧಂ ಜೈಮಿನಿಃ ಬ್ರ. ಸೂ. ೧. ೨. ೪೧.
4. ಜೈಮಿನಿಗಳು ಕುತ್ಸವಂಶದವರು. ಇವರು ವೇದರಾಶಿಯನ್ನು ವಿಭಾಗ-ಮಾಡಿದ ಮಹಾನುಭಾವರಾದ ವ್ಯಾಸರ ಶಿಷ್ಯರಲ್ಲಿ ಒಬ್ಬರು. ಸಾಮವೇದದಲ್ಲಿ ಪಾರಂಗತರಾದವರು. ಮೀಮಾಂಸಾಶಾಸ್ತ್ರಕ್ಕೆ ಸಂಬಂಧಪಟ್ಟ 2500 ಸೂತ್ರಗಳನ್ನು ರಚಿಸಿದ್ದಾರೆ. ವೈದಿಕ ಸಾಹಿತ್ಯದಲ್ಲಿ ಪರಿಣತರಾದವರು. ಸುಮಾರು ಇಂದಿಗೆ 5000 ವರ್ಷಗಳ ಹಿಂದೆ ಇದ್ದರೆಂದು ಅಭಿಪ್ರಾಯಪಡುತ್ತಾರೆ.
5. ಅತಸ್ಕರಕರಗ್ರಾಹ್ಯಮರಾಜಕವಶಂವದಮ್ । ಆದಾಯಾದವಿಭಾಗಾರ್ಹಂ ಧನಮಾರ್ಜಯ ಸುಸ್ಥಿರಮ್ ॥ - ಯಾಜ್ಞ. ಸ್ಮೃತಿ. ೨. ೪೦.

2) "ಆಹಾ! ನನ್ನ ಐಶ್ವರ್ಯ ಅನಂತ! ಅದು ಮುಗಿಯುವುದೇ ಇಲ್ಲ!"[1] ಇವೇ ಮುಂತಾದ ವಚನಗಳಲ್ಲಿ ತಿಳಿಸಿರುವ ಅಲೌಕಿಕ ಐಶ್ವರ್ಯವೇ ಇಲ್ಲಿ ವಿವಕ್ಷಿತ. ಒಂದೇ ಮಂತ್ರವು ಸಂದರ್ಭಗಳಿಗೆ ಅನುಸಾರವಾಗಿ ಆಯಾಯಾ ಅರ್ಥಗಳನ್ನು ತಿಳಿಸುತ್ತದೆ ಎಂದು ಸರಿಯಾದ ನ್ಯಾಯಗಳನ್ನು ಅರಿತವರು ಹೇಳುತ್ತಾರೆ.

## ಪದವಿವರಣೆ

**ಅಸ್ಮಾನ್** – ನಿನ್ನನ್ನು ಬಿಟ್ಟು ಬೇರೆ ಏನೊಂದನ್ನೂ ಯೋಚಿಸದ. ಹಾಗೂ ಬೇರೆ ಯಾವುದನ್ನೂ ಪಡೆಯಬೇಕೆಂದಾಗಲೀ ಸಹಾಯ ಎಂದಾಗಲಿ ನಂಬಿಲ್ಲದ ನಮ್ಮನ್ನು.

**ದೇವ!** – ನಮಗೆ ಅವಶ್ಯಕವಾದ ಇಷ್ಟಾರ್ಥಗಳನ್ನು ಕೊಡಲು ತಕ್ಕಂತಹ ಅಚ್ಚರಿಗೊಳಿಸುವಂತಹ ಲೀಲೆಗಳನ್ನು ಉಳ್ಳವನೇ.

**ವಯುನಾನಿ** – "ಶಬ್ದಕೋಶಗಳಲ್ಲಿ ಮಾಯೆ – ವಯುನ – ಜ್ಞಾನ ಎಂಬ ಈ ಮೂರುಪದಗಳೂ ಸಮಾನಾರ್ಥದಲ್ಲಿವೆ ಎಂದು ಹೇಳಲಾಗಿದೆ."[2] ಆದುದರಿಂದ ಇಲ್ಲಿ 'ಜ್ಞಾನವ ಮೂಲಕವಾಗಿ ನಮಗೆ ಮುಕ್ತಿಗೆ ಸಹಾಯ ಮಾಡುವ ಸಾಧನ ಸಲಕರಣೆಗಳು' ಎಂಬುದೇ ವಯುನ ಶಬ್ದದ ಅರ್ಥ.

**ವಿಶ್ವಾನಿ** – ಎಲ್ಲ ಅಂದರೆ ಅವರವರ ಯೋಗ್ಯತೆಗೆ ತಕ್ಕಂತೆ. ನಾಲ್ಕುವಿಧವಾದ ಪುರುಷಾರ್ಥಗಳಿಗೂ ಇರುವ ಸಾಧನ ಸಲಕರಣೆಗಳನ್ನು.

**ವಿದ್ವಾನ್** – ಚೆನ್ನಾಗಿ ತಿಳಿದಿರುವ ನೀನು.
ಏನೊಂದೂ ತಿಳಿಯದ ನಮ್ಮನ್ನು ಕರೆದೊಯ್ಯಲು ಸಾಧ್ಯ, ಹಾಗೂ ಕರೆದೊಯ್ಯಲೇಬೇಕು ಎಂದು ಭಾವ.

**ಜುಹುರಾಣಂ** – ನಮ್ಮನ್ನು ಬಂಧನದಲ್ಲಿ ಸಿಲುಕಿಸುವ ಅಥವಾ ಯೋಚಿಸಲೂ ಸಾಧ್ಯವಿಲ್ಲದಷ್ಟು ಕುಟಿಲವಾಗಿರುವ ದೋಷಗಳಿಂದ ಬಾಧಿಸುತ್ತಿರುವ.

**ಏನಃ** – ನಿನ್ನ ಅನುಭವ ಮೊದಲಾದವುಗಳಿಗೆ ಅಡ್ಡಿಯಾಗಿ ನಿಂತಿರುವ, ಮಾಡಬಾರದುದನ್ನು ಮಾಡುವುದು, ಮಾಡಬೇಕಾದುದನ್ನು ಮಾಡದಿರುವುದು, ಮುಂತಾದ ಪಾಪವನ್ನು.

**ಅಸ್ಮತ್** – ನಮ್ಮಿಂದ.

**ಯುಯೋಧಿ** – ಪ್ರತ್ಯೇಕಗೊಳಿಸು ಅಂದರೆ ನಾಶಮಾಡು ಎಂದರ್ಥ.

**ಭೂಯಿಷ್ಠಾಂ, ತೇ, ನಮಉಕ್ತಿಂ, ವಿಧೇಮ** – 'ಬೇರೆ ಗತಿಯಿಲ್ಲದಿರುವಿಕೆ' ಮುಂತಾದ ಗುಣಗಳಿಂದಲೂ, ಮತ್ತು ಪುನಃ ಪುನಃ ಆಚರಣೆಯಿಂದಲೂ ಅಧಿಕವಾಗಿರುವ "ನಮೋ" ಎಂಬ ಮಾತನ್ನು ನಿನಗೆ ಒಪ್ಪಿಸುತ್ತೇನೆ.

## 'ನಮಃ' ಶಬ್ದದ ಹಿರಿಮೆ

ಈ ಬಗ್ಗೆ ಬೇಕಾದಷ್ಟು ಏರುಪೇರುಗಳೂ ಸಹ ವ್ಯವಸ್ಥಿತವಾಗಿ ಶಾಸ್ತ್ರಸಮ್ಮತಗಳಾಗಿವೆ.[3]

---

1. ಅನಂತಂ ಬತ ಮೇ ವಿತ್ತಮ್. ಮ. ಭಾ ಶಾಂ. ೧೭. ೨೨. 2. ಮಾಯಾ ವಯುನಂ ಜ್ಞಾನಮ್. ಇತಿ ನೈಘಣ್ಟುಕಾಃ.

3. ಸ್ವಾಭಾವಿಕವಾಗಿ ನಮಸ್ಕಾರವನ್ನು ಅನೇಕ ಸಲ ಮಾಡುವುದು, ಅಥವಾ ಒಂದೇ ಸಲ ಮಾಡುವುದು ಎಂಬ ಆಚರಣೆಗೆ ಸಂದರ್ಭಾನುಸಾರ ವ್ಯವಸ್ಥೆ ಇದೆ. ಒಂದೇ ನಮಸ್ಕಾರ ಹಾಕಬೇಕೆಂದಾಗಲಿ ಹೆಚ್ಚಿಗೆ ಹಾಕಬೇಕೆಂದಾಗಲಿ ಸಾಮಾನ್ಯ ನಿಯಮವೇನೂ ಇಲ್ಲ.

ಅಥವಾ 'ನಮೋ' ಎಂಬ ಈ ಒಂದು ಮಾತನ್ನೇ ಕೊನೆಯವರೆಗೂ ಉಳಿಸಿಕೊಳ್ಳಬೇಕೆಂದೂ, ಉಳಿಸಿಕೊಡಬೇಕೆಂದೂ ಸ್ವಾಮಿಯನ್ನು ಬೇಡಿಕೊಳ್ಳುತ್ತಿದ್ದಾನೆ.

ಮಹಾಭಾರತದ ಮೋಕ್ಷಧರ್ಮಪರ್ವದಲ್ಲಿ, ಮುಕ್ತಿಗೆ ಸಂದವರು ಹಾಗೂ ಸಲ್ಲುವವರು ಯಾವಾಗಲೂ ನಮೋ ಎಂದೇ ಹೇಳುತ್ತಿರುವರು![1] ಎಂದಲ್ಲವೇ ಲಕ್ಷಣ ಹೇಳಿರುವುದು.

ಇಲ್ಲಿ ನಮಃ - ನಮಸ್ಕಾರ ಎಂದು ಹೇಳದೆ ನಮ ಉಕ್ತಿಂ ಎಂದು ಹೇಳಿರುವುದರ ಅಭಿಪ್ರಾಯ ಕಾಯಕವಾಗಿ ನಮಸ್ಕರ ಮಾಡದಿದ್ದರೂ ಮನಸ್ಸಿಲ್ಲದ ಮನಸ್ಸಿನಿಂದಾದರೂ 'ನಮೋ' ಎಂಬ ಒಂದು ಮಾತನ್ನಾಡಿದರೆ ಸಾಕು; ಅಷ್ಟಕ್ಕೆ ಭಗವಂತನು ಪ್ರಸನ್ನನಾಗಿ ಬಿಡುವನು. ಆ ಭಗವಂತ ಎಷ್ಟು ಸುಲಭ! ಹಾಗೂ ದಯಾಮಯ! ಎಂಬುದನ್ನು ತಿಳಿಸುತ್ತದೆ ಎಂದು.

# ನಿಗಮನ

## ಈಶಾವಾಸ್ಯದ ಒಟ್ಟರ್ಥ

ಈರೀತಿ ಶ್ರೇಷ್ಠವಾದ ಪರಮಾತ್ಮತತ್ತ್ವವನ್ನೂ, ಅದರ ವಶದಲ್ಲಿರುವ ನಿತ್ಯವಿಭೂತಿ – ಪರಲೋಕ ಮತ್ತು ಲೀಲಾವಿಭೂತಿ – ಇಹ ಲೋಕಗಳೆಂಬ ಐಶ್ವರ್ಯದ ಸಮೃದ್ಧಿಯನ್ನೂ, ಆ ಪರಮಾತ್ಮನ ಉಪಾಸನೆ ಹಾಗೂ ಅದರ ಉಪಕರಣ ಮತ್ತು ವಿಶೇಷ ರೂಪಗಳನ್ನೂ, ಸಂಕ್ಷಿಪ್ತವಾಗಿ ತಿಳಿಸಿಕೊಟ್ಟು ಹೀಗೆ ವಿಷಯಗಳನ್ನು ಸಂಕ್ಷಿಪ್ತವಾಗಿ ಒಟ್ಟುಗೂಡಿಸಿದ ಕಾರಣ 'ಸಂಹಿತೆ' ಎಂದು ಹೆಸರಾದ ಈ ಉಪನಿಷತ್ತೂ, ಈ ಉಪನಿಷತ್ತಿನೊಡನೆ ಮುಗಿಯುವ ವಾಜಸನೇಯ ಕಾಣ್ವಶಾಖೆಯ ಮಂತ್ರಭಾಗವೂ ಪೂರ್ಣವಾಯಿತು.

## ಅನುಬಂಧ ಚತುಷ್ಟಯ

ಅಸ್ಪಷ್ಟವಾದುದನ್ನೂ ಸ್ಪಷ್ಟವಾಗಿ ತಿಳಿಸುತ್ತದೆ "ವಾಜಿ"ಗಳ ಮಂತ್ರಸಂಗ್ರಹದ ನಿರ್ಣಾಯಕವಾದ ಈ ಕೊನೆಯ ಭಾಗ. ಈ ಭಾಗಕ್ಕೆ ವಿದ್ವಾಂಸರಾದ ಕೆಲವು ಶಿಷ್ಯರ ಅಪೇಕ್ಷೆಯಂತೆ ಅವರನ್ನು ಸಂತೋಷಪಡಿಸುವ ಸಲುವಾಗಿಯೇ ಈ ರೀತಿ ವ್ಯಾಖ್ಯಾನವನ್ನು ವಿಸ್ತರಿಸಲಾಗಿದೆ. ಇದು ವಿಶ್ವಕ್ಕೆ ಮಿತ್ರನಂತೆ- ಇದನ್ನು ರಚಿಸಿದವನೂ ವಿಶ್ವಕ್ಕೆ ಮಿತ್ರ ಮತ್ತು ವಿಶ್ವಾಮಿತ್ರರ ಗೋತ್ರದಲ್ಲಿ ಜನಿಸಿದವ. ಇದೆಲ್ಲಕ್ಕೂ ಕಾರಣ ಆ ವಾಜಿಮುಖನಾಗಿರುವ ದೇವರ – ಕುದುರೆಯ ಮುಖದಂತೆ ಹಯಗ್ರೀವನಾಗಿ ಅವತರಿಸಿ, ವೇದ – ವೇದಾರ್ಥಗಳನ್ನು ಉದ್ಧರಿಸಿ ಲೋಕ ರಕ್ಷಕನಾದ ಮಹಾವಿಷ್ಣುವಿನ ಅನುಗ್ರಹ ಮಾತ್ರ.

## ಈಶಾವಾಸ್ಯದ ಕೆಲವು ವೈಶಿಷ್ಟ್ಯಗಳು

ಸುಖದುಃಖಗಳೆಲ್ಲವನ್ನೂ ಅನುಭವಿಸುವ ಈ ಜೀವಾತ್ಮಗಳೆಲ್ಲ ಒಂದೇ, ಬೇರೆ ಬೇರೆಯಲ್ಲ- ಹಾಗೂ ಸಂಸಾರದಲ್ಲಿ ಸಿಕ್ಕಿಕೊಂಡಿರುವ ಜೀವಾತ್ಮಗಳೇ ಶ್ರೇಷ್ಠವಾದ ಸ್ಥಿತಿಯನ್ನು ಪಡೆಯಬಹುದು ಅಥವಾ ಪರಮಾತ್ಮ ಎನಿಸಬಹುದು. ನಿಜವಾಗಿ ಪರಮಾತ್ಮನೇ ಈ ಜೀವಗಳೆಲ್ಲ. ಈಗ ಇವು ಪರಮಾತ್ಮನಿಗಿಂತ ಬೇರೆಯಾಗಿ ಇವೆ ಅಷ್ಟೆ. ಇಂತಹ ಮತ್ತು ಇವೇ ಮುಂತಾದ ಜೈನ - ಬೌದ್ಧವಾದಗಳನ್ನು ಅನುಸರಿಸುವವರಿಗೂ, ಮುಕ್ತಿಯನ್ನು ಹೊಸದಾಗಿ ಏನೂ ಸಂಪಾದಿಸಬೇಕಿಲ್ಲ, ಇದ್ದಲ್ಲೇ ಮುಕ್ತಿ, ಈಲೋಕ ಹಾಗೂ ಸಂಸಾರದ ಈ ಜಂಜಡಗಳೆಲ್ಲವೂ ಬರಿಯ

---

1. ನಮ ಇತ್ಯೇವ ವಾದಿನಃ ಮ. ಭಾ. ಶಾಂ. ೩೩೭. ೪೦.

ಭ್ರಮೆ, ಹಾಗೂ ಸುಳ್ಳು, ಎಂದೆಲ್ಲ ಬರೆದಂತೆ ಓದಿ ಹೇಳಿಕೊಡುವವರಿಗೂ ಈ ವಾಜಸನೇಯ ಮಂತ್ರಸಂಗ್ರಹದ ಕೊನೆಯ 'ಈಶಾ' ಮುಂತಾದ ಅನುವಾಕಭಾಗ ಪ್ರಬಲ ಪ್ರತಿಕಕ್ಷಿಯಲ್ಲವೇ?

**ಸಮಾಪ್ತಿವಾಕ್ಯ ಗ್ರಂಥಕರ್ತರ ಹಿರಿಮೆ**

ಇಂತು ಕವಿ ಹಾಗೂ ತಾರ್ಕಿಕರಲ್ಲಿ ಸಿಂಹದಂತೆ ಪರಾಕ್ರಮಿಯೆನಿಸಿ,
ಎಲ್ಲ ವಿದ್ಯೋಪವಿದ್ಯೆಗಳನ್ನೂ ತನ್ನ ವಶದಲ್ಲಿಟ್ಟುಕೊಂಡಿರುವ, ಈ
ರೀತಿ ಸಂಪನ್ನನಾಗಿ ವೇಂಕಟನಾಥನೆಂದು ನಾಮಾಂಕಿತನಾದ,
ಹಾಗೂ ಸಂಪನ್ನತೆಯ ಗುರುತಾಗಿ
'ವೇದಾಂತಾಚಾರ್ಯ' ಎಂಬ ಬಿರುದು
ಪಡೆದಿರುವವನ ಕೃತಿಗಳಲ್ಲಿ

ಈಶಾವಾಸ್ಯೋಪನಿಷತ್ತಿನ ಭಾಷ್ಯವು ಮುಗಿದುದು



# ಈಶಾವಾಸ್ಯಪ್ರಕಾಶಿಕೆ

## ಅವತಾರಿಕೆ

ಅಗ್ನಿ ಶಬ್ದದಿಂದ ಹೇಳಲ್ಪಡುವ ಪರಮಾತ್ಮನನ್ನು ಕುರಿತು ನನ್ನ ಇಷ್ಟವೆಲ್ಲವನ್ನೂ ನೆರವೇರಿಸಿಕೊಡು ಹಾಗೂ ಇಷ್ಟವಲ್ಲದುದನ್ನು ದೂರಮಾಡು ಎಂದು ಪ್ರಾರ್ಥಿಸಿಕೊಳ್ಳುತ್ತಾನೆ.

## ಈ ನಾಲ್ಕು ಮಂತ್ರಗಳು ಬೃಹದಾರಣ್ಯಕದಲ್ಲೂ ಇವೆ

ಬೃಹದಾರಣ್ಯಕದಲ್ಲೂ ಏಳನೆಯ ಅಧ್ಯಾಯದಲ್ಲಿ "ಯಾವಾಗ ನಿಶ್ಚಯವಾಗಿ ಈ ಜೀವಾತ್ಮನು ಈ ಲೋಕದಿಂದ ಬೇರೆ ಲೋಕಕ್ಕೆ ಶರೀರ ಬಿಟ್ಟು ಹೊರಡುವನೋ; (ಆಗ) ಅವನು ವಾಯುವನ್ನು ಸೇರುತ್ತಾನೆ."[1] ಇವೇ ಮುಂತಾದ ವಚನಗಳಿಂದ "ಅರ್ಚಿ" ಮೊದಲಾದ ಮಾರ್ಗವನ್ನು ಉಪದೇಶಿಸಲಾಗಿದೆ. ನಂತರ ಅಧ್ಯಾಯ ಕೊನೆಯಲ್ಲಿ "ಹಿರಣ್ಮಯೇನಪಾತ್ರೇಣ" ಮುಂತಾದ ಈ ನಾಲ್ಕು ಮಂತ್ರಗಳೂ ಇದೇಕ್ರಮದಲ್ಲಿ ಪಠಿಸಲ್ಪಟ್ಟಿವೆ.

## "ನಯ, ಸುಪಥಾ, ರಾಯೇ" ಮತ್ತೊಂದರ್ಥ

**ನಯ** – ತಲುಪಿಸು ಎಂದರ್ಥ.

**ಸುಪಥಾ** – 'ಅರ್ಚಿ' ಮುಂತಾದ ಅಂಶಗಳಿರುವ ಮಾರ್ಗದಲ್ಲಿ ಎಂದರ್ಥ. ಬೃಹದಾರಣ್ಯಕದ ಪಾಠ ಪ್ರಕಾರ "ಅರ್ಚಿ" ಮುಂತಾದ ಅಂಶಗಳಿರುವ ಮಾರ್ಗವು, ಇಲ್ಲಿ ಅರ್ಥವಾಗಿ ಕಂಡುಬರುವುದೇ ಇದಕ್ಕೆ ಕಾರಣ.

"ಪ್ರಕಾಶ, ಹಗಲು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ವಾಯು, ಸೂರ್ಯ, ಚಂದ್ರ ಮತ್ತು ವಿದ್ಯುತ್ಪುರುಷ, ವರುಣ, ಇಂದ್ರ, ಪ್ರಜಾಪತಿ ಇವರು ಹೊತ್ತುಕೊಂಡು ಮುನ್ನಡೆಸುವರು ಇವರನ್ನು ಆತಿವಾಹಿಕರು ಎಂದು ಕರೆಯುತ್ತಾರೆ"[2] ಎಂದು ಪೂಜ್ಯರೂ ಹಿರಿಯರೂ ಆದ ಅಮ್ಮಾಳ್‌ವರದಾಚಾರ್ಯರು[3] 'ತತ್ತ್ವಸಾರ' ಗ್ರಂಥದಲ್ಲಿ ಸಂಗ್ರಹಿಸಿ ತಿಳಿಸಿರುವ ರೀತಿಯಲ್ಲಿ ತಿಳಿಯಬೇಕು.

ಈ ವಿಧವಾಗಿ ಅರ್ಥಮಾಡುವುದೂ ಸಹ ವೇದಾಂತಾಚಾರ್ಯರಿಗೆ ಅಭಿಮತವಾದ ವಿಷಯವೇ.

## ಪರಮಾತ್ಮನೇ ಸಜ್ಜನರ ಸಂಪತ್ತು

**ರಾಯೇ** – ಇಲ್ಲಿ ನಾವು ಪಡೆಯಬೇಕಾದ ವಸ್ತು ಪರಮಾತ್ಮನೇ ಎಂದು ವಿವರಿಸಲಾಗಿರುವುದರಿಂದ ಆ ಪರಮಾತ್ಮನೇ ಶಾಶ್ವತವಾದ ಹಾಗೂ ದಿವ್ಯವಾದ ಧನ. ಆದುದರಿಂದಲೇ ಅಲ್ಲಲ್ಲಿ ಹೀಗೆ ಹೇಳಲಾಗಿದೆ –
'ಹಣ ನನ್ನದು ನಿನ್ನ ತಾವರೆಯಂತಹ ಪಾದವೇ'.[4]

---

1. ಯದಾ ವೈ ಪುರುಷೋಽಸ್ಮಾಲ್ಲೋಕಾತ್ಪ್ರೈತಿ ಸ ವಾಯುಮ್. ಬೃ. ೭. ೧೦. ೧.
2. ಅರ್ಚಿರಹಸ್ಸಿತಪಕ್ಷಾನುದಗಯನಾಬ್ದೌ ಚ ಮಾರುತಾರ್ಕೇನ್ದೂನ್।
ಅಪಿ ವೈದ್ಯುತವರುಣೇಂದ್ರಪ್ರಜಾಪತೀನಾತಿವಾಹಿಕಾನಾಹುಃ ॥ ತತ್ತ್ವಸಾರ. ೧೦೨.
3. ಭಗವದ್ರಾಮಾನುಜರ ಸೋದರಿಯಾದ ಕಮಲೆಯ ಪುತ್ರರಾದ ವರದವಿಷ್ಣ್ವಾಚಾರ್ಯರ ಮೊಮ್ಮಕ್ಕಳು. ದೇವರಾಜ ಗುರುವಿನ ಪುತ್ರರು. ಎಂಗಳಾಳ್ವಾ‌ರ್ ಎಂದು ಪ್ರಸಿದ್ಧರಾದ ವಿಷ್ಣುಚಿತ್ತರಲ್ಲಿ ಶ್ರೀಭಾಷ್ಯವನ್ನು ಅಧ್ಯಯನ ಮಾಡಿದವರು. ಶ್ರುತಪ್ರಕಾಶಿಕಾಚಾರ್ಯರೆಂದು ಪ್ರಸಿದ್ಧರಾದ ಶ್ರೀಸುದರ್ಶನಸೂರಿಗಳಿಗೆ ಆಚಾರ್ಯರಾದವರು. ಇವರು ಹದಿನೈದು ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲೆಲ್ಲಾ ತತ್ತ್ವಸಾರ ಅಮೂಲ್ಯ ಗ್ರಂಥ.
4. ಧನಂ ಮದೀಯಂ ತವ ಪಾದಪಂಕಜಮ್. ಸ್ತೋ. ರ. ೩೦.

"ಯಾವನು ಯಾವಾಗಲೂ ಅಚ್ಯುತನ ಪಾದಾರವಿಂದಗಳ ಜೋಡಿಯೆಂಬ ಚಿನ್ನದಲ್ಲೇ ಬಹಳ ಆಸೆಯಿದ್ದುದರಿಂದ"[1] "ಕೆಟ್ಟ ಪಾಳೆಗಾರರ ಮನೆಬಾಗಿಲ ಹೊರಜಗುಲಿಯಲ್ಲಿ ಕಷ್ಟದಿಂದ ಕೂರುವ ಕೆಲಸಕ್ಕೆ ಇದೋ ದೂರದಲ್ಲೇ ಕೈ ಮುಗಿಯುವೆನು; ಏಕೆಂದರೆ, ಕಾಡಿಗೆಯಂತೆ ಕಪ್ಪಗಿದ್ದು ಅರ್ಜುನನ ರಥದಲ್ಲಿ ಅಲಂಕಾರವಾಗಿ ಕುಳಿತಿರುವ, ಹಾಗೂ ಎಂದಿಗೂ ಅಪಾಯವಿಲ್ಲದ ಶಾಶ್ವತವಾದ (ಕೃಷ್ಣಪರಮಾತ್ಮ ಎಂಬ) ಧನವು ನನಗಿದೆ"[2]

"ನನಗೆ ತಂದೆ ಸಂಪಾದಿಸಿದ್ದು ಏನೊಂದೂ ಇಲ್ಲ. ನಾನೂ ಏನೋದೂ ಸಂಪಾದಿಸಿಕೊಂಡಿಲ್ಲ. ನನಗಿರುವ ಆಸ್ತಿ ಎಂದರೆ (ಕಂಚಿಯ) ಹಸ್ತಿಗಿರಿಯ ತುದಿಯಲ್ಲಿ, ಪಿತಾಮಹ – ಅಜ್ಜ (ಎಂದರೆ ಪ್ರಪಂಚಕ್ಕೆ ಅಜ್ಜನೆನಿಸಿರುವ ಚತುರ್ಮುಖ ಬ್ರಹ್ಮ) ಸಂಪಾದಿಸಿಟ್ಟಿರುವ ವಸ್ತು. (ಪರಮಾತ್ಮನ ರೂಪವಾದ ವರದರಾಜಸ್ವಾಮಿಯೆಂಬ ಅರ್ಚಾಮೂರ್ತಿ) ಒಂದೇ"[3] ಎಂದು.

## ಭಾಷ್ಯಾಂತರಗಳ ವಿವರಣೆ

ಇಲ್ಲಿ ಶಾಂಕರ ವ್ಯಾಖ್ಯಾನವೂ ಹೀಗೆಯೇ ಇದೆ ಎಂಬುದು ಗಮನಾರ್ಹ.

**ಸುಪಥಾ** – ಎಂದರೆ ಒಳ್ಳೆಯ ದಾರಿಯಿಂದ ಎಂದರ್ಥ. ಒಳ್ಳೆಯ ಎಂಬ ಅಂಶವು ದಕ್ಷಿಣಮಾರ್ಗವನ್ನು ಬಿಟ್ಟು ಎಂಬ ಅರ್ಥವನ್ನು ಸೂಚಿಸುತ್ತದೆ. (ಈ ಲೋಕಕ್ಕೂ ಲೋಕಾಂತರಗಳಿಗೂ) ಮತ್ತೆಮತ್ತೆ ಬಂದು ಹೋಗಲೇಬೇಕಾಗುವ ಈ ದಕ್ಷಿಣಮಾರ್ಗದಲ್ಲಿ ನಾನು ಬಳಲಿ ಬೇಸತ್ತಿರುವೆನು. ಆದುದರಿಂದ ಈ ಸಂಸಾರಕ್ಕೆ ಮತ್ತೆ ಮತ್ತೆ ಬಂದು ಹೋಗುವ ಕೆಲಸವಿಲ್ಲದಂತಹ ಒಳ್ಳೆಯ ಮಾರ್ಗದಲ್ಲಿ ನನ್ನನ್ನು ನೀನೇ ಕರೆದೊಯ್ ಎಂದು ನಿನ್ನನ್ನು ಬೇಡಿಕೊಳ್ಳುವೆನು.

**ರಾಯೇ** – ಚಿನ್ನದನಿಧಿಯಂತೆ ಹೊಳೆಯುವ ವ್ಯಕ್ತಿಯಾದ ನಿನ್ನನ್ನು ಪಡೆಯಲು ಎಂಬುದು ಭಾವಾರ್ಥ.

**ಅಸ್ಮಾನ್** – ನಿನ್ನನ್ನಲ್ಲದೆ ಬೇರೆ ಫಲವನ್ನು ಬೇಡದ ಹಾಗೂ ನಿನ್ನನ್ನಲ್ಲದೆ ಬೇರೆ ಸಹಾಯವನ್ನು ಬೇಡದ ನಮ್ಮನ್ನು.

ಇಲ್ಲಿ ನಮ್ಮನ್ನು ಎಂದರೆ ನನ್ನನ್ನು ಮಾತ್ರವಲ್ಲ ನನ್ನೆಲ್ಲ ಬಂಧು ಬಳಗದ ಜನರನ್ನೂ ಎಂಬ ಅರ್ಥ ಬಹುವಚನದಿಂದ ತಿಳಿದು ಬರುತ್ತದೆ.

## ದೇವನು ಯಾರು?

**ದೇವ– (ಭಾ) ವಿಚಿತ್ರಕ್ರೀಡಾಯುಕ್ತ** – ಅಚ್ಚರಿಗೊಳಿಸುವಂತಹ ಲೀಲೆಯುಳ್ಳವನೇ!

ಪ್ರಪಂಚವೆಲ್ಲದರ ಹುಟ್ಟು, ಬದುಕು, ಸಾವು, ಅವೆಲ್ಲದರ ಒಳಹೊಗುವಿಕೆ, ಅವುಗಳನ್ನೆಲ್ಲ ತನ್ನ ಅಂಕೆಯಲ್ಲಿಟ್ಟುಕೊಳ್ಳುವಿಕೆ, ತನ್ನನ್ನು ಯಾರು ಆಸರೆಯಾಗಿ ಬೇಡುತ್ತಾರೋ; ಅವರೆಲ್ಲರನ್ನೂ (ಸಂಸಾರ ಬಂಧನದಿಂದ) ಬಿಡಿಸುವಿಕೆ, ಇವೇ ಮುಂತಾದ ಇತರರು ಮಾಡಲಾಗದಂತಹ ಕೆಲಸಗಳನ್ನು ಲೀಲಾಜಾಲವಾಗಿ ಮಾಡುವವನು.

---

1. ಯೋ ನಿತ್ಯಮಚ್ಯುತ ಪದಾಂಬುಜಯುಗ್ಮರುಕ್ಮವ್ಯಾಮೋಹತಃ. ವೈ. ಸ್ತ. ೧.

2. ದುರೀಶ್ವರದ್ವಾರಬಹಿರ್ವಿತರ್ದಿಕಾ ದುರಾಸಿಕಾಯೈ ರಚಿತೋಽಯಮಂಜಲಿಃ। ಯದಂಜನಾಭಂ ನಿರಪಾಯಮಸ್ತಿ ಮೇ ಧನಂಜಯಸ್ಯಂದನಭೂಷಣಂ ಧನಮ್ ॥ ವೈ. ಪಂ. ೧.

3. ನ ಮೇ ಪಿತ್ರಾರ್ಜಿತಂ ಕಿಂಚಿತ್, ನ ಮಯಾ ಕಿಂಚಿನಾರ್ಜಿತಂ । ಅಸ್ತಿ ಮೇ ಹಸ್ತಿಶೈಲಾಗ್ರೇ ವಸ್ತು ಪೈತಾಮಹಂ ಧನಮ್ ॥ ವೈ. ಪಂ. ೫.

ಮಂತ್ರ ಹದಿನೆಂಟು

"ಯಾವನು ಚತುರ್ಮುಖ ಬ್ರಹ್ಮನನ್ನು ಮೊದಲು ಸೃಷ್ಟಿಸುವನೋ, ಯಾವನು ಅವನಿಗಾಗಿ ವೇದಗಳನ್ನೂ ಉಪದೇಶಿಸುವನೋ ತನ್ನ ಬಗ್ಗೆ ಸ್ಪಷ್ಟವಾದ ತಿಳುವಳಿಕೆ ಮೂಡುವಂತೆ ಮಾಡುವನೋ ಅಥವಾ ಜೀವಾತ್ಮಗಳ ಬುದ್ಧಿಯೆಲ್ಲವನ್ನೂ ತಿಳಿಗೊಳಿಸುವನೋ ಅಂತಹ ಪ್ರಸಿದ್ಧನಾದ ದೇವನೊಬ್ಬನನ್ನೇ ಮುಕ್ತಿ ಬಯಸುವ ನಾನು ಮರೆಹೊಗುವೆನು"[1] ಎಂಬ ಮಂತ್ರದಲ್ಲೂ ದೇವ ಎಂಬ ಶಬ್ದಕ್ಕೆ ಇದೇ ಅರ್ಥ.

ನಿಘಂಟುವಿನ ಪ್ರಕಾರ ವಯುನ ಎಂದರೆ 'ತಿಳುವಳಿಕೆ' ಎಂದರ್ಥ. ಆದರೂ ಇಲ್ಲಿ ವಯುನ ಶಬ್ದವು ಲಕ್ಷಣಾ ವೃತ್ತಿಯಿಂದ[2] 'ಉಪಾಯಗಳು' ಎಂಬರ್ಥವನ್ನು ತಿಳಿಸುತ್ತದೆ.

"ವೇದಗಳನ್ನು ಅವನಿಗೆ ಯಾವನು ಉಪದೇಶಿಸುವನೋ" ಎಂಬ ಮಂತ್ರದ ಪದಗಳಿಗೂ ಇದೇ ಅಭಿಪ್ರಾಯ.

## ದೇವನೇ ನಮ್ಮನ್ನು ಪಾಪಗಳಿಂದ ಬಿಡಿಸಲಿ

"ಮುಕ್ತಿಗಾಗಿ ಆಶಿಸುವ ನಾನು ಪರಮಾತ್ಮನನ್ನು ಶರಣು ಹೋಗುವೆನು" ಎಂಬ ಮಂತ್ರಭಾಗದಲ್ಲಿ 'ಮುಕ್ತಿಗಾಗಿ ಆಶಿಸುವ' ಎಂಬ ಪದವನ್ನು ವಿವರಿಸುವ ರೀತಿಯಲ್ಲಿ ಹೇಳುತ್ತಿದ್ದಾನೆ. 'ಯುಯೋಧಿ ಅಸ್ಮತ್ ಜುಹುರಾಣಂ ಏನಃ' ಎಂದು. ಜುಹುರಾಣಂ ಎಂಬಲ್ಲಿ 'ಹೃ' ಎಂಬ ಮೂಲ ಶಬ್ದವು 'ಕುಟಿಲ' ಎಂಬ ಅರ್ಥದಲ್ಲಿದೆ.

'ಜುಹುರಾಣಂ' ಎಂದರೆ ವಕ್ರವಾಗಿ ಬಂಧಕವಾಗಿರುವ ಎಂದು ಅರ್ಥ. ಅಥವಾ ಅದರ ವಕ್ರತೆಯನ್ನು ಇಂತಿಷ್ಟೇ ಎಂದು ನಿರ್ಣಯಿಸಲು ಸಾಧ್ಯವಿಲ್ಲವಾಗಿ ಅದು ನಮಗೆ ಬಹಳ ತೊಂದರೆ ಕೊಡುತ್ತಿದೆ ಎಂದು ಭಾವಾರ್ಥ. ಜುಹುರಾಣಂ ಎಂಬ ವಿಶೇಷಣದಿಂದ ಸಾಂಸಾರಿಕ ದುಃಖದ ವೇಗವೂ ತೀವ್ರತೆಯೂ ತಿಳಿದು ಬರುತ್ತದೆ.

**ಏನಃ** – ನಿನ್ನ ಉಪಾಸನೆಗೆ ಅಡ್ಡಿಯಾಗಿರುವ ಅಥವಾ ನಿನ್ನನ್ನು ಪಡೆಯಲು ಅಡ್ಡಿಯಾಗಿರುವ ಎಂದರ್ಥ. 'ಏನಃ' ಎಂಬಲ್ಲಿರುವ ಏಕವಚನ ಪಾಪಗಳೆಲ್ಲಕ್ಕೂ ಸೂಚಕ. ವಾಸ್ತವವಾಗಿ ಇಲ್ಲಿ ಹೋಗಲಾಡಿಸಬೇಕಾದ ಪಾಪವೆಷ್ಟು? ಇದು ಸರ್ವಶಕ್ತನಾದ ನಿನಗೆ ಸಾಟಿಯಲ್ಲ. ಸರ್ವಶಕ್ತನಾದ ನಿನಗೆ ಇದು ಲಕ್ಷ್ಯವೇ ಅಲ್ಲ. 'ನಮಃ' ಎಂಬ ಮಾತಿಗೂ ಇದು ಸರಿಯಾದ ಎದುರಾಳಿಯಲ್ಲ. ಆ ನಮಃ ಎಂಬ ಮಾತೋ ಬಹಳ ಹೆಚ್ಚಿನದು ಎಂದು ಏಕವಚನದ ಭಾವಾರ್ಥ.

**ಅಸ್ಮತ್** – ನಮ್ಮ ಕಡೆಯಿಂದ.

**ನಮ ಉಕ್ತಿಂ, ತೇ** – ನೀನು ಎಲ್ಲ ಇಷ್ಟವನ್ನೂ ಪಡೆದೇ ಇರುವುದರಿಂದಲೂ, ಸ್ವಾಭಾವಿಕವಾಗಿಯೇ ಎಲ್ಲದರ ಒಡೆಯನಾಗಿರುವುದರಿಂದಲೂ 'ನಮಃ' ಎಂಬ ಮಾತಿಗಿಂತ ಬೇರೆ ಏನನ್ನೂ ಅಪೇಕ್ಷಿಸದಿರುವ ನಿನಗೆ ಮಾನಸಿಕವಾಗಿಯಾಗಲಿ ದೈಹಿಕವಾಗಿಯಾಗಲಿ ನಮಸ್ಕಾರ ಮಾಡದಿದ್ದರೂ ನಮಃ ಎಂಬ ಮಾತಿನಿಂದಲೇ ನೀನು ಪ್ರಸನ್ನನಾಗುವಿ ಎಂಬ ಅರ್ಥವನ್ನು 'ಉಕ್ತಿ' ಶಬ್ದವು ಸೂಚಿಸುತ್ತದೆ.

ಯಾವಾಗಲೂ ಕೈಮುಗಿಯುತ್ತಾ ಸಂತೋಷದಿಂದ ನಮಃ ಎಂಬ ಮಾತನ್ನು ಆಡುವೆವು ಎಂದು ತಾತ್ಪರ್ಯ.[3]

---

1. ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ।
ತಂ ಹ ದೇವಂ ಆತ್ಮಬುದ್ಧಿಪ್ರಸಾದಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ॥ ಶ್ವೇ. ೬. ೧೮.
2. ಶಬ್ದದ ನೇರವಾದ ಅರ್ಥವೊಂದರೊಡನೆ ಸಂಬಂಧವೇ ಲಕ್ಷಣಾ.
3. ಕೃತಾಂಜಲಿಪುಟಾ ಹೃಷ್ಟಾ ನಮ ಇತ್ಯೇವ ವಾದಿನಃ. ಮ. ಭಾ. ಶಾಂ. ೩೩೭. ೪೦.

# ನಿಗಮನ

## ಈಶಾವಾಸ್ಯವೂ ಗೀತೆಯೂ

ಈ ಈಶಾವಾಸ್ಯ ಎಂಬ 'ಅನುವಾಕ' ದಲ್ಲಿ ಮೊದಲ ಎಂಟು ಮಂತ್ರಗಳಿಂದ ಜಡ-ಜೀವಿಗಳೆಂಬ ಎರಡು ಸೀಮಿತ ತತ್ತ್ವಗಳನ್ನೂ, ಕರ್ಮಯೋಗ ಮತ್ತು ಜ್ಞಾನಯೋಗ ಎಂಬ (ನೇರವಲ್ಲದ) ಎರಡು ಉಪಸಾಧನಗಳನ್ನೂ ಕುರಿತು ಮುಖ್ಯವಾಗಿ ಹೇಳಲಾಗಿದೆ. ಅನಂತರದ ಎಂಟು ಮಂತ್ರಗಳಿಂದ ಸೀಮಿತಗೊಳ್ಳದ ಉತ್ತಮ ತತ್ತ್ವವೆನಿಸಿದ ಪರಮಾತ್ಮನನ್ನು ಕುರಿತಿರುವ ಭಕ್ತಿಯೋಗವೆಂಬ ನೇರವಾದ ಸಾಧನವನ್ನು ತಿಳಿಸಲಾಗಿದೆ. ಉಳಿದ ಎರಡು ಮಂತ್ರಗಳಿಂದ ಎಲ್ಲರಿಗೂ ಎಲ್ಲ ವಿಧವಾದ ಫಲಗಳಿಗೂ ಮುಖ್ಯ ಸಾಧನವೆನಿಸಿದ 'ಶರಣಾಗತಿ' ಯನ್ನು ಮುಖ್ಯವಾಗಿ ಹೇಳಲಾಗಿದೆ.

ಹೀಗೆ ಗೀತೆಯ ಮೊದಲ ಆರು ಅಧ್ಯಾಯಗಳೂ ಇಲ್ಲಿಯ ಮೊದಲ ಎಂಟು ಮಂತ್ರಗಳ ವಿವರಣೆ. ಎರಡನೆಯ ಆರು ಅಧ್ಯಾಯಗಳು ನಂತರದ ಎಂಟು ಮಂತ್ರಗಳ ವಿವರಣೆ. ಮೂರನೆಯ ಆರು ಅಧ್ಯಾಯಗಳು ಕೊನೆಯ ಎರಡು ಮಂತ್ರಗಳ ವಿವರಣೆ. ಮೂರನೆಯ ಆರು ಅಧ್ಯಾಯಗಳಲ್ಲಾದರೋ ಮೊದಲೆರಡು ಆರಾರು ಅಧ್ಯಾಯಗಳಲ್ಲಿ ಹೇಳಿರುವ ತತ್ತ್ವ – ಉಪಾಯ – ಪುರುಷಾರ್ಥಗಳ ಬಗ್ಗೆ ಕೆಲವು ವಿವರಣೆಗಳನ್ನು ಕೊಟ್ಟು ಶರಣಾಗತಿಯನ್ನೇ ಮುಖ್ಯವಾಗಿ ವಿಧಾನಮಾಡಲಾಗಿದೆ. ಅದರಲ್ಲೂ 'ಚರಮಶ್ಲೋಕದ' ಮೊದಲ ಅರ್ಧಭಾಗವು ಹದಿನೇಳನೇ ಮಂತ್ರದಲ್ಲಿ ಹೇಳಿರುವ ಆಚರಣೆಯನ್ನೇ ವಿಧಿಸುತ್ತದೆ. ನಂತರದ ಅರ್ಧಭಾಗವಾದರೋ "ನಮ್ಮ ಕುಟಿಲ ಪಾಪಗಳನ್ನು ಹೊಡೆದುರುಳಿಸು" ಎಂಬ ಹದಿನೆಂಟನೇ ಮಂತ್ರದ ಪ್ರಾರ್ಥನೆಯ ಅಂಶವನ್ನು ನೆರವೇರಿಸುವ (ಪರಮಾತ್ಮನ) ಪ್ರತಿಜ್ಞೆಯನ್ನು ತಿಳಿಸಿ, (ನಮ್ಮ) ದುಃಖವನ್ನೆಲ್ಲ ಎತ್ತಿ ಒಗೆಯುವ ಅಂಶವನ್ನು ತಿಳಿಸುತ್ತಿದೆ. ಹೀಗೆ ಚರಮಶ್ಲೋಕವು ಈ ಎರಡು ಮಂತ್ರಗಳಿಗೆ "ಉಪಬೃಂಹಣ" (ಪೋಷಕ) ವೇ ಎಂಬುದು ಸಿದ್ಧವಾಗುವುದು.

## ಉಪಸಂಹಾರ

ಹೀಗೆ ಶ್ರೇಷ್ಠವಾದ (ಪರಮಾತ್ಮ) ತತ್ತ್ವ ಮತ್ತು ಅದರ ಆಸ್ತಿಗಳು, ಅವೆಲ್ಲದರ ಸಂಬಂಧ, ಆ ಪರಮಾತ್ಮನ ಉಪಾಸನೆ, ಅವನಿಗೆ ಶರಣಾಗುವುದು, ಅದರ ಫಲ ಮತ್ತು ಆ ಫಲದ ವಿಶೇಷಗಳು ಈ ಎಲ್ಲವನ್ನೂ ಸಂಗ್ರಹವಾಗಿ ತಿಳಿಸಿ, ಈ 'ವಾಜಸನೇಯ ಸಂಹಿತೆ' ಯು ಚೆನ್ನಾಗಿಯೇ ಮುಗಿಯಿತು.

## ಗ್ರಂಥಕರ್ತರ ಕೊನೆಯ ಮಾತುಗಳು

(ನನಗೆ) ವೇದಾಂತ ಶಾಸ್ತ್ರದ ಗುರುಗಳಾದವರನ್ನು ಧ್ಯಾನಿಸಿ, ಸ್ವಚ್ಛವಾದ ಮನಸ್ಸಿನಿಂದ, ಶ್ರೀವತ್ಸಾಂಕನಾದ (ನಾನು) ವಾಜಸನೇಯ ವೇದಾಂತದ ಸಾರವಾದ ಅರ್ಥವನ್ನು ತೋರಿಸಿರುವೆನು.

ಇಲ್ಲಿ ಗುಟ್ಟಾಗಿಡಬೇಕಾದ ಅಂಶವನ್ನು ವಿವರಿಸಿರಬಹುದು; ವಿವರಣೆಗಳಲ್ಲಿ ಹೆಚ್ಚು ಕಡಿಮೆ ಆಗಿರಬಹುದು, ಇಂತಹದೆಲ್ಲವನ್ನೂ ದೇವರೂ ಹಿರಿಯರೂ ದಯವಿಟ್ಟು ಕ್ಷಮಿಸುವಿರೆಂದು ನಂಬಿರುವೆನು.

## ಸಮಾಪ್ತಿವಾಕ್ಯ

ಇಂತು ಶ್ರೀಯುತವಾದ ಎಲ್ಲ ಸಿದ್ಧಾಂತಗಳಲ್ಲೂ ಉಭಯವೇದಾಂತಗಳಲ್ಲೂ ಆಚಾರ್ಯನಾದ 'ಪರಮಹಂಸ' ಎಂಬ
ರೀತಿಯ ಸನ್ಯಾಸಿಗಳಲ್ಲೂ ಆಚಾರ್ಯಸ್ಥಾನವನ್ನಲಂಕರಿಸಿರುವ 'ಶ್ರೀವತ್ಸಾಂಕ' ಎಂಬ
ಶ್ರೀಯುತ ನಾರಾಯಣ ಮುನೀಂದ್ರನ ಕೃತಿಗಳಲ್ಲಿ ಈಶಾವಾಸ್ಯ ಪ್ರಕಾಶಿಕೆ ಮುಗಿದುದು.



## ಪದಾರ್ಥ ದೀಪಿಕೆ

**ವಯುನಾನಿ** - ನಾಲ್ಕುವಿಧ ಪುರುಷಾರ್ಥಗಳನ್ನೂ.

**ಭೂಯಿಷ್ಠಾಂ** - ಬೇರೆ ದಾರಿಯಿಲ್ಲದಿರುವಿಕೆಯೇ ಮುಂತಾದ ಕೆಲವು ಗುಣಗಳ ಸಹಕಾರದಿಂದ ಉತ್ತಮವಾಗಿರುವ.

**ತೇ ನಮಃ ವಿಧೇಮ** - ನಮಃ ಎಂಬ ಮಾತೊಂದರ ಅಪಶ್ಯಕತೆಯೂ ಇಲ್ಲದೆಯೇ ನಮ್ಮನ್ನೆಲ್ಲ ಕಾಪಾಡುವ ನಿನಗೆ ನಮಸ್ಕಾರ.

**ಸಮಾಪ್ತಿ ವಾಕ್ಯ**

ಇಲ್ಲಿಗೆ ಶ್ರೀಭಾಷ್ಯಜಗನ್ನಾಥಾಚಾರ್ಯರ ಪುತ್ರನಾದ ರಾಮಾನುಜಾಚಾರ್ಯನ ಕೃತಿಗಳಲ್ಲಿ
ದಶಾವತಾರಗಳಂತಹ ದಶೋಪನಿಷತ್ತುಗಳ 'ಪದಾರ್ಥದೀಪಿಕೆ' ಎಂಬ
ವಿವರಣೆಯಲ್ಲಿ ಮೊದಲ ಅವತಾರವಾಗಿ ಈಶಾವಾಸ್ಯೋಪನಿಷತ್ತಿನ
ವಿವರಣೆ ಮುಗಿಯಿತು



ಮಂತ್ರ ಹದಿನೆಂಟು

# ಸುಬೋಧಿನೀ

## ಪೂರ್ವಾಪರ ಸಂಗತಿ

ಈ ಜಡಪ್ರಕೃತಿಗಿಂತ ಪ್ರತ್ಯೇಕವಾದ ಜೀವಾತ್ಮತತ್ತ್ವದ ಅನುಸ್ಮರಣೆ ಹಾಗೂ ಇವೆರಡಕ್ಕಿಂತ ಪ್ರತ್ಯೇಕನಾದ ಪರಮಾತ್ಮನ ಅನುಸ್ಮರಣೆ ಈ ಎರಡೂ ಅವಶ್ಯಕ ಎಂದು ಅದರ ರೀತಿಯನ್ನೂ ತಿಳಿಸಿ ಆಯಿತು. ಈಗ ಶರೀರ ವಿಯೋಗಾನಂತರ ಆಗುವ ದಿವ್ಯಮಾರ್ಗಗಮನದ ಚಿಂತನೆಯನ್ನು ಅದರ ಅವಶ್ಯಕತೆಯನ್ನೂ ಪರಮಾತ್ಮನ ಪ್ರಾರ್ಥನಾರೂಪವಾದ ಈ ಮಂತ್ರದಲ್ಲಿ ತಿಳಿಸಲಾಗುತ್ತದೆ.

## ಪದವಿವರಣೆ

**ಅಗ್ನೇ** – ಮೇಲೆ ಕರೆದೊಯ್ಯುವವನೇ!

**ರಾಯೇ** – ಮುಕ್ತರಾದವರಿಗೆ ಸಿಗುವಂತಹ ಸಂಪತ್ತಿಗಾಗಿ.

**ಅಸ್ಮಾನ್, ನಯ** – ನಮ್ಮನ್ನು ಕರೆದೊಯ್. ನಮ್ಮನ್ನು ಉದ್ಧರಿಸುವವನು ನೀನೇ, ನಮ್ಮ ಹೃದಯದೊಳಿರುವವ ನೀನೇ. ನಿನ್ನ ಅನುಗ್ರಹದಿಂದ ನೂರೊಂದನೆಯ ನಾಡಿಯ ಮೂಲಕ ಈ ದೇಹವನ್ನು ಬಿಟ್ಟು ಹೊರಟು, ಅರ್ಚಿರಾದಿಮಾರ್ಗದಿಂದ ನಿನ್ನ ಲೋಕವನ್ನೂ ನಿನ್ನನ್ನೂ ನಾನು ಸೇರಬೇಕು ಎಂದು ಭಾವಾರ್ಥ.

**ಏನಃ** – ಸಂಚಿತ ಹಾಗೂ ಪ್ರಾಮಾದಿಕವಾದ[1] ಪಾಪವನ್ನು ಎಂದರ್ಥ. ಮೋಕ್ಷಾಭಿಲಾಷಿಯಾದ ಉಪಾಸಕನಿಗೆ. ಪುಣ್ಯವೂ ಪಾಪದಂತೆ ಅಡ್ಡಿಯಾಗುವುದರಿಂದ ಪಾಪವೆನಿಸಿದೆ ಎಂಬುದನ್ನು ಇಲ್ಲಿ ಗಮನಿಸಬೇಕು.

**ಯುಯೋಧಿ** – ಬಿಡಿಸು. ಪಾಪ ಪುಣ್ಯಗಳನ್ನು ನನ್ನ ಶತ್ರುಮಿತ್ರರಲ್ಲಿ ಪ್ರತ್ಯೇಕ ಹಂಚಿ ಹೋಗಲಾಡಿಸು.[2]

**ವಯುನಾನಿ, ವಿದ್ವಾನ್,** – ಇಂತಹ ಪ್ರಾಯೋಗಿಕ ವಿಚಾರವನ್ನೆಲ್ಲ ಚೆನ್ನಾಗಿ ತಿಳಿದವನು ಆ ಪರಮಾತ್ಮನೊಬ್ಬನೇ.

**ನಮಉಕ್ತಿಂ, ವಿಧೇಮ** – ಸರ್ವಜ್ಞನಾದರೂ ಕಾರಣವಿಲ್ಲದೆ ಒಬ್ಬರ ಪುಣ್ಯಪಾಪಗಳನ್ನು ಮತ್ತೊಬ್ಬರಿಗೆ ಕೊಡಲಾರನು. ಆದುದರಿಂದ ಅವನಿಗೆ ಈಗ ನಮ್ಮ ಕೈಲಾಗುವ ನಮಸ್ಕಾರ ಮಾಡೋಣ. ಇದೇ ಕಾರಣದಿಂದ ನಮ್ಮ ಪಾಪಗಳನ್ನು ಅವನು ಪ್ರತ್ಯೇಕಗೊಳಿಸಿ ಬಿಡಿಸಲಿ ಎಂದು ಭಾವಾರ್ಥ.

### ಅಥವಾ

ನೀನೇ ನಮ್ಮನ್ನೆಲ್ಲ ನೋಡಿಕೋ. ನೀನೇ ಕಾಪಾಡು, ನಮ್ಮ ಬಳಿ ನಿನ್ನಲ್ಲಿಗೆ ಬರುವ ಶಕ್ತಿ ಸಾಧನ ಸಲಕರಣೆಗಳೇನೂ ಇಲ್ಲ. ಇದಿಷ್ಟು ಹೇಳಬಲ್ಲೆವಷ್ಟೆ. ನಿನ್ನ ಬಳಿ ಬರುವ ದಾರಿಯೂ ನಮಗೆ ತಿಳಿಯದು. ನೀನೊಬ್ಬ ಮಾತ್ರ ನಮಗೆ ಗೊತ್ತು. ನೀನೇ ನಮಗೆಲ್ಲವೂ ಆಗಿ ನಮಗೆ ಯಾವುದು ಸರಿದಾರಿಯೋ ಅದರಲ್ಲಿ ನೀನೇ ನಮ್ಮನ್ನು ಕರೆದೊಯ್. ಯಾವುದು ನಮಗೆ ಹಿತವೋ ಅದನ್ನೂ ನಾವು ಬಲ್ಲವರಲ್ಲ. ನಾವೆಲ್ಲ ಕೇವಲ ನಿನ್ನ ಆಟಿಕೆಯ ವಸ್ತುಗಳಷ್ಟೆ. ಜಗತ್ತಿನ ಈ ಸೃಷ್ಟಿಸ್ಥಿತಿ ಸಂಹಾರಗಳೇ ನಿನ್ನ ಆಟ. ಇಂತಹವನಿಗೆ ನಮ್ಮ ಪಾಪಗಳನ್ನು ಹೋಗಲಾಡಿಸು

---

1. ಪಾಪಗಳು ಸಂಚಿತ ಪ್ರಾರಬ್ಧ ಪ್ರಾಮಾದಿಕ ಎಂದು ಮೂರು ಬಗೆ. ಇದುವರೆಗೆ ಕೂಡಿರುವುದೇ ಸಂಚಿತ. ಯಾವುದರ ಫಲವಾಗಿ ನಾವು ಹುಟ್ಟಿಬೆಳೆದು ಸುಖ ದುಃಖಗಳನ್ನು ಅನುಭವಿಸುತ್ತಿರುವೆವೋ ಅದು ಪ್ರಾರಬ್ಧ. ನಾವು ಭಕ್ತಿಸಂಪನ್ನರಾದಮೇಲೂ ತಿಳಿಯದೆ ಆಕಸ್ಮಾತ್ ಮಾಡುವಂತಹುದೇ ಪ್ರಾಮಾದಿಕ. ಎಂತಹ ಭಕ್ತನೂ ಯೋಗಿಯೂ ತ್ಯಾಗಿಯೂ ಸಹ ಶರಣಾಗತನಾದರೂ ಪ್ರಾರಬ್ಧಕರ್ಮವನ್ನು ಮಾತ್ರ ಅನುಭವಿಸಿಯೇ ತೀರಬೇಕು.

2. ಸುಹೃದಃ ಸಾಧುಕೃತ್ಯಾಂ ದ್ವಿಷನ್ತಃ ಪಾಪಕೃತ್ಯಾಮ್ - ಶಾಟ್ಯಾಯನೀಯಮ್.

ವುದು ಎಷ್ಟರದು ಮಹಾ! ನಮ್ಮ ಪಾಪಗಳನ್ನು ನೀನೇ ಬೇರೆಯವರಿಗೆ ಸೇರಿಸುವೆಯೋ ನಾಶವೇ ಮಾಡು ವೆಯೋ ನಮಗೆ ತಿಳಿಯದು. ನೀನು ನಮ್ಮನ್ನು ನಿಮಗೇನು ಇಷ್ಟ? ಏನು ಬೇಕು? ಎಂದು ಕೇಳಿದರೂ ಹೇಳಲು ನಾವರಿಯೆವು. ನಮಗೆ ಯಾವ ಫಲಾಂತರಗಳ ಆಸೆಯೂ ಇಲ್ಲ. ಹುಟ್ಟಿನಿಂದಲೂ ನಾವು ನಿನ್ನ ದಾಸಾನುದಾಸ ರಷ್ಟೆ. ನೀನು ಎಲ್ಲಿಗೆ ನಮ ಕರೆದೊಯ್ದರೂ ಅಲ್ಲೂ ನಾವು ದಾಸರೇ ಆದುದರಿಂದ ಈಗಿನಂತೆಯೇ ನಮಸ್ಕಾರ ಮಾಡುತ್ತಾ ನಿನ್ನ ಸೇವೆ ಮಾಡುತ್ತಿರಬೇಕೆಂದಷ್ಟೇ ಆಶಿಸುವೆವು ಎಂದು ಒಟ್ಟು ಭಾವಾರ್ಥ. ಇಲ್ಲಿ ಇತರ ವಿಶೇಷ ಗಳನ್ನು ಸಂಪ್ರದಾಯ ಪರಂಪರೆಯ ರಹಸ್ಯೋಪದೇಶಗಳಿಂದ ತಿಳಿಯಬಹುದು.

# ನಿಗಮನ

## ಈಶಾವಾಸ್ಯದ ವಿಚಾರಗಳ ಸಂಗ್ರಹ

೧. ಈ ಎಲ್ಲವೂ ಪರಮಾತ್ಮನಿಂದ ವ್ಯಾಪಿಸಲ್ಪಟ್ಟು ಅವನ ಅಧೀನದಲ್ಲಿದೆ.

೨. ತನ್ನದೆಂಬ ಭಾವನೆಬಿಟ್ಟು ಮೋಕ್ಷಾಭಿಲಾಷಿಯಾದವನು ತನ್ನ ಉಪಾಸನೆಗೆ ಸಾಕಾಗುವಷ್ಟು ಮಾತ್ರ ವಸ್ತು ಗಳನ್ನು ಪರಮಾತ್ಮನ ಪ್ರಸಾದವೆಂಬಷ್ಟೆ ಭಾವನೆಯಿಂದ ಅನುಭವಿಸಬೇಕು.

೩. ತನ್ನದೆಂಬ ಭಾವನೆಬಿಟ್ಟು ಎಲ್ಲ ಕರ್ತವ್ಯಗಳನ್ನು ಮಾಡಬೇಕು.

೪. ಆತ್ಮಜ್ಞಾನವಿಲ್ಲದೆ ಕರ್ಮಗಳನ್ನು ಮಾಡುವವನು ನರಕದುಃಖದಲ್ಲಿ ಬೀಳುತ್ತಾನೆ.

೫. ಮೋಕ್ಷಾಭಿಲಾಷಿಯು ಮಾಡುವ ಕರ್ಮಗಳಿಂದ ಅವನ ಮನಶ್ಶುದ್ಧಿಯೂ ಆಗಿ ಅವನಿಗೆ ಆ ಕರ್ಮಗಳ ಸಿಕ್ಕು ಸಿಲುಕುಗಳಿರುವುದಿಲ್ಲ.

೬. ಪರಮಾತ್ಮನು ಎಂದಿಗೂ ನಿಶ್ಚಲ ಹಾಗೂ ಎಲ್ಲೆಡೆ ಹರಡಿಯೇ ಇರುವವ. ಸಕಲ ಸದ್ಗುಣ ಪೂರ್ಣನಾದ ಅವನಿಗೆ ನಾವು ಎಂದೂ ಸಾಟಿಯಲ್ಲ.

೭. ನಮ್ಮನ್ನು ನಿಯಂತ್ರಿಸುವ ಅವನು ತನ್ನನ್ನಾಶ್ರಯಿಸಿ ಬಂದವರಿಗೆ ಬಹಳ ಸುಲಭವಾಗಿ ಸೇವೆ ಕೊಡುತ್ತಾನೆ. ಆಶ್ರಯಿಸದವರಿಗೆ ದುರ್ಲಭನೂ ಅಹುದು.

೮. ಅವನೊಳಗೆ ಎಲ್ಲವನ್ನೂ ಎಲ್ಲದರಲ್ಲೂ ಅವನನ್ನೂ ಭಾವಿಸಿ ಅನುಭವಿಸುವಂತಹವರಿಗೆ ಜಗತ್ತಿನ ಯಾವು ದೊಂದರ ಬಗ್ಗೆಯೂ ತಿರಸ್ಕಾರವಾಗಲಿ ಅಸಹ್ಯವಾಗಲಿ ದುಃಖವಾಗಲಿ ಅಜ್ಞಾನವಾಗಲಿ ಉಂಟಾಗದು.

೯. ಪರಮಾತ್ಮನು ಎಲ್ಲದರೊಳಗೂ ಇರುವನೆಂಬ ಏಕಾತ್ಮ ಭಾವನೆಯಿರುವವನು ತನ್ನ ಮನಸ್ಸಿನಿಂದ ಶುದ್ಧ ಬ್ರಹ್ಮತತ್ವವನ್ನು ಪಡೆಯುವನು. ಹಾಗೂ ತಾತ್ತ್ವಿಕವಾದ ಎಲ್ಲ ವಿಚಾರಗಳನ್ನೂ ತಿಳಿದು ಹೇಳಬಲ್ಲವ ನಾಗುವನು.

೧೦. ಜ್ಞಾನವು ಪ್ರಧಾನ ಅಂಗಿಯೂ, ಕರ್ಮವು ಅದರ ಅಂಗವೂ ಆಗಿದ್ದು, ಇವೆರಡನ್ನು ಪ್ರತ್ಯೇಕ ಯಾರು ಆಚರಿಸುವರೋ ಅವರು ಬಹಳಷ್ಟು ಅನರ್ಥಗಳನ್ನು ಪಡೆಯುವರು.

೧೧. ಜ್ಞಾನ ಕರ್ಮಗಳೆರಡನ್ನೂ ಅಂಗಾಂಗಿಭಾವದಿಂದ ತಿಳಿದು ಆಚರಿಸುವವರಿಗೆ ಅಮೃತಮಯವಾದ ಮೋಕ್ಷವೂ ಪರಮಾತ್ಮ ಸೇವೆಯೂ ಬ್ರಹ್ಮಾನಂದವೂ ಸಿಗುವುದು.

೧೨. ಈ ಪ್ರಕೃತಿಯೇ ದೇವರ ಮಾಯೆ ಎನಿಸಿದೆ. ಇದರಲ್ಲಿ ಸತ್ವ ರಜಸ್ ತಮಸ್ ಎಂಬ ಮೂರು ಗುಣಗಳಿವೆ. ಇವೇ ಬಂಧಕಗಳು. ಪರಮಾತ್ಮನಿಗೆ ಶರಣಾದವರು ಮಾತ್ರ ಈ ಬಂಧಕ ಮಾಯೆಯಿಂದ ಬಿಡುಗಡೆ ಪಡೆವರು.

೧೩. ಪರಮಾತ್ಮನ ಕೃಪಾಕಟಾಕ್ಷಕ್ಕೆ ಪಾತ್ರನಾದ ಯಾವನಾದರೂ ಸರಿ ಅವನಿಗೆ ಪರಮಾತ್ಮನ ದಿವ್ಯರೂಪವು ದರ್ಶನವಾಗುವುದು.

೧೪. ಇದಕ್ಕಾಗಿ ನಾವು ಅವನನ್ನೇ ನಂಬಿ ಅವನು ಕರೆದೊಯ್ಯುವ ಮಾರ್ಗದಲ್ಲಿ ನಡೆಯಬೇಕು.

## ಈಶಾವಾಸ್ಯದ ಸಾರಾರ್ಥ

ಸ್ವಾಮಿ ನಾರಾಯಣ ಎಲ್ಲವನ್ನೂ ವ್ಯಾಪಿಸಿರುವನು. ನಮ್ಮ ಎಲ್ಲ ಕರ್ತವ್ಯಕರ್ಮಗಳೂ ಅವನ ಸಂತೋಷಕ್ಕಾಗಿ ಮಾಡುವ ಪೂಜೆ. ಅವನದು ಅಪರಿಮಿತವಾದ ಆಶ್ಚರ್ಯಕರವಾದ ಶಕ್ತಿ. ಎಲ್ಲ ಒಳ್ಳೆಯ ಗುಣಗಳೂ ಅವನಲ್ಲಿವೆ. ಅವನು ಎಲ್ಲದರ ಅಂತರ್ಯಾಮಿ ಎಂಬ ತಾತ್ವಿಕ ಭಾವನೆಯಿದ್ದರೆ ನಮಗೆ ದುಃಖ ಅಜ್ಞಾನಗಳೊಂದೂ ಬಾರವು. ಅವನಿಗೆ ಶರಣಾದರೆ ಮಾತ್ರ ನಾವು ಅವನ ಉನ್ನತ ಸ್ಥಾನಕ್ಕೆ ಹೋಗಬಲ್ಲೆವು. ಇಂತಹ ಸ್ವಾಮಿ ನಾರಾಯಣನ ಬಗ್ಗೆ ಹೀಗೆ ಸ್ಪಷ್ಟವಾಗಿ ತಿಳಿಸುತ್ತದೆ ಈ ವಾಜಸನೇಯ ಸಂಹಿತೋಪನಿಷತ್ತು.

## ಸಮಾಪ್ತಿ ವಾಕ್ಯ

ಇಂತು ಶ್ರೀಯುತರಾದ ಪೂಜ್ಯ ಸಹಜಾನಂದರ ಅಡಿದಾವರೆಯ
ಸೇವೆಯಲ್ಲೇ ನಿರತನಾದ ಪರಮಹಂಸಶ್ರೇಷ್ಠ ಯೋಗಿರಾಜ
ಶ್ರೀ ಗೋಪಾಲಾನಂದ ಸ್ವಾಮಿಯಿಂದ ರಚಿತವಾದ
ಈಶಾವಾಸ್ಯೋಪನಿಷತ್ ವಿವರಣೆ ಮುಗಿಯಿತು.



# ಶ್ರೀರಂಗಾಚಾರ್ಯರ ವ್ಯಾಖ್ಯಾನ

### ಮಂತ್ರದ ಸ್ಥಾನಪಲ್ಲಟ – ಸಂಗತಿ

ಈ ಮಂತ್ರವನ್ನು ಮಾಧ್ಯಂದಿನರು ಹದಿನಾರನೆಯ ಮಂತ್ರವನ್ನಾಗಿ ಪಠಿಸಿದ್ದಾರೆ.

ಕೈವಲ್ಯವನ್ನು ಬಹಳ ಕೆಟ್ಟ ಪುರುಷಾರ್ಥವೆಂದು ಕಡೆಗಣಿಸುವ ಉಪಾಸಕನಿಗೆ ಪರಮಾತ್ಮನ ಸೇವಾ ಸೌಭಾಗ್ಯವು ಇಹಲೋಕದಲ್ಲೇ ಸಿಗುವಂತಾಗಲಿ. ಇಲ್ಲಿಯ ಭೋಗೈಶ್ವರ್ಯಗಳಿಂದಲೇ ಪರಮಾತ್ಮನ ಸೇವೆಯನ್ನು ಅವನು ನಡೆಸಲಿ. ಇಲ್ಲಿಯೇ ಅವನಿಗೆ ಶಾಶ್ವತ ಹಾಗೂ ಸ್ಥಿರವಾದ ದೇಹವೂ ಬರಲಿ ಎಂದೆಲ್ಲ ನಾವು ಕೇಳಬಹುದು, ಇದೆಲ್ಲದಕ್ಕೂ ಉತ್ತರವಾಗಿದೆ ಈ ಮಂತ್ರ.

### ಪದ ವಿವರಣೆ

**ಅಗ್ನೇ** - ಅಗ್ನಿಯ ಸ್ವರೂಪ, ಇರುವಿಕೆ, ಸ್ವಭಾವಗಳು, ನಡತೆ, ರೀತಿನೀತಿಗಳು, ಇವೆಲ್ಲವನ್ನೂ ತನ್ನ ಅಧೀನದಲ್ಲೇ ಇಟ್ಟುಕೊಂಡಿರುವುದರಿಂದ, ಅವನಿಗೂ ಆತ್ಮನಾಗಿ ಅವನನ್ನು ತನ್ನ ಶರೀರವಾಗಿ ಪಡೆದಿರುವ ಎಲೈ ಪರಮಾತ್ಮನೇ!

ಪರಮಾತ್ಮನನ್ನು ಇಲ್ಲಿ 'ಅಗ್ನಿ' ಎಂದು ಕರೆದಿರುವುದು ನಾವು ಮುನ್ನಡೆಯಬೇಕಾದ ಮಾರ್ಗದಲ್ಲಿ ಮೊಟ್ಟಮೊದಲು 'ಅಗ್ನಿಯೇ' ಸಹಾಯಕನಾಗಿರುವುದರಿಂದ ಎಂದು ತಿಳಿಯಬಹುದು.

**ಸುಪಥಾ** - ಅತ್ಯುತ್ತಮವಾದ ಅರ್ಚಿರಾದಿ ಎಂಬ ದಿವ್ಯಮಾರ್ಗದಿಂದ.

**ರಾಯೇ** - ಮೋಕ್ಷೈಶ್ವರ್ಯಕ್ಕಾಗಿ. ಬರಿಯ ಮೋಕ್ಷಕ್ಕಾಗಿ ಅಲ್ಲ. ಬರಿಯ ಮೋಕ್ಷವಾದ ಕೈವಲ್ಯಕ್ಕೂ ಇದೇ ಮಾರ್ಗವಾದರೂ ಅದು ಐಶ್ವರ್ಯವಲ್ಲ. ಯಾವುದೇ ಲೌಕಿಕಭೋಗೈಶ್ವರ್ಯಗಳಿಗೆ 'ಧೂಮಾದಿ' ಎಂಬ ಮಾರ್ಗ ನಿಶ್ಚಯವಾಗಿದೆ. ಆದುದರಿಂದ ಇಲ್ಲಿ ಹೇಳುವ ಐಶ್ವರ್ಯ ವೈಕುಂಠದಲ್ಲಿ ಸಿಗುವ ಪರಮಾತ್ಮನ ಸೇವಾಸೌಭಾಗ್ಯ ಮಾತ್ರ.

**ದೇವ** - ಮಾಯೆಯನ್ನು ತನ್ನ ವಶದಲ್ಲಿಟ್ಟುಕೊಂಡು ಅದರ ಮೂಲಕ ಪ್ರಪಂಚ ಎಲ್ಲವನ್ನೂ ಆಟವಾಡಿಸುವವನೇ!
ತ್ರಿಗುಣಾತ್ಮಕಳಾದ ಮಾಯೆಯ ಕೈಯಿಂದ ನಮ್ಮನ್ನು ಬಿಡಿಸುವವನೂ ನೀನೇ. ನಿನಗೆ ಶರಣಾದವರನ್ನು ಈ ರೀತಿ ಬಿಡಿಸುವ ಮಾತುಕೊಟ್ಟಿರುವವನೂ ನೀನೇ[1] ಎಂಬ ಅಭಿಪ್ರಾಯದಿಂದ ಈ ರೀತಿ ಇಲ್ಲಿ 'ದೇವ'ಎನ್ನಲಾಗಿದೆ.

**ವಯುನಾನಿ** - ವಿವಿಧ ಉಪಾಸನರೂಪವಾದ ಪ್ರಾಯೋಗಿಕ ವಿಜ್ಞಾನಗಳನ್ನು.

**ವಿದ್ವಾನ್** - ತಿಳಿದವನು ನೀನು ಈ ರೀತಿ ಪರಮಾತ್ಮನಿಗೂ ನಾವು ಮಾಡುವ ಉಪಾಸನೆಯ ಉದ್ದೇಶ್ಯ ತಿಳಿದೇ ಇರುವುದರಿಂದ ಅವನು ನಮ್ಮನ್ನು ಗುರಿಮುಟ್ಟಿಸಬೇಕು ಎಂಬ ಅಭಿಪ್ರಾಯದಿಂದ ಹೀಗೆ ಹೇಳಲಾಗಿದೆ.

**ಜುಹುರಾಣಂ** - ವಕ್ರವಾದ ಹಾಗೂ ಬಲಾತ್ಕರಿಸಿ ಮೋಸಗೊಳಿಸುವ ಎಂದರ್ಥ.[2]

**ಭೂಯಿಷ್ಠಾಂ** - ನಿರಂತರವಾಗಿ ಮತ್ತು ಶಾಶ್ವತವಾಗಿ ನಿನಗೆ ಮಾಡುವಂತಹ.

**ನಮ ಉಕ್ತಿಂ ವಿಧೇಮ** - ನಮಸ್ಕಾರದ ಮಾತನ್ನಾದರೂ ಆಡುವೆವು.

---

1. ದೈವೀಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ । ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ॥ ಗೀ. ೭. ೧೪.
2. ಹುರ್ಛಾ - ಕೌಟಿಲ್ಯೇ, ಹೃ - ಪ್ರಸಹ್ಯಹರಣೇ, ಧಾತುಪಾಠ. 'ಹೃ' ಧಾತುವಿಗೆ ಕೌಟಿಲ್ಯ ಎಂಬ ಅರ್ಥವೂ ಉಂಟು.

## ನಮಸ್ಕಾರದ ಮಹತ್ವ

ಮುಕ್ತಿಗೆ, ಪರಮಾತ್ಮನ ಸಾನ್ನಿಧ್ಯದಲ್ಲಿ ಶಾಶ್ವತವಾಗಿ ಸಿಗುವ ಒಂದು ಸೌಭಾಗ್ಯವೇ ಇಲ್ಲಿ ಆಶಿಸಿರುವ ನಮಸ್ಕಾರ. ಇದು ಅವನ ಸೇವೆಯ ಏಕಾಂಶ. ಇದನ್ನು ಬಯಸುವುದೆಂದರೆ ಅವನ ಸಮಸ್ತವಿಧವಾದ ಸೇವೆಯನ್ನೂ ಮಾಡಲು ಬಯಸುವುದೆಂದೇ ಅರ್ಥ. ಇಂತಹ ಅನುಭವ ಶ್ವೇತದ್ವೀಪದಲ್ಲಿ[1] ಪರಮಾತ್ಮನ ಸೇವೆ ಮಾಡುವ ಮಹರ್ಷಿಗಳಿಗೂ ದೇವತೆಗಳಿಗೂ ಸಹ ಇರುವುದು. ದಿವ್ಯಸೂರಿಗಳೂ ಸಹ "ಮುಕ್ತಿಸ್ಥಾನದಲ್ಲೇ ಆಗಲಿ, ಈ ಭೂಮಿಯಲ್ಲೇ ಆಗಲಿ, ನರಕದಲ್ಲೇ ಆಗಲಿ ನಾವಿದ್ದರೂ ಸರಿ ಸಾಯುತ್ತಿದ್ದರೂ ಸರಿ ಎಂದೆಂದಿಗೂ ಎಲ್ಲೆಲ್ಲೂ ನಿನ್ನ ಪಾದಸೇವೆಯೇ ನಮಗೆ ಗತಿ, ಆ ನಿನ್ನ ಪಾದಗಳ ನೆನಪೇ ನಮಗಿರಲಿ" ಎಂದು ಪರಮಾತ್ಮನನ್ನು ಬೇಡುವರು. ಈ ಬೇಡಿಕೆಯು ಮುಕ್ತಿಸ್ಥಾನ ಹೊರತು, ಬೇರೆಡೆ ನೆರವೇರುವಾಗ ಅದು ಅತಿ ಹೆಚ್ಚಿನದಾಗಲಾರದು. ಆ ಇತರ ಸ್ಥಾನಗಳ ನಶ್ವರತೆಯೇ ಅದಕ್ಕೆ ಕಾರಣ. ಆದುದರಿಂದ ಮುಕ್ತಿಸ್ಥಾನದಲ್ಲಿ ಮಾತ್ರ ಸಿಗುವ ಆ ದಿವ್ಯಸೇವಾರೂಪವಾದ ಬಹಳ ಹೆಚ್ಚಿನದಾದ ನಮಸ್ಕಾರ ಹೇಳುವ ಭಾಗ್ಯವನ್ನು ಇಲ್ಲಿ ಆಶಿಸಲಾಗಿದೆ. ಇಂತಹ ಭಾಗ್ಯ ಸಿಗುವವರೆಗೆ ಇಹಲೋಕದಲ್ಲೂ ಇಂತಹ ನಮಸ್ಕಾರ ಸೇವೆಗಳ ಭಾಗ್ಯಗಳನ್ನೇ ಕರುಣಿಸು ಎಂಬ ಭಾವವೂ ಇದರಲ್ಲಿ ಅಡಗಿದೆ.

ನಮಸ್ಕಾರ ಎಂದು ಹೇಳಿ ನಾವು ಮುಗಿದ ಕೈ ನಿನ್ನ ಹೃದಯವನ್ನು ಕರಗಿಸುತ್ತದಲ್ಲವೆ. ನೀನು ಕಠಿಣ ಹೃದಯನಾಗಿರಲು ಸಾಧ್ಯವೇ ಇಲ್ಲ.

ದೇವ! ನೀನು ಎಷ್ಟು ಕರುಣಾರ್ದ್ರಹೃದಯಿ ಎಂದರೆ ನಾವು ಮಾಡುವ ಒಂದೇ ಒಂದು ನಮಸ್ಕಾರದ ಭಾರವನ್ನೂ ನೀನು ಹೊರಲಾರೆ, ನಮ್ಮ ಒಂದು ನಮಸ್ಕಾರಕ್ಕೂ ಪ್ರತಿಫಲ ಒದಗಿಸಲು ನೀನೆಷ್ಟು ಹೋರಾಡಬೇಕೋ! ದ್ರೌಪದಿ ಅಂದು ಕೌರವನ ಸಭೆಯಲ್ಲಿ ನಿನ್ನನ್ನೇ ನೆನೆದು ಕೈಮುಗಿದುದಕ್ಕೆ ಜೀವನಪೂರ್ತಿ ಅವಳಿಗಾಗಿ ಹೋರಾಟ ನಡೆಸಿ ಆ ಭಕ್ತೆಯ ಮನಸ್ಸಿಗೆ ಸಮಾಧಾನ ತರಬೇಕೆಂದು ಆಶಿಸಿದೆ. ಆದರೆ ಅವಳಿಗಾಗಿಯೂ ಅವಳವರಾದ ಪಾಂಡವರಿಗಾಗಿಯೂ ಎಷ್ಟು ಉಪಕಾರ ಮಾಡಿದರೂ ಸಾಲದೆಂಬ ಭಾವನೆಯಿಂದ 'ಕೈ ಮುಗಿದುದರ ಆ ಋಣ ತೀರಿಸಲಿಲ್ಲವಲ್ಲ' ಎಂದು ನೆಮ್ಮದಿ ಇಲ್ಲದೆ ಈ ಲೋಕದಿಂದ ಹೊರಡಲಿಲ್ಲವೆ. ಆದುದರಿಂದ ನಿನ್ನ ಸ್ವಭಾವವನ್ನೂ ತಿಳಿದು ನಾವು 'ನಮ' ಉಕ್ತಿಯಿಂದ ನಿನ್ನನ್ನು ಕ್ಲೇಶಪಡಿಸುವ ಮೊದಲೇ ಶೀಘ್ರವಾಗಿ ನಮ್ಮ ಇಷ್ಟಾರ್ಥವನ್ನು ನೆರವೇರಿಸು.

### ಈ ಮಂತ್ರ ಅಗ್ನಿದೇವತೆಯನ್ನು ಕುರಿತುದೇ?

ಹಿಂದೆ ಸಂಹಿತಾಭಾಗದಲ್ಲೇ ಹಲವೆಡೆ ಈ ಮಂತ್ರವು ಅಗ್ನಿದೇವತೆಯನ್ನು ಪ್ರಾರ್ಥಿಸುವ ಅಭಿಪ್ರಾಯದಿಂದಲೇ ಬಂದಿದ್ದರೂ, ಈಗ ಇದು ಬ್ರಹ್ಮವಿದ್ಯೆಯ ಸಂದರ್ಭವಾದುದರಿಂದಲೂ, ಒಂದೇ ಮಂತ್ರಕ್ಕೆ ಅನೇಕ

---

1. ಇದು ಒಂದು ದ್ವೀಪ. ಮಹಾವಿಷ್ಣುವು ಬ್ರಹ್ಮವಿದ್ಯೆಯನ್ನು ಹೊಂದಲು ತಪಸ್ಸು ಮಾಡಿದ್ದು ಈ ದ್ವೀಪದಲ್ಲಿಯೇ. ಇದು ಕ್ಷೀರಸಾಗರದ ಉತ್ತರ ಭಾಗದಲ್ಲಿದೆ. ಅದು ಮೇರು ಪರ್ವತಕ್ಕಿಂತ 32,000 ಮೈಲಿಗಳಷ್ಟು ಎತ್ತರದಲ್ಲಿದೆ. ಶ್ವೇತದ್ವೀಪವಾಸಿಗಳಿಗೆ ಇಂದ್ರಿಯಜನ್ಯ ಜ್ಞಾನವಿಲ್ಲ. ಅವರು ಆಹಾರ ತೆಗೆದುಕೊಳ್ಳುವುದಿಲ್ಲ. ಅವರು 'ಜ್ಞಾನದಲ್ಲಿ' ಶ್ರೀಮಂತರು. ಅವರ ಶರೀರವು ಸತತವಾಗಿ ಸುಗಂಧವನ್ನು ಸೂಸುತ್ತದೆ. ಪಾಪವರಿಯದ ಈ ಜನರ ಬಣ್ಣ ಬಿಳುಪು. ಅವರ ಶರೀರಗಳು ಮತ್ತು ಮೂಳೆಗಳು ವಜ್ರಾಯುಧದಷ್ಟು ಗಟ್ಟಿಯಾಗಿವೆ. ಅವರ ತಲೆಗಳು ಛತ್ರಿಗಳಂತೆ ಅಗಲವಾಗಿಯೂ ಚಪ್ಪಟೆಯಾಗಿಯೂ ಇವೆ. ಅವರ ಧ್ವನಿ ಗುಡುಗಿನಂತಿದೆ. ಪ್ರತಿಯೊಬ್ಬರಿಗೂ ನಾಲ್ಕು ಕೈಗಳೂ ಅರವತ್ತು ಹಲ್ಲುಗಳೂ ಇವೆ. ಅವರೆಲ್ಲರೂ ಶಿವನನ್ನು ಪೂಜಿಸುತ್ತಾರೆ- (ಮ. ಭಾ. ಶಾಂ. ಪ. ದಾಕ್ಷಿಣಾತ್ಯ ಪಾಠ, ಅ. ೩೩೫.)

ಅರ್ಥಗಳಿದ್ದು ಸಂದರ್ಭಕ್ಕೆ ತಕ್ಕಂತೆ ಅರ್ಥವನ್ನು ಹೇಳಲು ಶಾಸ್ತ್ರನಿಯಮವೂ ಒಪ್ಪಿಇರುವುದರಿಂದ ಇಲ್ಲಿ ಪರಮಾತ್ಮಪರವಾದ ಅರ್ಥಮಾಡುವುದೇ ಸರಿ।

# ನಿಗಮನ

## ಈಶಾವಾಸ್ಯದ ಅಭಿಪ್ರಾಯಗಳ ಸಂಗ್ರಹ

**ಮಂತ್ರ-** **ಅಭಿಪ್ರಾಯ**

೧. ಎಲ್ಲಕ್ಕೂ ಒಡೆಯ ಪರಮಾತ್ಮ. ಅವನೇ ಎಲ್ಲವನ್ನೂ ನಿಯಂತ್ರಿಸುವವನು. ಅವನೇ ಎಲ್ಲದರಿಂದ ಸೇವೆಮಾಡಿಸಿಕೊಳ್ಳುವವನು. ಈ ಜಗತ್ತೆಲ್ಲವೂ ಅವನ ಹತೋಟಿಯಲ್ಲಿದ್ದು ಅವನ ಆಳಾಗಿ ಸೇವೆಮಾಡುವುದೇ ಸಹಜ ಸ್ವರೂಪ. ಈ ತಿಳುವಳಿಕೆಯನ್ನು ಪಡೆದು ಮೋಕ್ಷಾಭಿಲಾಷಿಯಾದವನು ಈ ಲೋಕದಲ್ಲಿ ತನಗೆ ಸಂಬಂಧಿಸಿರುವ ಎಲ್ಲ ವಸ್ತುಗಳ ಬಗ್ಗೆಯೂ ತನ್ನ ಫಲ, ಸಂಗ, ಕರ್ತೃತ್ವಗಳನ್ನು ಬಿಟ್ಟು ಈ ಎಲ್ಲವೂ ಪರಮಾತ್ಮನ ಪ್ರಸಾದ ಎಂಬ ರೀತಿಯಲ್ಲಿ ನಡೆದುಕೊಳ್ಳಬೇಕು. ಜ್ಞಾನಪೂರ್ವಕವಾದ ಕರ್ತವ್ಯನಿಷ್ಠೆಯನ್ನು ಉಪಾಸನೆಗೆ ಅಂಗವಾಗಿ ಮುಂದೆ ತಿಳಿಸುವಾಗ ಇಂತಹ ಜ್ಞಾನವು ಉಪಯೋಗಕ್ಕೆ ಬರುತ್ತದೆ. ಎಲ್ಲವನ್ನೂ ದೇವರೇ ತನಗಾಗಿ ನಮ್ಮ ಕೈಯಿಂದ ಮಾಡಿಸಿಕೊಳ್ಳುವನು ಎಂಬುದೇ ಆ ಜ್ಞಾನದ ಆಕಾರ.

೨. ಅವರವರ ಯೋಗ್ಯತೆಗೆ ತಕ್ಕ ಕರ್ತವ್ಯಗಳನ್ನು ಬದುಕಿರುವವರೆಗೂ ಎಲ್ಲರೂ ಆಚರಿಸಲೇಬೇಕು. ಕರ್ತವ್ಯನಿಷ್ಠನಾದವನಿಗೆ ತಾನು ಮಾಡುತ್ತಿರುವ ಅಂತಹ ಯಾವುದೇ ಕರ್ಮಗಳಿಂದ ಪುಣ್ಯವಾಗಲಿ ಪಾಪವಾಗಲಿ ಬರುವುದಿಲ್ಲ.

೩. ಇಂತಹ ಜ್ಞಾನಕರ್ಮಗಳಲ್ಲಿ ಯಾವುದೊಂದಿಲ್ಲದಿದ್ದರೂ ಅಂತಹವರಿಗೆ ಬ್ರಹ್ಮವಿದ್ಯೆಯು ಸಾಧ್ಯವಾಗದೆ ಮೆಲ್ಲಮೆಲ್ಲಗೆ ಅವರು ಬಹಳ ಕೆಟ್ಟ ಪರಿಸ್ಥಿತಿಗೆ ಬಂದು ಹಾಳಾಗಿ ಬಿಡುವರು (ಆದುದರಿಂದ ಉಪಾಸಕರಿಗೂ ಸಾರ್ವಜನಿಕರಿಗೂ ಇದೊಂದು ಎಚ್ಚರಿಕೆಯ ಮಾತು)

೪–೮ ಪರಮಾತ್ಮನು ಅಘಟಿತಘಟನೆ ಮಾಡಲು ಸಮರ್ಥ. ಎಲ್ಲದರ ಒಳಗೂ ಹೊರಗೂ ಆವರಿಸಿರುವನು. ಆದುದರಿಂದ ಎಲ್ಲವೂ ಅವನ ಅಧೀನದಲ್ಲಿರುವುವು. ಹಾಗೂ ಅವನಿಗೇ ಎಲ್ಲದರ ಒಡೆತನ ಸಿಕ್ಕಿದೆ. ಈ ಪರಮಾತ್ಮನ ಇಂತಹ ಗುಣಗಳನ್ನು ತಿಳಿದು ಪರಮಾತ್ಮನನ್ನು ಭಾವಿಸುವವರಿಗೆ ಎಲ್ಲಿಡೆ ದುಃಖ, ಅಜ್ಞಾನಗಳು ದೂರವಾಗುವುವು.

೯–೧೧ ಕರ್ತವ್ಯಕರ್ಮಗಳ ಸಹಾಯವಿಲ್ಲದ ಬರಿಯ ಜ್ಞಾನವು ಉಪಾಸನೆಯಾಗಲಾರದಷ್ಟೆ. ಅಲ್ಲದೆ ಅದರಿಂದ ಒಳ್ಳೆಯ ಫಲವೂ ಸಿಗದು. ಆದುದರಿಂದ ಜ್ಞಾನಕ್ಕೆ ವಿಶೇಷ ರೀತಿಯೂ ಕರ್ಮಗಳ ಸಹಾಯವೂ ಅತ್ಯವಶ್ಯಕ.

೧೨–೧೪ ಉಪಾಸನೆ ಮಾಡುವಾಗಲೂ ಕ್ಷುದ್ರ ಫಲಿತಾಂಶಗಳೆನಿಸಿದ ಐಶ್ವರ್ಯ ಕೈವಲ್ಯಗಳ ಆಸೆ ಬಿಟ್ಟು ಪರ

---

೧. ಮೀಮಾಂಸಕರಾದ ಜೈಮಿನಿಗಳ ಅಭಿಪ್ರಾಯದಲ್ಲಿ ಎಲ್ಲ ದೇವತೆಗಳನ್ನು ಕುರಿತಾದ ಹೆಸರುಗಳೂ ನೇರವಾಗಿ ಪರಮಾತ್ಮನಿಗೇ ಸಂಬಂಧಿಸಿದವು. ಯಾಸ್ಕಮಹರ್ಷಿಗಳೂ ತಮ್ಮ ನಿರುಕ್ತಭಾಷ್ಯದಲ್ಲಿ ಇದೇ ಅಭಿಪ್ರಾಯವನ್ನು ನಿರ್ಣಯಿಸಿದಾರೆ. ವ್ಯಾಸರ ಅಭಿಪ್ರಾಯದಲ್ಲಿ ಎಲ್ಲ ಹೆಸರುಗಳೂ ಆಯಾ ದೇವತೆಗಳ ಅಂತರಾತ್ಮನಾದ ಪರಮಾತ್ಮನಿಗೆ ಆಯಾ ದೇವತಾರೂಪವಾದ ಶರೀರದ ಮೂಲಕ ಸಂಬಂಧಿಸಬಹುದು. ಸಂಹಿತಾಭಾಗದ ವಿಚಾರಗಳಲ್ಲಿ ನಿರ್ಣಾಯಕರಾದ ಜೈಮಿನಿಗಳ ಮತದಂತೆ ಹಿಂದೆ ಬಂದಿರುವ ಅಗ್ನಿ ಮುಂತಾದ ಶಬ್ದಗಳಿಗೂ ಪರಮಾತ್ಮನೇ ಮುಖ್ಯವಾದ ಅರ್ಥವೆಂದು ನಾವು ಮನಗಾಣಬಹುದು.

ಮಾತ್ಮನ ಶಾಶ್ವತ ಸೇವಾಸೌಭಾಗ್ಯ ದೃಷ್ಟಿಯೊಂದರಿಂದಲೇ ಉಪಾಸನೆ ಮಾಡಬೇಕು.

೧೫-೧೮ ಉಪಾಸನೆಯ ಕಾಲದಲ್ಲಿ ಅರ್ಥಜ್ಞಾನಪೂರ್ವಕವಾಗಿ ಹೇಳಿಕೊಂಡಿರಬೇಕಾದ ಪ್ರಾರ್ಥನೆಯ ಅಂಶಗಳು, ಇವುಗಳಲ್ಲಿ ಆ ಸೂರ್ಯ ಮಂಡಲದೊಳಿದ್ದು ನಮ್ಮೊಳಗೂ ಇರುತ್ತಿರುವ ಪರಮಾತ್ಮನ ದಿವ್ಯರೂಪ ಗುಣ ಚರಿತ್ರಗಳ ಚಿಂತನೆಯ ರಹಸ್ಯವನ್ನೂ ಸ್ಪಷ್ಟಪಡಿಸಲಾಗಿದೆ.

## ಈಶಾವಾಸ್ಯದ ಅತಿಮುಖ್ಯ ವಿಚಾರ

ಬ್ರಹ್ಮವಿದ್ಯೆಗೆ ಕರ್ಮಯೋಗ ಎಂದೂ ವಿರೋಧಿಯಲ್ಲ. ಕರ್ಮಯೋಗವನ್ನು ಅಂಗವಾಗಿ ಪಡೆಯದ ಬರಿಯ ಬ್ರಹ್ಮಜ್ಞಾನದಿಂದ ಮೋಕ್ಷಸಿಗುವುದಿಲ್ಲ. ಕರ್ಮದ ಅತ್ಯವಶ್ಯಕತೆಯನ್ನು ಜ್ಞಾನಿಯನ್ನು ಕುರಿತೇ ಮೊದಲಿನಿಂದಲೂ ಹೇಳುತ್ತಾ ಬಂದಿರುವ ಈ ಉಪನಿಷತ್ತು ಕೊನೆಯವರೆಗೂ ಅವನನ್ನೇ ಕುರಿತುದಾಗಿದೆ. ಇಲ್ಲಿಯ ಉಪದೇಶಗಳು ಲೌಕಿಕ ಸುಖಭೋಗಾಭಿಲಾಷಿಗಳಿಗಾಗಲ್ಲ. ಸ್ವರ್ಗಾದಿ ಫಲಾಪೇಕ್ಷಿಗಳಾದ ಬರಿಯ ಕರ್ಮಠರಿಗಾಗಿ ಅವರವರ ಇಷ್ಟಾರ್ಥಗಳಿಗಾಗಿ ಉಪಯೋಗವಾಗಲಾರವು. ಇಲ್ಲಿರುವುದು ಉತ್ತಮೋತ್ತಮವಾದ ವಿದ್ಯೆ. "ಕುರ್ವನ್ನೇವೇಹ ಕರ್ಮಾಣಿ" "ವಿದ್ಯಾಂಚಾವಿದ್ಯಾಂಚ" ಎಂಬ ಮಂತ್ರಗಳು ಇಂತಹ ಅಪೂರ್ವವಾದ ವಿಚಾರವನ್ನು ಈ ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಮಂಡಿಸಿರುವಂತೆ ಬೇರೆಲ್ಲೂ ಇಲ್ಲದಿರುವುದೇ ಈ ಉಪನಿಷತ್ತಿನ ವೈಶಿಷ್ಟ್ಯ.

ಇದು ಅತಿಮುಖ್ಯ ವಿಚಾರವೆನ್ನಲು ವ್ಯಾಸಮಹರ್ಷಿಗಳ ಬ್ರಹ್ಮಸೂತ್ರಗ್ರಂಥದ ಅನೇಕ ಸೂತ್ರಗಳೂ ಬಹು ಮುಖ್ಯ ಆಧಾರಗಳು.

## ಈಶಾವಾಸ್ಯದ ಒಟ್ಟರ್ಥ

ನಮ್ಮ ನಮ್ಮ ವರ್ಣಾಶ್ರಮಧರ್ಮಗಳನ್ನು ಕರ್ತವ್ಯದೃಷ್ಟಿಯಿಂದ ನೆರವೇರಿಸುವುದೇ ನಮ್ಮ ಉಪಾಸನೆಗೆ ಮುಖ್ಯವಾದ ಅಂಗ. ಬದುಕಿರುವವರೆಗೆ ಈ ರೀತಿ ಉಪಾಸನೆ ಮಾಡುತ್ತಾ ಐಶ್ವರ್ಯ ಕೈವಲ್ಯಗಳಿಗೆ ಆಸೆಪಡದೆ ಇಹಪರಗಳಲ್ಲಿ ಪರಮಾತ್ಮನ ಸೇವಾ ಸೌಭಾಗ್ಯವೊಂದನ್ನೇ ಆಶಿಸುತ್ತ ಬಾಳಬೇಕು.

## ಈಶಾವಾಸ್ಯ ಯಾರಿಗೆ ರುಚಿಸುವುದು

ಈ ನಮ್ಮ ವ್ಯಾಖ್ಯಾನದೊಡನೆ ಮೂಲಗ್ರಂಥ ಓದಿಕೊಂಡಾದರೂ ಈ ಉಪನಿಷತ್ತಿನ ಸಾರವಾದ ಅಂಶಗಳನ್ನು ತಿಳಿದು ಸಂತೋಷಿಸಬಹುದು. ಇದನ್ನು ಓದಿ ತಿಳಿಯಲೂ ಸಹ ಒಂದು ವಿಧವಾದ ದೃಷ್ಟಿ ಇರಬೇಕು. ಸಾರ, ಅಸಾರಗಳನ್ನು ತಿಳಿದೂ ತಿಳಿಯದೆಯೂ ಕಹಿಬೇವನ್ನೇ ಆಶಿಸುವ ಕಾಗೆಗಳಂತೆ ಅಸಾರವಾದ ವಿಚಾರಗಳನ್ನೇ ಆಶಿಸುವ ಜನರಿಗೆ ಇದು ಹಿಡಿಸದು. ಕೋಗಿಲೆಗಳಿಗೆ ಮಾವಿನ ತೋಟಗಳು ಮನಸ್ಸಿಗೆ ಹಿಡಿಸುವಂತೆ ವಿವೇಕಿಗಳಾದ ಸಜ್ಜನರಿಗೆ ಮಾತ್ರ ಇದು ರುಚಿಸೀತು.

ಇದರ ಮೊದಲನೆಯ ಮಂತ್ರದ ಮೊದಲನೆಯ ಶಬ್ದವೇ ನಮಗೆ ಒಂದು ಉತ್ತಮ ದೃಷ್ಟಿಯನ್ನು ತೋರಿಸುತ್ತಿದೆ. ಪರಮಾತ್ಮನೇ ಎಲ್ಲದರ ಒಡೆಯ. ಅವನಲ್ಲದ ಎಲ್ಲವೂ ಮತ್ತು ನಾವೂ ಅವನ ಆಸ್ತಿ ಹಾಗೂ ಸೇವಕರಷ್ಟೆ ಎಂಬ ತಾತ್ತ್ವಿಕ ಪಾರಮಾರ್ಥಿಕ ಜ್ಞಾನವೇ ಅದು. ಈ ದೃಷ್ಟಿಯನ್ನು ನಾವು ಇಟ್ಟುಕೊಳ್ಳದಿದ್ದರೆ, ನಮ್ಮ ಗಂಟಲಲ್ಲಿ ಈ ಉಪನಿಷತ್ತಿನ ಸಿಹಿ ಇಳಿಯದು ಹಾಗೂ ಗರಗಸದಿಂದ ನಮ್ಮ ಕತ್ತನ್ನೇ ನಾವು ಕುಯ್ದುಕೊಂಡಷ್ಟು ಕಷ್ಟವೆನಿಸುವುದು.

ಆಧ್ಯಾತ್ಮಿಕ ಮಾರ್ಗದಲ್ಲಿ ನಮ್ಮ ಮನಸ್ಸೆಂಬ ರಥವನ್ನು ಮುನ್ನಡೆಸುವ ಮಹಾನುಭಾವರು ಆ ಪರಮಾತ್ಮನಾದ ಲಕ್ಷ್ಮೀನಾರಾಯಣ, ಭಗವದ್ರಾಮಾನುಜರು, ಲೋಕಾಚಾರ್ಯರು ಹಾಗೂ ಮಣವಾಳಮಾಮುನಿಗಳು.

ಪ್ರಾಚೀನಾಚಾರ್ಯರ ಬರವಣಿಗೆಯನ್ನೇ ಅನುಸರಿಸಿ ಹೊರಟಿರುವ ಈ ನನ್ನ ವ್ಯಾಖ್ಯಾನಮಾರ್ಗದಲ್ಲಿ ರಸಿಕರು ವಿಹರಿಸಲಿ.

## ಗ್ರಂಥಕರ್ತೃ ಕಾಲ, ದೇಶ

ಚತುರ್ಮುಖಬ್ರಹ್ಮನ ನೂರುವಯಸ್ಸಿನಲ್ಲಿ ಈಗ ಮೊದಲ ಅರ್ಧವಾದ ಐವತ್ತು ವರ್ಷ ಕಳೆದಿದೆ. ಅವನ ಐವತ್ತೊಂದನೆಯವಯಸ್ಸಿನ ಮೊದಲದಿನ ಈಗ ನಡೆಯುತ್ತಿದೆ. ಈ ದಿನಕ್ಕೆ ಶ್ವೇತವರಾಹಕಲ್ಪ ಎಂದು ಹೆಸರು. ಒಂದೊಂದು ಕಲ್ಪದಿನದಲ್ಲೂ ಇಪ್ಪತ್ತೆಂಟು ಮನುಗಳ ಆಳ್ವಿಕೆಯ ಕಾಲಾವಧಿಗಳಿರುತ್ತವೆ. ಈಗ ಏಳನೆಯವನಾದ ವೈವಸ್ವತ ಮನುವಿನ ಆಳ್ವಿಕೆ. ಇವುಗಳಿಗೆ ಮನ್ವಂತರ ಎಂದು ಹೆಸರು. ಒಂದು ಮನ್ವಂತರದಲ್ಲಿ ಎಪ್ಪತ್ತೊಂದು ಸಲ ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳೂ ಮರಳಿ ಬರುತ್ತವೆ. ಈಗ ಇಪ್ಪತ್ತೆಂಟನೆಯ ಬಾರಿ ಕಲಿಯುಗ ಬಂದಿದೆ. ಇದರಲ್ಲಿ ಈಗ ಐದುಸಾವಿರದೆಂಟನೆಯ ಸಂವತ್ಸರ ನಡೆಯುತ್ತಿದೆ. ಇದಕ್ಕೆ ಪರಾಭವ ಎಂದು ಹೆಸರು. ಈ ವರ್ಷದಲ್ಲಿ ಸೂರ್ಯನು ಈಗ ಮಿಥುನರಾಶಿಗೆ ಬಂದು ಒಂಬತ್ತನೇ ದಿವಸ ನಡೆಯುತ್ತಿದೆ.

ತಿರುಪತಿಯ ಬೆಟ್ಟದ ಮೇಲೆ ಶ್ರೀನಿವಾಸನ ಪುಷ್ಪಸೇವಾಸಂಪನ್ನರಾಗಿದ್ದು ಹಾಗೂ ಭಗವದ್ರಾಮಾನುಜರಿಂದ ನಿಯಮಿತವಾದ 74 ಆಚಾರ್ಯ ಪೀಠಾಧಿಪತಿಗಳಲ್ಲಿ ಒಬ್ಬರಾಗಿದ್ದ ಅನಂದಾಳ್ವಾನ್ ಎಂಬ ಆರ್ಯರ ವಂಶಸ್ಥನಾಗಿ ಅವರ ಆ ಪೀಠಸ್ಥನಾಗಿ ಈಗಿರುವ 'ಶ್ರೀರಂಗ' ಎಂಬ ವಿದ್ವಾಂಸನು ಈ ಈಶಾವಾಸ್ಯೋಪನಿಷತ್ತಿನ ಭಾಷ್ಯಗ್ರಂಥವನ್ನು ವಿಸ್ತಾರವಾಗಿ ರಚಿಸಿ ಈ ದಿವಸ ಮುಗಿಸಿರುವನು.

ಈಶಾವಾಸ್ಯೋಪನಿಷತ್ತಿಗೆ ಶ್ರೀರಂಗಾಚಾರ್ಯ ಪಂಡಿತರು ರಚಿಸಿರುವ

ಭಾಷ್ಯರೂಪವಾದ ವ್ಯಾಖ್ಯಾನವು ಇಲ್ಲಿಗೆ ಮುಗಿದುದು.



# ಈಶಾವಾಸ್ಯೋಪನಿಷತ್

## ಆನಂದಭಾಷ್ಯ

### ರಾಮಾನಂದ ಯತೀಂದ್ರರ ಕೃತಿ

## ಪ್ರಸ್ತಾವನೆ

### ಶ್ರೀರಾಮನೇ ಎಲ್ಲ ಉಪನಿಷತ್ತುಗಳ ಗುರಿ

ಪರಮಾತ್ಮನು ಸಾಕೇತನಗರದ ರಾಜನಾಗಿ ಅವತರಿಸಿ ರಾಮನೆನಿಸಿದ. ಈ ಭೂಮಿಯಿಂದ ಹುಟ್ಟಿ ಬೆಳೆದ ಸೀತಾದೇವಿಯನ್ನು ತನ್ನ ಅರ್ಧಾಂಗಿನಿಯನ್ನಾಗಿಸಿಕೊಂಡು, ತನ್ನ ಅಪಾರ ಕರುಣೆಯಿಂದ ಎಲ್ಲರಿಗೂ ಅಕಾರಣ ಬಾಂಧವನೆನಿಸಿದ. ಎಲ್ಲ ಉಪನಿಷತ್ತುಗಳೂ ಇವನ ಮಹಿಮೆಯನ್ನೇ ನಾನಾರೀತಿಗಳಿಂದ ಕೊಂಡಾಡುತ್ತವೆ. ಮುಕ್ಕಣ್ಣನಾದ ಶಿವನೂ ಇವನ "ರಾಮ" ಎಂಬ ಮಂತ್ರವನ್ನೇ ಯಾವಾಗಲೂ ಜಪಿಸುತ್ತ ತನ್ನ ಹೃದಯಾಂತರಾಳದ ಆನಂದವು ಹೊರಹೊಮ್ಮಿ ರೋಮಾಂಚಿತನಾಗಿ ಆನಂದಬಾಷ್ಪಗಳನ್ನು ಸುರಿಸುತ್ತಿರುತ್ತಾನೆ. ಇಂತಹ ತನ್ನ ಅನುಭವವನ್ನು ಆತ ರಾಮನಾಮದ ಉಪದೇಶದ ಮೂಲಕ ಕಾಶಿಯಲ್ಲಿರುವ ಎಲ್ಲರಿಗೂ ಅವರವರ ಮರಣಕಾಲದಲ್ಲಿ ಉಂಟುಮಾಡಲೆಂದೇ ಅಲ್ಲಿ ವಾಸವಿದ್ದಾನೆ. ಈ ರಾಮನಾಮದ ಬಲದಿಂದಲೇ ಎಲ್ಲರಿಗೂ ಮುಕ್ತಿ ಸುಖ. ಇಂತಹ "ಸಾಕೇತೇಶ"ನೆನಿಸಿದ ಶ್ರೀರಾಮನು ನಮ್ಮೆಲ್ಲರಿಗೂ ಒಳ್ಳೆಯದನ್ನು ಮಾಡಲಿ.

ಪರಮಾತ್ಮನೆನಿಸಿದ ಪರಬ್ರಹ್ಮವೇ ಈ ರಾಮ. ಇವನು ಬ್ರಹ್ಮ ರುದ್ರಾದಿ ದೇವತೆಗಳಿಂದ ನಿತ್ಯವೂ ಪೂಜೆಗೊಳ್ಳುವವನು. ಜಗತ್ಕಾರಣನೂ ಮುಕ್ತಿಯನ್ನು ಕೊಡುವವನೂ ಇವನೇ. ಇವನಿಗೆ ದಿವ್ಯವಾದ ಶರೀರವೂ ಸಮುದ್ರದಂತೆ ತುಂಬಿರುವ ಗುಣಗಳೂ ಇವೆ. ಇವನನ್ನೇ ನಾನು ಆಶ್ರಯಿಸುವೆನು.

### ಪೂರ್ವಾಚಾರ್ಯರಿಗೆ ನಮಸ್ಕಾರ

ಉಪನಿಷತ್ತುಗಳ ಅರ್ಥವನ್ನು ತಿಳಿಯಲು ನಿಯಮಸೂತ್ರಗಳನ್ನು ಹಾಕಿಕೊಟ್ಟವರು ಮಹರ್ಷಿ ವೇದವ್ಯಾಸರು. ಸೂತ್ರಗಳ ಅರ್ಥವನ್ನು ಸರಿಯಾಗಿ ವಿವರಿಸಿದವರು ಮಹರ್ಷಿ ಬೋಧಾಯನರು. ಶ್ರೀಯುತರಾದ ರಾಘವಾನಂದರೆಂಬ ಆಚಾರ್ಯರೇ ನನ್ನ ಗುರು. ಇವರೆಲ್ಲರಿಗೂ ನನ್ನ ನಮಸ್ಕಾರ.

### ಗುರು ಅನುಗ್ರಹದಿಂದ ಗ್ರಂಥ ರಚನೆ

ಜ್ಞಾನವೂ, ಭಕ್ತಿಯೂ, ಕರುಣೆಯೂ, ಸದ್ಗುರುವಿನ ಲಕ್ಷಣ. ಅಂತಹ ಗುರುವಿಗೆ ನಮಸ್ಕರಿಸಿಯೇ ಈಶಾವಾಸ್ಯೋಪನಿಷತ್ತಿಗೆ "ಆನಂದ" ಎಂಬ ಈ ವಿವರಣ ರೂಪವಾದ ಭಾಷ್ಯ ಗ್ರಂಥವನ್ನು ರಚಿಸುವೆನು.

## ಮಂತ್ರ ೧

ಪರಮಾತ್ಮೋಪಾಸನೆಯನ್ನು ತಿಳಿಯುವ ಆಸೆಯಿಂದ ಬಂದಿರುವ ಶಿಷ್ಯನಿಗೆ ಆಚಾರ್ಯರು ಮಾಡುವ ಉಪದೇಶವೇ ಈ ಉಪನಿಷತ್ತು.

ಈ ಭೂಮಿಯಲ್ಲಿ ಮಾತ್ರವಲ್ಲದೆ ಪರಲೋಕದಲ್ಲೂ ಯಾವ ಚಿತ್ ಅಚಿತ್ ವಸ್ತು ವ್ಯತ್ಯಾಸವಾಗುತ್ತದೆಯೋ ಅದೆಲ್ಲವೂ ಶ್ರೀರಾಮನೆಂಬ ಹೆಸರಿನ ಪರಮಪುರುಷನಿಂದ ನಿಯಂತ್ರಿಸಲ್ಪಡುವುದಾಗಿ ಇದೆ. ಅವನೇ ವ್ಯಾಪಕ ಈಶ, ಈಶ್ವರ, ಪರಮಾತ್ಮ, ಪರಬ್ರಹ್ಮ. ಆ ಈಶನಿಂದ ಕೊಡಲ್ಪಟ್ಟ ಅಂದರೆ ಅವನ ಇಚ್ಛಾನುಸಾರವಾಗಿ

ನಮಗೆ ಸಿಕ್ಕಿರುವಷ್ಟೆ ಭೋಗವಸ್ತುಗಳಿಂದ, ಅಥವಾ ದೋಷ ಚಿಂತನಪೂರ್ವಕವಾಗಿ ಮಾನಸಿಕವಾಗಿ ನಮ್ಮಿಂದ ಬಿಡಲ್ಪಟ್ಟ ವಸ್ತುಗಳಿಂದ ಮಾತ್ರ ಜೀವನ ನಡೆಸು. ಈ ಜಗತ್ತಿನಲ್ಲಿ ಸ್ವಂತದ್ದು ಎನ್ನಲು ಯಾರಿಗೆ ಏನಿದೆ. ಯಾವುದೂ ಯಾರದೂ ಅಲ್ಲ. ಎಲ್ಲವೂ ಪರಮಾತ್ಮನದೇ ಎಂದು ಭಾವ. ಈ ಮಂತ್ರದಲ್ಲಿ "ಇದೆ" ಎಂಬ ಹೆಚ್ಚಿಗೆ ಪದವನ್ನೂ 'ಸ್ವಿತ್' ಎಂಬ ಪದಕ್ಕೆ ಆಕ್ಷೇಪಾರ್ಥವನ್ನೂ ಇಟ್ಟುಕೊಳ್ಳಬೇಕು.

## ಮಂತ್ರ ೨

"ಪ್ರತಿದಿನವೂ ಸಂಧ್ಯಾವಂದನೆ ಮಾಡಬೇಕು"[1] 'ಸೂರ್ಯ ಚಂದ್ರರ ಗ್ರಹಣವಾದಾಗ ಸ್ನಾನ ಮಾಡಬೇಕು'[2] ಎಂಬಂತಹ ವೈದಿಕ ವಿಧಿ ನಿಯಮಗಳನ್ನು ಅನುಸರಿಸಿ, ಇಂತಹ ನಿತ್ಯ ನೈಮಿತ್ತಿಕ ಕರ್ಮಗಳನ್ನು ವಿದ್ಯೆ-ಉಪಾಸನೆ ಪೂರ್ತಿಯಾಗುವವರೆಗೂ ಮಾಡುತ್ತ ಬದುಕಿರಬೇಕು. ಬದುಕು ವಿದ್ಯಾಸಿದ್ಧಿಯಾಗುವವರೆಗೆ ಬೇಕೇ ಬೇಕು. ಕರ್ಮವೂ ಬೇಕೇ ಬೇಕು. ಅಂಗವಾದ ಕರ್ಮವಿಲ್ಲದೆ ಯಾರಿಗೂ ವಿದ್ಯೆ ಸಿದ್ಧಿಸದು. ಪರಮಾತ್ಮನ ಆಜ್ಞಾಪಾಲನ ರೂಪವಾದ ಕರ್ಮಗಳನ್ನು ಮಾಡುವುದೇ ಅವನಿಗೆ ಪರತಂತ್ರರಾದ ನಮಗೆ ತಕ್ಕದ್ದು ಕರ್ಮದಿಂದ ಬಂಧ ಬರುವುದಿಲ್ಲವೇ ಎಂದು ಹೆದರಬೇಕಿಲ್ಲ. ಕರ್ಮಫಲದ ಆಸೆಯಿಲ್ಲದೆ ಮಾಡುವ ಕರ್ಮಗಳು ಎಂದೂ ಬಂಧವನ್ನು ಕೊಡಲಾರವು.

## ಮಂತ್ರ ೩

ಮನುಷ್ಯರಲ್ಲೂ ದೇವತೆಗಳಲ್ಲೂ ಯಕ್ಷ, ಗಂಧರ್ವ ಕಿನ್ನರಾದಿಗಳಲ್ಲೂ ಸಹ ಯಾರು ಬ್ರಹ್ಮಜ್ಞಾನವಿಲ್ಲದೆ ತಮ್ಮನ್ನೇ ತಾವು ಸಂಸಾರವೆಂಬ ಹಳ್ಳದಲ್ಲಿ ಬೀಳಿಸಿಕೊಳ್ಳುವರೋ ಅವರೆಲ್ಲರೂ ಮುಂದೆ ನರಕಕ್ಕೆ ಸೇರಬೇಕಾಗುವುದು. ಆದುದರಿಂದ ಈಗಿಂದೀಗಲೇ ಎಚ್ಚರಿಕೆಯಿಂದ ಶೀಘ್ರವಾಗಿ ಬ್ರಹ್ಮಜ್ಞಾನ ಪಡೆಯಲು ಪ್ರಯತ್ನಿಸಬೇಕು.

## ಮಂತ್ರ ೪

ಈ ಮಂತ್ರ ಪರಮಾತ್ಮನ ವಿಚಿತ್ರಶಕ್ತಿಯನ್ನು ತಿಳಿಸುತ್ತದೆ. ಅಥವಾ ಈಶಾವಾಸ್ಯ ಮಂತ್ರದಲ್ಲಿ ವ್ಯಾಪಕನೆಂದು ತಿಳಿಸಲಾದ ಪರಮಾತ್ಮನೂ ವ್ಯಾಪ್ಯವಾದ ಜಗತ್ತೂ, ಪರಸ್ಪರ ವಿಭಿನ್ನ ಲಕ್ಷಣಗಳಿಂದ ಕೂಡಿವೆ ಎಂಬುದನ್ನು ತಿಳಿಸುತ್ತದೆ.

ತನಗೆ ಸಮವೂ ಅಧಿಕವೂ ಬೇರೊಂದಿಲ್ಲದ ಈ ಬ್ರಹ್ಮವೊಂದೇ ಎಲ್ಲ ದೇವತೆಗಳನ್ನೂ ತನ್ನಲ್ಲಿ ಹೊಂದಿದೆ. ಅನೇಕ ಸಂಖ್ಯೆಯಲ್ಲಿರುವ ದೇವತೆಗಳೂ ಸಹ ತಮ್ಮ ಅಂತರಾತ್ಮವಾದ ಇದನ್ನು ಈವರೆಗೂ ತಿಳಿದಿಲ್ಲ.

## ಮಂತ್ರ ೫

ಏಕಕಾಲದಲ್ಲಿ ಪರಮಾತ್ಮನು ಎಲ್ಲದರ ಒಳಗೂ, ಹೊರಗೂ ಇರುತ್ತಾನೆ ಎಂಬ ಇದೇ ಮುಂತಾದ ಅಂಶಗಳಿಂದ ಈ ಮಂತ್ರ ಹಿಂದಿನ ಮಂತ್ರದಲ್ಲಿ ತಿಳಿಸಿದ ವಿಚಿತ್ರಶಕ್ತಿಗಳನ್ನೂ ವಿಭಿನ್ನ ಲಕ್ಷಣಗಳನ್ನೂ ದೃಢಪಡಿಸುತ್ತದೆ.

---

1. ಅಹರಹಃ ಸಂಧ್ಯಾಮುಪಾಸೀತ. ದ. ಸ್ಮೃ.
2. ರಾಹೂಪರಾಗೇಸ್ನಾಯಾತ್. ಬಾ. ಸ್ಮೃ

## ಮಂತ್ರ ೬, ೭

ಹಿಂದಿನ ಮಂತ್ರದಲ್ಲಿ ತಿಳಿಸಿದಂತೆ ಎಲ್ಲದರ ಅಂತರಾತ್ಮನೂ ಈಶನೇ ಎಂಬ ಜ್ಞಾನವನ್ನು ಪಡೆದು ಉಪಾಸಕನಾಗಿರುವವನಿಗೆ ಜಗತ್ತಿನ ಬಗ್ಗೆ ಅಸಹ್ಯವಾಗಲೀ, ಮೋಹವಾಗಲೀ, ಜಗತ್ತಿನಿಂದ ದುಃಖವಾಗಲೀ ಆಗುವುದಿಲ್ಲ ಎಂಬ ಐಹಿಕ ಫಲವನ್ನು ತಿಳಿಸಲಾಗಿದೆ.

## ಮಂತ್ರ ೮

ಎಲ್ಲವನ್ನೂ ತನ್ನ ಶರೀರವನ್ನಾಗಿಸಿಕೊಂಡಿರುವ ಪರಮಾತ್ಮನನ್ನು ಉಪಾಸಿಸುವವನಿಗೆ ಅವನ ನಿಷ್ಕಲಂಕ ಸ್ವರೂಪದ ದರ್ಶನವಾಗುವುದು. ಪರಮಾತ್ಮನಿಗೆ ಇಂತಹ ದಿವ್ಯರೂಪವೂ ಇರುವುದಾಗಿ ಹದಿನಾರನೆಯ ಮಂತ್ರದಲ್ಲಿ ತಿಳಿಸಲಾಗುವುದು. ಇಂತಹ ಅನುಭವವು ಇಹಲೋಕದಲ್ಲೇ ಆಗುವ ಪರಮಾತ್ಮದರ್ಶನ. ಇದೇ ಬ್ರಹ್ಮಸಮಾಧಿ. ಇಂತಹ ಬ್ರಹ್ಮನಿಷ್ಠನ ಗುಣ, ಸಾಮರ್ಥ್ಯ ಕಾರ್ಯಗಳನ್ನು ಇಲ್ಲಿ ತಿಳಿಸಲಾಗಿದೆ. ಉಪಾಸಕನು ಜೀವಾತ್ಮನಾದ ತನ್ನ ಪರಮಾತ್ಮಾಧೀನತೆ ಹಾಗೂ ಪರಿಶುದ್ಧತೆಯನ್ನು ಅರಿತು ಜಿತೇಂದ್ರಿಯನಾಗಿ ಜಗದ್ರಹಸ್ಯವಾದ ಪರಮಾತ್ಮತತ್ತ್ವವನ್ನು ಇತರರಿಗೂ, ಸ್ವಾನುಭವ ಪೂರ್ವಕವಾಗಿ ತಿಳಿಯಪಡಿಸುವನು. ಅಥವಾ ಪರಮಾತ್ಮನೇ ಇಂತಹ ಪರಿಶುದ್ಧ ರೂಪದ ಜೀವ ತತ್ತ್ವವನ್ನು ವ್ಯಾಪಿಸಿ ಅದರ ಮೂಲಕ ಜಗತ್ತಿನಲ್ಲಿ ತತ್ತ್ವ ವಿಚಾರಗಳನ್ನು ಪ್ರಚುರಪಡಿಸುವನು ಎಂದರ್ಥ.

## ಮಂತ್ರ ೯

ಇಲ್ಲಿಂದ ಮುಂದೆ ಪಾರಲೌಕಿಕವಾದ ಮುಕ್ತಿ ಸುಖವೆಂಬ ಮುಖ್ಯ ಫಲಿತಾಂಶಕ್ಕೆ ಉಪಾಸಕನು ಕರ್ಮ, ಜ್ಞಾನ ಎರಡನ್ನೂ ಅಂಗಾಂಗಿ ಭಾವದಿಂದ ಕೂಡಿಸಿ ಆಚರಿಸಬೇಕೆಂಬ ಮುಖ್ಯವಾದ ಉಪಾಯವನ್ನು ತಿಳಿಸಲಾಗುವುದು. ಅವರ ವಿಚಾರ ಮಾಡುತ್ತ ಕರ್ಮಜ್ಞಾನಗಳ ಪ್ರತ್ಯೇಕತೆಯ ದುಷ್ಫಲಗಳನ್ನು ಈ ಮಂತ್ರ ತಿಳಿಸುವುದು.

## ಮಂತ್ರ ೧೦, ೧೧

ಪರಮಾತ್ಮಧ್ಯಾನನಿಷ್ಠರಾದ ಹಿರಿಯರ ಉಪದೇಶವನ್ನೇ ಅನುಸರಿಸಿ, ಉಪಾಸನರೂಪವಾದ ಜ್ಞಾನಕ್ಕೆ ನಿಷ್ಕಾಮಕರ್ಮಯೋಗವನ್ನು ಅಂಗವಾಗಿಸಿಕೊಂಡರೆ ಮಾತ್ರ, ಈ ವಿಶಿಷ್ಟವಾದ ಜ್ಞಾನವು ಮುಕ್ತಿಗೆ ಮುಖ್ಯ ಸಾಧನವಾಗುವುದು. ಈ ವಿಶಿಷ್ಟವಾದ ಜೋಡಿಯಲ್ಲಿ ಜ್ಞಾನದ ಅಂಗವಾದ 'ಅವಿದ್ಯೆ' ಎಂದು ಹೆಸರಿಸುವ ನಿಷ್ಕಾಮಕರ್ಮಯೋಗದಿಂದ ಈ ಜ್ಞಾನನಿಷ್ಠೆಗೂ ಜ್ಞಾನದ ಫಲಗಳಿಗೂ ವಿರೋಧವಾಗುವಂತಹ ಎಲ್ಲ ವಿಘ್ನಗಳೂ ನಾಶವಾಗುವುವು. ಮುಖ್ಯವಾದ ಜ್ಞಾನವು 'ಪರಮಭಕ್ತಿ' ಎನಿಸಿ ಪರಮಾತ್ಮನ ಪ್ರಾಪ್ತಿಗೆ ಕಾರಣವಾಗುವುದು.

ಇದೇ ಉಪನಿಷತ್ತಿನ ಎರಡನೆಯ ಮಂತ್ರದಲ್ಲಿ ನಿಷ್ಕಾಮಕರ್ಮಯೋಗವನ್ನು ಪರಮಭಕ್ತಿಗೆ ಕಾರಣ ಎನ್ನಲಾಯಿತು. ಅದನ್ನೇ ಇಲ್ಲಿ ಪರಮಭಕ್ತಿಯ ಅಭಿವೃದ್ಧಿಗೂ ಕಾರಣ ಎನ್ನಲಾಗಿದೆ.

## ಮಂತ್ರ ೧೨, ೧೩, ೧೪

ಪರಮಾತ್ಮೋಪಾಸನರೂಪವಾದ ಜ್ಞಾನವು ಸಮಾಧಿಸ್ಥಿತಿಯಲ್ಲಿ ನಿಲ್ಲಬೇಕಾದರೆ ನಿತ್ಯನೈಮಿತ್ತಿಕ ಕರ್ಮಗಳು ಅತ್ಯವಶ್ಯಕ ಎಂಬುದಷ್ಟೇ ಸಾಲದು, ನಮ್ಮ ಯೋಗಸಾಧನೆಗೆ ಅಂಗವಾಗಿ ಆತ್ಮಗುಣಪೂರ್ತಿಯೂ ಸನ್ನದ್ಧತೆಯೂ ಮುಖ್ಯ. ಇದಕ್ಕಾಗಿ ಕೆಟ್ಟ ಅಭ್ಯಾಸಗಳನ್ನು ಬಿಡುವುದೂ ಬಹಳ ಮುಖ್ಯ. ಇದನ್ನು ವಿಚಾರಮಾಡುತ್ತ ಎಷ್ಟೇ ಕೆಟ್ಟ ಅಭ್ಯಾಸಗಳನ್ನು ಬಿಟ್ಟು ಶುದ್ಧವಾಗಿದ್ದರೂ ಸಾಲದು. ಪರಮಾತ್ಮಧ್ಯಾನವೂ ಅದರ ಜೊತೆಗೆ ಮುಖ್ಯ. ಕೆಟ್ಟ

ಅಭ್ಯಾಸಗಳನ್ನು ಬಿಡುವುದಾಗಲಿ ಧ್ಯಾನ ಸಮಾಧಿಯಲ್ಲಿ ಪರಮಾತ್ಮನನ್ನು ಅನುಭವಿಸುತ್ತಿರುವುದಾಗಲಿ ಯಾವುದೊಂದೂ ಮುಕ್ತಿಗೆ ಸಾಧಕವಲ್ಲ. ಇವೆರಡೂಕೂಡಿ ನಡೆದರೇನೇ ಉಪಾಸನರೂಪವಾದ ಆ ಸಮಾಧಿಯು ಪರದಲ್ಲಿ ಪರಮಾತ್ಮಾನುಭವಸುಖವನ್ನು ನಮಗೆ ಒದಗಿಸಬಲ್ಲದು, ಎಂದು ಈ ಮಂತ್ರಗಳಲ್ಲಿ ತಿಳಿಸಲಾಗಿದೆ.

## ಮಂತ್ರ ೧೫

ನಮ್ಮ ಸಾಧನಸಲಕರಣೆಗಳಾಗಿ ಕರ್ಮಜ್ಞಾನಭಕ್ತಿಗಳೂ ಇವುಗಳ ಅಂಗವಾಗಿ ವಿರುದ್ಧ ಆಚರಣೆಗಳ ತ್ಯಾಗವೂ ವೈರಾಗ್ಯವೂ ಎಷ್ಟೇ ಇದ್ದರೂ ಸಾಲದು. ಇವೆಲ್ಲದರ ಕಾರಣವೂ ಮುಕ್ತಿಗೆ ಕಾರಣವೂ ಆದುದು ಆ ಪರಮಾತ್ಮನ ದಯೆಯೊಂದೇ. ಅದನ್ನು ಪಡೆಯಲು ಅವನನ್ನೇ ಈಗ ಪ್ರಾರ್ಥಿಸಲಾಗುತ್ತಿದೆ ನಮ್ಮ ಮನಸ್ಸು ಜೀವತತ್ತ್ವವನ್ನೂ ಪರಮಾತ್ಮತತ್ತ್ವವನ್ನೂ ಗ್ರಹಿಸಬೇಕು.

ಅದಕ್ಕಾಗಿ ಮನಸ್ಸಿಗೆ ಅಂಟಿರುವ ಐಹಿಕ ಆಮುಷ್ಮಿಕ ಸಕಲಭೋಗಭಾವನೆಗಳನ್ನೂ ಮೊದಲು ಕಳಚಿಹಾಕಬೇಕು. ಇದು ನಮ್ಮಿಂದಲೇ ಅಸಾಧ್ಯ. ಪರಮಾತ್ಮನೇ ಇದನ್ನು ಮಾಡಬೇಕು ಹೀಗೆ "ಪರಿಶುದ್ಧವಾದ ಮನಸ್ಸಿನ ಮೂಲಕ ನಾವು ನಮ್ಮ ಹಾಗೂ ಪರಮಾತ್ಮನ ನಿರಂತರ ಧ್ಯಾನ ಮಾಡಬೇಕು"[1] ಎಂಬ ವೇದಾರ್ಥವೂ, ಹಾಗೆ ಮಾಡಲು ಪರಮಾತ್ಮನ ಅನುಗ್ರಹವೇ ಅತಿ ಮುಖ್ಯ ಎಂಬ ಅಂಶವೂ ಇದರಿಂದ ತಿಳಿಯುವುದು. ಈ ಮಂತ್ರದಲ್ಲಿ 'ದೃಷ್ಟಿ' ಎಂದರೆ ಧ್ಯಾನದ ಕಾಲದಲ್ಲಿ ಪರಮಾತ್ಮನು ನಮ್ಮ ಕಣ್ಣಿನಲ್ಲೇ ಕಟ್ಟಿರುವಂತೆ ಆಗುವಿಕೆ. ಇಂತಹ ದರ್ಶನದ ನಂತರವೇ ಪರಲೋಕದಲ್ಲಿ ಜೀವಾತ್ಮ ಸ್ವರೂಪ ಗುಣಗಳ ಆವಿರ್ಭಾವವೂ ಪರಮಾತ್ಮನ ಅನುಭವವೂ ಸಾಧ್ಯ. ಇಂತಹ ಮುಖ್ಯ ಅನುಭವಕ್ಕೆ ವಿಷಯವಾದ ಪರಮಾತ್ಮನೇ ಈ ಅನುಭವ ಮತ್ತು ಅನುಭವಸಾಧನಗಳಿಗೂ ಮುಖ್ಯ ಉಪಾಯ ಎಂಬ ನಿರ್ಧಾರವನ್ನು "ಯಾವನನ್ನು ಈ ಪರಮಾತ್ಮನು ದಯೆಗೈದು ಸ್ವೀಕರಿಸುವನೋ, ಅವನು ಮಾತ್ರ ಆ ಪರಮಾತ್ಮನನ್ನು ಕೂಡಿಕೊಂಡು ಅನುಭವಿಸುವನು"[2] ಎಂಬ ಉಪನಿಷತ್ ವಚನವು ಸಾರುತ್ತದೆ.

## ಮಂತ್ರ ೧೬

ನಮ್ಮ ಮನಸ್ಸನ್ನು ಶುಚಿಗೊಳಿಸುವುದಷ್ಟೇ ಅಲ್ಲದೆ, ಪರಮಾತ್ಮನು ತನ್ನ ದಿವ್ಯರೂಪದ ದರ್ಶನ ಕೊಡಲು ತನ್ನನ್ನೂ ಸ್ವಲ್ಪ ನಮಗಾಗಿ ಅಣಿಗೊಳಿಸಿಕೊಳ್ಳಬೇಕೆಂದೂ, ಅದಕ್ಕಾಗಿ ನಾವು ಪ್ರಾರ್ಥನೆ ಮಾಡಬೇಕೆಂದೂ ತಿಳಿಸಿ, ಆ ಪ್ರಾರ್ಥನೆಯನ್ನು ಈ ಮಂತ್ರದಲ್ಲಿ ಸಲ್ಲಿಸಲಾಗುತ್ತದೆ.

"ಪ್ರಜಾಪತಿಯು ಎಲ್ಲದರ ಒಳಗೂ ಸಂಚರಿಸುತ್ತಿದ್ದಾನೆ"[3] ಎಂಬ ವೇದವಾಕ್ಯದಲ್ಲಿ ಪ್ರಕರಣ ನಿರ್ಣಯಾನುಸಾರ ಪರಮಾತ್ಮನೇ ವಿಷ್ಣು, ಅವನೇ ಪ್ರಜಾಪತಿ ಎನಿಸಿರುವನು. ಅವನೇ ಸೂರ್ಯನ ಅಂತರ್ಯಾಮಿಯಾಗಿ ದಿವ್ಯರೂಪದಿಂದಿರುವ ನಾರಾಯಣನಲ್ಲವೆ. ಅವನ ದಿವ್ಯ ರೂಪ ದರ್ಶನ ಮಾಡಲು ನಮಗಿರುವ ಯೋಗ್ಯತೆಯನ್ನು ನಾವು ನಿವೇದಿಸಿಕೊಳ್ಳಬೇಕು. ಯಾವಾಗಲೂ ಅವನ ಅಧೀನವಾಗಿರುವಿಕೆಯೇ ನಮ್ಮ ಯೋಗ್ಯತೆ. ಅವನು ನಮ್ಮ ಅಂತರಾತ್ಮನಾಗಿರುವುದರಿಂದಲೇ ಅಲ್ಲವೆ 'ಅವನೇ ನಾನು' ಎನ್ನುವಷ್ಟು ನಿಕಟ ಸಂಬಂಧ ನಮಗೂ ಅವನಿಗೂ ಇದೆ. ಇಂತಹ ವಿಶಿಷ್ಟ ಸಂಬಂಧ ಜ್ಞಾನವೇ ನಮ್ಮ ಯೋಗ್ಯತೆಯ ಅರಿವಿನ ಮೂಲಭೂತ ಅಂಶ. ಇದನ್ನೇ ಇಲ್ಲಿ ನಿವೇದಿಸಲಾಗಿದೆ.

---

1. ಮನಸೈವಾನುದ್ರಷ್ಟವ್ಯಮ್. ಬೃ ೬. ೪. ೧೯.
2. ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್.
3. ಪ್ರಜಾಪತಿಶ್ಚರತಿ ಗರ್ಭೇ ಅನ್ತಃ. ತೈ. ಆರ. ೩. ೧೨.

## ಮಂತ್ರ ೧೭

ಪರಮಾತ್ಮಾಧೀನರಾದ ನಮ್ಮನ್ನು ನಾವೇ ಪರಮಾತ್ಮನಿಗೆ ಅರ್ಪಿಸಿಕೊಳ್ಳುವುದು ಈ ನಂತರದ ಕರ್ತವ್ಯ. ರಾಜಾಧಿರಾಜನಾದ ಪರಮಾತ್ಮನಿಗೆ ಪರಿಶುದ್ಧವೂ ಮರಣವಿಲ್ಲದುದರಿಂದ ಅಮೃತವೆನಿಸಿಯೂ ಇರುವ ಜೀವ ತತ್ತ್ವವಾದ ನಮ್ಮನ್ನು ಅರ್ಪಿಸುವುದು ಉಚಿತ. ನಮ್ಮ ಈ ಶರೀರವು ಕೊನೆಗೆ ಬೂದಿಯಾಗಿ ಮೃತವೆನಿಸುವುದ ರಿಂದ ಅರ್ಪಿಸಲು ಅದು ಉಳಿದಿರುವುದಿಲ್ಲವಷ್ಟೆ. ಓಂಕಾರವು ಈ ಆತ್ಮಾರ್ಪಣೆಯನ್ನೇ ಇಲ್ಲಿ ತಿಳಿಸುವುದು ಅಥವಾ ಪರಮಾತ್ಮನ ಹೆಸರಾದ ಓಂಕಾರದಿಂದ ಅವನನ್ನು ನಾವು ಈಗ ಕೂಗಿ ಕರೆಯಬೇಕು. ಎಲ್ಲದರ ಒಡೆಯನಾದ ಅವನಿಗೆ ತನ್ನ ಅಧೀನದ ವಸ್ತುವೆಲ್ಲದರ ಸ್ವರೂಪ ಸ್ವಭಾವ ಕರ್ತವ್ಯಪಾಲನೆ ಮುಂತಾದ ಎಲ್ಲದರ ಬಗ್ಗೆಯೂ ಅರಿವಿದೆ. ನಾವು ನಮ್ಮ ಬಗ್ಗೆ ಹೇಳಿಕೊಳ್ಳುವುದು ಎಷ್ಟು ನಿಜವೋ, ಅದು ಅವನಿಗೆ ಗೊತ್ತು. ನಮ್ಮ ಬಗ್ಗೆ ಅವನೇ ಎಲ್ಲವನ್ನೂ ನೆನೆಸಿಕೊಂಡು ನಮ್ಮನ್ನು ಅನುಗ್ರಹಿಸಬೇಕು. ಹೀಗೆಂದೇ ನಾವು ಪ್ರಾರ್ಥಿಸಬೇಕು. ಹೀಗೆ ಅವನೇ ನಮಗೆ ಫಲ, ಅವನೇ ಇದಕ್ಕೆ ಸಾಧನ ಎಂಬ ಈ ನಿಷ್ಠೆಯೇ ಶರಣಾಗತಿ—ಪ್ರಪತ್ತಿ.

## ಮಂತ್ರ ೧೮

ನಮ್ಮ ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿಗಳೇನೇ ಇದ್ದರೂ, ಹೇಗೇ ಇದ್ದರೂ ಎಲ್ಲದಕ್ಕೂ ಪರಮಾತ್ಮನೇ ಮುಖ್ಯ ಕಾರಣ ಎನ್ನಲಾಯಿತು. ಆದುದರಿಂದ ನಮ್ಮನ್ನು ಐಹಿಕ ಸ್ಥಿತಿಯಿಂದ ಪಾರಲೌಕಿಕ ಸ್ಥಿತಿಗೆ ಮುನ್ನಡೆ ಸುವವನೂ ಮುಖ್ಯವಾಗಿ ಅವನೇ. ವಿಶ್ವದ ಜ್ಞಾನವಿಜ್ಞಾನಗಳ ಬಗ್ಗೆ ಅರಿತವನೂ ಅವನೇ. ಅವನೇ ನಮ್ಮನ್ನು ಈವರೆಗೆ ಸನ್ಮಾರ್ಗದಲ್ಲಿ ಮುನ್ನಡೆಸಿರುವವನಲ್ಲವೆ. ಅವನೇ ಮುಂದೆಯೂ 'ಅರ್ಚಿರಾದಿ' ಎಂಬ ದಿವ್ಯಮಾರ್ಗದಿಂದ ತನ್ನ ದಿವ್ಯಲೋಕಕ್ಕೆ ನಮ್ಮನ್ನು ಕರೆದೊಯ್ದು ತನ್ನ ಅನುಭವ ಸೇವೆಗಳನ್ನು ಕರುಣಿಸಲಿ. ಅಲ್ಲಿ ಮಾಡುವ ಸೇವೆಯ ಅಂಶಾಂಶವಾಗಿರುವ 'ನಮಸ್ಕಾರ' ಎಂಬ ಮಾತೊಂದನ್ನು ಮಾತ್ರ ಇಲ್ಲೇ ಅವನಿಗೆ ಮತ್ತೆಮತ್ತೆ ಹೇಳೋಣ. ನಿರ್ಗತಿಕರಾಗಿ ಏನೂ ಇಲ್ಲದ ನಮ್ಮಲ್ಲಿ ಅವನಿಗಾಗಿ ಕೊಡಲು ನಮ್ಮದಾಗಿ ಉಳಿದಿರುವುದಾದರೂ ಏನು? ಈ ನಮಸ್ಕಾರ ಎನ್ನುವುದೊಂದೇ. ಇದಕ್ಕಿಂತ ಅವನಿಗೆ ಸಂತೋಷಕರವಾದುದೇನನ್ನೂ ನಾವು ಮಾಡಲಾರೆವು.

ಹೀಗೆ ಈ ಕೊನೆಯೆರಡು ಮಂತ್ರಗಳಲ್ಲಿ ಎಲ್ಲ ಸಾಧನಗಳಿಗೂ ಫಲ ಸಿದ್ಧಿಯಾಗಲು ಕಾರಣವೆನಿಸುವ ಶರಣಾಗತಿಯನ್ನು ತಿಳಿಸಲಾಯಿತು.

## ನಿಗಮನ

ಇಲ್ಲಿಗೆ ಶ್ರೀಯುತರೂ ಪೂಜ್ಯರೂ ಆದ ರಾಮಾನಂದ ಯತೀಂದ್ರರ ಕೃತಿಯಾದ

ಆನಂದ ಭಾಷ್ಯವು ಈಶಾವಾಸ್ಯೋಪನಿಷತ್ತಿಗೆ ಮುಗಿಯಿತು.



# ಈಶಾವಾಸ್ಯೋಪನಿಷತ್

## ಶಾಂತಿಮಂತ್ರ

ಓಂ

**ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ[1] ।**

**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**

**ಓಂ ಶಾಂತಿಃ ಶಾಂತಿಃ ಶಾಂತಿಃ.**

### ವಿವರಣೆ

ಈ ಮಂತ್ರದ ಪ್ರತಿಪದಾರ್ಥ ವಿವರಣೆಗಳನ್ನು ಈ ಗ್ರಂಥದ ಮೊದಲು ಕೊಡಲಾಗಿದೆ. ಮತ್ತೆ ಕೆಲವು ಉಪಯುಕ್ತವಾದ ವಿವರಣೆಗಳನ್ನು ಈಗ ಕೊಡಲಾಗುವುದು. ಇಲ್ಲಿ ಈ ಮಂತ್ರ ಓಂಕಾರದ ಅರ್ಥವನ್ನೂ ಮಹಿಮೆಯನ್ನೂ ತಿಳಿಸುವುದು. ವೇದವೇದಾಂತಗಳ ಅಧ್ಯಯನ, ಪಠನ, ಹಾಗೂ ಜಪ ಉಪಾಸನಾದಿಗಳ ಆದ್ಯಂತಗಳಲ್ಲಿ ಓಂಕಾರದ ಬಳಕೆ ಸರ್ವಸಮ್ಮತವಾದುದು. ಸಮಸ್ತ ವೇದಗಳೂ ವೇದಾರ್ಥಗಳೂ ಓಂಕಾರದಲ್ಲೇ ಅಡಗಿವೆ. ಹೀಗೆ ವೇದಾರ್ಥವಾದ ಶ್ರೀಹರಿಯ ಸ್ಮರಣೆಯೂ ಅವನ ಹೆಸರಾದ ಓಂಕಾರದ ಉಚ್ಚಾರಣೆಯೂ ಸಮಸ್ತ ಫಲಗಳನ್ನೂ ಕೊಡುವುದು, ಸಮಸ್ತವಾದ ಲೋಪದೋಷಗಳನ್ನೂ ಪರಿಹರಿಸುವುದು, ಶಾಂತಿಯನ್ನು ಉಂಟುಮಾಡುವುದು

### ಪದವಿವರಣೆ[2]

**ಅದಃ** – ನಮಗೆ ಕಾಣದ ಪರಲೋಕವೂ,

**ಇದಂ** – ನಮಗೆ ಕಾಣುವ ಇಹಲೋಕವೂ,

**ಪೂರ್ಣಂ** – ವೇದವೆಂಬ ಶಬ್ದರಾಶಿಯಿಂದ ತುಂಬಿದೆ. ಎಲ್ಲ ಜಗತ್ತೂ ಶಬ್ದದಿಂದಲೇ ಹುಟ್ಟಿದೆ. "ಆ ಪರಮಾತ್ಮನು 'ಭೂಃ' ಎಂದು ವೇದಮಂತ್ರವನ್ನು ಹೇಳಿ, ನಂತರ ಅದರ ಸಹಾಯದಿಂದ ಭೂಮಿಯನ್ನು ಸೃಷ್ಟಿಸಿದ" ಎಂಬ ಇವೇ ಮುಂತಾದ ವಚನಗಳು ಈ ಬಗ್ಗೆ ಸಾಕಷ್ಟಿವೆ. ಇಂತಹ ಮಂತ್ರಗಳಿಗೆ 'ವ್ಯಾಹೃತಿ'[3] ಎಂದು ಹೆಸರು. ಇವೇ ಎಲ್ಲ ಲೋಕಗಳಿಗೂ ಕಾರಣ. ಕಾರಣವು ಯಾವಾಗಲೂ ಕಾರ್ಯವಸ್ತುಗಳನ್ನು ವ್ಯಾಪಿಸಿರುವುದು ಸಹಜ.

**ಪೂರ್ಣಾತ್** – ತುಂಬಿಸಲಾಗುವ ಈ ಲೋಕಕ್ಕಿಂತಲೂ,

**ಪೂರ್ಣಂ** – ತುಂಬುವ ವಸ್ತುವು,

**ಉದಚ್ಯತೇ** – ಮೇಲಾಗಿ ಶ್ರೇಷ್ಠವೆನಿಸಿ ಪೂಜಾರ್ಹವಾಗುವುದು.

---

1. ಉದಂಚ್ಯತೇ ಎಂಬ ಪಾಠಾಂತರದೊಡನೆ ಈ ಮಂತ್ರ ಬೃಹದಾರಣ್ಯಕೋಪನಿಷತ್ತಿನ ಐದನೆಯ ಅಧ್ಯಾಯದ ಮೊದಲಮಂತ್ರವಾಗಿದೆ. ಅಂಚುಧಾತುವನ್ನು ಅಚು ಎಂದೂ ಕೆಲವರು ಪಠಿಸುವುದರಿಂದ ಈ ಪಾಠಾಂತರದಲ್ಲಿ ಅರ್ಥದ ವ್ಯತ್ಯಾಸ ಏನೂ ಇಲ್ಲ.
2. ರಂಗರಾಮಾನುಜಮುನಿಗಳ ಭಾಷ್ಯವನ್ನು ಅನುಸರಿಸಿದ ಈ ವಿವರಣೆ.
3. ಭೂಃ, ಭುವಃ, ಸುವಃ ಇವು ವ್ಯಾಹೃತಿ ಮಂತ್ರಗಳು. ಇವು ಕ್ರಮವಾಗಿ ಮೂರು ವೇದಗಳ ಸಾರ.

**ಪೂರ್ಣಸ್ಯ** – ವೇದದ ಸೂಕ್ಷ್ಮಾಂಶವಾದ ವ್ಯಾಹೃತಿ ಮಂತ್ರಗಳಿಂದ ತುಂಬಿದ ಈ ಲೋಕದಲ್ಲಿರುವ,

**ಪೂರ್ಣಂ** – ಆ ವ್ಯಾಹೃತಿ ಮಂತ್ರಗಳೆಂಬ ವಸ್ತುವನ್ನು,

**ಆದಾಯ** – ಕಾರಣರೂಪಕ್ಕೆ[1] ಸೆಳೆದು ತಂದರೆ,

**ಪೂರ್ಣಂ, ಏವ** – ಆ ವ್ಯಾಹೃತಿಗಳಿಗಿಂತ ವ್ಯಾಪಕವಾಗಿ ಅವುಗಳಿಗೂ ಕಾರಣವಾಗಿ ಅವುಗಳನ್ನು ತುಂಬುವ ಓಂಕಾರವು ಮಾತ್ರ,

**ಅವಶಿಷ್ಯತೇ** – ಯಾವಾಗಲೂ ಉಳಿದಿರುತ್ತದೆ,[2]

# ತಾತ್ಪರ್ಯಾರ್ಥ

ಉಪಾಸಕನು ಓಂಕಾರನಾದದಲ್ಲಿ ತನ್ನೆಲ್ಲ ವಾಗ್ವ್ಯಾಪಾರಗಳನ್ನೂ ಲಯಗೊಳಿಸಿ ಆ ನಾದಾನುಸಂಧಾನದಿಂದ ಪರಮಾತ್ಮನ ಧ್ಯಾನದಲ್ಲಿ ತಲ್ಲೀನನಾಗಬೇಕು. ಈ ಓಂಕಾರವು ಪರಮಾತ್ಮನ ಹೆಸರಾಗಿಯೂ ಜಗತ್ತಿನಲ್ಲಿ ಮೊಟ್ಟಮೊದಲು ಬ್ರಹ್ಮನ ಬಾಯಿಂದ ಹೊರಟ ಶಬ್ದವಾಗಿಯೂ ಸಮಸ್ತ ವೇದಗಳಿಗೂ ಮೂಲವಾಗಿಯೂ ಎಲ್ಲ ವಾಙ್ಮಯಗಳ ಸಾರವಾಗಿಯೂ ಇರುವುದರಿಂದ ಇದನ್ನೇ ಜಗತ್ಕಾರಣವೆಂದು ಇಲ್ಲಿ ಹೊಗಳಲಾಗಿದೆ. ಪರಮಾತ್ಮನು ವಿಶ್ವದೆಲ್ಲೆಡೆಯೂ ಹರಡಿ ತುಂಬಿಕೊಂಡಿರುವನು. ಅವನಿರುವಲ್ಲಿ ಅವನ ವಾಚಕವಾದ ಓಂಕಾರವೂ ಇರಲೇ ಬೇಕು. ಓಂಕಾರಕ್ಕೆ ವಾಚ್ಯ ಪರಮಾತ್ಮ. ವಾಚ್ಯ ವಾಚಕಗಳಿಗೆ ಯಾವಾಗಲೂ ಬಿಡಿಸಲಾಗದ ನಂಟು. ಹೀಗೆ ಓಂಕಾರವೂ ಎಲ್ಲೆಡೆ ತುಂಬಿಕೊಂಡು ಪೂರ್ಣವೆನಿಸಿದೆ. ಇದರ ಅನುಸಂಧಾನದಿಂದ ಉಪಾಸನಾರೂಪವಾದ ವಿದ್ಯೆಯೂ ಶೀಘ್ರವಾಗಿ ಸಫಲವಾಗುವುದು.

### ಗ್ರಂಥಾಂತರಗಳಲ್ಲಿ ವಿಚಾರ

ಬ್ರಹ್ಮಸೂತ್ರಗ್ರಂಥದ ವಾಕ್ಯಾನ್ವಯಾಧಿಕರಣದ ಶ್ರೀಭಾಷ್ಯದ ಶ್ರುತಪ್ರಕಾಶಿಕಾ ಟೀಕೆಯಲ್ಲಿ ಯಾದವಪ್ರಕಾಶರ[3] ಅಭಿಪ್ರಾಯಗಳನ್ನು ವಿಮರ್ಶಿಸುವ ಸಂದರ್ಭದಲ್ಲಿ ಈ ಮಂತ್ರವು ಪರಮಾತ್ಮನನ್ನು ಕುರಿತಾದುದೆಂದು ಸುದರ್ಶನಭಟ್ಟರು[4] ನಿರೂಪಿಸಿರುವರು. ಮತ್ತು ಅವರ ಹಿರಿಯ ತಾತನವರೂ ಭಗವದ್ರಾಮಾನುಜರ ಸಾಕ್ಷಾತ್ ಶಿಷ್ಯಪ್ರಮುಖರೂ ಆಗಿದ್ದ ಭಟ್ಟಪರಾಶರರು[5] ತಮ್ಮ ವಿಷ್ಣುಸಹಸ್ರನಾಮಭಾಷ್ಯದಲ್ಲಿ 'ಪೂರ್ಣಃ' ಎಂಬ ನಾಮದ ವಿವರಣೆಯಲ್ಲಿ ಹೀಗೆಯೇ ನಿರೂಪಿಸಿರುವರು. ಪೂರ್ಣ ಎಂದರೆ ಪರಮಾತ್ಮ. ಅವನು ಸ್ವತಃ ಎಲ್ಲವನ್ನೂ ಪಡೆದು

---

1. ವ್ಯಾಹೃತಿಗಳ ಸಾರ ಮತ್ತು ಕಾರಣ ಅ ಉ ಮ್ ಎಂಬ ಅಕ್ಷರಗಳು. ಇವುಗಳ ಒಕ್ಕೂಟವೇ ಓಂಕಾರ.

2. ಈ ನಂತರ 'ಓಂ ಖಂ ಬ್ರಹ್ಮ' ಎಂಬ ವಚನವಿದೆ. ಇದೇ ವಚನವು ಈಶಾವಾಸ್ಯದ ಮಾಧ್ಯಂದಿನ ಪಾಠದ ಕೊನೆಗೂ ಬಂದಿದೆ. ಪರಮಾತ್ಮನು ಆಕಾಶದಂತೆ ಎಲ್ಲೆಲ್ಲೂ ವ್ಯಾಪಿಸಿರುವನು. ಅವನ ಹೆಸರಾದ ಓಂಕಾರವೂ ಅದರಂತೆ ಸಮಸ್ತವೇದವಾಙ್ಮಯವನ್ನು ವ್ಯಾಪಿಸಿದೆ. ಹೀಗೆ ವೇದ ಮತ್ತು ವೇದದ ಮುಖ್ಯಗುರಿಯಾದ ಪರಮಾತ್ಮನನ್ನು ಈ ಮಾತು ತಿಳಿಸುತ್ತದೆ.

3, 4, 5. ಪರಿಶಿಷ್ಟ ನೋಡಿ.

ಯಾವಾಗಲೂ ಪೂರ್ಣನಾಗಿರುವನು. ಮತ್ತು ಇವನಿಂದ ತುಂಬಿದ ಈ ಜಗತ್ತೂ ಪೂರ್ಣವೆನಿಸುವುದು. ಹೀಗೆ ಜಗತ್ತು ಅವನ ವ್ಯಾಪ್ತಿಗೆ ಒಳಪಟ್ಟಿದೆ. ಅವನು ಅಣುಮಾತ್ರದ ವಸ್ತುವಿನಲ್ಲೂ ತನ್ನ ಆರು ಮುಖ್ಯ ಗುಣಗಳಿಂದ ಪೂರ್ಣನಾಗಿಯೇ ಇದ್ದು ಯೋಗಿಗಳಿಗೆ ಕಾಣಿಸಿಕೊಳ್ಳುವನು.

## ಪದವಿವರಣೆ

**ಅದಃ** – ನಮಗೆ ಕಾಣಿಸದ ಪರಲೋಕದಲ್ಲಿರುವ ಆ ಪರಮಾತ್ಮನು,

**ಪೂರ್ಣಂ** – ಪೂರ್ಣನು,

**ಇದಂ** – ನಮಗೆ ಕಾಣಿಸುವ ಇಹಲೋಕದಲ್ಲೂ ಇರುವ ಆ ಪರಮಾತ್ಮನು,

**ಪೂರ್ಣಂ** – ಪೂರ್ಣನು.

ಇಹ ಪರ ಎಲ್ಲೆಲ್ಲೂ ಅವನು ವ್ಯಾಪಿಸಿರುವುದರಿಂದ, ಅವನು ಸಹಜವಾಗಿಯೇ ಪೂರ್ಣನೆಂದು ಭಾವ.

**ಪೂರ್ಣಾತ್** – ಪೂರ್ಣನಾದ ಪರಮಾತ್ಮನಿಂದಲೇ,

**ಪೂರ್ಣಂ** – ಅವನಿಂದ ವ್ಯಾಪಿಸಲ್ಪಟ್ಟಿರುವ ಈ ಜಗತ್ತು,

**ಉದಚ್ಯತೇ** – ಹುಟ್ಟಿ ಬರುವುದು.

ಕಾರಣ ಸ್ಥಿತಿಯಲ್ಲೂ ಅವನೇ ಪೂರ್ಣ, ಕಾರ್ಯ ಸ್ಥಿತಿಯಲ್ಲೂ ಅವನೇ ಪೂರ್ಣ, ಎಂದು ಭಾವ.

**ಪೂರ್ಣಸ್ಯ** – ಪೂರ್ಣನಾದ ಪರಮಾತ್ಮನ ಅಧೀನದಲ್ಲಿರುವ,

**ಪೂರ್ಣಂ** – ಅವನಿಂದಲೇ ಹುಟ್ಟಿಬಂದಿರುವುದರಿಂದ ಪೂರ್ಣವೆನಿಸಿರುವ ಈ ಜಗತ್ತನ್ನು,

**ಆದಾಯ** – ಅವನು ಮತ್ತೆ ತನ್ನಲ್ಲೇ ಸೇರಿಸಿಕೊಂಡರೆ,

**ಪೂರ್ಣಂ, ಏವ** – ಎಲ್ಲವನ್ನೂ ಹೀಗೆ ಸೂಕ್ಷ್ಮವಾಗಿಸಿ ತನ್ನಲ್ಲೇ ತುಂಬಿಕೊಳ್ಳುವ ಜಗತ್ಕಾರಣನಾದ ಪರಮಾತ್ಮ ಒಂದೇ.

**ಅವಶಿಷ್ಯತೇ** – ಈ ಸ್ಥೂಲ ಜಗತ್ತಿನ ನಾಶವಾದಾಗಲೂ ಉಳಿದಿರುತ್ತದೆ,

ಸಕಲ ಗುಣಪರಿಪೂರ್ಣನೂ ಎಲ್ಲೆಡೆ ಪೂರ್ಣನೂ ಆದ ಪರಮಾತ್ಮನೇ ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣ ಎಂದು ಭಾವ.

## ಪಾಠಾಂತರ – ವಿಚಾರ

'ಇದಂ ಪೂರ್ಣಮದಃ ಪೂರ್ಣಂ'. 'ಉದ್ರಿಚ್ಯತೇ', ಎಂಬ ಪಾಠಕ್ರಮದಿಂದ ಈ ಮಂತ್ರವು 'ಸರ್ವಂ ಸಹೋಮ್' ಎಂಬ ಅನುಬಂಧದೊಡನೆ ಕಠಶಾಖೆಯ ದ್ವಯೋಪನಿಷತ್ತಿನಲ್ಲಿ ಇದೆ. ದ್ವಯುವೆಂಬ ಮಹಾಮಂತ್ರದ ಎರಡು ವಾಕ್ಯಗಳ ನಡುವೆ ಈ ಮಂತ್ರ ಸೇರಿರುವುದರಿಂದ, ಈ ಸಂದರ್ಭಕ್ಕೆ ತಕ್ಕಂತೆ ಇದಕ್ಕೆ ಅರ್ಥಮಾಡಲಾಗಿದೆ. ಶ್ರೀವಚನಭೂಷಣಗ್ರಂಥದಲ್ಲಿ ಪಿಳ್ಳೈಲೋಕಾಚಾರ್ಯರು ಸೂಚಿಸಿರುವಂತೆ, ಮಣವಾಳಮಾಮುನಿಗಳು ಇದನ್ನು ವ್ಯಾಖ್ಯಾನಿಸಿ ಪರಮಾತ್ಮನ ಅರ್ಚಾವತಾರದಲ್ಲಿ ಎಲ್ಲ ಗುಣಗಳ ಪೂರ್ಣತೆ ಇರುವುದೆಂಬ ಮುಖ್ಯಾರ್ಥವನ್ನು ತಿಳಿಸಿದ್ದಾರೆ. ಇದಕ್ಕೆ ವಾಧೂಲ ವೀರರಾಘವಸ್ವಾಮಿಗಳ[1] ಟಿಪ್ಪಣಿ ಇದೆ.

---

1. ಪರಿಶಿಷ್ಟ ನೋಡಿ.

## ಪದವಿವರಣೆ

**ಇದಂ** – ಎಲ್ಲರ ಹೃದಯದೊಳಗೆ ನೆಲೆಸಿ ಅಂತರ್ಯಾಮಿಯೆನಿಸಿರುವ ಪರಮಾತ್ಮನ ರೂಪವು,

**ಪೂರ್ಣಂ** – ಒಳ್ಳೆಯ ಎಲ್ಲ ಗುಣಗಳಿಂದ ತುಂಬಿದೆ,

**ಅದಃ** – ಪರಲೋಕವೆನಿಸಿದ ವೈಕುಂಠದಲ್ಲಿರುವ ಪರವಾಸುದೇವನೆಂಬ ಪರಮಾತ್ಮನ ರೂಪವು,

**ಪೂರ್ಣಂ** – ಎಲ್ಲ ಗುಣಗಳಿಂದ ತುಂಬಿದೆ.

**ಪೂರ್ಣಾತ್** – ಆರು ಮುಖ್ಯ ಗುಣಗಳಿಂದ ಯಾವಾಗಲೂ ತುಂಬಿರುವ ಆ 'ಪರ' ಎಂಬ ಪರಮಾತ್ಮನ ರೂಪದಿಂದಲೇ ಹುಟ್ಟಿಬಂದ,

**ಪೂರ್ಣಂ** – ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಎಂಬ ನಾಲ್ಕು ವಿಭಾಗವಿರುವ ಪರಮಾತ್ಮನ 'ವ್ಯೂಹ' ರೂಪವು,

**ಉದ್ರಿಚ್ಯತೇ** – ಗುಣಗಳ ಕಡಿಮೆ ವ್ಯತ್ಯಾಸಗಳಿಂದ ಕೇಶವ ನಾರಾಯಣ ಮಾಧವ ಮುಂತಾದ[1] ವಿವಿಧ ರೂಪಗಳನ್ನು ಪಡೆಯುತ್ತದೆ.

**ಪೂರ್ಣಸ್ಯ** – ಹೀಗೆ ವಿವಿಧ ಅವತಾರಗಳಿಗೆ ಮೂಲವಸ್ತುವೆನಿಸಿ ವ್ಯಾಪಕವೂ ಪೂರ್ಣವೂ ಆಗಿರುವ ವ್ಯೂಹರೂಪಕ್ಕೆ ಸಂಬಂಧಿಸಿದಂತೆ,

**ಪೂರ್ಣಂ** – ಎಲ್ಲ ದಿವ್ಯ ಗುಣಗಳಿಂದಲೂ ಪೂರ್ಣವಾದ, ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ರಾಮ, ಕೃಷ್ಣ ಮುಂತಾದ ವಿಭವಾವತಾರರೂಪವನ್ನು,

**ಆದಾಯ** – ತನಗೆ ಮೂಲವಾದರಿಯಾಗಿ ಪಡೆದು,

**ಪೂರ್ಣಂ, ಏವ** – ಎಲ್ಲ ದಿವ್ಯ ಗುಣಗಳೂ ಹೆಚ್ಚು ಸೌಲಭ್ಯ ಗುಣವೂ ತುಂಬಿರುವ ಅರ್ಚಾವತಾರ ರೂಪವೇ[2]

**ಅವಶಿಷ್ಯತೇ** – ಇಹಲೋಕದಲ್ಲಿ ಎಲ್ಲರಿಗೂ ಎಂದೆಂದಿಗೂ ಸುಲಭವಾಗಿ ಕಾಣಿಸುವುದಾಗಿದೆ.

---

1. ಕೇಶವ, ನಾರಾಯಣ, ಮಾಧವ ರೂಪಗಳು ವಾಸುದೇವ ರೂಪದ ಉಪವ್ಯೂಹಗಳು. ಗೋವಿಂದ, ವಿಷ್ಣು, ಮಧುಸೂದನ ರೂಪಗಳು ಸಂಕರ್ಷಣ ರೂಪದ ಉಪವ್ಯೂಹಗಳು. ತ್ರಿವಿಕ್ರಮ, ವಾಮನ, ಶ್ರೀಧರ ರೂಪಗಳು ಪ್ರದ್ಯುಮ್ನ ರೂಪದ ಉಪವ್ಯೂಹಗಳು. ಹೃಷೀಕೇಶ ಪದ್ಮನಾಭ ದಾಮೋದರ ರೂಪಗಳು ಅನಿರುದ್ಧ ರೂಪದ ಉಪವ್ಯೂಹಗಳು. ವ್ಯೂಹ ಉಪವ್ಯೂಹಗಳೆಲ್ಲವೂ ಕ್ಷೀರಾಬ್ಧಿ, ಆಮೋದ, ಪ್ರಮೋದ, ಸಂಮೋದ ಮುಂತಾದ ದಿವ್ಯಭೂಮಿಗಳಲ್ಲಿ ಇರುವುದಾಗಿ ಆಗಮ ಶಾಸ್ತ್ರಗಳಲ್ಲಿ ವಿಸ್ತಾರವಾಗಿ ವರ್ಣಿತವಾಗಿವೆ.

2. ಎಲ್ಲರೂ ಅವರವರ ಆಸೆಗೂ ಅರ್ಹತೆಗೂ ತಕ್ಕಂತೆ ಪೂಜೆ ಮಾಡಲು ಇಟ್ಟುಕೊಂಡಿರುವ ಪರಮಾತ್ಮನ ವಿಗ್ರಹ, ಚಿತ್ರ, ಮುಂತಾದ ರೂಪ.

**'ಸರ್ವಂ ಸಹೋಮ್'**

ಪೂರ್ಣವಾದ ಅರ್ಚಾವತಾರದಲ್ಲಿ ನಾವು ದ್ವಯವೆಂಬ ಮಂತ್ರರತ್ನದಿಂದ ಶರಣಾಗತಿ ಮಾಡಿ, ಇಂತಹ ಪೂರ್ಣನಾದ ಪರಮಾತ್ಮನೇ ನಮಗೆ ಉಪಾಯ ಮತ್ತು ಉಪೇಯ ಎಂಬ ನಿಷ್ಠೆಯಿಂದ ಇದ್ದರೆ; ಪರಮಾತ್ಮನು ನಮ್ಮೆಲ್ಲರಿಗೂ ಇಹ ಪರಗಳಲ್ಲಿ ಸಕಲ ಸೌಭಾಗ್ಯಗಳನ್ನೂ ಕರುಣಿಸುವನು. ಇದೇ ಸಕಲ ವೇದಗಳ ಅರ್ಥ. ವೇದ ಸಾರವಾದ ಗಾಯತ್ರಿ, ಗಾಯತ್ರೀಸಾರವಾದ ಅಷ್ಟಾಕ್ಷರ ಮಂತ್ರ,[1] ಅಷ್ಟಾಕ್ಷರಸಾರವಾದ ವ್ಯಾಹೃತಿ ಮಂತ್ರ, ವ್ಯಾಹೃತಿಸಾರವಾದ ಓಂಕಾರ, ಇವೆಲ್ಲದರ ಅರ್ಥವೂ ಇದೇ ಆಗಿದೆ.

# ತಾತ್ಪರ್ಯಾರ್ಥ

ಭೂಮಿಯೊಳಗಿನ ನೀರಿನ ಸೆಲೆಯಂತೆ ನಮ್ಮ ಹೃದಯದೊಳಗಿರುವ ಪರಮಾತ್ಮನ ಅಂತರ್ಯಾಮಿರೂಪ ಯೋಗಿಗಳಿಗಲ್ಲದೆ ಇತರರಿಗೆ ಅನುಭವಿಸಲು ಸುಲಭವಲ್ಲ. ಪ್ರಕೃತಿ ಮಂಡಲವನ್ನು ಆವರಿಸಿರುವ ಸೂಕ್ಷ್ಮಜಲ ಕರಣಗಳ ರಾಶಿಯಂತೆ ಪರಲೋಕದಲ್ಲಿರುವ ಪರಮಾತ್ಮನ ಪರರೂಪವೂ ಪ್ರಕೃತಿಯೊಳಿರುವ ನಮಗೆ ಅನುಭವಿಸಲು ಸುಲಭವಲ್ಲ. ಶಾಸ್ತ್ರಗಳಲ್ಲಿ ಪ್ರಸಿದ್ಧವಾದ ಕ್ಷೀರಸಮುದ್ರದ ನೀರಿನಂತೆ ಪರಮಾತ್ಮನ ವ್ಯೂಹರೂಪವು ದಿವ್ಯ ವ್ಯಕ್ತಿಗಳಿಗಲ್ಲದೆ ಸಾಮಾನ್ಯರಿಗೆ ಅನುಭವಿಸಲು ಸುಲಭವಲ್ಲ. ರಾಮಕೃಷ್ಣಾದ್ಯವತಾರಗಳಲ್ಲಿರುವ ಪರಮಾತ್ಮನ ವಿಭವರೂಪವು ಮಳೆಗಾಲದ ಪ್ರವಾಹದಂತೆ ಆ ಕಾಲ ಬಿಟ್ಟು ಬೇರೆ ಕಾಲದಲ್ಲಿ ನಮ್ಮಂತಹವರಿಗೆ ಅನುಭವಿಸಲು ಸುಲಭವಲ್ಲ. ಈ ಎಲ್ಲ ರೂಪಗಳ ಪ್ರತಿರೂಪವಾದ ಅರ್ಚಾಮೂರ್ತಿಗಳು ಮಾತ್ರ ಎಲ್ಲ ದೇಶಕಾಲಗಳಲ್ಲೂ ಎಲ್ಲ ಜನರಿಗೂ ಅವರವರ ಇಷ್ಟದಂತೆ ಸುಲಭವಾಗಿದ್ದು ಪರಮಾತ್ಮನ ಎಲ್ಲ ಗುಣಗಳನ್ನೂ ಪೂರ್ಣವಾಗಿ ಅನುಭವಿಸಲು ಅನುಕೂಲವಾಗಿದೆ. ನಮ್ಮ ಹಿರಿಯ ಎಲ್ಲ ಆಚಾರ್ಯರೂ ಸಂತರೂ ಪರಮಾತ್ಮನ ಇಂತಹ ಅರ್ಚಾರೂಪದಲ್ಲೇ ತಮ್ಮದೆಲ್ಲವನ್ನೂ ಒಪ್ಪಿಸಿ ನಿರ್ಭರರಾಗಿಯೂ ನಿರ್ಭಯರಾಗಿಯೂ ಇದ್ದು ಆತ್ಮೋಜ್ಜೀವನವನ್ನು ಪಡೆದಿರುವರು. ಪರರೂಪದಿಂದ ವ್ಯೂಹರೂಪವೂ ವ್ಯೂಹರೂಪದಿಂದ ವಿಭವ ರೂಪಗಳೂ ಇವೆಲ್ಲದರ ಮೂಲರಿಯಿಂದ ಅರ್ಚಾರೂಪವೂ ಆಗಿರುವುದಾಗಿ ಪಾಂಚರಾತ್ರ ವೈಖಾನಸ ಮುಂತಾದ[2] ಆಗಮಗಳು ಪರಮಾತ್ಮನ ಈ ಸಲಭ ರೂಪದ ಆವಿಷ್ಕಾರವನ್ನು ವಿವರಿಸಿವೆ. ಹೀಗೆ ಪರಮಾತ್ಮನ ಸುಲಭ ಹಾಗೂ ಪರಿಪೂರ್ಣವಾದ ಆವಿಷ್ಕಾರವೂ ಸಾಕ್ಷಾತ್ಕಾರವೂ ಸಕಲ ವೇದೋಪನಿಷತ್ತುಗಳ ಮುಖ್ಯಗುರಿ ಎಂದು ಹೇಳಿದಂತಾಯಿತು.

**ಗಣಿತ ವಿಜ್ಞಾನ-ವಿಚಾರ**

'ಪೂರ್ಣಮದಃ' ಎಂಬ ಶಾಂತಿಮಂತ್ರ ಪರಮಾತ್ಮನ ಇಂತಹ ಅಪೂರ್ವವಾದ ಪೂರ್ಣತೆಯನ್ನು ವೈಜ್ಞಾನಿಕವಾಗಿಯೂ ತಿಳಿಸುತ್ತದೆ ಎನ್ನಬಹುದು. ಗಣಿತ ವಿಜ್ಞಾನದಲ್ಲಿ ವಿಶ್ವಕ್ಕೆ ಪ್ರಾಚೀನ ಭಾರತೀಯ ಮಹರ್ಷಿಗಳ ಕೊಡುಗೆ 'ಸೊನ್ನೆ' ಎಂಬ ಸಂಖ್ಯೆ ಹಾಗೂ ಅನಂತವೆನಿಸುವ ಅದರ ಸ್ವರೂಪ ಎನ್ನುವುದು ತಿಳಿದ ವಿಷಯ.

---

1. ಪರಿಶಿಷ್ಟ ನೋಡಿ.
2 ವೈಖಾನಸಂ ಪಾಂಚರಾತ್ರಂ ಪ್ರತಿಷ್ಠಾಸಾರಮೇವ ಚ।
ವಿಜ್ಞಾನಲಲಿತಂ ಚೇತಿ ಚತ್ವಾರೋ ವೈಷ್ಣವಾಗಮಾಃ॥
ಶ್ರೀ ತತ್ತ್ವನಿಧಿ. ಆಗಮನಿಧಿ ಪ್ರಕರಣ.
ಪರಮಾತ್ಮನ ಅವತಾರಗಳಲ್ಲಿ ವಿಖನಸಾಚಾರ್ಯರೆಂಬ ಮಹರ್ಷಿಗಳೂ ಒಬ್ಬರು. ಇವರು ಪರಮಾತ್ಮನ ಪೂಜಾವಿಧಾನ, ಮಂದಿರ ನಿರ್ಮಾಣ, ಮುಂತಾದ ವಿಚಾರಗಳನ್ನು ಭೃಗು, ಅಂಗಿರಸ್; ಮರೀಚಿ, ಅತ್ರಿ ಮಹರ್ಷಿಗಳಿಗೆ ಉಪದೇಶಿಸಿರುವರು. ಇವರೆಲ್ಲರ ಮೂಲಕ ಪ್ರಸಿದ್ಧಿಗೆ ಬಂದ ಗ್ರಂಥಗಳೇ ವೈಖಾನಸಾಗಮ.

ಅನಂತ ಸಂಖ್ಯೆಗೆ "ಪೂರ್ಣ" ಎಂಬುದು ಮತ್ತೊಂದು ಹೆಸರು. ಒಂದು ಸೊನ್ನೆಗೆ ಸೊನ್ನೆಯನ್ನು ಕೂಡಿದರೂ ಕಳೆದರೂ ಗುಣಿಸಿದರೂ ಭಾಗಿಸಿದರೂ ಸೊನ್ನೆಯೇ ಮೊತ್ತವೂ ಉಳಿಕೆಯೂ ಆಗುವುದು. ಹೀಗೆ "ಪೂರ್ಣ"ವನ್ನು ಪೂರ್ಣದಿಂದ ಏನೂ ಮಾಡಿದರೂ ಪೂರ್ಣವು ಪೂರ್ಣವೇ ಆಗಿ ಇರುತ್ತದೆ, ಹೀಗೆ ಪರಮಾತ್ಮನೂ ಪೂರ್ಣ, ಈ ಜಗತ್ತೂ ಪೂರ್ಣ. ವಿಶಿಷ್ಟವಾದ ಈ ತತ್ತ್ವದ ಪೂರ್ಣತೆ ಎಂದೂ ಬದಲಾಗದು ಯಾರೂ ಬದಲಾಯಿಸಲೂ ಸಾಧ್ಯವಿಲ್ಲ. ಇದು ಸ್ವಯಂ ಸಿದ್ಧವಾದ ಶಾಶ್ವತ ಸತ್ಯ. ಸೊನ್ನೆಯ ಸಂಬಂಧದಿಂದ ಇತರ ಸಂಖ್ಯೆಗಳ ಸೃಷ್ಟಿ ಸ್ಥಿತಿ ವ್ಯತ್ಯಾಸಗಳು ಆಗುವಂತೆ ಪರಮಾತ್ಮನಿಂದಲೇ ಸಕಲ ಜಗತ್ತಿನ ಸೃಷ್ಟಿಸ್ಥಿತಿ ಸಂಹಾರ ಮೋಕ್ಷ ಆನಂದ ಎಲ್ಲವೂ. ಈ ಜಗತ್ತು ಅನಂತವಾಗಿರಲು ಆ ಪರಮಾತ್ಮನ ಆಸರೆಯೇ ಕಾರಣ. ಹೀಗೆ ಜಗದ್ರಹಸ್ಯವಾದ ಪರಮಾತ್ಮನ ಬಗ್ಗೆ ವೈಜ್ಞಾನಿಕವಾಗಿಯೂ ತಾತ್ತ್ವಿಕವಾಗಿಯೂ ಈ ಮಂತ್ರ ಒಂದು ಸೂಕ್ಷ್ಮಸಂಕೇತವನ್ನು ತಿಳಿಸುತ್ತದೆ.

ಇಲ್ಲಿಗೆ ಈಶಾವಾಸ್ಯೋಪನಿಷತ್ತಿನ ಉತ್ತರಶಾಂತಿಮಂತ್ರದ ವಿವಿಧ
ವಿವರಣೆಗಳು ಪೂರ್ಣವಾದವು.

**ಮೂಲ – ಕನ್ನಡಭಾಷ್ಯ – ಅನುವಾದ – ಟಿಪ್ಪಣಿ – ವಿವರಣೆಗಳೂ**
**ಪೂರ್ಣವಾದುವು.**



# ಪರಿಶಿಷ್ಟ ಒಂದು

## ಈಶಾವಾಸ್ಯದ ಉಪಯುಕ್ತ ವಿಚಾರಗಳು

## ರಂಗರಾಮಾನುಜರ ಈಶಾವಾಸ್ಯಭಾಷ್ಯಾನುವಾದಸಾರಸಂಗ್ರಹ[1]

೧

ಜಗತ್ತಿನಲ್ಲಿ ಏನೇನಿದೆಯೋ ಅದೆಲ್ಲವೂ ಪರಮಾತ್ಮನಿಂದ ಸುತ್ತಲ್ಪಟ್ಟಿದೆ. ಎಲ್ಲವೂ ವ್ಯಾಪಿಸಲ್ಪಟ್ಟಿದೆ, ಎಲ್ಲವೂ ಪರಮಾತ್ಮನ ಸ್ವತ್ತು ಎಂದು ಭಾವ.

ಆದುದರಿಂದ ಈಜಗತ್ತಿನೊಡನೆ ಕೂಡಿರುವ ಪರಮಾತ್ಮನಾದ ಶ್ರೀಮನ್ನಾರಾಯಣನನ್ನೇ ಉಪಾಸಿಸಬೇಕು. ಅದಕ್ಕಾಗಿ ದೇಹರಕ್ಷಣೆ ಬೇಕು. ಆದರೂ ಇತರರ ವಸ್ತುಗಳಿಗೆ ಆಸೆಪಡದೆ ವೈರಾಗ್ಯದಿಂದ ಜೀವನ ನಡೆಸಬೇಕು.

೨

ಆಯುಸ್ಸು ಇರುವವರೆಗೂ ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡುತ್ತಿರಬೇಕು. ಎಲ್ಲದರಲ್ಲೂ ಪರಮಾತ್ಮನಿಗೆ ಅಧೀನವಾಗಿರುವುದೇ ಸರಿಯಾದ ಕ್ರಮ. ಹೀಗಲ್ಲದೆ ಬೇರೆ ರೀತಿ ನಡೆದುಕೊಳ್ಳಬಾರದು. ಹೀಗಿದ್ದರೆ ಕರ್ಮಯೋಗದಲ್ಲೇ ಸಿಕ್ಕಿಕೊಳ್ಳದೆ ಭಕ್ತಿಯೋಗವನ್ನು ಪಡೆಯಬಹುದೆಂದು ಭಾವ.

೩

ಆತ್ಮಜ್ಞಾನವಿಲ್ಲದವರು ಭೂಮಿ, ಆಕಾಶ, ಸ್ವರ್ಗವೆಂಬ ನರಕಗಳಿಗೆ ಹೋಗಿ ಸೇರುತ್ತಾರೆ.

೪

ಎಲ್ಲೆಲ್ಲೂ ವ್ಯಾಪಿಸಿರುವ ಪರಮಾತ್ಮನಿಗೆ ವಾಸುದೇವ ಎಂದು ಹೆಸರು. ಬ್ರಹ್ಮರುದ್ರಾದಿಗಳನ್ನೂ ಮೀರಿಸಿದ ಅವನು ವಾಯುವಿನ ಮೂಲಕ ಈ ವಿಶ್ವವನ್ನು ಧರಿಸಿರುವನು.

೫

ಅಚಲವಾಗಿ ಎಲ್ಲದರ ಒಳಗೂ ಹೊರಗೂ ಅವನು ಇರುವವನಾದರೂ ಅಜ್ಞಾನಿಗಳಿಗೆ ಅವನ ಇರವು ತಿಳಿಯದು. ಜ್ಞಾನಿಗಳಿಗೆ ಮಾತ್ರ ತಿಳಿದಿದೆ.

೬

ಜ್ಞಾನಿಗೆ ಎಲ್ಲ ಪ್ರಾಣಿಗಳಲ್ಲೂ ಒಂದೇ ವಿಧವಾದ ಜೀವಾತ್ಮ ಇರುವುದು ತಿಳಿದರೆ ಎಲ್ಲವೂ ತನ್ನಂತೆ ಎಂಬ ಭಾವದಿಂದ ಯಾರನ್ನೂ ಅವನು ನಿಂದಿಸುವುದಿಲ್ಲ.

---

1. ಈ ಅನುವಾದಕ್ಕೆ ಮೂಲಗ್ರಂಥ ಈವರೆಗೆ ಸಿಕ್ಕಿಲ್ಲ. ಕೇತನಹಳ್ಳಿ ಗೋಮಠಂ ಗ್ರಾಮಣಿ ಶಿಂಗರಯ್ಯಂಗಾರ್ಯರು ಶ್ರೀಮಠಾಚಾರ್ಯರ ದಶೋಪನಿಷದ್ಭಾಷ್ಯವನ್ನು ಕನ್ನಡಕ್ಕೆ ಅನುವಾದ ಮಾಡಿರುವರು. ಅದರಲ್ಲಿ ಬರುವ ರಂಗರಾಮಾನುಜಭಾಷ್ಯ ಅನುವಾದವನ್ನೇ ಇದಕ್ಕೆ ಆಧಾರವಾಗಿ ತೆಗೆದುಕೊಳ್ಳಲಾಗಿದೆ. ಈ ಅನುವಾದದ ಒಂದು ಹಸ್ತಪ್ರತಿ ಮೈಸೂರು ಗೌರ್ನಮೆಂಟ್ ಪ್ರಾಚ್ಯಕೋಶಾಗಾರದಲ್ಲಿದೆ. ಅದರ ಸಹಾಯವನ್ನು ಇಲ್ಲಿ ಪಡೆಯಲಾಗಿದೆ. ರಂಗರಾಮಾನುಜಮುನೀಂದ್ರರ ಬಗ್ಗೆ ಪರಿಶಿಷ್ಟದಲ್ಲಿ ಮುಂದೆ ವಿವರಿಸಲಾಗುವುದು.

## ೭

ಹೀಗೆ ತನ್ನೊಳಗೂ ತನ್ನಂತಹ ಎಲ್ಲದರೊಳಗೂ ಪರಮಾತ್ಮ ಒಬ್ಬನೇ ಇರುವುದರಿಂದ ಅವನ ಅಧೀನವಾದ ಎಲ್ಲವೂ ಪರಮಾತ್ಮವೇ, ತಾನೂ ಪರಮಾತ್ಮನೇ ಎಂಬುವಷ್ಟು ಮಟ್ಟಿಗೆ ಐಕ್ಯವನ್ನು ಹೇಳಬಹುದಾದಂತಹ ನಿಕಟ ಸಂಬಂಧಜ್ಞಾನವು ಧ್ಯಾನಕಾಲದಲ್ಲಿ ಬಂದರೆ, ಅಂತಹವನಿಗೆ ತಾನು ಸ್ವತಂತ್ರ ಎಂಬ ಭ್ರಮೆಯೂ ಲೌಕಿಕ ದುಃಖಗಳೂ ನಿವಾರಣೆಯಾಗುವುವು.

## ೮

ಅಂತಹ ಜ್ಞಾನಿಯು ಪರಮಾತ್ಮತತ್ತ್ವವನ್ನು ಎಲ್ಲೆಲ್ಲೂ ಪಡೆಯುತ್ತಾನೆ. ಪರಮಾತ್ಮತತ್ತ್ವವಿರೋಧಿಗಳನ್ನು ಪ್ರಾಚೀನ ಮಹರ್ಷಿಗಳಂತೆ ವಾದಿಸಿ ಜಯಿಸಿ ಓಂಕಾರದ ನಿಜವಾದ ಅರ್ಥವನ್ನು ಶಿಷ್ಯರಿಗೆ ಉಪದೇಶಿಸಬಲ್ಲವನಾಗುತ್ತಾನೆ.

## ೯

ಪರಮಾತ್ಮನನ್ನು ಅರಿಯಲೂ, ಧ್ಯಾನಿಸಲೂ, ಉಪಾಸಿಸಲೂ ಆಸೆಯಿಲ್ಲದೆ ಬರಿಯ ಕರ್ಮಗಳಲ್ಲಿ ನಿರತರಾದವರಿಗೆ ನರಕವೇ ಎಂದು ಹಿಂದೆಯೂ ಹೇಳಲಾಗಿದೆ. ಅದೂ ಅಲ್ಲದೆ ಬರಿಯ ಉಪಾಸಕರಿಗೆ ಇನ್ನೂ ಕಠಿಣವಾದ ನರಕವೇ ಆಗುವುದು.

## ೧೦, ೧೧

ಮೊದಲೇ ತಿಳಿಸಿದ ಸರಿಯಾದ ಕ್ರಮದಲ್ಲಿ ಕರ್ಮ ಮಾಡಿದರೆ ಅದರಿಂದಲೂ ಒಂದು ಒಳ್ಳೆಯ ಫಲವಿದೆ. ಪರಮಾತ್ಮನ ಉಪಾಸನೆಯಿಂದಲೂ ಒಂದು ಒಳ್ಳೆಯ ಫಲವಿದೆ. ಆದುದರಿಂದ ನಿಷ್ಕಾಮಕರ್ಮವನ್ನು ಉಪಾಸನೆಗೆ ಸಹಾಯಕವಾಗಿ ಸೇರಿಸಿ ಆಚರಿಸಿದರೆ ನರಕಾದಿಗಳಿಗೆ ಕಾರಣವಾದ ಪುಣ್ಯಪಾಪಗಳ ನಿವಾರಣೆಯೂ ಪರಲೋಕದಲ್ಲಿ ಪರಮಾತ್ಮನ ಸೇವಾಭಾಗ್ಯವೂ ಪರಮಾನಂದವೂ ಸಿಗುವುದು. ನಿಷ್ಕಾಮಕರ್ಮಾಚರಣೆಗೆ ಫಲ ನರಕಾದಿನಿವಾರಣೆ. ವಿಶಿಷ್ಟವಾದ ಉಪಾಸನೆಗೆ ಫಲ ಪರಮಾನಂದಭಾಗ್ಯ ಎಂದು ಭಾವ.

## ೧೨, ೧೩, ೧೪

ಅಹಂಕಾರ, ಡಂಭ, ಕೆಟ್ಟಕೆಲಸ ಇವುಗಳಿಲ್ಲದೆ ಒಳ್ಳೆಯ ಕರ್ಮಾಚರಣೆಯಲ್ಲೇ ನಿರತರಾದವರಿಗೂ, ತತ್ತ್ವಜ್ಞಾನವು ಬರದೇ ಅವರು ಅಜ್ಞಾನದಲ್ಲೇ ತೊಳಲಬೇಕಾಗುವುದು. ಬರಿಯ ಜ್ಞಾನಿಗಳು ಯೋಗಸಮಾಧಿಯಲ್ಲಿರುವಾಗಲೂ ಅವರಿಗೆ ಪರಮಾತ್ಮದರ್ಶನವಾಗದೆ ಬರೀ ಕತ್ತಲೆಯೇ ಆಗುವುದು. ಅಹಂಕಾರಾದಿಗಳನ್ನು ಬಿಡುವುದರಿಂದಲೂ ಒಂದು ಒಳ್ಳೆಯ ಫಲವಿದೆ. ಯೋಗಸಮಾಧಿಯಿಂದಲೂ ಒಂದು ಒಳ್ಳೆಯ ಫಲವಿದೆ. ಅಹಂಕಾರಾದಿಗಳನ್ನು ಬಿಟ್ಟು ನಿಷ್ಕಾಮಕರ್ಮಾಚರಣೆ ಮಾಡಿದರೆ ಯೋಗಸಮಾಧಿಗೆ ಭಂಗ ತರುವ ವಿಘ್ನವೆಲ್ಲವೂ ನಿವಾರಣೆಯಾಗುವುದು. ಇಂತಹ ಯೋಗಸಮಾಧಿಯಿಂದ ಪರಮಾತ್ಮನ ಅನುಭವ ನಮಗೆ ಆಗುವುದು. ಆದುದರಿಂದ ನಿಷ್ಕಾಮಕರ್ಮವನ್ನು ಸಹಾಯಕವಾಗಿ ಪಡೆದಂತಹ ಈ ಉಪಾಸನರೂಪವಾದ ಯೋಗಸಮಾಧಿಯನ್ನು ಸಾಧಿಸಬೇಕು.

### ೧೫

ಸೂರ್ಯಾಂತರ್ಯಾಮಿಯಾದ ಪರಮಾತ್ಮನು ಚಿನ್ನದ ಪಾತ್ರೆಯಂತಹ ಆಕರ್ಷಕ ವಸ್ತುಗಳ ಆಕರ್ಷಣೆಗೆ ಸಿಲುಕಿರುವ ನಮ್ಮ ಮನಸ್ಸನ್ನು ತೆರೆಸಿ ನಿಜವಾದ ತನ್ನ ರೂಪವು ನಮಗೆ ಕಾಣುವಂತಾಗಲು ಆ ಸೂರ್ಯಮಂಡಲದ ಮಾರ್ಗವನ್ನು ತೋರಿಸಲಿ.

### ೧೬

ಎಲ್ಲದರ ಪೋಷಕ ಪರಮಾತ್ಮ. ನಾವೆಲ್ಲ ಅವನ ಪೋಷ್ಯರು. ದಾಸಾನುದಾಸರು. ಅವನಂತಹ ಈ ವಿಶ್ವದ ಪೋಷಕ ಮತ್ತೊಬ್ಬ ಇಲ್ಲ. ಎಲೈ! ಎಲ್ಲವನ್ನೂ ತನ್ನ ವಶದಲ್ಲಿರಿಸಿಕೊಂಡು ಸೂರ್ಯನ ಒಳಗೂ ಇರುವ ಪರಮಾತ್ಮ! ನೀನು ನಿನ್ನ ಪ್ರಖರ ಕಿರಣಗಳನ್ನು ಅಡಗಿಸಿಕೊಂಡರೆ; ನಿನ್ನ ದಿವ್ಯರೂಪವನ್ನು ನಾನು ನೋಡಬಲ್ಲೆ. ಎಲೈ ಸೂರ್ಯನಾರಾಯಣ! ನಿನ್ನ ದರ್ಶನದಿಂದ ನೀನೇ ನಾನು ಎನ್ನುವಷ್ಟರಮಟ್ಟಿಗೆ ಪರಿಶುದ್ಧನಾಗುವೆನು.

### ೧೭

ಹೀಗೆ ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿಗಳಿಗಿಂತ ಬೇರೆಯಾದ ನಮ್ಮ ಆತ್ಮವನ್ನು ಮೊದಲು ಶುದ್ಧಿಮಾಡಿಕೊಂಡು ಪರಮಾತ್ಮನಿಗೆ ಅರ್ಪಿಸಬೇಕು. ಆದಕ್ಕಾಗಿ ಓಂಕಾರರೂಪಿಯಾದ ಪರಮಾತ್ಮನನ್ನು ಓಂಕಾರದಿಂದಲೇ ನೆನೆಯಬೇಕು. ಆಗ ಪರಮಾತ್ಮನು ನಮ್ಮನ್ನೂ ನಾವು ಮಾಡಿದ ಉಪಾಸನೆಯನ್ನೂ ನೆನೆದು ತನ್ನ ಕರ್ತವ್ಯವನ್ನು ಮನಸ್ಸಿಗೆ ತಂದುಕೊಳ್ಳುವನು.

### ೧೮

ಎಲೈ ಅಗ್ನಿಗೂ ಅಂತರ್ಯಾಮಿಯಾದ ಪರಮಾತ್ಮನೇ! ಎಲ್ಲದರ ಹಿತಚಿಂತಕನಾದ ನೀನು ನಮ್ಮ ಪಾಪಗಳನ್ನು ಹೋಗಲಾಡಿಸಿ ಅರ್ಚಿರಾದಿಮಾರ್ಗದಿಂದ ನಿನ್ನ ಲೋಕಕ್ಕೆ ಕರೆದೊಯ್ದು, ನಿನ್ನ ಸೇವಾಸಾಮ್ರಾಜ್ಯೈಶ್ವರ್ಯವನ್ನು ಕೊಟ್ಟು ಕಾಪಾಡಬೇಕು. ಜಡ, ಜೀವ, ಪರಮಾತ್ಮತತ್ತ್ವಗಳನ್ನು ಅರಿತ ನಾವು ಈ ಸಂಸಾರದ ಪುನರಾವರ್ತನೆಗೆ ಸಿಲುಕದಂತಾಗಲು ನಿನಗೆ ಹೆಚ್ಚಿನ ನಮಸ್ಕಾರ ಮಾಡುವೆವು.

## ರಂಗರಾಮಾನುಜರ ವಿವರಣೆಗಳು

### ೧

**ಶ್ರುತಪ್ರಕಾಶಿಕಾಭಾವಪ್ರಕಾಶಿಕೆ ಸಮನ್ವಯಾಧಿಕರಣ**[1]

**ಸಃ** – 'ಯಸ್ತು ಸರ್ವಾಣಿ ಭೂತಾನಿ' ಮುಂತಾದ ಮಂತ್ರಗಳಲ್ಲಿ ವಿಷಯವಾಗಿ ಬಂದಿರುವ ಜೀವಾತ್ಮನು.

**ಪರ್ಯಗಾತ್** – ಎಲ್ಲೆಲ್ಲೂ ವ್ಯಾಪಿಸಿದನು. ಅವನು

**ಶುಕ್ರಃ** – ಬಾಹ್ಯವಾದ ಅಶುದ್ಧಿ ಇಲ್ಲದವನು.

**ಶುದ್ಧಃ** – ಆಂತರಿಕವಾದ ಅಶುದ್ಧಿ ಇಲ್ಲದವನು.

**ಅಕಾಯಃ** – ಸೂಕ್ಷ್ಮವಾದ 'ಲಿಂಗಶರೀರ'ವೂ ಇಲ್ಲದವನು.

---

1. ಈಶಾ. ೮.

**ಅವ್ರಣಃ** – ಗಾಯವಿಲ್ಲದವನು.

**ಅಸ್ನಾವಿರಃ** – ನರಗಳಿಲ್ಲದವನು.

ಈ ಎರಡು ಪದಗಳಿಂದ ಸ್ಥೂಲವಾದ ಶರೀರವೂ ಇಲ್ಲದವನು ಎಂದು ಅರ್ಥವಾಗುವುದು.

**ಅಪಾಪವಿದ್ಧಃ** – ಪುಣ್ಯಪಾಪಾದಿಗಳಿಲ್ಲದವನು.

ಸಃ ಎಂಬ ಪದವು ಪುಲ್ಲಿಂಗದಲ್ಲಿರುವುದರಿಂದ ಶುಕ್ರಂ ಮುಂತಾದ ಪದಗಳನ್ನು ಪುಲ್ಲಿಂಗಕ್ಕೆ ಬದಲಾಯಿಸಿ ಕೊಳ್ಳಬೇಕು. ಈ ರೀತಿ ಅರ್ಥಮಾಡಿರುವುದು ಶಂಕರಾಚಾರ್ಯಾದಿಗಳ ವ್ಯಾಖ್ಯಾನಗಳಿಗೆ ಅವಿರೋಧವಾಗಿರುವುದು.

## ೨

### ಬ್ರಹ್ಮಸೂತ್ರ ವಿಷಯವಾಕ್ಯದೀಪಿಕೆ ಸಮನ್ವಯಾಧಿಕರಣ[1]

ಪರಮಾತ್ಮನಿಗೆ ವಿಶೇಷಣಗಳಾದ 'ಶುಕ್ರಂ' ಮುಂತಾದ ಪದಗಳು ನಪುಂಸಕಲಿಂಗದಲ್ಲಿ ಪ್ರಥಮಾವಿಭಕ್ತಿಯಲ್ಲಿವೆ ಎಂದು ತಿಳಿಯಬೇಕು. ವೈದಿಕವಾಙ್ಮಯದಲ್ಲಿ ಈ ರೀತಿ ಲಿಂಗಬದಲಾವಣೆಗೆ ಅವಕಾಶವಿದೆ.

**ಶುದ್ಧಂ** – ಅಜ್ಞಾನ, ಆಸೆ, ಕೋಪ ಮುಂತಾದ ದೋಷಗಳಿಲ್ಲದವನು.

**ಕವಿಃ** – ಎಲ್ಲವನ್ನೂ ಮೀರಿಸಿ ತಿಳಿಯಬಲ್ಲವನು.

**ಮನೀಷೀ** – ವಿಶ್ವಸೃಷ್ಟಿಯ ಬಗ್ಗೆ ಮುಂದಾಲೋಚನೆ ಇರುವವನು.

**ಪರಿಭೂಃ** – ಎಲ್ಲೆಡೆ ಹರಡಿರುವವನು.

**ಸ್ವಯಂಭೂಃ** – ಸ್ವಯಂ ಇರುವವನು, ಇವನನ್ನು ಹುಟ್ಟಿಸುವವರಾರೂ ಇಲ್ಲ ಎಂದು ಭಾವ.

**ಸಃ** – ಈ ರೀತಿಯ ಪರಮಾತ್ಮನು.

**ಪರ್ಯಗಾತ್** – ಎಲ್ಲೆಡೆ ಹರಡಿಕೊಂಡನು, ಮತ್ತು

**ಯಾಥಾತಥ್ಯತಃ** – ಹಿಂದಿನಂತೆಯೇ ನಿಜವಾಗಿ.

**ಅರ್ಥಾನ್** – ಪದಾರ್ಥಗಳೆಲ್ಲವನ್ನೂ.

**ವ್ಯದಧಾತ್** – ತಯಾರಿಸಿದನು

## ೩

### ಶಾರೀರಕಶಾಸ್ತ್ರಾರ್ಥದೀಪಿಕೆ ಸಮನ್ವಯಾಧಿಕರಣ[2]

**ಶುಕ್ಲಃ** – ಹೆಚ್ಚು ತೇಜಸ್ಸಿನಿಂದ ಕೂಡಿದವನು.

---

1. ಶ್ರುತಪ್ರಕಾಶಿಕೆಯ ವಿವರಣೆಗಿಂತ ಇದು ಬೇರೆ ರೀತಿಯದಾಗಿದೆ ಎಂದು ಟಿಪ್ಪಣಿ ಇದೆ. ವಿಷಯವಾಕ್ಯದೀಪಿಕೆ, ಕ್ಷೇಮರಾಜ ಮುದ್ರಿತ, ಪುಟ ೫. ಈ ಮಂತ್ರವು ಶ್ರೀಭಾಷ್ಯದಲ್ಲಿ ವಾದಿಗಳು ಮಾಡುವ ಪೂರ್ವಪಕ್ಷಪ್ರಸಂಗದೊಡನೆ ಉಲ್ಲಿಖಿತವಾಗಿದೆ. ವಾದಿಗಳ ಅಭಿಪ್ರಾಯದಲ್ಲಿ ಜೀವಾತ್ಮ, ಪರಮಾತ್ಮಗಳೆರಡೂ ಒಂದೇ, ಬೇರೆಯಲ್ಲ. ಅದಕ್ಕೆ ತಕ್ಕಂತೆ ಈ ವಿವರಣೆ ಪ್ರಾಯಶಃ ಸರಿಯೆನ್ನಬಹುದು, ಈಶಾ. ೮.

2. ಉಳಿದ ವಿವರಣೆಯೆಲ್ಲ ವಿಷಯವಾಕ್ಯದೀಪಿಕೆಯಲ್ಲಿರುವಂತೆಯೇ ಇದೆ. ಈ ವಿವರಣೆಗಳಲ್ಲಿ ಲಿಂಗವಿಭಕ್ತಿಗಳ ಬದಲಾವಣೆ ಅಥವಾ ಯಾವುದಾದರೊಂದರ ಬದಲಾವಣೆಯನ್ನು ಔಚಿತ್ಯವರಿತು ಪಾಠಕರು ಗಮನಿಸುವುದು. ಈಶಾ. ೮.

**ಅವ್ರಣಃ** – ದೇಹವಿಲ್ಲದುದರಿಂದ ಗಾಯವೂ ಇಲ್ಲದವನು.

ಹೀಗೆ ಇಲ್ಲಿ ಶುಕ್ಲಂ ಮುಂತಾದ ಪದಗಳನ್ನು ಪುಲ್ಲಿಂಗಕ್ಕೆ ಬದಲಾಯಿಸಿಕೊಳ್ಳಬೇಕು.

**೪**

**ಬ್ರಹ್ಮಸೂತ್ರ ಶ್ರೀಭಾಷ್ಯ ಶ್ರುತಪ್ರಕಾಶಿಕಾಭಾವಪ್ರಕಾಶಿಕೆ[1] ೩. ೪. ೧೩, ೧೪.**

ವಿದ್ಯೆ ಎಂದರೆ ಬರಿಯ ವಾಕ್ಯಗಳ ಅರ್ಥಜ್ಞಾನವಲ್ಲ. ಅದು ಧ್ಯಾನ-ಉಪಾಸನ ರೂಪವಾದುದು. ಬರಿಯ ವಾಕ್ಯಾರ್ಥಜ್ಞಾನಕ್ಕೆ ವರ್ಣಾಶ್ರಮಾದಿ ಕರ್ಮಗಳ ಹಾಗೂ ನಿಷ್ಕಾಮಕರ್ಮಗಳ ಅವಶ್ಯಕತೆ ಇಲ್ಲವಾದರೂ, ಉಪಾಸನಕ್ಕೆ ಅವುಗಳ ಅವಶ್ಯಕತೆ ಉಂಟು. ಕರ್ಮಗಳನ್ನು ಅಂಗವಾಗಿ ಪಡೆದಿರುವುದೇ ಅದರ ಸ್ವಭಾವ. ಈ ವಿಚಾರವನ್ನೇ "ಕುರ್ವನ್ನೇವೇಹ ಕರ್ಮಾಣಿ" ಎಂಬ ವಚನದಿಂದ ವಿಧಿಸಲಾಗಿದೆ. ಇದೇ 'ನಾವಿಶೇಷಾತ್' ಎಂಬ ಸೂತ್ರ ಮತ್ತು 'ಅರ್ಥಸ್ವಾಭಾವ್ಯಾತ್' ಎಂಬ ಶ್ರೀಭಾಷ್ಯಶ್ರುತಪ್ರಕಾಶಿಕೆಗಳ ಅಭಿಪ್ರಾಯ.

**೫**

ವಿದ್ಯೆಗೆ ಅಂಗವಾದ ನಿತ್ಯನೈಮಿತ್ತಿಕಕರ್ಮಗಳೇ ಆಯಾ ಆಶ್ರಮದ ಅಂಗವಾದ ಕರ್ಮಗಳಾದುದರಿಂದ ವಿದ್ಯಾನುಷ್ಠಾನವಿಲ್ಲದವರೂ ಕೂಡ ವಿದ್ಯಾನುಷ್ಠಾನ ಮಾಡುವವರು ಹೇಗೆ ಮಾಡುವರೋ ಹಾಗೆ ಅಂತಹ ಕರ್ಮಗಳನ್ನೇ ಮಾಡಬೇಕು. ಕರ್ಮವನ್ನು ಆಚರಿಸುವವರು ಬೇರೆ ಬೇರೆ ರೀತಿಯವರಾದರೂ ಕರ್ಮದ ಆಚರಣೆಯಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಅದರ ಬಳಕೆ ಮಾತ್ರ ಬೇರೆ. ಇದನ್ನೇ ವೇದಾಂತದಲ್ಲಿ "ವಿನಿಯೋಗ ಪೃಥಕ್ತ್ವ" ಎನ್ನಲಾಗಿದೆ. ಇದನ್ನೇ ಮೀಮಾಂಸಕರು "ಸಂಯೋಗಪೃಥಕ್ತ್ವ" ಎಂದು ಹೇಳಿದ್ದಾರೆ ಎಂಬ ಅಂಶವನ್ನು ಇಲ್ಲಿ ಗಮನಿಸಬೇಕು.[2] ೩. ೪. ೩೨.

**೬**

**ಶಾರೀರಕಶಾಸ್ತ್ರಾರ್ಥದೀಪಿಕೆ, ಪುರುಷಾರ್ಥಾಧಿಕರಣ[3]**

'ನಿಯಮಾತ್' ಎಂಬ ಸೂತ್ರದಲ್ಲಿ 'ಕುರ್ವನ್ನೇವೇಹ ಕರ್ಮಾಣಿ' ಎಂಬ ವಚನಾನುಸಾರ ಕರ್ಮವೇ ಮುಖ್ಯವೆಂದೂ ವಿದ್ಯೆಯು ಕರ್ಮಕ್ಕೆ ಅಂಗವೆಂದೂ ಅರ್ಥಮಾಡಬೇಕೆಂದು ಪೂರ್ವಪಕ್ಷಮಾಡಲಾಗಿದೆ. 'ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್' ಎಂಬ ಸೂತ್ರದಲ್ಲಿ ಕರ್ಮದಿಂದ ಪರಮಾತ್ಮಪ್ರಾಪ್ತಿ ಆಗುವುದಿಲ್ಲ, ಅದು ಪರಮಾತ್ಮೋಪಾಸನ ರೂಪವಾದ ವಿದ್ಯೆಯಿಂದ ಮಾತ್ರ ಎಂದು ವ್ಯಾಸರು ತಮ್ಮ ಸಿದ್ಧಾಂತವನ್ನು ಸ್ಪಷ್ಟಪಡಿಸಿದ್ದಾರೆ. 'ತುಲ್ಯಂ ತು ದರ್ಶನಂ' ಎಂಬ ಸೂತ್ರದಲ್ಲಿ ಬ್ರಹ್ಮವಿದ್ಯೆಗೆ ನಿಷ್ಕಾಮಕರ್ಮವೇ ಅಂಗವಾದುದರಿಂದ ಅದನ್ನು ಬಿಡುವಂತಿಲ್ಲ ಎಂದು ತಿಳಿಸಲಾಗಿದೆ. 'ವಿಭಾಗಶ್ಶತವತ್' ಎಂಬ ಸೂತ್ರದಲ್ಲಿ "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ" ಎಂಬ ವಚನವನ್ನು ಆಧಾರವಾಗಿಟ್ಟುಕೊಂಡು ವಿದ್ಯಾವಿದ್ಯೆಗಳ ಅಂಗಾಂಗಿಭಾವವನ್ನು ದೃಢಪಡಿಸಿ, ಮೃತ್ಯುತರಣವು ಅಂಗವಾದ ಅವಿದ್ಯೆಯ ಫಲ, ಅಮೃತತ್ವಪ್ರಾಪ್ತಿಯು ವಿದ್ಯೆಯ ಫಲ, ವಿದ್ಯಾಫಲಕ್ಕೆ ಅವಿದ್ಯಾ ಫಲವೂ ಸಹಾಯಕವಾಗಿ ಜೊತೆಗೂಡಬೇಕು ಎಂದು ನಿರ್ಣಯಿಸಲಾಗಿದೆ. 'ನಾವಿಶೇಷಾತ್' ಎಂಬ ಸೂತ್ರದಲ್ಲಿ ವಿದ್ಯೆ ಇಲ್ಲದೆ ಸ್ವತಂತ್ರ ಕರ್ಮನಿಷ್ಠರು ಮಾಡುವ ಶಾಸ್ತ್ರೀಯ ಕರ್ಮಗಳನ್ನೇ ಬ್ರಹ್ಮ

---

1. ಈಶಾ. ೨.
2. ಈಶಾ. ೨.
3. ಈಶಾ. ೨, ೧೧, ೧೪.

ವಿದ್ಯಾನಿಷ್ಠನು ನಿಷ್ಕಾಮನಾಗಿ ಮಾಡಬೇಕೆಂಬುದೇ 'ಕುರ್ವನ್ನೇವ' ಎಂಬ ಮಂತ್ರದ ಅರ್ಥ ಎಂದು ನಿರ್ಣಯಿಸ ಲಾಗಿದೆ. 'ಸ್ತುತಯೇಽನುಮತಿರ್ವಾ' ಎಂಬ ಸೂತ್ರದಲ್ಲಿ ಇದು ಈಶಾವಾಸ್ಯವಿದ್ಯೆಯ ಸಂದರ್ಭವಾದುದರಿಂದ ಇಂತಹ ವಿದ್ಯಾನಿಷ್ಠರಾದವರು ಕರ್ಮಗಳನ್ನೇ ಮಾಡುತ್ತಿದ್ದರೂ ಕರ್ಮಫಲಗಳ ಲೇಪ ಅವರಿಗಾಗುವುದಿಲ್ಲವೆಂದು ಸ್ಪಷ್ಟಪಡಿಸಲಾಗಿದೆ.

### ನ್ಯಾಯಸಿದ್ಧಾಂಜನ ಟೀಕೆ, ನ್ಯಾಸವಿದ್ಯಾಪ್ರಕರಣ[1]

ಅರ್ಚಿರಾದಿಮಾರ್ಗಗಮನರೂಪವಾದ ಸಂಭೂತಿಯನ್ನು ನಾವು ಉಪಾಸಿಸಬೇಕು. ಏಕೆಂದರೆ, ಅದು ಪರ ಮಾತ್ಮಪ್ರಾಪ್ತಿಗೆ ಸಾಧನವಾದುದರಿಂದ ಮತ್ತು ವಿದ್ಯೆಯ ಫಲವಾದುದರಿಂದ ಪರಮಾತ್ಮೋಪಾಸನೆಯಲ್ಲಿ ಸಹ ಚಿಂತನೆಗೆ ಯೋಗ್ಯವಾಗಿದೆ. ಫಲದ ಅಂಶವನ್ನು ತಿಳಿಸಿದಾಗಲೇ ಅದರ ಸಾಧನವೂ ಅಲ್ಲಿ ಇರಬೇಕಾದುದರಿಂದ ಸಂಭೂತಿ ಶಬ್ದಕ್ಕೆ "ಲಕ್ಷಣಾವೃತ್ತಿ" ಯಿಂದ ವಿದ್ಯೆ ಎಂದೂ ಅರ್ಥವಾಗುವುದು.

## ಬೃಹದಾರಣ್ಯಕ, ಈಶಾವಾಸ್ಯ ಉಪನಿಷತ್ ಮಂತ್ರಗಳ ಹೋಲಿಕೆ

### ೧

**ತಸ್ಮಿನ್ ಶುಕ್ಲಮುತ ನೀಲಮಾಹುಃ ಪಿಂಗಲಂ ಹರಿತಂ ಲೋಹಿತಂ ಚ.**
**ಏಷ ಪಂಥಾ ಬ್ರಹ್ಮಣಾ ಹಾನುವಿತ್ತಃ ತೇನೈತಿ ಬ್ರಹ್ಮವಿತ್ ತೈಜಸಶ್ಚ. ಬೃ. ೬. ೪. ೯**

ವಿವಿಧ ವರ್ಣಗಳಿಂದ ಕಂಗೊಳಿಸುವ ಸೂರ್ಯನು ಪರಮಾತ್ಮನ ಲೋಕದ ಕಡೆಗಿರುವ ಅರ್ಚಿರಾದಿಮಾರ್ಗ ದಲ್ಲಿ ಪಂಚಾಗ್ನಿವಿದ್ಯಾನಿಷ್ಠರಾದ ಕೇವಲಿಗಳಿಗೂ ಬ್ರಹ್ಮವಿದ್ಯಾನಿಷ್ಠರಾದ ಏಕಾನ್ತಿಗಳಿಗೂ ಸಿಗುವನು. ಎಂದು ಪರಮಾತ್ಮನ ಕಲ್ಯಾಣತಮರೂಪವನ್ನು ತಿಳಿಸಲಾಗಿದೆ. ಈಶಾ. ೧೫, ೧೬, ೧೮.

### ೨

**ಅಂಧಂ ತಮಃ ...........ವಿದ್ಯಾಯಾಂ ರತಾಃ. ಬೃ. ೬. ೪. ೧೦ ಈಶಾ. ೯.**

**ಅವಿದ್ಯಾಂ** :– ಪರಮಾತ್ಮಜ್ಞಾನ ಪಡೆಯುವ ಆಸೆಯಿಲ್ಲದೆ ಸ್ವರ್ಗಾದಿ ಸುಖಗಳಿಗಾಗಿ ಮಾಡುವ ಕರ್ಮವನ್ನು.

**ಅಂಧಂ, ತಮಃ** :– ಈ ಸಂಸಾರವನ್ನು.

**ವಿದ್ಯಾಯಾಂ, ಉ, ರತಾಃ** :– ನಿತ್ಯ ನೈಮಿತ್ತಿಕ ಕರ್ಮಗಳನ್ನು ಬಿಟ್ಟು ಆತ್ಮವಿದ್ಯೆಯಲ್ಲೇ ಮಗ್ನರಾದವರು.

"ಅಜ್ಞಾನದಿಂದ ವಿಹಿತಕರ್ಮಗಳನ್ನೇ ಬಿಟ್ಟುಬಿಡುವುದು ತಾಮಸ ರೀತಿಯ ತ್ಯಾಗ"[2] ಇದನ್ನು ಆಸುರ ಎಂದು ಗೀತೆಯಲ್ಲಿ ಹೇಳಲಾಗಿದೆ. ಇದೇ ಉಪನಿಷತ್ತಿನಲ್ಲಿ ಮುಂದೆಯೂ ಹೇಳಲಾಗುವುದು.

**ಭೂಯಃ, ಇವ, ತಮಃ** :– ಮತ್ತಷ್ಟು ಈ ಸಂಸಾರವನ್ನೇ.

---

1. "ಪರಲೋಕದಲ್ಲಾಗುವ ಪರಮಾತ್ಮಪ್ರಾಪ್ತಿಗೆ ಮೊದಲು ಅಮಾನವನೆನಿಸಿದ ವಿದ್ಯುತ್ಪುರುಷನ ಸ್ಪರ್ಶವಾಗುವುದು, ಅದಕ್ಕೂ ಮೊದಲು ನಡೆಯುವ ಎಲ್ಲ ಕ್ರಿಯೆ ವಿಕ್ರಿಯೆಗಳೂ ವಿದ್ಯೆಯ ಪರಿಪಕ್ವಾವಸ್ಥೆಗಳೇ. ಆದುದರಿಂದ ಸಂಭೂತಿಯು ವಿದ್ಯೆಯ ಒಂದು ಪರಿಪಕ್ವಾವಸ್ಥೆ" ಎಂಬ ವೇದಾಂತಾಚಾರ್ಯರ ಮಾತೂ ಈ ಪ್ರಕರಣದಲ್ಲಿರುವುದು ಗಮನಾರ್ಹ. ಈಶಾ. ೧೪.

2. ಮೋಹಾತ್ತಸ್ಯ ಪರಿತ್ಯಾಗಃ ತಾಮಸಃ ಪರಿಕೀರ್ತಿತಃ. ಗೀ. ೧೮. ೭.
ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ. ಬೃ. ೬. ೪. ೨೨.

೩

**ಅನಂದಾನಾಮ** .............. **ಅವಿದ್ವಾಂಸೋಽಬುಧೋ ಜನಾಃ. ಬೃ. ೬. ೪. ೧೧, ಈಶಾ. ೩.**

**ಅವಿದ್ವಾಂಸಃ** :– ಪರಮಾತ್ಮಜ್ಞಾನವಿಲ್ಲದವರು.

**ಅಬುಧಃ** :– ಪರಿಶುದ್ಧ ಜೀವಾತ್ಮವಿದ್ಯೆ ತಿಳಿಯದವರು.

೪

**ಆತ್ಮಾನಂ ಚೇತ್ ವಿಜಾನೀಯಾತ್ ಅಯಮಸ್ಮೀತಿ ಪೂರುಷಃ.**

**ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ! ಬೃ. ೬. ೪. ೧೨.**

ತನ್ನೊಳಗೆ ಪರಮಾತ್ಮನಿರುವುದನ್ನು ತಿಳಿದು ಅವನಂತೆನಿಸಿದ ಜ್ಞಾನಿಗೆ ಈ ದೇಹಾದಿಗಳ ಬಗ್ಗೆ ಆಸೆಯಾಗಲಿ ಮೋಹವಾಗಲಿ ಶೋಕವಾಗಲಿ ಏನಿರುವುದು ! ಈಶಾ. ೭. ೧೬.

೫

**ಯದೈತಮನುಪಶ್ಯತಿ ಆತ್ಮಾನಂ ದೇವಮಂಜಸಾ.**

**ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ. ಬೃ. ೬. ೪. ೧೫.**

ಈ ಮಂತ್ರದಲ್ಲಿ ಆತ್ಮ ಎಂಬುದರ ಅರ್ಥ ಪರಮಾತ್ಮ ಎಂದೂ ಅವನೇ ಈಶನೆಂದೂ ಸ್ಪಷ್ಟವಾಗಿ ತಿಳಿಸಲಾಗಿದೆ. ಈಶಾ. ೬. ಹೋಲಿಸಿ. ೧. ಮತ್ತು ೧೮. ಗಮನಿಸಿ.

೬

**ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ನ ವರ್ಧತೇ ಕರ್ಮಣಾ ನೋ ಕನೀಯಾನ್.**

**ತಸ್ಯೈವ ಸ್ಯಾತ್ ಪದವಿತ್ ತಂ ವಿದಿತ್ವಾ, ನ ಲಿಪ್ಯತೇ ಕರ್ಮಣಾ ಪಾಪಕೇನ. ಬೃ. ೬. ೪. ೨೩.**

ಬ್ರಹ್ಮಜ್ಞಾನಿಗೆ ಇರುವ ಮಹಿಮೆ ಇದು. ಅವನು ತಾನು ಮಾಡುವ ಕರ್ಮಗಳಿಂದ ಹಿಗ್ಗುವುದೂ ಇಲ್ಲ ಕುಗ್ಗುವುದೂ ಇಲ್ಲ. ಓಂಕಾರಾರ್ಥವನ್ನು ತಿಳಿದ ಅವನಿಗೆ ಯಾವ ಪಾಪವೂ ಅಂಟದು. ಈಶಾ. ೨. ಹೋಲಿಸಿ. ಬ್ರಹ್ಮಸೂತ್ರ, ಶ್ರೀಭಾಷ್ಯ. ೩. ೪. ೧೪. ಗಮನಿಸಿ.

೭

**ಹಿರಣ್ಮಯೇನ ............ ದೃಷ್ಟಯೇ. ಬೃ. ೭. ೧೫. ೧. ಈಶಾ. ೧೫.**

ಅರ್ಚಿರಾದಿಮಾರ್ಗದಲ್ಲಿ ಜೀವಾತ್ಮನನ್ನು ಮುಕ್ತಿಸ್ಥಾನಕ್ಕೆ ಕೊಂಡೊಯ್ಯುವ ದಿವ್ಯಪುರುಷರೊಳಗೆ ಆವೇಶಿಸಿರುವ ಸೂರ್ಯನನ್ನು ಕುರಿತಾದ ಪ್ರಾರ್ಥನೆ ಇದು.

ಸತ್ಯವೆನಿಸಿದವನು ಪರಮಾತ್ಮ. ಅವನ ಬಳಿ ಸೇರುವ ಮಾರ್ಗವನ್ನೇ ಇಲ್ಲಿ ಮುಖ ಎನ್ನಲಾಗಿದೆ. ಆ ಮಾರ್ಗದಲ್ಲಿ ಸೂರ್ಯಮಂಡಲವು ಒಂದು ಹೊಳೆಯುವ ಮುಚ್ಚಳದಂತಿದೆ. ಅದನ್ನು ಪೂಷಾ ಎನಿಸುವ ಸೂರ್ಯನು ತೆರೆಯಲಿ. ಸತ್ಯವೆನಿಸಿದ ಪರಮಾತ್ಮನನ್ನೇ ಸಾಧನ ಧರ್ಮವನ್ನಾಗಿ ಏಕನಿಷ್ಠೆಯಿಂದ ಆಶ್ರಯಿಸಿ ಅವನ ದರ್ಶನಕ್ಕಾಗಿ ಕಾಯುತ್ತಿರುವ ನನಗೆ ಅವನ ದರ್ಶನವಾಗಲಿ.

## ೮

**ಪೂಷನ್ನೇಕರ್ಷೇ......ಸೋಽಹಮಸ್ಮಿ. ಬೃ. ೭. ೧೫. ೧. ಈಶಾ. ೧೬.**

ಸೂರ್ಯನೇ ಜಗತ್ತಿಗೆ ಕಣ್ಣು. ಆದುದರಿಂದ ಅವನನ್ನು ಋಷಿ ಎನ್ನಲಾಗಿದೆ. ಋಷಿ ಎಂದರೆ ನೋಡು ವವನು. ಕಿರಣಗಳನ್ನು ಚೆನ್ನಾಗಿ ಹರಡುವ ಅವನಿಗೆ ಸೂರ್ಯ ಎಂದು ತಕ್ಕದಾದ ಹೆಸರು. ತೀಕ್ಷ್ಣವಾದ ಕಿರಣ ಗಳನ್ನು ಅವನು ಒಳಸೆಳೆದುಕೊಳ್ಳದಿದ್ದರೆ ಅವನ ದಿವ್ಯರೂಪದ ದರ್ಶನವಾಗುವುದು ಕಷ್ಟ. ಪರಿಶುದ್ಧ ಜೀವಾತ್ಮನ ಸ್ವರೂಪಕ್ಕೆ ತಕ್ಕಂತೆಯೇ ನಾನು ಇರುವೆನು. ಆತ್ಮತತ್ತ್ವವನ್ನು ತಿಳಿದಿರುವೆನು. ಈ ಅರ್ಹತೆ ಯನ್ನು ಗಮನಿಸಿ ಸೂರ್ಯನು ಅವನ ದಿವ್ಯರೂಪದರ್ಶನಕ್ಕೆ ಸಹಾಯಮಾಡಲಿ ಎಂದು ಭಾವ.

## ೯

**ವಾಯುರನಿಲಂ .....ಸ್ಮರ. ಬೃ. ೭. ೧೫. ೧. ಈಶಾ. ೧೭.**

ಈ ಮಂತ್ರದಲ್ಲಿ ಅಮೃತಂ ಎನ್ನುವ ಬದಲು ಮೃತಂ ಎಂದೇ ಇಟ್ಟುಕೊಳ್ಳಲಾಗಿದೆ ವಾಯುವೆಂದರೆ ಪ್ರಾಣ. ಅದು ಭೌತಿಕವಾದ ಹೊರಗಾಳಿಯಲ್ಲಿ ಲಯವಾಗಲಿ. ಈ ನಂತರ ಭೌತಿಕ ದೇಹವೂ ಬೂದಿಯಾಗಲಿ. ಹೀಗೆ ಈ ದೇಹ, ಇಂದ್ರಿಯ, ಪ್ರಾಣ ಮುಂತಾದುವುಗಳಲ್ಲಿ ನನಗೆ ಇಂತಿಷ್ಟೂ ಅಭಿಮಾನವಿಲ್ಲ. ಏಕೆಂದರೆ ಇವೆಲ್ಲಕ್ಕಿಂತ ಪ್ರತ್ಯೇಕವಾದ ಆತ್ಮ ನಾನು ಎಂಬ ಅರಿವು ನನಗೆ ಆಗಿದೆ. "ಓಂ" ಎಂದರೆ ಎಲೈ ಓಂಕಾರದ ಅರ್ಥ ವಾಗಿರುವ ಸೂರ್ಯನೇ! ಎಂದರ್ಥ. "ಕ್ರತೋಃ" ಎಂಬುದು ಷಷ್ಠೀ ವಿಭಕ್ತಿಯ ಪದ. ಇದಕ್ಕೆ ಕರ್ಮತ್ವ ವ್ಯಾಕರಣಾನುಸಾರ ಇದೆ. ಆದುದರಿಂದ ಕ್ರತು ಎಂದರೆ ನಾನು ಈವರೆಗೆ ಮಾಡಿರುವ ಉಪಾಸನೆ ಎಂದು ಅರ್ಥ. ಕೃತಂ ಎಂದರೆ ಅದರ ಅಂಗವಾಗಿ ಮಾಡಿರುವ ಕರ್ಮ ಎಂದರ್ಥ. ಸ್ಮರ-ಇವುಗಳನ್ನು ನೆನೆಸಿಕೋ ಎಂದರ್ಥ. ಈಗ ನನಗೆ ಆತ್ಮದ ಅರಿವಾಗಿದೆ. ಆ ಅರಿವಿನಿಂದಲೇ ಪರಮಾತ್ಮೋಪಾಸನೆಯಲ್ಲಿ ನಿಷ್ಠೆಯಿಂದ ಇದ್ದು ಆದರ ಅಂಗವಾದ ಕರ್ಮಗಳನ್ನು ತಪ್ಪದೆ ಮಾಡಿರುವೆನು. ಆದುದರಿಂದ ನಿನ್ನ ರೂಪವನ್ನು ತೋರಿ ಮುಕ್ತಿ ಮಾರ್ಗವನ್ನು ಕರುಣಿಸು ಎಂದು ಭಾವ.

## ೧೦

**ಅಗ್ನೇ ನಯ ............ನಮ ಉಕ್ತಿಂ ವಿಧೇಮ. ಬೃ. ೭. ೧೫. ೧. ಈಶಾ. ೧೮.**

ಅರ್ಚಿರಾದಿಮಾರ್ಗದ ಮೊದಲನೆಯ ಸ್ತರದಲ್ಲೇ ಅಗ್ನಿಯನ್ನು ಅಂಗೀಕರಿಸಲಾಗಿದೆ. ಆ ಅಗ್ನಿಯನ್ನು ಕುರಿತ ಪ್ರಾರ್ಥನೆ ಇದು.

ನಮಗೆ ಬೇಕಾದ ಒಳ್ಳೆಯ ಮಾರ್ಗವೇ ಈ ಅರ್ಚಿರಾದಿ. ಇದರಲ್ಲಿ ಮುನ್ನಡೆಸುವವನೇ ಅಗ್ನಿ. ಇದರಲ್ಲೇ ಮುನ್ನಡೆದರೆ ಸ್ವಾರಾಜ್ಯವು ನಮಗೆ ಲಭಿಸುವುದು. ಅದೇ ಮೋಕ್ಷ. ಅಗ್ನಿಯು ಪ್ರಕಾಶಮಾನವಾಗಿರುವುದರಿಂದ ಅವನನ್ನು 'ದೇವ' ಎನ್ನಲಾಗಿದೆ. ಅಗ್ನಿಯು ಸರ್ವಜ್ಞ. ನಮಗಿರುವ ಆತ್ಮಜ್ಞಾನವೆಷ್ಟೆಂಬುದೂ ಅವನಿಗೇ ಗೊತ್ತು. ಅವನು ನಮ್ಮಲ್ಲಿರುವ ಪಾಪಗಳನ್ನು ನಮ್ಮಿಂದ ಬೇರ್ಪಡಿಸಲಿ. ಅವನಿಗೆ ಹೆಚ್ಚು ಹೆಚ್ಚು ನಮಸ್ಕಾರ ಹೇಳೋಣ.

★ ★ ★

### ಜ್ಞಾನಭೂಷಣಂ ಶ್ರೀಸುದರ್ಶನಾಚಾರ್ಯರ

# ವೇದಾನ್ತವಿಜಯಮಂಗಳದೀಪಿಕೆ ಬ್ರಹ್ಮವಿದ್ಯಾವಿಜಯೋಪನ್ಯಾಸ

## ೧

'ಈಶಾವಾಸ್ಯಮಿದಂ ಸರ್ವಂ' ಎಂಬ ವಚನದಲ್ಲಿ ವಿಶ್ವದ ಒಳಹೊಕ್ಕು ಆಳುವ ಪರಮಾತ್ಮನಾದ ವಿಷ್ಣುವನ್ನು ಈಟ್ ಶಬ್ದದಿಂದ ತಿಳಿಸಿ ಅವನನ್ನೇ ತತ್, ಶುಕ್ರಂ, ಅಮೃತಂ, ಪೂರ್ಷ, ಪುರುಷಃ, ಏಕಋಷಿಃ, ಮುಂತಾದ ಶಬ್ದಗಳಿಂದಲೂ ತಿಳಿಸಲಾಗಿದೆ. 'ಈಶಾ+ಆವಾಸ್ಯಂ' – ಈಶನೆಂಬ ದೇವಾತಾಂತರದಿಂದ ಈ ಜಗತ್ತು ವ್ಯಾಪಿಸಲ್ಪಟ್ಟಿದೆ ಎಂಬ ಅರ್ಥಾಂತರವನ್ನು ಮಾಡಲು ಇಲ್ಲಿ ಅವಕಾಶವಿಲ್ಲ. ಶಂಕರಭಗವತ್ಪಾದಾಚಾರ್ಯರೂ ಈಶಾ, ವಾಸ್ಯಂ ಎಂದೇ ವೈದಿಕಪದಪಾಠವನ್ನು ಇಲ್ಲಿ ಚಾಚೂತಪ್ಪದೆ ಅನುಸರಿಸಿ ವ್ಯಾಖ್ಯಾನಿಸಿದ್ದಾರೆ. ಈಶಾ ಶಬ್ದವನ್ನು ಪ್ರತ್ಯೇಕವಾಗಿರಿಸಿಕೊಳ್ಳದಿದ್ದರೆ ಇಲ್ಲಿ ಆವಾಸ್ಯವಾದ ಜಗತ್ತಿಗೇ ಪ್ರಾಧಾನ್ಯವನ್ನು ಕೊಟ್ಟು 'ತದೇಜತಿ ತನ್ನೈಜತಿ ತದ್ದೂರೇ ತದ್ವದಂತಿಕೇ. ತದಂತರಸ್ಯ ಸರ್ವಸ್ಯ ತದುಸರ್ವಸ್ಯಾಸ್ಯಬಾಹ್ಯತಃ' ಮುಂತಾದ ಮಂತ್ರಗಳಿಗೂ ಜಗತ್ತೇ ಅರ್ಥವೆನ್ನಬೇಕಾಗುವುದು. ಹೀಗೆ 'ಈಶಾವಾಸ್ಯಂ' ಎಂಬ ಸಮಾಸಮಾಡುವುದರಿಂದ ಅನರ್ಥವಾಗುವುದು. ಈಶನಿಗೆ ಈ ಉಪನಿಷತ್ತಿನಲ್ಲಿ ಬೆಲೆಯೇ ಇಲ್ಲದಂತಾಗುವುದು.

## ೨

ಪರವಿದ್ಯಾಪ್ರಕರಣದಲ್ಲಿ 'ಏಕಋಷಿಂ ಶ್ರದ್ಧಯನ್ತಃ' ಎಂಬ ಮಾತನ್ನು 'ಸ ಚೇತಸಾ ಭಗವಾನ್' ಎಂಬ ಮಾತಿನಿಂದ ಅನುವದಿಸಿರುವುದನ್ನು ಗಮನಿಸಿದರೆ, ಶಂಕರಭಗವತ್ಪಾದರು ಭಗವತ್‌ಶಬ್ದಕ್ಕೆ ವಿಷ್ಣುವೇ ಅರ್ಥವೆಂದು ಸಮರ್ಥನೆಮಾಡಿರುವುದನ್ನು ಗಮನಿಸಿದರೆ, ಏಕಋಷಿಯು ವಿಶ್ವವ್ಯಾಪಕವಾದ ವಿಷ್ಣು ಎಂಬ ಅರ್ಥವೇ ನಿರ್ಣಯವಾಗುವುದು. 'ವಿಶ್ವಾ ಭುವನಾನಿ ಜುಹ್ವತ್ ಋಷಿಃ' ಎಂದೂ 'ಯೋ ದೇವನಾಂ ನಾಮಧಾ ದೇವ ಏಕಃ' ಎಂದೂ ಒಂದೇ ಪ್ರಕರಣದಲ್ಲಿರುವ ಏಕ ಋಷಿಶಬ್ದಗಳೂ ನಾರಾಯಣನನ್ನೇ ತಿಳಿಸುತ್ತವೆ. ಬ್ರಹ್ಮರುದ್ರಾದಿದೇವತೆಗಳಿಗೆ ಹೆಸರಿಟ್ಟವನು ಇವನು, ಇವನನ್ನು ಪ್ರಾರ್ಥಿಸಿ ಇವನಿಂದ ಹೆಸರಿಡಿಸಿಕೊಂಡವರು ಈ ದೇವತೆಗಳು ಎಂಬ ವಿಷಯ ಶತಪಥಬ್ರಾಹ್ಮಣದಲ್ಲಿ ಸ್ಪಷ್ಟವಾಗಿದೆ.

## ೩

ಮೈತ್ರಾಯಣೀಯ ಆರಣ್ಯಕೋಪನಿಷತ್ತಿನಲ್ಲಿ ಗಾಯತ್ರೀಮಂತ್ರದ ಅರ್ಥ ಅದರ ದೇವತೆಯಾದ ವಿಷ್ಣು, ಅವನೇ 'ಸತ್ಯಧರ್ಮ', ಅವನೇ ಸೂರ್ಯಮಂಡಲದೊಳಿರುವವನು, ಅವನೇ 'ಪೂಷನ್' ವಿಷ್ಣು, ಅವನೇ ಅಗ್ನಿಯ

---

1. ಚಂಡಮಾರುತಂದೊಡ್ಡಯಾಚಾರ್ಯರೆಂಬ 'ಮಹಾಚಾರ್ಯರ' ಶಿಷ್ಯರಾದ ಇವರು ಆಚಾರ್ಯರ 'ವೇದಾನ್ತವಿಜಯ' ಎಂಬ ಬೃಹತ್ ಉಪನ್ಯಾಸರೂಪವಾದ ಗ್ರಂಥವನ್ನು ವಿದ್ಯಾರ್ಥಿಗಳ ಉಪಯೋಗಕ್ಕಾಗಿ 'ವಿಜಯಮಂಗಳದೀಪಿಕೆ' ಎಂಬುದಾಗಿ ಸಂಗ್ರಹಿಸಿದ್ದಾರೆ. ಇದರಿಂದಲೇ ಮಹಾಚಾರ್ಯರ ಗ್ರಂಥಗಳಲ್ಲಿ ಬರುವ ಈಶಾವಾಸ್ಯವಿಚಾರಗಳು ಸಾರವಾಗಿ ತಿಳಿಯುವುವು. ಆದುದರಿಂದ ಅಮುದ್ರಿತವಾದ ಮಹಾಚಾರ್ಯರ ಮಹಾಕೃತಿಗಳನ್ನು ಪೂರ್ಣವಾಗಿ ಅವಲೋಕಿಸಲು ಸಾಧ್ಯವಾಗಲಿಲ್ಲವಾದರೂ ಅವರ ಅಭಿಪ್ರಾಯಗಳೂ ಇವೇ ಎಂದು ತಿಳಿಯಬಹುದು. ಮಹಾಚಾರ್ಯರು ವಿಜಯನಗರದ ರಾಮರಾಯನ ಕಾಲದವರು. ಪ್ರಸಿದ್ಧ ಅಪ್ಪಯ್ಯದೀಕ್ಷಿತರ ಸಮಕಾಲೀನರು. ಸುದರ್ಶನಾಚಾರ್ಯರ ಕಾಲವೂ ಕ್ರಿ. ಶ. ೧೬-೧೭ ಶತಮಾನಗಳ ಮಧ್ಯವೆನ್ನಬಹುದು. ಮಹಾಚಾರ್ಯರು ಉಪನಿಷತ್ತುಗಳಿಗೆ "ಉಪನಿಷನ್ಮಂಗಳದೀಪಿಕಾ" ಎಂಬ ವಿಸ್ತೃತ ಭಾಷ್ಯವನ್ನು ಬರೆದಿರುವುದಾಗಿ ಅವರ ವಂಶಪರಂಪರೆಯ ಚರಿತ್ರೆಗಳಿಂದಲೂ ಕೆಲವು ಗ್ರಂಥಗಳಲ್ಲಿ ಉಲ್ಲೇಖವಿರುವುದರಿಂದಲೂ ತಿಳಿದುಬರುತ್ತದೆ. ಈವರೆಗೆ ಇವರ ಈ ಗ್ರಂಥ ನಮಗೆ ಸಿಕ್ಕಿಲ್ಲ.

ಅಂತರ್ಯಾಮಿ ಎಂದು 'ಹಿರಣ್ಮಯೇನ ಪಾತ್ರೇಣ'[1] ಎಂಬ ಮಂತ್ರದಿಂದಲೂ ಅನಂತರದ 'ಯದಾದಿತ್ಯಸ್ಯ ಮಧ್ಯೇಽಕ್ಷಿಣ್ಯಗ್ನೌ ಚೈತದ್ಬ್ರಹ್ಮೈತದ್ಭರ್ಗಮೇತತ್ಸತ್ಯಧರ್ಮಃ' ಎಂಬ ವಾಕ್ಯದಿಂದಲೂ ನಿರ್ಣಯಿಸಲಾಗಿದೆ.

ಶುಕ್ಲಯಜುರ್ವೇದದ ದ್ರಷ್ಟಾರರಾದ ಯೋಗೀಶ್ವರಮಹರ್ಷಿ ಯಾಜ್ಞವಲ್ಕ್ಯರು ವೇದಕ್ಕೆ ಪರಿಪೋಷಕವಾಗಿ ಮಾಡಿರುವ 'ಯೋಗಯಾಜ್ಞವಲ್ಕ್ಯ' ಗ್ರಂಥದಲ್ಲೂ ಇದೇ ಅರ್ಥವನ್ನು ಸ್ಪಷ್ಟಪಡಿಸಿದ್ದಾರೆ.

ಉದಾ: – "ಈಶ್ವರಂ ಪುರುಷಾಖ್ಯಂ ತು ಸತ್ಯಧರ್ಮಾಣಮಚ್ಯುತಮ್.
ಭರ್ಗಾಖ್ಯಂ ವಿಷ್ಣುಸಂಜ್ಞಂ ತು ಜ್ಞಾತ್ವಾಽಮೃತಮುಪಾಶ್ನುತೇ."

ಸನಕಮಹರ್ಷಿಗಳ[2] ಸ್ಮೃತಿಗ್ರಂಥದಲ್ಲೂ ಸೂರ್ಯಮಂಡಲದೊಳಗಿರುವ ನಾರಾಯಣನೇ ಗಾಯತ್ರೀಮಂತ್ರದ ಮುಖ್ಯಾರ್ಥವೆಂದು ಪ್ರತಿಪಾದಿಸಲಾಗಿದೆ.

೪

ರುದ್ರಸೂಕ್ತದಲ್ಲಿ "ಸೂರ್ಯನೊಳಗಿರುವ ಶುಕ್ರನೆಂಬ ಹೆಸರಿನ ಪರಬ್ರಹ್ಮನಾದ ನಾರಾಯಣನಂತಿರುವ ಈ ರುದ್ರನು ನನಗೆ ಬಹಳ ಇಷ್ಟ" ಎಂದು ಹೇಳಲಾಗಿದೆ. ತೈತ್ತಿರೀಯ ನಾರಾಯಣಾನುವಾಕದಲ್ಲೂ 'ಅದೇ ಶುಕ್ರ ಅದೇ ಅಮೃತ ಅದೇ ಬ್ರಹ್ಮ' ಎಂದು ನಾರಾಯಣನನ್ನೇ ಸ್ಪಷ್ಟವಾಗಿ ನಿರ್ದೇಶಿಸಲಾಗಿದೆ. ಮಹಾಭಾರತದ ಮೋಕ್ಷಧರ್ಮಪರ್ವದಲ್ಲೂ 'ವೈಕುಂಠಃ ಪರಮೋ ವಿಷ್ಣುಃ ಶುಕ್ರೋಽನಂತಸ್ಸನಾತನಃ' ಎಂಬ ಮಾತಿನಲ್ಲಿ ವಿಷ್ಣುವನ್ನೇ ಶುಕ್ರನೆನ್ನಲಾಗಿದೆ.

೫

ತೈತ್ತಿರೀಯಮಹೋಪನಿಷತ್ತಿನಲ್ಲೂ ನಾರಾಯಣನನ್ನು ವರ್ಣಿಸುವಾಗ "ಯಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷಃ" ಎಂದೂ, ತೈತ್ತಿರೀಯ ಆನಂದವಲ್ಲಿಯಲ್ಲಿ "ಸ ಯಶ್ಚಾಯಂ ಪುರುಷೇ, ಯಶ್ಚಾಸಾವಾದಿತ್ಯೇ, ಸ ಏಕಃ" ಎಂದೂ ಹೇಳಿರುವುದರಿಂದ ಅಸೌ ಪುರುಷಃ ಎಂದರೆ ನಾರಾಯಣನೇ ಎಂದು ನಿರ್ಣಯಿಸಬಹುದು. ದತ್ತಾತ್ರೇಯ ಸ್ಮೃತಿಯಲ್ಲಿ:–

ಯೋಽಸೌ ವಿಷ್ಣ್ವಾಖ್ಯ ಆದಿತ್ಯೇ ಪುರುಷೋಽನ್ತರ್ವ್ಯವಸ್ಥಿತಃ.
ಸೋಽಹಂ ನಾರಾಯಣೋ ದೇವಃ ಪುರುಷೋ ಲೋಕಪಾವನಃ.

ಎಂದು ಹೇಳಲಾಗಿದೆ.

೬

ಮಹಾಭಾರತದ ಮೋಕ್ಷಧರ್ಮದಲ್ಲಿ 'ವಿದ್ಯಾಸಹಾಯವಂತಂ ಮಾಂ ಆದಿತ್ಯಸ್ಥಂ ಸನಾತನಂ' ಎಂಬುದು ಕೃಷ್ಣನ ಮಾತು.

---

1. ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್.
ತತ್ ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ವಿಷ್ಣವೇ ಮೈತ್ರಾಯಣೀಯ ಆರಣ್ಯಕ. ೬.೩೫.
(ಈಶಾವಾಸ್ಯೋಪನಿಷತ್) ಯಾಜ್ಞೀಯ ಮಂತ್ರೋಪನಿಷತ್. ಬನ್ನಂಜೆಗೋವಿಂದಾಚಾರ್ಯ ಸಂಪಾದಿತ ಪುಟ. ೨೮.

2. ಯಾಜ್ಞವಲ್ಕ್ಯರಿಗಿಂತ ಮೊದಲು ಈಶಾವಾಸ್ಯದ ದ್ರಷ್ಟಾರರಾಗಿದ್ದ ದಧ್ಯಙ್ಆಥರ್ವಣಮಹರ್ಷಿಗಳ ಗುರುಪರಂಪರೆಯಲ್ಲಿ ಸನಕಮಹರ್ಷಿಗಳು ಅತಿ ಹಿರಿಯರೆನಿಸಿದಾರೆ. ಬೃ. ೪. ೬. ೩.

ಅವನ ಕೈಲಾಸಯಾತ್ರಾ ಸಂದರ್ಭದಲ್ಲಿ

'ಮಾ-ವಿದ್ಯಾ ಚ-ಹರೇಃ ಪ್ರೋಕ್ತಾತಸ್ಯಾ ಈಶೋಯತೋಭವಾನ್
ತಸ್ಮಾತ್ ಮಾಧವನಾಮಾಸಿ, ಧವಃ ಸ್ವಾಮೀತಿ ಶಬ್ದಿತಃ'

ಎಂಬುದು ಶಿವನ ಮಾತು. ಈ ಮಾತುಗಳು ಸೂರ್ಯನೊಳಗಿರುವವನು ವಿಷ್ಣು ಎಂದೂ ಅವನೇ ವಿದ್ಯೆಗೆ – ಉಪಾಸನೆಗೆ ಅಧಿಪತಿ ಎಂದೂ ನಿರ್ಣಯಿಸಲು ಪ್ರಬಲ ಆಧಾರಗಳಾಗಿವೆ.



ಅಪ್ಪಯ್ಯದೀಕ್ಷಿತರ ಚತುರ್ಮತಸಾರ

## ನಯಮಯೂಖಮಾಲಿಕೆ[1]

ಉಪಾಸನಾರೂಪವಾದ ವಿದ್ಯೆಯು ಬರಿಯ ಶಾಸ್ತ್ರಾಧ್ಯಯನದಿಂದ ಬರುವ ವಾಕ್ಯಾರ್ಥ ಜ್ಞಾನವಲ್ಲ. 'ಕುರ್ವನ್ನೇವೇಹ ಕರ್ಮಾಣಿ' ಎಂಬ ಮಾತಿಗೆ ಬದುಕಿರುವವರೆಗೂ ಕರ್ಮವನ್ನೇ ಮಾಡುತ್ತಿರಬೇಕೆಂಬ ನಿಯಮವೇ ಅರ್ಥವೆನ್ನಲಾಗುವಂತೆ, ವಿದ್ಯಾಂಗವಾದ ಕರ್ಮಗಳನ್ನು ಹೀಗೆ ಆಚರಿಸಲೇಬೇಕೆಂಬ ನಿಯಮವನ್ನು ಅರ್ಥವೆನ್ನಬಹುದಾಗಿದೆ. ವಾಸ್ತವವಾಗಿ ವಿದ್ಯೆಯ ಮಹಿಮೆಯನ್ನು ತಿಳಿಸಲು ಹೊರಟಿರುವ ಈಮಾತಿಗೆ ಕರ್ಮಮಾಡಲೇಬೇಕೆಂಬ ಅರ್ಥವಲ್ಲ. ಕರ್ಮಗಳನ್ನೇ ಮಾಡುತ್ತಿದ್ದರೂ ಏನೂ ಬಾಧಕವಿಲ್ಲ ಎಂದೇ ಅರ್ಥ. ಈಮಾತು ವಿಧಿಯಲ್ಲ ಅನುಮತಿ. 'ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ' ಎಂಬ ಉಳಿದ ವಾಕ್ಯಾಂಶವನ್ನು ಗಮನಿಸಿದರೆ ನಿಸ್ಸಂಗವಾದ ಆತ್ಮಜ್ಞಾನಿಯು ಯಾವುದೇ ರೀತಿಯ ಕರ್ಮಗಳನ್ನು ಮಾಡುತ್ತಿದ್ದರೂ ವಿದ್ಯಾಬಲದಿಂದ ಯಾವನ ಕರ್ಮಗಳೂ (ಪುಣ್ಯಪಾಪಗಳೂ) ಅವನಿಗೆ ಅಂಟುವುದಿಲ್ಲ ಎಂಬ ವಿದ್ಯೆಯ ಮಹಿಮೆಯೇ ಈ 'ಅನುಮತಿ'ಯಿಂದ ತಿಳಿದು ಬರುವುದು.[2]



---

1. ಅಪ್ಪಯ್ಯದೀಕ್ಷಿತರು ಸರ್ವತಂತ್ರಸ್ವತಂತ್ರರೆನಿಸಿದ ಏಕೈಕ ಅದ್ವೈತಾಚಾರ್ಯರು. ಇವರು ಎಲ್ಲ ಮತದರ್ಶನಗಳಿಗೂ ಅಲಂಕಾರ ಶಾಸ್ತ್ರಕ್ಕೂ ಉತ್ತಮವಾದ ಪಠ್ಯಗ್ರಂಥಗಳನ್ನು ಸಾಧಾರವಾಗಿ ಬರೆದಿರುವರು. ವೇದಾಂತದೇಶಿಕರ ಯಾದವಾಭ್ಯುದಯ ಕಾವ್ಯಕ್ಕೆ ಇವರ ವ್ಯಾಖ್ಯಾನ ಅದ್ಭುತವಾಗಿದೆ. ವಿಶಿಷ್ಟಾದ್ವೈತದಲ್ಲಿ ಇವರು ಬರೆದಿರುವ ಗ್ರಂಥ ಇದು. ಭಗವದ್ರಾಮಾನುಜರ ಶ್ರೀ ಭಾಷ್ಯದ ಈ ಭಾಗದ ಅರ್ಥವನ್ನು ಇಲ್ಲಿ ಸ್ಪಷ್ಟವಾಗಿ ಪ್ರತಿಬಿಂಬಿಸಿದ್ದಾರೆ. ಚಂಡಮಾರುತಂ ದೊಡ್ಡಯಾಚಾರ್ಯರು ಇವರೊಡನೆ ವಾದಿಸಿ ಚಿದಂಬರದಲ್ಲಿ ಗೋವಿಂದರಾಜದೇವರ ಪುನರುದ್ಧಾರ ಮಾಡಿದುದರಿಂದ ಇಬ್ಬರೂ ಸಮಕಾಲದವರು. ಕ್ರಿ. ಶ. ೧೬ನೆಯ ಶತಮಾನ. ದೀಕ್ಷಿತರು ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ಶಕ್ತಿವಿಶಿಷ್ಟಾದ್ವೈತ (ಶಿವಾದ್ವೈತ) ಮತಗಳನ್ನು ಚತುರ್ಮತಸಾರದಲ್ಲಿ ತಿಳಿಸಿರುವರು.

2. ಈಶಾ. ೨.

# ಮಹಾಚಾರ್ಯರ[1] ಪಾರಾಶರ್ಯವಿಜಯ

## ೧

ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ.
ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ. ೬.
ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ.
ತತ್ರ ಕೋ ಮೋಹಃ ಕಶ್ಶೋಕ ಏಕತ್ವಮನುಪಶ್ಯತಃ. ೭.

ಎಂಬ ಈಶಾವಾಸ್ಯದ ಮಂತ್ರಗಳೂ, ಬೃಹದಾರಣ್ಯಕದ "ಇದಂ ಸರ್ವಂ ಯದಯಮಾತ್ಮಾ" ಮುಂತಾದ ಮಾತುಗಳೂ ಸರ್ವಾದ್ವೈತವನ್ನು ತಿಳಿಸುವುದಿಲ್ಲ. ಶರೀರಶರೀರಿಭಾವದ ಮೂಲಕ ವಿಶಿಷ್ಟವಾದ ಏಕತೆಯನ್ನೇ ತಿಳಿಸುತ್ತವೆ.

ಈ ವಿಷಯದಲ್ಲಿ ಬ್ರಹ್ಮಸೂತ್ರಕಾರರು "ಅಂಶೋ ನಾನಾವ್ಯಪದೇಶಾತ್" "ಆತ್ಮೇತಿತೂಪಗಚ್ಛಂತಿ ಗ್ರಾಹಯಂತಿ ಚ" ಎಂಬ ಸೂತ್ರಗಳಲ್ಲಿ ವಿಚಾರ ಮಾಡಿ ವಿಶಿಷ್ಟಏಕತೆಯನ್ನೇ ನಿರ್ಣಯಿಸುವರು.

ಅಂಶವೆಂದರೆ ವಿಶೇಷಣ. ಜಡವಸ್ತುಗಳೂ, ಜೀವವಸ್ತುಗಳೂ ಪರಮಾತ್ಮನಿಗೆ ವಿಶೇಷಣ. ಅವನು ಇವೆಲ್ಲದರ ಒಳಗಿರುವ ಪರಮನೆನಿಸಿಬ ಆತ್ಮ ಎಂಬುದು ತತ್ತ್ವದ ನಿಜಸ್ಥಿತಿ. ಅವನನ್ನು ಹಾಗೆಯೇ ಉಪಾಸಿಸಬೇಕು. ಹಾಗೆ ಉಪಾಸಿಸಿದ ಹಿರಿಯ ಮಹರ್ಷಿಗಳು ಶಿಷ್ಯರಿಗೂ ಅಂತೆಯೇ ಉಪಾಸಿಸುವುದನ್ನು ಕಲಿಸಿರುವರು. ಪರಮಾತ್ಮ ಒಬ್ಬನೇ ಎಲ್ಲದರ ಆತ್ಮವಾದುದರಿಂದ ಜೀವಾತ್ಮಗಳೂ ಅವುಗಳ ಈ ಜಡಶರೀರಗಳೂ ಎಲ್ಲವೂ ಪರಮಾತ್ಮನ ಶರೀರಗಳೇ ಎಂಬುದು ನಿರ್ಣಯ. ಪುಟ ೨.

ಯಸ್ಮಿನ್ – ಯಾವ ಕಾಲದಲ್ಲಿ, ತತ್ರ – ಆ ಕಾಲದಲ್ಲಿ, ಏಕತ್ವಂ, ಅನುಪಶ್ಯತ: – ಸರ್ವವ್ಯಾಪಕನಾದ ಈಶನಲ್ಲಿರುವ ಏಕತ್ವವನ್ನು ಭಾವಿಸುವವನಿಗೆ, ಸರ್ವವ್ಯಾಪಕವಾದ ವಸ್ತು ಬೇರಾವುದೂ ಇಲ್ಲ, ಇದೊಂದೇ ಎಂದು ತಿಳಿಯುವವನಿಗೆ ಎಂದರ್ಥ.[2] ಪುಟ ೮.

## ೨

ಶ್ವೇತಾಶ್ವತರದ ನಾಲ್ಕನೇ ಖಂಡದಲ್ಲಿ ಬರುವ ಈ ಕೆಳಗಿನ ಮಂತ್ರಗಳಿಂದ "ಕಃ" ಎಂದು ಹೆಸರುಳ್ಳ ನಾರಾಯಣನೇ ಚತುರ್ಮುಖಬ್ರಹ್ಮನ ತಂದೆ, ಅವನೇ ಸರ್ವಜಗತ್ಕಾರಣ, ಅವನೇ ಎಲ್ಲದರ ಒಳಗಿರುವ ಸೂಕ್ಷ್ಮಾತಿಸೂಕ್ಷ್ಮ ವಸ್ತು, ಅವನೇ ಪರಮಾತ್ಮ, ಎಲ್ಲವನ್ನೂ ಆವರಿಸಿಕೊಂಡಿರುವವನು, ವಿವಿಧರೂಪವುಳ್ಳವನು ಎಲ್ಲದರ ಈಟ್–ಒಡೆಯ, ಎಲ್ಲವನ್ನೂ ಅರಿತ ಮಹರ್ಷಿ ಎನ್ನಲಾಗಿದೆ.

ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಕೋ ರುದ್ರೋ ಮಹರ್ಷಿಃ.
ಹಿರಣ್ಯಗರ್ಭಂ ಪಶ್ಯತ ಜಾಯಮಾನಂ ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು. ೪.೧೨

---

1. ಚಂಡಮಾರುತಂ ದೊಡ್ಡಯಾಚಾರ್ಯರೆಂದು ಪ್ರಸಿದ್ಧರಾದ ಮಹಾಚಾರ್ಯರ ಕಾಲ ಕ್ರಿ. ಶ. ೧೬ನೆಯ ಶತಮಾನ. ವೇದಾಂತದೇಶಿಕರ ವಾದಗ್ರಂಥಗಳನ್ನು ವ್ಯಾಖ್ಯಾನಿಸಿ ದೃಢಪಡಿಸಿದವರು ಇವರು. 'ವೇದಾಂತ ವಿಜಯ' (ಪಂಚ ವಿಜಯ) 'ಪಾರಾಶರ್ಯ ವಿಜಯ' (ಬ್ರಹ್ಮಸೂತ್ರಭಾಷ್ಯ) 'ಅಧಿಕರಣಾರ್ಥಸಂಗ್ರಹ' ಮುಂತಾದ ಉದ್ಗ್ರಂಥಗಳನ್ನು ಬರೆದಿರುವರು.

2. ಎಲ್ಲದರಲ್ಲೂ ಇರುವ ಪರಮಾತ್ಮ ಒಬ್ಬನೇ. ಅನೇಕ ಪರಮಾತ್ಮಗಳಿಲ್ಲ ಎಂಬ ತತ್ವವನ್ನು ಧ್ಯಾನದಲ್ಲಿ ಅನುಭವಿಸುವವನಿಗೆ ಆಕಾಲದಲ್ಲಿ ಶೋಕ ಮೋಹಗಳಿರುವುದಿಲ್ಲ ಎಂದು ಮಂತ್ರದ ತಾತ್ಪರ್ಯ.

**ಯೋ ದೇವಾನಾಮಧಿಪೋ ಯಸ್ಮಿನ್ ಲೋಕಾ ಅಧಿಶ್ರಿತಾಃ.**
**ಯ ಈಶೇ ಅಸ್ಯ ದ್ವಿಪದಶ್ಚತುಷ್ಪದಃ ಕಸ್ಮೈ ದೇವಾಯ ಹವಿಷಾ ವಿಧೇಮ. ೪.೧೩.**

**ಸೂಕ್ಷ್ಮಾತಿಸೂಕ್ಷ್ಮಂ ಕಲಿಲಸ್ಯ ಮಧ್ಯೇ ವಿಶ್ವಸ್ಯ ಸ್ರಷ್ಟಾರಮನೇಕರೂಪಮ್.**
**ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ. ೪.೧೪.**

ಈ ವಿಷಯವು 'ಈಶಾವಾಸ್ಯಂ ಇದಂ ಸರ್ವಂ' 'ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ' 'ಸರ್ವ ಭೂತೇಷು ಚಾತ್ಮಾನಂ' 'ವಿಶ್ವಾನಿ ದೇವ ವಯುನಾನಿ ವಿದ್ವಾನ್' ಎಂಬ ವಿಷಯಗಳ ನಿರ್ಣಯಕ್ಕೆ ಸಹಾಯಕಗಳಾಗಿವೆ. ಇದೇ ರೀತಿ ಇನ್ನೂ ಅನೇಕ ಶ್ವೇತಾಶ್ವತರಮಂತ್ರಗಳು ಈಶಾವಾಸ್ಯಾರ್ಥಗಳಿಗೆ ಪೋಷಕವಾಗಿವೆ.

೩

ಸೂರ್ಯಮಂಡಲದೊಳಗಿರುವ ಪುರುಷ ನಾರಾಯಣ, ಅವನು ಹಿರಣ್ಮಯ ಪುರುಷ, ಅವನ ರೂಪ ವಿವಿಧ ವರ್ಣಗಳಿಂದ ಕೂಡಿದೆ. ಅವನ ಕಲ್ಯಾಣತಮವೆನಿಸಿದ ರೂಪವು ನೀಲಿ ಮಿಶ್ರವಾದ ಕಪ್ಪು ಛಾಯೆಯಿಂದ ಕೂಡಿದೆ. "ಸಯಶ್ಚಾಯಂ ಪುರುಷೇ, ಯಶ್ಚಾಸಾವಾದಿತ್ಯೇ" ಎಂಬ ವಚನದಲ್ಲಿ 'ಅಸೌ' ಎಂಬ ಶಬ್ದವು ನಾರಾಯಣಾನುವಾಕದಲ್ಲಿ ಪ್ರಸಿದ್ಧವಾಗಿರುವ ಎಂಬ ಅರ್ಥದಲ್ಲಿ ಬಂದಿದೆ. ಪುಟ ೨೨೬ ರಿಂದ ೨೫೨ ವರೆಗಿನ ಸಂದರ್ಭ

೪

ತೈತ್ತರೀಯ ಆರಣ್ಯಕದಲ್ಲಿ 'ವಿದ್ಯುತ್ತು ಸೂರ್ಯನಲ್ಲಿ ನೆಲಸಿದೆ[1]' ಎಂದು ಹೇಳಿ, ಸೂರ್ಯನೊಳಗಿರುವ ವಿಷ್ಣುವೇ ಈ ಭೂಮಿಯನ್ನೂ ಧರಿಸಿರುವನು[2] ಎಂದು ಸ್ಪಷ್ಟವಾಗಿ ತಿಳಿಸಲಾಗಿದೆ.[3] ಪುಟ ೨೪೦.

೫

ಸಾಮವೇದದ ಮೈತ್ರಾಯಣೀಯ ಉಪನಿಷತ್ತಿನ ಆರನೆಯ ಪ್ರಪಾಠಕದಲ್ಲಿ "ಹಿರಣ್ಮಯೇನ......ಸತ್ಯಧರ್ಮಾಯ ವಿಷ್ಣವೇ. ಯೋಽಸಾವಾದಿತ್ಯೇ ಪುರುಷಸ್ಸೋಽಸಾವಹಂ." "ಏಷ ವೈ ಸತ್ಯಧರ್ಮಃ" ಎನ್ನಲಾಗಿದೆ ವಿಷ್ಣವೇ ಎಂದರೆ ವಿಷ್ಣುವನ್ನು ಕಾಣುವುದಕ್ಕಾಗಿ ಎಂದರ್ಥ. "ಕ್ರಿಯಾರ್ಥೋಪಪದಸ್ಯ ಕರ್ಮಣಿ ಸ್ಥಾನಿನಃ" ಎಂಬ ವ್ಯಾಕರಣ ನಿಯಮದಂತೆ ಚತುರ್ಥಿ ವಿಭಕ್ತಿ ಬಂದಿದೆ. ವಿಷ್ಣುವಿನ ಸಾಕ್ಷಾತ್ಕಾರಕ್ಕೆ ಪೂರ್ವಭಾವಿ ಅನುಭವವೇ "ಸೋಽಹಮಸ್ಮಿ" ಪುಟ ೨೪೦, ೨೪೧.

ಬೃಹದಾರಣ್ಯಕದಲ್ಲಿ 'ದೃಷ್ಟಯೇ' ಎಂಬ ಪಾಠಾಂತರವಿರುವುದರಿಂದ ವಿಷ್ಣುವಿನ ದರ್ಶನಕ್ಕಾಗಿ ಎಂದೇ ಅರ್ಥಮಾಡಬೇಕು. ಬೃಹದಾರಣ್ಯಕದಲ್ಲಿ 'ಸತ್ಯಧರ್ಮಾಯ' ಎಂದರೆ ವಿಷ್ಣುವಿನಎಂದರ್ಥ. 'ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ' ಎಂಬ ವ್ಯಾಕರಣ ವಾರ್ತಿಕನಿಯಮ ಇದೆ. ಯೋಗಯಾಜ್ಞವಲ್ಕ್ಯ ಗ್ರಂಥದಲ್ಲೂ ಇದೇ ಅರ್ಥ ವಿವರಿಸಲಾಗಿದೆ. ಪುಟ ೭.೪೧.

---

1. ವಿದ್ಯುತ್ಸೂರ್ಯೇ ಸಮಾಹಿತಾ, ತೈ. ಆ. ೧. ೨೭.
2. ವಿಷ್ಣುನಾ ವಿಧೃತೇ ಭೂಮೀ. ತೈ. ಆ. ೧. ೨೭.
3. ಈಶಾ, ೧೫. ೧೬. ಗಮನಿಸಿ.

ಹಿರಣ್ಮಯೇನ ಎಂಬ ಮಂತ್ರವು ಸೂರ್ಯನೊಳಗಿರುವ ಮಹಾಪುರುಷನ ದರ್ಶನಕ್ಕಾಗಿ ಪ್ರಾರ್ಥಿಸುವ ಮಂತ್ರ. ಆ ಪುರುಷನೇ ವಿಷ್ಣು. ಅವನೇ ಸತ್ಯಧರ್ಮ ಎಂಬುದು ಈ ಮಂತ್ರದ ಉತ್ತರವಾಕ್ಯಗಳಿಂದಲೂ ಸಿದ್ಧವಾಗುವುದು. ಪುಟ ೨೪೪.

ಹೀಗೆ ಈಮಂತ್ರವು 'ಯೋಸಾವಸೌ ಪುರುಷಸ್ಸೋಽಹಮಸ್ಮಿ' ಎಂಬ ಈಶಾವಾಸ್ಯ ಬೃಹದಾರಣ್ಯಕ ವಾಕ್ಯಗಳಿಗೆ ಪೂರಕವಾಗಿ ಉಪಬೃಂಹಣವೆನಿಸುವುದು. ಪುಟ ೨೪೧.

೬

'ಶುಕ್ರ' ಎಂದರೆ ಪರಮಾತ್ಮ ನಾರಾಯಣ ಎಂಬುದನ್ನು ನಮ್ಮ ವೇದಾಂತವಿಜಯಗ್ರಂಥದಲ್ಲಿ ಆಧಾರಪೂರ್ವಕವಾಗಿ ವಿಸ್ತಾರವಾಗಿ ತಿಳಿಸಿದ್ದೇವೆ. ಪುಟ ೨೫೦, ೨೫೧.



## ಕುಮಾರವೇದಾಂತಾಚಾರ್ಯರ[1] ವಿವರಣೆ

"ಎಲೈ! ಗಾರ್ಗಿ! ಈ ಆತ್ಮಜ್ಞಾನವಿಲ್ಲದೆ ಮಾಡುವ ಕರ್ಮಗಳಿಂದ ಉಪಯೋಗವಿಲ್ಲ. ಆತ್ಮಜ್ಞಾನಪೂರ್ವಕವಾಗಿ ಕರ್ಮಗಳನ್ನು ಮಾಡಬೇಕು"[2] ಎಂಬ ಶ್ರುತಿ ವಚನಗಳಲ್ಲಿ ಹೇಳಿರುವ ಕರ್ಮಗಳು ಬರಿಯ ಕರ್ಮಗಳಲ್ಲ, ಉಪಾಸನೆಗೆ ಅಂಗವಾದ ಕರ್ಮಗಳು. ಈ ಉಪಾಸನಾಂಗವಾದ ನಿಷ್ಕಾಮಕರ್ಮಗಳ ಆಚರಣೆಗೆ ಜೀವಾತ್ಮ ಪರಮಾತ್ಮತತ್ತ್ವಗಳ ಜ್ಞಾನ ಆವಶ್ಯ ಎಂಬುದು ಇದರ ಸಾರಾರ್ಥ.

ಅಧಿಕರಣ ಚಿಂತಾಮಣಿ, ಶ್ಲೋಕ, ವ್ಯಾ. ೩-೪-೭. ಈಶಾ. ೨. ೧೧



## ವೇದಾಂತದೇಶಿಕರ ವಿವರಣೆ

**ನ್ಯಾಯಸಿದ್ಧಾಂಜನ, ಜೀವಪರಿಚ್ಛೇದ, ನ್ಯಾಸವಿದ್ಯಾಪ್ರಕರಣ, ಈಶಾ. ೧೪.**

ಮರಣಪೂರ್ವದಲ್ಲಿ ಪ್ರತಿಯೊಬ್ಬರ ವಾಗಿಂದ್ರಿಯವೂ ಇತರ ಇಂದ್ರಿಯಗಳನ್ನು ತನ್ನೊಡನೆ ಸೆಳೆದುಕೊಂಡು ಮನಸ್ಸಿನಲ್ಲಿ ಒಂದಾಗುವುದು. ಇಂತಹ ಮನಸ್ಸು ಪ್ರಾಣದೊಡನೆ ಒಂದಾಗುವುದು. ಇಂತಹ ಪ್ರಾಣವು ಜೀವಾತ್ಮದೊಡನೆ ಮಿಳಿತವಾಗುವುದು. ನಂತರ ಸ್ಥೂಲದೇಹದಿಂದ ಹೊರಗೆ ಹೋಗುವಾಗ ಪಂಚಭೂತಮಯವಾದ ಲಿಂಗಶರೀರವೆಂಬ ಸೂಕ್ಷ್ಮದೇಹವು ಇರುವುದರಿಂದ ಜೀವಾತ್ಮವು ಭೂಮಿ ಆಕಾಶ ಸ್ವರ್ಗ ನರಕಗಳಲ್ಲಿ

---

1. ವೇದಾನ್ತದೇಶಿಕರ ಸುಪುತ್ರರೂ ಅವರ ಶುದ್ಧಪರಂಪರೆಯನ್ನು ಮುಂದುವರಿಸಿದವರೂ ಉತ್ತಮೋತ್ತಮ ವಿದ್ವಾಂಸರೂ ಆದ ಆಚಾರ್ಯರು. ಇವರ ಹೆಸರು 'ವರದಾರ್ಯ'. ಬಳಕೆಯ ಹೆಸರು 'ನಾಯನಾರ್'. ಇವರು ಅನೇಕ ಉದ್ಗ್ರಂಥಗಳನ್ನು ಬರೆದಿರುವರು. ವೇದಾನ್ತದೇಶಿಕರ ಅಧಿಕರಣ ಸಾರಾವಳಿಯ ವ್ಯಾಖ್ಯಾನ ಈ 'ಚಿಂತಾಮಣಿ.' ಇವರ ಕಾಲ ಕ್ರಿ. ಶ. ೧೫ನೇ ಶತಮಾನ.

2. ಬೃ. ೫. ೮. ೯.

ಎಲ್ಲಿಗೆ ಬೇಕಾದರೂ ಹೋಗಬಹುದು. ಇದಿಷ್ಟು ಕ್ರಿಯೆಗಳೂ ಜ್ಞಾನಿ ಮತ್ತು ಅಜ್ಞಾನಿಗಳಿಗೆ ಸಮಾನವಾಗಿಯೇ ಇರುವುವು. ಜ್ಞಾನಿಯ ಜೀವಾತ್ಮವು ಸಂಪೂರ್ಣವಾಗಿ ಪುಣ್ಯಪಾಪಗಳನ್ನು ತೊರೆದು ಹೊರಬಿದ್ದ ಮೇಲೆ ಅರ್ಚಿರಾದಿ ಮಾರ್ಗದಲ್ಲಿ ಮುಂದೆ ಸಾಗಿ ಪ್ರಕೃತಿಮಂಡಲವನ್ನು ದಾಟಿ, ಪರಮಾತ್ಮನಿಂದ ನಿಯುಕ್ತನಾದ ವಿದ್ಯುತ್ಪುರುಷನ ಸ್ಪರ್ಶದಿಂದ ಮುಕ್ತನೆನಿಸಿ ದಿವ್ಯದೇಹ ಪಡೆದು ಪರಮಾತ್ಮನ ಸಾನ್ನಿಧ್ಯ ಸೇರುವುದು. ಪ್ರಕೃತಿ ಮಂಡಲಕ್ಕೂ ಪರಮಾತ್ಮಲೋಕಕ್ಕೂ ಎಲ್ಲೆಯಂತೆ ವಿರಜಾನದಿ ಇರುವುದು. ಇದರಲ್ಲಿ ಜೀವಾತ್ಮವು ಮುಳುಗಿ ಎದ್ದು ಆಚೆಯ ದಡ ಸೇರಿದಾಗ, ಅಲ್ಲಿಯವರೆಗೂ ಜೊತೆಯಲ್ಲೇ ಇರುತ್ತಿದ್ದ ವಿದ್ಯುತ್ಪುರುಷನ ಸ್ಪರ್ಶವಾಗುವುದು. ಆ ನದಿಯಲ್ಲಿ ವೇಗವಾಗಿ ಪ್ರವೇಶಿಸುವಾಗ ಜೀವಾತ್ಮನ ಸೂಕ್ಷ್ಮಶರೀರೇಂದ್ರಿಯಪ್ರಾಣಗಳೆಲ್ಲವೂ ಹಾವಿನ ಪೊರೆಯಂತೆ ಹಿಂದಕ್ಕೆ ಕಳಚಿಕೊಂಡು ಪ್ರಕೃತಿಮಂಡಲದೊಳಗೆ ಬೀಳುವುವು. ಇತ್ತ ಜೀವಾತ್ಮವು ಹಿಂದೆ ತೊರೆದ ಪುಣ್ಯ ಪಾಪಗಳೂ ಅವನ ಶತ್ರು ಮಿತ್ರರಲ್ಲಿ ಬಂದು ಸೇರುವುವು. ಈ ಅರ್ಚಿರಾದಿಮಾರ್ಗಗಮನವೇ ಸಂಭೂತಿ. ಪುಣ್ಯಪಾಪಗಳು ಈ ಜೀವಾತ್ಮರನ್ನು ಬಿಟ್ಟು ಇತರರಿಗೆ ಸೇರುವುದೇ ಅಸಂಭೂತಿ. ಕರ್ಮಗಳು ಈ ರೀತಿಯ ವಿನಾಶವಾದಾಗ ಪ್ರಕೃತಿಮಂಡಲದ ಸಂಬಂಧರೂಪವಾದ ಸಂಸಾರವನ್ನು ದಾಟುವ ಕೆಲಸ ಆದಂತೆಯೇ. ಈವರೆಗೆ ನಡೆದುಬಂದ ಅರ್ಚಿರಾದಿಮಾರ್ಗದಲ್ಲಿ ಮುನ್ನಡೆದರೇನೇ ಬ್ರಹ್ಮಪ್ರಾಪ್ತಿ ಆಗುವುದು. 'ಅರ್ಚಿಷಂ ಅಭಿಸಂಭವಂತಿ' 'ಬ್ರಹ್ಮಲೋಕಂ ಅಭಿಸಂಭವಾನಿ' ಎಂಬ ಉಪನಿಷದ್ವಚನಗಳಲ್ಲಿ ಸಂಭವನಕ್ರಿಯಾರೂಪವಾದ ಸಂಭೂತಿಯನ್ನು ಹೀಗೆಂದು ತಿಳಿಸಲಾಗಿದೆ. ಸಂಭೂತಿ ಅಸಂಭೂತಿಗಳ ಉಪಾಸನೆಯೆಂದರೆ ಅವುಗಳ ಚಿಂತನೆ ಎಂದಷ್ಟೇ ಅರ್ಥ.

ನಾರಾಯಣಾಚಾರ್ಯರು[1] ತಮ್ಮ 'ನೀತಿಮಾಲಾ'ಗ್ರಂಥದಲ್ಲಿ ಸಂಭೂತಿ ವಿನಾಶ ಶಬ್ದಗಳಿಗೆ, ವಿದ್ಯೆ ಅವಿದ್ಯೆಗಳನ್ನೇ ಅರ್ಥವಾಗಿ ಹೇಳುವರು.[2] ವಿದ್ಯೆಯ ಫಲವಾಗಿ ಅರ್ಚಿರಾದಿಮಾರ್ಗವು ಸಿಕ್ಕಿ ಬ್ರಹ್ಮಪ್ರಾಪ್ತಿಯೂ ಆಗುವುದೆಂಬ ವಿಚಾರವನ್ನು ಚಿಂತಿಸುವಾಗ, ಜೊತೆಯಲ್ಲೇ ಅವಿದ್ಯೆಯೆಂದು ಹೆಸರಿಸಲಾದ ವಿದ್ಯಾಂಗವಾದ ನಿಷ್ಕಾಮಕರ್ಮಾಚರಣೆಗೆ ಫಲವಾಗಿ ಪುಣ್ಯ ಪಾಪಗಳ ವಿನಾಶವೂ ಪ್ರಕೃತಿ ಸಂಬಂಧದ ವಿನಾಶವೂ ಆಗುವುದೆಂಬ ವಿಚಾರವನ್ನೂ ಚಿಂತಿಸಬೇಕೆಂಬುದೇ ಅವರ ಅಭಿಪ್ರಾಯ.

ಹೀಗೆ ಒಪ್ಪಿದರೆ 'ವಿದ್ಯಾಂ ಚ ಅವಿದ್ಯಾಂ ಚ', 'ಸಂಭೂತಿಂ ಚ ವಿನಾಶಂ ಚ' ಎಂಬ ಸಮಾನಾಕಾರವಾದ ಉಪನಿಷದ್ವಚನಗಳಿಗೆ ಅರ್ಥದಲ್ಲೂ ಹೊಂದಿಕೆಯಾಗುತ್ತದೆ. ಸಂಭೂತಿ ಎಂದರೆ ಸಮ್ಯಕ್‌ಅಭಿವೃದ್ಧಿ – ಸರಿಯಾದ ಏಳಿಗೆ, ಇದೇ ಪರಮಾತ್ಮಪ್ರಾಪ್ತಿ ಎಂಬುದು ನಾರಾಯಣಾಚಾರ್ಯರ ನೇರವಾದ ಮಾತು.

ಪರಲೋಕದಲ್ಲಾಗುವ ಪರಮಾತ್ಮಪ್ರಾಪ್ತಿಗೆ ಮುಂಚೆ ಅಮಾನವನೆನಿಸಿದ ವಿದ್ಯುತ್ಪುರುಷನ ಸ್ಪರ್ಶವಾಗುವುದಕ್ಕೂ ಮೊದಲು ನಡೆಯುವ ಕ್ರಿಯೆ ವಿಕ್ರಿಯೆಗಳೆಲ್ಲವೂ ವಿದ್ಯೆಯ ಪರಿಪಕ್ವಾವಸ್ಥೆಗಳೇ ಆದುದರಿಂದ ಸಂಭೂತಿಯೂ ವಿದ್ಯೆಯ ಒಂದು ಪರಿಪಕ್ವಾವಸ್ಥೆಯಷ್ಟೆ.

**ಅಧಿಕರಣಸಾರಾವಳಿ. ಈಶಾ. ೨, ೧೧.**

ನಿವೃತ್ತಿಧರ್ಮವೆನಿಸಿದ ನಿಷ್ಕಾಮಕರ್ಮವೇ ವಿದ್ಯೆಗೆ ಮುಖ್ಯಸಹಾಯಕ ಎಂಬ ವಿಷಯ ಬ್ರಹ್ಮಸೂತ್ರದ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದದ ಮುಖ್ಯಾರ್ಥ. ಅಧಿಕರಣಸಾರಾವಳಿ. ಶ್ಲೋಕ. ೫೩.

---

1. ಭಗವದ್ರಾಮಾನುಜರ ಸಾಕ್ಷಾತ್ ಶಿಷ್ಯರು ಈ ನಾರಾಯಣಾಚಾರ್ಯರು. ಇವರ ಅನೇಕ ಗ್ರಂಥಗಳ ಪ್ರಾಮಾಣಿಕ ವಿಮರ್ಶಾತ್ಮಕ ವಿಚಾರಗಳನ್ನು ವೇದಾಂತದೇಶಿಕರು ತಮ್ಮ ಗ್ರಂಥಗಳಲ್ಲಿ ಅಲ್ಲಲ್ಲೇ ಉಲ್ಲೇಖಿಸಿರುವರು. ಇವರ ನೀತಿಮಾಲಾ ಗ್ರಂಥ ಓಲೆಗರಿ ಹಸ್ತಪ್ರತಿ ಮೇಲುಕೋಟೆಯ ಸಂಸ್ಕೃತ ಸಂಶೋಧನ ಸಂಸತ್ತಿನಲ್ಲಿದೆ. ಈ ಗ್ರಂಥ ಮುದ್ರಿತವಾಗಿರುವುದಾಗಿ ಕೇಳಿರುವೆವು.

2. ರಂಗರಾಮಾನುಜಮುನೀಂದ್ರರ ಟೀಕೆಯನ್ನು ಇಲ್ಲಿ ಗಮನಿಸಿ. ಪರಿಶಿಷ್ಟ. ಪುಟ. ೨೦೯.

ನಿಷಿದ್ಧ ಮತ್ತು ಕಾಮ್ಯಕರ್ಮಗಳನ್ನು ಸ್ವರೂಪತಃ ತ್ಯಾಗಮಾಡಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಫಲ ಸಂಗಕತೃತ್ವಗಳ ತ್ಯಾಗಪೂರ್ವಕ ಆಚರಿಸಬೇಕು. ಅಧಿಕರಣಸಾರಾವಳಿ. ಶ್ಲೋಕ. ೩೯೪.

'ಕುರ್ವನ್ನೇವ' ಎಂಬ ಮಾತು, ವಿದ್ಯೆಗೆ ನಿಷ್ಕಾಮಕರ್ಮಗಳು ಪ್ರಧಾನವಾದ ಅಂಗಗಳು ಎಂಬ ವಿಚಾರ ವನ್ನು ತಿಳಿಸುವುದೇ ಹೊರತು, ಕರ್ಮವೇ ಮುಖ್ಯವೆಂದಾಗಲಿ ವಿದ್ಯೆಯೇ ಕರ್ಮಕ್ಕೆ ಅಂಗವೆಂದಾಗಲಿ ಹೇಳು ವುದಿಲ್ಲ. 'ಉದ್ಗೀಥೋಪಾಸನ' ಎಂಬ ವಿದ್ಯೆಯು ಕರ್ಮಠರು ಕರ್ಮದೊಡನೆ ಆಚರಿಸಬೇಕಾದುದಾದರೂ, ಆ ಕರ್ಮ ಮತ್ತು ಆ ಉಪಾಸನೆಗಳಿಗೆ ಫಲಗಳನ್ನು ಬೇರೆ ಬೇರೆಯಾಗಿ ಶ್ರುತಿವಚನವೇ ಹೇಳಿರುವುದರಿಂದ ಆ ವಿದ್ಯೆಯೂ ಸಹ ಕರ್ಮಕ್ಕೆ ಅಂಗವಲ್ಲ. ಅಧಿಕರಣಸಾರಾವಳಿ. ಶ್ಲೋಕ. ೩೯೭.

ಕರ್ಮಗಳನ್ನು ತ್ಯಾಗಮಾಡಬೇಕೆಂಬ ವಚನಗಳು ನಿಷಿದ್ಧ ಮತ್ತು ಕಾಮ್ಯ ಕರ್ಮಗಳ ಬಗ್ಗೆ ಮಾತ್ರ ಇವೆ. ಕರ್ಮಗಳನ್ನು ಮಾಡುತ್ತಲೇ ಇರಬೇಕೆಂಬ ವಿಧಿವಚನಗಳು ನಿಷ್ಕಾಮಕರ್ಮಗಳ ಬಗ್ಗೆ ಮಾತ್ರ ಇವೆ. ಆದುದರಿಂದ ನಿಷ್ಕಾಮಕರ್ಮ ವಿದ್ಯೆಗೆ ಅಂಗ. ವಿದ್ಯೆ ಎಂದಿಗೂ ಕರ್ಮಕ್ಕೆ ಅಂಗವಲ್ಲ. ಒಂದು ಪಕ್ಷ ಹಾಗಿದ್ದಿದ್ದರೆ ಮುಕ್ತಿಸ್ಥಾನವನ್ನು ಸೇರುವವರೆಗೆ ಹೇಗೆ ವಿದ್ಯೆ ಅವಶ್ಯಕವೋ ಹಾಗೆ ಕರ್ಮವೂ ಅವಶ್ಯಕ ಎನ್ನಬೇಕಿತ್ತು. ಕಾಮ್ಯ ಕರ್ಮಗಳ ತ್ಯಾಗವನ್ನು ವಿಧಿಸುವ ಶ್ರುತಿವಚನಗಳು ಬರಲೇಬಾರದಿತ್ತು. ಈಗ ಹಾಗಿಲ್ಲದುದರಿಂದ ವಿದ್ಯೆಯೇ ಮುಖ್ಯ. ಕರ್ಮಗಳು ಅದರ ಅಂಗಗಳು. ಅಧಿಕರಣಸಾರಾವಳಿ. ಶ್ಲೋಕ ೩೯೮, ೩೯೯.

**ಶತದೂಷಣಿ**

'ನ ಕರ್ಮ ಲಿಪ್ಯತೇ ನರೇ' ಎಂಬ ಮಾತಿನಲ್ಲಿ ಕರ್ಮವೆಂದರೆ ಬುದ್ಧಿಪೂರ್ವಕವಾಗಿ ಮಾಡುವ ಪಾಪಗಳೆಂದು ಅರ್ಥವಲ್ಲ. ಈ ಪ್ರಕರಣವು ವಿದ್ಯಾಂಗವಾದ ನಿಷ್ಕಾಮಕರ್ಮಗಳ ಬಗ್ಗೆ ಇರುವುದೆಂಬ ನಿರ್ಣಯವನ್ನು ಬ್ರಹ್ಮಸೂತ್ರದ ಪುರುಷಾರ್ಥಾಧಿಕರಣದಲ್ಲಿ ಮಾಡಲಾಗಿದೆ. ವಿದ್ಯೆಯ ಹಿರಿಮೆಯನ್ನು ಹೇಳಲೂ ವಿದ್ಯೆಗೆ ಕರ್ಮ ಅಂಗವೆಂದು ಹೇಳಲೂ ಈ ಮಂತ್ರ ಬಂದಿದೆ. ಶ. ದೂ. ವಾದ. ೬೫.



## ಈಶಾವಾಸ್ಯೋಪನಿಷತ್, ಶಾಂತಿಮಂತ್ರ ವಿಚಾರ

**ವೇದಾಂತದೇಶಿಕರ ಗೀತಾಭಾಷ್ಯತಾತ್ಪರ್ಯಚಂದ್ರಿಕೆ. ಈಶಾ. ೧. ೪ ರಿಂದ ೮ ರವರೆಗೆ**

ಆಕಾಶ ಮುಂತಾದ ವಿಭುದ್ರವ್ಯಗಳು ಎಲ್ಲದರ ಜೊತೆಗೆ ಇರುವಂತಿರುತ್ತಲೇ ಎಲ್ಲವನ್ನೂ ಆಕ್ರಮಿಸಿವೆ. ಪರಮಾತ್ಮನು ಈ ರೀತಿ ಮಾತ್ರ ವ್ಯಾಪಿಸದೆ ಎಲ್ಲದರೊಳಗೆ ಅಂತರ್ಯಾಮಿಯಾಗಿದ್ದು ವ್ಯಾಪಿಸಿದ್ದಾನೆ ಎಂಬ ತತ್ತ್ವ ವನ್ನು ತಿಳಿಸುವ ಸಲುವಾಗಿ 'ಮಯಾ' ಎಂಬ ಕೃಷ್ಣನಮಾತಿಗೆ "ಅಂತರ್ಯಾಮಿಯಾದ ನನ್ನಿಂದ" ಎಂಬ ಅರ್ಥ ವನ್ನು ಭಗವದ್ರಾಮಾನುಜರು ಮಾಡಿರುತ್ತಾರೆ. ಗೀ. ೯. ೪. ಭಾಷ್ಯಟೀಕೆ.

**ವೇದಾಂತದೇಶಿಕರ ದ್ರಮಿಡೋಪನಿಷತ್ತಾತ್ಪರ್ಯರತ್ನಾವಳಿ**

"ಎಲ್ಲ ತತ್ತ್ವಗಳಲ್ಲೂ ಪೂರ್ಣನಾಗಿರುವುದರಿಂದ" ಶ್ಲೋ. ೧೧. ಜೀವಾತ್ಮಗಳು ತಮ್ಮ ತಮ್ಮ ಶರೀರದೊಳಗೆ ಒಂದು ಭಾಗದಲ್ಲಿ ಮಾತ್ರ ಇದ್ದು ತಮ್ಮ ಸ್ವಭಾವವಾದ ಜ್ಞಾನದ ಮೂಲಕ ಶರೀರಾದ್ಯಂತ ವ್ಯಾಪಿಸಿವೆ. ಪರಮಾ ತ್ಮನು ಮಾತ್ರ ಹಾಗಲ್ಲ; ಅವನು ಎಲ್ಲ ವಸ್ತುಗಳೊಳಗೂ ತನ್ನ ಸ್ವರೂಪದಿಂದಲೇ ಎಲ್ಲ ಅಂಶಗಳಲ್ಲೂ ವ್ಯಾಪಿಸಿ

ಎಲ್ಲವನ್ನೂ ನಿಯಂತ್ರಿಸಿ ಧರಿಸಿ ನಿಂತಿರುವವನು. ಆದುದರಿಂದಲೇ ಅವನು ಪೂರ್ಣ. (ವೆಂಕಟೇಶಾಚಾರ್ಯರ ವ್ಯಾಖ್ಯಾನ)

### ವೇದಾಂತದೇಶಿಕರ ಅಚ್ಯುತಶತಕ[1]

ಅಣುಪವಿಅಸ್ಸ ವಿ ಅಚ್ಚು ಅ ! ಸತ್ತೀ ತುಹ ಸಅಲಧಾರಣಾಇವಹುತ್ತಾ.

ತೇಣ ಪಡಿವತ್ಥುಪುಣ್ಣೋ ಸುವ್ವಸಿ ಅಪ್ಪಡಿಹಅಣಿಅರಿಈ ಸವ್ವಗಓ. ೧೦

ಅಣುವಾದ ಜೀವಾತ್ಮಗಳನ್ನು ಅನುಪ್ರವೇಶಿಸಿ ಅವುಗಳಿಗಿಂತ ಸೂಕ್ಷ್ಮವಾದ ನೀನು ವಿಶ್ವವನ್ನೇ ಧರಿಸಿ ನಿನ್ನ ವಿಚಿತ್ರಶಕ್ತಿಯನ್ನು ತೋರಿಸುತ್ತಿರುವಿ. ಸಕಲ ಗುಣವಿಭೂತಿಪೂರ್ಣನಾದ ನೀನು ಪ್ರತಿಯೊಂದು ವಸ್ತುವಿನೊಳಗೂ ಪೂರ್ಣವಾಗಿಯೇ ಇದ್ದು ಎಲ್ಲೆಡೆ ವ್ಯಾಪಿಸಿ ಪೂರ್ಣನೆನಿಸಿರುವಿ.[2] (ಕುಮಾರತಾತಾಚಾರ್ಯರ ವ್ಯಾಖ್ಯಾನ)

### ವೇದಾಂತದೇಶಿಕರ ರಹಸ್ಯತ್ರಯಸಾರ[3]

ದ್ವಯಮಂತ್ರವು ಕಠವಲ್ಲಿ ಮುಂತಾದ ಶ್ರುತಿವಚನಗಳಲ್ಲಿ ತಿಳಿಸಿದಂತೆ ರಹಸ್ಯವೆನಿಸಿದೆ. (ಸಾರನಿಷ್ಕರ್ಷಾಧಿಕಾರ.)

ವಿಶೇಷರೀತಿಯ ಪುರುಷಾರ್ಥವನ್ನು ಸ್ಪಷ್ಟಪಡಿಸುವ ದ್ವಯಮಂತ್ರವನ್ನು ಕಠವಲ್ಲಿಯಲ್ಲಿ ಎರಡುಭಾಗವಾಗಿ ವಿಂಗಡಿಸಿ, ಸೇರಿಸಿ ಹೇಳಲಾಗಿದೆ. ಉಪಾಯ ಉಪೇಯ ಎಂಬ ಎರಡು ಅರ್ಥಗಳನ್ನು ಇದು ತಿಳಿಸುವುದರಿಂದ ದ್ವಯವೆಂದು ಹೆಸರು.

ಈ ಮಂತ್ರದಲ್ಲಿ ಹೇಳಿರುವ ಆತ್ಮಸಮರ್ಪಣವು ಪರಿಶುದ್ಧಜೀವಾತ್ಮನನ್ನು ಪರಮಾತ್ಮನಿಗೆ ಒಪ್ಪಿಸುವುದೇ ಆಗಿದೆ.[4] ಇದೇ ಧ್ಯಾನ–ಉಪಾಸನೆ, ಇದೇ ಯೋಗ–ನಿಷ್ಕಾಮ ಕರ್ಮಯೋಗವೆಂಬ ಅಂಗ ವಿಶಿಷ್ಟವಾದುದು, ಮತ್ತು ಪರಮಾತ್ಮನೊಡನೆ ಆಗುವ ವಿಶಿಷ್ಟರೀತಿಯ ಏಕತೆ. (ದ್ವಯಾಧಿಕಾರ.)

### ಸಾರಾಸ್ವಾದಿನೀ[5]

ಮೊದಲು "ಶ್ರೀಮನ್ನಾರಾಯಣಚರಣೌ ಶರಣಂ ಪ್ರಪದ್ಯೇ" ಎಂದು ಪಠಿಸಿ, ಅನಂತರ "ಪೂರ್ಣಮದಃ ಪೂರ್ಣಮಿದಂ" ಇತ್ಯಾದಿ ಮಂತ್ರವನ್ನು ಪಠಿಸಿ, ಅನಂತರ "ಶ್ರೀಮತೇ ನಾರಾಯಣಾಯ ನಮಃ" ಎಂದು ಕಠವಲ್ಲಿಯಲ್ಲಿ ಪಠಿಸಲಾಗಿದೆ.

---

1. ಪ್ರಾಕೃತ ಭಾಷೆಯ ಪರಮಾತ್ಮಸ್ತೋತ್ರ ಇದು. ಈ ಭಾಷೆಯಲ್ಲಿ ಪ್ರಾಯಶಃ ಪದಗಳ ಮಧ್ಯೆ ಮತ್ತು ಕೊನೆಯಲ್ಲಿ ಬರುವ ಸ್ವರಗಳನ್ನು ಯಕಾರ ಸೇರಿಸಿ ಉಚ್ಚರಿಸುವುದು ಪದ್ಧತಿ. ಆದುದರಿಂದ ಅಂತಹ ಸ್ವರಗಳ ಕೆಳಗೆ ಒಂದು ಚುಕೆ ಕೊಡಲಾಗುವುದು. ಉದಾ:- ಹಿ ಅ ಅಂ- ಹಿಯಯಂ, ಹೋ ಈ- ಹೋಯೀ.

2. ಈಶಾ. ೫ ಮತ್ತು ಶಾಂತಿಮಂತ್ರ.

3. ಈಶಾ. ೧೭ನೆಯ ಮಂತ್ರದ ಓಂಕಾರ ಮತ್ತು ಶಾಂತಿಮಂತ್ರ ವಿಚಾರಕ್ಕೆ ಇದು ಉಪಯುಕ್ತ.

4. ಓಂಕಾರದ ಅರ್ಥವೂ ಇದೇ ಆಗಿದೆ.

5. ರಂಗನಾಥಯತೀಂದ್ರರ ಶಿಷ್ಯರಾದ ವೇದಾಂತರಾಮಾನುಜಮುನಿಗಳ ರಹಸ್ಯತ್ರಯಸಾರವ್ಯಾಖ್ಯಾನ.

### ಸಾರದೀಪಿಕೆ ಮತ್ತು ಸಾರವಿವರಣೆ[1]

ಮೊದಲು ಪೂರ್ವಖಂಡವನ್ನು ಪಠಿಸಿ, ಅನಂತರ "ಇದಂ ಪೂರ್ಣಮದಃಪೂರ್ಣಂ" ಇತ್ಯಾದಿ ಮಂತ್ರವನ್ನು ಕಠವಲ್ಲಿಯಲ್ಲಿ ಪಠಿಸಲಾಗಿದೆ.

### ಪಿಳ್ಳೈಲೋಕಾಚಾರ್ಯರ ಶ್ರೀವಚನಭೂಷಣ[2]

ಆಳ್ವಾರುಗಳು ಹಲವೆಡೆಗಳಲ್ಲಿ ಶರಣಾಗತಿ ಮಾಡಿರುವುದೂ ಅರ್ಚಾವತಾರದಲ್ಲಿರುವ ಪರಮಾತ್ಮನನ್ನೇ. 'ಪೂರ್ಣಂ' ಎಂದಿರುವುದರಿಂದ ಎಲ್ಲ ಗುಣಗಳೂ ಇವನಲ್ಲಿ ಪುಷ್ಕಳವಾಗಿವೆ. ಸೂತ್ರ. ೩೬.

ಶರಣಾಗತಿ ಮಾಡಿಕೊಳ್ಳಲು ಅವಶ್ಯಕವಾದ ಸೌಲಭ್ಯ ಮುಂತಾದ ಗುಣಗಳು ಕತ್ತಲೆಕೊಠಡಿಯಲ್ಲಿ ಬೆಳಗುವ ದೀಪದಂತೆ ಚೆನ್ನಾಗಿ ಪ್ರಕಾಶಿಸುವುದೂ ಅರ್ಚಾವತಾರದಲ್ಲೇ. ಸೂತ್ರ. ೩೭.

### ಮಣವಾಳಮಾಮುನಿಗಳ ವಿವರಣೆ[3]

ಅರ್ಚಾವತಾರದಲ್ಲಿರುವ ಪರಮಾತ್ಮನ ಗುಣಪೂರ್ತಿಯನ್ನು ಸಾಧಾರವಾಗಿ ತಿಳಿಸಲು 'ಪೂರ್ಣಂ' ಎಂಬ ಶ್ರುತಿವಚನದ ಭಾಗವನ್ನು ಉಲ್ಲೇಖಿಸಲಾಗಿದೆ. "ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ. ಸರ್ವಂ ಪೂರ್ಣಂ ಸಹೋಮ್" ಎಂದು ಶ್ರುತಿವಚನವಿದೆ.

### ಶ್ರೀಶೈಲಲಕ್ಷ್ಮಣಮುನೀಂದ್ರರ ವಿವರಣೆ[4]

**ಇದಂ** - ಈ ಎಲ್ಲರ ಕಣ್ಣಿಗೂ ಕಾಣಿಸುವ ಪರಮಾತ್ಮನ ಅರ್ಚಾವತಾರವು.

**ಪೂರ್ಣಂ** - ಎಲ್ಲ ಒಳ್ಳೆಯ ಗುಣಗಳಿಂದ ತುಂಬಿದೆ.

**ಅದಃ** - ಇಂದ್ರಿಯಗಳಿಗೆ ಕಾಣಿಸದ ಪರಮಾತ್ಮನ ಅಂತರ್ಯಾಮಿರೂಪವೂ, ಈ ಕಾಲದಲ್ಲಿಲ್ಲದ ರಾಮಕೃಷ್ಣಾದಿ ವಿಭವಾವತಾರರೂಪವೂ,

**ಪೂರ್ಣಂ** - ಎಲ್ಲ ಒಳ್ಳೆಯ ಗುಣಗಳಿಂದ ತುಂಬಿದೆ.

ಇವೆಲ್ಲವೂ ಹೀಗೆ ತುಂಬಿರುವ ಕಾರಣವನ್ನು ಮುಂದೆ ಹೇಳಲಾಗುವುದು.

**ಪೂರ್ಣಸ್ಯ** - ಆರುಗುಣಗಳಿಂದಲೂ ಪೂರ್ಣನಾದ ಪರವಾಸುದೇವನೆಂಬ ಪರಮಾತ್ಮನ ರೂಪದ.

**ಪೂರ್ಣಂ** - ಪೂರ್ಣವಾದ ಅಂಶವನ್ನು,

---

1. ರಹಸ್ಯತ್ರಯಸಾರಕ್ಕೆ ವಾಧೂಲಲಕ್ಷ್ಮಣಾಚಾರ್ಯರಿಗೂ ಮತ್ತು ವಾಧೂಲಪೆರಿಯಅಪ್ಪನ್ ಅವರಿಗೂ ಶಿಷ್ಯರಾದ ಕೌಶಿಕ ಗೋತ್ರದ ಶ್ರೀಭಾಷ್ಯಶ್ರೀನಿವಾಸಾಚಾರ್ಯರ ವ್ಯಾಖ್ಯಾನ ಸಾರದೀಪಿಕೆ. ಶ್ರೀಶೈಲಶ್ರೀನಿವಾಸಾಚಾರ್ಯರ ವ್ಯಾಖ್ಯಾನ ಸಾರವಿವರಣೆ. ಇವರ ತಂದೆ ವೆಂಕಟಸೋಮಯಾಜಿ.

2, 3. ಗ್ರಂಥಕಾರರ ಪಟ್ಟಿ, ಪರಿಶಿಷ್ಟ ನೋಡಿ.

4. ತಿರುವೇಂಗಡರಾಮಾನುಜಜೀಯರ್, ಮಧುರಮಂಗಲಂ ಎಂಬಾರ್‌ಸ್ವಾಮಿ ಎಂದು ಪ್ರಸಿದ್ಧರಾದ ಇವರು ತಿರುನಾರಾಯಣಪುರಂ ದೊಡ್ಡಯ್ಯಾಚಾರ್ಯರ ಶಿಷ್ಯರು. ಉಭಯವೇದಾಂತ ರಹಸ್ಯದರ್ಶನ, ಚರಿತ್ರ, ಜ್ಯೋತಿಷ್ಯ ವಿಚಾರಗಳಲ್ಲಿ ಅನೇಕ ಉದ್ಗ್ರಂಥಗಳನ್ನೂ ಕಾವ್ಯ, ಚಂಪೂ, ಸಂಗೀತ, ಸ್ತೋತ್ರಗಳನ್ನೂ ಬರೆದಿರುವರು. ಚಿಕ್ಕಂದಿನಿಂದಲೇ ಮಹಾಮಹಿಮಯೋಗಿಗಳಾಗಿ ಶ್ರೀಪೆರುಂಬೂದೂರಿನಲ್ಲಿ ಕ್ರಿ. ಶ. ೧೪-೧೫ನೇ ಶತಮಾನದಲ್ಲಿದ್ದರು. ಹಿಂದೆ ಶಾಂತಿಮಂತ್ರದ ವಿವರಣೆಗಳನ್ನು ಕೊಡುವಾಗ ಈ ಗ್ರಂಥಭಾಗ ಸಿಕ್ಕಿರಲಿಲ್ಲವಾಗಿ ಈಗ ಇಲ್ಲೇ ಕೊಡಲಾಗಿದೆ. ಇದು ಮಣವಾಳಮಾಮುನಿಗಳ ವ್ಯಾಖ್ಯಾನಕ್ಕೆ ಇವರು ರಚಿಸಿರುವ 'ಅರುಂಪದ' ಎಂಬ ಟಿಪ್ಪಣಿ.

**ಆದಾಯ** - ಸ್ವೀಕರಿಸಿ.

**ಪೂರ್ಣಾತ್** - ಪೂರ್ಣವೆನಿಸಿದ ಅನಿರುದ್ಧ ಎಂಬ ವ್ಯೂಹಾವತಾರರೂಪದಿಂದ.

**ಪೂರ್ಣಂ** - ವಿಭವ, ಅಂತರ್ಯಾಮಿ, ಅರ್ಚಾವತಾರಗಳೆಲ್ಲವೂ.

**ಉಪಚ್ಯತೇ** - ಹುಟ್ಟುವುದು.

**ಪೂರ್ಣಂ, ಏವ** - ಹೀಗೆ ವಿವಿಧರೂಪಸೃಷ್ಟಿಗಳಿಗಾಗಿಯೇ ಇರುವ ಅನಿರುದ್ಧಾಂಶ ಹೊರತು, ಉಳಿದ ಸಮಸ್ತ ಗುಣಪೂರ್ಣವಾದ ಭಾಗವೇ.

**ಅವಶಿಷ್ಯತೇ** - ಪರಮಪದವೆನಿಸಿದ ವೈಕುಂಠಲೋಕದಲ್ಲಿ ಉಳಿದಿರುತ್ತವೆ.

ಸರ್ವಂ, ಸಹ, ಓಮ್ ಈ ಎಲ್ಲ ವಿಧವಾದ ಪೂರ್ಣವೆನಿಸಿದ ಪರಮಾತ್ಮನ ರೂಪವೂ ಒಟ್ಟಿಗೆ ಓಂಕಾರದ ಅರ್ಥವಾಗಿ ಮೆರೆಯುವುದು. ಇದೇ ಪರಬ್ರಹ್ಮ.

  

**ವ್ಯಾಸಾರ್ಯರ ಶ್ರುತಪ್ರಕಾಶಿಕೆ, ಶ್ರುತಪ್ರದೀಪಿಕೆ, ತಾತ್ಪರ್ಯದೀಪಿಕೆ [1]**

೧

ವಾಕ್ಯಾನ್ವಯಾಧಿಕರಣ ಶ್ರುತಪ್ರಕಾಶಿಕೆಯಲ್ಲಿ 'ಪೂರ್ಣಂ' ಎಂಬ ಮಂತ್ರವನ್ನು ಉಲ್ಲೇಖಿಸಿ ಪೂರ್ಣತ್ವ ವನ್ನು ವಿವರಿಸಲಾಗಿದೆ. ಈ ವಿಷಯ ಶಾಂತಿಮಂತ್ರ ಟಿಪ್ಪಣಿ ವಿವರಣೆಗಳಲ್ಲೇ ಬಂದಿದೆ. ಈಶಾ. ಪುಟ. ೧೯೬.

೨

ಜಿಜ್ಞಾಸಾಧಿಕರಣದ ಮಹಾಪೂರ್ವಪಕ್ಷದಲ್ಲಿ 'ಸ ಪರ್ಯಗಾತ್'–ಅವನು ಪರಿಪೂರ್ಣವಾಗಿ ತಿಳಿದುಕೊಂಡನು ಎಂಬ ವಿವರಣೆ ಇದೆ. 'ಶುಕ್ಲಂ' 'ಅಸ್ನಾವಿರಂ' ಎಂಬ ಪಾಠಾಂತರಗಳ ಉಲ್ಲೇಖವಿವೆ. ಶ್ರು. ಪ್ರ.

೩

ಜಿಜ್ಞಾಸಾಧಿಕರಣ ಲಘುಸಿದ್ಧಾಂತದಲ್ಲಿ 'ವಿದ್ಯಾಂ ಚ ಅವಿದ್ಯಾಂ ಚ' ಎಂಬ ಎರಡು ಚಕಾರಗಳ ಸೂಕ್ಷ್ಮಾರ್ಥ ವಿವರಣೆ ಇದೆ. ಶ್ರು. ಪ್ರ. ಈಶಾ. ಪುಟ. ೧೦೬.

---

1. ಶ್ರೀರಂಗನಾಥನ ಅಜ್ಞೆ ಮತ್ತು ರಾಮಾನುಜರ ಇಚ್ಛೆಯಿಂದ ವಂಶಪಾರಂಪರ್ಯವಾಗಿ ಬಂದ ವ್ಯಾಸಾರ್ಯರೆಂಬ ಬಿರುದನ್ನು ಪಡೆದವರು ಸುದರ್ಶನಭಟ್ಟರು. ಇವರಿಗೆ ಶ್ರುತಪ್ರಕಾಶಿಕಾಚಾರ್ಯರು, ಟೀಕಾಚಾರ್ಯರು ಎಂದು ವ್ಯವಹಾರವಿದೆ. ಇವರ ಕಾಲ ಕ್ರಿ. ಶ. ೧೩ ನೆಯ ಶತಮಾನ. ವಾಸಸ್ಥಾನ ಶ್ರೀರಂಗ. ಇವರು ರಾಮಾನುಜರ ಮುಖ್ಯಶಿಷ್ಯರಾದ ಕೂರನಾಥರ ಮರಿಮಗ. ಕಂಚಿಯ ಪ್ರಸಿದ್ಧ 'ಅಮ್ಮಾಳ್' ಎಂಬ ವರದಾಚಾರ್ಯರ ಮುಖ್ಯಶಿಷ್ಯರಾಗಿ, ಅವರು ಉಪದೇಶಿಸಿದ ಶ್ರೀಭಾಷ್ಯಾದಿ ವಿವರಣೆಗಳನ್ನು ಬರೆದಿಟ್ಟು, ಪ್ರಾಚೀನ ಉಪದೇಶಪರಂಪರೆಯನ್ನು ಕಾಪಾಡಿ ಮುಂದೆ ವೇದಾಂತದೇಶಿಕರಿಗೆ ಅನುಗ್ರಹಿಸಿ ದವರು. ಶ್ರೀಭಾಷ್ಯದ ವಿಸ್ತೃತ ವ್ಯಾಖ್ಯಾನ ಶ್ರುತಪ್ರಕಾಶಿಕೆ. ಸಂಗ್ರಹವಾದ ವ್ಯಾಖ್ಯಾನ ಶ್ರುತಪ್ರದೀಪಿಕೆ. ವೇದಾರ್ಥ ಸಂಗ್ರಹದ ವ್ಯಾಖ್ಯಾನ ತಾತ್ಪರ್ಯದೀಪಿಕೆ. ಇವರ ಸುಬಾಲೋಪನಿಷತ್ ವ್ಯಾಖ್ಯಾನ, ಗದ್ಯತ್ರಯವ್ಯಾಖ್ಯಾನ, ನಿತ್ಯ ವ್ಯಾಖ್ಯಾನ ಮುಂತಾದ ಕೆಲವು ಗ್ರಂಥಗಳು ಮಾತ್ರ ಸಿಗುತ್ತವೆ. ಭಾಗವತಕ್ಕೆ "ಶುಕಪಕ್ಷೀಯ"ವೆಂಬ ವ್ಯಾಖ್ಯಾನವೂ ಇವರ ದೆಂದು ತಿಳಿದುಬರುವುದು.

೪

ವಿಹಿತತ್ವಾಧಿಕರಣದಲ್ಲಿ 'ವಿನಿಯೋಗಪೃಥಕ್‌ತ್ವ' ಎಂಬ ನ್ಯಾಯಕ್ಕೆ, "ಯಾವುದು ಯಾವುದಕ್ಕಾಗಿ ಇದೆ, ಯಾವುದು ಯಾವುದನ್ನು ಅನುಸರಿಸಿರಬೇಕು, ಯಾವುದು ಯಾವುದಕ್ಕೆ ಅಂಗ, ಎಂಬ ವಿಚಾರವನ್ನು ನಿರ್ಣಯಿಸುವ ನಿಯಮ" ಎಂಬ ನಿಷ್ಕೃಷ್ಟ ವಿವರಣೆ ಇದೆ.[1] ಶ್ರು. ಪ್ರ.

೫

ಪುರುಷಾರ್ಥಾಧಿಕರಣದಲ್ಲಿ 'ಈಶಾ ವಾಸ್ಯಂ' 'ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ' ಎಂಬ ಭಾಗಗಳ ವಿವರಣೆ ಇದೆ. ಶ್ರು. ಪ್ರ; ಈಶಾ. ಪುಟ. ೨೫, ೨೬, ೨೭.

೬

ಪುರುಷಾರ್ಥಾಧಿಕರಣದಲ್ಲಿ ಬದುಕಿರುವವರೆಗೂ ಉಪಾಸನೆ ಅವಶ್ಯಕವಾದುದರಿಂದಲೇ ಅದರ ಅಂಗವಾದ ನಿಷ್ಕಾಮಕರ್ಮಾಚರಣೆಯೂ ಅವಶ್ಯಕ ಎಂಬುದೇ 'ಕುರ್ವನ್ನೇವೇಹ ಕರ್ಮಾಣಿ' ಎಂಬುದರ ನಿಖರವಾದ ಅರ್ಥ ಎಂಬ ವಿವರಣೆ ಇದೆ. ಮತ್ತು 'ಈಶೇನ ಆವಾಸ್ಯಂ' ಎಂಬ ಅರ್ಥವನ್ನು ಸ್ಪಷ್ಟವಾಗಿ ಬರೆದಿರುವುದರಿಂದ "ಈಶಾ ಆವಾಸ್ಯಂ" ಎಂಬ ಪದಚ್ಛೇದಪಕ್ಷವನ್ನು ಸೂಚಿಸಲಾಗಿದೆ. ಶ್ರು. ಪ್ರದೀ.

೭

ಭಗವದ್ರಾಮಾನುಜರ ವೇದಾರ್ಥಸಂಗ್ರಹದಲ್ಲಿ 'ವಿದ್ಯಾಂ ಚಾವಿದ್ಯಾಂ ಚ'. ಎಂಬುದರ ವಿವರಣೆಯಲ್ಲಿ ಬರುವ 'ಜ್ಞಾನ' 'ಬ್ರಹ್ಮವಿದ್ಯಾ' ಎಂಬ ಪದಗಳಿಗೆ ಕ್ರಮವಾಗಿ 'ಶಾಸ್ತ್ರಜನ್ಯಜ್ಞಾನ' 'ವಿವೇಕಜನ್ಯಜ್ಞಾನ' ಎಂಬ ವಿಷ್ಣುಪುರಾಣೋಕ್ತ ವಿವರಣೆಯನ್ನೇ ಸ್ಪಷ್ಟಪಡಿಸಿರುವರು. ತಾ. ದೀ.

೮

ವೇದಾರ್ಥಸಂಗ್ರಹದಲ್ಲಿ ಉದ್ಧೃತವಾದ ವಿಷ್ಣುಪುರಾಣದ 'ಭಾವನಾತ್ರಯ' ವಿಚಾರದಲ್ಲಿ 'ಬ್ರಹ್ಮ' ಎಂದರೆ ಉಪಾಸನಾರೂಪವಾದ ಜ್ಞಾನವೆಂದೂ, ಅದೇ 'ವಿದ್ಯೆ' ಎಂಬ ಶಬ್ದದ ರಹಸ್ಯಾರ್ಥವೆಂದೂ, ಬರಿಯ ಜ್ಞಾನಕ್ಕೂ ಉಪಾಸನಾರೂಪವಾದ ಜ್ಞಾನಕ್ಕೂ ತಾರತಮ್ಯ ಸ್ಪಷ್ಟವಾಗಿದೆಯೆಂದೂ ತಿಳಿಸಲಾಗಿದೆ.[2] ತಾ. ದೀ.

೯

ವೇದಾರ್ಥಸಂಗ್ರಹದ ನಾರಾಯಣಪರತ್ವಪ್ರಕರಣದಲ್ಲಿ 'ಈಶಾವಾಸ್ಯಮಿದಂ ಸರ್ವಂ' ಎಂಬುದಕ್ಕೆ ಸಮಾನವಾದ 'ತೇನೇದಂ ಪೂರ್ಣಂ ಪುರುಷೇಣ ಸರ್ವಂ' ಎಂಬ ವಚನವನ್ನು ವಿವರಿಸುವಾಗ, 'ತೇನ' ಎಂಬ ಪದವು ವ್ಯಾಕರಣ ನಿಯಮಾನುಸಾರ ಹಿಂದಿನ ಮಾತಿನಲ್ಲಿ ಪ್ರಥಮಾವಿಭಕ್ತಿಯಿಂದ ನಿರ್ದೇಶಿಸಲಾಗಿರುವ ವಸ್ತುವನ್ನೇ ಕುರಿತಾಗಿರುವುದು ಎಂದು ತಿಳಿಸಿ 'ತೇನ ತ್ಯಕ್ತೇನ' ಎಂಬ ಸ್ಥಳದಲ್ಲೂ ಹಿಂದಿನ ಮಾತಿನಲ್ಲಿ ಪ್ರಥಮಾವಿಭಕ್ತಿಯಲ್ಲಿರುವ 'ಜಗತ್' ಎಂಬ ಪದದ ಅರ್ಥವನ್ನೇ ಹೇಳಬೇಕೆಂಬ ಅಂಶವನ್ನು ಸೂಚ್ಯವಾಗಿ ತಿಳಿಸಿರುವರು. ತಾ. ದೀ.

---

1. ಸಕಾಮಕರ್ಮಗಳು ಮುಮುಕ್ಷುವಿಗೆ ತ್ಯಾಜ್ಯ. ನಿಷ್ಕಾಮಕರ್ಮಗಳು ಸ್ವೀಕಾರ್ಯ ಎಂಬ ನಿರ್ಣಯಕ್ಕೆ ಸಹಾಯಕವಾದ ನ್ಯಾಯ ಇದು. ಈಶಾ. ಪುಟ. ೩.

2. ಕರ್ಮಭಾವನಾ, ಬ್ರಹ್ಮಭಾವನಾ, ಉಭಯಭಾವನಾ, ಇವೇ ಭಾವನಾತ್ರಯ. ಈಶಾ. ೧೧. ಉಪಯುಕ್ತ.

## ೧೦

ವೇದಾರ್ಥಸಂಗ್ರಹದ ಮಂಗಳಪದ್ಯದ 'ಕಲ್ಯಾಣ' ಪದದ ವಿವರಣೆಯಲ್ಲಿ (ತಾ. ದೀ.) "ಉಪಾಸಕರಿಗೆ ಅನುಕೂಲವೂ ಆನಂದಕರವೂ ಆದುದೇ ಕಲ್ಯಾಣ, ವಿರುದ್ಧವಾದುದೂ ಬೇಸರವಾಗುವಂತಹುದೂ ಎಂದಿಗೂ ಕಲ್ಯಾಣವಾಗಲಾರದಲ್ಲವೆ!" ಎಂಬ ಮಾತಿದೆ. ಹೀಗೆ ಈಶಾವಾಸ್ಯದ 'ಕಲ್ಯಾಣತಮಂ ರೂಪಂ' ಎನ್ನುವಾಗಲೂ 'ಧ್ಯಾನಿಸುವವರಿಗೆ ಎಂದಿಗೂ ಒಂದಿನಿತೂ ಬೇಸರವಾಗದಂತಹ ಪರಮಾತ್ಮನ ದಿವ್ಯರೂಪ' ಎಂಬರ್ಥವಿಟ್ಟುಕೊಳ್ಳಬೇಕೆಂಬ ಭಾವ ಇಲ್ಲಿ ಗಮನಾರ್ಹ.[1]

## ೧೧

ವೇದಾರ್ಥಸಂಗ್ರಹದ ಪರಮಾತ್ಮರೂಪಧ್ಯಾನಪ್ರಸಂಗದಲ್ಲಿ 'ಸ್ವಾಭಿಮತ – ಸ್ವಾನುರೂಪ – ಕಲ್ಯಾಣತಮ ರೂಪಃ' ಎಂಬ ಮಾತನ್ನು, 'ತತ್ತೇ ಕಲ್ಯಾಣತಮಂ ರೂಪಂ ಪಶ್ಯಾಮಿ' ಎಂಬುದರ ವಿವರಣೆಯಾಗಿ ಭಾಷ್ಯಕಾರರು ಸ್ಪಷ್ಟಪಡಿಸಿರುವರು. ಇದು 'ಆದಿತ್ಯವರ್ಣಂ' 'ಪುರುಷಂ' ಎಂದು ನಿರ್ದೇಶಿಸಲಾಗಿರುವ ಪರಮಾತ್ಮನ ರೂಪ.[2] ತಾ. ದೀ.

## ೧೨

(ಈಶಾವಾಸ್ಯದ ಏಳನೇ ಮಂತ್ರದಲ್ಲಿ 'ಅನುಪಶ್ಯತಿ' ಎಂಬಲ್ಲಿ ಹೇಳಿರುವ ಅನುದರ್ಶನವು, 'ದೃಷ್ಟಯೇ' ಎಂಬಲ್ಲಿ ಹೇಳಿರುವ ದರ್ಶನಕ್ಕೆ ಸಮಾನಾಕಾರವಾಗಿ ಪರಿಣಮಿಸಬೇಕು. ಇಂತಹ ದರ್ಶನಸಮಾನಾಕಾರವಾದ ಜ್ಞಾನವೇ ವಿದ್ಯೆ, ಉಪಾಸನೆ, ಭಕ್ತಿ, ಎನಿಸುವುದು. ಈ ಭಕ್ತಿಯ ಮೂರುಸ್ತರಗಳನ್ನು ಈಶಾವಾಸ್ಯದ ಅಧ್ಯಯನದಲ್ಲಿ ಅವಶ್ಯ ತಿಳಿಯಬೇಕು.)

ಪರಮಾತ್ಮತತ್ವದ ಬಗ್ಗೆ ನಮ್ಮ ಜ್ಞಾನವು ಅನುಧ್ಯಾನರೂಪದಲ್ಲಿ ಆರಂಭವಾಗಿ, ಪರಮಾತ್ಮನಲ್ಲಿ ನಮಗುಂಟಾಗುವ ಪ್ರೀತಿಯಿಂದ ಭಕ್ತಿ ಎನಿಸಿ ಉಪಾಸನೆಯೆನಿಸುವುದು. ಈ ಭಕ್ತಿಯು ಮೂರು ಸ್ತರಗಳಲ್ಲಿರುವುದು. ಮಧ್ಯದಸ್ತರವೇ ಧ್ಯೇಯವಸ್ತುವಿನ ಸಾಕ್ಷಾತ್ಕಾರ–ದರ್ಶನ. ಆ ದರ್ಶನಕ್ಕಾಗಿ ಪೂರ್ವಸಿದ್ಧತೆಯಂತಿರುವ ಉತ್ಕಟವಾದ ಇಚ್ಛೆಯೇ ಮೊದಲನೆಯಸ್ತರ. ಇದೇ 'ಪರಭಕ್ತಿ'. ಸಾಕ್ಷಾತ್ಕಾರವೇ 'ಪರಜ್ಞಾನ'. ಸಾಕ್ಷಾತ್ಕಾರಾನಂತರ ಆ ಅನುಭವದಲ್ಲೇ ಉಂಟಾಗುವ ಅಚಲನಿಷ್ಠೆಯೆಂಬುದೇ ಭಕ್ತಿಯ ಮೂರನೆಯಸ್ತರವಾದ 'ಪರಮಭಕ್ತಿ'. 'ವಿದ್ಯಾ' ಎಂಬುದಕ್ಕೆ ಈ ಪರಮಭಕ್ತಿಯೇ ಅರ್ಥ. ಈ ಪ್ರಸಂಗದಲ್ಲಿ ಭಗವದ್ರಾಮಾನುಜರ 'ಪರಭಕ್ತಿ' ಎಂಬ ಪ್ರಯೋಗಕ್ಕೆ ಪರಮಭಕ್ತಿ ಎಂದರ್ಥ. ಪರ–ಉತ್ತಮವಾದ, ಭಕ್ತಿ–ಪರಮಭಕ್ತಿ. ಭಕ್ತಿಯ ಸ್ತರಗಳಲ್ಲಿ ಇದಕ್ಕಿಂತ ಉತ್ತಮವಾದುದು ಬೇರೆ ಇಲ್ಲ. 'ತತೋ ಮಾಂ ತತ್ವತೋ ಜ್ಞಾತ್ವಾ.' ಗೀತೆ. ೧೮. ೫೫. ಭಾಷ್ಯ ಗಮನಿಸಿ.[3]

---

1. ಈಶಾ. ೧೬.
2. ಈಶಾ. ೧೬.
3. ದರ್ಶನಂ ಪರಭಕ್ತಿಃ ಸ್ಯಾತ್ ಪರಜ್ಞಾನಂ ತು ಸಂಗಮಃ. ಪುನರ್ವಿಶ್ಲೇಷಭೀರುತ್ವಂ ಪರಮಾ ಭಕ್ತಿರುಚ್ಯತೇ.
ಈರೀತಿಯ ಮತ್ತೊಂದು ಪ್ರಾಚೀನ ವಿವರಣೆಯೂ ಗಮನಾರ್ಹವೆನಿಸುತ್ತದೆ.

ಐಶ್ವರ್ಯಾದಿ ಫಲಗಳಿಗಾಗಿ ಉಪಾಸನೆ ಮಾಡುವವರಿಗೆ ಈ ಉತ್ತಮ ಸ್ತರ ಬೇಕಿಲ್ಲ. ಅವರ ಉಪಾಸನೆ ಸ್ವಲ್ಪ ಕೆಳಮಟ್ಟದ್ದು. ಈ ವಿಷಯ ತಿಳಿಸಲೆಂದೇ ರಾಮಾನುಜರು ಇಲ್ಲಿ 'ನಿರತಿಶಯಪ್ರಿಯ' – ನಮಗೆ ಆನಂದ ಕರವಾಗಿ ಅದಕ್ಕಿಂತ ಬೇರೆ ಏನೂ ಬೇಡ ಎನ್ನುವಷ್ಟು ಉತ್ತಮವಾಗಿರುವ ಸಾಕ್ಷಾತ್ಕಾರ ಎಂದು ಸ್ಪಷ್ಟಪಡಿಸಿ ರುವರು.



## ಕೂರನಾರಾಯಣಮುನೀಂದ್ರರ ವಿವರಣೆ[1]

### ೧

ಓಂಕಾರದ ವಿವರಣೆ ಹೀಗಿದೆ[2]:– ಓಂಕಾರವು ಭಕ್ತರು ದೇವರಪಾದಗಳಿಗೆ ಬಾಗುವಂತೆ ಮಾಡುವುದರಿಂದ 'ಪ್ರಣವ' ಎಂದು ಅದಕ್ಕೆ ಹೆಸರು.[3] ಪರಮಾತ್ಮನೇ ಇದರ ದ್ರಷ್ಟಾರ. ಅವನೇ ಇದರ ಅರ್ಥವೂ ದೇವತೆಯೂ ಆಗಿರುವನು.[4] ಬ್ರಹ್ಮವೆನಿಸಿದ ಪರಮಾತ್ಮನನ್ನು ತಿಳಿಸುವ ಪ್ರಣವಕ್ಕೂ ಬ್ರಹ್ಮ ಎಂಬ ಹೆಸರು ಯೋಗ್ಯವಾಗಿದೆ.[5] ಮೂರು ವೇದಗಳ ಸಾರವಾದ[6] **ಅ. ಉ. ಮ್** ಎಂಬ ಮೂರಕ್ಷರಗಳಿಂದಾದ ಒಂದಕ್ಷರವೇ ಇದು.[7] ಇದನ್ನು ಹೇಳುತ್ತ ಪರಮಾತ್ಮನಾದ ವಿಷ್ಣುವಿನ[8] ಸ್ಮರಣೆ ಮಾಡುತ್ತ[9] ಅವನಿಗೆ ನಮ್ಮ ಆತ್ಮವನ್ನು ಒಪ್ಪಿಸಬೇಕು.[10]

"ನಾರಾಯಣನಿಗಾಗಿಯೇ ನಾವೆಲ್ಲ" ಎಂಬ ತಾತ್ತ್ವಿಕವಾದ 'ಶೇಷಶೇಷಿ ಭಾವ'ದಿಂದ ಆತ್ಮನಿವೇದನೆಯೇ ಪ್ರಣವವೆನಿಸಿದ ಈ ಓಂಕಾರದ ಅರ್ಥ. ಪರಮಾತ್ಮನು ಶೇಷಿ–ಸ್ವಾಮಿ–ಒಡೆಯ. ಜೀವಾತ್ಮನು ಶೇಷ–ಭೃತ್ಯ–ಆಳು. ಮಹರ್ಷಿಶಾಂಡಿಲ್ಯರು[11] ಪ್ರಣವಾರ್ಥವನ್ನು ವಿವರಿಸುವಾಗ ಹೀಗೆಯೇ ತಿಳಿಸಿರುವರು.

---

1. ಕೂರನಾರಾಯಣಮುನೀಂದ್ರರು ಪ್ರಾಚೀನ ಉಪನಿಷದ್ಭಾಷ್ಯಕಾರರು. ಭಟ್ಟಪರಾಶರರ ಶಿಷ್ಯರು. ಕಾಲ ಕ್ರಿ. ಶ. ೧೨ನೆಯ ಶತಮಾನ. ವಾಸ ಶ್ರೀರಂಗ. ಇವರ ಈಶಾವಾಸ್ಯಭಾಷ್ಯ ನಮಗೆ ಸಿಕ್ಕಿಲ್ಲ. ಇತರ ವಿವರಗಳಿಗೆ ಗ್ರಂಥಕಾರರ ಪಟ್ಟಿ ಪರಿಶಿಷ್ಟ ನೋಡಿ.
2. ಈಶಾ. ೧೭. ಓಂಕಾರಾರ್ಥ ಚಿಂತನೆಗೆ ಉಪಯುಕ್ತ.
3. 'ಪ್ರಾಣಾನ್ ಸರ್ವಾನ್ ನಾಮಯತಿ ತಸ್ಮಾದುಚ್ಯತೇ ಪ್ರಣವ ಇತಿ.' ಅಥರ್ವಶಿರೋಪನಿಷತ್. ೧.೧೭. (ವಿಷ್ಣುಸಹಸ್ರ ನಾಮಭಾಷ್ಯದಲ್ಲೂ, ಮುದ್ರಿತಗ್ರಂಥದಲ್ಲೂ 'ಪ್ರಣಾಮಯತಿ' ಎಂಬ ಪಾಠವಿದೆ.)
4. 'ಪ್ರಣವಸ್ಯ ಬ್ರಹ್ಮಋಷಿಃ, ದೇವೀ ಗಾಯತ್ರೀ ಛಂದಃ,' ಪರಮಾತ್ಮಾ ವಾಚ್ಯಾ ದೇವತಾ. ತೈ. ಭಾ.
5. ಆದ್ಯಂ ತು ತ್ರ್ಯಕ್ಷರಂ ಬ್ರಹ್ಮ.
6. ಅಕಾರಂ ಚಾಪ್ಯುಕಾರಂ ಚ ಮಕಾರಂ ಚ ಪ್ರಜಾಪತಿಃ. ವೇದತ್ರಯಾನ್ನಿರಬೃಹತ್ (ನಿರದುಹತ್). ಮನು. ೨.೭೬. ಮನುಸ್ಮೃತಿಕಾರನಾದ ಸ್ವಾಯಂಭುವ ಮನು ಈಶಾವಾಸ್ಯದ ಪ್ರಾಚೀನ ದ್ರಷ್ಟಾರ ಎಂಬುದನ್ನು ಗಮನಿಸಿ. ಭಾಗ. ೮. ೧.
7. ಅಕಾರ ಉಕಾರ ಮಕಾರ ಇತಿ. ತಾನೇಕಧಾ ಸಮಭರತ್ ತದೇತದೋಮಿತಿ ಚ. ನಾ. ೪.
8. ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್. ಗೀ. ೮. ೧೩.
9. ಓಂಕಾರೋ ಭಗವಾನ್ ವಿಷ್ಣುಃ ವಿ. ಪು.
10. ಬ್ರಹ್ಮಣೇ ತ್ವಾ ಮಹಸ ಓಮಿತ್ಯಾತ್ಮಾನಂ ಯುಂಜೀತ. ತೈ. ಅಂ. ೫೧.
11. ವಾಜಸನೇಯ ಶಾಖೆಯ ಪ್ರಾಚೀನ ಆಚಾರ್ಯನಾದ ದಧ್ಯಙ್ ಆಥರ್ವಣನೇ ಮನು ಎಂದು ಯಾಸ್ಕರ ನಿರುಕ್ತದಿಂದ ತಿಳಿಯು ವುದು. ಈ ದಧ್ಯಙ್ ಮತ್ತು ಯಾಜ್ಞವಲ್ಕ್ಯರ ಗುರುಪರಂಪರೆಯಲ್ಲಿ 'ಶಾಂಡಿಲ್ಯ' ಮೊದಲಾದ ಮೂವರು ಮಹರ್ಷಿಗಳ ಉಲ್ಲೇಖವಿದೆ. ಬೃ. ಉ. ೪. ೬. ಈಶಾ. ೮. ೫. ಗಮನಿಸಿ.

"ಸ್ವೋಜ್ಜೀವನೇಚ್ಛಾ ಯದಿ ತೇ ಸ್ವಸತ್ತಾಯಾಂ ಸ್ಪೃಹಾ ಯದಿ.
ಆತ್ಮದಾಸ್ಯಂ ಹರೇಃ ಸ್ವಾಮ್ಯಂ ಸ್ವಭಾವಂ ಚ ಸದಾ ಸ್ಮರ.
ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿ ಸ್ಥಿತಮ್.
ಉಭಯೋರಪಿ ಸಂಬಂಧೋ ನ ಪರೋಽಭಿಮತೋ ಮಮ.
ಪಾರತಂತ್ರ್ಯಂ ಪರೇ ಪುಂಸಿ ಪ್ರಾಪ್ಯ ನಿರ್ಗತಬಂಧನಃ.
ಸ್ವಾತಂತ್ರ್ಯಮತುಲಂ ಪ್ರಾಪ್ಯ ಮೋದತೇ ದಿವಿ ದೇವವತ್."[1]

ತೈ. ಭಾ. ಪುಟ. ೨೨೦ ರಿಂದ ೨೨೨.

## ೨

ಮೈತ್ರಾಯಣೀಯ ಉಪನಿಷತ್ತಿನಲ್ಲಿ ಗಾಯತ್ರೀಮಂತ್ರದ ಧ್ಯೇಯವಸ್ತು ಸೂರ್ಯನೊಳಗಿನ ಪರಮಾತ್ಮ ನಾರಾಯಣ ಎಂಬುದಕ್ಕೆ ನಿರೂಪಕವಾಗಿ "ಸವಿತುಃ ವರೇಣ್ಯಂ ಸತ್ಯಧರ್ಮಃ" "ಅಮೃತಂ ವಿಷ್ಣುಸಂಜ್ಞಂ ಸರ್ವಾಧಾರಂ ಧಾಮ, ತದೇತದುಪಾಸೀತ" ಎಂದು ಸ್ಪಷ್ಟವಾದ ವಚನವಿದೆ.[2] ಯೋಗಯಾಜ್ಞವಲ್ಕ್ಯಗ್ರಂಥದಲ್ಲೂ—

"ಈಶ್ವರಂ ಪುರುಷಾಖ್ಯಂ ತು ಸತ್ಯಧರ್ಮಾಣಮಚ್ಯುತಮ್.
ವಿಷ್ಣ್ವಾಖ್ಯಂ ವಿಷ್ಣುಸಂಜ್ಞಂ ತು ಜ್ಞಾತ್ವಾಽಮೃತಮುಪಾಶ್ನುತೇ"[3] ಎಂಬ ವಚನವಿದೆ.

'ಸಾವಿತ್ರೀಕಲ್ಪ' ಗ್ರಂಥದಲ್ಲೂ :—

"ಸವಿತುಸ್ತದ್ವರೇಣ್ಯಂ ತು ಸತ್ಯಧರ್ಮಾಣಮೀಶ್ವರಮ್.
ಹಿರಣ್ಯವರ್ಣಂ ಪುರುಷಂ ವ್ಯೋಮ ತತ್ ವಿಷ್ಣುಸಂಜ್ಞಿತಮ್."[4] ಎಂಬ ವಚನವಿದೆ.

ಮಾರ್ಕಂಡೇಯ ಮತ್ತು ನಾರಸಿಂಹ ಪುರಾಣಗಳಲ್ಲೂ:—

"ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ
ನಾರಾಯಣಸ್ಸರಸಿಜಾಸನಸನ್ನಿವಿಷ್ಟಃ.
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ"[5] ಎಂಬ ವಚನವಿದೆ.

ಎಲ್ಲ ಉಪನಿಷದ್ರಹಸ್ಯಮಂತ್ರಗಳ ಧ್ಯೇಯತತ್ತ್ವ ಪರಮಾತ್ಮ ನಾರಾಯಣನೆಂದು ನಿರ್ಣಯಿಸುವ ವೇದಭಾಗವೇ ತೈತ್ತಿರೀಯನಾರಾಯಣಾನುವಾಕ.[6]

ತೈ. ಭಾ. ಪುಟ. ೨೨೪.

---

1. ಸಾತ್ವತ ಸಂಹಿತೆ.?

2. 3. 4. ಈಶಾ. ೧೫, ೧೬. 'ಸತ್ಯಧರ್ಮ' 'ಪುರುಷ' ಶಬ್ದಗಳ ವಿಚಾರಕ್ಕೆ ಉಪಯುಕ್ತ. ಸಾಮವೇದ ಮೈತ್ರಾಯಣೀಯ ಆರಣ್ಯಕೋಪನಿಷತ್ ಪ್ರಪಾಠಕ. ೬.

5. ಈ ವಚನ ಆಗ್ನೇಯಪುರಾಣದಲ್ಲೂ ಇದೆ ಸಂಧ್ಯಾವಂದನೆಯಲ್ಲಿ ತ್ರಿಮತಸ್ಥರೂ ಇದನ್ನು ಹೇಳುವ ಪದ್ಧತಿ ಇದೆ. ಈಶಾ. ೧೬. 'ಕಲ್ಯಾಣತಮಂ ರೂಪಂ' ಎಂಬ ವಿಚಾರಕ್ಕೆ ಉಪಯುಕ್ತ.

6. ಈ ನಾರಾಯಣಾನುವಾಕದಲ್ಲೇ ಈಶಾವಾಸ್ಯದ ಮುಖ್ಯ ವಿಷಯವಾದ ಪರಮಾತ್ಮನ ಅಂತರ್ವ್ಯಾಪ್ತಿ ಬಹಿರ್ವ್ಯಾಪ್ತಿಗಳನ್ನು ಸ್ಪಷ್ಟಪಡಿಸಲಾಗಿರುವುದನ್ನು ಗಮನಿಸಬೇಕು. ಮತ್ತು ಈಶಾವಾಸ್ಯದ ಪ್ರಾಚೀನ ದ್ರಷ್ಟಾರನೆನಿಸಿದ ಪರಮಾತ್ಮನೇ ಈ ತೈತ್ತಿರೀಯ ಅನುವಾಕದ ಪ್ರಾಚೀನ ದ್ರಷ್ಟಾರ ಎಂಬುದನ್ನೂ ಗಮನಿಸಬೇಕು.

ಶ್ರೀ

**ಹಿರಣ್ಮಯಃ** – ಹಿತವೂ ರಮಣೀಯವೂ ಆದ ರೂಪವುಳ್ಳವನು.[1]

**ಪುರುಷಃ** – ಎಲ್ಲವನ್ನೂ ನಿರ್ವಹಿಸುವವನು, ಎಲ್ಲದರ ಆತ್ಮ, ಎಲ್ಲವನ್ನೂ ಆತ್ಮವಾಗಿ ಒಳಹೊಕ್ಕು ತುಂಬುವವನು, ಜಗತ್ತು ಬದುಕಲು ಅದಕ್ಕೆ ಬೇಕಾದುದೆಲ್ಲವನ್ನೂ ಕೊಡುವವನು.

**ಆತ್ಮಾ** – ಒಂದು ಶರೀರಕ್ಕೆ ಒಂದು ಜೀವಾತ್ಮವು ಹೇಗೆ ವ್ಯಾಪಕವಾಗಿ ಧಾರಕವಾಗಿ ಅದನ್ನು ತನ್ನ ವಶದಲ್ಲಿಟ್ಟುಕೊಂಡು ಅದರ ಒಡೆಯ ಎನಿಸಿದೆಯೋ, ಹಾಗೆ ವಿಶ್ವದಎಲ್ಲ ಜಡವಸ್ತುಗಳಿಗೂ ಎಲ್ಲ ಜೀವಾತ್ಮಗಳಿಗೂ ಪರಮಾತ್ಮನೆನಿಸಿದ ಒಬ್ಬನೇ ಆತ್ಮ. ಉಳಿದುದೆಲ್ಲವೂ ಅವನಿಗೆ ವ್ಯಾಪ್ಯ, ಧಾರ್ಯ, ನಿಯಾಮ್ಯ, ಶೇಷ ಎನಿಸಿದೆ.

**ಸತ್ಯಂ** – ಸ್ವರೂಪಕ್ಕೆ ಎಂದೂ ನಾಶವಿಲ್ಲದುದು, ಸಜ್ಜನರಿಗೆ ಸಮರ್ಥಸಹಾಯಕ, ಎಲ್ಲವನ್ನೂ ಗಮನಿಸುವವ 'ಸತ್' ಎನಿಸುವ ಜೀವತತ್ತ್ವವೂ, 'ತ್ಯತ್' ಎನಿಸುವ ಜಡತತ್ತ್ವವೂ, ತಾನೇ ಎನಿಸಿದ ಅಂತರಾತ್ಮ.

**ತತ್** – ವ್ಯಾಪಕವಾದುದು, ಪರೋಕ್ಷವಾದುದು. (ಅತೀಂದ್ರಿಯ)

**ಸೂರ್ಯಃ** – ಎಲ್ಲವನ್ನೂ ಹುಟ್ಟಿಸುವವನು, ಅವೆಲ್ಲದರಲ್ಲೂ ಅನುಪ್ರವೇಶಿಸಿ ಸಂಚರಿಸುವವನು, ಸನ್ಮಾರ್ಗದಲ್ಲಿ ಸರಿಯಾಗಿ ನಡೆಯುವವನು, ಮತ್ತು ನಡೆಸುವವನು, ಪಡೆಯಲು ಯೋಗ್ಯವಾದ ಉತ್ತಮವಸ್ತು, ಇನ್ನೂ ಹೀಗೆ ನಾನಾರೀತಿಯಲ್ಲಿ ಸೂರ್ಯ ಶಬ್ದದ ವಿವರಣೆಗಳನ್ನು ತಿಳಿಯಬಹುದು.

**ಕವಿಃ** – ಪೂರ್ಣಸಾಕ್ಷಾತ್ಕಾರವಾದವನು.

ತೈ. ಭಾ. ಪುಟ. ೧೯೪ ರಿಂದ ೨೦೬.



---

1. 'ಈಶಾವಾಸ್ಯಮಿದಂ ಸರ್ವಂ' ಎಂಬುದಕ್ಕೆ ಈಶಾ. ೫ರಲ್ಲಿ ಭಾಷ್ಯಕಾರರು ಉಲ್ಲೇಖಿಸಿರುವ 'ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ವಚನದ ಹಿಂದು ಮುಂದಿನ ವಚನಗಳಲ್ಲಿ ಬಂದಿರುವ ಈ ಮುಂದಿನ ಶಬ್ದಗಳೆಲ್ಲದರ ಅರ್ಥಗಳೂ ಈಶಾವಾಸ್ಯದಲ್ಲಿ ಉಪಯುಕ್ತ. ಈಶಾ. ೧೬ರ 'ಕಲ್ಯಾಣತಮಂ' ಎಂಬುದಕ್ಕೆ ವೇದಾರ್ಥಸಂಗ್ರಹದಲ್ಲಿ ಭಗವದ್ರಾಮಾನುಜರೂ 'ಹಿರಣ್ಮಯ' ಎಂಬುದರ ಅರ್ಥವನ್ನೇ ತಿಳಿಸಿರುವರೆಂಬುದನ್ನೂ ಗಮನಿಸಿರಿ. ತೈತ್ತಿರೀಯನಾರಾಯಣಾನುವಾಕವನ್ನು ಭಾಷ್ಯಸಹಿತ ಪೂರ್ಣ ಅಧ್ಯಯನ ಮಾಡುವುದು ಆವಶ್ಯಕ.

# ಭಟ್ಟಪರಾಶರರ ವಿಷ್ಣುಸಹಸ್ರನಾಮಭಾಷ್ಯ[1]

## ೧

**ನೈಕಮಾಯಃ ೩೦೪.** ಆಶ್ಚರ್ಯಕರವಾದ ಶಕ್ತಿಯಿರುವವನು. ವಿಶ್ವವನ್ನೇ ನುಂಗಿರುವಂತಹ ತನ್ನ ರೂಪವನ್ನು ಒಂದು ಸಣ್ಣ ಆಲದ ಎಲೆಯ ಮೇಲೆ ಮಲಗಿರುವ ಮಗುವಿನಂತಹ ಚಿಕ್ಕ ರೂಪದಲ್ಲೂ ಏಕಕಾಲದಲ್ಲಿ ತೋರಿಸಬಲ್ಲವನು.

ಮಾಯೆ ಎಂದರೆ ಸುಳ್ಳು ಎಂದೇನೂ ಅರ್ಥಮಾಡಬೇಕಿಲ್ಲ. 'ಮಾಯಾ–ವಯುನಂ–ಜ್ಞಾನಂ'[2] – ಮಾಯೆ ಎಂದರೆ ಜ್ಞಾನ ಎಂದರ್ಥ. 'ವಿಶ್ವಾನಿ ದೇವ! ವಯುನಾನಿ ವಿದ್ವಾನ್' ಎಂಬ ಶ್ರುತಿವಚನದಲ್ಲಿ 'ಜ್ಞಾನ' ಎಂಬ ಅರ್ಥದಲ್ಲಿ 'ವಯುನ' ಎಂಬ ಪದವನ್ನು ಬಳಸಿರುವುದು ಗಮನಾರ್ಹ.[3]

## ೨

**ಪುರುಷಃ ೧೪; ೪೦೬.** ಜ್ಞಾನಿಗಳಿಗೆ ತನ್ನ ಅನುಭವವನ್ನು ಕೊಡುವವನು. 'ಸ ಯತ್ ಪೂರ್ವೋಽಸ್ಮಾತ್ ಸರ್ವಸ್ಮಾತ್ ಪಾಪ್ಮನ ಓಷಸ್ತಸ್ಮಾತ್ ಪುರುಷಃ' ಎಂಬ ವಚನಾನುಸಾರ ಪರಮಪಾವನನೆನಿಸಿದವನು, ಪಾಲಿಸುವವನು, ಸದ್‌ಗುಣಗಳಿಂದ ತುಂಬಿರುವವನು. ಎಲ್ಲವನ್ನು ಹಾಗೇ ತುಂಬುವವನು[4].

**ಯಮಃ ೧೬೫.** ಎಲ್ಲದರ ಅಂತರ್ಯಾಮಿ. ಮನು. ೮. ೯೨.[5]

**ಸ್ವಯಂಭೂಃ ೩೭.** ಇದರ ಅರ್ಥ ಈಶಾವಾಸ್ಯಪ್ರಕಾಶಿಕೆ. ಈಶಾ. ಪುಟ. ೮೧ರಲ್ಲಿದೆ.

---

1. ಭಟ್ಟಪರಾಶರರು ರಾಮಾನುಜಾಚಾರ್ಯರ ಸಾಕ್ಷಾತ್ ಶಿಷ್ಯರು ಮತ್ತು ಕೂರತ್ತಾಳ್ವಾನ್‌ರವರ ಪುತ್ರರು. ಶ್ರೀರಂಗನಾಥ ಎಂಬುದು ಇವರ ಹೆಸರು. ರಾಮಾನುಜರ ಪ್ರತಿಜ್ಞೆಯನ್ನು ಅವರ ಆಜ್ಞೆಯಂತೆ ನೆರವೇರಿಸಲು ಕನ್ನಡನಾಡಿನ ಮಾಧವ ಮುನಿಯನ್ನು ಜಯಿಸಿ ರಾಮಾನುಜರ ಸಿದ್ಧಾಂತವನ್ನು ಮುನ್ನಡೆಸಿದ ಮಹನೀಯರು. ಯಾಮುನಾಚಾರ್ಯರ ಪ್ರತಿಜ್ಞೆಯನ್ನು ನೆರವೇರಿಸಲು ರಾಮಾನುಜರು ಇವರ ಮೂಲಕ ವಿಷ್ಣುಸಹಸ್ರನಾಮಭಾಷ್ಯ ಬರೆಸಿ ಇವರಿಗೆ ''ಭಟ್ಟಪರಾಶರ'' ಎಂಬ ಬಿರುದನ್ನು ಕೊಟ್ಟು ವ್ಯಾಸ ಪರಾಶರಮಹರ್ಷಿಗಳ ಕೀರ್ತಿಯನ್ನು ಹರಡಿದರು. ಉಪನಿಷತ್ತುಗಳ ಪೋಷಕಗ್ರಂಥಗಳಲ್ಲಿ ಇತಿಹಾಸ ಪುರಾಣಗಳೂ, ಅವುಗಳಲ್ಲಿ ರಾಮಾಯಣ ಭಾರತಗಳೂ, ಭಾರತದಲ್ಲಿ ಗೀತೆ ವಿಷ್ಣುಸಹಸ್ರನಾಮಗಳೂ ಅತಿಮುಖ್ಯವಾದುವು. ವಿಷ್ಣುಸಹಸ್ರನಾಮವು ಪರಮಾತ್ಮನ ವೇದಪ್ರಸಿದ್ಧವಾದ ಹೆಸರುಗಳ ಒಂದು ಪುಟ್ಟ ಕೋಶಗ್ರಂಥವೆನಿಸಿದೆ. "ಯಾನಿ ನಾಮಾನಿ ಗೌಣಾನಿ ವಿಖ್ಯಾತಾನಿ ಮಹಾತ್ಮನಃ, ಋಷಿಭಿಃ ಪರಿಗೀತಾನಿ" ಭಾರ. ವಿ. ಸಹ. ೧೩. ವಿಖ್ಯಾತಾನಿ - ಛಂದೋಭಾಷಯೋಃ ರೂಢಾನಿ - ಮಂತ್ರ, ಸಂಹಿತೆ, ಬ್ರಾಹ್ಮಣಗಳಲ್ಲೂ ರೂಢಿಯಲ್ಲಿರುವುವು. ಇಂತಹ ಉಪಯುಕ್ತವಾದ ಕೆಲವನ್ನು ಮಾತ್ರ ಇಲ್ಲಿ ಈಶಾವಾಸ್ಯಕ್ಕೆ ಸಂಬಂಧಿಸಿದಂತೆ ಭಾಷ್ಯಾನುಸಾರ ಕೊಡಲಾಗಿದೆ.
2. ಈ ವಚನ ಯಾಸ್ಕನಿರುಕ್ತದಲ್ಲಿದೆ.
3. ಈ ನಾಮಮಂತ್ರಾರ್ಥವು 'ತದಂತರಸ್ಯ ಸರ್ವಸ್ಯ—ಬಾಹ್ಯತಃ', 'ಈಶಾವಾಸ್ಯಂ' ಎಂಬ ಅರ್ಥಗಳಿಗೆ ವಿವರಣೆಯಾಗಿದೆ. ೧೮ನೇ ಮಂತ್ರದ 'ವಯುನ' ಶಬ್ದಾರ್ಥ ನಿರ್ಣಯಕ್ಕೆ ಸಹಾಯಕವಾಗಿದೆ ಭಾಷ್ಯವಚನ.
4. 'ಯೋಸಾವಸೌ ಪುರುಷಃ' ಎಂಬ ಈಶಾ ೧೬ನೇ ಮಂತ್ರಕ್ಕೆ ಉಪಯುಕ್ತವಾದ ಅರ್ಥಗಳು.
5. ಈಶಾ. ೧೬. 'ಯಮ' ಶಬ್ದಾರ್ಥ ವಿವರಣೆ ಮತ್ತು ಪುಟ ೧೪೭ ಗಮನಿಸಿ.

**ಪ್ರಜಾಪತಿಃ ೭೧.** ಪ್ರ–ಶ್ರೇಷ್ಠರಾಗಿ, ಜಾಃ–ಇರುವವರು ಸಂಸಾರಿಗಳಿಗಿಂತಲೂ ಮುಕ್ತಜನರಿಗಿಂತಲೂ ಶ್ರೇಷ್ಠರಾದ ವೈಕುಂಠಲೋಕದಲ್ಲಿ ಸದಾ ಇರುವ ನಿತ್ಯಸೂರಿಜನರು. "ರಶ್ಮಿಂ ರಶ್ಮೀನಾಂ ಮಧ್ಯೇ ತಪನ್ತಂ ಋತಸ್ಯ ಪದೇ ಕವಯೋ ನಿಪಾಂತಿ"[1] 'ಸದಾ ಪಶ್ಯಂತಿ ಸೂರಯಃ'[2] ಅವರೆಲ್ಲರ ಒಡೆಯ ಪರಮಾತ್ಮ.[3]

**ಸತ್ಯಃ ೧೦೮, ೨೧೪, ೮೭೩.** ಸಜ್ಜನರಿಗೆ ಸಮರ್ಥರೀತಿಯಿಂದ ಅನುಕೂಲ ಮಾಡುವವನು.[4] ಸಜ್ಜನರಿಗೆ ಸಮ್ಮತನಾದವನು, ಸತ್ಯದಲ್ಲೇ ದೃಢನಿಷ್ಠೆಯುಳ್ಳವನು.[5]

**ಕವಿಃ ೧೩೫.** ಕ್ರಾಂತದರ್ಶಿ, ಈ ಅರ್ಥವನ್ನೇ ನಂತರದ ಲೋಕಾಧ್ಯಕ್ಷ, ಸುರಾಧ್ಯಕ್ಷ, ಧರ್ಮಾಧ್ಯಕ್ಷ ಎಂಬ ನಾಮಗಳೂ ಪೋಷಿಸುತ್ತವೆ. ಎಲ್ಲವನ್ನೂ ಗಮನಿಸಿ ವಿಚಾರಮಾಡಿ ತಿಳುವಳಿಕೆ ಉಂಟುಮಾಡುವವನು.[4]

**ದೇವಃ ೩೭೮.** ವಿಶ್ವವ್ಯವಹಾರವನ್ನು ತನ್ನ ಲೀಲಾರ್ಥವಾಗಿ ಮಾಡುವವನು.[6]

**ಧರ್ಮಃ ೪೦೬.** ಐಹಿಕ ಲೌಕಿಕ ಸುಖಗಳನ್ನು ಕೊಟ್ಟು ಕಾಪಾಡಿ ವಿಶ್ವವನ್ನು ಧರಿಸಿರುವವನು.[7]

**ಕ್ರತುಃ ೪೫೧.** ವೈದಿಕ ಯಜ್ಞಯಾಗಾದಿಗಳಿಂದ ಆರಾಧ್ಯನು.

**ಸತ್ಯಧರ್ಮಾ ೫೩೨.** ಮೊದಲಿನಿಂದ ಕೊನೆಯವರೆಗೂ ಕಪಟವಿಲ್ಲದೆ ಸರಳವಾದ ಆಚರಣೆಯುಳ್ಳವನು.[8]

**ಏಕಃ ೭೩೦.** ತನ್ನಂತಹ ಮತ್ತೊಂದಿಲ್ಲದವನು.[9]

**ಸಃ ೭೩೨.** ತನ್ನ ಬಗ್ಗೆ ಇತರರಿಗಿರುವ ಅಜ್ಞಾನವನ್ನು ಪರಿಹರಿಸುವವನು.[10]

**ಯತ್ ೭೩೬.** ಭಕ್ತರ ರಕ್ಷಣೆಗಾಗಿ ಪ್ರಯತ್ನಿಸುವವನು "ಅಹಂ ಸ್ಮರಾಮಿ ಮದ್ಭಕ್ತಂ"[11]

**ತತ್ ೭೩೭.** ಆಶ್ರಿತರ ಜ್ಞಾನವನ್ನು ಭಕ್ತಿರೂಪದಲ್ಲಿ ಬೆಳೆಸುವವನು.
"ಓಂ ತತ್ ಸತ್ ಇತಿ ನಿರ್ದೇಶಃ" ಗೀ. ೧೭. ೨೩[11]

**ಅನಿಲಃ ೮೧೮.** ತನಗೆ ಮತ್ತೊಬ್ಬ ಪ್ರೇರಕರಿಲ್ಲದವನು.[12]

**ಸೂರ್ಯಃ ೮೮೬.** ವಾಯುವನ್ನು ನಿಯಂತ್ರಿಸುವವನು.[13]

---

1. ತೈ. ಆರ. ೩. ೧೧. 2. ಪು. ಸೂ. ೧೪.
3. ಈಶಾ. ೧೬. ಪ್ರಾಜಾಪತ್ಯ ಎಂಬುದಕ್ಕೆ ಪ್ರಜಾಪತಿ ಎಂಬ ಅರ್ಥ ಗಮನಿಸಿ ಇದನ್ನು ಬಳಸಬಹುದು.
4. ಈಶಾ. ೧೫ ಕ್ಕೆ ಉಪಯುಕ್ತ.
5. ಈಶಾ. ೮. ಪರಮಾತ್ಮಪರವಾದಕ್ಕೆ ಈ ಅರ್ಥ ಉಪಯುಕ್ತ.
6. ಈಶಾ. ೧೮ ಕ್ಕೆ ಉಪಯುಕ್ತ. 7. ಈಶಾ. ೧೫ ಕ್ಕೆ ಉಪಯುಕ್ತ.
8. ಈಶಾ. ೧೫ ಕ್ಕೆ ಉಪಯುಕ್ತ. 9. ಈಶಾ. ೧೬ ಕ್ಕೆ ಉಪಯುಕ್ತ.
10. 'ಸ ಪರ್ಯಗಾತ್' ಎಂಬಲ್ಲಿ ಇದರಂತೆ ವಿಶೇಷಾರ್ಥ ಹೇಳಬಹುದು.
11. ಈಶಾ. ೧೬ ರಲ್ಲಿ ಈ 'ಯತ್‌ತತ್' ಗಳ ಅರ್ಥವನ್ನೂ ಪರಮಾತ್ಮನ ರೂಪಕ್ಕೆ ಅನ್ವಯಿಸಬಹುದು.
12. ಈಶಾ. ೧೭ ಉಪಯುಕ್ತ.
13. ಈಶಾ ೫ 'ತಸ್ಮಿನ್ನಪೋ ಮಾತರಿಶ್ವಾ ದಧಾತಿ' ಎಂಬುವ ಅರ್ಥ ಸೂರ್ಯ ಶಬ್ದದಲ್ಲೂ ಇರುವುದರಿಂದ ಈಶಾ. ೧೬ ರಲ್ಲಿ 'ಸೂರ್ಯ' ಶಬ್ದ ಬಳಸಿರುವುದನ್ನು ಗಮನಿಸಿ.

ಶ್ರೀ

**ವಿಶ್ವಂ ೧.** ಎಲ್ಲ ವಿಧದಿಂದಲೂ ಪರಮಾತ್ಮನಿಗಿರುವ ಪೂರ್ಣತ್ವವನ್ನು ಇದು ತಿಳಿಸುವುದು. ಉಳಿದ ಎಲ್ಲ ನಾಮಗಳೂ ಈ ಅರ್ಥವನ್ನೇ ಪೋಷಿಸುವುವು.[1]

**ಅಜಃ, ಸರ್ವೇಶ್ವರಃ, ಸಿದ್ಧಃ.**[2] **೯೭. ೯೮. ೯೯.**

**ಮಂತ್ರಃ ೨೮೨.** ತಾನು ಉಪದೇಶಿಸಿದ ವೇದಾಕ್ಷರವನ್ನು ಅನುಸಂಧಾನ ಮಾಡುತ್ತಾ ತನ್ನನ್ನೇ ನೆನೆಸಿಕೊಳ್ಳುವವರನ್ನು ಕಾಪಾಡುವವನು.

'ಮನಸ್ಸು ನೆಮ್ಮದಿಯಾಗಿದ್ದು, ಶರೀರವೂ ಆರೋಗ್ಯವಿದ್ದು, ಶಾರೀರಕ ಧಾತುಗಳೂ ಸಮಸ್ಥಿತಿಯಲ್ಲಿದ್ದಾಗ ವಿಶ್ವರೂಪಿಯಾದ ನನ್ನನ್ನು ಯಾವನು ಅವತಾರರಹಸ್ಯಜ್ಞಾನಪೂರ್ವಕವಾಗಿ ನೆನೆಯುವನೋ, ಅವನಿಗೆ ಆ ಕ್ಷಣದ ಆ ನೆನಪಷ್ಟೇ ಸಾಕು. ಅಂತಹವನು ಸಾಯುತ್ತ ನನ್ನ ನೆನಪಿಲ್ಲದೆ ಕಲ್ಲು ಮರಗಳಂತೆ ನಿಶ್ಚೇಷ್ಟನಾಗಿ ಬಿದ್ದಿರುವಾಗಲೂ ನಾನೇ ಅವನನ್ನೂ ಅವನದೆಲ್ಲವನ್ನೂ ನೆನಪಿಟ್ಟುಕೊಂಡು ಬಂದು ನನ್ನ ಲೋಕಕ್ಕೆ ಅರ್ಚಿರಾದಿಮಾರ್ಗದಿಂದ ಕರೆದೊಯ್ಯುವೆನು, ಎಂದು ವರಾಹಪುರಾಣದಲ್ಲಿ ಈ ವಿಷಯದ ರಹಸ್ಯವನ್ನು ತಿಳಿಸಲಾಗಿದೆ.[3]

**ಅಪ್ರಮೇಯಾತ್ಮಾ ೨೫೦.** ಲೆಕ್ಕವಿಲ್ಲದಷ್ಟಿರುವ ಈ ಜಾಗತಿಕ ವಸ್ತುಗಳಲ್ಲಿ ಪ್ರತ್ಯೇಕ ಒಂದೊಂದನ್ನೇ ಪೂರ್ಣವಾಗಿ ತಿಳಿಯಲು ನಮಗೆ ಸಾಧ್ಯವಿಲ್ಲ. ಆದರೆ ಇವನು ಪ್ರತ್ಯೇಕ ಒಂದೊಂದರೊಳಗೂ ಹೊರಗೂ ವ್ಯಾಪಿಸಿರುವವನು.[4]

**ವಾಸುದೇವಃ ೩೩೪.** ತಾಯಿಹಕ್ಕಿಯು ಮರಿಯನ್ನು ತನ್ನ ರೆಕ್ಕೆಗಳಿಂದ ಮುಚ್ಚಿ ಕಾಪಾಡುವಂತೆ ವಿಶ್ವವನ್ನೇ ತನ್ನೊಳಗಿಟ್ಟು ಕಾಪಾಡುತ್ತ ಎಲ್ಲರ ಹೊಗಳಿಕೆಗೆ ಪಾತ್ರನಾದವನು. (ಇತ್ಯಾದಿ)

"ಸೂರ್ಯನು ಕಿರಣಗಳಿಂದ ಎಲ್ಲವನ್ನೂ ಆವರಿಸಿ ಕಾಪಾಡುವಂತೆ ನನ್ನ ಅಂಶಗಳಿಂದ ಜಗತ್ತೆಲ್ಲವನ್ನೂ ಕಾಪಾಡುವೆನು, ಎಲ್ಲ ಪ್ರಾಣಿಗಳಿಗೂ ಆಸರೆಯಾಗಿ ಅವುಗಳೊಳಗೂ ವಾಸವಾಗಿರುವೆನು."[5]

---

1. ಶಾಂತಿಮಂತ್ರದ ಪೂರ್ಣ ಶಬ್ದಾರ್ಥಗಳನ್ನು ಗಮನಿಸಿ.

2. ಈಶಾ. ೧೮ ನೇ ಪುಟ, ಟಿಪ್ಪಣಿ ಗಮನಿಸಿ.

3. ಈಶಾವಾಸ್ಯಕ್ಕೆ 'ಮಂತ್ರೋಪನಿಷತ್' ಎಂಬ ಹೆಸರಿರುವುದನ್ನೂ, ಈ ಮಂತ್ರಗಳನ್ನು ಅನುಸಂಧಾನ ಮಾಡುತ್ತಿದ್ದ ಸ್ವಾಯಂಭುವ ಮನುವಿಗೆ ಮಗಳ ಮಗನಾಗಿ ಪರಮಾತ್ಮನು 'ಯಜ್ಞ' ಎಂಬ ಹೆಸರಿನಿಂದ ಅವತರಿಸಿ ಉಪಾಸಕರಿಗೆ ವಿರೋಧಿಗಳಾಗಿದ್ದ ಅಸುರರನ್ನು ಸಂಹರಿಸಿ ಧರ್ಮಸ್ಥಾಪನಮಾಡಿದ ಚರಿತ್ರೆಯನ್ನೂ ಭಾಗವತ ಪುರಾಣ ೮. ೧ ರಲ್ಲಿ ಗಮನಿಸಬೇಕು. ಮತ್ತು ಈಶಾ. ೧೭ ಟಿಪ್ಪಣಿ, ಪುಟ ೧೫೭. ವರಾಹಚರಮಶ್ಲೋಕ ಗಮನಿಸಿ.

4. ಶಾಂತಿಮಂತ್ರದ 'ಪೂರ್ಣ' ಎಂಬುದೂ 'ಈಶಾವಾಸ್ಯಂ' 'ತದಂತರಸ್ಯ ಸರ್ವಸ್ಯ ... ಬಾಹ್ಯತಃ' ಎಂಬ ಪರಮಾತ್ಮನ ವ್ಯಾಪ್ತಿಗೂ ಇದು ವಿವರಣೆಯಾಗುವುದು.

5. ಛಾದಯಾಮಿ ಜಗತ್ಸರ್ವಂ ಭೂತ್ವಾ ಸೂರ್ಯ ಇವಾಂಶುಭಿಃ.
ಸರ್ವಭೂತಾಧಿವಾಸಶ್ಚ ವಾಸುದೇವಸ್ತತಸ್ಸ್ಮೃತಃ ಭಾರ. ಮೋ. ೭೬.

"ಎಲ್ಲವೂ ನನ್ನ ವಶದಲ್ಲಿ ವಾಸಮಾಡುವುದರಿಂದಲೂ ದೇವತೆಗಳ ಗುಂಪಿನ ಅಷ್ಟವಸುಗಳಲ್ಲಿ ಒಬ್ಬನಾಗಿ ಅವತರಿಸಿದುದರಿಂದಲೂ ನನಗೆ ವಾಸುದೇವನೆಂದು ಹೆಸರು.[1]

"ಎಲ್ಲದರಲ್ಲೂ ಇವನು, ಇವನಲ್ಲಿ ಎಲ್ಲವೂ ಇರುವುದರಿಂದ ಇವನು ವಾಸುದೇವನೆನಿಸಿರುವನು.[2]

ಈ ವಿಷಯವು ಎಲ್ಲ ವೇದ ಶಾಸ್ತ್ರಗಳ ರಹಸ್ಯವೆಂಬ ಕಾರಣ ಇದನ್ನು ನಾವಿಲ್ಲಿ ಹೆಚ್ಚಾಗಿ ವಿವರಿಸ ಬಯಸುವುದಿಲ್ಲ. ಇದು ಪರಮಾತ್ಮನ ಷಡ್ಗುಣಪರಿಪೂರ್ಣತೆಯ ಆಧ್ಯಾತ್ಮಿಕ ರಹಸ್ಯ.[3]

**ಆದಿದೇವ: ೩೩೬. ೯೯೧.** ಆದಿಕಾಲದಿಂದಲೂ ಪ್ರಕಾಶಿಸುತ್ತಿರುವವನು. ಯಾರ ವಶಕ್ಕೂ ಬೀಳದ ಸರ್ವ ಸ್ವತಂತ್ರನಾದ ಈತ ತನ್ನಿಚ್ಛೆಬಂದಂತೆ ವಿಶ್ವವ್ಯವಹಾರದಲ್ಲಿ ಕ್ರೀಡಿಸುವವನು.[4]

**ಅಶೋಕಃ ೩೩೮.** ಆಧ್ಯಾತ್ಮಿಕ ವಿದ್ಯಾನಿಷ್ಠರಿಗೆ ಶೋಕಮೋಹಾದಿಗಳನ್ನು ಬಿಡಿಸುವವನು.[5]

**ತಾರ: ೩೪೦** ಸಂಸಾರವೆಂಬ ಮೃತ್ಯುವಿನ ದವಡೆಯಿಂದ ನಮ್ಮನ್ನು ಪಾರುಮಾಡುವವನು. ಅಥರ್ವಶಿರೋಪನಿಷತ್ತಿನಲ್ಲೂ ಹೀಗೆ ಹೇಳಿದೆ.[6]

**ಮಹಾದೇವಃ ೯೯೨.** ಹಿರಿಯ ಕ್ರೀಡಾಪಟು.[7]

**ಅಮೃತಪ: ೫೦೬.** ಭಕ್ತರು ಕೊಡುವ ಹವಿಸ್ಸನ್ನು ಅಮೃತವಾಗಿಸಿಕೊಳ್ಳುವವನು, ತನ್ನಅನುಭವವೆಂಬ ಅಮೃತವನ್ನು ಕೊಟ್ಟು ಅವರನ್ನು ಕಾಪಾಡುವವನು.[8]

**ಮಹಾಕ್ರತುಃ ೬೮೦.** ವೇದಾಗಮೋಕ್ತವಾದ ಎಲ್ಲವಿಧ ಯಜ್ಞಯಾಗಾದಿಗಳಿಂದಲೂ ಪೂಜೆಗೊಳ್ಳುವವನು.[9]

**ಪೂರ್ಣ: ೬೯೦.** ಸ್ವಾಭಾವಿಕವಾಗಿಯೇ ಎಲ್ಲ ವಿಧದಲ್ಲೂ ಪೂರ್ಣವಾಗಿ ತೃಪ್ತಿಯಿಂದಿರುವವನು.

---

1. ವಸನಾತ್ ಸರ್ವಭೂತಾನಾಂ ವಸುತ್ವಾತ್ ದೇವಯೋನಿತಃ.
ವಾಸುದೇವಸ್ತತೋ ಜ್ಞೇಯಸ್ಸರ್ವೇಷಾಮಪಿ ಪಠ್ಯತೇ. ಭಾರ. ಉ. ೬೮. ೩.

2. ಈಶಾ. ಟಿಪ್ಪಣಿ ಪುಟ ೧೩ ಗಮನಿಸಿ. ಇವರ ಜೊತೆಗೆ ವಿ. ಸಹ. ಅನುಬಂಧದಲ್ಲಿರುವ ಈ ಪದ್ಯವನ್ನು ಗಮನಿಸಿ.
"ವಾಸನಾದ್ವಾಸುದೇವಸ್ಯ ವಾಸಿತಂ,ತೇ ಜಗತ್ತ್ರಯಮ್.
ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ.

3. ಈಶಾವಾಸ್ಯೋಪನಿಷತ್ತಿನ ಸಾರಾಂಶವೇ "ಈಶಾವಾಸ್ಯಂ." ಇಲ್ಲಿ ಹೇಳಿರ ವ ಈಶತತ್ತ್ವವೇ ವಾಸುದೇವ. ಇಂತಹ ದೇವಶಬ್ದ ಈಶಾ. ೧೬ರಲ್ಲೂ ಇದೆ. ಶ ಂತಿಮಂತ್ರದ 'ಪೂರ್ಣ' ಶಬ್ದವೂ ಇದೇ ಗುಣಪೂರ್ಣತೆಯನ್ನು ತಿಳಿಸುವುದೆಂಬುದನ್ನು ಗಮನಿಸಿ.

4. ಈಶಾ. ೧೮. 'ದೇವ' ಎಂಬುದಕ್ಕೆ ಉಪಯುಕ್ತವಾದ ಅರ್ಥ.

5. ಈಶಾ. ೬. ಎಲ್ಲದರ ಅಂತರಾತ್ಮ ಈಶನೆಂಬ ಜ್ಞಾನಿಗೆ ಶೋಕ ಮೋಹಗಳು ಆಗುವುದಿಲ್ಲ.

6. ಈಶಾ. ೧೭ ರ ಓಂಕಾರಾರ್ಥಕ್ಕೆ ಉಪಯುಕ್ತ ಅಂಶಗಳು. ಓಂಕಾರಕ್ಕೆ 'ಪ್ರಣವ' 'ತಾರ' ಎಂದೂ ಹೆಸರಿದೆ.

7. ಈಶಾ. ೧೮. 'ದೇವ' ಎಂಬುದಕ್ಕೆ ಉಪಯುಕ್ತವಾದ ಅರ್ಥ.

8. ಈಶಾ. ೧೧. ೧೪ 'ಅಮೃತಂ ಅಶ್ನುತೇ' ಎಂಬುದಕ್ಕೂ, ಈಶಾ. ೧೭ ಅಮೃತವೆನಿಸುವ ಜೀವಾತ್ಮವೆಂಬ ಹವಿಸ್ಸನ್ನು ಸಮರ್ಪಿಸಬೇಕೆಂಬ ಓಂಕಾರಾರ್ಥವನ್ನು ಗಮನಿಸಿ.

9. ಈಶಾ. ೧೭. 'ಕ್ರತು' ಎನ್ನುವುದಕ್ಕೆ ಉಪಯುಕ್ತವಾದ ಅರ್ಥಗಳು.

**ಅರ್ಕಃ, ವಾಜಸನಿಃ. ೮೦೧, ೮೦೨.** ಹೊಗಳಿಕೆಗೆ ಅರ್ಹ, ಅನ್ನವನ್ನು ವಿಭಾಗಿಸಿ ಹಂಚುವವನು.[1]

**ಅಮೃತಾಶಃ ೮೮೯.** ತನ್ನ ಗುಣಗಳೆಂಬ ಅಮೃತವನ್ನು ತಿನ್ನಿಸುವವನು.[2]

**ಅಮೃತವಪುಃ ೮೨೦.** ಅಮೃತದಂತೆ ಹಿತಕರವಾದ ರೂಪವುಳ್ಳವನು.[3]

**ಅಣುಃ ೮೩೯.** ಸೂಕ್ಷ್ಮವಾದ ದಹರಾಕಾಶ, ಮೂಲಪ್ರಕೃತಿ ಮತ್ತು ಜೀವಾತ್ಮಗಳಲ್ಲಿ, ಅನುಪ್ರವೇಶಿಸುವ ಶಕ್ತಿಯುಳ್ಳವನು. ಇವನನ್ನು 'ಅಣೋರಣೀಯಾನ್' – ಅಣುವಿಗಿಂತ ಸೂಕ್ಷ್ಮ ಎನ್ನಲಾಗಿದೆ[4].

**ಬೃಹತ್. ೮೪೦.** ಬಹಳ ಹಿರಿದೆನಿಸಿದ ಪರಮಾಕಾಶವನ್ನೂ ತನ್ನ ತೆರೆದ ಅಂಗೈಯೊಳಗೆ ನೀರು ನಿಲ್ಲುವಷ್ಟು ಜಾಗದಲ್ಲೇ ಇಟ್ಟುಕೊಳ್ಳುವಷ್ಟು ಹಿರಿಯುವನು. ಇವನನ್ನು "ಮಹತೋ ಮಹೀಯಾ್ನ್" ಹಿರಿದಾದುದೆಲ್ಲಕ್ಕಿಂತ ಹಿರಿದಾಗಿರುವವನು ಎಂದು ಹೇಳಲಾಗಿದೆ.[5]

**ಸತ್ಯಧರ್ಮಪರಾಯಣಃ ೮೭೪.** ಸತ್ಯವಾದ ಧರ್ಮದಲ್ಲಿ ನಿಷ್ಠರಾದವರಿಗೆ ಬಹಳ ಇಷ್ಟವಾದವನು.[6]

**ಪ್ರಣವಃ ೯೫೭.** "ಓಂಕಾರವು ಪ್ರಾಣಗಳೆಲ್ಲವನ್ನು ಪರಮಾತ್ಮನಲ್ಲಿ ಒಪ್ಪಿಸುವಂತೆ ಮಾಡುತ್ತದೆ. ಈ ಕಾರಣದಿಂದಲೇ ಪ್ರಣವ ಎನಿಸಿದೆ ಎಂದು" ಅಥರ್ವಶಿರೋಪನಿಷತ್ತಿನಲ್ಲಿದೆ. ಇಂತಹ ಓಂಕಾರಾರ್ಥವನ್ನು ತಿಳಿಸಿ ಭಕ್ತರನ್ನೂ ನಮಸ್ಕರಿಸುವಂತೆ ಆಜ್ಞಾಪಿಸಿ ತನ್ನ ಪಾದಾರವಿಂದಗಳಿಗೆ ಅವರನ್ನೂ ಬಾಗಿಸುವವನು.

**ಏಕಾತ್ಮಾ ೯೭೩.** ಸಮಸ್ತ ಜಗತ್ತಿನ ಜಡ ಜೀವಗಳೆಲ್ಲದಕ್ಕೂ ಏಕೈಕ ನಿಯಾಮಕನೂ ಸ್ವಾಮಿಯೂ ಅಭಿಮಾನಿಯೂ ಅವೆಲ್ಲವನ್ನೂ ಅನುಭವಿಸುವವನೂ ಆಗಿರುವವನು.[7]

  

1. ಅರ್ಕ ಎಂದರೆ ಪೂಜನೀಯ, ಸೂರ್ಯ, ಅರ್ಚಾವಿಗ್ರಹರೂಪದಲ್ಲಿರುವವನು ಎಂಬ ಅರ್ಥಗಳೂ ಇವೆ. ಭಟ್ಟಪರಾಶರರು ಪ್ರಕರಣಕ್ಕೆ ಸರಿಯಲ್ಲವೆಂದು ಈ ಅರ್ಥಗಳನ್ನು ಮಾಡಿಲ್ಲ. ನಾವು ಈಶಾವಾಸ್ಯಪ್ರಕರಣಕ್ಕೆ ಸೂರ್ಯನೆಂಬ ಅರ್ಥವನ್ನು ಗ್ರಹಿಸಿದರೆ 'ವಾಜಸನಿ' - ಅನ್ನದಾತ ಎಂಬುದೂ ಅನುಕೂಲವಾದ ಅರ್ಥವೆನಿಸುವುದು. ಸೂರ್ಯನಿಂದ ಜಗತ್ತಿನಲ್ಲಿ ಆಹಾರ ಪದಾರ್ಥಗಳು ಹುಟ್ಟುವುವು. ಸೂರ್ಯನೇ ವಾಜಸನಿ. ಅವನ ಉಪದೇಶದಿಂದ ಬಂದ ವೇದವೇ ಈಶಾವಾಸ್ಯವಿರುವ 'ವಾಜಸನೇಯ ಶಾಖೆ' ಎಂಬ ವಿಚಾರಕ್ಕೆ ಇದು ಸೂಚಕವಾಗಬಲ್ಲದು.
2. 'ಅಮೃತಂ' 'ಓಂ' ಎಂಬ ವಿಚಾರದಲ್ಲೂ 'ಅಮೃತಂ ಅಶ್ನುತೇ' ಎಂಬ ವಿಚಾರದಲ್ಲೂ ಉಪಯುಕ್ತ.
3. 'ಅಮೃತಂ' 'ಅಶ್ನುತೇ' 'ಕಲ್ಯಾಣತಮಂ ರೂಪಂ' ಎಂಬ ವಿಚಾರಗಳಿಗೆ ಉಪಯುಕ್ತ.
4. ಅಪ್ರಮೇಯಾತ್ಮಾ ೨೫೦ ರ ಟಿಪ್ಪಣಿಯನ್ನು ಇಲ್ಲಿಯೂ ಉಪಯೋಗಿಸಿರಿ.
5. ಇಲ್ಲಿಯೂ ಅಪ್ರಮೇಯಾತ್ಮಾ ೨೫೦ ರ ಟಿಪ್ಪಣಿಯನ್ನು ಉಪಯೋಗಿಸಿಕೊಳ್ಳಬೇಕು.
6. ಈಶಾ. ೧೫ಕ್ಕೆ ಉಪಯುಕ್ತ.
7. 'ಏಕರ್ಷೇ' ಮತ್ತು 'ಈಶಾವಾಸ್ಯಂ'ಗಳಿಗೆ ಉಪಯುಕ್ತ. 'ಆತ್ಮಾವಾಸ್ಯಂ' ಎಂಬ ಭಾಗವತ ೮.೧.೧೦ ಗಮನಿಸಿ.

# ಭಗವದ್ರಾಮಾನುಜರ ಗ್ರಂಥಗಳಲ್ಲಿ ಉಪಯುಕ್ತ ವಿಚಾರಗಳು

## 1. ವೇದಾರ್ಥಸಂಗ್ರಹ

೧

ಸ್ವಚ್ಛವಾದ ಪ್ರತ್ಯಕ್ಷಸಮಾನಾಕಾರವಾದ ಅನುಧ್ಯಾನರೂಪವಾದ ಭಕ್ತಿಯೊಂದರಿಂದಲೇ ಪರಮಾತ್ಮನನ್ನು ಪಡೆಯಲು ಸಾಧ್ಯ. ಈ ವಿಚಾರವನ್ನು ನಮ್ಮ ಗುರುಗಳಿಗೂ ಗುರುಗಳಾದ ಭಗವದ್ಯಾಮುನಾಚಾರ್ಯರು "ಉಭಯಪರಿಕರ್ಮಿತಸ್ವಾಂತಸ್ಯ ಐಕಾನ್ತಿಕಭಕ್ತಿಯೋಗಲಭ್ಯಃ[2] ಎಂದು ಸ್ಪಷ್ಟಪಡಿಸಿರುವರು.

"ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ.

ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ." ಈಶಾ. ೧೧.

ಎಂಬ ಉಪನಿಷತ್ ವಚನವೂ ಹೀಗೆಯೇ ಇದೆ. ಈ ವಚನವಲ್ಲಿ ಅವಿದ್ಯೆಯೆಂದರೆ ವಿದ್ಯೆಯಲ್ಲದ ವರ್ಣಾಶ್ರಮಾದಿ ಕರ್ತವ್ಯಕರ್ಮಗಳು. ವಿದ್ಯೆಯೆಂದರೆ ಭಕ್ತಿರೂಪವಾದ ಧ್ಯಾನ.

---

1. ಭಗವದ್ರಾಮಾನುಜಾಚಾರ್ಯರು ಕ್ರಿ. ಶ. ೧೧-೧೨ ನೆಯ ಶತಮಾನಗಳಲ್ಲಿದ್ದು ವೇದಾಂತದಲ್ಲೂ, ಸಮಾಜದಲ್ಲೂ ಕ್ರಾಂತಿಕಾರಕ ವಿಚಾರಗಳನ್ನೂ ಮಂಡಿಸಿದ ಮಹನೀಯರು. ಇವರ ಮುಖ್ಯ ವಿಚಾರ ಉಪಾಸನೆ-ಭಕ್ತಿ, ಕರ್ಮಜ್ಞಾನಗಳ ಸಮನ್ವಯ, ಉಭಯ ಮೀಮಾಂಸೆಗಳ ಸಮನ್ವಯ, ದ್ವೈತಾದ್ವೈತಗಳ ಸಮನ್ವಯ, ಸಗುಣ ನಿರ್ಗುಣಗಳ ಸಮನ್ವಯ, ಏಕದೇವತಾ ಬಹುದೇವತಾವಾದಗಳ ಸಮನ್ವಯ, ಸಾಮಾನ್ಯ ಮತ್ತು ವಿಶಿಷ್ಟ ವ್ಯಕ್ತಿಗಳ ಹೃದಯ ಸಮನ್ವಯ ಈ ಮೊದಲಾದ ಅನೇಕ ಸಮನ್ವಯಗಳಿಗೆ ಅವರು ಮೂಲಾಧಾರವಾಗಿ ಇಟ್ಟ ವಿಚಾರ ಭಕ್ತಿ.

ಭಕ್ತಿಯ ಮುಖ್ಯಸೂತ್ರ ಶೇಷಶೇಷಿಭಾವ. ಇದು ವೈದಿಕ ಉಭಯ ಮೀಮಾಂಸೆಗಳಲ್ಲಿರುವ ಸಮಾನಾಂಶ. ಇದನ್ನು ಉಪಾಸನರೂಪ ಯಜ್ಞಪರವಾದ ವಿದ್ಯಾವಿದ್ಯೆಗಳ ವಿಚಾರದಲ್ಲಿ ಅಂಗಾಂಗಿಭಾವದಿಂದಲೂ, ಪರಮಾತ್ಮ ಮತ್ತು ಜಗತ್ ವಿಚಾರದಲ್ಲಿ ಶರೀರಾತ್ಮಭಾವದಿಂದಲೂ ಸಮರ್ಥಿಸಿ ನಿಲ್ಲಿಸಿದವರು ಭಗವದ್ರಾಮಾನುಜರು. ಈ ಮಹತ್ವದ ವಿಚಾರವು 'ಈಶಾವಾಸ್ಯ' ವೆಂಬ ಉಪಾಸನರೂಪವಾದ ವಿದ್ಯೆಗೂ ಅತ್ಯಾವಶ್ಯ. ಈ ದೃಷ್ಟಿಯಿಂದ ಅವರ ಪ್ರಸಿದ್ಧವಾದ ಒಂಭತ್ತು ಗ್ರಂಥಗಳೂ ಈಶಾವಾಸ್ಯದ ಅಧ್ಯಯನಕ್ಕೆ ಬಹಳ ಉಪಯುಕ್ತವಾಗಿವೆ.

ಪ್ರಕೃತ ರಾಮಾನುಜರ ಉಪನಿಷತ್‌ಸಮನ್ವಯ ವ್ಯಾಖ್ಯಾನರೂಪವಾದ ವೇದಾರ್ಥಸಂಗ್ರಹವನ್ನು, ನಂತರ ಗೀತಾಭಾಷ್ಯವನ್ನೂ ಮೊದಲು ಉಪಯೋಗಿಸಿಕೊಳ್ಳುವೆವು. ನಂತರ ಬ್ರಹ್ಮಸೂತ್ರದ ವಿವರಣೆಗಳಾದ ಶ್ರೀಭಾಷ್ಯ, ದೀಪ, ಸಾರ ಎಂಬ ಮೂರು ಗ್ರಂಥಗಳನ್ನು ಸಂಕ್ಷಿಪ್ತತೆಯ ಕ್ರಮದಿಂದ ಉಪಯೋಗಿಸಿಕೊಳ್ಳುವೆವು. ಗದ್ಯತ್ರಯವೂ ನಿತ್ಯಗ್ರಂಥವೂ ಉಪಾಸನೆಯ ಆಚರಣಾಕ್ರಮಗಳ ಕೈಪಿಡಿಯಂತಿರುವುದರಿಂದ ಈಶಾವಾಸ್ಯದ ಬಗ್ಗೆ ಅವುಗಳಿಂದ ಆಗುವ ಕೆಲವು ಸಹಾಯಗಳನ್ನು ಸೂಚಿಸಲಾಗುವುದು.

ಬ್ರಹ್ಮಸೂತ್ರ ಮತ್ತು ಗೀತೆಗಳ ಅಭ್ಯಾಸ ಯಾವುದೇ ಉಪನಿಷತ್ತಿನ ಅರ್ಥನಿರ್ಣಯಕ್ಕೂ ಅತ್ಯಾವಶ್ಯ. ಅವುಗಳ ಅಭ್ಯಾಸ ಮಾಡುವಾಗ ಭಗವದ್ರಾಮಾನುಜರಭಾಷ್ಯ, ಶ್ರುತಪ್ರಕಾಶಿಕೆ, ತಾತ್ಪರ್ಯಚಂದ್ರಿಕೆಗಳನ್ನು ಅಧ್ಯಯನ ಮಾಡುವುದು ಅತ್ಯಾವಶ್ಯಕ. ಈಗ ರಾಮಾನುಜರ ಗ್ರಂಥಗಳಲ್ಲಿ ಕೆಲವು ಮುಖ್ಯ ಭಾಗಗಳನ್ನು ಮಾತ್ರ ಇಲ್ಲಿ ಆರಿಸಿ ಕೊಡಲಾಗುವುದು.

2. ಸಿದ್ಧಿತ್ರಯ, ಆತ್ಮಸಿದ್ಧಿ, ಪುಟ. ೧೪. ವೃಂದಾವನ ಪ್ರಕಾಶನ. ಎರಡನೇ ಆವೃತ್ತಿ.

"ಇಯಾಜ ಸೋಽಪಿ ಸುಬಹೂನ್ ಯಜ್ಞಾನ್ ಜ್ಞಾನವ್ಯಪಾಶ್ರಯಃ.
ಬ್ರಹ್ಮವಿದ್ಯಾಮಧಿಷ್ಠಾಯ ತರ್ತುಂ ಮೃತ್ಯುಮವಿದ್ಯಯಾ।"

ಎಂಬ ವಿಷ್ಣುಪುರಾಣವಚನವು ಈ ವಿಷಯವನ್ನು ವಿವರಿಸಿ ಪೋಷಿಸುತ್ತದೆ. ಆತ್ಮಜ್ಞಾನಪೂರ್ವಕವಾಗಿ ವರ್ಣಾಶ್ರಮಾಚಾರರೂಪವಾದ ಸ್ವಕರ್ಮಗಳನ್ನು ನಿಷ್ಕಾಮವಾಗಿ ನೆರವೇರಿಸುತ್ತಾ, ಇಂತಹ ಕರ್ಮಗಳ ಜೊತೆಗಿರುವ, ಹಿಂದೆ ತಿಳಿಸಿದ ಪರಿಪಕ್ವವಾದ ಭಕ್ತಿಯಿಂದ ಪರಮಾತ್ಮನನ್ನು ಪಡೆಯಬಹುದೆಂದು ಪರಾಶರಮಹರ್ಷಿಗಳು ಸಾರಿ ಹೇಳಿರುವರು.[2] "ಪರಮಾತ್ಮವಿದ್ಯೆಯ ಈ ದಾರಿ ಬಿಟ್ಟು ಬೇರೆ ದಾರಿ ಇಲ್ಲ,"[3] ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನು ಪಡೆಯುವನು",[4] "ಬ್ರಹ್ಮನನ್ನು ಚೆನ್ನಾಗಿ ಧ್ಯಾನಿಸಬೇಕು,"[5] ಬ್ರಹ್ಮವು ನಮ್ಮನ್ನು ಪ್ರೀತಿಸಿ ವರಿಸುವಂತೆ ಆಗಬೇಕು, ಅದಕ್ಕೆ ತಕ್ಕ ರೀತಿಯಲ್ಲಿ ಪ್ರೀತಿಯಿಂದ ನಾವೂ ನಡೆದುಕೊಳ್ಳಬೇಕು."[6] ಎಂಬರ್ಥದಲ್ಲಿರುವ ಇವೇ ಮುಂತಾದ ಅನೇಕ ವಚನಗಳು "ಜ್ಞಾನವೆಂದರೆ ಧ್ಯಾನ, ಧ್ಯಾನವೆಂದರೆ ಭಕ್ತಿ"[7] ಎಂದು ತಿಳಿಸುತ್ತವೆ. ಈ ಭಕ್ತಿಯೂ ಸಹ ಉತ್ತಮವಾದ ಭಕ್ತಿಯಾಗಬೇಕು. ಅದೇ ವಿದ್ಯೆ. ಅದೊಂದೇ ಪರಮಾತ್ಮ ಪ್ರಾಪ್ತಿಗೆ ನೇರವಾದ ಉಪಾಯ.

೨

ತತ್ವಜ್ಞಾನಪೂರ್ವಕವಾಗಿ ಕರ್ಮಗಳನ್ನು ನಿಷ್ಕಾಮವಾಗಿ ಆಚರಿಸುವುದೇ ಉತ್ತಮಮಾರ್ಗ ಎಂದೂ, ಹೀಗೆ ಆಚರಿಸದವರು ಅಸುರರೆಂದೂ ಅವರಿಗೆ ಅಜ್ಞಾನ ಮತ್ತು ನರಕಸದೃಶವಾದ ಕಷ್ಟಗಳು ಉಂಟೆಂದೂ, ಉಪಾಸನಾಂಗವಾಗಿ ಮಾಡುವ ದಿನನಿತ್ಯದ ಯಾವುದೇ ಶಾಸ್ತ್ರೀಯ ಕರ್ಮಗಳಿಂದಲೂ ಯಾವ ತೊಂದರೆ ಇಲ್ಲದೆ ಪರಮಾತ್ಮನನ್ನು ಪಡೆಯಬಹುದೆಂದೂ ಗೀತೆಯಲ್ಲಿ ತಿಳಿಸಲಾಗಿದೆ.[8]

೩

ನಾವು ಧ್ಯಾನಿಸುವ ಪರಮಾತ್ಮನಿಗೆ ಇರುವ "ಕಲ್ಯಾಣತಮರೂಪ" ಎಂತಹುದೆಂಬುದನ್ನು ಬ್ರಹ್ಮಸೂತ್ರಗಳಲ್ಲೇ 'ಅಂತಸ್ತದ್ಧರ್ಮೋಪದೇಶಾತ್' ಎಂದು ಮಹರ್ಷಿವ್ಯಾಸರು ತಿಳಿಸಿರುವರು. 'ಹಿರಣ್ಮಯ ಪುರುಷಾಕಾರವಾದ ಪರಮಾತ್ಮರೂಪವು ಉಪಾಸಕರ ಅನುಗ್ರಹಾರ್ಥವಾಗಿ ಪರಮಾತ್ಮನ ಸಂಕಲ್ಪದಿಂದ ಸಿದ್ಧವಾದುದು.

---

1. ಈಶಾ. ಪುಟ. ೯೮ ರಿಂದ ೧೦೬ ರವರೆಗೆ ನೋಡಿ.
2. ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್.
   ವಿಷ್ಣುರಾರಾಧ್ಯತೇ ಪಂಥಾಃ ನಾನ್ಯಸ್ತತ್ತೋಷಕಾರಕಃ. ವಿ. ಪು. ೩. ೮. ೯.
3. ನಾನ್ಯಃ ಪಂಥಾ ವಿದ್ಯತೇಽಯನಾಯ. ಪು. ಸೂ.
4. ಬ್ರಹ್ಮ ವೇದ ಬ್ರಹ್ಮೈವ ಭವತಿ. ಮುಂ. ೩. ೨. ೯.
5. ನಿದಿಧ್ಯಾಸಿತವ್ಯಃ. ಬೃ. ೬. ೫. ೬.
6. ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್. ಮುಂ. ೩. ೨. ೩. ಕಠ. ೨. ೨೩.
7. ವೇದನಂ ಧ್ಯಾನವಿಶ್ರಾಂತಂ ಧ್ಯಾನಂ ಶ್ರಾಂತಂ ಧ್ರುವಾಸ್ಮೃತೌ.
   ಸಾ ಚ ದೃಷ್ಟಿತ್ವಮಭ್ಯೇತಿ ದೃಷ್ಟಿಃ ಪ್ರೀತಿತ್ವಮೃಚ್ಛತಿ.
8. 'ನಿಯತಂ ಕುರು ಕರ್ಮ ತ್ವಂ' ಗೀ. ೩-೮, ಅಶಾಸ್ತ್ರಮಾಸುರಂ ಕೃತ್ಸ್ನಂ. ಗೀ. ಸಾ. 'ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' ಗೀ. ೩. ೨೦. ಈ ವಿಚಾರ ಈಶಾ. ೩, ೪. ಮಂತ್ರಗಳ ತಾತ್ಪರ್ಯವಿವರಣೆಯಾಗಿದೆ ಎಂಬುದನ್ನೂ ಗಮನಿಸಿ.

ಪರಮಾತ್ಮನ ಸ್ವರೂಪದಂತೆ ಇದೂ ಶಾಶ್ವತವಾದುದು, ಕೃತಕವಲ್ಲ'[1] ಎಂದು ವಾಕ್ಯಕಾರರಾದ ಬ್ರಹ್ಮನಂದಿ ಮುನಿಯು ತಿಳಿಸಿರುವರು. 'ಪರಿಶುದ್ಧ ಮನಸ್ಸಿಗೆ ಮಾತ್ರ ಕಾಣುವ ಪರಮಾತ್ಮನ ದಿವ್ಯರೂಪವು ಕೃತಕವಲ್ಲ. ವೇದಶಾಸ್ತ್ರಗಳೂ ಸಹ ಇರುವ ವಿಚಾರವನ್ನು ಇರುವಂತೆ ಹೇಳುತ್ತವೆಯೇ ಹೊರತು ಸುಳ್ಳು ಹೇಳುವುದಿಲ್ಲ'[2]. ಎಂದು ದ್ರಮಿಡಭಾಷ್ಯಕಾರರೂ ತಿಳಿಸಿರುವರು. ಇಂತಹ ಒಂದು ಸಾಮಾನ್ಯರೂಪವನ್ನು ವಿವಿಧ ಶ್ರುತಿವಚನಾಗಮೋಪಬೃಂಹಣಗಳ ಸಹಾಯದಿಂದ ಸೌಕರ್ಯಕ್ಕಾಗಿ ಒಂದೆಡೆ ಹೀಗೆ ಸ್ಪಷ್ಟಪಡಿಸಬಹುದು.[3]

"ಯೋಽಸಾವಾದಿತ್ಯಮಣ್ಡಲಾನ್ತರ್ವರ್ತೀ, ತಪ್ತಕಾರ್ತಸ್ವರಗಿರಿವರಪ್ರಭಃ, ಸಹಸ್ರಾಂಶುಶತಸಹಸ್ರಕಿರಣಃ, ಗಮ್ಭೀರಾಮ್ಭಸ್ಸಮುದ್ಭೂತ ಸುಮೃಷ್ಟನಾಳ ರವಿಕರವಿಕಸಿತ ಪುಣ್ಡರೀಕದಳಾಽಮಲಾಽಯತೇಕ್ಷಣಃ, ಸುಭ್ರೂಲಲಾಟಃ, ಸುನಾಸಃ, ಸುಸ್ಮಿತಾಧರವಿದ್ರುಮಃ, ಸುರುಚಿರಕೋಮಲಗಣ್ಡಃ, ಕಮ್ಬುಗ್ರೀವಃ, ಸಮುನ್ನತಾಂಸವಿಳಂಬಿ ಚಾರುರೂಪ ದಿವ್ಯಕರ್ಣಕಿಸಲಯಃ, ಪೀನವೃತ್ತಾಽಯತಭುಜಃ, ಚಾರುತರಾತಾಮ್ರಕರತಲಾನುರಕ್ತಾಙ್ಗುಲೀಭಿರಲಂಕೃತಃ, ತನುಮಧ್ಯಃ, ವಿಶಾಲವಕ್ಷಸ್ಸ್ಥಳಃ, ಸಮವಿಭಕ್ತಸರ್ವಾಂಗಃ, ಅನಿರ್ದೇಶ್ಯದಿವ್ಯರೂಪಸಂಹನನಃ, ಸ್ನಿಗ್ಧವರ್ಣಃ, ಪ್ರಬುದ್ಧಪುಣ್ಡರೀಕಚಾರುಚರಣಯುಗಳಃ, ಸ್ವಾನುರೂಪ ಪೀತಾಂಬರಧರಃ, ಅಮಲ ಕಿರೀಟ ಕುಂಡಲಹಾರ ಕೌಸ್ತುಭ ಕೇಯೂರ ಕಟಕನೂಪುರೋದರಬನ್ಧನಾದ್ಯಪರಿಮಿತಾಶ್ಚರ್ಯಾನಂತ ದಿವ್ಯಭೂಷಣಃ, ಶಂಖಚಕ್ರಗದಾಽಸಿಶಾರ್ಙ್ಗಶ್ರೀವತ್ಸವನಮಾಲಾಲಂಕೃತಃ, ಅನವಧಿಕಾತಿಶಯ ಸೌಂದರ್ಯಾಹೃತಾಶೇಷಮನೋದೃಷ್ಟಿವೃತ್ತಿಃ, ಲಾವಣ್ಯಾಮೃತಪೂರಿತಾಶೇಷಚರಾಚರಭೂತಜಾತಃ, ಅತ್ಯದ್ಭುತಾಚಿಂತ್ಯ ನಿತ್ಯಯೌವನಃ, ಪುಷ್ಪಹಾಸಸುಕುಮಾರಃ, ಪುಣ್ಯಗಂಧವಾಸಿತಾನನ್ತದಿಗಂತರಾಳಃ, ತ್ರೈಲೋಕ್ಯಾಕ್ರಮಣ ಪ್ರವೃತ್ತಗಂಭೀರಭಾವಃ, ಕರುಣಾನುರಾಗಮಧುರಲೋಚನಾವಲೋಕಿತಾಶ್ರಿತವರ್ಗಃ, ಪುರುಷವರೋ ದೃಶ್ಯತೇ, ಸಚ, ನಿಖಿಲಜಗದುದಯವಿಭವಲಯಲೀಲಃ, ನಿರಸ್ತಸಮಸ್ತಹೇಯಃ, ಸಮಸ್ತಕಲ್ಯಾಣಗುಣನಿಧಿಃ, ಸ್ವೇತರಸಮಸ್ತವಸ್ತುವಿಲಕ್ಷಣಃ, ಪರಮಾತ್ಮಾ, ಪರಂ ಬ್ರಹ್ಮ, ನಾರಾಯಣಃ," "ಸ ಏಷ ಸರ್ವೇಷಾಂ ಲೋಕಾನಾಮೀಶಸ್ಸರ್ವೇಷಾಂ ಕಾಮಾನಾಂ," "ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಸ್ಸತ್ಯಕಾಮಸ್ಸತ್ಯಸಂಕಲ್ಪಃ."

೪

"ಸರ್ವಗತ್ವಾದನಂತಸ್ಯ ಸ ಏವಾಹಮವಸ್ಥಿತಃ।
ಮತ್ತಸ್ಸರ್ವಮಹಂ ಸರ್ವಂ ಮಯಿ ಸರ್ವಂ ಸನಾತನೇ." ವಿ. ಪು. ೧. ೧೯. ೮೫.

ಎಂಬ ಭಕ್ತಪ್ರಹ್ಲಾದನ ವಚನವು "ಪರಮಾತ್ಮನು ನನ್ನ ಮತ್ತು ನಮ್ಮೆಲ್ಲರ ಆತ್ಮಗಳಿಗೂ ಪರಮನಾದ ಆತ್ಮನಾದುದರಿಂದ ಆತನ ಶರೀರವೆನಿಸುವ ನಾನೂ ಎಲ್ಲವೂ ಒಂದೇ. ಎಲ್ಲೆಲ್ಲೂ ಪರಮಾತ್ಮನು ಒಂದೇ ರೀತಿ

---

1. 'ಹಿರಣ್ಮಯಃ ಪುರುಷೋ ದೃಶ್ಯತೇ ಇತಿ ಪ್ರಾಜ್ಞಃ ಸರ್ವಾಂತರಃ ಸ್ಯಾತ್, ಲೋಕಕಾಮೇಶೋಪದೇಶಾತ್, ತಥೋದಯಾತ್ ಪಾಪ್ಮನಾಮ್'. 'ರೂಪಂ ವಾ ಅತೀಂದ್ರಿಯಂ, ಅನ್ತಃಕರಣಪ್ರತ್ಯಕ್ಷನಿರ್ದೇಶಾತ್'.

2. ಅಂಜಸ್ಯೈವ ವಿಶ್ವಸೃಜೋ ರೂಪಂ, ತತ್ತು ನ ಚಕ್ಷುಷಾ ಗ್ರಾಹ್ಯಂ, ಮನಸಾತ್ವಕಲುಷೇಣ ಸಾಧನಾಂತರವತಾ ಗೃಹ್ಯತೇ, 'ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ, ಮನಸಾ ತು ವಿಶುದ್ಧೇನ, ಇತಿ ಶ್ರುತೇಃ, ನಹ್ಯರೂಪಾಯಾಃ ದೇವತಾಯಾಃ ರೂಪಂ ಉಪದಿಶ್ಯತೇ, ಯಥಾಭೂತವಾದಿ ಹಿ ಶಾಸ್ತ್ರಂ, 'ಮಾಹಾರಜನಂ ವಾಸಃ' ವೇದಾಹಮೇತಂ ಪುರುಷಂ ಮಹಾಂತಂ, ಆದಿತ್ಯವರ್ಣಂ ತಮಸಃ ಪರಸ್ತಾತ್' ಇತಿ ಪ್ರಕರಣಾಂತರ ನಿರ್ದೇಶಾಚ್ಚ ಸಾಕ್ಷಿಣಃ.

3. ಈಶಾ. ೧೬. "ಯತ್ತೇ ರೂಪಂ ಕಲ್ಯಾಣತಮಂ, ಯೋಽಸಾವಸೌ" ಎಂಬ ವಿವರಣೆಗೆ ಅತ್ಯವಶ್ಯಕ.

ವ್ಯಾಪಿಸಿರುವುದರಿಂದ ಪರಮಾತ್ಮನಿಲ್ಲದ ನಾನು ಎಂಬುದಿಲ್ಲ. ಹೀಗೆ ಈ ದೃಷ್ಟಿಯಿಂದ ಪರಮಾತ್ಮನೇ ನಾನು ಎಂದು ಭಾವಿಸುವೆನು" ಎಂಬ ಅರ್ಥದಲ್ಲಿದೆ.[1] ಹೀಗೆ ಪರಮಾತ್ಮನನ್ನು 'ಅಹಂ' ಎಂಬುದಾಗಿ ಉಪಾಸನೆ ಮಾಡಬೇಕೆಂದು ಬ್ರಹ್ಮಸೂತ್ರಕಾರರೂ ವಾಕ್ಯಕಾರರೂ ಸ್ಪಷ್ಟಪಡಿಸಿರುವರು.[2]

೫

'ಮಯಾ ತತಮಿದಂ ಸರ್ವಂ' ಎಂಬ ಗೀತಾವಚನಕ್ಕೆ "ಪರಮಾತ್ಮನು ಸಂಕಲ್ಪಮಾತ್ರದಿಂದಲೇ ತನ್ನ ಸೂಕ್ಷ್ಮಾಂಶದಿಂದ ಎಲ್ಲದರೊಳಗೂ ವ್ಯಾಪಿಸಿ ಆಶ್ಚರ್ಯಕರನಾಗಿರುವನು" ಎಂಬುದು ಅರ್ಥ.[3]

೬

ಸರ್ವಶಾಸ್ತ್ರಸಾರಾರ್ಥವೇ "ಶರಣಾಗತಿ". ಅದಿಲ್ಲದೆ ಕರ್ಮವೆಂಬ ಅವಿದ್ಯೆಯಿಂದ ಬಿಡುಗಡೆಯಾಗದು, ಜ್ಞಾನವು ಹುಟ್ಟದು, ಸಂಸಾರಬಂಧವು ಹೋಗದು. ಪರಮಾತ್ಮನ ಉಪಾಸನೆಯನ್ನು ಸಾಂಗವಾಗಿ ನೆರವೇರಿಸಲು ಅವನ ಸ್ವಾಮಿತ್ವವನ್ನೂ ನಮ್ಮ ದಾಸತ್ವವನ್ನೂ ತಿಳಿದು ಶರಣಾಗತಿಯಿಂದ ಅವನನ್ನು ಆಶ್ರಯಿಸಲೇ ಬೇಕು. ಇದೇ ವಿದ್ಯೆಯೆಂಬ ಉಪಾಸನೆಗೆ ಬೇಕಾದ ರಹಸ್ಯ.[4]

೭

ಪರಮಾತ್ಮನನ್ನು ಯಥಾರ್ಥವಾಗಿ ತಿಳಿದು ಅವನ ಆರಾಧನ ರೂಪವಾದ ಉಪಾಸನೆ ಮುಂತಾದ ಶಾಸ್ತ್ರೀಯ ಕರ್ಮಗಳನ್ನು ಮಾಡುತ್ತಾ ಅವನ ಅನುಗ್ರಹದಿಂದ ಅವನನ್ನು ಪಡೆಯುವವರೆಗಿನ ವಿವಿಧ ಸುಖಗಳನ್ನೂ ಅವರವರ ಹಕ್ಕುಹೊಣೆಗಳಿಗೆ ತಕ್ಕಂತೆ ಪಡೆಯಬಹುದು. ಇಂತಹ ಕರ್ಮಗಳನ್ನು ಮಾಡದೆ ಇರುವವರೂ ಕೆಟ್ಟ ಕೆಲಸ

---

1. ಈ ವಿವರಣೆ 'ಯಸ್ತು ಸರ್ವಾಣಿ' ಎಂಬ ಮಂತ್ರದ ವಿವರಣೆಗೆ ಅತ್ಯವಶ್ಯಕ.
2. 'ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ' ಬ್ರ. ಸೂ. ೪. ೧. ೩. 'ಆತ್ಮೇತ್ಯೇವ ತು ಗೃಹ್ಣೀಯಾತ್ ಸರ್ವಸ್ಯ ತನ್ನಿಷ್ಪತ್ತೇಃ" ಬೋಧಾಯನವೃತ್ತಿ.
3. ಇದು 'ಈಶಾವಾಸ್ಯಮಿದಂ ಸರ್ವಂ' ಗೆ ಸಮಾನಾಕಾರವಾದ ವಚನವಾಗಿದೆ. ಈಶಾ. ೪ನೇ ಮಂತ್ರದ ವಿವರಣೆಗೂ ಅತ್ಯವಶ್ಯಕ.
4. ಇದೇ ಅರ್ಥದ ವಚನಗಳು ಈಶಾವಾಸ್ಯದ ಕೊನೆಯ ಎರಡು ಮಂತ್ರಗಳೂ ಶರಣಾಗತಿಮಂತ್ರಗಳೆಂಬ ವ್ಯಾಖ್ಯಾನಕಾರರ ವಚನಗಳಿಗೆ ಆಧಾರಗಳಾಗಿವೆ ಎಂಬುದನ್ನೂ ಗಮನಿಸಿರಿ. ಇಂತಹ ವಚನಗಳ ಸಾರಾರ್ಥಗಳೆಲ್ಲವೂ ವೇದಾರ್ಥಸಂಗ್ರಹದ ಮೊದಲನೇ ವಾಕ್ಯದಲ್ಲೇ ಇರುವುದನ್ನು, ಉಪಾಸನರೂಪವಾದ ಧ್ಯಾನದಲ್ಲಿ ದೇವರ ಪೂಜೆ ನಮಸ್ಕಾರಗಳು ದೇವರಿಗೆ ಬಹಳ ಇಷ್ಟವಾದ ಅಂಶಗಳು ಎಂದು ತಿಳಿಸಿರುವುದನ್ನೂ ಗಮನಿಸಿರಿ. ಈಶಾ. ೧೮. 'ನಮಉಕ್ತಿಂ ವಿಧೇಮ' ಹೋಲಿಸಿರಿ.

ಗಳನ್ನು ಮಾಡುವವರೂ ಪರಮಾತ್ಮನ ನಿಗ್ರಹಕ್ಕೆ ಪಾತ್ರರಾಗಿ ಅವನನ್ನೂ ಪಡೆಯದೆ ಬಹಳ ಕಷ್ಟಪಡುವರು. ಈ ವಿಷಯವೆಲ್ಲವನ್ನೂ ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.[1]

## 2. ಗೀತಾಭಾಷ್ಯ[2]

### ೧

ಲಕ್ಷ್ಮೀಪತಿಯಾದ ಪರಮಾತ್ಮನು (ನಾರಾಯಣ)ತನ್ನ ದಿವ್ಯರೂಪದಿಂದ ಎಲ್ಲರಿಗೂ ಕಾಣಿಸುವಂತೆ ಕೃಷ್ಣನಾಗಿ ಈ ಭೂಲೋಕದಲ್ಲಿ ಅವತರಿಸಿ ತನ್ನ ಸೌಂದರ್ಯ ಸೌಶೀಲ್ಯಾದಿಗಳಿಂದ ಅಕ್ರೂರ[3] ಮಾಲಾಕಾರ[4] ಮುಂತಾದವರನ್ನು ಉತ್ತಮ ಭಕ್ತರನ್ನಾಗಿಸಿ, ಅರ್ಜುನನಿಗೆ ಯುದ್ಧಮಾಡಲು ಪ್ರೋತ್ಸಾಹಿಸುವ ನೆಪದಿಂದ ಪರಮಪುರುಷಾರ್ಥವೆನಿಸಿದ ಮೋಕ್ಷಕ್ಕೆ ಮುಖ್ಯಸಾಧನವಾಗಿ, ವೇದಾಂತಗಳೆನಿಸಿದ ಉಪನಿಷತ್ತುಗಳಲ್ಲಿ ಹೇಳಿರುವ ಜ್ಞಾನ ಕರ್ಮಗಳಿಂದ ಪರಿಪುಷ್ಟವಾದ ಭಕ್ತಿಯೋಗವನ್ನು ಸುಲಭರೂಪದಲ್ಲಿ ತನ್ನ ವಚನಗಳಿಂದ ತಿಳಿಸಿದನು. ಈ ವಚನಗಳೇ ಭಗವದ್ಗೀತೆ.[5] (ಗೀ. ಭಾ. ಅವತಾರಿಕೆ.)

---

1. ಈಶಾ. ೧, ೨, ೩, ೯, ೧೨, ೧೫. ಗಮನಿಸಿ.
   'ನಿಯತಂ ಕುರು ಕರ್ಮ ತ್ವಂ' ಗೀ. ೩. ೮.
   'ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯ' ಗೀ. ೩. ೩೦.
   ಯೇ ಮೇ ಮತಮಿದಂ ನಿತ್ಯಂ ಅನುತಿಷ್ಠಂತಿ ಮಾನವಾಃ.
   ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ.
   ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್.
   ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ. ಗೀ. ೩. ೩೨.
   ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್.
   ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು.
   ಆಸುರೀಂ ಯೋನಿಮಾಪನ್ನಾಃ ಮೂಢಾ ಜನ್ಮನಿ ಜನ್ಮನಿ.
   ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾನ್ತ್ಯಧಮಾಂ ಗತಿಮ್. ಗೀ. ೧೬. ೨೦.
   'ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ.
   ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್'. ಗೀ. ೧೮. ೫೬.
2. ಗೀತೆಯು ಎಲ್ಲ ಉಪನಿಷತ್ತುಗಳ ಸಾರವೂ ಪರಿಪೋಷಕವೂ ಆಗಿದೆ. ಇದರ ಅಧ್ಯಯನ ಉಪನಿಷತ್ ಅಧ್ಯಯನಕ್ಕೆ ಅತ್ಯವಶ್ಯಕ. ಇದನ್ನು ಅಧ್ಯಯನ ಮಾಡುವಾಗ ಇದರ ಭಾಷ್ಯ ಟೀಕೆಗಳೆಲ್ಲವನ್ನೂ ಅಧ್ಯಯನಮಾಡುವುದೂ ಅತ್ಯವಶ್ಯಕ. ಈಶಾವಾಸ್ಯದ ಬಗ್ಗೆ ಉಪಯುಕ್ತ ಗೀತಾಭಾಷ್ಯ ವಿಚಾರಗಳನ್ನೂ ಇಲ್ಲಿ ಕೊಡಲಾಗುವುದು.
3. ಕೃಷ್ಣನ ಬಂಧು ಮತ್ತು ಭಕ್ತ. ಕಂಸನ ಬಳಿ ಕೆಲಸದಲ್ಲಿದ್ದವನು.
4. ಮಧುರಾ ನಗರದ ಒಬ್ಬ ಹೂವಾಡಿಗ, ಕೃಷ್ಣನ ಭಕ್ತ.
5. ಈಶಾವಾಸ್ಯದ ಈಶನೇ ಕೃಷ್ಣನೆಂಬುದೂ, ವಿದ್ಯಾವಿದ್ಯೆಗಳ ಅಂಗಾಂಗಿಭಾವವೇ ಉಪಾಸನರೂಪವಾದ ವಿದ್ಯೆ (ಭಕ್ತಿ)ಯು ಒಂದು ರಹಸ್ಯವೆಂಬುದೂ ಈ ಮಾತಿನಲ್ಲಿ ಸ್ಪಷ್ಟವಿದೆ. ಈಶಾ. ೧, ೧೧, ೧೬ ಮಂತ್ರಗಳಿಗೆ ಉಪಯುಕ್ತ.

## ೨

ಶಾಸ್ತ್ರೀಯವಾದ ಎಲ್ಲ ಕರ್ಮಗಳನ್ನು ಆತ್ಮಯಾಥಾತ್ಮ್ಯನಿಶ್ಚಯಜ್ಞಾನವಿಟ್ಟುಕೊಂಡು ಆಚರಿಸುವುದೇ ನಿಷ್ಕಾಮಕರ್ಮಯೋಗ. ಮುಮುಕ್ಷುವಿಗೆ ಅವಶ್ಯಕವಾದುದು ಇಂತಹ ಕರ್ಮಯೋಗ.[1] ಗೀ. ಭಾ. ೨. ೪೧.

## ೩

'ನಿತ್ಯ, ನೈಮಿತ್ತಿಕ, ಕಾಮ್ಯ' ಎಂಬ ತ್ರಿವಿಧವಾದ ಶಾಸ್ತ್ರೀಯ ಕರ್ಮಗಳಲ್ಲಿ ಆಯಾ ಕರ್ಮಗಳ ಫಲದ ಒಡೆತನ ಮುಮುಕ್ಷುವಿಗೆ ಇಲ್ಲ. ಕರ್ಮಗಳನ್ನು ಅವಶ್ಯ ಆಚರಿಸುವ ಹೊಣೆ ಮಾತ್ರ ಅವನಿಗಿದೆ. ಹೊಣೆ ಇದ್ದರೂ ಕರ್ತೃತ್ವವನ್ನು ಭಾವಿಸಕೂಡದು. ಹೀಗಿದ್ದರೆ ಕರ್ಮಬಂಧದ ಲೇಪ ಅವನಿಗಾಗದು.[2] ಗೀ. ಭಾ. ೨. ೪೭.

## ೪

ಫಲಸಂಗಕರ್ತೃತ್ವತ್ಯಾಗವೆಂಬುದೇ ಕರ್ಮಾಚರಣೆಯಲ್ಲಿರುವ ಬುದ್ಧಿಕೌಶಲ್ಯ. ಇಂತಹ ಕರ್ಮಗಳಿಂದಲೇ ಮುಕ್ತಿಗೆ ವಿರೋಧಿಗಳಾದ ಪುಣ್ಯಪಾಪಗಳನ್ನು ಜಯಿಸಬಹುದು.[3] ಗೀ. ಭಾ. ೨. ೫೦.

## ೫

ನಿಷ್ಕಾಮಕರ್ಮಾಚರಣೆಯಿಂದ ಭಕ್ತಿಯೋಗದ ಅಂಗವಾಗಿ ಜೀವಾತ್ಮತತ್ತ್ವದ ದರ್ಶನವಾಗುವುದು. ಅನಂತರ ಪರಮಾತ್ಮನ ದರ್ಶನವಾಗುವುದು. ಇದಕ್ಕಾಗಿ ಕರ್ಮಾಚರಣೆಯಕಾಲದಲ್ಲಿ ಜೀವಾತ್ಮನು ನಿತ್ಯನು ಎಂಬ ಜ್ಞಾನವೂ, ಅವನ ಪರಿಶುದ್ಧ ಸ್ವರೂಪವು "ಅಪಹತಪಾಪ್ಮಾ, ವಿಜರಃ, ವಿಮೃತ್ಯುಃ, ವಿಶೋಕಃ, ವಿಜಿಘತ್ಸಃ, ಅಪಿಪಾಸಃ, ಸತ್ಯಕಾಮಃ, ಸತ್ಯಸಂಕಲ್ಪಃ"[4] ಎಂಬ ಎಂಟು ಗುಣಗಳಿಂದ ಕೂಡಿದೆ ಎಂಬ ವಿಚಾರದ ಅನುಸಂಧಾನವೂ ಅತ್ಯವಶ್ಯಕ. ಇದೇ ಆತ್ಮಯಾಥಾತ್ಮ್ಯನಿಶ್ಚಯ.[5] ಗೀ. ಭಾ. ೩. ೧. ಅವತಾರಿಕೆ.

## ೬

ಆತ್ಮಸ್ವರೂಪಜ್ಞಾನಪೂರ್ವಕವಾಗಿ ಕರ್ಮಗಳೆಲ್ಲವನ್ನೂ ಪರಮಾತ್ಮನ ಪೂಜಾರೂಪವಾಗಿ ಅವನಿಗೇ ಒಪ್ಪಿಸಿದರೆ ಆಯಾ ಕರ್ಮಗಳಲ್ಲಿ ನಮಗೆ ಮಮತೆಯೂ ಹೋಗುವುದು. ವಿಶ್ವವೆಲ್ಲದರ ಒಡೆಯ ಪರಮಾತ್ಮ. ಅವನು ನಮಗೂ ಒಡೆಯನಲ್ಲವೆ. ಅವನು ಹೇಳಿ ಮಾಡಿಸುವ ಕರ್ಮಗಳೆಲ್ಲವನ್ನೂ ಅವನದೆಂಬ ನಿಶ್ಚಯಜ್ಞಾನದಿಂದಲೇ ನಾವು ಮಾಡಬೇಕು. ಇದೇ ನಿಷ್ಕಾಮರಹಸ್ಯ.[6] ಗೀ. ಭಾ. ೩. ೩೦.

---

1. 'ಯಸ್ತು ಸರ್ವಾಣಿ', 'ಈಶಾವಾಸ್ಯಂ' ಎಂಬ ವಿಚಾರ ಅನುಭವಗಳು 'ಕುರ್ವನ್ನೇವೇಹ ಕರ್ಮಾಣಿ' ಎಂಬುದಕ್ಕೆ ಅವಶ್ಯಕ ಎನ್ನಲು ಇದು ಉಪಯುಕ್ತ.
2. ಈಶಾ. ೨. ಉಪಯುಕ್ತ. 3. ಈಶಾವಾಸ್ಯದ ಕರ್ಮ, ಅವಿದ್ಯಾ, ಅಸಂಭೂತಿ, ವಿನಾಶಗಳ ವಿಚಾರಕ್ಕೆ ಉಪಯುಕ್ತ.
4. ಛಾಂ. ೮. ೭. ೧.
5. ಈಶಾ. ೨ರಲ್ಲಿ ಈಶಾ. ೧. ೮ ವಿಚಾರಗಳ ಸ್ಪಷ್ಟ ಅನುಸಂಧಾನವೂ ಇತರ ಉಪನಿಷತ್ತುಗಳಲ್ಲಿರುವ ಆತ್ಮಸ್ವರೂಪ ವಚನಗಳ ಸಹಾಯವೂ ಬೇಕು, ಎನ್ನಲು ಅವಶ್ಯಕ.
6. ಈಶಾ. ೧, ೨, ೬, ೭, ೧೧ ಉಪಯುಕ್ತ.

೭

ವೇದಾನ್ತಗಳೆನಿಸಿದ ಉಪನಿಷತ್ತುಗಳಲ್ಲಿ ಉತ್ತಮವಾದ ಒಂದು ರಹಸ್ಯ ಈ ನಿಷ್ಕಾಮಕರ್ಮಯೋಗ. ಇದು ಮನು ಮುಂತಾದ ರಾಜರ್ಷಿಗಳ ಪರಂಪರೆಯಲ್ಲಿ ಪ್ರಾಚೀನವಾಗಿಯೇ ಬರುತ್ತಿದೆ.[1] ಗೀ. ಭಾ. ೪. ೩.

೮

ಅಕರ್ಮ– ಆತ್ಮಯಾಥಾತ್ಮ್ಯಜ್ಞಾನ. ಗೀ. ಭಾ. ೪. ೧೬.

ಅಕರ್ಮ– ಕರ್ಮಕ್ಕಿಂತ ಬೇರೆಯಾಗಿದ್ದು ಕರ್ಮಾಚರಣೆಗೆ ಅತ್ಯವಶ್ಯಕವಾದ ಆ ಆತ್ಮಜ್ಞಾನ. ಗೀ. ಭಾ. ೪. ೧೮.

(ಇದು ಕರ್ಮವಿಚಾರದ ಸಂದರ್ಭ. ಈ ಸಂದರ್ಭದಲ್ಲಿ ಮುಖ್ಯವಾದುದು ಕರ್ಮ. ಅದರ ಜೊತೆಗಿರ ಬೇಕಾದುದನ್ನೇ ಅಕರ್ಮ ಎನ್ನಲಾಗಿದೆ. ಹೀಗೆಯೇ ಈಶಾವಾಸ್ಯವು ವಿದ್ಯಾಸಂದರ್ಭ. ಅಲ್ಲಿ ವಿದ್ಯೆಯ ಜೊತೆ ಗಿರಬೇಕಾದ ಕರ್ಮವನ್ನೇ ಅವಿದ್ಯೆ ಎನ್ನಲಾಗಿದೆ ಎಂಬುದನ್ನು ಇಲ್ಲಿ ಹೋಲಿಸಿಕೊಳ್ಳಬಹುದು.)

೯

ಈವರೆಗೆ ಪ್ರಕೃತಿಸಂಬಂಧರಹಿತವಾದ ಪರಿಶುದ್ಧ ಆತ್ಮಸ್ವರೂಪಜ್ಞಾನಪೂರ್ವಕವಾಗಿ ಮಾಡುವ ಕರ್ಮ ಗಳೆಲ್ಲವೂ ಜ್ಞಾನವಾಗಿ ಪರಿಣಮಿಸುತ್ತವೆಯೆಂದು ಹೇಳಲಾಯಿತು. ಈಗ ಎಲ್ಲ ವಿಧ ಕರ್ಮಗಳಿಗೂ ಅವುಗಳ ಪರಿ ಕರಗಳಿಗೂ ಸಹ ಜ್ಞಾನಾಕಾರವಾಗಿ ಪರಿಣಾಮವನ್ನು ತಿಳಿಸಲಾಗುವುದು. ಎಲ್ಲ ಕರ್ಮಗಳನ್ನೂ ಮಾಡಿಸುವವನು ಪರಮಾತ್ಮ. ಎಲ್ಲ ಉಪಕರಣಗಳೂ ಅವನು ಸೃಷ್ಟಿಸಿಕೊಟ್ಟವುಗಳೇ, ಎಲ್ಲವೂ ಅವನ ಕೆಲಸ, ಅವನ ಆರಾಧನೆ, ಅವನ ಸಂತೋಷಾರ್ಥವಾದುದು. ಇವರ ಆಚರಣೆಯಿಂದ ನಾವು ಪಡೆಯುವುದೂ ಆ ಪರಮಾತ್ಮನನ್ನೇ ಎಂಬ 'ಜ್ಞಾನವಿಟ್ಟುಕೊಂಡು ಯಾವುದೇ ಕರ್ಮಗಳನ್ನು ಆಚರಿಸಿದರೂ ಅವು ಜ್ಞಾನಾಕಾರವಾಗಿ ಪರಿಣಮಿಸಿ ನೇರವಾಗಿ ಆತ್ಮದರ್ಶನಕ್ಕೆ ಕಾರಣವಾಗುವುವು.[2] ಗೀ. ಭಾ. ೪. ೨೪.

೧೦

ನಿಷ್ಕಾಮವಾಗಿ ಮಾಡುವ ದೇವರಪೂಜೆ, ಯಜ್ಞಯಾಗಾದಿಗಳು, ಇಂದ್ರಿಯ ಸಂಯಮ, ಮನಸ್ಸಂ ಯಮ, ದೇವರಪೂಜೆಗಾಗಿ ನ್ಯಾಯಮಾರ್ಗದಿಂದ ಉಪಕರಣಗಳ ಸಂಪಾದನೆ, ವ್ರತೋಪವಾಸಗಳು, ತೀರ್ಥ ಕ್ಷೇತ್ರವಾಸ ಮತ್ತು ಯಾತ್ರೆ, ವೇದಾಧ್ಯಯನ, ವೇದಾರ್ಥಜ್ಞಾನ, ಇಂತಹ ಒಳ್ಳೆಯ ಪ್ರಯತ್ನಶೀಲತೆ, ಈ ಪ್ರಯತ್ನಗಳಲ್ಲಿ ದೃಢಸಂಕಲ್ಪ, ರೇಚಕ ಪೂರಕ ಕುಂಭಕಗಳೆಂಬ ಮೂರುವಿಧ ಪ್ರಾಣಾಯಾಮಾಭ್ಯಾಸ, ಇಂತಹ ವೆಲ್ಲವೂ ಕರ್ಮಯೋಗದ ವಿವಿಧ ರೂಪಗಳು. ಇವುಗಳಲ್ಲಿ ನಮ್ಮ ಶಕ್ತಿ ಅಭಿರುಚಿಗಳಿಗೆ ತಕ್ಕ ಯಾವುದನ್ನಾದರೂ ಸ್ವೀಕರಿಸಬಹುದು.[3]

---

1. ಈ ಒಂದು ಮುಖ್ಯರಹಸ್ಯ ಈಶಾ. ೨ ಮತ್ತು ೧೧ ರಲ್ಲೂ ಇವೆ. ರಾಜರ್ಷಿ ಜನಕನಿಗೆ ತಿಳಿದ ರಹಸ್ಯ ಇದು ಎಂಬ ಪುರಾಣ ವಚನಗಳು ಇಲ್ಲಿ ಗಮನಾರ್ಹವಾಗಿವೆ. ಈಶಾ. ೨, ೧೧ ಭಾಷ್ಯಗಳನ್ನೂ ಗಮನಿಸಿ.
2. ಈಶಾ. ೯ರ ಅವಿದ್ಯೆಯು ಆತ್ಮದರ್ಶನಕ್ಕೆ ಕಾರಣವಲ್ಲ. ಈಶಾ. ೧೧ರ ಅವಿದ್ಯೆಯು ಆತ್ಮದರ್ಶನಕ್ಕೆ ಕಾರಣ ಎಂಬ ಸೂಕ್ಷ್ಮ ತಾರತಮ್ಯ ವಿಚಾರಕ್ಕೆ ಇದು ಅತ್ಯವಶ್ಯಕ. ಪರಮಾತ್ಮದರ್ಶನಕ್ಕೆ ಮೊದಲು ಆಗುವ ಆತ್ಮದರ್ಶನ ವಿದ್ಯೆಯ ಪೂರ್ವಸ್ತರ.
3. ಈಶಾ. ೨ 'ಕರ್ಮಾಣಿ' ಎಂಬುದರ ವಿವರಣೆಗೆ ಅತ್ಯವಶ್ಯಕ.

ಈ ಕರ್ಮಗಳೆಲ್ಲವೂ ಪರಮಾತ್ಮನ ಆರಾಧನೆಯಾದುದರಿಂದ ಅವನಿಗೆ ನಿವೇದಿಸಿ ಉಳಿದ ಆಹಾರಾದಿ ವಸ್ತುಗಳನ್ನೇ ನಮ್ಮ ದೇಹಧಾರಣೆಗೆ ಬಳಸಬೇಕು.[1] ಹೀಗಿದ್ದರೆ ಆತ್ಮದರ್ಶನವಾಗಿ ಪರಮಾತ್ಮಪ್ರಾಪ್ತಿಯೂ ಆಗುವುದು. ಈ ಕರ್ಮಗಳಿಗೆಲ್ಲ ಅಂಗವಾಗಿ ನಿತ್ಯನೈಮಿತ್ತಿಕ ಕರ್ತವ್ಯಗಳು ಅತ್ಯವಶ್ಯಕ ಎಂಬುದನ್ನು ಮರೆಯದೆ ತಿಳಿದು ಆಚರಿಸಬೇಕು. ಮುಮುಕ್ಷು ಮಾಡಬೇಕಾದ ಕರ್ಮಗಳು ಇಂತಹವು ಮಾತ್ರ. ಯಾವುದೇ ಕರ್ಮಗಳಲ್ಲೂ ಅವುಗಳ ಉಪಕರಣ ಪದಾರ್ಥಗಳಿಗಿಂತಲೂ ನಮಗಿರಬೇಕಾದ ಲಕ್ಷ್ಯಜ್ಞಾನ ಮತ್ತು ಎಲ್ಲವೂ ಪರಮಾತ್ಮನಸೇವೆ ಎಂಬ ಜ್ಞಾನ ಅತಿಮುಖ್ಯ.[2] ಗೀ. ಭಾ. ೪.೨೫ ರಿಂದ ೩೩.

## ೧೧

ಆತ್ಮಜ್ಞಾನವು ಒಂದೇ ಸಮಯದಲ್ಲಿ ಸಿದ್ಧವಾಗುವುದಿಲ್ಲ. ಅದು ಕರ್ಮಗಳು ಪರಿಪಕ್ವವಾದಂತೆಲ್ಲಾ ಬೆಳೆಯುವುದು. ಆದುದರಿಂದ ಕರ್ತವ್ಯಕರ್ಮಗಳ ವಿವಿಧಹಂತಗಳಲ್ಲಿ ತಪ್ಪದೆ ತತ್ತ್ವದರ್ಶನವಾಗಿರುವ ಜ್ಞಾನಿಗಳನ್ನು ಕಂಡು ನಮಸ್ಕರಿಸಿ ಕುಶಲಪ್ರಶ್ನೆಗಳನ್ನು ಮಾಡಿ ಅವರ ಸೇವೆಯಿಂದಲೂ ಅವರ ಉಪದೇಶದಿಂದಲೂ ಆತ್ಮಜ್ಞಾನವನ್ನು ಬೆಳೆಸಿಕೊಳ್ಳಬೇಕು. ಪರಸ್ಪರ ಎಲ್ಲ ಪರಿಶುದ್ಧ ಜೀವಾತ್ಮಸ್ವರೂಪವೂ ಎಂಟುಗುಣಗಳ ಆವಿರ್ಭಾವದಿಂದ ಸಮಾನಾಕಾರವೆಂಬುದನ್ನೂ ಇಂತಹ ಸ್ವರೂಪವು ಪರಮಾತ್ಮನಿಗಿರುವಂತಹುದೇ ಎಂಬುದನ್ನೂ ಅರಿತರೆ ಇದೇ ಆತ್ಮಜ್ಞಾನದ ಉನ್ನತಸ್ತರ. ಈ ಸ್ತರವನ್ನು ತಲಪಿದಾಗ ನಮಗೆ ಯಾವ ಮೋಹವೂ ಉಳಿದಿರುವುದಿಲ್ಲ. ಇದೇ ಪರಮಾತ್ಮಸಾಕ್ಷಾತ್ಕಾರಕ್ಕೆ ಆರಂಭದ ಸ್ತರ.[3] ಗೀ. ಭಾ. ೪. ೩೪. ೩೫.

## ೧೨

ಕರ್ಮಸನ್ಯಾಸವೆಂದರೆ ಕರ್ಮಗಳನ್ನು ಮಾಡದೆ ಬಿಟ್ಟುಬಿಡುವುದಲ್ಲ. ಈವರೆಗೆ ಹೇಳಿರುವಂತೆ ಫಲಸಂಗಕರ್ತೃತ್ವತ್ಯಾಗಪೂರ್ವಕವಾಗಿ, ಆತ್ಮಯಾಥಾತ್ಮ್ಯಜ್ಞಾನಪೂರ್ವಕವಾಗಿ, ಪರಮಾತ್ಮಾರಾಧನರೂಪವಾಗಿ, ಸಾಂಗವಾಗಿ ನಿಷ್ಠೆಯಿಂದ ಆಚರಿಸುವುದೇ ಕರ್ಮಸನ್ಯಾಸ. ಇದೇ ಕರ್ಮಯೋಗ. ಇದು ಒಂದು ವಿಧವಾಗಿ ಜ್ಞಾನಾಕಾರವಾಗಿಯೇ ಇರುವುದು. ಇದರಿಂದ ಆತ್ಮದ ಬಗ್ಗೆ ಸಂಶಯವು ಹೋಗಿ ಉಪದೇಶವಿಚಾರದಲ್ಲಿ ಮನಸ್ಸು ದೃಢವಾಗುವುದು. ಇಂತಹವನಿಗೆ ಅವನು ಮಾಡುವ ಇಂತಹ ಯಾವುದೇ ಕರ್ಮಗಳಿಂದ ಅವುಗಳ ಫಲವನ್ನು ಅವನು ಅನುಭವಿಸಿಯೇ ತೀರಬೇಕೆಂಬ ನಿರ್ಬಂಧವು ಇರುವುದಿಲ್ಲ. ಇದೇ ಕರ್ಮಬಂಧದ ನಾಶ.[4]

ಗೀ. ಭಾ. ೪. ೪೨.

## ೧೩

ಪರಿಶುದ್ಧವಾದ ಸ್ವರೂಪವು ಎಲ್ಲ ಆತ್ಮಗಳಿಗೂ ಸಮಾನವಾದುದು ಎಂಬ ಆತ್ಮಯಾಥಾತ್ಮ್ಯಜ್ಞಾನವಿರುವವನು ಕರ್ಮಯೋಗದಲ್ಲೇ ನಿಷ್ಠನಾಗಿದ್ದರೂ ಅವನಿಗೆ ಕರ್ಮಗಳು ಅಂಟುವುದಿಲ್ಲ.[5] ಗೀ. ಭಾ. ೫. ೭.

---

1. ಈಶಾ ೧ 'ಭುಂಜೀಥಾಃ' ಎಂಬುದರ ವಿವರಣೆಗೆ ಅತ್ಯವಶ್ಯಕ.  2. ಈಶಾ- ೬, ೭, ೮, ೧೧ ಉಪಯುಕ್ತ.
3. ಈಶಾವಾಸ್ಯವು ಕರ್ಮನಿಷ್ಠನಾದ ಮುಮುಕ್ಷುವಿಗೆ ಗುರುವೊಬ್ಬನು ಮಾಡುವ ಆತ್ಮಜ್ಞಾನೋಪದೇಶ ಎಂಬ ವಿಚಾರವಲ್ಲಿ ಶಿಷ್ಯನ ಕರ್ತವ್ಯವೇನೆಂಬ ಬಗ್ಗೆ ಈಶಾವಾಸ್ಯವಿದ್ಯೆಯ ಅಭ್ಯಾಸಿಗಳಿಗೆ ಇದು ಅವಶ್ಯ. ಮತ್ತು ಈಶಾ. ೬, ೭, ಮಂತ್ರಗಳನ್ನೂ ಅವುಗಳ ರಂಗರಾಮಾನುಜಭಾಷ್ಯಪರಿಶಿಷ್ಟವನ್ನೂ ಗಮನಿಸಿ.
4. ಈಶಾ. ೨ 'ನ ಕರ್ಮ ಲಿಪ್ಯತೇ ನರೇ' ಮತ್ತು ಶ್ರುತಪ್ರಕಾಶಿಕೆಯ ವಿವರಣೆ ಗಮನಿಸಿ. ಈಶಾ. ಪುಟ. ೨೨೧.
5. ಈಶಾ. ೧, ೨, ೬, ೭, ೮ ಉಪಯುಕ್ತ ಮತ್ತು ಈಶಾ. ೬ ರಂಗರಾಮಾನುಜರ ವಿವರಣೆ ಗಮನಿಸಿ.

ಈ ನಿಷ್ಕಾಮಕರ್ಮಯೋಗಿಯು ಆತ್ಮದರ್ಶನಕ್ಕಾಗಿ ನಿಯಮದಿಂದ ಅಭ್ಯಾಸಮಾಡಬೇಕು. ಎಲ್ಲರ ಆತ್ಮಗಳೂ ಸ್ವರೂಪತಃ ತನ್ನಂತೆಯೇ, ತಾನೂ ಇತರ ಆತ್ಮಗಳಂತೆಯೇ, ಎಂಬುದನ್ನು ಧ್ಯಾನದಿಂದ ಭಾವಿಸಬೇಕು. ಇದು ಆತ್ಮಯೋಗದ ಮೊದಲನೆಯ ಸ್ತರ. ಗೀ. ಭಾ. ೬.೨೯.

ಎಲ್ಲ ಆತ್ಮಗಳೂ ಸ್ವರೂಪಗುಣಗಳ ಆವಿಷ್ಕಾರದಿಂದ ಪರಮಾತ್ಮನಿಗೆ ಸಮಾನಾಕಾರವಾಗಿವೆ ಎಂಬ ಧ್ಯಾನವೇ ಎರಡನೆಯ ಸ್ತರ. ಗೀ. ಭಾ. ೬. ೩೦.

ಯಾವುದನ್ನು ನೋಡಿದರೂ ಅವೆಲ್ಲವೂ ಪರಮಾತ್ಮನಿಗೆ ಸಂಬಂಧಿಸಿದುದರಿಂದ ಅವುಗಳಲ್ಲೆಲ್ಲಾ ಪರಮಾತ್ಮನಿರುವನು ಎಂಬ ಭಾವನೆಯೇ ಬರುವಂತೆ ಧ್ಯಾನಿಸಬೇಕು. ಇದು ಮೂರನೆಯ ಸ್ತರ. ಗೀ. ಭಾ. ೬.೩೧.

ಎಲ್ಲ ಆತ್ಮಗಳ ಸುಖ ದುಃಖಗಳನ್ನು ತಾನು ಹಂಚಿಕೊಂಡು ಅನುಭವಿಸುವವರೆಗೆ ಸಮಾನವಾಗಿ ಎಲ್ಲ ಆತ್ಮಗಳನ್ನು ಭಾವಿಸುವುದೇ ನಾಲ್ಕನೆಯಸ್ತರ. ಗೀ. ಭಾ. ೬.೩೨.

## ೧೪

ಪರಮಾತ್ಮೋಪಾಸನರೂಪವಾದ ವಿದ್ಯೆಗೆ ಅಂಗವಾದ ಪರಿಶುದ್ಧಜೀವಾತ್ಮದರ್ಶನದ ಬಗೆಯನ್ನು ಈವರೆಗೆ ತಿಳಿಸಿ ಆಯಿತು. ಕೇವಲ ಕರ್ಮಠರಿಗಿಂತ ಕೇವಲ ತಪಸ್ವಿಗಳಿಗಿಂತ ಆತ್ಮಜ್ಞಾನಿಗಳಲ್ಲದ ಇತರ ಜ್ಞಾನಿಗಳಿಗಿಂತ ನಿಷ್ಕಾಮಕರ್ಮಯೋಗಿಯೇ ಶ್ರೇಷ್ಠ. ನಾಲ್ಕುಸ್ತರಗಳಲ್ಲಿ ಹಿಂದೆ ತಿಳಿಸಿದ ಎಲ್ಲ ವಿಧವಾದ ಯೋಗಿಗಳಿಗಿಂತಲೂ ಪರಮಾತ್ಮನನ್ನೇ ಉಪಾಯ ಮತ್ತು ಉಪೇಯ ಎಂಬ ಶ್ರದ್ಧೆಯಿಂದ ಪ್ರೀತಿಸುತ್ತ ಒಂದು ಕ್ಷಣವೂ ಬಿಡಲಾರದೆ ಉಪಾಸನೆ ಮಾಡುವ ಭಕ್ತಿಯೋಗಿಯೇ ಅತ್ಯಂತ ಶ್ರೇಷ್ಠ. ಎಲ್ಲವನ್ನು ಸ್ವತಃ ಸರ್ವದಾ ತಿಳಿದಿರುವ ಪರಮಾತ್ಮನಾದ ನನಗೆ ಈ ವಿಷಯವು ಬಹಳ ಒಪ್ಪಿಗೆಯಾದುದು.[1] ಗೀ. ಭಾ. ೬. ೪೭.

## ೧೫

ಪರಮಾತ್ಮನನ್ನು ಪಡೆಯುವ ಪ್ರಯತ್ನಕ್ಕೆ ಮುಖ್ಯಸಾಧನವಾದ ಉಪಾಸನೆಯನ್ನು ಹೇಳಹೊರಟು[2] ಅದರ ಅಂಗವಾಗಿ ಆತ್ಮಜ್ಞಾನಪೂರ್ವಕವಾದ ಕರ್ಮಗಳನ್ನು ಆಚರಿಸುತ್ತಾ ಪರಿಶುದ್ಧ ಜೀವಾತ್ಮಸ್ವರೂಪದ ಸಾಕ್ಷಾತ್ಕಾರವಾಗುವ ಬಗೆಯನ್ನು ತಿಳಿಸಿ ಆಯಿತು[3]. ಇನ್ನು ಮುಂದಿನ ಆರು ಅಧ್ಯಾಯಗಳಲ್ಲಿ ಭಕ್ತಿ ಎನಿಸುವ ಪರಮಾತ್ಮನ ಉಪಾಸನೆಯನ್ನೂ, ಪರಮಾತ್ಮನ ಸ್ವರೂಪವನ್ನೂ ತಿಳಿಸಲಾಗುವುದು.[4] ಪ್ರೀತಿಯಿಂದ ಧ್ಯಾನಿಸುವುದೇ ಭಕ್ತಿ.[5] ಇದು ಪರಮಾತ್ಮನು ನಮ್ಮ ಕಣ್ಣಿನಲ್ಲೇ ಸದಾ ಕಟ್ಟಿರುವಂತೆ ಆಗುವಷ್ಟು ಸ್ವಚ್ಛವಾದ ದರ್ಶನ ಸಮಾನಾಕಾರವಾಗಬೇಕು. ಇಂತಹ ಭಕ್ತಿಯೇ ಅನನ್ಯಭಕ್ತಿ.[6]

---

1. ಈಶಾ. ೧, ೮, ೧೧, ೧೮ ಗಮನಿಸಿ. 2. 'ಮದ್ಭಕ್ತಿಂ ಲಭತೇ ಪರಾಮ್' ಗೀ. ೧೮. ೫೪.
3. ಈಶಾವಾಸ್ಯದ ಮಾಧ್ಯಂದಿನಪಾಠದಲ್ಲಿ ಮೊದಲ ಎಂಟುಮಂತ್ರಗಳು ಒಂದು ವಿಭಾಗ ಎಂಬುದನ್ನೂ ಅದರಲ್ಲಿ ಗೀತೆಯ ಮೊದಲ ಆರು ಅಧ್ಯಾಯಗಳ ಅರ್ಥವಿರುವುದನ್ನೂ. ಈಶಾವಾಸ್ಯಪ್ರಕಾಶಿಕೆಯಲ್ಲಿ ಗೀತೆಯ ಅರ್ಥಗಳು ಈಶಾವಾಸ್ಯದಲ್ಲಿವೆ ಎಂದು ತಿಳಿಸಿರುವುದನ್ನೂ ಗಮನಿಸಿ.
4. 'ಪುರುಷಸ್ಸಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ' ಗೀ. ೮. ೨೨.
5. 'ಸ್ನೇಹಪೂರ್ವಮನುಧ್ಯಾನಂ ಭಕ್ತಿರಿತ್ಯಭಿಧೀಯತೇ' (ಪ್ರಾಚೀನ ವಚನ.)
6. 'ದೃಷ್ಟವಾನಸಿ ಮಾಂ ಯಥಾ'
ಭಕ್ತ್ಯಾ ತ್ವನನ್ಯಯಾ ಶಕ್ಯಃ ಅಹಮೇವಂವಿಧೋಽರ್ಜುನ.
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ. ಗೀ. ೧೧. ೫೪

ಪರಮಾತ್ಮನ ಸ್ವರೂಪವೆಂತಹುದೆಂಬುದನ್ನೂ[1] ನಮಗಿರುವ ಈ ದೇಹ-ಪ್ರಕೃತಿಯ ಸಂಬಂಧದಿಂದ ಪರಮಾತ್ಮ ದರ್ಶನವಾಗುತ್ತಿಲ್ಲವೆಂಬುದನ್ನೂ[2], ಅದು ಆಗಬೇಕಾದರೆ ಪರಮಾತ್ಮನಲ್ಲಿ ನಾವು ಶರಣಾಗತರಾಗಬೇಕೆಂಬುದನ್ನೂ[3] ಉಪಾಸಕರ ವೈವಿಧ್ಯವನ್ನೂ[4] ಭಕ್ತನಾದ ಜ್ಞಾನಿಯೆಂಬ ಉಪಾಸಕನ ಉತ್ಕರ್ಷವನ್ನೂ ಏಳನೆಯ ಅಧ್ಯಾಯದಲ್ಲಿ ಹೇಳಲಾಗಿದೆ.[5]

ಗೀ. ಭಾ. ೭. ೧. ಅವತಾರಿಕೆ.

## ೧೬

**ಆರ್ತಃ** – ಕಳೆದುಹೋದ ಆಸ್ತಿಪಾಸ್ತಿ ಅಧಿಕಾರ ಮುಂತಾದ ಐಶ್ವರ್ಯವನ್ನು ಮತ್ತೆ ಬಯಸುವವನು.

**ಅರ್ಥಾರ್ಥೀ** – ಏನೂ ಐಶ್ವರ್ಯವಿಲ್ಲದಿದ್ದು ಹೊಸದಾಗಿ ಐಶ್ವರ್ಯವನ್ನು ಬಯಸುವವನು.

ಈ ಎರಡು ಬಗೆಯವರೂ ಐಶ್ವರ್ಯಾರ್ಥಿಗಳೇ ಆದುದರಿಂದ ಇಬ್ಬರ ಯೋಗ್ಯತೆಯೂ ಒಂದೇ.[6]

**ಜಿಜ್ಞಾಸುಃ** – ಪರಿಶುದ್ಧಜೀವಾತ್ಮಸ್ವರೂಪವನ್ನು ಬಯಸುವವನು.[7]

**ಜ್ಞಾನೀ** – ಪರಮಾತ್ಮನಿಗೆ ತಾನು ಪರತಂತ್ರನೆಂಬ ಭಾವವನ್ನು ಅರಿತು ಅವನ ಸೇವೆಯಲ್ಲೇ ಅಭಿರುಚಿ ಇರುವಂತೆ, ತನ್ನ ಆತ್ಮಸ್ವರೂಪವನ್ನು ಅರಿತು, ತನ್ನ ಆತ್ಮಸ್ವರೂಪವನ್ನು ಮಾತ್ರ ಅನುಭವಿಸುವುದರಲ್ಲಿ ನಿಲ್ಲದೆ ಪರಮಾತ್ಮನನ್ನೇ ಮುಖ್ಯವಾಗಿ ಪಡೆಯಲು ಬಯಸುವವನು.[8]

ಈ ನಾಲ್ವರೂ ಪರಮಾತ್ಮನ ಉಪಾಸಕರು. ಇವರೆಲ್ಲರೂ ಪರಮಾತ್ಮನಿಗೆ ಶರಣಾದವರು. ಅವರವರ ವಿಭಿನ್ನ ಆಸೆಗಳ ಅನುಸಾರ ಅವರನ್ನು ಹೀಗೆ ನಾಲ್ಕು ವಿಧವಾಗಿ ವಿಂಗಡಿಸಲಾಗಿದೆ.[9]

---

1. 'ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ', ಮತ್ತಃ ಪರತರಂ ನಾನ್ಯತ್ ಕಿಂಚಿತ್', 'ಮಯಿ ಸರ್ವಮಿದಂ ಪ್ರೋತಂ'. ಗೀ. ೭. ೭.
2. 'ಮೋಹಿತಂ ನಾಭಿಜಾನಾತಿ ಮಾಂ'. ಗೀ. ೭. ೧೩.
3. 'ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ'. ಗೀ ೭ ೧೪.
4. 'ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ' ಗೀ. ೭. ೧೬.
5. 'ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕಭಕ್ತಿರ್ವಿಶಿಷ್ಯತೇ' ಗೀ. ೭. ೧೭.
   'ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ' ಗೀ. ೭. ೧೯.
6. ವಿವಿಧ ಕರ್ಮಾಚರಣೆಯಿಂದ ಆಗುವ ಐಹಿಕ ಸ್ವರ್ಗಾದಿಫಲಗಳಿಗೆ ಉಪಾಸನೆಯೇ ಸಾಕೆಂಬ ರಹಸ್ಯವನ್ನೂ, ಉಪಾಸನೆಯ ವಿಚಾರವಾದ ಈಶಾವಾಸ್ಯವು ಕರ್ಮಕಾಂಡ ಸಂಹಿತೆಯಲ್ಲೇ ಇರುವುದನ್ನೂ ಗಮನಿಸಿ. ಈಶಾ. ೨ ರಲ್ಲಿ ಹೇಳುವ ಕರ್ಮಗಳು ನಿಷ್ಕಾಮವಾದುದರಿಂದ ಈಶಾವಾಸ್ಯದಲ್ಲಿ ಆರ್ತ, ಅರ್ಥಾರ್ಥಿಗಳ ಸಕಾಮಕರ್ಮಗಳನ್ನು ವಿಧಾನ ಮಾಡುವುದಿಲ್ಲ. ಅಂತಹ ಉಪಾಸನೆಯೂ ವೇದಾಂತಿಗಳಿಗೆ ತ್ಯಾಜ್ಯ ಎಂಬ ವಿಶೇಷಾರ್ಥವನ್ನು ನಾವು ತಿಳಿಯಬೇಕು. ಮುಮುಕ್ಷುಗಳೆನಿಸಿದ ಜಿಜ್ಞಾಸು, ಜ್ಞಾನಿಗಳಿಗೆ ಯೋಗ್ಯವಾದ ಉಪಾಸನೆಯನ್ನು ಮಾತ್ರ ಈಶಾವಾಸ್ಯವು ತಿಳಿಸುತ್ತದೆ ಎಂಬ ಭಾಷ್ಯವಚನಗಳನ್ನೂ 'ಅವಿದ್ಯಾಂ ಉಪಾಸತೇ' ಎಂದು ೯ ನೆಯ ಮಂತ್ರದಲ್ಲಿರುವುದನ್ನೂ ಗಮನಿಸಿ.
7. ಈಶಾ. 6 ನೆಯ ಮಂತ್ರದ ರಂಗರಾಮಾನುಜವ್ಯಾಖ್ಯಾನ, 8 ನೇ ಮಂತ್ರದ ಭಾಷ್ಯಗಳೂ, ಅನುಭೂತಿಯ ವಿಚಾರದಲ್ಲಿ ಸುಬೋಧಿನೀ, ಶ್ರೀರಂಗಾಚಾರ್ಯರ ಭಾಷ್ಯಗಳಲ್ಲಿ ಗಮನಾರ್ಹ.
8. ಈಶಾ. ೧೫, ೧೬ ಅರ್ಥಗಳನ್ನು ಗಮನಿಸಿ.
9. ಈಶಾ. ೧೭, ೧೮. ಶರಣಾಗತಿಮಂತ್ರಗಳೆಂಬುದನ್ನು ಗಮನಿಸಿ.

ಐಶ್ವರ್ಯ ಬಯಸುವವರೂ ಜೀವಾತ್ಮಸ್ವರೂಪವನ್ನು ಬಯಸುವವರೂ ತಮ್ಮ ತಮ್ಮ ಇಷ್ಟಾರ್ಥ ನೆರವೇರುವವರೆಗೆ ಮಾತ್ರ ಪರಮಾತ್ಮನನ್ನು ಮರೆಯದಿರುವರು. ಜ್ಞಾನಿಯು ಮಾತ್ರ ಹಾಗಲ್ಲ. ಪರಮಾತ್ಮನನ್ನೇ ಬಯಸುವ ಅವನ ಭಕ್ತಿ ಪರಮಾತ್ಮನನ್ನು ಪಡೆದಮೇಲೂ ಏಕರೀತಿಯಲ್ಲಿರುವುದು. ಅವನು ಪರಮಾತ್ಮನನ್ನು ಎಂದೂ ಮರೆಯನು. ಇಂತಹ ಜ್ಞಾನಿಯನ್ನು "ಏಕಭಕ್ತಿ" ಎನ್ನಬಹುದು. ವಾಸುದೇವನೆನಿಸಿದ ಪರಮಾತ್ಮನೇ ತನಗೆ ಪ್ರಾಪ್ಯ ಮತ್ತು ಪ್ರಾಪಕ ಎಂದು ಉಪಾಸಿಸುವ ಈ ಜ್ಞಾನಿಯಂತಹ ಮಹಾತ್ಮನು ಬಹಳ ಅಪರೂಪ.[1]

ಎಲ್ಲ ಕರ್ಮಗಳನ್ನೂ ಪರಮಾತ್ಮನ ಆರಾಧನರೂಪವಾಗಿ ಮಾಡುತ್ತಾ ಅಲ್ಪಫಲಗಳಿಗೆ ಆಸೆಪಡದೆ ಪರಮಾತ್ಮನ ಪ್ರೀತಿಗಾಗಿಯೇ ಇರುವ ಇಂತಹ ಭಕ್ತರು ಪರಮಾತ್ಮನನ್ನೇ ಪಡೆದು ಪುನರ್ಜನ್ಮವಿಲ್ಲದವರಾಗುವರು.[2]

ಗೀ. ಭಾ. ೭. ೧೬, ೧೭, ೧೯, ೨೨, ೨೩.

## ೧೭

ಯಜ್ಞದ ಅಧಿದೇವತೆಗಳಾದ ಇಂದ್ರ, ಅಗ್ನಿ ಮುಂತಾದವರೆಲ್ಲರಿಗೂ ಅಂತರಾತ್ಮನಾಗಿದ್ದು ಯಜ್ಞಾದಿಗಳಿಂದ ಆರಾಧಿಸಲ್ಪಡುವ ಆ ಪರಮಾತ್ಮನೇ ಅಧಿಯಜ್ಞ. ಈ ಅಂಶವನ್ನು ಉಪಾಸಕರೆಲ್ಲರೂ ಅತ್ಯಾವಶ್ಯಕವಾಗಿ ತಿಳಿದು ಭಾವಿಸುತ್ತಿರಬೇಕು.[3] ಗೀ. ಭಾ. ೮. ೪.

## ೧೮

ಕಾಮ್ಯಭಕ್ತಿಯಿರುವವರು ಪರಮಾತ್ಮನ ದಿವ್ಯರೂಪವನ್ನು ಪ್ರತಿದಿನ ಚಿಂತಿಸಬೇಕು. ಸಾಯುವಾಗಲೂ ಕಾಮ್ಯವಾದ ಐಶ್ವರ್ಯವನ್ನು ಕೊಡುವಂತಹ ಆ ಪರಮಾತ್ಮನನ್ನೇ ನೆನೆದರೆ ಅವನು ಅಂತಹ ಐಶ್ವರ್ಯವನ್ನು ಪುನರ್ಜನ್ಮದಲ್ಲಾದರೂ ಕೊಡುವನು. ಗೀ. ಭಾ. ೮. ೯, ೧೦.

ನಿಷ್ಕಾಮಭಕ್ತಿ ಇರುವ ಜಿಜ್ಞಾಸುವು ಮರಣಕಾಲದಲ್ಲಿ ದಿವ್ಯರೂಪದ ಧ್ಯಾನದ ಜೊತೆಗೆ ಓಂಕಾರಾರ್ಥವನ್ನೂ ಅಸ್ಥೂಲತ್ವಾದಿ ಗುಣವಿಶಿಷ್ಟನಾದ ಪರಮಾತ್ಮನನ್ನೂ ನೆನೆಯುತ್ತಾ ಓಂಕಾರವನ್ನೇ ಹೇಳುತ್ತಾ ಇರಬೇಕು.[4]

ಗೀ. ಭಾ. ೮. ೧೧, ೧೨, ೧೩.

ಜ್ಞಾನಿಯಾದವನು ಪರಮಾತ್ಮನೇ ಪ್ರಾಪ್ಯನೆಂದು ನಿಶ್ಚಯಿಸಿ ಅವನ ದಿವ್ಯರೂಪಧ್ಯಾನ, ಓಂಕಾರದ ಉಚ್ಚಾರಣೆ, ಅರ್ಥಚಿಂತನೆಗಳನ್ನು ಸತತವಾಗಿ ಮಾಡುತ್ತಿರಬೇಕು. ಇಂತಹವನನ್ನು ಪರಮಾತ್ಮನು ತಾನಾಗಿಯೇ ಸ್ವೀಕರಿಸಿ ಅವನ ಉಪಾಸನೆಯನ್ನು ಉನ್ನತಮಟ್ಟಕ್ಕೆ ತಂದು ಏನೂ ವಿಘ್ನವಿಲ್ಲದಂತೆ ಮಾಡಿ ಸ್ಥಿರಪಡಿಸುವನು.[5]

ಗೀ. ಭಾ. ೮. ೧೪.

---

1. ಈಶಾ. ೧೬ ಜೀವಾತ್ಮ ಪರಮಾತ್ಮರ ಸ್ವರೂಪವನ್ನು ಗಮನಿಸಿ.
2. ಈಶಾ. ೨, ೧೧. ಗಮನಿಸಿ.
3. ೧೬, ೧೭, ೧೮ ಕ್ರತು, ಪೂಷ, ಸೂರ್ಯ, ಅಗ್ನಿ ಮುಂತಾದ ಶಬ್ದಗಳ ಅರ್ಥವಿವರಣೆಗೂ ಉಪಯುಕ್ತ.
4. ಈಶಾ. ೮ 'ಅರ್ಥಾನ್' ಗಮನಿಸಿ. 5. ಈಶಾ. ೧೬ , ೧೭, ೧೮ ಗಮನಿಸಿ.

೧೯

ಚತುರ್ಮುಖಬ್ರಹ್ಮಲೋಕದವರೆಗಿನ ಎಲ್ಲ ಐಶ್ವರ್ಯವೂ ಪರಮಾತ್ಮನದೇ ಆದರೂ ನಶ್ವರ. ಅದನ್ನು ಪಡೆದವರು ಮತ್ತೆ ಹಿಂದಕ್ಕೆ ಮರಳಲೇ ಬೇಕು.[1] ಪರಮಾತ್ಮನನ್ನೇ ಪಡೆದವರು ಮತ್ತೆ ಮರಳಬೇಕಿಲ್ಲ.

ಗೀ. ಭಾ. ೮. ೧೬.

ಪರಂಧಾಮವೇ ಕೈವಲ್ಯ. ಅದು ಪರಮಪುರುಷನ ಅಧೀನದಲ್ಲಿರುವ ಪ್ರಕೃತಿಸಂಬಂಧರಹಿತವಾದ ಜೀವಾತ್ಮ ಸ್ವರೂಪ. ಅಥವಾ ಅದು ಪರಿಶುದ್ಧ ಜ್ಞಾನಪ್ರಕಾಶರೂಪವಾದದ್ದು. ಇದನ್ನು ಪಡೆದವರೂ ಮರಳಬೇಕಿಲ್ಲ.[2]

ಗೀ. ಭಾ. ೮. ೨೧.

ಆದರೆ ಜ್ಞಾನಿಯಾದವನಿಗೆ ಈ ಕೈವಲ್ಯಕ್ಕಿಂತ ವಿಭಿನ್ನವಾದ ಸಾಕ್ಷಾತ್ ಪರಮಾತ್ಮನೇ ಪ್ರಾಪ್ಯ. ಪರಮ ಪುರುಷನಾದ ಆ ಪರಮಾತ್ಮನು ಎಲ್ಲವನ್ನೂ ವ್ಯಾಪಿಸಿ ಎಲ್ಲವನ್ನೂ ತನ್ನೊಳಗಿರಿಸಿಕೊಂಡವನು. ಅವನನ್ನು ಪಡೆಯಲು ಪ್ರಾಪ್ಯ ಪ್ರಾಪಕ ಎರಡೂ ಪರಮಾತ್ಮನೇ ಎಂಬ ಅನನ್ಯಭಕ್ತಿ ಅತ್ಯವಶ್ಯಕ.[3] ಗೀ. ಭಾ. ೮. ೨೨.

೨೦

ವಿಶ್ವದ ಜಡ ಜೀವ ಪದಾರ್ಥಗಳೆಲ್ಲದರೊಳಗೂ ನನ್ನ ಸ್ವರೂಪವನ್ನು ತೋರಗೊಡದಂತೆ ಒಳಹೊಕ್ಕು ನಿಯಂತ್ರಿಸಿ ವ್ಯಾಪಿಸಿರುವೆನು. ಸಮಸ್ತ ವಿಶ್ವವನ್ನೂ ಧರಿಸಿ ಆಳುತ್ತಾ ಸ್ವಾಮಿಯಾಗಿ ವ್ಯಾಪಿಸಿರುವೆನು.[4]

ಈ ವಿಷಯವನ್ನು ಬೃಹದಾರಣ್ಯಕೋಪನಿಷತ್ತಿನ ಅಂತರ್ಯಾಮಿಬ್ರಾಹ್ಮಣದಲ್ಲಿ 'ಯಾವನಿಗೆ ಭೂಮಿಯು ಶರೀರವೋ, ಯಾವನಿಗೆ ಆತ್ಮವು ಶರೀರವೋ ಅವನೇ ಪರಮಾತ್ಮ'ನೆಂದು ಸ್ಪಷ್ಟಪಡಿಸಲಾಗಿದೆ. ಪರಮಾತ್ಮನಿಗೆ ವಿಶ್ವವೆಲ್ಲವೂ ಶರೀರ ಎಂಬುದೇ ಈ ಎಲ್ಲ ವಚನಗಳ ತಾತ್ಪರ್ಯ. ಗೀ. ಭಾ. ೯.೪.

೨೧

ಪರಮಾತ್ಮನ ದಿವ್ಯಸ್ವಭಾವವನ್ನು ಅರಿಯದವರು ತಮ್ಮ ಆಸೆಗಳನ್ನು ಈಡೇರಿಸಿಕೊಳ್ಳಲಾರರು. ಅವರ ಕೆಲಸಗಳು ವ್ಯರ್ಥ. ಅವರ ತಿಳುವಳಿಕೆಯೂ ವ್ಯರ್ಥ. ಇವರನ್ನು ರಾಕ್ಷಸಸ್ವಭಾವದವರೆಂದೂ ಆಸುರರೆಂದೂ ಮೋಹಜಾಲಕ್ಕೆ ಸಿಲುಕಿದವರೆಂದೂ ಹೇಳಬಹುದು.[5] ಗೀ. ಭಾ. ೯.೧೨.

೨೨

ಪರಮಾತ್ಮನ ದಿವ್ಯಸ್ವಭಾವನ್ನು ಅರಿತು ಅವನನ್ನುಳಿದು ಬೇರೇನನ್ನೂ ಆಸೆಪಡದೆ ಅವನನ್ನೇ ಉಪಾಸನೆ ಮಾಡುವವರು ಮಹಾತ್ಮರು.

---

1. ಈಶಾ. ೩ ಗಮನಿಸಿ. 2. ಈಶಾ. ೮, ೧೫, ೧೬ ಗಮನಿಸಿ 3. ಈಶಾ. ೧೮ ಗಮನಿಸಿ.

4. 'ಈಶಾವಾಸ್ಯಮಿದಂ ಸರ್ವಂ' ಈಶಾ. ೧, 'ಮಯಾ ತತಮಿದಂ ಸರ್ವಂ' ಗೀ. ೯. ೪. ಈ ವಚನಗಳು ಸಮಾನಾಕಾರವಾಗಿರು ವುದನ್ನೂ, ವೇದಾಂತಾಚಾರ್ಯರ ತಾತ್ಪರ್ಯಚಂದ್ರಿಕಾ ಟೀಕೆಯನ್ನೂ ಗಮನಿಸಿ. ಈಶಾ. ಪುಟ ೨೨೮.

5. ಈಶಾ. ೩ 'ಅಸುರ' ಎಂಬುದಕ್ಕೆ ವಿವರಣೆ.

ಮಹಾತ್ಮರು ಪ್ರತಿನಿತ್ಯವೂ, ಪರಮಾತ್ಮನಾದ ನನ್ನ ಹೆಸರನ್ನು ಹೇಳುತ್ತಾ ದೇವಮಂದಿರಗಳಿಗೆ ಹೋಗಿ ಪೂಜೆ, ಪುಷ್ಪಸೇವೆ ಮುಂತಾದುವನ್ನು ಆಚರಿಸುತ್ತಾ ಭಕ್ತಿಯಿಂದ ನಮಸ್ಕರಿಸುತ್ತಾ ಶಾಶ್ವತವಾಗಿ ನನ್ನನ್ನೇ ಪಡೆಯಲು ಪ್ರಯತ್ನಿಸುವರು. ಈನಿಷ್ಠೆಯೇ ಉಪಾಸನೆ.

ಮತ್ತೆ ಕೆಲವರು ಪರಮಾತ್ಮನು ತನ್ನ ಇಚ್ಛಾನುಸಾರ ಈ ವಿಚಿತ್ರಜಗತ್ತನ್ನು ಸೃಷ್ಟಿಸಿ ಎಲ್ಲವನ್ನೂ ತನ್ನ ಶರೀರವನ್ನಾಗಿಸಿಕೊಂಡು ಇರುವನೆಂಬ ತತ್ತ್ವವನ್ನು ಧ್ಯಾನಿಸುತ್ತಾ ಇರುವರು. ಇದು ಒಂದು ವಿಧವಾದ ಉಪಾಸನೆ.[1]

ಪರಮಾತ್ಮನಾದ ನಾನೇ ಕ್ರತು. ನಾನೇ ಅಗ್ನಿ. ನಾನೇ ಓಂಕಾರ. ನಾನೇ ವಿಶ್ವಕ್ಕೆ ವಾಸಸ್ಥಾನ. ನಾನೇ ಅಮೃತ. ಎಲ್ಲದರೊಳಗೂ ನಾನೊಬ್ಬನೇ ಇರುವವನು. ಇದೇ ನನ್ನ ಮತ್ತು ಜಗತ್ತಿನ ಏಕತೆಯ ತತ್ತ್ವ. ಇದರ ಚಿಂತನೆಯೇ ಉಪಾಸನೆ. ಗೀ. ಭಾ. ೯. ೧೬ ರಿಂದ ೧೯.

೨೩

ಋಗ್ಯಜುಸ್ಸಾಮವೇದಗಳುಮೂರೂ ವಿದ್ಯೆಗಳು. ಇವುಗಳನ್ನು ಅರಿತು ಇವುಗಳಲ್ಲಿ ಹೇಳಿರುವ ಸ್ವರ್ಗಾದಿ ಅಲ್ಪಸುಖಕ್ಕಾಗಿ ಮಾಡುವ ಕರ್ಮಗಳನ್ನು ಮಾಡಿಯೂ ಮತ್ತೆ ಮತ್ತೆ ಈ ಸಂಸಾರ ಬಂಧನದಲ್ಲಿ ತೊಳಲಬೇಕಾಗುವುದು. ಋಗ್ಯಜುಸ್ಸಾಮವೇದಗಳ ಸಿದ್ಧಾಂತರಹಸ್ಯವೇ ವೇದಾಂತವೆನಿಸಿದ ಉಪನಿಷತ್ತುಗಳು. ಇವುಗಳಲ್ಲಿ ಹೇಳಿರುವ ಪರಮಾತ್ಮೋಪಾಸನೆಯನ್ನು ದಿನವೂ ಬಿಡದೆ ಮಾಡುವವರಿಗೆ ಮತ್ತೆ ಸಂಸಾರಕ್ಕೆ ಬರದಂತೆ ಶಾಶ್ವತವಾಗಿ ಪರಮಾತ್ಮಲೋಕದ ನೆಲೆಯೂ ಸಿಕ್ಕಿ ಪರಮಾತ್ಮನ ನಿರಂತರ ಅನುಭವವಾಗುವುದು.[2]
ಗೀ. ಭಾ. ೯. ೨೦, ೨೧, ೨೨, ೨೩.

೨೪

ಪರಮಾತ್ಮನಿಗೆ ಹೂ, ಹಣ್ಣು, ತುಳಸಿ ಮುಂತಾದ ಪತ್ರೆ, ಒಂದಿಷ್ಟು ನೀರೇ ಆಗಲಿ ಏನನ್ನಾದರೂ ಭಕ್ತಿಯಿಂದ ಸಮರ್ಪಿಸಿದರೆ ಪರಮಾತ್ಮ ಅದೆಲ್ಲವನ್ನೂ ತನಗೆ ಬಹಳ ಇಷ್ಟವಾಗಿ ಸ್ವೀಕರಿಸುವನು.[3] ಗೀ. ಭಾ. ೯. ೨೬.

೨೫

ನೀನು ಲೌಕಿಕ ಜೀವನವೃತ್ತಿಯನ್ನೂ ನಿನ್ನ ಊಟ ಉಪಚಾರಗಳನ್ನೂ ವೈದಿಕವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನೂ ದಾನ ತಪಸ್ಸು ಮುಂತಾದ ಎಲ್ಲವನ್ನೂ ಪರಮಾತ್ಮನಾದ ನನಗೇ ಒಪ್ಪಿಸು.

ಹೀಗಿದ್ದರೆ ಮಾತ್ರ ಕರ್ಮಗಳ ಬಂಧನ ನಿನಗಾಗದು. ತ್ರಿವಿಧತ್ಯಾಗಪೂರ್ವಕವಾದ ಕರ್ಮಾಚರಣೆಯಿಂದ ಭಕ್ತಿಯೋಗನಿಷ್ಠನಾದ ನಿನಗೆ ಕರ್ಮಗಳಿಂದ ಬಿಡುಗಡೆಯಾಗಿ ನನ್ನನ್ನೂ ಪಡೆಯಬಹುದು.[4]
ಗೀ. ಭಾ. ೯. ೨೭, ೨೮.

---

1. ಈಶಾ. ೧೬, ೧೭, ೧೮, ೬, ೭, ೧. ಗಮನಿಸಿರಿ.
2. ಈಶಾ. ೩, ೯, ೧೧, ೧೪, ೧೮ ಗಮನಿಸಿ. ಈಶಾವಾಸ್ಯದ ಮತ್ತು ಅದರ ಹಿಂದಿನ ೩೯ ಅಧ್ಯಾಯಗಳ ತಾರತಮ್ಯ ವಿಮರ್ಶಿಸಿ.
3. ಈಶಾ. ೧. 'ತ್ಯಕ್ತೇನ' ಭಾಷ್ಯವಿವರಣೆಗಳನ್ನೂ ಗಮನಿಸಿ.
4. ಈಶಾ. ೨, ೧೧ ಗಮನಿಸಿ.

## ೧೬

ಭಕ್ತರು ಅಕಸ್ಮಾತ್ ಸಣ್ಣ ಪುಟ್ಟ ತಪ್ಪುಮಾಡಿದರೂ ಭಕ್ತಿಯ ನಿಷ್ಠೆಯಿರುವ ಅವರಿಗೆ ಅದು ಅಂಟದು. ತಪ್ಪಿನಿಂದಾದ ಪಾಪವನ್ನು ನಾನೇ ನನ್ನಲ್ಲಿರುವ ಅವರ ಭಕ್ತಿಯನ್ನರಿತು ಹೋಗಲಾಡಿಸುವೆನೆಂದೂ ನನ್ನ ಭಕ್ತರಿಗೆ ಎಂದೂ ದುರ್ಗತಿ ಇಲ್ಲವೆಂದೂ ಪ್ರತಿಜ್ಞೆ ಮಾಡಿ ಹೇಳುವೆನು.[1] ನನ್ನ ಭಕ್ತರು ಯಾರೇ ಆಗಿರಲಿ ಅವರು ಹೇಗೆಯೇ ಇರಲಿ ನನಗೆ ಶರಣಾಗತರಾದರೆ ಅವರಿಗೆ ನನ್ನ ಅನುಭವರೂಪವಾದ ಅಮೃತತ್ವ ಉಂಟು. "ಪರಮಾತ್ಮನಿಗೆ ನಾವು ಆಳಾಗಿರುವುದಷ್ಟೇ ಅಲ್ಲದೆ ಅವನನ್ನು ಅತ್ಯಂತ ನಮ್ರತೆಯಿಂದ ನಮಸ್ಕರಿಸಿ ಪೂಜಿಸಬೇಕು." ಎಂಬ ತತ್ತ್ವವನ್ನೂ ಅರಿತು ನಡೆದರೆ ನೀನೂ ನನ್ನನ್ನು ಪಡೆಯುವಿ. ಗೀ. ಭಾ. ೯. ೩೦ ರಿಂದ ೩೪.

## ೧೭

ಪರಮಾತ್ಮ ಸಕಲ ಜಗತ್ತಿನ ಈಶರಿಗೂ ಈಶ. ಸಮಸ್ತವೂ ಅವನ ಶರೀರ. ಅವನು ಎಲ್ಲದರ ಒಡೆಯ. ಎಲ್ಲವೂ ಅವನ ಅಧೀನ. ಅವನು ಇತರ ವಸ್ತುಗಳಂತಲ್ಲ. ಈ ತತ್ತ್ವವನ್ನು ಅರಿತವನಿಗೆ ಎಲ್ಲ ಪಾಪಗಳೂ ಪರಿಹಾರವಾಗುವುವು.[2] ಗೀ. ಭಾ. ೧೦.೩.

## ೧೮

ಎಲ್ಲವೂ ಪರಮಾತ್ಮನ ಆಸ್ತಿ. ಅವನಿಗೆ ಇದಾವುದರ ಸಂಪರ್ಕದಿಂದಾಗಲಿ ಸ್ವತಃ ಆಗಲಿ ಯಾವೊಂದು ದೋಷವೂ ಇಲ್ಲ. ಎಲ್ಲಗುಣಗಳೂ ಅವನಿಗಿವೆ. ಇದನ್ನರಿತ ಉಪಾಸಕನಿಗೆ ಭಕ್ತಿಯು ಅಭಿವೃದ್ಧಿಯಾಗಿ ಉಪಾಸನೆಯು ನಿರ್ವಿಘ್ನವಾಗಿ ನೆರವೇರುವುದು.[3] ಗೀ. ಭಾ. ೧೦. ೭.

## ೧೯

ಪರಮಾತ್ಮನಲ್ಲೇ ಮನಸ್ಸನ್ನು ನೆಲೆಗೊಳಿಸಿದ ಭಕ್ತರು ಪರಸ್ಪರ ಪರಮಾತ್ಮವಿಚಾರ ಮಾಡುತ್ತಾ ಸಂತೋಷಗೊಳ್ಳುವರು. ಅಂತಹವರಿಗೆ ನಾನೇ ಸಂತೋಷದಿಂದ ಜ್ಞಾನದ ಪರಿಪಕ್ವಾವಸ್ಥೆಯೆನಿಸುವ ನನ್ನ ದರ್ಶನರೂಪವಾದ ಪರಭಕ್ತಿಯನ್ನು ಕೊಡುವೆನು. ಅವರ ಅಂತರಾತ್ಮನಾದ ನಾನು ಅವರ ಮೇಲಿನ ಕರುಣೆಯಿಂದ ಅವರ ಹೃದಯದಲ್ಲಿ ಜ್ಞಾನದೀಪವನ್ನು ಬೆಳಗಿಸಿ ಅವರ ಪ್ರಾಚೀನಕರ್ಮಗಳಿಂದಾಗಿರುವ ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡುವೆನು.[4] ಗೀ. ಭಾ. ೧೦.೯,೧೦,೧೧.

## ೨೦

ಜಗತ್ತಿನ ಈ ಎಲ್ಲದರಲ್ಲೂ ಮಾದರಿಗಾಗಿ ಕೆಲವು ಜಡ ಮತ್ತು ಜೀವಿಗಳನ್ನು ಉದಾಹರಿಸಿ ಅವೆಲ್ಲದರಲ್ಲೂ ಅಂತರಾತ್ಮನಾಗಿ ಇರುವವನೇ ಪರಮಾತ್ಮ ಎಂದು ಈ ಅಧ್ಯಾಯ:ದಲ್ಲಿ ತಿಳಿಸಲಾಗುವುದು. ಹೀಗೆ ಸರ್ವ

---

1. ಈಶಾ. ೧೫, ೧೮ ಸೂಕ್ಷ್ಮಾರ್ಥಗಳನ್ನು ಗಮನಿಸಿ.
2. ಈಶಾ. ೮, ೧೬, ೧೮ ಗಮನಿಸಿ.
3. ಈಶಾ. ೮, ೧೬, ೧೮ ಗಮನಿಸಿ.
4. ಈಶಾ. ೮ ವ್ಯಾಖ್ಯಾನ ಗಮನಿಸಿ. ಈಶಾ. ೧೫, ೧೬ರ ಪ್ರಾರ್ಥನೆಗಳಿಗೆ ಪರಮಾತ್ಮನ ಪ್ರತ್ಯುತ್ತರರೂಪವಾದ ಈ ವಚನಗಳು ಗಮನಾರ್ಹ.

ಶರೀರಿಯಾಗಿರುವುದರಿಂದ ಆಯಾ ಜಡ ಜೀವಿ ವಾಚಕಗಳಾದ ಶಬ್ದಗಳೂ ಮುಖ್ಯವಾಗಿ ಅವನನ್ನೇ ಕುರಿತಾಗಿರುವುವು. ಎಲ್ಲದರ ಸ್ವರೂಪವೂ ಸ್ಥಿತಿಯೂ ಪ್ರವೃತ್ತಿಗಳೂ ಅವನ ಸಂಕಲ್ಪಾಧೀನ ಎಂದ ಮೇಲೆ ಹೆಚ್ಚು ಹೇಳಬೇಕಾದುದೇನಿದೆ.[1] ಗೀ. ಭಾ. ೧೦. ೧೯, ೨೦, ೩೨.

೩೧

ಪರಮಾತ್ಮನ ದಿವ್ಯರೂಪವನ್ನು ಅನನ್ಯಭಕ್ತಿಯಿಲ್ಲದವರು ನೋಡಲಾರರು. ಪರಮಾತ್ಮನ ಅನುಗ್ರಹವಿದ್ದರೆ ಅನನ್ಯಭಕ್ತಿಯೂ ಬರುವುದು. ಅವನು ಅವರಿಗೆ ತೋರುವ ದಿವ್ಯರೂಪವು ಕಣ್ಣುಕುಕ್ಕುವಂತಹ ಪ್ರಖರ ತೇಜಸ್ಸಿನಿಂದ ಕೂಡಿರುವುದು. ಎಲ್ಲ ಕೆಲಸಗಳನ್ನು ನಿಷ್ಕಾಮವಾಗಿ ಆಚರಿಸುತ್ತಾ ಪರಮಾತ್ಮನ ಪ್ರಾಪ್ತಿಯೊಂದರ ಬಗ್ಗೆಯೇ ಸದಾ ಚಿಂತಿಸುತ್ತಾ ಪರಮಾತ್ಮನ ನಾಮಸಂಕೀರ್ತನೆ, ಅರ್ಚನೆ, ನಮಸ್ಕಾರಾದಿಗಳನ್ನೇ ಮಾಡುತ್ತಾ ಇತರ ಹವ್ಯಾಸಗಳಿಲ್ಲದೆ ಜಗತ್ತಿನ ಯಾವುದೊಂದರ ಬಗ್ಗೆಯೂ ವೈರಭಾವವಿಲ್ಲದೆ ಇರುವ ಉಪಾಸಕನಿಗೆ ಪರಮಾತ್ಮನು ತಾನಾಗಿಯೇ ಅನುಗ್ರಹ ಮಾಡುವನು.[2] ಗೀ. ಭಾ. ೧೧.೫೨ ರಿಂದ ೫೫.

೩೨

ಉಪಾಸಕರಾದ ಭಕ್ತರು ಪರಮಾತ್ಮನಿಗೆ ಬದಲು ಜೀವಾತ್ಮವನ್ನೇ ಉಪಾಸಿಸಿದರೆ ಅದರಿಂದ ಉತ್ತಮಫಲವಿಲ್ಲ. ಅವರು ಪಡೆಯುವ ವಸ್ತು ಪರಮಾತ್ಮನಿಗೆ ಸಮಾನಾಕಾರವಾದ ಪರಿಶುದ್ಧ ಜೀವಾತ್ಮ. ಪರಮಾತ್ಮನು ಎಲ್ಲ ಜೀವಾತ್ಮಗಳಿಗಿಂತಲೂ ಉತ್ತಮನಾದುದರಿಂದ ಅವನನ್ನು ಪಡೆಯುವುದೇ ಮೇಲು.[3] ಗೀ.ಭಾ. ೧೨. ೧ ರಿಂದ ೫.

೩೩

ಎಲ್ಲ ಕರ್ತವ್ಯಗಳ ಕರ್ಮಗಳನ್ನೂ ಪರಮಾತ್ಮನಿಗೇ ಅರ್ಪಣೆಮಾಡಬೇಕು. ಇದನ್ನು ಭಕ್ತರು ಅವಶ್ಯ ಮಾಡಬೇಕು. ನಿರಂತರವಾಗಿ ಧ್ಯಾನಿಸಿ ಪರಮಾತ್ಮನನ್ನು ಪಡೆಯುವುದು ಸ್ವಲ್ಪ ಕಷ್ಟವೆನಿಸಬಹುದು. ಅಂತಹವರು ಪರಮಾತ್ಮನ ಪೂಜೆ ಪುರಸ್ಕಾರಗಳನ್ನು ಮಾಡುತ್ತಾ ತಮ್ಮ ಇತರ ಎಲ್ಲ ಕರ್ತವ್ಯಗಳನ್ನೂ ಪರಮಾತ್ಮನಿಗೆ ಒಪ್ಪಿಸಿದರೆ ಧ್ಯಾನವೂ ಸಿದ್ಧಿಸಿ ಪರಮಾತ್ಮಪ್ರಾಪ್ತಿಯೂ ಸುಖವಾಗಿ ಆಗುವುದು. ಆತ್ಮೋಪಾಸನೆಯ ಮೂಲಕ ಪರಮಾತ್ಮೋಪಾಸನೆಗೆ ಬರುವವರೂ ಕೂಡ ಎಲ್ಲ ವಿಧ ಅಭ್ಯಾಸ ಮತ್ತು ಜ್ಞಾನ, ಧ್ಯಾನಗಳಿಗಿಂತ ಸುಲಭವಾದ ನಿಷ್ಕಾಮಕರ್ಮವನ್ನು ಆಚರಿಸುವುದೇ ಒಳ್ಳೆಯದು.[4] ಗೀ. ಭಾ. ೧೨.೬ ರಿಂದ ೧೨.

೩೪

ಕರ್ಮದಿಂದಾದ ಈ ಸಂಸಾರಬಂಧನದ ಬಿಡುಗಡೆಗೆ ಜೀವಾತ್ಮಸ್ವರೂಪಜ್ಞಾನವು ಅತ್ಯವಶ್ಯಕ. ದೇಹಕ್ಕಿಂತ ಆತ್ಮ ಬೇರೆ. ಅದು ಪರಿಶುದ್ಧ. ಇತರ ಎಲ್ಲ ಜಡವಸ್ತುಗಳನ್ನೂ ಅದು ವ್ಯಾಪಿಸಿದೆ. ದೇಹ ಮತ್ತು

---

1. 'ಈಶಾವಾಸ್ಯಮಿದಂ ಸರ್ವಂ' ಎಂಬ ವಿಚಾರ ಹೇಗೆ ಎನ್ನುವುದರ ವಿವರಣೆಗೆ ಈ ಅಧ್ಯಾಯ ಪೂರ್ತ ಗಮನಿಸಿ.
2. ಈಶಾವಾಸ್ಯದ ಸಾರಾರ್ಥವೆಲ್ಲವೂ ಇಲ್ಲಿ ಸಂಗ್ರಹವಾಗಿರುವುದನ್ನು ಗಮನಿಸಿ.
3. ಈಶಾ. ೮ರ ಜೀವಾತ್ಮಪರವಾದ ಅರ್ಥವನ್ನು ೧೬ ರಲ್ಲಿ ದಿವ್ಯದರ್ಶನವನ್ನೂ ೧೮ ರಲ್ಲಿ 'ರಾಯೇ' ಎಂಬ ಉತ್ತಮಲಾಭವನ್ನೂ ಗಮನಿಸಿ. ಈಶಾವಾಸ್ಯದ ಅಸಂಭೂತಿಯೇ ಕೈವಲ್ಯ ಎಂಬ ವಿಚಾರವನ್ನು ಗಮನಿಸಿ. ಜೀವಾತ್ಮಪ್ರಾಪ್ತಿಯೇ ಕೈವಲ್ಯ.
4. ಈಶಾ. ೨ 'ಕುರ್ವನ್ನೇವೇಹ ಕರ್ಮಾಣಿ' ಗಮನಿಸಿ.

ಅದಕ್ಕೆ ಕಾರಣವಾದ ಜಡಪದಾರ್ಥಗಳೆಲ್ಲವನ್ನೂ ಪ್ರಕೃತಿ ಎನ್ನಲಾಗಿದೆ. ಇದೆಲ್ಲವನ್ನೂ ಕರ್ಮಾನುಸಾರ ಅನುಭವಿಸುವ ಜೀವಾತ್ಮನೇ ಪುರುಷ. ಈ ಎರಡು ಪ್ರತ್ಯೇಕ ತತ್ತ್ವಗಳ ಜ್ಞಾನವೂ ಪರಮಾತ್ಮೋಪಾಸಕನಿಗೆ ಅತ್ಯವಶ್ಯಕ.[1]
ಗೀ. ಭಾ. ೧೩. ೫, ೬, ೧೩, ೧೮, ೧೯.

೩೫

ಪ್ರಕೃತಿಸಂಬಂಧದಿಂದ ಬಂದ ಸತ್ತ್ವ, ರಜಸ್, ತಮೋಗುಣಗಳಲ್ಲಿ ಸತ್ತ್ವಗುಣವನ್ನು ನಾವು ಹೆಚ್ಚಿಸಿಕೊಂಡು ನಿಷ್ಕಾಮವಾಗಿ ಕರ್ಮಗಳನ್ನು ನೆರವೇರಿಸಬೇಕು. ಹೀಗೆ ಮಾಡಿದರೆ ಯಾವುದೇ ಕರ್ಮಗಳು ಸಾತ್ತ್ವಿಕವೆನಿಸುತ್ತವೆ. ಸಕಾಮಕರ್ಮಗಳನ್ನು ಮಾಡಿದರೆ ರಜಸ್ತಮೋಗುಣಗಳು ಅಭಿವೃದ್ಧಿಯಾಗಿ ಅದರಿಂದ ಮತ್ತೆ ಮತ್ತೆ ಹೆಚ್ಚು ಅಜ್ಞಾನ ದುಃಖಗಳನ್ನೇ ಪಡೆಯಬೇಕಾದೀತು.[2] ಗೀ. ಭಾ. ೧೪. ೫. ೧೭. ೧೮.

೩೬

ಪ್ರಕೃತಿಪುರುಷತತ್ತ್ವಗಳನ್ನು ವಿವೇಚಿಸಿ ತಿಳಿದು ನಿಷ್ಕಾಮಕರ್ಮಾಚರಣೆಯಿಂದ ಮಾತ್ರ ಮಾನವನು ತ್ರಿಗುಣಾತೀತನಾಗಲಾರ. ಇವೆಲ್ಲದರ ಜೊತೆಗೆ ಪರಮಾತ್ಮನನ್ನು ಅನನ್ಯಪ್ರೀತಿಯಿಂದ ಉಪಾಸನೆ ಮಾಡಲೇಬೇಕು. ಆಗ ಮಾತ್ರ ಅವನು ಗುಣಾತೀತನಾಗಿ ಪರಿಶುದ್ಧಸ್ಥಿತಿಯನ್ನು ಪಡೆಯಬಹುದು.[3] ಗೀ. ಭಾ. ೧೪. ೨೬.

೩೭

ಪರಿಶುದ್ಧಸ್ಥಿತಿಯಲ್ಲಿ ಜೀವಾತ್ಮಪ್ರಾಪ್ತಿಗಾಗಲೀ, ಪರಮಾತ್ಮಪ್ರಾಪ್ತಿಗಾಗಲೀ ಮುಖ್ಯವಾದ ಕಾರಣ ಪರಮಾತ್ಮನೊಬ್ಬನೇ. ಅವನಿಗೆ ಶರಣಾಗತನಾದರೆ ಮಾತ್ರ ಗುಣಾತೀತಸ್ಥಿತಿಯೂ ಪರಿಶುದ್ಧ ಆತ್ಮದರ್ಶನವೂ ಪರಮಾತ್ಮಪ್ರಾಪ್ತಿಯೂ ಆಗುವುದು.[4] ಗೀ. ಭಾ. ೧೪. ೨೩.

೩೮

ಸಂಸಾರಬಂಧದಲ್ಲಿರುವ ಜೀವಾತ್ಮ ಕ್ಷರಪುರುಷ. ಈ ಬಂಧದಿಂದ ಮುಕ್ತನಾದ ಜೀವಾತ್ಮ ಅಕ್ಷರಪುರುಷ. ಮೂರು ಲೋಕವನ್ನು ಒಳಹೊಕ್ಕು ವ್ಯಾಪಿಸಿ ಧರಿಸಿ ಆಳುವ ಪರಮಾತ್ಮನೇ ಉತ್ತಮ ಪುರುಷ. ಲೌಕಿಕವಾಗಿಯೂ ವೈದಿಕವಾಗಿಯೂ ಪರಮಾತ್ಮನಿಗೆ ಪುರುಷೋತ್ತಮ ಎಂಬ ಹೆಸರು. ಕ್ಷರಪುರುಷರಿಗೆ ಪುರುಷೋತ್ತಮನ ಅರಿವುಂಟಾದರೆ ಅವರು ಅಕ್ಷರಪುರುಷರಾಗುವರು.[5] ಇದೇ ವೇದಾಂತದ ಒಳಗುಟ್ಟು. ಗೀ. ಭಾ. ೧೫. ೧೬ರಿಂದ ೨೦.

೩೯

ಕರ್ಮಗಳಲ್ಲಿ ಮಾಡಬೇಕಾದವು ಯಾವುವು, ಮಾಡಬಾರದವು ಯಾವುವು ಎಂಬ ಬಗ್ಗೆ ಶಾಸ್ತ್ರವೇ ಮುಖ್ಯ ನಿರ್ಣಾಯಕ ಆಧಾರ. ಆದುದರಿಂದ ಯಾವುದನ್ನೂ ಶಾಸ್ತ್ರವಿಧಾನದಿಂದಲೇ ಮಾಡಬೇಕು.[6] ಗೀ. ಭಾ. ೧೬. ೨೪.

---

1. ಈಶಾ. ೧. 'ಇದಂ ಸರ್ವಂ', ಈಶಾ. ೮. 'ಪರ್ಯಗಾತ್', ಈಶಾ. ಪುಟ ೧೯ ಶ್ವೇತಾಶ್ವತರ ವಚನ ಗಮನಿಸಿ.
2. ಈಶಾ. ೨, ೩. ಗಮನಿಸಿ. 3. ಈಶಾ. ೧೫ ಗಮನಿಸಿ.
4. ಈಶಾ.೧೫. ಗಮನಿಸಿ. 5. ಈಶಾ. ೧೬ ಪುರುಷ, ಪರಮಾತ್ಮ ಎಂಬುದನ್ನು ಗಮನಿಸಿ.
6. ಈಶಾ. ೨ ಗಮನಿಸಿ.

## ೪೦

ಪರಮಾತ್ಮನ ಹೆಸರಾದ 'ಓಂ' ಕಾರವು ವೈದಿಕಕರ್ಮಗಳಲ್ಲೆಲ್ಲಾ ಅನ್ವಯಿಸುತ್ತದೆ. ವೈದಿಕರು ಇದನ್ನರಿತೇ ತಮ್ಮ ಯಜ್ಞ ದಾನ ತಪಸ್ ಮುಂತಾದವುಗಳಲ್ಲಿ 'ಓಂ' ಕಾರವನ್ನು ಹೆಚ್ಚಾಗಿ ಬಳಸುತ್ತಾರೆ. ನಿಷ್ಕಾಮವಾಗಿ ಮಾಡುವ ಕರ್ಮಗಳಲ್ಲಿ 'ತತ್' ಎಂಬ ಪರಮಾತ್ಮನ ಹೆಸರೂ ಬಳಕೆಯಾಗುತ್ತದೆ. ಇಂತಹ ಕರ್ಮಗಳು ಶಾಶ್ವತ ಫಲವನ್ನೇ ಕೊಡುವುದರಿಂದ 'ಸತ್' ಎಂದೂ ಇವನ್ನು ಕರೆಯಬಹುದು. ಸರಿಯಾದ ಕ್ರಮದಲ್ಲಿದ್ದು ಹೀಗೆ ಒಟ್ಟಿನಲ್ಲಿ ವೈದಿಕ ಕರ್ಮಗಳಲ್ಲೆಲ್ಲ 'ಓಂತತ್‌ಸತ್' ಎಂಬ ಅಂಶಗಳನ್ನು ಬಳಸುವುದರಿಂದ ಅವು ಆಸುರವಾಗದೆ ಶಾಸ್ತ್ರೀಯವೆನಿಸುವುವು.[1] ಗೀ. ಭಾ. ೧೭. ೨೩ ರಿಂದ ೨೮.

## ೪೧

ತ್ಯಾಗವೆಂದರೆ ಅದು ಸನ್ಯಾಸವಲ್ಲ. ಕರ್ಮಗಳನ್ನು ಮಾಡದೆಯೇ ಬಿಡುವುದು ಸನ್ಯಾಸ. ನಿತ್ಯನೈಮಿತ್ತಿಕ ಕಾಮ್ಯಕರ್ಮಗಳೆಲ್ಲವನ್ನೂ ನಿಷ್ಕಾಮವಾಗಿ ಮಾಡುತ್ತಾ ಇರುವುದೇ ತ್ಯಾಗ ಎಂದು ಕೆಲವರನ್ನುವರು.

ಕರ್ಮತ್ಯಾಗವು ಮೂರು ವಿಧ. ಸ್ವರ್ಗಾದಿಫಲಗಳು ನನಗೆ ಬೇಡ ಎಂದುಕೊಳ್ಳುವುದು ಫಲತ್ಯಾಗ. ನನಗಾಗಿ ನಾನು ಮಾಡಿಕೊಳ್ಳಬೇಕಾದ ಕೆಲಸವಿದು ಎಂಬ ಮಮತೆಯನ್ನು ಬಿಡುವುದು ಸಂಗತ್ಯಾಗ. ಪರಮಾತ್ಮನೇ ಎಲ್ಲ ಕೆಲಸಗಳನ್ನು ಮಾಡಿಸುವವನು, ನಾನು ಕರ್ತೃವಲ್ಲ, ನೆಪಮಾತ್ರ ಎಂದು ತಿಳಿಯುವುದು 'ಕರ್ತೃತ್ವತ್ಯಾಗ'. ಈ ರೀತಿ ತ್ರಿವಿಧತ್ಯಾಗಪೂರ್ವಕವಾಗಿ ನಿಯತವಾದ ಕರ್ಮಗಳನ್ನು ಮಾಡುತ್ತಲೇ ಇರಬೇಕು. ಇದೇ 'ಸಾತ್ತ್ವಿಕ ತ್ಯಾಗ'. ಕರ್ಮವನ್ನೇ ಮಾಡದೆ ಬಿಟ್ಟುಬಿಡುವುದು ಆಸುರವಾದ 'ತಾಮಸತ್ಯಾಗ'ವೆನಿಸುವುದು. ಮಾಡಲು ಕಷ್ಟವೆಂಬ ಕಾರಣದಿಂದ ಕರ್ಮವನ್ನು ಮಾಡದಿರುವುದು 'ರಾಜಸತ್ಯಾಗ'ವೆನಿಸುವುದು. ಮುಮುಕ್ಷುವು ಸಾತ್ತ್ವಿಕ ತ್ಯಾಗವನ್ನೇ ಮಾಡಬೇಕು. ಇದೇ ಶಾಸ್ತ್ರೀಯವಾದ ತ್ಯಾಗ. ಇದೇ ನಿಜವಾದ ಸನ್ಯಾಸ[2].

ಗೀ. ಭಾ. ೧೮. ೨ ರಿಂದ ೯.

## ೪೨

ಅಗ್ನಿಹೋತ್ರಾದಿ ವೈದಿಕಕರ್ಮಗಳು ನಿತ್ಯಕರ್ಮಗಳೆನಿಸಿವೆ. ಆದರೂ ಕೆಲವು ವಿಶೇಷಫಲಗಳಿಗಾಗಿ ಅವುಗಳನ್ನು ಬಳಸಿದರೆ ಆಗ ಅವು ಕಾಮ್ಯಕರ್ಮಗಳೆನಿಸುತ್ತವೆ. ಅದೇ ಅಗ್ನಿಹೋತ್ರಾದಿಗಳನ್ನು ನಿಷ್ಕಾಮವಾಗಿ ಉಪಾಸನೆಗೆ ಅಳವಡಿಸಿದರೆ ಅವು ಮೋಕ್ಷಕಾರಣಕರ್ಮಗಳೆನಿಸುತ್ತವೆ. ಈ ನಿಯಮವನ್ನು 'ವಿನಿಯೋಗ ಪೃಥಕ್ತ್ವ ಎನ್ನುತ್ತಾರೆ. ಕರ್ಮಗಳನ್ನು ಮೋಕ್ಷಕ್ಕಾಗಿ ಮಾಡಬೇಕೆಂಬ ಬಗ್ಗೆ 'ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ' ಎಂಬ ಉಪನಿಷದ್ವಚನವು ಪ್ರಬಲವಾದ ಪ್ರಮಾಣಾಧಾರವಾಗಿದೆ. ಆದುದರಿಂದ ಶಾಸ್ತ್ರೀಯ ತ್ಯಾಗವೇ ಸನ್ಯಾಸ. ಸನ್ಯಾಸ, ತ್ಯಾಗಗಳು ಬೇರೆಬೇರೆಯಲ್ಲ.[3]

ಗೀ. ಭಾ. ೧೮.೧೨.

---

1. ಈಶಾವಾಸ್ಯದ ಆರಂಭ ಅಂತ್ಯಗಳಲ್ಲಿ 'ಹರಿಃ ಓಂ' ಎಂಬುದರ ಬಳಕೆಯೂ ಈಶಾ.೧೭ರಲ್ಲಿ ಓಂಕಾರದ ಅನುಸಂಧಾನ ಗಮನಾರ್ಹ.

2. ಈಶಾ. ೧. 'ತೇನ ತ್ಯಕ್ತೇನ' ಈಶಾ. ೨. 'ಕುರ್ವನ್ನೇವೇಹ ಕರ್ಮಾಣಿ' ಗಮನಿಸಿ.

3. ಈಶಾ. ೨, ೯, ೧೧ ಗಮನಿಸಿ.

೪೩

ಜಗತ್ಕಾರಣವೂ ಜಗದ್ವ್ಯಾಪಕವೂ ಆದ ಪರಮಾತ್ಮನನ್ನು ತಮ್ಮ ತಮ್ಮ ಕರ್ತವ್ಯಕರ್ಮಗಳ ಮೂಲಕ ಉಪಾಸಿಸಿ ಅವನ ಅನುಗ್ರಹದಿಂದ ಪರಮಪುರುಷಾರ್ಥವೆನಿಸಿದ ಮೋಕ್ಷವನ್ನು ಮಾನವರು ಪಡೆಯಬಹುದು.[1]

ಗೀ. ಭಾ. ೧೮. ೪೬.

೪೪

ಫಲ ಸಂಗ ಕರ್ತೃತ್ವಗಳಲ್ಲಿ ನಿರಾಸಕ್ತನಾಗಿ ದೃಢಮನಸ್ಸಿನಿಂದ ಕರ್ಮಮಾಡುವವನು ಜ್ಞಾನಯೋಗವೆಂಬ ಜೀವಾತ್ಮದರ್ಶನದ ಅವಶ್ಯಕತೆಯಿಲ್ಲದೆಯೇ ಪರಮಾತ್ಮಧ್ಯಾನದಲ್ಲಿ ನಿಷ್ಠೆಯನ್ನು ಪಡೆಯುವನು.[2]

ಗೀ.ಭಾ. ೧೮. ೪೮.

೪೫

ಆತ್ಮತತ್ತ್ವವಿಷಯವಾದ ಜ್ಞಾನ, ಉಪಾಸನೆಯ ಬಗ್ಗೆ ದೃಢವಾದ ಮನಸ್ಸು ಲೌಕಿಕ ಆಕರ್ಷಕವಿಷಯಗಳ ತ್ಯಾಗ, ರಾಗದ್ವೇಷಗಳ ಹೊರದೂಡುವಿಕೆ, ಏಕಾಂತಶೀಲತೆ, ಅಲ್ಪಾಹಾರ, ಕೆಲಸ, ಮಾತು, ಮನಸ್ಸುಗಳಲ್ಲಿ ಹಿಡಿತ ಮತ್ತು ಮಿತವಾದ ಬಳಕೆ, ಪ್ರತಿದಿನವೂ ಧ್ಯಾನ, ಪರಮಾತ್ಮನ ವಿಚಾರವಿಲ್ಲದಂತಹ ವಿಷಯಗಳಲ್ಲಿ ವೈರಾಗ್ಯ ಇವೆಲ್ಲವನ್ನೂ ಸಾಧಿಸಿಕೊಳ್ಳಬೇಕು. ದೇಹವೂ ನಾನೆಂಬ ಅಹಂಕಾರವನ್ನೂ ದೇಹಸಂಬಂಧವನ್ನೇ ಬೆಳೆಸುವಂತಹ ಮನೋಬಲವನ್ನೂ, ಇಂತಹ ಮನಸ್ಸಿನಿಂದಾಗುವ ದರ್ಪವನ್ನೂ, ಆಸೆ ಕೋಪಗಳನ್ನೂ, ಆಸ್ತಿ ಪಾಸ್ತಿಸಂಗ್ರಹಣೆಯ ಅಭಿರುಚಿಯನ್ನೂ ನನ್ನದೆಂಬ ಭಾವನೆಯನ್ನೂ ತ್ಯಜಿಸಬೇಕು. ಆತ್ಮಾನುಭವದಲ್ಲೇ ನೆಮ್ಮದಿಯಿಂದ ಮಗ್ನವಾಗಿರಬೇಕು. ಇಂತಹ ಪರಿಶುದ್ಧನಾದ ನಿಷ್ಕಾಮ ಉಪಾಸಕನಿಗೆ ಧ್ಯಾನದಿಂದ ಪರಮಾತ್ಮ ಭಕ್ತಿಯ ಉನ್ನತಸ್ತರ ಸಿಗುವುದು. ಇದು ಇಹದಲ್ಲಾಗುವ, ಅತ್ಯಾನಂದಕರವಾದ ಪರಮಾತ್ಮನ ಗಾಢಾನುಭವ.

ಇಂತಹ ಭಕ್ತಿಯ ಸ್ತರದಲ್ಲಿ ಮಾತ್ರ ಉಪಾಸಕನಿಗೆ ಪರಮಾತ್ಮತತ್ತ್ವದ ನಿಜಾಂಶವು ಗೋಚರವಾದೀತು. ಇಂತಹ ಪರಮಾತ್ಮತತ್ತ್ವಜ್ಞಾನದ ನಂತರವೇ ಮುಕ್ತಿಯಿಂದ ಪರಮಾತ್ಮಪ್ರಾಪ್ತಿ ಆಗುವುದು.[3]

ಗೀ. ಭಾ. ೧೮. ೫೦ ರಿಂದ ೫೪.

೪೬

ಕಾಮ್ಯಕರ್ಮಗಳನ್ನು ಹೊರತು ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾತ್ರ ನಿಷ್ಕಾಮವಾಗಿ ಆಚರಿಸುವವರಿಗೆ ಈ ಮೇಲೆಹೇಳಿದ ಕ್ರಮದಲ್ಲಿ ಪರಮಾತ್ಮಪ್ರಾಪ್ತಿ ಆಗುವಂತೆಯೇ, ಕಾಮ್ಯಕರ್ಮಗಳನ್ನು ತ್ರಿವಿಧತ್ಯಾಗ ಪೂರ್ವಕವಾಗಿ ಆಚರಿಸುವವರಿಗೆ ಪರಮಾತ್ಮನ ಅನುಗ್ರಹದಿಂದ ಪರಮಾತ್ಮಪ್ರಾಪ್ತಿ ಆಗುವುದು.[4]

ಗೀ. ಭಾ. ೧೮. ೫೬.

---

1. ಈಶಾವಾಸ್ಯದ ಸಾರಾರ್ಥವೇ ಇದು ಎಂಬುದು ಗಮನಾರ್ಹ.
2. ಈಶಾ. ೧೧ ಗಮನಿಸಿ. ಓ. ಓ. ವೇದಾನ್ತಾಚಾರ್ಯಭಾಷ್ಯ ಇತ್ಯಾದಿ ಗಮನಿಸಿ.
3. ಸಂಭೂತಿ-ಅಸಂಭೂತಿಗಳ ಬಗ್ಗೆ ವೇದಾಂತಾಚಾರ್ಯಭಾಷ್ಯ ಮತ್ತು ಈಶಾ. ೧೬. ಗಮನಿಸಿ.
4. ಈಶಾ.ವಿ. ಶ್ರೀರಂಗಾಚಾರ್ಯರ ವ್ಯಾಖ್ಯಾನ ಗಮನಿಸಿ.

೪೭

ಈಶ್ವರನೆಂದರೆ ಎಲ್ಲರ ಹೃದಯದೊಳಗಿದ್ದು ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡು ಎಲ್ಲವನ್ನೂ ಮಾಡಿಸುವ ವಾಸುದೇವನೆನಿಸಿದ ಪರಮಾತ್ಮ. ಅಂತರಾತ್ಮನಾದ ಅವನ ಪ್ರೇರಣೆಯನ್ನು ನಾವು ಅರಿತು ಅದರಂತೆ ನಡೆಯಬೇಕು. ಇದೇ ಎಲ್ಲ ಜ್ಞಾನಿಗಳ ರಹಸ್ಯ.[1] ಗೀ. ಭಾ. ೧೮. ೬೧, ೬೨.

೪೮

ಜ್ಞಾನದ ಸಾರವಾದ ಉತ್ತಮ ರಹಸ್ಯವೊಂದಿದೆ. ಅದು ನಾವು ಪರಮಾತ್ಮನ ನಿಷ್ಠಉಪಾಸಕರಾಗುವುದು. ಹಾಗಾಗಬೇಕಾದರೂ ಸ್ವತಃ ಶಕ್ತರಲ್ಲದ ನಾವು ಪರಮಾತ್ಮನೇ ಪ್ರಾಪ್ಯ ಮತ್ತು ಪ್ರಾಪಕ ಎಂಬ ದೃಢನಿಶ್ಚಯದಿಂದ ಅವನಿಗೆ ಶರಣಾಗತರಾಗಬೇಕು. ಕರ್ಮವಾಗಲೀ, ಜ್ಞಾನವಾಗಲೀ, ಭಕ್ತಿಯೆಂಬ ಉಪಾಸನೆಯಾಗಲಿ ಮುಕ್ತಿಗೆ ಮುಖ್ಯಸಾಧನವೆಂದೂ ಅವನಲ್ಲಿ ಶರಣಾಗತರಾದವರಿಗೆ ಭಕ್ತಿಯನ್ನೂ ಪರಮಾತ್ಮನೇ ಕರುಣಿಸಿ ಅದಕ್ಕೆ ಅಡ್ಡಿಯಾದ ಎಲ್ಲ ಪಾಪಗಳನ್ನೂ ಅವನೇ ನಾಶಗೊಳಿಸುವನು. ಯಾವುದೇ ಶಾಸ್ತ್ರೀಯವಾದ ಕರ್ಮಜ್ಞಾನ ಭಕ್ತಿಯೋಗಗಳನ್ನು ಫಲಸಂಗಕರ್ತೃತ್ವತ್ಯಾಗಪೂರ್ವಕವಾಗಿ ಆಚರಿಸುತ್ತಾ ಪರಮಾತ್ಮನಿಗೆ ಶರಣಾಗತರಾಗಿ ಅವನ ಆಸೆಯಲ್ಲೇ ಇದ್ದರೆ ಮಾತ್ರ ಪರಮಾತ್ಮನು ನಮ್ಮ ಸಕಲ ಪಾಪಗಳನ್ನೂ ಪರಿಹರಿಸಿ ತನ್ನಲ್ಲಿಗೆ ನಮ್ಮನ್ನು ಸೇರಿಸಿ ಕೊಳ್ಳುವನು.[2] ಗೀ. ಭಾ. ೧೮. ೬೬.

# 3. ಶ್ರೀಭಾಷ್ಯ

೧

ಅಲ್ಪಫಲಗಳಿಗಾಗಿಯೇ ಇರುವ ಕೇವಲ ಕರ್ಮಗಳನ್ನು ಬಿಟ್ಟು, ಗುರುವಿನ ಬಳಿ ಮಹಾಫಲಕ್ಕಾಗಿ ಬ್ರಹ್ಮವಿದ್ಯೆಯನ್ನು ಕಲಿಯಬೇಕು.

ಪರಮಪುರುಷನಾದ ಪರಮಾತ್ಮನನ್ನು ತಿಳಿದು ಅನುಭವಿಸುವ ಮಾರ್ಗವೇ ಬ್ರಹ್ಮವಿದ್ಯೆ. ಪರಮಾತ್ಮನ ಪ್ರೀತಿಗೆ ಪಾತ್ರರಾಗಿ ನಾವು ಅವನನ್ನು ಪ್ರೀತಿಯಿಂದ ಉಪಾಸನೆಮಾಡುವುದರಿಂದ ಪರಲೋಕದಲ್ಲಿ ಪರಮಾತ್ಮನ ಶಾಶ್ವತ ಅನುಭವರೂಪವಾದ ಅಮೃತತ್ವ ಲಭಿಸುವುದು. ಇದೇ ವಿದ್ಯೆಯ ಮಹಾಫಲ. ಈ ವಿದ್ಯೆಯೇ ವೇದಾನ್ತ.[3]

ಜಿಜ್ಞಾಸಾಧಿಕರಣ ಆರಂಭ.

೨

ಉಪಾಸನೆ ಅಂದರೆ ಧ್ಯೇಯವಸ್ತುವಾದ ಸಮಸ್ತಚಿದಚಿದ್ವಿಶಿಷ್ಟನೂ, ಜಗತ್ಕಾರಣನೂ, ಆದ ಪರಮಾತ್ಮನು ನಮ್ಮ ಕಣ್ಣಿನಲ್ಲೇ ಕಟ್ಟಿರುವಂತೆ ಆಗುವ ಧ್ಯಾನ. ಇದು ಆರಂಭವಾಗುವುದೂ ನೆರವೇರುವುದೂ ಆ

---

1. ಈಶಾ. ೧, 'ಈಶಾ' ಎಂಬುದರ ಅರ್ಥವನ್ನೂ ವೇದಾಂತಾಚಾರ್ಯರ ಭಾಷ್ಯದ ಮಂಗಳಶ್ಲೋಕವನ್ನೂ ಗಮನಿಸಿ.

2. ಈಶಾ. ೧೮ ಗಮನಿಸಿ.

3. ಈಶಾವಾಸ್ಯದ ಸಾರಾರ್ಥವೇ ಇದು. ಇದು ವೇದಾಂತಗಳ ಸಾರವೂ ಹೌದು.

ಪರಮಾತ್ಮನ ಪ್ರೀತಿಯೊಂದರಿಂದಲೇ. ನಾವು ಅವನ ಪ್ರೀತಿಗೆ ತಕ್ಕಂತೆ ಅವನನ್ನು ಹೆಚ್ಚಾಗಿ ಪ್ರೀತಿಸಬೇಕು. ಇಂತಹ ಉಪಾಸನೆಯೇ ಭಕ್ತಿ. ಇದು ನಮಗೆ ಸಿಗಬೇಕಾದರೆ ಪರಮಾತ್ಮನೇ ಅದಕ್ಕೆ ಪ್ರಯತ್ನಿಸುವನು. ಅವನ ಈ ಪ್ರಯತ್ನವನ್ನು ವಿಫಲಗೊಳಿಸದೇ ಅವನಿಗೆ ಅನುಕೂಲವಾಗಿ ನಾವು ವಿವೇಕ ಮೊದಲಾದ ಏಳು ಸಲಕರಣೆಗಳ ಸಹಾಯದಿಂದ ನಿಷ್ಕಾಮವಾಗಿ ಕರ್ಮಗಳನ್ನೇ ಮಾಡುತ್ತಾ ಬ್ರಹ್ಮವಿದ್ಯೆಯನ್ನು ಸಾಧಿಸಬೇಕು. ನಿಷ್ಕಾಮಕರ್ಮಗಳನ್ನೇ ಅಂಗವಾಗಿ ಉಳ್ಳದ್ದು ಬ್ರಹ್ಮವಿದ್ಯೆ.[1] ಈ ವಿಷಯದಲ್ಲಿ "ವಿದ್ಯಾಂ ಚಾವಿದ್ಯಾಂ ಚ" ಎಂಬ ಶ್ರುತಿವಚನವು ಸ್ಪಷ್ಟವಾಗಿದೆ.[2]

ಜಿಜ್ಞಾಸಾಧಿಕರಣ, ಲಘುಸಿದ್ಧಾಂತ.

೩

ಎಲ್ಲ ಬ್ರಹ್ಮವಿದ್ಯೆಗಳಲ್ಲೂ ಸಗುಣವಾದ ಬ್ರಹ್ಮವೇ ಉಪಾಸನೆಯ ಲಕ್ಷ್ಯ. ಎಲ್ಲ ರೀತಿಯ ಉಪಾಸನೆಗಳಿಗೂ ಅಮೃತತ್ವರೂಪವಾದ ಬ್ರಹ್ಮಪ್ರಾಪ್ತಿಯೊಂದೇ ಫಲ. ಒಬ್ಬ ವ್ಯಕ್ತಿ ಯಾವುದಾದರೊಂದು ರೀತಿಯ ಉಪಾಸನೆಯನ್ನು ಮಾತ್ರ ಸ್ವೀಕರಿಸಬೇಕು. ಬ್ರಹ್ಮಸೂತ್ರವಾಕ್ಯಕಾರರಾದ ಬ್ರಹ್ಮನಂದಿಮಹರ್ಷಿಗಳೂ, ದ್ರಮಿಡಭಾಷ್ಯಕಾರರೂ ತಮ್ಮ ಮಾತುಗಳಲ್ಲಿ ಇದೇ ನಿರ್ಣಯಮಾಡಿರುವರು. ಉಪಾಸಕನು ಮುಕ್ತಿಯಲ್ಲಿ ಬ್ರಹ್ಮವೆನಿಸಿದ ಪರಮಾತ್ಮನಿಗೆ ಸಮಾನವಾದ ರೂಪವನ್ನು ಪಡೆದು ಅವನಿಗೆ ಅಧೀನನಾಗಿಯೇ ಇರುವನು. ಅಧೀನವಸ್ತುವು ವಿಶೇಷಣ, ಅಧಿಪತಿಯು ವಿಶೇಷ್ಯ. ವಿಶೇಷಣಗಳು ಭಿನ್ನಭಿನ್ನವಾಗಿದ್ದರೂ ವಿಶೇಷ್ಯ ಒಂದೇ ಆದುದರಿಂದ ಸಮಸ್ತಸದ್ಗುಣವಿಶಿಷ್ಟನಾದ ಪರಮಾತ್ಮನೊಬ್ಬನೇ ತತ್ವ ಎಂದು ಹೇಳಬೇಕು.[3]

ಮಹಾಸಿದ್ಧಾಂತ, ಸ್ಮೃತಿಪುರಾಣಘಟ್ಟ.

೪

ಎಲ್ಲ ಉಪಾಸನೆಗಳಲ್ಲೂ ಪರಮಾತ್ಮನನ್ನು ಎಲ್ಲ ಜಡ ಮತ್ತು ಆತ್ಮವಸ್ತುಗಳ ಆತ್ಮ ಎಂದೇ ಧ್ಯಾನಿಸಬೇಕು. 'ಆತ್ಮೇತಿ ತು' ಎಂದು ಸೂತ್ರಕಾರರೂ 'ಆತ್ಮೇತ್ಯೇವ' ಎಂದು ವಾಕ್ಯಕಾರರೂ ನಿರ್ಧರಿಸಿರುವರು. ಜಡವಸ್ತುಗಳೆಲ್ಲವೂ ಅನುಭವಿಸಲ್ಪಡಲು ಯೋಗ್ಯವಾದುವು. ಸಾಮಾನ್ಯವಾಗಿ ಅವುಗಳನ್ನು ಅನುಭವಿಸುವ ವಸ್ತುಗಳೇ ಜೀವಾತ್ಮಗಳು. ಈ ರೀತಿ ಅನುಭವಿಸುವಂತೆ ಮಾಡುವ ವಸ್ತುವೇ ಪರಮಾತ್ಮ. ಅವನ ಅಧೀನವಲ್ಲಿ ಉಳಿದೆಲ್ಲವೂ ಇರುವುದು. ವಿಶೇಷರೀತಿಯಲ್ಲಿ ಎಲ್ಲವನ್ನೂ ಪರಮಾತ್ಮನೇ ಲೀಲಾರ್ಥವಾಗಿ ಅನುಭವಿಸುವನು.

ಎಲ್ಲವೂ ಅವನ ಶರೀರ. ಲೋಕದಲ್ಲಿ ಶರೀರದ ಆಕಾರದಿಂದ ಬರುವ ಮನುಷ್ಯ ಪಶುಪಕ್ಷಿ ಮುಂತಾದ ಹೆಸರುಗಳಿಂದ ಆಯಾಶರೀರದಲ್ಲಿರುವ ಜೀವಾತ್ಮಗಳನ್ನು ಕರೆಯುವಂತೆ ಜಗತ್ತಿನ ಎಲ್ಲವಸ್ತುಗಳ ಹೆಸರಿನಿಂದಲೂ ಎಲ್ಲ ದೇವತೆಗಳ ಹೆಸರಿನಿಂದಲೂ ಪರಮಾತ್ಮನೊಬ್ಬನನ್ನೇ ಕರೆಯಬಹುದು.[4]

ಮಹಾಸಿದ್ಧಾಂತ, ನಿವರ್ತಕಾನುಪಪತ್ತಿಪ್ರಕರಣ.

---

1. ಈಶಾ. ೧೧. ವಿದ್ಯೆಯ ವಿಚಾರಕ್ಕೆ ಉಪಯುಕ್ತ.
2. ಈ ಮಂತ್ರದ ವಿವರಣೆ ವಿಮರ್ಶೆಗಳನ್ನು ಈಶಾ. ಪುಟ ೧೦೪ ರಲ್ಲಿ ಕೊಟ್ಟಿದೆ.
3. ಈಶಾವಾಸ್ಯದ ವಿದ್ಯೆಯಲ್ಲಿ ಉಪಾಸನೆ ಮಾಡಲ್ಪಡುವ ಪರಮಾತ್ಮನಿಗಿರುವ ಗುಣಗಳಲ್ಲಿ ಮುಖ್ಯವೆನಿಸುವ ಗುಣ ಎಲ್ಲದರ ಒಳಗೂ ಹೊರಗೂ ಅವನ ವ್ಯಾಪಿಸಿರುವಿಕೆ. ವಿಶಿಷ್ಟಬ್ರಹ್ಮವೇ ಉಪಾಸ್ಯ ಎಂಬ ವಿಚಾರ ಎಲ್ಲ ವಿದ್ಯೆಗಳಿಗೂ ಅವಶ್ಯ.
4. ಈ ವಿಚಾರವು "ಈಶಾವಾಸ್ಯಂ" 'ಆತ್ಮೈವಾಭೂತ್' 'ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ' 'ಅಗ್ನೇನಯ ಸುಪಥಾ' "ವಿಶ್ವಾನಿ ದೇವ ವಯುನಾನಿ ವಿದ್ವಾನ್" ಮುಂತಾದ ಎಲ್ಲವೂ ಪರಮಾತ್ಮನಲ್ಲೇ ಅನ್ವಯಿಸುವುದೆಂಬ ನಿರ್ಧಾರಕ್ಕೆ ಉಪಯುಕ್ತ.

೫

ಸಕಲಜಗತ್ತಿನ ಸಕಲವಿಧವಾದ ಕಾರಣವೂ ಪರಮಾತ್ಮನೊಬ್ಬನೇ. ಅವನು ಚಿದಚಿದ್ವಿಶಿಷ್ಟನಾದುದರಿಂದ ನಾನಾಪರಿಣಾಮಗಳಿಂದಾಗುವ ದೋಷಗಳು ಅವನಿಗಿರದೆ, ಅವನ ವಿಶೇಷಣಗಳಾದ ಚಿದಚಿತ್ತುಗಳಲ್ಲಿ ಸಂಭವಿಸುತ್ತವೆ.[1]

ಜನ್ಮಾದ್ಯಧಿಕರಣ.

೬

ಪುರುಷೋತ್ತಮನಾದ ಪರಮಾತ್ಮನ ಯಾವುದೇ ವಿಚಾರವನ್ನು ತಿಳಿಯಬೇಕಾದರೂ ವೇದಶಾಸ್ತ್ರವೇ ಆಧಾರ.[2]

ಶಾಸ್ತ್ರಯೋನಿತ್ವಾಧಿಕರಣ.

೭

ಸಮನ್ವಯಾಧಿಕರಣದಲ್ಲಿ 'ಸಪರ್ಯಗಾತ್' ಎಂಬ ಈಶಾ. ೮ನೇ ಮಂತ್ರವನ್ನು ಉಲ್ಲೇಖಿಸಲಾಗಿದೆ. ರಂಗರಾಮಾನುಜರ ವಿವರಣೆ ಪರಿಶಿಷ್ಟ ಪುಟ. ೨೦೫. ನೋಡಿ.

೮

ಇತರ ಶಾಸ್ತ್ರಗಳ ಅಭ್ಯಾಸ ವೇದಾರ್ಥಜ್ಞಾನಕ್ಕೆ ಸಹಾಯಕ. ವೇದಾರ್ಥಜ್ಞಾನ ವೇದಾಂತಾರ್ಥ ಜ್ಞಾನಕ್ಕೆ ಮುಖ್ಯವಾದ ಅಂಗ. ವೇದಾಂತಾರ್ಥವೇ ಪರಮಾತ್ಮ. ಪರಮಾತ್ಮನನ್ನು ತಿಳಿದು ಉಪಾಸಿಸಿ ಅವನನ್ನು ಶಾಶ್ವತವಾಗಿ ಪಡೆಯುವುದು ಮುಖ್ಯಪ್ರಯೋಜನ. ಅದೇ ಪುರುಷಾರ್ಥ. ಉಪನಿಷತ್ತುಗಳು ಈ ಪರಮಪುರುಷಾರ್ಥವನ್ನೇ ತಮ್ಮ ಶಬ್ದಗಳಿಂದ ತಿಳಿಸುತ್ತವೆ.[3]

ಸಮನ್ವಯಾಧಿಕರಣ.

೯

ಉಪನಿಷತ್ತುಗಳ ಗುರಿ ಪರಮಾತ್ಮ ಎಂಬುದು ಬ್ರಹ್ಮಸೂತ್ರಗಳ ಮೊದಲೆರಡು ಅಧ್ಯಾಯಗಳ ನಿರ್ಣಯ. ಮೂರನೆಯ ಅಧ್ಯಾಯ ಉಪಾಸನೆಯವಿಷಯ. ನಾಲ್ಕನೆಯ ಅಧ್ಯಾಯ ಪರಮಾತ್ಮಪ್ರಾಪ್ತಿವಿಷಯ.

ಉಪಾಸನೆಯ ಪೂರ್ವಸಿದ್ಧತೆಯಲ್ಲಿ ಅತಿಮುಖ್ಯವಾದ ಎರಡು ಅಂಶಗಳಿವೆ. ಒಂದನೆಯದು ಉಪಾಸನೆಯ ಗುರಿಯಲ್ಲದ ವಿಷಯಗಳಲ್ಲಿ ವೈರಾಗ್ಯ. ಎರಡನೆಯದು ಉಪಾಸನೆಯ ಗುರಿಯಲ್ಲಿ ಉತ್ಕಟವಾದ ಪ್ರೀತಿ.

ಜೀವಾತ್ಮಗಳಲ್ಲಿ ಜಾಗ್ರತ್, ಸ್ವಪ್ನ, ಸುಷುಪ್ತಿ, ಮೂರ್ಛೆ, ಮರಣಾದಿ ದೋಷಗಳಿರುವುದರಿಂದ ಅವುಗಳ ಬಗ್ಗೆಯೂ ವೈರಾಗ್ಯಬೇಕು. ಪರಮಾತ್ಮನೊಬ್ಬನಿಗೆ ಮಾತ್ರ ಯಾವುದೇ ದೋಷಗಳು ಇಲ್ಲದುದರಿಂದ

---

1. ಈ ವಿಚಾರವು ಜಗದ್ರಹಸ್ಯವೇ ಪರಮಾತ್ಮ ಎಂದೂ ಈ ಜಗತ್ಕಾರಣವಾದ ವಸ್ತುವೇ ಉಪಾಸನೆಗೆ ಯೋಗ್ಯವೆಂದೂ ಅದರ ವಿಚಾರವೇ ಎಲ್ಲ ಉಪನಿಷತ್ತುಗಳ ಗುರಿ ಎಂದೂ ತಿಳಿಸುತ್ತದೆ.
2. ಈ ವಿಚಾರದಿಂದ ಉಪನಿಷತ್ತುಗಳ ಸೂಕ್ಷ್ಮಾಧ್ಯಯನಕ್ಕೆ ಉತ್ತಮವಾದ ಪ್ರೇರಣೆಯೂ ಸರಿದಾರಿಯೂ ಸಿಗುವುದು.
3. ಈ ವಿಚಾರವು ವೇದಾಂತಾಭ್ಯಾಸಕ್ಕೆ ಉತ್ತೇಜಕವಾಗಿದೆ.

ಅವನ ಬಗ್ಗೆ ಪ್ರೀತಿ ಉಂಟಾಗಬೇಕು. ಈ ಎರಡು ವಿಚಾರಗಳನ್ನು ಕ್ರಮವಾಗಿ ಈ ಮೂರನೆಯ ಅಧ್ಯಾಯದ ಒಂದು ಎರಡನೆಯ ಪಾದಗಳಲ್ಲಿ ಚರ್ಚಿಸಲಾಗುವುದು.[1]

ತದಂತರಪ್ರತಿಪತ್ತ್ಯಧಿಕರಣ.

೧೦

ನಿಷ್ಕಾಮಕರ್ಮಗಳ ಆಚರಣೆಯಲ್ಲೂ ಸ್ನಾನ, ಶುಚಿತ್ವ, ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳು ಉಪಾಸಕನಿಗೆ ಅತ್ಯವಶ್ಯಕ.[2]

ಕೃತಾತ್ಯಯಾಧಿಕರಣ.

೧೧

ಕೆಟ್ಟಕೆಲಸ ಮಾಡುವವರು ನರಕಕ್ಕೆ ಹೋಗುವರೆಂದೂ, ನಿಷ್ಕಾಮವಾಗಿ ವಿದ್ಯಾನಿಷ್ಠರಾದವರು ದೇವಯಾನಮಾರ್ಗದಲ್ಲಿ ಪರಮಾತ್ಮನನ್ನು ಸೇರುವರೆಂದೂ, ಸಕಾಮವಾದ ಒಳ್ಳೆಯಕೆಲಸ ಮಾಡುವವರು ಪಿತೃಯಾನಮಾರ್ಗದಲ್ಲಿ ಸ್ವರ್ಗಾದಿ ಸ್ಥಾನಗಳಿಗೆ ಹೋಗಿ ಮತ್ತೆ ಭೂಮಿಗೆ ಹಿಂತಿರುಗುವರು ಎಂದೂ ಶಾಸ್ತ್ರಗಳಲ್ಲಿದೆ.[3]

ಅನಿಷ್ಟಾದಿಕಾರ್ಯಧಿಕರಣ.

೧೨

ಜೀವಾತ್ಮಗಳ ಸಹಜವಾದ ಶುದ್ಧಸ್ವರೂಪವು ಪುಣ್ಯಪಾಪಕರ್ಮಾನುಸಾರ ಪರಮಾತ್ಮನ ಸಂಕಲ್ಪದಿಂದ ಕಾಣಿಸದಂತೆ ಮುಚ್ಚಲ್ಪಟ್ಟಿದೆ. ಅವನು ತನ್ನ ಸಂಕಲ್ಪದಿಂದಲೇ ಇದನ್ನು ತೆರೆಯಬೇಕು. ಜೀವಾತ್ಮಗಳ ಬಂಧಮೋಕ್ಷಗಳಿಗೆ ಇದೇ ಕಾರಣ. ಈಗಿನ ಸೃಷ್ಟಿಸ್ಥಿತಿಕಾಲಗಳಲ್ಲಿ ಜೀವಾತ್ಮಗಳಿಗೆ ದೇಹದ ಮೂಲಕ ಬಾಧೆ; ಪ್ರಳಯಕಾಲದಲ್ಲಿ ಸೂಕ್ಷ್ಮವಾದ ಪ್ರಕೃತಿಯ ಸಂಬಂಧದಿಂದ ಬಂಧ ಎಂಬ ವ್ಯತ್ಯಾಸವನ್ನು ಇಲ್ಲಿ ಅರಿತಿರಬೇಕು.[4]

ಸಂಧ್ಯಾಧಿಕರಣ.

೧೩

ಪರಮಾತ್ಮನೊಬ್ಬನನ್ನೇ ಏಕೆ ಉಪಾಸಿಸಬೇಕು? ಅವನಲ್ಲಿರುವ ವಿಶೇಷವೇನು? ಅವನನ್ನು ನಿರಂತರ ಪ್ರೀತಿಸಬಹುದು. ಅದಕ್ಕೆ ತಕ್ಕ ಎರಡು ಅಂಶಗಳು ಅವನಲ್ಲಿವೆ. ಒಂದನೆಯದು ಅವನಲ್ಲಿ ಎಲ್ಲ ಒಳ್ಳೆಯ ಗುಣಗಳು ಯಾವಾಗಲೂ ತುಂಬಿವೆ. ಎರಡನೆಯದು ಅವನಲ್ಲಿ ಏನೂ ಒಂದಿನಿತೂ ದೋಷವಿಲ್ಲ. ಈ ಎರಡು ಅಂಶಗಳನ್ನೇ 'ಉಭಯಲಿಂಗ' ಎನ್ನಲಾಗಿದೆ. ಈ ಎರಡು ಗುರುತುಗಳಿಲ್ಲದ ಯಾವುದೇ ವಸ್ತುವನ್ನು ನಾವು ಪ್ರೀತಿ

---

1. ಈಶಾವಾಸ್ಯದ ಗಹನ ಅಧ್ಯಯನಕ್ಕೂ ಆಚರಣೆಗೂ ಈ ಅಧ್ಯಾಯಗಳು ಅತ್ಯವಶ್ಯಕ.
2. 'ಕುರ್ವನ್ನೇವ' ಗೆ ಉಪಯುಕ್ತ.
3. 'ಅಸುರ್ಯಾ ನಾಮ' ಗೆ ಉಪಯುಕ್ತ.
4. ಈ ವಿಚಾರವು 'ಹಿರಣ್ಮಯೇನ' ಎಂಬ ಮಂತ್ರವಿಚಾರದಲ್ಲಿ ಗಮನಾರ್ಹವಾಗಿದೆ.

ಯಿಂದ ನಿರಂತರವಾಗಿ ಭಜಿಸಲಾಗುವುದಿಲ್ಲ. ಆದುದರಿಂದ ಪರಮಾತ್ಮನನ್ನುಳಿದ ಇತರ ಯಾವುದೇ ವಸ್ತುವೂ ಉಪಾಸ್ಯವಲ್ಲ, ಉಪನಿಷತ್ತುಗಳ ಮುಖ್ಯವಸ್ತುವೂ ಅಲ್ಲ.[1]

ಉಭಯಲಿಂಗಾಧಿಕರಣ.

೧೪

ಅಮೃತತ್ವವೆನಿಸಿದ ಪರಮಾತ್ಮಪ್ರಾಪ್ತಿಗೆ ಮುಖ್ಯಸಾಧನವೂ ಪರಮಾತ್ಮನೇ. ಉಪಾಸನೆಯ ರಹಸ್ಯ ಇದು. ಇಂತಹ ಪರಮಾತ್ಮವಸ್ತು ಎಲ್ಲೆಲ್ಲೂ ಎಲ್ಲವನ್ನೂ ಒಳಹೊಕ್ಕು ಎಲ್ಲವನ್ನೂ ಆವರಿಸಿ ಧರಿಸಿ ನಿಂತಿದೆ. ಹೀಗೆ ಅಂತರ್ವ್ಯಾಪ್ತಿ ಬಹಿರ್ವ್ಯಾಪ್ತಿಗಳಿರುವ ಈ ಪರಮಾತ್ಮ ಒಂದೇ ಎಲ್ಲಕ್ಕಿಂತಲೂ ಶ್ರೇಷ್ಠ ಮತ್ತು ಹಿರಿಯದು.[2]

ಪರಾಧಿಕರಣ.

೧೫

ಧ್ಯಾನರೂಪ ಕ್ರಿಯಾತ್ಮಕವಾದ ಜ್ಞಾನವೇ ಉಪಾಸನೆ. ಬರಿಯಕ್ರಿಯೆಯೇ ಕರ್ಮ. ಯಾವುದೇ ಕ್ರಿಯಾತ್ಮಕವಾದ ವಸ್ತುವು ಶಾಶ್ವತವಾದ ಫಲವನ್ನುಂಟುಮಾಡಲು ಸಮರ್ಥವಲ್ಲ. ಶಾಶ್ವತವಾದ ಪರಮಾತ್ಮನೊಬ್ಬನೇ ಅಂತಹ ಫಲವನ್ನು ಕೊಡಲು ಸಮರ್ಥ. ಆದುದರಿಂದ ಉಪಾಸಕರೆಲ್ಲರೂ 'ಪರಮಾತ್ಮನೊಬ್ಬನೇ ಪರಮಾತ್ಮಪ್ರಾಪ್ತಿರೂಪವಾದ ಫಲಕ್ಕೆ ಸಾಧನ' ಎಂಬ ಅರಿವಿನಿಂದ ಅವನನ್ನೇ ಆಶ್ರಯಿಸಬೇಕೆಂದು ದೃಢವಾಗಿ ನಂಬಿ ಉಪಾಸಿಸಬೇಕು. ಕರ್ಮವಾಗಲಿ ಉಪಾಸನೆಯಾಗಲಿ ಅದು ಪರಮಾತ್ಮನ ಆರಾಧನೆ. ಆರಾಧನೆಯೇ ಸಾಧನವಲ್ಲ. ಆರಾಧಿತನಾದ ಪರಮಾತ್ಮನೇ ಎಲ್ಲ ಫಲಗಳಿಗೂ ಸಾಧನ. ಆರಾಧನೆಯೇ ಸಾಧನ ಎಂಬುದು ಜೈಮಿನಿಮಹರ್ಷಿಗಳ ಅಭಿಮತ. ಆರಾಧಿತನಾದ ಪರಮಾತ್ಮನೇ ಸಾಧನ ಎಂಬುದು ಬಾದರಾಯಣವ್ಯಾಸರ ಅಭಿಮತ.[3]

ಫಲಾಧಿಕರಣ.

೧೬

ಪರಮಾತ್ಮನ ಯಾವುದೇ ಉಪಾಸನೆಯಲ್ಲೂ ಅವನಲ್ಲಿರುವ ಸತ್ಯತ್ವ, ಜ್ಞಾನತ್ವ, ಅನಂತತ್ವ, ಆನಂದತ್ವ ಅಮಲತ್ವ ಎಂಬ ಐದುಗುಣಗಳನ್ನು ಕೂಡಿಸಿಯೇ ಧ್ಯಾನಿಸಬೇಕು. ಇವು ಐದೂ ಪರಮಾತ್ಮನ ಸ್ವರೂಪಗುಣಗಳು. ಅವನದೇ ಗುಣಗಳಾದ ಕರುಣೆ ಮುಂತಾದುವನ್ನು ಯಾವ ಉಪಾಸನೆಯಲ್ಲಿ ತಿಳಿಸಲಾಗಿದೆಯೋ ಆ ಉಪಾಸನೆಗಳಲ್ಲಿ ಮಾತ್ರ ಧ್ಯಾನಿಸಬೇಕು. ಇವು ನಿರೂಪಿತಸ್ವರೂಪಗುಣಗಳು.

ಗುಣಗಳನ್ನು ಒಂದು ವ್ಯಕ್ತಿಯಂತೆ ಭಾವಿಸಿ ಅವುಗಳ ಅಂತರ್ವಿಭಾಗಗಳನ್ನು ವ್ಯಕ್ತಿಯ ಅವಯವಗಳಂತೆ ಭಾವಿಸುವ ರೀತಿ ಅನೇಕ ಉಪನಿಷತ್ತುಗಳಲ್ಲಿದ್ದರೂ ಅವು ಧ್ಯಾನದ ಸೌಕರ್ಯಕ್ಕಾಗಿಯೇ ಹೊರತು, ಸಿದ್ಧವಾದ ಧ್ಯಾನದಲ್ಲಿ ಅನ್ವಯಿಸಬಾರದು.

---

1. ಈಶಾವಾಸ್ಯವು ಪರಮಾತ್ಮನನ್ನು ಕುರಿತಿರುವುದು. ಯಾವ ದೇವತಾಂತರಗಳನ್ನೂ ಕುರಿತಿಲ್ಲ ಎಂಬ ನಿರ್ಣಯಕ್ಕೆ ಇದು ಸಹಾಯಕ.

2 ಈ ವಿಚಾರವೇ ಈಶಾವಾಸ್ಯವಿದ್ಯೆಯ ಮುಖ್ಯವಾದ ವಿಶೇಷ ವಿಷಯ ಎಂದು ಹೇಳಿರುವರು. ಈ ಅರ್ಥ ಈಶಾ. ೫ 'ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ' ಎಂಬಲ್ಲಿ ಸ್ಪಷ್ಟವಾಗಿದೆ. 'ಈಶಾವಾಸ್ಯಂ'ನಲ್ಲಿ ಸಂಗ್ರಹವಾಗಿದೆ.

3. ಈ ವಿಚಾರವು ಈಶಾವಾಸ್ಯದ ಉಪಾಸನೆಯಲ್ಲಿ ಪರಮಾತ್ಮನ ಧ್ಯಾನದ ಜೊತೆಗೆ ಅವನ ಶರಣಾಗತಿ ಅವಶ್ಯ ಎಂಬ ವಿಚಾರಕ್ಕೆ ಸಾಧಕವಾಗಿದೆ. ಈಶಾ. ಶ್ಲೋ. ೧೫೭ ಗಮನಿಸಿ.

ಉದಾ :– ತೈತ್ತಿರೀಯ ಆನಂದವಲ್ಲಿಯಲ್ಲಿ ಆನಂದದವಿಭಾಗಗಳನ್ನು ಪ್ರಿಯವೇ ಆನಂದದ ತಲೆ, ಮೋದವು ಬಲಪಾರ್ಶ್ವ, ಪ್ರಮೋದವು ಎಡಪಾರ್ಶ್ವ, ಆನಂದವೇ ಆತ್ಮ, ಬ್ರಹ್ಮವೇ ಬಾಲ (ಕೆಳಬಾಗ)[1] ಎಂದು ವರ್ಣಿಸಲಾಗಿದೆ.

ಆನಂದಾದ್ಯಧಿಕರಣ.

## ೧೭

ಒಂದೇ ಹೆಸರಿನ ಎರಡು ವಿದ್ಯೆಗಳಲ್ಲಿ ಹೇಳಿರುವ ಗುಣಗಳು ಒಂದೇ ಹೆಸರಿನಲ್ಲಿರದೆ ಬೇರೆ ಹೆಸರುಗಳಿಂದಲೂ ಅಂತರ್ವಿಭಾಗದ ಹೆಸರುಗಳಿಂದಲೂ ಪಠಿತವಾಗಿದ್ದರೆ ಅವುಗಳನ್ನು ಒಂದೇ ಅರ್ಥದಲ್ಲಿ ಹೊಂದಿಸಿಕೊಳ್ಳಬೇಕು. ಉದಾ : ವಾಜಸನೇಯ ಶಾಖೆಯ ಅಗ್ನಿರಹಸ್ಯದ ಶಾಂಡಿಲ್ಯವಿದ್ಯೆಯಲ್ಲಿರುವ 'ಸತ್ಯಸಂಕಲ್ಪ' ಎಂಬ ಗುಣವನ್ನು ಬೃಹದಾರಣ್ಯಕದಲ್ಲಿ 'ವಶಿತ್ವ', 'ಈಶಾನತ್ವ' ಎಂಬ ಹೆಸರಿನಿಂದ ತಿಳಿಸಲಾಗಿದೆ. ಈ ಎರಡು ವಿದ್ಯೆಗಳೂ ಒಂದೇ.[2]

ಸಮಾನಾಧಿಕರಣ.

## ೧೮

ಒಂದೇ ವಿಚಾರವು ಎರಡುಜಾಗದಲ್ಲಿದ್ದು ಆದರ ಫಲವು ಬೇರೆ ಬೇರೆಯಾಗಿದ್ದರೆ ಅಂತಹ ವಿದ್ಯೆಗಳು ಬೇರೆ ಬೇರೆ ಎನಿಸುವುವು.[3]

ಪುರುಷವಿದ್ಯಾಧಿಕರಣ.

## ೧೯

ಬ್ರಹ್ಮವು ಎಲ್ಲೆಲ್ಲೂ ತುಂಬಿದೆ. ಎಲ್ಲ ವಿಧದಲ್ಲೂ ಅದು ತುಂಬಿದೆ. ಅದು ಅತಿವಿಶಾಲವಾದ ಅಂತರಿಕ್ಷವನ್ನೂ ಆವರಿಸಿದೆ ಎಂಬ ವಿಚಾರಗಳು ಎಲ್ಲ ಉಪಾಸನೆಗಳಲ್ಲೂ ಅನ್ವಯಿಸುವುದಿಲ್ಲ. ಏಕೆಂದರೆ ಒಂದು ಸಣ್ಣ ಹೃದಯದೊಳಗೆ ಸಣ್ಣ ಆಕಾರವಾಗಿ ಪರಮಾತ್ಮನನ್ನು ಉಪಾಸನೆಮಾಡುವಾಗ ಈ ಗುಣಗಳು ಅಲ್ಲಿ ಹೊಂದುವುದಿಲ್ಲ.[4]

ಸಂಭೃತ್ಯಧಿಕರಣ.

---

1. ಹೀಗೆ ಈಶಾವಾಸ್ಯದಲ್ಲಿ ಪ್ರತ್ಯೇಕ ಒಂದೊಂದು ವಸ್ತುವಿನೊಳಗೆ ಪರಮಾತ್ಮನ ಇರುವಿಕೆಯನ್ನಾಗಲೀ, ಹೊರಗೆ ಆವರಿಸಿರುವಿಕೆಯನ್ನಾಗಲೀ ಧ್ಯಾನಿಸದೆ ಸಮಸ್ತ ವಿಶ್ವದ ಒಳಗೂ ಹೊರಗೂ ವ್ಯಾಪಿಸಿರುವಂತೆ ಧ್ಯಾನಿಸಬೇಕೆಂಬ ವಿಚಾರ ಸೂಚಿತವಾಗಿದೆ ಎನ್ನಬಹುದು.

2. ಈಶಾವಾಸ್ಯದಲ್ಲಿ ಹೇಳಿರುವ 'ತದಂತರಸ್ಯ ಸರ್ವಸ್ಯ' ಎಂಬುದನ್ನೂ ಬೃಹದಾರಣ್ಯಕದ 'ಅಂತರ್ಯಾಮಿಬ್ರಾಹ್ಮಣವು' ವಿವರಿಸಿ ತಿಳಿಸುತ್ತದೆ ಎಂಬುದನ್ನೂ ಗಮನಿಸಿರಿ.

3. ಉಪಾಸನೆ ಮಾಡುವಾಗಲೂ ಓಂಕಾರವನ್ನು ಹೇಳಲಾಗುವುದು. ಉಪನಿಷತ್ ಪಠನದ ಅದ್ಯಂತಗಳಲ್ಲೂ ಹೇಳಲಾಗುವುದು. ಉಪಾಸನೆಯ ಫಲ ಪರಮಾತ್ಮಪ್ರಾಪ್ತಿ. ಉಪನಿಷತ್ ಪಠನದ ಫಲ ಉಪನಿಷತ್ ಅಧ್ಯಯನ. ಆದುದರಿಂದ ಈ ಓಂಕಾರಗಳು ಬೇರೆ ಬೇರೆ.

4. ಈ ವಿಚಾರ ಒಂದು ಮಾದರಿಯಷ್ಟೆ. ಇದರಂತೆ ಆಯಾ ಉಪಾಸನೆಗಳಿಗೆ ಹೊಂದದ ಗುಣಗಳನ್ನು ಬೇರೆಡೆ ಸಾಮಾನ್ಯವಾಗಿ ಹೇಳಿದ್ದರೂ ಸ್ವೀಕರಿಸಬಾರದು. ಇದರಂತೆ ಈಶಾವಾಸ್ಯವಿದ್ಯೆಯಲ್ಲಿ ಅಂತರಾದಿತ್ಯವಿದ್ಯೆಯ ಅನುಕ್ತ ವಿಚಾರಗಳನ್ನು ಸೇರಿಸಬಾರದು ಎಂಬುದೂ ಗಮನಾರ್ಹ. ಈ ವಿಷಯವನ್ನು ಈಶಾ. ಪುಟ. ೧೫೦. ಚರ್ಚಿಸಿರಿ.

೨೦

ವಾಜಸನೇಯಶಾಖೆಯ ಎಲ್ಲ ವಿಭಾಗದವರೂ 'ಪ್ರವರ್ಗ್ಯಬ್ರಾಹ್ಮಣ' ಎಂಬ ವಿಸ್ತಾರವಾದ ವೇದಭಾಗವನ್ನು ತಮ್ಮ ಶಾಖೆಯ 'ಈಶಾವಾಸ್ಯ' ಮುಂತಾದ ಉಪನಿಷತ್ತುಗಳಿಗೆ ಶಾಂತಿಮಂತ್ರವನ್ನಾಗಿ ಪಠಿಸುತ್ತಾರೆ. 'ಪ್ರವರ್ಗ್ಯ' ಎಂಬುದು ಒಂದು ವೈದಿಕಕರ್ಮ. ಈ ವೇದಭಾಗವು ಅದರಲ್ಲಿ ಮಾತ್ರ ಉಪಯೋಗವಾಗುವುದರಿಂದ ಅದು ಉಪನಿಷತ್ತುಗಳಲ್ಲಿರುವ ಉಪಾಸನೆಗೆ ಸ್ವಲ್ಪವೂ ಸಂಬಂಧಿಸುವುದಿಲ್ಲ. ಇದೇ ವಿಚಾರ ಇತರ ಶಾಂತಿಮಂತ್ರಗಳಿಗೂ ಅನ್ವಯಿಸುವುದು.[1]

ವೇಧಾದ್ಯಧಿಕರಣ.

೨೧

ಉಪಾಸಕನಿಗೆ ತನ್ನ ಪುಣ್ಯಪಾಪಗಳ ವಿನಾಶ ಎಂದರೆ ಕಳೆದುಹೋಗುವಿಕೆಯೂ ಕಳೆದ ಅವುಗಳು ತನ್ನ ಶತ್ರುಮಿತ್ರರಲ್ಲಿ ಹಂಚಿಹೋಗುವುದೂ ಉಪಾಸನೆಯಲ್ಲಿ ಚಿಂತಿಸಬೇಕಾದ ವಿಷಯ. ಕೆಲವು ಉಪನಿಷತ್ತುಗಳಲ್ಲಿ ಕಳೆಯುವುದನ್ನೂ ಮತ್ತೆ ಕೆಲವಲ್ಲಿ ಹಂಚಿಹೋಗುವುದನ್ನೂ ತಿಳಿಸಲಾಗಿದೆ. ಮೊದಲು ಕಳೆದರಲ್ಲವೆ ಇತರರಲ್ಲಿ ಅದು ನಂತರ ಸೇರುವುದು ಸಾಧ್ಯ. ಆದುದರಿಂದ ಎರಡು ವಿಚಾರಗಳನ್ನೂ ಎಲ್ಲಾ ಉಪಾಸನೆಗಳಲ್ಲೂ ಚಿಂತಿಸಬೇಕು.[2]

ಹಾನ್ಯಧಿಕರಣ.

೨೨

ದೇಹ ಬಿಡುವಾಗಲೇ ಪುಣ್ಯಪಾಪಗಳ ವಿನಾಶವು ಆಗುವುದೆಂದೂ, ಅರ್ಚಿರಾದಿಮಾರ್ಗದಲ್ಲಿ ಮುನ್ನಡೆವ ವಿದ್ಯುತ್ಪುರುಷನ ಸ್ಪರ್ಶವಾದಾಗ ವಿನಾಶ ಆಗುವುದೆಂದೂ ಎರಡು ಬಗೆಯ ವಚನಗಳಿವೆ. ವಸಿಷ್ಠ, ಅಪಾನ್ತರತಮಸ್ ಮುಂತಾದ ಕೆಲವು ಚಿರಂಜೀವಿ ವ್ಯಕ್ತಿಗಳು ಅವರು ಜ್ಞಾನಿಗಳಾಗಿದ್ದರೂ ಅವರ ಕರ್ತವ್ಯಗಳು ಉಳಿದಿರುವುದರಿಂದ ಲೋಕಕ್ಷೇಮಾರ್ಥವಾಗಿ ಪರಮಾತ್ಮನು ಅವರಿಗೆ ದೇಹನಾಶವಾದರೂ ಈ ಪ್ರಕೃತಿಯೊಳಗೇ ಬೇರೆ ದೇಹದಲ್ಲಿ ಅವರನ್ನು ಇಟ್ಟಿರುವನು.

---

1. ಮುಕ್ತಿಕೋಪನಿಷತ್ತಿನಲ್ಲಿ ಈ ಪ್ರವರ್ಗ್ಯಬ್ರಾಹ್ಮಣದ ವಿಚಾರವಿಲ್ಲ. ಅಲ್ಲಿ ವಾಜಸನೇಯ ಹದಿನೇಳು ಶಾಖೆಗಳಲ್ಲೂ ಉಪನಿಷತ್ತಿನ ಮಂತ್ರ 'ಪೂರ್ಣಮದಃ' ಎಂದು ಹೇಳಿದೆ. ಈಶಾವಾಸ್ಯದ ಉಪಾಸನೆಯ ವಿಷಯ ಪರಮಾತ್ಮನ ಪೂರ್ಣತೆ. ಹೀಗೆ ಉಪಾಸನೆಯ ಸಾರವನ್ನು ಹೇಳುವ ಈ ಮಂತ್ರವನ್ನು ಯೋಗ್ಯವರಿತು ಉಪಾಸಕರೂ ಬಳಸಬಹುದೆಂದು ತೋರುವುದು. ಶತಪಥಬ್ರಾಹ್ಮಣದ ಒಂದು ಭಾಗವಾದ ಪ್ರವರ್ಗ್ಯಬ್ರಾಹ್ಮಣವನ್ನೂ ಒಂದುಸಲ ಪಠಿಸಬೇಕಾದರೆ ಸುಮಾರು ಮೂವತ್ತು ನಿಮಿಷಗಳಾದರೂ ಬೇಕು. ಆದ್ಯಂತಗಳಲ್ಲಿ ಇದನ್ನು ಪಠಿಸಿ ಮಧ್ಯೆ ಈಶಾವಾಸ್ಯವನ್ನು ಪಠಿಸುವಾಗ ಈ ಉಪನಿಷತ್ತಿನ ಪ್ರಾಧಾನ್ಯವೇ ಮರೆತುಹೋಗಬಹುದಾಗಿದೆ. ಆದುದರಿಂದ ಮಹರ್ಷಿಗಳು 'ಪೂರ್ಣಮದಃ' ಎಂಬ ಮಂತ್ರವನ್ನು ಬಳಕೆಯಲ್ಲಿಟ್ಟುಕೊಂಡಿದ್ದಿರಬಹುದು.

2. ಈಶಾವಾಸ್ಯದಲ್ಲಿ ಅಸಂಭೂತಿ, ವಿನಾಶ ಎಂಬ ಶಬ್ದಗಳಿಂದ ತಿಳಿಸಲಾಗಿರುವ ಪ್ರತಿಬಂಧಕ ಪುಣ್ಯಪಾಪಗಳ ನಾಶದ ಜೊತೆಗೆ ಅವುಗಳ ಸಂಕ್ರಾಂತಿ ಅಂದರೆ ಇತರರಲ್ಲಿ ಸೇರುವಿಕೆಯನ್ನೂ ಚಿಂತಿಸಬೇಕೆಂದು ತಿಳಿಯಬೇಕು. ಪರಿಶಿಷ್ಟದ ನ್ಯಾಯಸಿದ್ಧಾಂಜನದಲ್ಲಿ ಉಲ್ಲೇಖಿಸಿರುವ ನಾರಾಯಣಾಚಾರ್ಯರ ಅಭಿಪ್ರಾಯವನ್ನು ಗಮನಿಸಿ. ಈಶಾ. ಪುಟ. ೨೧೭.

ಅರ್ಚಿರಾದಿಮಾರ್ಗ ಈಗಲೇ ಅವರಿಗೆ ಸಿಗುವುದಿಲ್ಲ. ಅವರ ಇತರ ಪುಣ್ಯಪಾಪಕರ್ಮಗಳು ನಾಶವಾದರೂ ಪ್ರಾರಬ್ಧಕರ್ಮವೊಂದು ಉಳಿದೇ ಇರುತ್ತದೆ.[1] ಸಾಂಪರಾಯಾಧಿಕರಣ.

## ೨೩

ಜ್ಞಾನಿಯು ದೇಹವಿಯೋಗಾನಂತರ ಅರ್ಚಿರಾದಿದಿವ್ಯಮಾರ್ಗದಲ್ಲಿ ಪರಮಾತ್ಮನ ಲೋಕಕ್ಕೆ ಹೋಗಬೇಕು. ಈ ದಿವ್ಯಮಾರ್ಗದ ಚಿಂತನವು ಎಲ್ಲ ಉಪಾಸಕರಿಗೂ ಉಪಾಸನಕಾಲದಲ್ಲಿ ಅತ್ಯವಶ್ಯಕವಾದ ಅಂಗ. ಪಂಚಾಗ್ನಿ ವಿದ್ಯಾನಿಷ್ಠರಿಗೂ ಇತರ ಎಲ್ಲ ಬ್ರಹ್ಮವಿದ್ಯಾನಿಷ್ಠರಿಗೂ ಇದು ಸಮಾನ.[2] ಅನಿಯಮಾಧಿಕರಣ.

## ೨೪

ಕೆಲವು ಉಪನಿಷತ್ತುಗಳಲ್ಲಿ ಪರಮಾತ್ಮನನ್ನು 'ಅಕ್ಷರ' ಎಂಬ ಹೆಸರಿನಿಂದ ವ್ಯವಹರಿಸಿ ಅವನಿಗೆ ಈ ಕೆಳಗಿನ ವಾಕ್ಯಗಳಲ್ಲಿರುವ ಗುಣಗಳಿರುವುದಾಗಿ ಹೇಳಲಾಗಿದೆ. ಈ ಗುಣಗಳೆಲ್ಲವೂ ಉಭಯಲಿಂಗಾಧಿಕರಣದಲ್ಲಿ ಹೇಳಿದ 'ನಿರ್ದೋಷತ್ವ'ವನ್ನು ದೃಢಪಡಿಸುವ ಸ್ವರೂಪಗುಣಗಳು. ಆದುದರಿಂದ ಇವೆಲ್ಲವೂ ಎಲ್ಲ ಉಪಾಸನೆಗಳಲ್ಲೂ ಧ್ಯೇಯಗಳು. ಈ ಮುಂದೆ ತಿಳಿಸುವ ಗುಣಗಳನ್ನು ಮಾತ್ರ ಎಲ್ಲ ಉಪಾಸನೆಗಳಲ್ಲೂ ಬಳಸಬೇಕಲ್ಲದೆ 'ಸರ್ವ ಕರ್ಮತ್ವ' ಮುಂತಾದವುಗಳನ್ನು ಬಳಸಬಾರದು. ಅವುಗಳನ್ನು ಆಯಾ ವಿದ್ಯೆಗಳಲ್ಲಿ ಮಾತ್ರ ಬಳಸಬೇಕು.[3]
ಅಕ್ಷರಧ್ಯಧಿಕರಣ.

1. ಈ ಅಪಾಂತರತಮಸ್ ಎಂಬ ಋಷಿಯೂ ಪರಮಾತ್ಮನ ಅಂಶಾವತಾರ. ಇವನನ್ನೇ 'ವೇದಪುರುಷ' ಎಂದು ವ್ಯವಹರಿಸಲಾಗಿದೆ. ಸುಬಾಲೋಪನಿಷತ್, ಮತ್ತು ತೈತ್ತಿರೀಯೋಪನಿಷತ್ತಿನ ಭಾಷ್ಯಗಳನ್ನು ಗಮನಿಸಿದರೆ ಕೂರನಾರಾಯಣಮುನಿಗಳ ಮಾತಿನ ಪ್ರಕಾರ ಮನುವೇ ಅಪಾಂತರತಮಸ್ ಎಂದೂ, ಯಾಸ್ಕರ ನಿರುಕ್ತ ಕ್ರಮವನ್ನು ಗಮನಿಸಿದರೆ ಅವನೇ ದಧ್ಯಙ್ಆಥರ್ವಣ ಋಷಿ ಎಂದೂ, ಅವನೇ ಸೂರ್ಯನ ಅವತಾರ, ಅವನಿಗೆ ಕುದುರೆಯ ಮುಖ ಎಂದೂ ತಿಳಿಯುವುದು. ಹೀಗೆ ಒಂದೇ ಜೀವಾತ್ಮವು ಪರಮಾತ್ಮನ ಅಂಶಶಕ್ತಿಯಿಂದ ಉಪಬೃಂಹಿತವಾಗಿ ವಿವಿಧ ಸೃಷ್ಟಿ ಕಲ್ಪಗಳಲ್ಲಿ ವಿವಿಧ ಮಹರ್ಷಿ, ರಾಜರ್ಷಿ, ದೇವರ್ಷಿಗಳ ರೂಪದಿಂದ ವೇದಗಳ ಸಾಕ್ಷಾತ್ಕಾರ ಮತ್ತು ರಕ್ಷಣೆಗಳನ್ನು ಮಾಡಿದೆ ಎಂಬುದನ್ನು ಸಾಂಪ್ರದಾಯಿಕರು ಒಪ್ಪಬಹುದು. ಇದರಿಂದ ಈಶಾವಾಸ್ಯವು ವೇದಪುರುಷನ ಉಪದೇಶವೇ? ದಧ್ಯಙ್ಆಥರ್ವಣನ ಉಪದೇಶವೇ? ಸೂರ್ಯನ ಉಪದೇಶವೇ? ಭಾಗವತ ಪುರಾಣ ಪ್ರಕಾರ ಮನುವಿನ ಉಪದೇಶವೇ? ಎಂಬ ಪ್ರಶ್ನೆಗಳಿಗೆ ಸಮನ್ವಿತವಾದ ಒಂದೇ ಉತ್ತರ ಕೊಡಬಹುದು.
2. ಈ ಚಿಂತನೆಯನ್ನೇ ಈಶಾವಾಸ್ಯದಲ್ಲಿ ಸಂಭೂತಿ ಎಂದು ತಿಳಿಸಲಾಗಿದೆ. ನಾರಾಯಣಾಚಾರ್ಯರ ಅಭಿಪ್ರಾಯದ ಉಲ್ಲೇಖ- ಪರಿಶಿಷ್ಟ ಪುಟ ೨೧೭ ನೋಡಿ.
3. ಬೃಹದಾರಣ್ಯಕೋಪನಿಷತ್ ೫. ೮. ರಲ್ಲಿ ಹೇಳಿರುವ ಗುಣಗಳು ಅಸ್ಥೂಲಂ, ಅನಣು, ಅತಮಃ, ಅವಾಯು, ಅನಾಕಾಶಂ, ಅಸಂಗಂ, ಅರಸಂ, ಅಗಂಧಂ, ಅಚಕ್ಷುಷ್ಕಂ, ಅಶ್ರೋತ್ರಂ, ಅವಾಕ್, ಅಮನಃ, ಅತೇಜಸ್ಕಂ, ಅಪ್ರಾಣಂ, ಅಮುಖಂ, ಅಮಾತ್ರಂ, ಅನಂತರಂ, ಅಬಾಹ್ಯಂ, ಅನಶ್ನತ್, ಅನಾಶ್ಯಂ, ಸರ್ವಪ್ರಶಾಸಿತೃ, ಸರ್ವವಿಧಾರಕಂ, ಸರ್ವಪ್ರಶಂಸ್ಯಂ, ಅಜ್ಞಾನಾಂ ಕರ್ಮಫಲಾಸ್ತ್ರಕಂ, ವಿಜ್ಞಾನಾಂ ಬ್ರಾಹ್ಮಣ್ಯಪದಂ, ಅದೃಷ್ಟಂ ದ್ರಷ್ಟೃ, ಅಶ್ರುತಂ ಶ್ರೋತೃ, ಅಮತಂ ಮಂತೃ, ಅವಿಜ್ಞಾತಂ ವಿಜ್ಞಾತೃ, ದ್ರಷ್ಟ್ರಂತರ ರಹಿತಂ, ಶ್ರೋತ್ರಂತರರಹಿತಂ, ಮಂತ್ರಂತರರಹಿತಂ, ವಿಜ್ಞಾತ್ರಂತರರಹಿತಂ, ಆಕಾಶೋತಿ ಪ್ರೋತಾಧಾರಂ, ಅಕ್ಷರಮ್.

ಅಥರ್ವವೇದದ ಮುಂಡಕೋಪನಿಷತ್ತಿನಲ್ಲಿ ಹೇಳಿರುವ ಗುಣಗಳು ಅದ್ರೇಶ್ಯಂ, ಅಗ್ರಾಹ್ಯಂ, ಅಗೋತ್ರಂ, ಅವರ್ಣಂ, ಅಚಕ್ಷುಶ್ರೋತ್ರಂ, ಅಪಾಣಿಪಾದಂ, ನಿತ್ಯಂ, ವಿಭು, ಸರ್ವಗತಂ, ಸುಸೂಕ್ಷ್ಮಂ, ಅವ್ಯಯಂ, ಭೂತಯೋನಿ, ಪರಾತ್ಪರಂ, ಅನೀಶಃ, ಅಜ್ಞಾಯಃ, ಸ್ತಬ್ಧಂ, ದಿವಿಷ್ಠಂ, ಪೂರಯಿತೃ, ಪುರುಷಂ, ಸತ್, ವಿಶ್ವಸಂಭವಂ, ತಪಶ್ಚಿತಂ, ಬ್ರಹ್ಮ, ಅನ್ನಾಭಿಜನಯಿತೃ, ಸರ್ವಜ್ಞಂ, ಸರ್ವವಿತ್, ಜ್ಞಾನಮಯತಪಸ್ಕಿ, ನಾಮರೂಪಾನ್ನಬ್ರಹ್ಮಜನಯಿತೃ, ಅಕ್ಷರಮ್.

ಈ ಗುಣಗಳಿಗೆ ವಿರುದ್ಧವಾದುದೆಲ್ಲವೂ ಜಗತ್ತಿನಲ್ಲಿದೆ, ಆದುದರಿಂದ ಪರಮಾತ್ಮನು ದೋಷಪೂರಿತವಾದ ಜಗತ್ತಿಗಿಂತ ಭಿನ್ನವಾದ ಪರಿಶುದ್ಧವಸ್ತು ಎಂಬುದು ಇವೆಲ್ಲದರ ತಾತ್ಪರ್ಯ.

## ೨೫

ಮುಮುಕ್ಷುವಾದ ಉಪಾಸಕನು ಮಾಡುವ ಯಾವುದೇ ಉಪಾಸನೆಗಳಲ್ಲೂ 'ಅಪಹತಪಾಪ್ಮಾ, ವಿಜರಃ, ವಿಮೃತ್ಯುಃ, ವಿಶೋಕಃ, ವಿಜಿಘತ್ಸಃ, ಅಪಿಪಾಸಃ, ಸತ್ಯಕಾಮಃ, ಸತ್ಯಸಂಕಲ್ಪಃ' ಎಂಬ ಎಂಟು ಗುಣಗಳನ್ನು ಅನುಸಂಧಾನ ಮಾಡಬೇಕು.[1]

ಕಾಮಾದ್ಯಧಿಕರಣ.

## ೨೬

ಉದ್ಗೀಥರೂಪವಾದ ಓಂಕಾರದ ಉಪಾಸನೆಯನ್ನು ಎಲ್ಲ ಕರ್ಮಗಳಲ್ಲೂ ಇಟ್ಟುಕೊಳ್ಳಬೇಕೆಂದು ನಿಯಮ ವಿಲ್ಲ. ಕರ್ಮದಫಲವು ಶೀಘ್ರವಾಗಿ ಸಿಗಬೇಕೆಂಬ ಆಸೆ ಇದ್ದವರು ಮಾತ್ರ ಇದನ್ನು ಮಾಡಬೇಕು.[2]

ತನ್ನಿರ್ಧಾರಣಾನಿಯಮಾಧಿಕರಣ.

## ೨೭

ತೈತ್ತಿರೀಯೋಪನಿಷತ್ತಿನ ದಹರವಿದ್ಯೆಯಲ್ಲಿ ಎಲ್ಲ ಉಪಾಸನೆಗಳಿಗೂ ನಾರಾಯಣನೇ ಉಪಾಸ್ಯ ಎಂದು ನಿರ್ಣಯಿಸಲಾಗಿದೆ.[3]

ಲಿಂಗಭೂಯಸ್ತ್ವಾಧಿಕರಣ.

## ೨೮

ಎಲ್ಲ ವಿದ್ಯೆಗಳಲ್ಲೂ ಉಪಾಸ್ಯ, ಉಪಾಸಕ, ಉಪಾಸನಸ್ವರೂಪಗಳನ್ನು ಚಿಂತಿಸಬೇಕಾದುದು ಅವಶ್ಯಕ. ಉಪಾಸಕನ ಶುದ್ಧಸ್ವರೂಪ 'ಅಪಹತಪಾಪ್ಮಾ' ಮುಂತಾದ ಎಂಟು ಗುಣಗಳಿಂದ ಕೂಡಿಯೇ ಇರುವು ದರಿಂದ ಎಲ್ಲ ಉಪಾಸನೆಗಳಲ್ಲೂ ಉಪಾಸಕನಲ್ಲಿ ಈ ಎಂಟು ಗುಣಗಳ ಚಿಂತನೆ ಅತ್ಯವಶ್ಯಕ.[4]

ಶರೀರೇಭಾವಾಧಿಕರಣ.

## ೨೯

ಎಲ್ಲ ವೇದಶಾಖೆಗಳ ಎಲ್ಲ ಉಪಾಸನೆಗಳಲ್ಲೂ ಅಂಗವಾದ ಯಾಗ, ದಾನ, ಹೋಮಾದಿಗಳಲ್ಲಿ ಉದ್ಗೀಥ ವೆಂಬ ಹೆಸರಿನ ವಿಶಿಷ್ಟರೀತಿಯ ಓಂಕಾರವನ್ನು ಉಪಾಸನೆ ಮಾಡುವಾಗ ಒಂದೇ ಮಂತ್ರವನ್ನು ವಿವಿಧ ಶಾಖೆಯ ವಿವಿಧ ಸಂದರ್ಭಗಳಲ್ಲಿ ಬಳಸುವಂತೆಯೇ ಸ್ವರಭೇದ ಅಳವಡಿಸಿಕೊಳ್ಳಬಹುದು ಎಂದು ತಿಳಿಯಬೇಕು.[5]

ಅಂಗಾವಬದ್ಧಾಧಿಕರಣ.

---

1. ಸತ್ಯಕಾಮ: - ಈ ಪಾರಮಾರ್ಥಿಕವಾದ ಜಗತ್ತನ್ನು ಇಷ್ಟಪಡುವವನು. ಸತ್ಯಸಂಕಲ್ಪ: - ಅನುಭವಿಸಲು ಅನಂತವಾದ ವಿಶ್ವ ವಸ್ತುಗಳಿದ್ದರೂ ತನ್ನ ಸಂಕಲ್ಪದಿಂದ ಅಪೂರ್ವವಾದ ಮತ್ತಷ್ಟು ವಿಶ್ವವಸ್ತುಗಳನ್ನು ಸೃಷ್ಟಿಸಬಲ್ಲವನು. ವೇದಾರ್ಥಸಂಗ್ರಹ. ಉಳಿದ ಅರ್ಥಗಳಿಗೆ ಈಶಾ. ಪುಟ. ೧೪೫ ನೋಡಿ.
2. 'ಕುರ್ವನ್ನೇವೇಹ ಕರ್ಮಾಣಿ' ಗೆ ಉಪಯೋಗಿಸಹುದು.
3. ಈಶಾವಾಸ್ಯವಿದ್ಯೆಯಲ್ಲೂ ಈ ತೈತ್ತಿರೀಯದ ನಿರ್ಣಯವನ್ನು ಅಳವಡಿಸಬೇಕೆಂಬ ನಿಯಮ ತಿಳಿದಿರಬೇಕು.
4. ಈಶಾ. 'ಸ ಪರ್ಯಗಾತ್'. 'ಸತ್ಯಧರ್ಮಾಯ' ಗಮನಿಸಿ.
5. ಈಶಾವಾಸ್ಯದಲ್ಲೂ ಉದ್ಗೀಥೋಪಾಸನೆಯನ್ನು ಅಳವಡಿಸಿಕೊಳ್ಳಬಹುದೆಂಬ ಅಂಶವೂ 'ಅಗ್ನೇನಯ' ಮಂತ್ರದಂತಹ ಮಂತ್ರಗಳು ವಿವಿಧ ಕರ್ಮಕಾಂಡಗಳಲ್ಲೂ ಉಪನಿಷತ್ತುಗಳಲ್ಲೂ ಇರುವುದನ್ನು ಸಮರ್ಥಿಸಬಹುದೆಂಬ ಅಂಶವೂ ಗಮನಾರ್ಹ.

೩೦

ವಿದ್ಯೆಯಿಂದ ನಾವು ಪಡೆಯುವ ವಸ್ತುವೇ ವಿದ್ಯೆಯ ಆಕಾರವೆನಿಸುವುದು. ಉಪಾಸ್ಯನಾದ ಪರಮಾತ್ಮನೇ ಉಪಾಸನೆಯ ರೂಪರೇಖೆಗಳಲ್ಲಿ ಮುಖ್ಯ ಎಂದು ಈ ಮಾತಿನ ಭಾವಾರ್ಥ. ಎಲ್ಲ ವಿದ್ಯೆಗಳಲ್ಲೂ ಪರಮಾತ್ಮನೊಬ್ಬನೇ ಉಪಾಸ್ಯನಾಗಿದ್ದರೂ ಉಪಾಸನೆಗಳು ಮಾತ್ರ ಬೇರೆ ಬೇರೆ ಎನಿಸುವುವು. ಈ ವ್ಯತ್ಯಾಸಕ್ಕೆ ಉಪಾಸನೆಯ ಹೆಸರು, ಅಭ್ಯಾಸ, ಕ್ರಮ, ಅವುಗಳ ಸಂಖ್ಯೆ, ಉಪಾಸ್ಯಗುಣಗಳು ಕಾರಣ.

ಈ ವಿಚಾರದ ನಿಯಮವನ್ನು ಪೂರ್ವಮೀಮಾಂಸಾಶಾಸ್ತ್ರದಲ್ಲೇ ಹೇಳಿದ್ದರೂ ಇಲ್ಲಿ ಮತ್ತೆ ಹೇಳಲಾಗಿದೆ. ಉಪಾಸನೆಯು ಮೇಲ್ಮಟ್ಟದ ಸ್ಮರಪಾದ ಪರಮಾತ್ಮತತ್ತ್ವದರ್ಶನರೂಪವಾದಜ್ಞಾನವು ಪರಮಾತ್ಮನ ಅನುಗ್ರಹದಿಂದಲೂ, ಅದರಿಂದ ಸಿಟ್ಟುವ ಉಪಾಸನೆಯ ಪ್ರಯತ್ನದಿಂದಲೂ ಸಾಧಿಸಲ್ಪಡುವುದೆಂಬ ಪರಮವೈದಿಕ ಸಿದ್ಧಾಂತಕ್ಕೆ ವಿರೋಧವಾಗಿ ಕುದೃಷ್ಟಿಗಳು ಪರಮಾತ್ಮನು ಯಾವಾಗಲೂ ಇರುವ ಸಿದ್ಧವಸ್ತುವಾಗಿರುವಂತೆಯೇ ಪರಮಾತ್ಮಜ್ಞಾನವೂ ಸಿದ್ಧವಾಗಿಯೇ ಇರುವುದರಿಂದ ಪರಮಾತ್ಮೋಪಾಸನೆಯನ್ನು ವಿಧಾಯಕವಾಗಿ ಮಾಡಬೇಕಿಲ್ಲ ಎಂದು ಹೇಳುತ್ತಿರುವುದನ್ನು ಖಂಡಿಸಲೆಂದೇ ಇಲ್ಲಿ ಮತ್ತೆ ಈನಿಯಮವನ್ನು ತಿಳಿಸಲಾಗಿದೆಯೆಂಬುದನ್ನು ಗಮನಿಸಿ.

ಶಬ್ದಾದಿಭೇದಾಧಿಕರಣ.

೩೧

ಎಲ್ಲ ಉಪಾಸನೆಗಳಿಗೂ ಫಲವು ಒಂದೇ ಆಗಿರುವುದರಿಂದ, ಈಶಾವಾಸ್ಯ ಮುಂತಾದ ಅನೇಕ ಬ್ರಹ್ಮವಿದ್ಯೆಗಳಿರುವಾಗಲೂ ಉಪಾಸಕನು ಯಾವುದಾದರೊಂದು ವಿದ್ಯೆಯನ್ನು ಮಾತ್ರ ಅರಿತು ಉಪಾಸನೆಮಾಡಬೇಕು.

ಪರಮಾತ್ಮಪ್ರಾಪ್ತಿಹೊರತು ಇತರ ಫಲಗಳಿಗಾಗಿ ಮಾಡುವ ನಾಮಾದಿಪ್ರಾಣಪರ್ಯನ್ತವಾದ ಇತರ ಉಪಾಸನೆಗಳಲ್ಲಿ ತನ್ನ ಇಷ್ಟ ಮತ್ತು ಸೌಕರ್ಯಗಳಂತೆ ಉಪಾಸಕರು ಅನೇಕ ಉಪಾಸನೆಗಳನ್ನಾಗಲೀ ಒಂದೇ ಉಪಾಸನೆಯನ್ನಾಗಲೀ ಮಾಡಬಹುದು.

ವಿಕಲ್ಪಾಧಿಕರಣ.

೩೨

ಉಪಾಸನಾಂಗವಾದ ಕರ್ಮಗಳಲ್ಲಿ ಉದ್ಗೀಥವನ್ನು ಆಶ್ರಯಿಸಿದರೂ ಉದ್ಗೀಥೋಪಾಸನೆಯನ್ನು ಮಾಡಬೇಕೆಂಬ ನಿಯಮವೇನೂ ಇಲ್ಲ.

ಯಥಾಶ್ರಯಭಾವಾಧಿಕರಣ.

೩೩

ವಿದ್ಯಾವಿದ್ಯೆಗಳಲ್ಲಿ ವಿದ್ಯೆಯೇ ಧರ್ಮಾರ್ಥಕಾಮಾದಿ ಪುರುಷಾರ್ಥಗಳಿಗೆ ಕಾರಣ. ಅವಿದ್ಯೆಯೆನಿಸಿದ ಕರ್ಮಗಳಲ್ಲಿ ಜೀವಾತ್ಮತತ್ತ್ವಜ್ಞಾನವಿದ್ದರೂ ಸಕಲ ವಿದ್ಯೆಯೆನಿಸಿದ ಉಪಾಸನೆಗಳಲ್ಲಿ ಪರಮಾತ್ಮತತ್ತ್ವಜ್ಞಾನವೂ ಅತ್ಯವಶ್ಯಕ. ಈ ಜ್ಞಾನವಿಂದಲೇ ಪ್ರಕೃತಿಬಂಧನದಿಂದ ಮುಕ್ತಿಯೂ ಪರಮಾತ್ಮಪ್ರಾಪ್ತಿಯೂ ಆಗುವುದೆಂದು ಬಾದರಾಯಣಮಹರ್ಷಿಗಳ ಸಿದ್ಧಾಂತ.[1]

---

1. ಈಶಾ. ೧೧ ಕ್ಕೆ ಉಪಯುಕ್ತ.

ವಿದ್ಯೆಗೆ ಅವಿದ್ಯೆಯು ಅಂಗವಾಗಿಯೇ ಇರುವುದರಿಂದ ಅದರ ಪ್ರತ್ಯೇಕ ಆಚರಣೆಯಿಂದ ಆಗಬಹುದಾದ ದುಷ್ಫಲಗಳು ಈ ವಿಶಿಷ್ಟ ಆಚರಣೆಯಿಂದ ಉಂಟಾಗುವುದಿಲ್ಲ. ಹೀಗೆ ವಿದ್ಯೆಗೆ ಅಂಗವಾದ ಅವಿದ್ಯೆಯೆಂಬ ಕರ್ಮಗಳನ್ನು ನಿಷ್ಕಾಮವಾಗಿಯೇ ಆಚರಿಸುವುದರಿಂದ ಇವು ಉಪಾಸಕನಿಗೆ ಬಂಧಕವಾಗಲಾರವು.

ಕರ್ಮದಿಂದಲೇ ಜನಕಾದಿಗಳು ಮೋಕ್ಷಪಡೆದರೆಂಬ ಮಾತಿಗೆ ಉಪಾಸನಾಂಗವಾದ ಕರ್ಮದ ಸಹಾಯದಿಂದ ಎಂದಷ್ಟೇ ಅರ್ಥ.[1]

ವೈರಾಗ್ಯವಿಲ್ಲದವರೂ ಉಪಾಸನೆ ಮಾಡಬಹುದು. ಆದರೆ ಇವರು ಬದುಕಿರುವವರೆಗೂ ಕರ್ಮಗಳನ್ನು ಮಾಡಲೇಬೇಕು. ಸಹಜವಾಗಿ ವೈರಾಗ್ಯ ಬಂದವರು ಕರ್ಮಗಳನ್ನು ತ್ಯಾಗಮಾಡಲೂಬಹುದು.[2] ಹೀಗೆ ಕರ್ಮವು ಮೋಕ್ಷಕ್ಕೆ ಪ್ರಧಾನವಲ್ಲದುದರಿಂದ ವಿದ್ಯೆಯು ಕರ್ಮಕ್ಕೆ ಅಂಗವಾಗದು. ವಿದ್ಯೆಯೇ ಪ್ರಧಾನವಾದುದರಿಂದ ಕರ್ಮವು ಎಂದಿಗೂ ವಿದ್ಯೆಗೆ ಅಂಗವಾಗಿಯೇ ಇರುವುದು.

ಊರ್ಧ್ವರೇತಸ್ಕ[3]ರಾದ ಕೆಲವರು ಆಶ್ರಮಕರ್ಮಗಳನ್ನು ಮಾಡಬೇಕಿಲ್ಲವೆಂದೂ ಗೃಹಸ್ಥನು ಅಗ್ನಿತ್ಯಾಗ ಮಾಡದೆ ಬದುಕಿರುವವರೆಗೂ ಗೃಹಸ್ಥಾಶ್ರಮದಲ್ಲೇ ಇರಬೇಕೆಂದೂ ಜೈಮಿನಿಮಹರ್ಷಿಗಳ ಅಭಿಪ್ರಾಯವಿದೆ. ಪರಮವೈದಿಕಸಿದ್ಧಾಂತಸ್ಥಾಪಕಾಚಾರ್ಯರೂ ವೇದವ್ಯಾಸರೆಂದು ಪ್ರಸಿದ್ಧರೂ ಆದ ಬಾದರಾಯಣಮಹರ್ಷಿಗಳ ಅಭಿಪ್ರಾಯದ ಪ್ರಕಾರ ಎಲ್ಲ ಆಶ್ರಮದವರೂ ತಮ್ಮ ಕರ್ಮಗಳನ್ನು ಅಂಗವಾಗಿಸಿಕೊಂಡು ಪರಮಾತ್ಮೋಪಾಸನೆಯೆಂಬ ವಿದ್ಯೆಯನ್ನು ಆಚರಿಸಬೇಕೆಂದೂ ನಿರ್ಣಯಿಸಲಾಗಿದೆ.

ಪುರುಷಾರ್ಥಾಧಿಕರಣ[4].

೩೪

ಉದ್ಗೀಥವೆಂಬ ಓಂಕಾರವನ್ನು "ಇದು ಬಹಳ ರಸವತ್ತಾದುದು" ಎಂಬ ದೃಷ್ಟಿಯಿಂದ (ಭಾವನೆಯಿಂದ) ಉಪಾಸನೆ ಮಾಡಬೇಕೆನ್ನುವುದು ವಿಧಾಯಕವಾದ ಅಂಶ. ಇದು ಓಂಕಾರದ ಹೊಗಳಿಕೆಗಾಗಿ ಅಲ್ಲ. ಇದು ಮೋಕ್ಷಕ್ಕೆ ಸಾಧನವಾದ ಉಪಾಸನೆಯಲ್ಲವಾದರೂ ಕರ್ಮಗಳಿಗೆ ಉತ್ತಮ ಬಲದಾಯಕವಾದುದರಿಂದ ಈದೃಷ್ಟಿ ವಿಧಾನವೂ ಅತ್ಯವಶ್ಯಕ.[5]

ಸ್ತುತಿಮಾತ್ರಾಧಿಕರಣ.

೩೫

ವಿದ್ಯೆಯನ್ನು ವಿಧಾಯಕವಾಗಿ ಮಾಡಬೇಕೆಂದು ಹೇಳುವಂತೆಯೇ ವಿದ್ಯೆಗೆ ಸಂಬಂಧಿಸಿದ ಐತಿಹಾಸಿಕಕಥಾನಕಗಳನ್ನು ಉಪಾಸಕರು ತಿಳಿದಿರಬೇಕೆಂಬುದೂ ಒಂದು ವಿಧಾಯಕ ಅಂಶವೆಂದು ಹೇಳಲಾಗಿದೆ. ವೇದದ ಕಥಾನಕಗಳು ಯಜ್ಞದ ಮಧ್ಯೆ, ವಿರಾಮಕಾಲಗಳಲ್ಲಿ ಹೇಳಿಕೊಳ್ಳಬೇಕಾದವುಗಳಾದರೂ ಕೇವಲ ಕಾಲಕಳೆಯುವ ಹರಟೆಗಳಿಗಾಗಿ ಅಲ್ಲ ಎಂದು ನಿರ್ಣಯಿಸಲಾಗಿದೆ.[6]

ಪಾರಿಪ್ಲವಾಧಿಕರಣ.

---

1. ಈಶಾ ೨, ೧೧ ಕ್ಕೆ ಉಪಯ ಕ್ತ.
2. 'ಕರ್ಮತ್ಯಾಗವೆಂದರೆ ಕರ್ಮದ ಫಲಸಂಗಕರ್ತೃತ್ವಗಳ ತ್ಯಾಗ' ಎಂದು ಗೀತೆಯಲ್ಲಿರುವ ವಿಚಾರವನ್ನು ಇಲ್ಲಿ ಬಳಸಿಕೊಳ್ಳಬೇಕು.
3. ಸನಕಸನಂದನಾದಿ ಮಹರ್ಷಿಗಳಂತೆ ಮತ್ತು ಭೀಷ್ಮ ಮುಂತಾದವರಂತೆಯೂ ವೈರಾಗ್ಯಶಾಲಿಗಳಾದವರು.
4. ಈ ಅಧಿಕರಣದ ಕೆಲವು ಸೂಕ್ಷ್ಮವಿಚಾರಗಳಿಗೆ ಈಶಾ. ಪುಟ. ೩೧, ೩೭, ೨೦೭, ೨೦೩, ೨೧೮ ನೋಡಿ.
5. ಈಶಾ. ೧೭ರ ಓಂಕಾರವನ್ನು ಕರ್ಮಾಂಗವಾಗಿ ಉಪಾಸನೆಮಾಡುವಲ್ಲಿ ಈ ವಿಚಾರ ಗಮನಾರ್ಹ.
6. ಈಶಾವಾಸ್ಯದ ಕಥೆಯು ಉಪಾಸಕರಿಗೆ ಗಮನಾರ್ಹ. ಭಾಗವತ ೮. ೧ ನೋಡಿ.

### ೩೬

ಊರ್ಧ್ವರೇತಸ್ಕರಾದವರೂ ಉಪಾಸನೆ ಮಾಡಬಹುದು. ಇವರಿಗೆ 'ಅಗ್ನಿಹೋತ್ರ', 'ದರ್ಶಪೂರ್ಣಮಾಸ' ಮುಂತಾದ ಕರ್ಮಗಳು ಮಾತ್ರ ಇಲ್ಲವಾದರೂ ಅವರವರ ಆಶ್ರಮವಿಹಿತವಾದ ನಿತ್ಯನೈಮಿತ್ತಿಕ ಕರ್ಮಗಳೂ ಜಪ, ಉಪವಾಸ, ದೇವರಪೂಜೆ ಮುಂತಾದವು ಅವಶ್ಯವಾಗಿ ಇದ್ದೇತೀರಬೇಕು.[1]

ಅಗ್ನೀಂಧನಾದ್ಯಧಿಕರಣ.

### ೩೭

ಉಪಾಸಕರಿಗೆ ಮನೋನಿಗ್ರಹ ಇಂದ್ರಿಯನಿಗ್ರಹ ಮುಂತಾದವು ಅತ್ಯವಶ್ಯ. ಬೃಹದಾರಣ್ಯಕದಲ್ಲಿ ಶಮ, ದಮ, ಉಪರಮ, ಸಹನೆ, ಸಮಾಧಾನಗಳೆಂಬ ಐದು ಅಂಶಗಳನ್ನು[2] ಉಪಾಸನೆಗೆ ಮುಖ್ಯಾಂಗವೆಂದು ತಿಳಿಸಲಾಗಿದೆ. ಇಲ್ಲಿ ಕರ್ಮಗಳನ್ನು ಬಿಡುವುದು ಉಪರಮವಲ್ಲ, ಕರ್ಮಗಳೆಲ್ಲವನ್ನೂ ಪರಮಾತ್ಮನ ಆರಾಧನೆ ಎಂದು ತಿಳಿದು ಆಚರಿಸುವುದೇ ಉಪರಮ.[3] ಪರಮಾತ್ಮನು ಇದರಿಂದ ಪ್ರಸನ್ನನಾಗಿ ನಮ್ಮ ಉಪಾಸನೆಗೆ ವಿಘ್ನವಾಗಬಲ್ಲ ಕೆಟ್ಟ ಕರ್ಮಗಳನ್ನು ಹೋಗಲಾಡಿಸುವನು. ಶಮದಮಾದಿಗಳು ಸನ್ಯಾಸಿಗಳಿಗೆ ಮಾತ್ರವಲ್ಲ ಗೃಹಸ್ಥರಿಗೂ ಅವಶ್ಯಕ.[4]

ಶಮದಮಾದ್ಯಧಿಕರಣ.

### ೩೮

ಉಪಾಸಕರಿಗೆ ಆಹಾರಶುದ್ಧಿ ಅತ್ಯವಶ್ಯಕ. ಆಹಾರವಿಲ್ಲದೆ ಉಪಾಸನೆ ನಡೆಸಲಾಗದೆ ಪ್ರಾಣಹೋಗುವ ಸಂದರ್ಭದಲ್ಲಿ ನಿಕೃಷ್ಟರಾದವರ ಉಚ್ಛಿಷ್ಟವನ್ನಾದರೂ ತಿಂದು ಪ್ರಾಣಉಳಿಸಿಕೊಂಡು ಉಪಾಸನೆಯನ್ನು ಮುಂದು ವರಿಸಬೇಕೆನ್ನಲಾಗಿದೆ.

ಯಾರಿಗೇ ಆಗಲಿ ಆಹಾರಶುದ್ಧಿ ಅವಶ್ಯಕ. ಜೀವನದಗುರಿಸಾಧನೆಗೆ ವಿಘ್ನವಾಗಿ ಮರಣವೇ ಬರುವ ಪಕ್ಷದಲ್ಲಿ ಆಹಾರನಿಯಮವನ್ನು ತಾತ್ಕಾಲಿಕವಾಗಿ ಮುರಿಯಬಹುದು. ಆದರೆ ಎಂದಿಗೂ ಸ್ವೇಚ್ಛೆಗಾಗಲಿ, ಪರೀಕ್ಷಾರ್ಥವಾಗಿಯೇ ಆಗಲಿ ಅಶುದ್ಧ ಆಹಾರವನ್ನು ಸೇವಿಸಬಾರದು.[5]

ಸರ್ವಾನ್ನಾನುಮತ್ಯಧಿಕರಣ.

---

1. ಈಗಲೂ ಭಗವದ್ರಾಮಾನುಜರ ಪರಂಪರೆಯಲ್ಲಿ ಸನ್ಯಾಸಿಗಳೂ ಸಹ ನಿತ್ಯನೈಮಿತ್ತಿಕ ಕರ್ಮಗಳನ್ನು ಬಿಡದೆಯೇ ಬ್ರಹ್ಮನಿಷ್ಠರಾಗಿರುವ ಅಂಶವನ್ನು ಗಮನಿಸಬಹುದು.
2. ಶಮ-ಶಾಂತಿ, ದಮ, ಸಹನೆಗಳ ವಿವರಣೆಗೆ ಈಶಾ. ಪುಟ ೪೦ ನೋಡಿ. ಸಮಾಧಾನ - ಮನಸ್ಸಿಗೆ ನೆಮ್ಮದಿ.
3. ಈಶಾ. ೧. 'ತ್ಯಕ್ತೇನ ಭುಂಜೀಥಾಃ', ಈಶಾ. ೨. 'ಕುರ್ವನ್ನೇವೇಹ ಕರ್ಮಾಣಿ' ಗಮನಿಸಿ.
4. ಗೃಹಸ್ಥರೂ ಸನ್ಯಾಸಿಗಳಂತೆ ನಿರ್ಲಿಪ್ತರಾಗಿ ಪರಿಶುದ್ಧಜೀವನ ನಡೆಸಬೇಕೆಂಬುದೇ ಈ ಮಾತಿನ ಸಾರಾರ್ಥ. ಮನು ಯಾಜ್ಞವಲ್ಕ್ಯ, ಜನಕ ಮುಂತಾದ ಮಹನೀಯರು ಇಂತಹವರೆಂಬುದನ್ನು ಗಮನಿಸಬಹುದು.
5. ಈಶಾವಾಸ್ಯಉಪಾಸಕರಿಗೂ ಇದು ಅತ್ಯವಶ್ಯಕ. ಈಶಾ. ೧ 'ತ್ಯಕ್ತೇನ ಭುಂಜೀಥಾಃ' ಈಶಾ. ೨. 'ಜಿಜೀವಿಷೇತ್' ಎಂಬ ವಿಚಾರಗಳಿಗೆ ಇದು ವಿವರಣೆಯಾಗಿರುವುದು.

## ೩೯

ಯಾವುದೇ ಆಶ್ರಮಕರ್ಮಗಳನ್ನು ಮೋಕ್ಷೇಚ್ಛೆ ಇಲ್ಲದವರೂ ಆಚರಿಸಬೇಕು. ಅದೇ ಕರ್ಮಗಳನ್ನು ಮೋಕ್ಷೇಚ್ಛೆ ಇರುವವರೂ ವಿದ್ಯಾಂಗವಾಗಿ ಆಚರಿಸಬೇಕು. ಒಂದೇ ಕರ್ಮವು ಅನೇಕ ವಿಧವಾದ ಉಪಯೋಗಕ್ಕೆ ಬರುವುದಾದರೆ ಈ ನಿಯಮವನ್ನು 'ವಿನಿಯೋಗಪೃಥಕ್ತ್ವ' ಎಂದು ಹೆಸರಿಸಲಾಗುವುದು.[1]

ವಿಹಿತತ್ವಾಧಿಕರಣ.

## ೪೦

ಉಪಾಸನೆಗಳನ್ನು ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಗಳೆಂಬ ನಾಲ್ಕು ಆಶ್ರಮದವರು ಮಾತ್ರ ಆಚರಿಸಬೇಕೆಂದು ನಿರ್ಬಂಧವಿಲ್ಲ. ಪತ್ನಿಯಿಲ್ಲದ ಗೃಹಸ್ಥರೂ, ಬ್ರಹ್ಮಚರ್ಯವ್ರತ ಮುಗಿಸಿ ಗೃಹಸ್ಥರಾಗದೆಯೇ ಇರುವ ನೈಷ್ಠಿಕರೂ ಆಚರಿಸಬಹುದು. ಊರ್ಧ್ವರೇತಸ್ಕರಾದ ಸನಕಾದಿಗಳು ಆಶ್ರಮರಹಿತರಾಗಿ ಯಜ್ಞ, ಯಾಗಾದಿಗಳನ್ನು ಮಾಡದೆಯೇ ಜಪೋಪವಾಸ ಯೋಗಸಮಾಧಿಗಳ ಸಹಕಾರದಿಂದ ಉಪಾಸನೆ ನಡೆಸುವಂತೆಯೇ ವಿಧುರರೂ, ನೈಷ್ಠಿಕರೂ ಜಪೋಪವಾಸಾದಿಗಳ ಸಹಾಯದಿಂದ ಉಪಾಸನೆ ನೆರವೇರಿಸಬಹುದು. ಇದಕ್ಕೆ ಭೀಷ್ಮ, ರೈಕ್ವ ಮುಂತಾದ ಐತಿಹಾಸಿಕ ಮಹಾಪುರುಷರೇ ಉದಾಹರಣೆ. ಎಲ್ಲರೂ ಭೀಷ್ಮ, ರೈಕ್ವರಂತಿರ ಬೇಕೆಂದೇನೂ ನಿಯಮವಿಲ್ಲ. ಆಶ್ರಮಧರ್ಮರಹಿತರಾಗಿರುವುದಕ್ಕಿಂತ ಆಶ್ರಮಧರ್ಮಸಹಿತರಾಗಿರುವುದು ಸಾಮಾನ್ಯಜನರಿಗೆ ಶ್ರೇಯಸ್ಕರ. ಯಾರೇ ಆದರೂ ಆಪತ್ಕಾಲದಲ್ಲಿ ಮಾತ್ರ ಆಶ್ರಮರಹಿತರಾಗಿ ಉಳಿದು ಕೊಳ್ಳಬಹುದು.[2]

ವಿಧುರಾಧಿಕರಣ.

## ೪೧

ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸಗಳೆಂಬ ಆಶ್ರಮನಿಯಮಗಳನ್ನಾಗಲೀ, ನೈಷ್ಠಿಕ, ವಿಧುರ ಮುಂತಾದ ಆಶ್ರಮಾಂತರ ನಿಯಮಗಳನ್ನಾಗಲೀ, ಭಂಗಪಡಿಸಿ ವ್ರತಭ್ರಷ್ಟರಾದವರಿಗೂ; ಮಹಾ ಪಾತಕಗಳನ್ನು ಮಾಡಿ ವೈದಿಕಸಂಸ್ಕಾರಗಳಿಲ್ಲದೆ ಬಹಿಷ್ಕೃತರಾಗಿರುವವರಿಗೂ; ಬ್ರಹ್ಮವಿದ್ಯೆಯನ್ನು ಕಲಿಯುವ ಅರ್ಹತೆ ಇರದು. ಪತಿತರಾದ ಇಂತಹವರಿಗೆ ಯಾವ ಕಾಲದ ಯಾವ ಧರ್ಮಶಾಸ್ತ್ರವಲ್ಲೂ ಪರಿಶುದ್ಧಿಯಾಗುವ ಮಾರ್ಗವಿಲ್ಲ. ಸಾಮಾನ್ಯ ಬ್ರಹ್ಮಚಾರಿಗಳು ಪತಿತರಾದರೂ ಅವರಿಗೆ ಕರ್ಮಮಾಡುವಷ್ಟು ಪರಿಶುದ್ಧಿಯ ಮಾರ್ಗವಿದೆ. ನೈಷ್ಠಿಕರು ಪತಿತರಾದರೆ ಈಜನ್ಮದಲ್ಲಿ ಅವರಿಗೆ ಕರ್ಮಮಾಡುವಂತಹ ಪರಿಶುದ್ಧಿ ಬರದು.

---

1. ಇಂತಹ ವಿದ್ಯಾಂಗವಾದ ಕರ್ಮವನ್ನೇ ವೈದಿಕಸಾಹಿತ್ಯದಲ್ಲಿ 'ಧರ್ಮ' ಎಂದು ಕರೆಯಲಾಗಿದೆ. ಒಬ್ಬ ವ್ಯಕ್ತಿ ಗೃಹಸ್ಥಾಶ್ರಮದಲ್ಲೇ ಇದ್ದು ಪರಮಾತ್ಮೋಪಾಸನೆ ಮಾಡುವವನಾದರೆ ಆಶ್ರಮಾಂಗಕರ್ಮಗಳನ್ನೇ ವಿದ್ಯಾಂಗಕರ್ಮಗಳನ್ನಾಗಿ ಭಾವಿಸಬೇಕೇ ಹೊರತು ಒಂದೇಕರ್ಮವನ್ನು ಪ್ರತ್ಯೇಕ ಎರಡುಬಾರಿ ಮಾಡಬೇಕಿಲ್ಲ. ಈಶಾ. ೨ಕ್ಕೆ ಉಪಯುಕ್ತ.

2. ಈಶಾವಾಸ್ಯದ ವಿಚಾರಮಾಡುವಾಗ ಈಶಾವಾಸ್ಯೋಪಾಸನೆಗೆ ಅರ್ಹರು ಯಾರು? ಎಂಬ ಬಗ್ಗೆಯೂ ವಿಚಾರಮಾಡಬೇಕಾದುದು ಅವಶ್ಯಕವಾಗಿರುವುದನ್ನೂ, ಭೀಷ್ಮಾದಿಗಳು ಉಪಾಸಕರಾಗಿದ್ದು "ಪರಮಭಾಗವತೋತ್ತಮ"ರೆನಿಸಿದ್ದುದರಿಂದ ವೇದೋಪನಿಷತ್ ಸಾರಸಂಗ್ರಹರೂಪವಾಗಿ ಅವರು ಪ್ರಚುರಪಡಿಸಿರುವ 'ವಿಷ್ಣುಸಹಸ್ರನಾಮ' ಸ್ತೋತ್ರಾದಿಗಳನ್ನು 'ನಮ ಉಕ್ತಿಂ ವಿಧೇಮ' ಮುಂತಾದ ವಚನಗಳಿಗೆ ಪೋಷಕ ವಿವರಣೆಗಳನ್ನಾಗಿ ಸ್ವೀಕರಿಸುವ ಔಚಿತ್ಯವಿದೆಯೆಂಬುದನ್ನು ಗಮನಿಸಿ.

ಇಂತಹವರು ಪ್ರಾಯಶ್ಚಿತ್ತವೆಂಬ ಪರಿಶುದ್ಧಿಯನ್ನು ಮಾಡಿಕೊಂಡರೂ ಇಂತಹವರಿಗೆ ಯಾವ ಬ್ರಹ್ಮವಿದ್ಯಾನಿಷ್ಠರೂ ಬ್ರಹ್ಮವಿದ್ಯೆಯನ್ನು ಮಾತ್ರ ಉಪದೇಶಿಸುವುದಿಲ್ಲ.[1]

ತದ್ಭೂತಾಧಿಕರಣ.

೪೨

ಬರಿಯ ಕರ್ಮಠರು ಕರ್ಮಫಲ ವಿಘ್ನವಿಲ್ಲದೆ ಬೇಗ ಸಿಗುವಂತಾಗಲು ಉದ್ಗೀಥರೂಪವಾದ ಓಂಕಾರದ ಉಪಾಸನೆ ಮಾಡಬಹುದೇ ಎನ್ನುವ ವಿಚಾರ ಹಿಂದೆಯೇ ಬಂದಿದೆ. ಉಪಾಸನಾಂಗವಾಗಿ ಕರ್ಮಮಾಡುವವರು ಸಹ ಅವಶ್ಯಕತೆಯಿದ್ದರೆ ಉದ್ಗೀಥೋಪಾಸನೆ ಮಾಡಬಹುದು. ಆದರೆ ಕರ್ಮಠರು ಯಜ್ಞಾದಿಕರ್ಮಗಳಲ್ಲಿ ಸಹಾಯಕರಾದವರಿಂದ ಇದನ್ನು ಮಾಡಿಸಬೇಕು. ಸ್ವತಃ ಮಾಡುವಂತಿಲ್ಲ. ಉಪಾಸಕರು ಮಾತ್ರ ಸ್ವತಃ ಮಾಡಬೇಕೇ ಹೊರತು ಇತರರಿಂದ ಮಾಡಿಸುವಂತಿಲ್ಲ.[2]

ಸ್ವಾಮ್ಯಧಿಕರಣ.

೪೩

ವೇದವಿದ್ಯೆಯನ್ನು ಚೆನ್ನಾಗಿ ಕಲಿತ ಪಂಡಿತರು ಉಪಾಸನೆಯ ಆರಂಭಸ್ತರವಾದ ಧ್ಯಾನದಲ್ಲಿ ದರ್ಶನವಾಗುವ ಧ್ಯೇಯವಸ್ತುವನ್ನು ಮತ್ತೆ ಮತ್ತೆ ಮನಸಾರ ತನ್ಮಯತೆಯಿಂದ ಭಾವಿಸುತ್ತಿರಬೇಕು. ಇದಕ್ಕೆ 'ಮೌನ' ವೆಂದು ಹೆಸರು. ಅಂತಹ ಮೌನವನ್ನು ಸಾಧಿಸಬೇಕಾದರೆ ಬರಿಯ ಧ್ಯಾನವೂ ಸಾಲದು, ಧ್ಯಾನದ ಉನ್ನತಸ್ತರವಲ್ಲಿ ಧ್ಯೇಯವಸ್ತುವಿನ ಬಗ್ಗೆ ಪ್ರೀತಿರೂಪವಾದ ಭಕ್ತಿಯೂ ಬೇಕು. ಇದು ಪರಮಾತ್ಮನ ಕೇವಲ ಕರುಣೆಯಿಂದ ತಾನೇತಾನಾಗಿ ಉಕ್ಕಿ ಹರಿಯುವಂತಾಗಬೇಕು. ಆ ಕಾಲದಲ್ಲಾಗುವ ಪರಮಾತ್ಮನ ದರ್ಶನರೂಪವಾದ ಜ್ಞಾನವೇ ನಿಜವಾದ 'ಪಾಂಡಿತ್ಯ'. ಬರಿಯ ಶಾಸ್ತ್ರಾರ್ಥಜ್ಞಾನವು ಪಾಂಡಿತ್ಯವಲ್ಲ. ತನ್ನ ನಿಜವಾದ ಪಾಂಡಿತ್ಯವನ್ನು ತೋರಿಕೆಗಾಗಿ ಉಪಯೋಗಿಸದಿರುವುದನ್ನೇ 'ಬಾಲ್ಯ' ಎಂದು ಸಾಂಕೇತಿಕವಾಗಿ ಹೆಸರಿಸಲಾಗಿದೆ. ಡಂಭಾಚಾರ ಕೂಡದು ಎಂಬುದೇ ಈ ಮಾತಿನ ತಾತ್ಪರ್ಯ. ಇಲ್ಲಿ ಹೇಳಿರುವ ಮೌನವನ್ನು ಪಾಂಡಿತ್ಯಬಾಲ್ಯಗಳನ್ನೂ ಉಪಾಸನೆಯಲ್ಲಿ ಅತ್ಯವಶ್ಯಸಹಾಯಕಗಳನ್ನಾಗಿ ಬಳಸಬೇಕು. ಇಂತಹವನು ಮಾತ್ರ ನಿಜವಾದ ಬ್ರಹ್ಮಜ್ಞಾನಿಯೆನಿಸುವನು. ಎಲ್ಲ ಆಶ್ರಮಧರ್ಮದವರೂ ಹೀಗೆ ಬ್ರಹ್ಮಜ್ಞಾನಿಗಳಾಗಬಹುದು.[3]

ಸಹಕಾರ್ಯಂತರವಿಧ್ಯಧಿಕರಣ, ಅನಾವಿಷ್ಕಾರಾಧಿಕರಣ.

೪೪

ಪುಣ್ಯಕರ್ಮಗಳ ಫಲಗಳಿಗೆ ಪ್ರಾಚೀನವಾದ ಪಾಪಕರ್ಮಗಳಿಂದಾಗುವ ವಿಘ್ನಗಳಿದ್ದಾಗ ಐಹಿಕಫಲಾರ್ಥವಾಗಿ ಮಾಡುವ ಉಪಾಸನೆಯೂ ಫಲಿಸುವುದಿಲ್ಲ. ಇಂತಹ ಸಂದರ್ಭದಲ್ಲಿ ಉದ್ಗೀಥವಿದ್ಯೆಯನ್ನು ಉಪಯೋಗಿಸಿಕೊಳ್ಳಲು ಹಿಂದೆಯೇ ತಿಳಿಸಲಾಗಿದೆ.

ಐಹಿಕಾಧಿಕರಣ.

---

1. ಈಶಾವಾಸ್ಯದ ಆರಂಭದಲ್ಲೇ ವಿದ್ಯೆಯನ್ನು ಗುರುವು ಎಂತಹ ಶಿಷ್ಯರಿಗೆ ಉಪದೇಶಿಸಿದ ಎಂಬ ವಿಚಾರವಾಗಿ ಭಾಷ್ಯವಿವರಣೆಗಳನ್ನು ಗಮನಿಸಿ.

2. ಈಶಾ. ೧೭. ಓಂಕಾರಾನುಸಂಧಾನವಿಚಾರಕ್ಕೆ ಉಪಯುಕ್ತ.

3. ಸಂಭೂತಿ ಅಸಂಭೂತಿಗಳ ವಿಚಾರವಾಗಿ ಈಶಾ. ಪುಟ ೧೨೦ ಭಾಷ್ಯವಿವರಣೆಗಳನ್ನು ಗಮನಿಸಿರಿ.

ಮುಕ್ತಿಗಾಗಿಯೇ ಮಾಡುವ ಉಪಾಸನೆಗಳಲ್ಲಿ ಇಂತಹ ವಿಘ್ನಗಳಿಗೆ ಅವಕಾಶವಿಲ್ಲದಿದ್ದರೂ ಬ್ರಹ್ಮಜ್ಞಾನಿಗಳ ಬಗ್ಗೆ ಉಪಾಸಕರು ಆಕಸ್ಮಾತ್ ಮಾಡಿರಬಹುದಾದ ಪ್ರಾಚೀನ ಅಪಚಾರಗಳು ಮಾತ್ರ ವಿಘ್ನವಾಗಿ ನಿಲ್ಲಬಲ್ಲವು.

ಮುಕ್ತಿಫಲಾಧಿಕರಣ.[1]

೪೫

ಉಪಾಸನೆಗಳಲ್ಲಿ ಪರಮಾತ್ಮನ ದರ್ಶನರೂಪವಾದ ಜ್ಞಾನವು ಪ್ರತಿದಿನವೂ ಅಭ್ಯಾಸದಿಂದ ಆಗುತ್ತಲೇ ಇರಬೇಕು.[2]

ಆವೃತ್ತ್ಯಧಿಕರಣ.

೪೬

ಯಾವುದೇ ಉಪಾಸನೆಗಳಲ್ಲೂ ಪರಮಾತ್ಮನನ್ನು ಉಪಾಸಕರಾದ ಜೀವಾತ್ಮರು ದೇಹದೊಳಗೆ ತಾವಿರುವಂತೆಯೇ ತಮ್ಮೊಳಗೂ ಇರುವ ಏಕೈಕಆತ್ಮವೆಂದು ತಾತ್ತ್ವಿಕವಾಗಿ ತಿಳಿದು ಉಪಾಸಿಸಬೇಕು. ಇಂತಹ ನಿರ್ಣಯವನ್ನು ಪೂರ್ವಿಕರಾದ ಎಲ್ಲ ಆಚಾರ್ಯರೂ ಮಾಡಿರುವರು. ಇದೇ ಅರ್ಥದ ಉಪನಿಷದ್ವಚನಗಳನ್ನು ಓದಿಸಿ ತಿಳಿಸಿ ಪ್ರಾಯೋಗಿಕವಾಗಿಯೂ ತೋರಿಸಿರುವರು. ಈ ನಿರ್ಣಯದಂತೆ ಎಲ್ಲ ವಾಕ್ಯದ ಎಲ್ಲ ಶಬ್ದಗಳಿಗೂ ಪರಮಾತ್ಮನವರೆಗೆ ಅರ್ಥವಿರುತ್ತದೆ. 'ನಾನು' ಎಂಬ ಉಪಾಸಕನ ಮಾತಿಗೆ ನನ್ನೊಳಿರುವ ಪರಮಾತ್ಮ ಎಂದು ಅರ್ಥಮಾಡಿದರೆ 'ನಾನೇ ಪರಮಾತ್ಮ' ಎಂಬ ಮಾತಿಗೆ ಉಪಾಸ್ಯನಾದ ಪರಮಾತ್ಮನೂ ಉಪಾಸಕನೊಳಗಿರುವ ಪರಮಾತ್ಮನೂ ಒಂದೇ ಹೊರತು ಬೇರೆಯಲ್ಲ ಎಂದರ್ಥವಾಗುವುದು. ಹೀಗೆ ಎಲ್ಲೆಲ್ಲೂ ಇರುವ ಪರಮಾತ್ಮ ಒಬ್ಬನೇ ಎಂಬ ಏಕತೆಯ ತಾತ್ತ್ವಿಕಜ್ಞಾನ ನಮಗೆ ಉಂಟಾಗುವುದು.[3]

ಆತ್ಮತ್ವೋಪಾಸನಾಧಿಕರಣ.

---

1. ಮುಮುಕ್ಷುವಾಗಿ ಈಶಾವಾಸ್ಯೋಪಾಸನೆ ಮಾಡುವವರೂ ಇಂತಹ ಭಾಗವತಾಪಚಾರಕ್ಕಾಗಿ ಉದ್ಗೀಥೋಪಾಸನೆ ಮಾಡಬೇಕೆಂಬ ವಿಷಯ ಇಲ್ಲಿ ಸ್ಪಷ್ಟವಾಗಿ ಸೂಚಿತವಾಗಿದೆ.

2. ಶರೀರಪೋಷಣೆಗೆ ಪ್ರತಿದಿನವೂ ನಿಯಮಿತವಾದ ಪೌಷ್ಟಿಕ ಆಹಾರ ಔಷಧಾದಿಗಳ ಸೇವನೆಮಾಡುವಂತೆ ಉಪಾಸನೆಯನ್ನು ಸಾಂಗವಾಗಿ ಪ್ರತಿದಿನವೂ ನಿಯತಕಾಲಗಳಲ್ಲಿ ನಡೆಸಬೇಕು. ಒಂದುದಿನದಲ್ಲಿ ಔಷಧಾಹಾರಾದಿ ಸೇವನೆಯಿಂದಾಗಲಿ ಒಂದೇ ದಿನ ಹೆಚ್ಚು ಔಷಧಾಹಾರ ಸೇವಿಸುವುದರಿಂದಾಗಲಿ ಸರಿಯಾದ ಫಲ ಸಿಗದಲ್ಲವೆ? ಈ ಅಭಿಪ್ರಾಯ ಈಶಾ. ೨ರಲ್ಲೂ ಸೂಚಿತವಾಗಿದೆ.

3. ನಮ್ಮ ದೇಹಕ್ಕೆ ಯಾರಾದರೂ ಹೊಡೆದರೆ "ಏಯ್ ನನಗೇಕೆ ಹೊಡೆದೆಯೋ" ಎಂದು ಕೇಳುವ ವಾಡಿಕೆ ಇದೆ. ಅದಕ್ಕೆ ನಾವೂ ನಮ್ಮ ದೇಹವೂ ಬೇರೆಯಲ್ಲ; ದೇಹವೇ ನಾವು ಎಂಬ ಸೂಕ್ಷ್ಮವಾದ ಭ್ರಮೆಯೇ ಕಾರಣ. ನಾನು ಮನುಷ್ಯ ಎಂಬ ಜ್ಞಾನಕ್ಕೆ ನಾವು ಮನುಷ್ಯಾಕಾರವಾದ ಶರೀರದೊಳಗಿರುವುದರಿಂದ ಮನುಷ್ಯ ಎಂಬ ಹೆಸರನ್ನು ಪಡೆದಿದ್ದೇವೆ ಎಂಬ ತಾತ್ತ್ವಿಕವಾದ ಹಿನ್ನೆಲೆಯೊಂದಿರುತ್ತದೆ. ಇದು ಭ್ರಮೆಯಲ್ಲ. ನಾನೊಬ್ಬ ಜೀವಿ ಎಂಬ ಮಾತಿಗೂ ಜೀವಾತ್ಮನನ್ನು ಒಳಗೊಂಡಿರುವ ಶರೀರವಿದು, ಇದು ನಿರ್ಜೀವವಲ್ಲ ಎಂಬ ನಿಜವಾದ ಅರ್ಥದ ಹಿನ್ನೆಲೆಯಿಂದಲೇ 'ಆತ್ಮಾ' ಎಂಬ ಶಬ್ದದ ಅರ್ಥವನ್ನೂ 'ಅಹಂ ಬ್ರಹ್ಮಾಸ್ಮಿ' ಮುಂತಾದ ವಚನಗಳ ಅರ್ಥವನ್ನೂ ನಿರ್ಣಯಿಸಬೇಕು. 'ಈಶಾವಾಸ್ಯಂ' ಎಂಬುದರ ಅರ್ಥವಾಗಿ ಭಾಗವತ ೮. ೧ರಲ್ಲಿ 'ಆತ್ಮಾವಾಸ್ಯಂ' ಎಂದಿರುವುದನ್ನೂ, ಈಶಾ. ೬, ೭ ಮಂತ್ರಗಳಲ್ಲಿ ಆತ್ಮಶಬ್ದವಿರುವುದನ್ನೂ ಈಶಾ. ೧೬ 'ಯೋಽಸಾವಸೌ ಪುರುಷಸ್ಸೋಽಹಮಸ್ಮಿ' ಎಂಬುದನ್ನೂ ಗಮನಿಸಿ.

೪೭

ಪರಮಾತ್ಮನನ್ನು ಭೌತಿಕವಸ್ತುವಾಗಿ ತಿಳಿಯುವುದು ತಿಳಿಗೇಡಿತನ. ಭೌತಿಕವಸ್ತುಗಳನ್ನು ಪರಮಾತ್ಮನೆಂದು ಭಾವಿಸುವುದೇ 'ಬ್ರಹ್ಮದೃಷ್ಟಿ'. ಇದೇ ಪ್ರತೀಕೋಪಾಸನೆ.[1]

ಪ್ರತೀಕಾಧಿಕರಣ.

ನಿಕೃಷ್ಟವಸ್ತುವನ್ನು ತಿರಸ್ಕರಿಸದೆ ಉತ್ಕೃಷ್ಟವಾಗಿ ಭಾವಿಸಬೇಕೆಂಬುದೇ ಈ ಅಧಿಕರಣದ ಮುಖ್ಯವಿಚಾರವಾದ್ದರಿಂದ ಉದ್ಗೀಥವೆನಿಸುವ ಓಂಕಾರವನ್ನೇ ಆದಿತ್ಯ ಮುಂತಾದ ಉತ್ಕೃಷ್ಟದೇವತಾವಸ್ತುವನ್ನಾಗಿ ಭಾವಿಸುವುದು ಉದ್ಗೀಥೋಪಾಸನೆಯಲ್ಲಿ ಔಚಿತ್ಯಪೂರ್ಣವೆನಿಸಿದೆ.

ಆದಿತ್ಯಾದಿಮತ್ಯಧಿಕರಣ.

೪೮

ಉಪಾಸನೆಗೆ ಹಗಲು, ರಾತ್ರಿ ಮುಂತಾದ ಕಾಲನಿಯಮವಿಲ್ಲ. ಮನಸ್ಸಿಗೆ ಏಕಾಗ್ರತೆ ಇರುವಾಗಲೇ ಉಪಾಸನೆ ಮಾಡಬೇಕು. ಯಾವ ಎಡೆಯಲ್ಲಿ ಯಾವ ಸಮಯದಲ್ಲಿ ಏಕಾಗ್ರತೆ ಬರುವುದೋ ಆ ಸಮಯದಲ್ಲೇ ಉಪಾಸನೆಗೆ ಕೂರಬೇಕು. ಉಪಾಸನೆಗೆ ಮನಸ್ಸಿನ ಏಕಾಗ್ರತೆಯೇ ಬಹಳ ಮುಖ್ಯ.

ಒಂದೆಡೆ ಆಸನದಲ್ಲಿ ಒರಗುಮಣೆ ದಿಂಬುಗಳನ್ನು ಆಶ್ರಯಿಸಿ ಬೆನ್ನುಹುರಿಯನ್ನು ನೆಟ್ಟಗಿರಿಸಿ ಕುಳಿತೇ ಧ್ಯಾನಿಸಬೇಕು. ಇಲ್ಲವಾದರೆ ಸಾಮಾನ್ಯ ಅಭ್ಯಾಸಿ ಉಪಾಸಕರಿಗೆ ಏಕಾಗ್ರತೆ ಬರುವುದಿಲ್ಲ. ದೇಹವು ಪರ್ವತದಂತೆಯೂ, (ರೇಖಾಗಣಿತದ ಕೇಂದ್ರಬಿಂದುವಿನಂತೆ ಅಚಲವಾದ) ಭೂಮಿಯಂತೆಯೂ, ಆಕಾಶದಂತೆಯೂ ನಿಶ್ಚಲವಾಗಿದ್ದರೆ ಮಾತ್ರ ಧ್ಯಾನಮಾಡಲು ಸಾಧ್ಯವೆಂದು ವೇದಗಳು ಸಾರಿಸಾರಿ ಹೇಳುತ್ತವೆ. ಗೀತೆಯಲ್ಲೂ ಈ ವಿಚಾರವನ್ನು ನೆನಪಿಸಲಾಗಿದೆ.[2]

ಆಸೀನಾಧಿಕರಣ.

೪೯

ಉಪಾಸಕನು ತಾನು ಬದುಕಿರುವವರೆಗೂ ಉಪಾಸನೆಯನ್ನು ನೆರವೇರಿಸಬೇಕು. ಹೀಗೆ ಉಪನಿಷತ್ತುಗಳು ಸಾರಿಸಾರಿ ಹೇಳಿವೆ.[3]

ಆಪ್ರಯಾಣಾಧಿಕರಣ.

---

1. ಮೋಕ್ಷಾರ್ಥವಾಗಿ ಮಾಡುವ ಉಪಾಸನೆಗಳಲ್ಲಿ ದೃಷ್ಟಿವಿಧಾನ ಇಲ್ಲವಾದರೂ ಐಹಿಕಫಲಗಳಿಗಾಗಿ ಮಾಡುವ ಉಪಾಸನೆಗಳಲ್ಲಿ ಇದು ಇರಬಹುದು. ಇರುವಾಗ ಅದರ ರೀತಿ ಹೇಗಿರಬೇಕೆಂಬುದು ಮಾತ್ರ ಇಲ್ಲಿ ಗಮನಾರ್ಹವಾದ ಅಂಶ.

    ದೇವಾಲಯದಲ್ಲಿರುವ ದೇವರ ವಿಗ್ರಹಗಳನ್ನೇ ನಿಜವಾದ ದೇವರೆಂದು ಭಾವಿಸುವುದು. ಪ್ರತೀಕೋಪಾಸನೆಗೆ ಒಂದು ಉದಾಹರಣೆ. ವಿಗ್ರಹವು ಎಂದೂ ದೇವರಲ್ಲ. ವಿಗ್ರಹದೊಳಗೆ ದೇವರಿರುವನು. ವಿಗ್ರಹವೂ ದೇವರಿಗೆ ಒಂದು ಶರೀರ ಮಾತ್ರ. ಜಗತ್ತೆಲ್ಲವೂ ದೇವರ ಶರೀರವೇ ಆಗಿರುವುದು. ದೇವನೊಬ್ಬನೇ ಜಗತ್ತಿನ ಎಲ್ಲ ಆತ್ಮಗಳಿಗೂ ಆತ್ಮ. ಇಂತಹ ಆತ್ಮತ್ವೋಪಾಸನೆಯು ಪ್ರತೀಕೋಪಾಸನೆಯಾಗದು. ಆದುದರಿಂದಲೇ ಭಗವದ್ರಾಮಾನುಜರು ಈ 'ಶರೀರಶರೀರಿಭಾವ' ಎಂಬ ಆತ್ಮಶಬ್ದಾರ್ಥವನ್ನು ತಮ್ಮ ಸಿದ್ಧಾಂತದ ಮುಖ್ಯಆಧಾರವನ್ನಾಗಿ ಮಾಡಿಕೊಂಡಿರುವರು ಎಂಬುದೂ ಇಲ್ಲಿ ಗಮನಾರ್ಹ.

2. ಗೀ. ೬. ೧೦, ೧೨, ೧೩,೧೯.

3. 'ಸ ಖಲ್ವೇವಂ ವರ್ತಯನ್ ಯಾವದಾಯುಷಂ' ಛಾಂ. ೮. ೧೫. ೧. ಈಶಾ. ೨ ಗಮನಿಸಿ.

## ೫೦

ಉಪಾಸನೆಯು ಸಿದ್ಧಿಸಿತೆಂದರೆ ಉಪಾಸಕನಿಗಿದ್ದ ಪಾಪಗಳೆಲ್ಲವೂ ಹೋಗಬೇಕು. ಪಾಪಗಳು ಮತ್ತೆ ಬರಬಾರದು. ಪರಮಾತ್ಮನ ಪ್ರೀತಿಯೆನಿಸುವ ಅನುಗ್ರಹಸಂಕಲ್ಪವೇ ಪುಣ್ಯ. ಅವನ ಕೋಪವೆನಿಸುವ ನಿಗ್ರಹ ಸಂಕಲ್ಪವೇ ಪಾಪ. ಇವುಗಳ ಹೊರತು ಉಪಾಸಕನು ಮಾಡುವ ಒಳ್ಳೆಯ ಮತ್ತು ಕೆಟ್ಟ ಕೆಲಸಗಳಿಂದ ಅವನ ದೇಹದ ಅಸ್ತಿತ್ವಕ್ಕೆ ಕಾರಣವಾದ ಸಂಸ್ಕಾರವೊಂದಿರುವುದೆನ್ನಲು ಯಾವ ಪ್ರಮಾಣಾಧಾರವೂ ಇಲ್ಲ. ಉಪಾಸಕನು ತದೇಕಪ್ರೀತಿಯಿಂದ ಮಾಡುವ ಉಪಾಸನೆಯಿಂದ ಪರಮಾತ್ಮನು ಸುಪ್ರೀತನಾಗಿ ತನ್ನ ಕೋಪಭಾವವನ್ನು ಬಿಟ್ಟುಬಿಡುವನು. ಇದೇ ಉಪಾಸಕನ ಪಾಪದ ವಿನಾಶ. ಈ ಉಪಾಸನೆಯಿಂದ ಸುಪ್ರೀತನಾದ ಪರಮಾತ್ಮನು ಮುಂದೆ ಉಪಾಸಕನು ಆಕಸ್ಮಾತ್ ತಿಳಿಯದೆ ತಪ್ಪುಮಾಡಿದರೂ ಅಂತಹ ಕೋಪಭಾವವನ್ನು ಎಂದೂ ಮಾಡುವುದಿಲ್ಲ. ಇದೇ ಪಾಪದ ಲೇಪವಾಗದಿರುವಿಕೆ. ಹೀಗೆಯೇ ಪರಮಾತ್ಮನ ಪ್ರೀತಿಭಾವದಿಂದ ಉಪಾಸಕನಿಗೆ ಗೃಹ, ಪಶು, ಪುತ್ರ, ಅನ್ನ, ಪರಿವಾರ, ಐಶ್ವರ್ಯಾದಿಗಳು ಉಪಾಸನೆಗೆ ಸಹಾಯಕಗಳಾಗಿ ಸಿಗುವುವು. ಇಂತಹ ಪುಣ್ಯವೂ (ಚಿನ್ನದ ಬೇಡಿಯಂತೆ) ಪಾಪಕ್ಕಿಂತಲೂ ಪ್ರಬಲವಾದ ವಿಘ್ನವಾಗಿ ಆಗಬಹುದಾದರೂ, ಪರಮಾತ್ಮನು ಉಪಾಸನೆಗೆ ಆವಶ್ಯಕವಾದ ಪುಣ್ಯಗಳ ಫಲಗಳನ್ನು ಮಾತ್ರ ಉಳಿಸಿದ್ದು, ಉಪಾಸಕನ ದೇಹವಿಯೋಗವಾದಮೇಲೆ ಅವುಗಳನ್ನು ನಾಶಪಡಿಸುವನು. ಮತ್ತು ಅನವಶ್ಯಕವಾದ ಅಂದರೆ ಉಪಾಸನೆಗೆ ವಿರೋಧಿಯಾಗುವ ಐಶ್ವರ್ಯಾದಿಫಲಗಳನ್ನು ಉಪಾಸನಸಿದ್ಧಿಯಾದಮೇಲೆ ಉಪಾಸಕನ ದೇಹವಿರುವವರೆಗೂ ಉಂಟುಮಾಡುವುದಿಲ್ಲ. ಉಪಾಸಕನು ಹಿಂದೆ ಮಾಡಿಟ್ಟುಕೊಂಡಿರುವ ಆಸ್ತಿಪಾಸ್ತಿಯಂತಹ ಪುಣ್ಯಪಾಪಗಳಲ್ಲಿ ಉಳಿದಿರಬಹುದಾದವುಗಳನ್ನೂ ಅವನ ದೇಹವಿಯೋಗವಾದೊಡನೆ ಬಂಧು, ಮಿತ್ರ, ಶತ್ರುಗಳಲ್ಲಿ ಪ್ರತ್ಯೇಕ ಹಂಚಿಹೋಗುವಂತೆ ಪರಮಾತ್ಮನೇ ಮಾಡಿಸುವನು. ಯಾವುದೇ ಪುಣ್ಯ ಮತ್ತು ಪಾಪಕ್ಕೆ ತಕ್ಕಂತೆ ಅವುಗಳ ಫಲವನ್ನು ಅನುಭವಿಸಲೆಂದೇ ಪಡೆದಿರುವ ಈ ಜನ್ಮದ ದೇಹವು ಉಪಾಸಕನಿಗೆ ಆ ಪುಣ್ಯಪಾಪಗಳನ್ನು ಅನುಭವಿಸುವವರೆಗೂ ಇದ್ದೇ ಇರುವುದು.[1]

ತದಧಿಗಮಾದಿ ೫ ಅಧಿಕರಣಗಳು.

## ೫೧

ಉಪಾಸಕನಿಗೆ ದೇಹವಿಯೋಗವಾಗುವ ಮೊದಲು ಅವನ ವಾಗಿಂದ್ರಿಯವೂ ಇತರ ಇಂದ್ರಿಯಗಳೂ ಮನಸ್ಸಿನೊಡನೆ ಸೇರುವುವು. ಇಂತಹ ಮನಸ್ಸು ಪ್ರಾಣದೊಡನೆ ಸೇರುವುದು. ಪ್ರಾಣವು ಜೀವಾತ್ಮದೊಡನೆ ಸೇರು

---

1. ಉಪಾಸಕನು ಸ್ವೇಚ್ಛೆಯಿಂದ ಶೀಘ್ರವಾಗಿ ಮರಣಹೊಂದುವುದು ಸಾಧ್ಯವಿಲ್ಲ. ಅವನು ಪೂರ್ಣಾಯುಷ್ಯದೊಡನೆ ಗಟ್ಟಿಮುಟ್ಟಾಗಿ ಬದುಕಿರಲು ಯತ್ನಿಸಬೇಕು, ಎಂಬ ಈಶಾ. ೨ರ ಅರ್ಥ ಗಮನಿಸಿ. ವಿದ್ಯೆಗೆ ಅಂಗವಾಗಿ ಮಾಡುವ ನಿತ್ಯನೈಮಿತ್ತಿಕ ಕರ್ಮಗಳಿಗೆ ಯಾವುದೇ ಸ್ವಂತಫಲ ಕೊಡುವ ಶಕ್ತಿಯೂ ಇರುವುದಿಲ್ಲ. ಈ ಫಲಜನನಶಕ್ತಿಯ ನಾಶವೇ ಕರ್ಮಗಳ ವಿನಾಶ. ಫಲಜನನಶಕ್ತಿ ಎಂದರೆ ಪರಮಾತ್ಮನ ಸಂಕಲ್ಪವಿಶೇಷ ಎಂದು ಹಿಂದೆಯೇ ತಿಳಿಸಲಾಗಿದೆ. ಈ ವಿಚಾರದಲ್ಲಿ ಈಶಾವಾಸ್ಯದ 'ಸಂಭೂತಿ' 'ಅಸಂಭೂತಿ'ಗಳಿಗೆ ಸಂಬಂಧಿಸಿದ ಭಾಷ್ಯವಿವರಣೆಗಳನ್ನು ಗಮನಿಸಿ. ವಿದ್ಯಾಂಗವಾದ ಕಾಮ್ಯಕರ್ಮಗಳು ಮಾತ್ರ ವಿದ್ಯೆಗೆ ಆವಶ್ಯಕವಾದ ಫಲವನ್ನು ಕೊಡುವುದಲ್ಲದೆ ಉಳಿದುಳಿದಿದ್ದರೆ ಉಪಾಸಕನ ದೇಹವಿಯೋಗವಾದಮೇಲೆ ಅವನ ಮಿತ್ರಾದಿಗಳಲ್ಲಿ ಹಂಚಿಹೋಗುವುವು. ವಿದ್ಯಾರಂಭಕ್ಕೆ ಪೂರ್ವಭಾವಿಯಾಗಿಯೇ ಸಂಚಿತವಾದ ಕೆಲವು ಕರ್ಮಗಳು ವಿದ್ಯೆಯಿಂದ ನಾಶವಾಗುವುವು. ನಾಶವಾಗದಿರುವ ಕೆಲವು ದೇಹವಿಯೋಗಾನಂತರ ಶತ್ರುಮಿತ್ರಾದಿಗಳಲ್ಲಿ ಹಂಚಿಹೋಗುವುವು. ವಿದ್ಯಾಸಾಧನೆಗೆ ಆಸರೆಯಾಗಿರುವ ಈ ಜನ್ಮದ ಈ ದೇಹಕ್ಕೆ ಕಾರಣವಾದ ಕರ್ಮವನ್ನು ಪ್ರಾರಬ್ಧಕರ್ಮ ಎಂದು ಕರೆಯುವರು. ಇದನ್ನು ಮಾತ್ರ ಉಪಾಸಕನು ಈ ದೇಹದಲ್ಲೇ ಅನುಭವಿಸಿ ಮುಗಿಸಬೇಕು. ಈಶಾ. ೧೪ ಗಮನಿಸಿ.

ವುದು. ಆ ಜೀವಾತ್ಮವೂ ಸಹ ಪಾಂಚಭೌತಿಕಸೂಕ್ಷ್ಮಾಂಶಗಳೊಡನೆ ಸೇರುವುದು. ಇಂತಹ ಭೂತಸೂಕ್ಷ್ಮವಿಶಿಷ್ಟವಾದ ಜೀವಾತ್ಮವು ದೇಹವನ್ನು ಯಾವುದಾದರೂ ನರನಾಡಿಗಳ ಮೂಲಕ ಬಿಟ್ಟುಹೋಗುವುದು. ಈ ವಿಯೋಗವೇ ಮರಣ. ಇದು ಉಪಾಸಕರಿಗೂ ಉಪಾಸಕರಲ್ಲದವರಿಗೂ ಸಮಾನ. ಉಪಾಸಕನ ಆತ್ಮವು ಪರಮಾತ್ಮನಾದ ನಾರಾಯಣನ ಅನುಗ್ರಹದಿಂದ ಸುಷುಮ್ನಾನಾಡಿಯ ಮೂಲಕ ದೇಹದಿಂದ ಹೊರಬೀಳುವುದು. ಇತರರಿಗೆ ಮಾತ್ರ ಹಾಗಲ್ಲ. ಇಷ್ಟೇ ಈ ಮರಣಗಳಲ್ಲಿರುವ ವ್ಯತ್ಯಾಸ.

ಮರಣವಾಗದೆ ಮುಕ್ತಿ ಇಲ್ಲ. ಜೀವನ್ಮುಕ್ತಿಯೆಂಬ ಮಾತಿಗೆ ಉಪಾಸಕನಿಗೆ ಈ ದೇಹದಲ್ಲಿರುವಾಗಲೇ ಪರಮಾತ್ಮಾನುಭವಕಾಲದಲ್ಲಾಗುವ ಬಾಹ್ಯವಿಷಯಗಳ ಅಲಿಪ್ತತೆಯೇ ನಿಜವಾದ ಅರ್ಥ.

ಮರಣವಾದ ಮೇಲೂ ವಿವಿಧ ದಿವ್ಯಲೋಕಗಳಿಗೆ ಯೋಗ್ಯವಾದ ಭೂತಸೂಕ್ಷ್ಮಶರೀರ ಇರುವವರೆಗೆ ಸಂಸಾರಬಂಧವು ಪೂರ್ಣವಾಗಿ ಹೋಗಿರುವುದಿಲ್ಲ ಎಂಬ ಅಂಶವೂ ಇಲ್ಲಿ ಗಮನಾರ್ಹ.

ಜೀವಾತ್ಮವಿಶಿಷ್ಟವಾದ ಭೂತಸೂಕ್ಷ್ಮಗಳು ಪರಮಾತ್ಮನೊಡನೆ ಸೇರುವುವು. ಅವು ನಾಶವಾಗುವುದೂ ಇಲ್ಲ. ಜೀವಾತ್ಮನ ವಿದ್ಯಾವಿದ್ಯೆಗಳಿಗನುಸಾರವಾದ ಯಾವುದೇ ಉಪಯೋಗಕ್ಕೂ ಬರುವುದಿಲ್ಲ. ಈ ವಿಧವಾದ ದೇಹವಿಯೋಗಸಂದರ್ಭದ ವಿಚಾರವೆಲ್ಲವನ್ನೂ ಉಪಾಸಕನು ಉಪಾಸನಕಾಲದಲ್ಲಿ ಅತ್ಯವಶ್ಯ ಚಿಂತನೆಮಾಡಬೇಕು.[1]

ವಾಗಾದಿ ೮ ಅಧಿಕರಣಗಳು.

೫೨

ಉಪಾಸಕನು ಈ ರೀತಿ ಮರಣವನ್ನು ಯಾವ ಕಾಲದಲ್ಲಿ ಪಡೆದರೂ ಅರ್ಚಿರಾದಿಮಾರ್ಗದಿಂದ ಪರಮಾತ್ಮಲೋಕದವರೆಗೆ ಹೋಗಬೇಕು. ಪರಮಾತ್ಮನ ಆಜ್ಞಾನುಸಾರ ಅಮಾನವನೆಂಬ ವಿದ್ಯುತ್ಪುರುಷನು ಉಪಾಸಕರನ್ನು ಈ ಮಾರ್ಗದಲ್ಲಿ ಕರೆದೊಯ್ಯುವನು. ಈ ಮಾರ್ಗದಲ್ಲಿ ಅರ್ಚಿಸ್–ಪ್ರಕಾಶ. ಅಹಸ್–ಹಗಲು, ಶುಕ್ಲಪಕ್ಷ, ಉತ್ತರಾಯಣ, ಸಂವತ್ಸರ, ವಾಯು, ಸೂರ್ಯ, ಚಂದ್ರ, ವಿದ್ಯುತ್, ವರುಣ, ಇಂದ್ರ, ಪ್ರಜಾಪತಿ ಎಂಬ ಹನ್ನೆರಡು ಮಾರ್ಗಾಭಿಮಾನಿದೇವತೆಗಳು ಆಯಾಸ್ತರಗಳಲ್ಲಿ ಪರಮಾತ್ಮನ ಆಜ್ಞೆಯಂತೆ ಉಪಾಸಕನಿಗೆ ಅನುಗ್ರಹಮಾಡಲು ಇರುವರು. ಈ ಮಧ್ಯೆ 'ವಿದ್ಯುತ್' ಎಂಬುದೇ ವಿದ್ಯುತ್ಪುರುಷನ ಸ್ವಸ್ಥಾನ. ಅವನು ಮಾತ್ರ ಆದಿಯಿಂದ ಅಂತ್ಯದವರೆಗೆ ಎಡೆಬಿಡದೆ ಇದ್ದು ಉಪಾಸಕರನ್ನು ಈ ಮಾರ್ಗದಲ್ಲಿ ನಡೆಸಿ ಪರಮಾತ್ಮನ ಬಳಿಗೆ ಸೇರಿಸುವನು. ಇತರರು ಮಾತ್ರ ತಮ್ಮ ಸ್ಥಾನದಲ್ಲೇ ಇದ್ದು ಅನುಗ್ರಹಮಾಡುವರು. ಈ ಮಾರ್ಗವಿಚಾರವನ್ನು ಉಪಾಸಕರು ಪ್ರತಿದಿನ ಉಪಾಸನೆಯಲ್ಲಿ ಚಿಂತಿಸಬೇಕು.[2]

ರಶ್ಮ್ಯನುಸಾರ್ಯಾದಿ ೬ ಅಧಿಕರಣಗಳು.

೫೩

ಪರಮಾತ್ಮನಿಂದ ಜಗತ್ತಿನ ಸೃಷ್ಟಿಗಾಗಿಯೇ ಇರುವ ಜೀವಾತ್ಮನಾದ ಚತುರ್ಮುಖಬ್ರಹ್ಮನನ್ನು ಉಪಾಸನೆಮಾಡಿದವರಿಗೆ ಮಾತ್ರ ಅರ್ಚಿರಾದಿಮಾರ್ಗ ಸಿಗುವುದೆಂದು ಬಾದರಿಮಹರ್ಷಿಗಳು ಅಭಿಪ್ರಾಯಪಡುತ್ತಾರೆ.

---

1. ಸಂಭೂತಿ ಅಸಂಭೂತಿಗಳ ವಿಚಾರಕ್ಕೆ ಉಪಯುಕ್ತ.
2. ಈಶಾ. ೧೮ 'ಅಗ್ನೇ ನಯ' 'ಸುಪಥಾ' ಎಂಬ ಮಂತ್ರಾರ್ಥ ವಿವರಣೆಗಳನ್ನೂ 'ಅರ್ಚಿಸ್' ಗೆ ಅಧಿದೇವತೆ 'ಅಗ್ನಿ' ಎಂಬುದನ್ನೂ ಈ ಮಾರ್ಗದಲ್ಲೇ 'ಸೂರ್ಯ' ನಿರುವುದನ್ನೂ ಈಶಾ ೧೬, ೧೭. ರಲ್ಲಿ ಸೂರ್ಯನ ವಿಚಾರ ಇರುವುದನ್ನೂ ಗಮನಿಸಿ.

ಬರಿಯಪರಮಾತ್ಮನನ್ನು ಉಪಾಸನೆಮಾಡಿದವರಿಗೆ ಮಾತ್ರ ಈ ಮಾರ್ಗವೆಂದು ಜೈಮಿನಿಮಹರ್ಷಿಗಳು ಅಭಿಪ್ರಾಯಪಡುತ್ತಾರೆ.

ಪರಮಾತ್ಮನನ್ನು ಮುಕ್ತಿಗಾಗಿ ಉಪಾಸಿಸುವುವರಲ್ಲಿ ಎರಡು ಗುರಿಗಳಿರುತ್ತವೆ. ಒಂದು ಪರಮಾತ್ಮನನ್ನು ವಿಶೇಷಣವಾಗಿ ಒಳಗೊಂಡಿರುವ ಜೀವಾತ್ಮತತ್ತ್ವವನ್ನು ಪಡೆಯುವುದು. ಇದೇ ಕೈವಲ್ಯ. ಮತ್ತೊಂದು ಜೀವಾತ್ಮತತ್ತ್ವವನ್ನು ವಿಶೇಷಣವಾಗಿ ಒಳಗೊಂಡಿರುವ ಪರಮಾತ್ಮತತ್ತ್ವವನ್ನು ಪಡೆಯುವುದು. ಇದೇ ಪರಮಾತ್ಮಪ್ರಾಪ್ತಿ. ಈ ಎರಡೂ ಮುಕ್ತಿಯೆನಿಸಿರುವುವು. ಈ ಗುರಿಮುಟ್ಟಲು ಇರುವ ಏಕೈಕಮಾರ್ಗ 'ಅರ್ಚಿರಾದಿ'. ಈ ಎರಡು ವಿಧ ಉಪಾಸಕರನ್ನು ಅಪ್ರತೀಕಾಲಂಬನರೆಂದು ಹೆಸರಿಸಲಾಗಿದೆ. ಇವರಿಗೆ ಮಾತ್ರ ಅರ್ಚಿರಾದಿ ಮಾರ್ಗಸಿಗುವುದು, ಎಂದು ಪ್ರಸಿದ್ಧರಾದ ಬಾದರಾಯಣ ಮಹರ್ಷಿಗಳು ಅಭಿಪ್ರಾಯ ಪಡುತ್ತಾರೆ.

ಅರ್ಚಿರಾದಿಮಾರ್ಗದಲ್ಲಿ ಪರಮಾತ್ಮಲೋಕಕ್ಕೆ ಹೋದವರು ಮತ್ತೆ ಸಂಸಾರಮಂಡಲಕ್ಕೆ ಬರುವಂತಿಲ್ಲ. ಇತರ ಲೋಕಗಳಿಗೆ ಹೋದವರು ಮಾತ್ರ ಇಹಲೋಕಕ್ಕೆ ಹಿಂತಿರುಗಬೇಕು.[1]

ಕಾರ್ಯಾಧಿಕರಣ.

೫೪

'ಜೀವಾತ್ಮವಿಶಿಷ್ಟವಾದ ಪರಮಾತ್ಮನನ್ನು ಮುಖ್ಯವೆಂದಾಗಲಿ ಅಮುಖ್ಯವೆಂದಾಗಲಿ ಉಪಾಸಿಸಿ, ಅದೇರೀತಿ ಫಲಗಳನ್ನು ಪಡೆದವರೇ ಮುಕ್ತರು' ಎಂದು ಈವರೆಗೆ ತಿಳಿಸಲಾಯ್ತು. ಈ ಫಲವನ್ನು ಅನುಭವಿಸುವಾಗ ಉಪಾಸಕನಾಗಿದ್ದ ಜೀವಾತ್ಮನಿಗೆ ತನ್ನಲ್ಲಿದ್ದು ಈವರೆಗೆ ಪ್ರಕಾಶಿಸದಿದ್ದ ಮತ್ತು ಪರಮಾತ್ಮನಲ್ಲಿ ನಿರಂತರವಾಗಿ ಪ್ರಕಾಶಿಸುವ, ಎಂಟುಗುಣಗಳು ಹೊರಹೊಮ್ಮಿ ಪ್ರಕಾಶಿಸುವುವು.[2] ಜೀವಾತ್ಮಸ್ವರೂಪವೇ ಆದ ಜ್ಞಾನಕ್ಕೂ, ಮುಕ್ತಿಯಲ್ಲಿ ಅವನಿಗೆ ವಿಕಾಸವಾಗುವ ಧರ್ಮಭೂತಜ್ಞಾನವೆಂಬ 'ಸರ್ವಜ್ಞತೆ'ಗೂ 'ಅಪಹತಪಾಪ್ಮತ್ವ' ಮುಂತಾದ ಎಂಟು ಸ್ವರೂಪಗುಣಗಳಿಗೂ ಪರಸ್ಪರ ಏನೂ ವಿರೋಧವಿಲ್ಲ.[3]

ಸಂಪದ್ಯಾವಿರ್ಭಾವಾಧಿಕರಣ, ಬ್ರಾಹ್ಮ್ಯಾಧಿಕರಣ.

---

1. ಈಶಾವಾಸ್ಯೋಪಾಸಕರಿಗೆ 'ಅಪ್ರತೀಕಾಲಂಬನ' ಅತ್ಯವಶ್ಯಕ ಎಂಬ ಅಂಶ ಇಲ್ಲಿ ಗಮನಾರ್ಹ. ಸಂಪ್ರದಾಯ ಗ್ರಂಥಗಳಲ್ಲಿ ಕೈವಲ್ಯಕ್ಕೆ ಆಶಿಸದೆ ಪರಮಾತ್ಮಪ್ರಾಪ್ತಿಗಾಗಿಯೇ ಅಪ್ರತೀಕಾಲಂಬನರಾಗಬೇಕೆಂಬ ಎಚ್ಚರಿಕೆ ನೀಡಲಾಗಿದೆ. ಇದರ ಅರ್ಥ ಕೈವಲ್ಯದಲ್ಲಿ ನಿಜವಾದ ರೀತಿಯ ಪರಮಾತ್ಮಪ್ರಾಪ್ತಿಯಾಗುವುದಿಲ್ಲ ಎಂದು. ಅದೂ ಇಲ್ಲಿ ಗಮನಾರ್ಹ. ಈ ಅಂಶವು ಈಶಾ. ೧೮. 'ರಾಯೇ' ಎಂಬುದರ ಸೂಕ್ಷ್ಮಾರ್ಥ. ಉಪಾಸಕನಿಗೆ 'ಭಕ್ತಿಯೋಗ'ವೆನಿಸುವ ಪರಮಾತ್ಮೋಪಾಸನೆಯು ಆರಂಭವಾಗುವ ಮುಂಚೆ 'ಆತ್ಮಾವಲೋಕನ' ವೆಂಬ 'ಜ್ಞಾನಯೋಗ' ಅವಶ್ಯವಾದಾಗ, ಅದರಲ್ಲಿ ಸಿದ್ಧಿಸುವ ಜೀವಾತ್ಮಾನುಭವವೂ ಒಂದು ಕೈವಲ್ಯ. ಇಂತಹ ಕೈವಲ್ಯಕ್ಕೆ ಅರ್ಚಿರಾದಿಮಾರ್ಗ ಬೇಕಿಲ್ಲ. ಇದು ಈ ಪ್ರಕೃತಿಮಂಡಲದೊಳಗೇ ಆಗುವಂತಹುದು. ಈ ಕೈವಲ್ಯವು ಮುಖ್ಯರೀತಿಯ ಪರಮಾತ್ಮಪ್ರಾಪ್ತಿಗೆ ವಿರೋಧಿಯಲ್ಲ. ಈ ಎರಡು ವಿಧವಾದ ಕೈವಲ್ಯಗಳನ್ನೂ ಒಪ್ಪಿ ನವೀನ ಆಚಾರ್ಯರು ಕೈವಲ್ಯದಬಗ್ಗೆ ನಡುಗಾಲದಲ್ಲಿ ಬಂದ ಅನವಶ್ಯಕ ಚರ್ಚೆಗಳಿಗೆ ಒಂದು ಮಿತಿಯನ್ನು ಹಾಕಿರುವರು. (ಬ್ರಹ್ಮಸೂತ್ರ ಶ್ರೀಭಾಷ್ಯ ಶ್ರುತಪ್ರಕಾಶಿಕೆಗಳಿಗೆ ವಿಸ್ತೃತವ್ಯಾಖ್ಯಾನವಾದ ಗುರುಭಾವಪ್ರಕಾಶಿಕೆ ನೋಡಿರಿ)
2. ಈಶಾ. ೧೫ರ ಪ್ರಾರ್ಥನೆಯ ಅಂಶ ಗಮನಿಸಿ.
3. ಈಶಾ. ೮ ಆತ್ಮಸ್ವರೂಪವಿಚಾರವನ್ನೂ, ಈಶಾ. ೧೭ 'ಅಮೃತಂ' ಎಂಬುದರ ಅರ್ಥವನ್ನೂ ಗಮನಿಸಿ.

೫೫

ಮುಕ್ತನಾದ ಉಪಾಸಕನು ತಾನೂ ಪರಮಾತ್ಮನೂ ಸೇರಿಯೇ ಇರುವೆವೆಂಬುದಾಗಿಯೂ, ಎಂಟು ಗುಣಗಳ ಮತ್ತು ಅವುಗಳ ಪರಿಣಾಮಗಳಿಂದಾದ ಸಮಾನತೆಯಿಂದಾಗಿ ತಮ್ಮಲ್ಲಿ ಒಂದು ರೀತಿ ಏಕತೆಯು ಇರುವುದೆಂಬುದಾಗಿಯೂ, ನಿರಂತರವಾದ ಅನುಭವವನ್ನು ಪಡೆಯುವನು.[1]

ಅವಿಭಾಗಾಧಿಕರಣ.

೫೬

ಮುಕ್ತನಾದ ಜೀವಾತ್ಮನಿಗೆ ಏನನ್ನಾದರೂ ಅನುಭವಿಸಲು ದೇಹ ಇಂದ್ರಿಯಾದಿಗಳು ಅವಶ್ಯಕವಲ್ಲವೆ? ಎಂಬ ಚರ್ಚೆಯಲ್ಲಿ ಬಾದರಾಯಣರ ಅಭಿಪ್ರಾಯ ಹೀಗಿದೆ.

ಪರಮಾತ್ಮಸಂಕಲ್ಪಾನುಸಾರ ದಿವ್ಯಶರೀರಾದಿಗಳನ್ನು ಮುಕ್ತಜೀವಾತ್ಮನು ತಾನೇ ತನ್ನ ಸಂಕಲ್ಪದಿಂದ ಸೃಷ್ಟಿಸಿಕೊಳ್ಳಬಹುದು. ಅಥವಾ ಶರೀರೇಂದ್ರಿಯಾದಿಗಳಿಲ್ಲದೆಯೇ ಸಂಕಲ್ಪದಿಂದ ಅನುಭವಿಸಲೂಬಹುದು. ಅಥವಾ ಪರಮಾತ್ಮನು ಇಂತಹವನಿಗಾಗಿ ದಿವ್ಯಶರೀರೇಂದ್ರಿಯಾದಿಗಳನ್ನು ಸೃಷ್ಟಿಸಿಕೊಡಲೂಬಹುದು. ಅಥವಾ ವಿಶ್ವದಲ್ಲಿ ಪರಮಾತ್ಮನು ಸೃಷ್ಟಿಸಿರುವುದನ್ನೇ ಜೀವಾತ್ಮನು ಪರಮಾತ್ಮಾಧೀನವಾದ ತನ್ನ ಸಂಕಲ್ಪದಿಂದ ಸ್ವೀಕರಿಸಿ ಅನುಭವಿಸಬಹುದು. ಇದಕ್ಕೆ ಪರಮಾತ್ಮನ ರಾಮಕೃಷ್ಣಾದ್ಯವತಾರಗಳೇ ಉದಾಹರಣೆ. ಪರಮಾತ್ಮನು ಎಲ್ಲೆಲ್ಲೂ ಇರುವುದರಿಂದ ರಾಮಕೃಷ್ಣಾದಿರೂಪವಾದ ಶರೀರಗಳಲ್ಲೂ ಸ್ವರೂಪತಃ ವ್ಯಾಪಿಸಿ ಇರಲು ಅವಕಾಶವಿದೆ. ಅಣುವಾದ ಜೀವಾತ್ಮಗಳು ಎಂದಿಗೂ ಹೀಗಾಗಲು ಸಾಧ್ಯವಿಲ್ಲ. ಆದರೆ ಎಲ್ಲೆಲ್ಲೂ ಹರಡುವ ತಮ್ಮ ಧರ್ಮಭೂತಜ್ಞಾನದ ಮೂಲಕ ಎಲ್ಲಿಬೇಕೆಂದರಲ್ಲಿ ಎಷ್ಟು ಶರೀರಗಳನ್ನಾದರೂ ವ್ಯಾಪಿಸಿ ಅನುಭವಿಸಬಹುದು. ಮುಕ್ತರಲ್ಲದವರೂ ಕೂಡ ತಮ್ಮ ಕರ್ಮಾನುಸಾರ (ಯೋಗಸಿದ್ಧಿಗಳನ್ನು ಪಡೆದಿದ್ದರೆ) ಧರ್ಮಭೂತಜ್ಞಾನದ ಮೂಲಕ ಕೆಲವು ಶರೀರಾದಿಗಳನ್ನು ಸೃಷ್ಟಿಸಲೂಬಹುದು. ಇರುವಂತಹವುಗಳನ್ನೇ ವ್ಯಾಪಿಸಲೂಬಹುದು. ಒಟ್ಟಿನಲ್ಲಿ ಇವೆಲ್ಲ ಪರಮಾತ್ಮನ ಸಂಕಲ್ಪಾಧೀನವಾಗಿವೆ ಎಂಬುದನ್ನು ಮರೆಯಬಾರದು.[2]

೫೭

ತಾತ್ಕಾಲಿಕವಾದ ಪರಿಮಿತವಾದ ವಸ್ತುಗಳ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಪರಮಾತ್ಮಾಧೀನವಾಗಿ ಜೀವಾತ್ಮನು ಕಾರಣನೆನಿಸಿದರೂ, ಮೂಲಭೂತವಾಗಿ ವಿಶ್ವಸೃಷ್ಟಿಗೆ ಪರಮಾತ್ಮನೊಬ್ಬನೇ ಕಾರಣ ಈ ವಿಷಯ

---

1. ಈಶಾ. ೧೬ರ 'ಸೋಽಹಮಸ್ಮಿ' ಎಂಬ ಅನುಭವವಿಚಾರವು, 'ಅಮೃತಂ' 'ರಾಯೇ' ಎಂಬ ವಿಚಾರದಲ್ಲೂ ಅತ್ಯವಶ್ಯಕ ಎಂಬುದು ಗಮನಾರ್ಹ.

2. ಮುಕ್ತಜೀವಾತ್ಮನು ಪರಮಾತ್ಮನಂತೆ ಭೂಲೋಕದಲ್ಲಿ ಧರ್ಮಸ್ಥಾಪನಾರ್ಥವಾಗಿ ಅವತರಿಸಬಹುದೆಂಬ ಸೂಕ್ಷ್ಮಾಂಶವನ್ನೂ ಈಶಾವಾಸ್ಯವಿದ್ಯೆಯ ಪ್ರಥಮಾಚಾರ್ಯನಾದ ದಧ್ಯಙ್ ಆಥರ್ವಣನು ಸೂರ್ಯನ ಅವತಾರ ಎನ್ನುವುದನ್ನೂ ಭಗವದ್ರಾಮಾನುಜರು ಆದಿಶೇಷಾವತಾರ ಎನ್ನುವುದನ್ನೂ ಇಂತಹ ವಿಚಾರಗಳೆಲ್ಲವನ್ನೂ, ಇದರಿಂದ ಸಮರ್ಥಿಸಬಹುದಾಗಿ ತೋರುವುದು.

ದಲ್ಲಿ ಮಾತ್ರ ಪರಮಾತ್ಮನಿಗೂ ಜೀವಾತ್ಮನಿಗೂ ಸಮಾನತೆ ಎಂದಿಗೂ ಇಲ್ಲ.[1]

ಜಗದ್ವ್ಯಾಪಾರವರ್ಜಾಧಿಕರಣ.

೫೮

ಉಪಾಸಕನಾದ ಜೀವಾತ್ಮನು ಪರಮಾತ್ಮನಿಗೆ ತೃಪ್ತಿಕರವಾದ ಭಕ್ತಿರೂಪವಾದ ಉಪಾಸನೆಯನ್ನು ಮಾಡುತ್ತ ಅದರ ಅಂಗವಾಗಿ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳನ್ನು ಬಿಡದೆ ನಿಷ್ಕಾಮವಾಗಿ ಮಾಡುತ್ತಿದ್ದರೆ ಪರಮಾತ್ಮನು ತಾನಾಗಿಯೇ ಉಪಾಸಕನ ಉಪಾಸನ ವಿದ್ಯೆಗಿರುವ ವಿಘ್ನಗಳೆಲ್ಲವನ್ನೂ ಪರಿಹರಿಸಿ ತನ್ನ ಅನುಭವ ವೆಂಬ ಮಹಾನಂದವನ್ನು ಕರುಣಿಸುವನು. ಪರಮಾತ್ಮನನ್ನೇ ನಿಶ್ಚಲವಾಗಿ ಭಜಿಸುವವರನ್ನು ಪರಮಾತ್ಮನು ಯಾವಾಗಲೂ ತನಗಿಂತ ಹೆಚ್ಚು ಪ್ರೀತಿಸುತ್ತಾನೆ. ಇಂತಹ ಭಕ್ತರನ್ನು ಪಡೆಯಲು ಅವನು ಯಾವಾಗಲೂ ಹಾತೊರೆಯುತ್ತಿರುತ್ತಾನೆ. ಇಂತಹವನು ತನ್ನನ್ನು ಪಡೆದ ತನ್ನ ಭಕ್ತ ಉಪಾಸಕರನ್ನು ತನ್ನ ಬಳಿಯಿಂದ ಎಂದೂ ಹಿಂತಿರುಗಿಸುವುದಿಲ್ಲ. ಈ ವಿಚಾರವನ್ನು ಉಪನಿಷತ್ ವಚನಗಳೂ ಗೀತಾವಚನಗಳೂ ದೃಢವಾಗಿ ತಿಳಿಸುತ್ತವೆ.[2]

ಜಗದ್ವ್ಯಾಪಾರವರ್ಜಾಧಿಕರಣ, ಅನಾವೃತ್ತಿಸೂತ್ರ.

# 4. ವೇದಾಂತದೀಪ

೧

ಎಲ್ಲದರ ಒಳಹೊಕ್ಕೂ, ಹೊರಗೆ ಆವರಿಸಿಯೂ ವಿಶ್ವವನ್ನು ತನ್ನ ಹಿಡಿತದಲ್ಲಿಟ್ಟು ಆಳುವ ಪರಮಾತ್ಮನೇ ಈಶ. ಇವನೇ ಪುರುಷೋತ್ತಮನಾದ ನಾರಾಯಣ. ವಿಶ್ವದಲ್ಲಿ ಜಡವಾದ ಪ್ರಕೃತಿ ಮತ್ತು ಜಡವಲ್ಲದ ಅನೇಕ ಜೀವಗಳೂ ಇವೆ. ಈ ಜಡಪ್ರಕೃತಿಯಿಂದಾದ ಶರೀರಗಳೊಳಗೆ ಜೀವಾತ್ಮಗಳಿದ್ದು ಶರೀರವನ್ನು ತಮ್ಮ ಅಧೀನ ದಲ್ಲಿಟ್ಟುಕೊಂಡಿರುವಂತೆ ಈ ಜಡ ಮತ್ತು ಜೀವಗಳೆಲ್ಲವನ್ನೂ ತನ್ನ ಶರೀರದಂತೆ ಅಧೀನದಲ್ಲಿಟ್ಟುಕೊಂಡಿರುವವನು ಪರಮಾತ್ಮ ಒಬ್ಬನೇ. ಈ ರೀತಿಯಲ್ಲಿ ತತ್ತ್ವವಿಚಾರ ಮಾಡುವುದೇ ವೈದಿಕರ ಪ್ರಕ್ರಿಯೆ ಪ್ರಾಯೋಗಿಕ ಜಿಜ್ಞಾಸ ಮಾರ್ಗ.[3]

೨

'ಸಕಲಸದ್ಗುಣಪೂರ್ಣನೂ ನಿರ್ದೋಷನೂ ಜಗತ್ಕಾರಣನೂ ಆದ ಪರಮಾತ್ಮನೇ ಉಪಾಸ್ಯವಸ್ತು' ಎಂಬುದು ಬ್ರಹ್ಮಸೂತ್ರಗ್ರಂಥದ ಮೊದಲ ಎರಡು ಅಧ್ಯಾಯಗಳ ಸಾರ.[4]

---

1. ಜಗದ್ವ್ಯಾಪಾರವೆಂದರೆ ವಿಶ್ವದ ಸೃಷ್ಟಿ ಸ್ಥಿತಿ ಸಂಹಾರ ಮೋಕ್ಷಾದಿಕ್ರಿಯೆಗಳು. ಇದನ್ನು ಪರಮಾತ್ಮನಾದ ನಾರಾಯಣನು ತನ್ನ ಪತ್ನಿಯಾದ ಮಹಾಲಕ್ಷ್ಮಿಯ ಇಂಗಿತವನ್ನರಿತು ಮಾಡುವವನಾದುದರಿಂದ ಜೀವಾತ್ಮನಿಗೆ ಇಂತಹ ಜಗದ್ವ್ಯಾಪಾರವಿಲ್ಲ ವೆಂದರೆ ಲಕ್ಷ್ಮೀಪತಿತ್ವವೂ ಇಲ್ಲವೆಂದು ಅರ್ಥಾತ್‌ಸಿದ್ಧವಾಗುವುದು. ಈ ವಿಷಯವು ಸಂಪ್ರದಾಯದಿಂದ ಮಾತ್ರ ತಿಳಿಯು ವುದು ಎಂಬುದು ಗಮನಾರ್ಹ.

   ಈಶಾ ಎಂಬ ಶಬ್ದದಲ್ಲಿ 'ಈ' ಎಂದರೆ ಮಹಾಲಕ್ಷ್ಮಿ. ಈಶನೆಂದರೆ ಒಡೆಯ. ಈ+ಈಶ= ಈಶನೆಂದರೆ ಲಕ್ಷ್ಮೀಪತಿಯಾದ ನಾರಾಯಣ ಎಂಬ ಸೂಕ್ಷ್ಮಾರ್ಥವೂ ಅಡಗಿದೆ ಎಂಬುದನ್ನು ಆಗಮಗ್ರಂಥಗಳಲ್ಲಿ ತಿಳಿಸಲಾಗಿರುವ 'ಸ್ಥೂಲ, ಸೂಕ್ಷ್ಮ, ಪರ' ಎಂಬ ಸಕಲಾಕ್ಷರಾರ್ಥಗಳ ಮಾರ್ಗದಿಂದ ಅರಿಯಬಹುದು.

2. ಈಶಾ. ೧೮ನೆಯ ಮಂತ್ರವು ಈಶಾವಾಸ್ಯದ ಸಾರವಾಗಿರುವಂತೆಯೇ ಎಲ್ಲ ಉಪನಿಷತ್, ಬ್ರಹ್ಮಸೂತ್ರ, ಗೀತೆಗಳ ಸಾರಾರ್ಥವೂ ಈ ಮಾತಿನಲ್ಲಿರುವುದನ್ನು ಗಮನಿಸಿ.

3. 4. 'ಈಶಾವಾಸ್ಯಮಿದಂ ಸರ್ವಂ' ಎಂಬುದರಲ್ಲಿ ಈ ಎಲ್ಲ ಅರ್ಥವೂ ಅಡಗಿದೆ.

ಪರಮಾತ್ಮನನ್ನು ಉಪಾಸನೆಮಾಡುವ ರೀತಿ, ಮತ್ತು ಉಪಾಸನೆಯ ಫಲವಾಗಿ ಪರಮಾತ್ಮನನ್ನು ಅನುಭವಿಸುವ ರೀತಿ, ಹೇಗೆಂಬುದನ್ನು ಮೂರು ನಾಲ್ಕನೆಯ ಅಧ್ಯಾಯಗಳಲ್ಲಿ ವಿವರಿಸಲಾಗಿದೆ.[1] ಮೂರನೆಯ ಅಧ್ಯಾಯದ ಮೂರನೆಯ ಪಾದದಲ್ಲಿ[2] ಪರಮಾತ್ಮನ ಯಾವ ಯಾವ ಉಪಾಸನೆಗಳಲ್ಲಿ ಯಾವಯಾವ ಗುಣಗಳನ್ನು ಇಟ್ಟುಕೊಳ್ಳಬೇಕು, ಹಾಗೂ ಬಿಡಬೇಕು ಎಂಬುದನ್ನು ನಿರ್ಣಯಿಸಲಾಗಿದೆ.[3] ನಾಲ್ಕನೆಯ ಪಾದದಲ್ಲಿ ವರ್ಣಾಶ್ರಮಧರ್ಮಗಳು ಉಪಾಸನೆಗೆ ಅಂಗ ಎಂದು ನಿರ್ಣಯಿಸಲಾಗಿದೆ.[4] ನಾಲ್ಕನೆಯ ಅಧ್ಯಾಯದ ಒಂದನೇ ಪಾದದಲ್ಲಿ ಉಪಾಸನೆಯ ಆಚರಣೆಯ ವಿವರಗಳಿವೆ.[5] ಈ ಮುಂದೆ ಪರಮಾತ್ಮಲೋಕದ ಮಾರ್ಗ ಮತ್ತು ಪರಮಾತ್ಮಾನುಭವಗಳನ್ನು ವಿವರಿಸಲಾಗಿದೆ.[6]

ಪರಮಾತ್ಮನನ್ನು ಶಾಸ್ತ್ರೋಕ್ತವಾದ ಯಾವುದಾದರೊಂದು ರೀತಿಯಿಂದ ಪ್ರತಿದಿನ ಉಪಾಸನೆ ಮಾಡಬೇಕು. ಅತ್ಯಂತಪ್ರೀತಿರೂಪವಾದ ಭಕ್ತಿಯಿಂದ ಧ್ಯಾನಿಸುವುದೇ ಉಪಾಸನೆ. ಇದರಲ್ಲಿ ಪರಮಾತ್ಮದರ್ಶನವಿರುತ್ತದೆ. ಜೀವಾತ್ಮನು ಪರಮಾತ್ಮಲೋಕದಲ್ಲಿ ತನ್ನಲ್ಲಡಗಿದ್ದ ಎಂಟು ಆತ್ಮಗುಣಗಳ ಆವಿಷ್ಕಾರದಮೇಲೆ ಜಗದ್ವ್ಯಾಪಾರಹೊರತು ಉಳಿದೆಲ್ಲ ವಿಷಯದಲ್ಲೂ ಪರಮಾತ್ಮನಿಗೆ ಸಮನಾಗಿ ಶಾಶ್ವತವಾಗಿ ಆನಂದಿಸುತ್ತಿರುವುದೇ ಮುಕ್ತಿ. ಇದು ಎಲ್ಲ ಉಪನಿಷತ್ತುಗಳ ನಿರ್ಣಯರೂಪವಾದ ಶಾರೀರಕಶಾಸ್ತ್ರವೆಂಬ ಬ್ರಹ್ಮಸೂತ್ರಗಳ ಸಿದ್ಧಾಂತ[7].

ಉಪೋದ್ಘಾತ.

೩

ಸೂರ್ಯನೊಳಗಿರುವ ದಿವ್ಯಪುರುಷನು ಪರಮಾತ್ಮ. ಪರಮಾತ್ಮನು ಮಾತ್ರ ನಿರ್ದೋಷನೂ ಕಲ್ಯಾಣಗುಣಪೂರ್ಣನೂ ಆದ ದಿವ್ಯಪುರುಷನಾಗಿರಲು ಸಾಧ್ಯ. ಸೂ. ೨೦.

ಸೂರ್ಯನೊಳಗಿರುವವನೇ ಜೀವಾತ್ಮಗಳೊಳಗೂ ಇರುವವನು. ಆದುದರಿಂದ ಇಂತಹ ವ್ಯಕ್ತಿ ಪರಮಾತ್ಮನೇ ಎಂದು ನಿರ್ಣಯಿಸಬಹುದು[8]. ಸೂ. ೨೧.

೪

ಸರ್ವರೊಳಗೆ ಪರಮಾತ್ಮ ಇರುವುದರಿಂದ ಅವನ ಅಧೀನರಾದ ನಮ್ಮನ್ನೂ ನಾವು ಪರಮಾತ್ಮ ಎಂದು ವ್ಯವಹರಿಸಬಹುದು. ಇದೇ ಈ 'ಶಾರೀರಕಶಾಸ್ತ್ರ'ದ ದೃಷ್ಟಿ. ಇದರಂತೆ 'ತತ್ತ್ವಮಸಿ' ಮುಂತಾದ ವಾಕ್ಯಗಳ ಅರ್ಥ

---

1. ಈಶಾವಾಸ್ಯದಲ್ಲಿ ತಿಳಿಸಲಾಗಿರುವುದು ಇಂತಹ ಉಪಾಸನೆಯ ಒಂದು ರೀತಿ ಮಾತ್ರ. ಇದರ ಫಲವನ್ನು ಅಲ್ಲಲ್ಲೇ ಸೂಚಿಸಲಾಗಿದೆಯಷ್ಟೆ. ಅತಿಸಂಗ್ರಹವಾದ ಈಶಾವಾಸ್ಯವನ್ನು ವಿವರವಾಗಿ ತಿಳಿಯಲು ಬ್ರಹ್ಮಸೂತ್ರದ ಈ ೩, ೪, ಅಧ್ಯಾಯಗಳ ಅಧ್ಯಯನ ಬಹಳ ಮುಖ್ಯ.
2. ೪ ನೆಯ ಒಂದು ಭಾಗವೇ ಪಾದ. ಇದು ಗ್ರಂಥದ ಒಳ ವಿಭಾಗಗಳ ಹೆಸರು.
3. ಈಶಾವಾಸ್ಯದಲ್ಲಿ ಈ ವಿಚಾರವನ್ನೆಲ್ಲಾ ಅಳವಡಿಸಿಕೊಳ್ಳಬೇಕು.
4. ಈಶಾ. ೨, ೧೧ ನೇ ಮಂತ್ರಗಳಿಗೆ ಉಪಯುಕ್ತ.
5. ಈಶಾವಾಸ್ಯದಲ್ಲಿ ಇದೆಲ್ಲವನ್ನೂ ಅಳವಡಿಸಿಕೊಳ್ಳಬೇಕು.
6. ಈಶಾವಾಸ್ಯದ ಕೊನೆಯ ಮಂತ್ರಗಳಲ್ಲಿ ಈ ವಿಚಾರ ಸಂಕ್ಷಿಪ್ತವಾಗಿದೆ.
7. ಈಶಾವಾಸ್ಯದ ಅರ್ಥನಿರ್ಣಯಕ್ಕೆ ಬ್ರಹ್ಮಸೂತ್ರಗಳು ಪ್ರಬಲ ಆಧಾರಗಳು.
8. ಈಶಾ. ೧೬ ರಲ್ಲಿ 'ಕಲ್ಯಾಣತಮರೂಪ' ವಿರುವ ಪುರುಷ ಪರಮಾತ್ಮನೇ ಹೊರತು ಸೂರ್ಯನಲ್ಲ ಎಂದು ನಿರ್ಣಯಿಸಲು ಇದು ಅತ್ಯವಶ್ಯಕ.

ನಿರ್ಣಯಿಸಬೇಕು. ವಾಮದೇವಋಷಿ ಇದೇ ದೃಷ್ಟಿಯಿಂದ 'ನಾನೇ ಮನು, ಸೂರ್ಯ ಮತ್ತು ಕಕ್ಷೀವಾನ್ಋಷಿ ಎಂದಿರುವನು. ಇಲ್ಲಿ ನಾನೇ ಎಂದರೆ ಪರಮಾತ್ಮನೇ ಎಂದರ್ಥ. ಮನು, ಸೂರ್ಯಾದಿಗಳನ್ನು ಶರೀರವಾಗಿಸಿ ಕೊಂಡಿರುವವನು ಪರಮಾತ್ಮನೇ ಹೊರತು ವಾಮದೇವಋಷಿಯಲ್ಲ.[1] ಸೂ. ೩೧.

೫

ಕಾಣ್ವಶಾಖೆಯವರೂ ಮಾಧ್ಯಂದಿನಶಾಖೆಯವರೂ ಜೀವಾತ್ಮಗಳಿಗಿಂತ ಅವುಗಳೊಳಗಿರುವ ಪರಮಾತ್ಮ ವಿಭಿನ್ನವಸ್ತು ಎಂದು ನಿರ್ಣಯಿಸಿರುವರು. ಈ ವಿಚಾರ ಎಲ್ಲ ಉಪನಿಷತ್ತುಗಳ ನಿರ್ಣಯಗಳಲ್ಲೂ ಅತ್ಯವಶ್ಯಕ.[2]
ಸೂ. ೫೩.

೬

'ಅಗ್ನಿ' ಎಂದರೆ ಮುನ್ನಡೆಸುವವನು ಎಂಬ ವಿವರಣೆಯಂತೆ ವಿಶ್ವವನ್ನು ಮುನ್ನಡೆಸುವ ಪರಮಾತ್ಮ ಎಂದೇ ಅರ್ಥಹೇಳಬೇಕೆನ್ನುವುದು ಜೈಮಿನಿಮಹರ್ಷಿಗಳ ಅಭಿಪ್ರಾಯ.[3] ಸೂ. ೬೧.

೭

ಪರಮಾತ್ಮನು ಗಾಳಿಯಿರುವ ಈ ಆಕಾಶಮಂಡಲವನ್ನು ಧರಿಸಿರುವನೆಂದು ಉಪನಿಷತ್ತುಗಳು ತಿಳಿಸುತ್ತವೆ. ಆಕಾಶವನ್ನು ಧರಿಸುವುದೆಂದರೆ ಹೊರುವುದಲ್ಲ. ಎಂದೂ ಯಾವುದೇ ಅಡ್ಡಿಆತಂಕವಿಲ್ಲದ ತನ್ನ ಆಜ್ಞಾಮಾತ್ರ ದಿಂದ ತನ್ನ ಅಧೀನದಲ್ಲಿರಿಸಿಕೊಳ್ಳುವುದು ಎಂದರ್ಥ.[4] ಸೂ. ೭೪.

---

1. 'ನಾನೇ ದೇವರು' ಎಂದರೆ ಲೋಕದ ದೃಷ್ಟಿಯಲ್ಲಿ ನನಗಿಂತ ಬೇರೆ ದೇವರಿಲ್ಲ ಎಂಬ ನಾಸ್ತಿಕತೆ ಕಾಣುವುದು. ಶಾಸ್ತ್ರದೃಷ್ಟಿ ಯಲ್ಲಿ ನಮ್ಮೊಳಗಿರುವ ದೇವರಿಗೆ ನಾನು ಅಧೀನ ಎಂಬ ಆತ್ಮ, ಪರಮಾತ್ಮಗಳ ತಾತ್ತ್ವಿಕ ಅಸ್ತಿತ್ವದ ನಿರ್ಣಯದಿಂದಾದ ಆಸ್ತಿ ಕತೆ ಕಾಣುವುದು. ಶಾಸ್ತ್ರದೃಷ್ಟಿಯಲ್ಲಿ ಯಾವುದೊಂದು ವಸ್ತುವಿನ ಅಸ್ತಿತ್ವವನ್ನೂ ತಳ್ಳಿ ಹಾಕುವುದಿಲ್ಲ. ಇದೇ ಪರಮವೈದಿಕ ಸಿದ್ಧಾಂತದ ದೃಷ್ಟಿ. ಈ ದೃಷ್ಟಿಯನ್ನೇ ಈಶಾ. ೧೬ ರಲ್ಲಿ ತಿಳಿಸಲಾಗಿದೆ. ಈ ತತ್ತ್ವದೃಷ್ಟಿಯಿಟ್ಟುಕೊಂಡೇ ಉಪಾಸಿಸಬೇಕೆಂಬ ಭಾಷ್ಯ ವ್ಯಾಖ್ಯಾನ ಗಮನಿಸಿ. ಈಶಾ. ಪುಟ. ೧೭, ೧೯.
2. ಈಶಾವಾಸ್ಯವು ಈ ಶಾಖೆಗಳ ಸಂಹಿತಾಭಾಗದಲ್ಲಿರುವ ಉಪನಿಷತ್ತು. ಇದೇ ಶಾಖೆಗಳ 'ಬ್ರಾಹ್ಮಣ' ಭಾಗಗಳಲ್ಲಿರುವ ಬೃಹ ದಾರಣ್ಯಕೋಪನಿಷತ್ತಿನ ಜೀವಾತ್ಮ, ಪರಮಾತ್ಮ, ವಿಚಾರಗಳು ಈಶಾವಾಸ್ಯದ ವಿವರಣೆಗಾಗಿಯೇ ಇವೆ. ವೇದಗಳಲ್ಲಿ ಸಂಹಿತಾ ಭಾಗದ ಪ್ರಾಯೋಗಿಕ ವಿವರಣೆಯೇ ಬ್ರಾಹ್ಮಣಭಾಗ ಎಂಬುದನ್ನು ಗಮನಿಸಿರಿ.
3. ವೈದಿಕ ಸಾಹಿತ್ಯವನ್ನು ಕರ್ಮಕಾಂಡ ಬ್ರಹ್ಮಕಾಂಡ ಎಂದು ಎರಡಾಗಿ ವಿಂಗಡಿಸಿ, ಕರ್ಮಕಾಂಡದ ಬಗ್ಗೆ ನ್ಯಾಯವಿಚಾರಶಾಸ್ತ್ರ ವನ್ನು ಜೈಮಿನಿಯೂ, ಬ್ರಹ್ಮಕಾಂಡದ ಬಗ್ಗೆ ವ್ಯಾಸರೂ ಬರೆದಿರುವರು. ಈಶಾವಾಸ್ಯವು ಕರ್ಮಕಾಂಡದ ಸಂಹಿತೆಯಲ್ಲಿ ಸೇರಿರುವುದು. ಇದರ ೧೮ ನೆಯ ಮಂತ್ರದಲ್ಲಿ 'ಅಗ್ನಿ' ಶಬ್ದವಿದೆ. ಈ ಮಂತ್ರ ಈಶಾವಾಸ್ಯದ ಹಿಂದಿರುವ ಅನೇಕ ಕರ್ಮ ವಿಚಾರ ಭಾಗಗಳಲ್ಲೂ ಅನೇಕಸಲ ಬಂದಿದೆ. ಈ ಕಾಂಡದ ಅರ್ಥನಿರ್ಣಯಿಸಿದ ಜೈಮಿನಿಗಳ ಅಭಿಪ್ರಾಯದಂತೆ ಈ ಮಂತ್ರದ ಅಗ್ನಿಶಬ್ದಕ್ಕೆ ಪರಮಾತ್ಮನೇ ಅರ್ಥ ಎನ್ನಬೇಕು. ವ್ಯಾಸರ ಅಭಿಪ್ರಾಯದ ಪ್ರಕಾರ ಅಗ್ನಿ ಎಂದರೆ ಬೆಂಕಿ ಮತ್ತು ಅದರ ಅಧಿ ದೇವತೆಯಾದ 'ಅಗ್ನಿದೇವ' ಮಾತ್ರವಲ್ಲ, ಅವುಗಳೊಳಗೆ ಅಂತರ್ಯಾಮಿಯಾಗಿರುವ ಪರಮಾತ್ಮ ಎಂದರ್ಥ.
4. ಈಶಾ ೧ 'ವಾಸ್ಯಂ' ಎಂಬುದಕ್ಕೆ 'ಧಾರ್ಯಂ' ಎಂಬ ಅರ್ಥವನ್ನೂ 'ಪರತಂತ್ರ ಎಂಬ ಅರ್ಥವನ್ನೂ ಈ ಆಧಾರದಿಂದಲೇ ಮಾಡಲಾಗಿದೆ.

## ೮

'ಓಂ'ಕಾರವನ್ನು ಮೂರು ಮಾತ್ರಾಕಾಲದಷ್ಟು ಹೊತ್ತು ಹೇಳಿಯೇ ಪರಮಾತ್ಮನನ್ನು ಧ್ಯಾನಿಸಬೇಕು. ಒಂದು ಮಾತ್ರಾಕಾಲ ಹೇಳಿದರೆ ಇಹಲೋಕವು ಸಿಗುವುದು. ಎರಡು ಮಾತ್ರಾಕಾಲ ಹೇಳಿದರೆ ಅಂತರಿಕ್ಷಲೋಕ ಸಿಗುವುದು. ಮೂರು ಮಾತ್ರಾಕಾಲ ಹೇಳಿದರೆ ಪರಮಾತ್ಮಲೋಕ ಸಿಗುವುದು. ಇಲ್ಲಿ ಪರಮಾತ್ಮ ಯಾರು? ಎಂಬ ಸಂಶಯ ಉಳಿಯದಂತೆ, "ಅದೇ ವಿಷ್ಣುವಿನ ಲೋಕ" ಎಂದೂ 'ದಿವ್ಯಸೂರಿಗಳು ಅವನನ್ನು ಯಾವಾಗಲೂ ಸೇವಿಸುತ್ತಿರುವರು' ಎಂದೂ ಉಪನಿಷತ್ತಿನ ವಚನಗಳೇ ಇವೆ. ಈ ಪ್ರಮಾಣಾಧಾರಗಳಿಂದ ಓಂಕಾರದ ವಾಚ್ಯಾರ್ಥ ವಿಷ್ಣುವೆಂದು ಪ್ರಸಿದ್ಧನಾದ ಪರಮಾತ್ಮನೇ ಹೊರತು ಜೀವಾತ್ಮಗಳಾದ ಚತುರ್ಮುಖಬ್ರಹ್ಮ ಮುಂತಾದವರಲ್ಲ ಎಂದು ನಿರ್ಣಯಿಸಲಾಗಿದೆ.[1] ಸೂ. ೭೭.

## ೯

ಚಿನ್ನದಬಣ್ಣದ ದಿವ್ಯರೂಪವಿರುವ ಜಗತ್ಕಾರಣನಾದ ಈಶನೆನಿಸಿದ ಪರಮಾತ್ಮನ ದರ್ಶನ ಮಾಡಿದಾಗ[2] (ಉಪಾಸನ) ವಿದ್ಯಾನಿಷ್ಠನಾಗಿದ್ದು ಮುಕ್ತನಾದ ಜೀವಾತ್ಮನಿಗೂ ಪರಮಾತ್ಮನ ಎಂಟು ದಿವ್ಯಗುಣಗಳಂತಹ ಗುಣಗಳು ಆವಿರ್ಭವಿಸಿ[3] ಅವನು ಪರಮಾತ್ಮನನ್ನು ಅನುಕರಿಸುವನು.[4] ಸೂ. ೮೬.

## ೧೦

'ಎಲ್ಲದರ ಒಡೆಯ' ಎಂಬ ಅರ್ಥದ ಶಬ್ದವು ಪರಮಾತ್ಮನನ್ನೇ ಕುರಿತಾಗಿರುವುದು. ಇದರ ಜೊತೆಗಿರುವ 'ಪುರುಷ' ಶಬ್ದಕ್ಕೂ ಪರಮಾತ್ಮನೇ ಅರ್ಥ.[5]

---

1. 'ತ್ರಿಮಾತ್ರೇಣೋಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ.' ಪ್ರ. ಉ. ೫, ೫.
'ತಮೋಂಕಾರೇಣೈವಾಯತನೇನಾನ್ವೇತಿ ವಿದ್ವಾನ್' ಪ್ರ. ಉ. ೫. ೭.
'ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ.' ಶುಕ್ಲಯಜುಸ್, ಕಾಣ್ವಸಂಹಿತಾ. ಪುರುಷಸೂಕ್ತ.
ಇದೇ ರೀತಿಯ ಓಂಕಾರದ ಅನುಸಂಧಾನ ಈಶಾ. ೧೭.ರಲ್ಲಿ ವಿಹಿತವಾಗಿರುವುದನ್ನು ಗಮನಿಸಿ.

2. ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ
ಕರ್ತಾರಂ ಈಶಂ ಪುರುಷಂ ಬ್ರಹ್ಮಯೋನಿಮ್.
ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ
ನಿರಂಜನಃ ಪರಮಂ ಸಾಮ್ಯಮುಪೈತಿ. ಮುಂ.ಉ. ೩.೧.೩.
ಈಶಾ. ೧೬. 'ಕಲ್ಯಾಣತಮರೂಪ'-ಚಿನ್ನದಂತಹ ದಿವ್ಯವಾದ ಬಣ್ಣವಿರುವ ರೂಪ. ಚಿನ್ನಕ್ಕೆ 'ಕಲ್ಯಾಣ' ಎಂಬ ಹೆಸರಿರುವುದನ್ನೂ ಗಮನಿಸಿ. 'ಕಲ್ಯಾಣಭೂಧರ-ಚಿನ್ನದ ಬೆಟ್ಟ-ಮೇರುಪರ್ವತ.

3. ಈಶಾ. ೧೫. 'ಸತ್ಯಧರ್ಮಾಯ' ಗಮನಿಸಿ.

4. ಈಶಾ. ೧೬. ಪದಾರ್ಥದೀಪಿಕೆ ನೋಡಿ.

5. 'ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ. ಈಶಾನೋ ಭೂತಭವ್ಯಸ್ಯ.' ಕಠ. ೨.೧೨.
ಈಶಾ ೧. ೧೬. 'ಈಶಾ', 'ಪುರುಷ' ಶಬ್ದಗಳನ್ನು ಗಮನಿಸಿ.

೧೧

ವೈದಿಕಸಾಹಿತ್ಯವು ಪರಮಾತ್ಮನ ಅಥವಾ ಮಹರ್ಷಿಗಳ ರಚನೆಯಲ್ಲ. ಪರಮಾತ್ಮನ ಸ್ವರೂಪದಂತೆಯೇ ಅದೊಂದು ಶಾಶ್ವತ ಜ್ಞಾನರಾಶಿ. ಪರಮಾತ್ಮನು ವೈದಿಕಸಾಹಿತ್ಯವನ್ನು ನೆನಪಿಟ್ಟುಕೊಂಡು, ಜಗತ್ತಿನ ಪ್ರತಿಯೊಂದು ಸೃಷ್ಟಿಕಾಲದಲ್ಲೂ ಆವಿಷ್ಕರಿಸಿ, ಚತುರ್ಮುಖ ಬ್ರಹ್ಮನಿಗೆ ಉಪದೇಶಿಸುವನು. ಸ್ಥಿತಿಕಾಲದಲ್ಲಿ ವಿಶ್ವಾಮಿತ್ರ ಮುಂತಾದ ಋಷಿಗಳಿಗೆ ಒಲಿದು ಅವರಿಗೆ ವೇದಮಂತ್ರಗಳು ಸಾಕ್ಷಾತ್ಕಾರವಾಗುವಂತೆ ಮಾಡುವನು.

ಸೂ. ೯೩.

ವೇದದಲ್ಲಿರುವ ವಿಷಯಗಳು, ಪರಮಾತ್ಮತತ್ತ್ವದ ಯಥಾರ್ಥತೆ, ಪರಮಾತ್ಮನ ಆರಾಧನೆಯ ಕ್ರಮ, ಮತ್ತು ಅದರ ಫಲ, ಎಂದು ಮುಖ್ಯವಾಗಿ ಮೂರು. ಹಿಂದಿನ ವೇದಶಾಖೆಗಳ ಸ್ವರೂಪವು ಹೇಗಿತ್ತೋ, ಅದೇ ಅಕ್ಷರ ಕ್ರಮದಲ್ಲಿ ಪ್ರತಿ ಜಗತ್‌ಸೃಷ್ಟಿಯಲ್ಲೂ ಆಯಾ ವೇದಶಾಖೆಗಳ ಆವಿಷ್ಕಾರವಾಗುವುದರಿಂದ, ಇವುಗಳ ಈ 'ಆಕಾರ'ಕ್ಕೆ ವ್ಯತ್ಯಾಸವಿಲ್ಲದುದರಿಂದ, ಇವು ಎಂದಿಗೂ ನಿತ್ಯ ಎಂದು ಹೇಳಲಡ್ಡಿಯಿಲ್ಲ.[1] ಸೂ. ೯೪.

೧೨

ವೈದಿಕವಾದ ಉಪಾಸನೆಯೆಂಬುದು ಮನಸ್ಸಿನ ಒಂದು ವೃತ್ತಿವಿಶೇಷ. (ಪರಿಪಾಕ) ಇದು ವೇದಾಧ್ಯಯನದ ಮೂಲಕವೇ ಕಾಲಾಂತರದಲ್ಲಿ ಉಂಟಾಗುವುದು. 'ವಿದುರ' ಮುಂತಾದವರಿಗೆ ಪೂರ್ವಜನ್ಮದ ಅಧ್ಯಯನಾದಿ ಸಂಸ್ಕಾರದಿಂದ ಉಪಾಸನವು ವೃದ್ಧಿಯಾಗಿ ಸಫಲವಾಯಿತಷ್ಟೆ. ಉಪನಿಷತ್ತುಗಳಲ್ಲೆಲ್ಲೂ ವೇದಾಧ್ಯಯನಸಂಸ್ಕಾರವಿಲ್ಲದವರಿಗೆ ಬ್ರಹ್ಮವಿದ್ಯೋಪದೇಶ ಮಾಡಿಲ್ಲ. ಆದುದರಿಂದ ಇಹ ಜನ್ಮದಲ್ಲಿ ಉಪಾಸನೆ ಮಾಡಲು ವೇದಾಧ್ಯಯನ ಸಂಸ್ಕಾರವೂ ವೇದಾರ್ಥಜ್ಞಾನವೂ ಅತ್ಯವಶ್ಯಕ.[2] ಸೂ. ೯೮.

೧೩

ಪರಮಾತ್ಮನು ಎಲ್ಲದರ ಒಡೆಯ. ಜೀವಾತ್ಮಗಳಿಗೆಲ್ಲ ಅವನೇ ಪತಿ. ಉಪಾಸಕನಾದ ಜೀವಾತ್ಮನು ಪರಮಾತ್ಮನನ್ನು ತನ್ನ ಪತಿ ಎಂದೂ ತನಗಿಂತ ಬೇರೆಯೆಂದೂ ತಿಳಿದಿರಬೇಕು. ಜೀವಾತ್ಮವೂ ಪರಮಾತ್ಮವೂ ಒಂದಾಗುವುದು ಎಂಬ ಮಾತುಗಳಿಗೆ ಪರಮಾತ್ಮನು ಎಲ್ಲ ಜೀವಾತ್ಮಗಳಿಗೂ ಆತ್ಮನಾಗಿರುವನೆಂದೇ ಅರ್ಥ.[3]

ಸೂ. ೧೧೯.

---

1. ಒಂದೇ ಶುಕ್ಲಯಜುರ್ವೇದವೂ ಅದರಲ್ಲಿರುವ ಈಶೋಪನಿಷತ್ತೂ, ಬೇರೆಬೇರೆ ಕಾಲಗಳಲ್ಲಿ ಬೇರೆಬೇರೆ ಋಷಿಪರಂಪರೆಯಲ್ಲಿ ಬಂದಿರುವುದೆಂಬುದಕ್ಕೂ, ಹೀಗೆ ಕಾಲಭೇದವಿದ್ದರೂ ಮೂಲತಃ ಈಶಾವಾಸ್ಯವಾಙ್ಮಯ "ನಿತ್ಯನೂತನ" ಎಂಬುದಕ್ಕೂ, ಈ ವೇದನಿತ್ಯತ್ವವಿಚಾರವು ಪೋಷಕವಾಗಿದೆ.

2. ಉಪಾಸನೆಯು ಜ್ಞಾನವಿಶೇಷವಾದ 'ವಿದ್ಯೆ' ಎಂಬುದನ್ನು ಸಾಧಿಸಲು ವೇದಾಂತಜ್ಞಾನ ಮಾತ್ರ ಸಾಲದು, ವೇದಜ್ಞಾನವೂ ಸಾಂಪ್ರದಾಯಿಕ ಅಧ್ಯಯನ ಸಂಸ್ಕಾರಾದಿಗಳೂ ಅತ್ಯವಶ್ಯಕ. ಆದುದರಿಂದ ವೇದಭಾಗವಾದ ಸಂಹಿತೆಯಲ್ಲೇ ಈಶಾವಾಸ್ಯವನ್ನು ಸೇರಿಸಲಾಗಿದೆಯೆಂಬುದನ್ನೂ ಇಲ್ಲಿ ಗಮನಿಸಿ.

3. "ಉಪನಿಷತ್ತುಗಳಲ್ಲಿ 'ಅಧಿಪತಿ', 'ವಶೀ,' 'ಈಶಾನ', 'ಪಾಲ,' 'ಸೇತು', 'ವಿಧರಣ,' ಮುಂತಾದ ವೈದಿಕಶಬ್ದಗಳಿಂದ ಪರಮಾತ್ಮನನ್ನು ನಿರ್ದೇಶಿಸಿರುವುದರಿಂದ, ಜೀವಾತ್ಮಗಳು ಪರಮಾತ್ಮನ ಆಳ್ವಿಕೆಗೆ ಒಳಪಡುವುವೆಂದೂ, ಅವನ ಆಸರೆಯಲ್ಲಿರುವುವೆಂದೂ, ಅವನ ವ್ಯಾಪ್ತಿಗೆ ಒಳಪಟ್ಟವೆಂದೂ, ಅವನಿಗಿಂತ ಬೇರೆಯೆಂದೂ, ತಿಳಿಯುವುದು" ಎಂಬುದು ಈ ಸೂತ್ರದ ಅಭಿಪ್ರಾಯ. ಇದರಂತೆ 'ಈಶಾ ವಾಸ್ಯಂ ಇದಂ ಸರ್ವಂ' ಎಂಬುವಾಗಲೂ ಈಶನಿಗಿಂತ ಈ ಎಲ್ಲವೂ ಭಿನ್ನವಸ್ತುಗಳೆಂಬ ತಾತ್ತ್ವಿಕ ಅರಿವು ಮೂಡಬೇಕು.

### ೧೪

ವ್ಯಾಕರಣಾನುಸಾರ ಪದಗಳ ಅಂತರ್ವಿಭಾಗ ಮಾಡಿ ಅರ್ಥೈಸಿದರೂ, ಆ ಪದಗಳ ಒಟ್ಟರ್ಥವನ್ನೂ, ರೂಢಿಯ ಅರ್ಥವನ್ನೂ, ವಿಶೇಷವಾದ ಅರ್ಥಗಳನ್ನೂ, ಮಾಡುವಾಗ; ಸಂದರ್ಭವೇ ಮುಂತಾದ ವಿಶೇಷ ಕಾರಣಗಳನ್ನು ಅತ್ಯಾವಶ್ಯಕ ಗಮನಿಸಬೇಕು.[1] ಸೂ. ೧೧೭.

### ೧೫

'ಪಂಚಜನ' ಶಬ್ದಕ್ಕೆ ಕಾಣ್ವಶಾಖೆಯ ಪಾಠದಲ್ಲಿ ಇಂದ್ರಿಯಗಳೆಂಬ ಅರ್ಥ ಸ್ಪಷ್ಟವಾಗಿದ್ದು, ಅವೆಲ್ಲವೂ ಪರಮಾತ್ಮನ ಅಧೀನದಲ್ಲಿರುವುವೆಂದು ಸಿದ್ಧವಾಗುವುದು.[2] ಸೂ. ೧೨೨.

### ೧೬

ಜಗತ್ಕಾರಣವಸ್ತು ಪರಿಶುದ್ಧನಾದ ಪರಮಾತ್ಮನೇ ಹೊರತು, ಜೀವಾತ್ಮಗಳಲ್ಲ ಎಂಬ ನಿರ್ಣಯ 'ಕೌಷೀತಕೀ ಬ್ರಾಹ್ಮಣ' ಗ್ರಂಥದಿಂದ ಸಿದ್ಧವಾಗುವುದು.[3] ಸೂ. ೧೨೫.

### ೧೭

ಉಪಾಸನೆಯಲ್ಲಿ ಪರಮಾತ್ಮನ ದರ್ಶನವೇ ಮುಖ್ಯ, ಅವನ ಧ್ಯಾನವನ್ನೇ ಮಾಡಬೇಕು. ಸಾಂಖ್ಯದರ್ಶನದವರು ಹೇಳುವ ಜೀವಾತ್ಮನನ್ನು ಧ್ಯಾನಿಸಬಾರದು.[4] ಸೂ. ೧೨೮.

### ೧೮

ವೇದಾನ್ತಾರ್ಥಗಳನ್ನು ನಿರ್ಣಯಿಸಿರುವ ಮಹರ್ಷಿಗಳಲ್ಲಿ 'ಕಾಶಕೃತ್ಸ್ನ'ರೆಂಬ ಆಚಾರ್ಯರು ಪ್ರಮುಖರು. ಅವರು ಮಾಧ್ಯಂದಿನ ಶಾಖೆಯ ಅಂತರ್ಯಾಮಿಬ್ರಾಹ್ಮಣದಲ್ಲಿರುವ 'ಯ ಆತ್ಮನಿ ತಿಷ್ಠನ್' ಎಂಬ ನಿಸ್ಸಂದಿಗ್ಧವಾದ ವಿಚಾರವನ್ನು ಗಮನಿಸಿ, ಆತ್ಮಗಳೊಳಗಿರುವ ಆತ್ಮ – ಪರಮಾತ್ಮ ಎಂಬ ನಿರ್ಣಯವನ್ನು ಕೈಗೊಂಡಿರುವರು. ಈ ನಿರ್ಣಯವನ್ನೇ ವ್ಯಾಸರೂ ಅನುಸರಿಸಿರುವರು.[5] ಸೂ. ೧೩೧.

---

1. 'ಈಶಾ' ಎಂಬುದಕ್ಕೆ ವೇದಾಂತಾಚಾರ್ಯರ ಭಾಷ್ಯ ಗಮನಿಸಿ.
2. ವೇದವ್ಯಾಸರು ಅನೇಕಸಲ ಉಪನಿಷತ್ತುಗಳ ಸೂಕ್ಷ್ಮವಾದ ಅರ್ಥನಿರ್ಣಯಕ್ಕೆ 'ಕಾಣ್ವಪಾಠ'ವನ್ನೇ ಮುಖ್ಯವಾಗಿ ಇಟ್ಟುಕೊಂಡಿರುವುದೂ, ಶಂಕರ, ರಾಮಾನುಜ, ಮಧ್ವಾದಿಗಳೂ ಸಹ ಈಶಾವಾಸ್ಯದ ಕಾಣ್ವಪಾಠವನ್ನೇ ಅನುಸರಿಸಿರುವುದೂ, ಇಲ್ಲಿ ಗಮನಾರ್ಹ.
3. ಈಶಾ. ೧೬. 'ಪುರುಷ' ಶಬ್ದಕ್ಕೆ ಪರಮಾತ್ಮನೇ ಅರ್ಥ. 'ಈಶಾ ವಾಸ್ಯಮಿದಂ ಸರ್ವಂ' ಎಂಬುದಕ್ಕೆ ಪರಮಾತ್ಮನೇ ಈ ಜಗತ್ತೆಲ್ಲಕ್ಕೂ ಕಾರಣ ಎಂದರ್ಥ, ಎಂಬ ನಿರ್ಣಯಕ್ಕೆ ಇದು ಸಹಾಯಕ. ಮತ್ತು ಯಾಜ್ಞವಲ್ಕ್ಯರು ಸೂರ್ಯನಿಂದ ಪಡೆದ ಶುಕ್ಲ ಋಗ್ವೇದದ ಶಾಖೆ 'ಕೌಷೀತಕಿ' ಎಂಬುದೂ ಇಲ್ಲಿ ಗಮನಾರ್ಹ. ಇದರಿಂದ ವಿವಿಧ ಶಾಖೆಗಳ ವಚನಗಳಿಗೆ ಐಕಮತ್ಯ ಇದೆ ಎಂಬ ಅಂಶ ತಿಳಿಯುವುದು.
4. ಈಶಾವಾಸ್ಯದ ಧ್ಯೇಯವಸ್ತು ಪರಮಾತ್ಮ ಎಂಬ ಸಾಮಾನ್ಯನಿರ್ಣಯಕ್ಕೆ ಇದು ಸಹಾಯಕ. ಈಗಿನ ಕಾಲದಲ್ಲಿ ಈ ಬಗ್ಗೆ ಸಂದೇಹವಿರದಿದ್ದರೂ ಹಿಂದೆ ಉಪನಿಷತ್ತಿನ ಧ್ಯೇಯವಸ್ತು ಜೀವಾತ್ಮವೇ ಎಂಬಂತಹ ವಾದಗಳೂ ಇದ್ದಿರಬೇಕೆಂದು ತೋರುವುದು.
5. ಈಶಾ. ೪, ೫. 'ಈಶಾವಾಸ್ಯಂ' ಮುಂತಾದ ಅರ್ಥನಿರ್ಣಯಕ್ಕೆ ಇದು ಬಹಳ ಮುಖ್ಯ ಸಹಾಯಕ, ಮತ್ತು ಕೆಲವೆಡೆ ಮಾಧ್ಯಂದಿನಪಾಠವನ್ನು ಗಮನಿಸಬಹುದೆಂದು ಸೂಚಿತವಾಗುತ್ತದೆ.

## ೧೯

ಜಗತ್ತಿಗೆ ಮೂಲಕಾರಣ ಪರಮಾತ್ಮ ಎಂಬ ನಿರ್ಣಯ ಉಪಾಸಕರಿಗೆ ತಿಳಿದಿರಬೇಕು.
ಸೂ. ೧೩೨.

## ೨೦

ಈ ಬ್ರಹ್ಮಸೂತ್ರಗ್ರಂಥದ ಒಂದನೇ ಅಧ್ಯಾಯದಲ್ಲಿ ಈವರೆಗೆ ಹೇಳಿದ ನಿರ್ಣಾಯಕವಾದ ನಿಯಮಗಳನ್ನು ಗಮನಿಸಿದರೆ ಸಾಕು. ಎಲ್ಲ ವೇದಶಾಖೆಗಳೂ ಎಲ್ಲ ಉಪನಿಷತ್ತುಗಳೂ ಪರಮಾತ್ಮನನ್ನೇ ಕುರಿತಾಗಿವೆಯೆಂದು ನಿರ್ಣಯಿಸಬಹುದು.[2]
ಸೂ. ೧೪೮.

## ೨೧

ವೇದಾಂತಸಿದ್ಧಾಂತದವರು ಲೌಕಿಕವಾದ ಕೆಲವು ತರ್ಕಯುಕ್ತಿಗಳನ್ನು ಪರಮಾತ್ಮತತ್ತ್ವನಿರ್ಣಯಕ್ಕೆ ಸ್ವೀಕರಿಸುವುದಿಲ್ಲ. ಅಂತಹ ಇತರ ತರ್ಕಗಳು ನಿರ್ಣಾಯಕ ಪ್ರಮಾಣಾಧಾರಗಳಲ್ಲದುದರಿಂದ ವೈದಿಕರು ಅವುಗಳನ್ನು ಪರಿಗ್ರಹಿಸಬಾರದು.[3]
ಸೂ. ೧೪೧.

## ೨೨

'ನಿರವಯವವಾದ ಪರಮಾತ್ಮವಸ್ತು ಹೇಗೆ ಜಗತ್ತಿಗೆ ಕಾರಣವಾಗಬಲ್ಲದು ?' ಎಂದು ಸಂದೇಹಿಸಬಾರದು ಅದಕ್ಕೆ ಅಂತಹ ವಿಚಿತ್ರಶಕ್ತಿಯಿದೆ. ಭೌತಿಕವಾದ ಬೆಂಕಿ ಮುಂತಾದವುಗಳಲ್ಲೇ ಅನೇಕ ವಿಚಿತ್ರಶಕ್ತಿಗಳಿರುವಾಗ ತರ್ಕಕ್ಕೆ ಸಿಲುಕದ ವಿಚಿತ್ರಶಕ್ತಿಗಳು ಅಲೌಕಿಕವಸ್ತುವಾದ ಪರಮಾತ್ಮನಿಗೆ ಇರುವುದರಲ್ಲಿ ಏನೂ ಆಶ್ಚರ್ಯವಿಲ್ಲ. ಶಾಸ್ತ್ರಪ್ರಮಾಣಾಧಾರವೊಂದರಿಂದಲೇ ನಿರ್ಣಯವಾಗುವ ಪರಮಾತ್ಮವಿಚಾರಗಳಿಗೆ ಪ್ರತ್ಯಕ್ಷ, ಅನುಮಾನ ಮುಂತಾದ ಪ್ರಮಾಣಾಧಾರಗಳೊಡನೆ ಬೆರೆತಿರುವ ಇತರ ತರ್ಕವಿಚಾರಗಳು ಸಮವಲ್ಲ, ಸಾಧಕವೂ ಅಲ್ಲ, ಬಾಧಕವೂ ಅಲ್ಲ.[4]
ಸೂ.೧೬೪, ೧೬೫, ೧೬೬.

---

1. 'ಈಶಾ ವಾಸ್ಯಂ' ಎಂಬ ಪದಕ್ಕೆ, ಈಶನು ಜಗತ್ತಿನ ಕರ್ತನು ಮಾತ್ರವಲ್ಲ, ಸರ್ವವಿಧಕಾರಣವೂ ಅವನೇ, ಎಂಬ ಅರ್ಥವಿಟ್ಟುಕೊಳ್ಳಬೇಕೆಂಬುದೂ ನಿರ್ಣಯವಾಗುವುದು.

2. ಈಶಾವಾಸ್ಯದ ತತ್ತ್ವನಿರ್ಣಯಕ್ಕೆ ಬ್ರಹ್ಮಸೂತ್ರಗಳು ಮಾತ್ರವಲ್ಲ, ವಿವಿಧ ಉಪನಿಷತ್ತುಗಳೂ ಸಹಾಯಕಗಳೆಂಬುದನ್ನೂ, ಎಲ್ಲ ಉಪನಿಷತ್ತುಗಳಲ್ಲೂ ಪರಮಾತ್ಮನೆಂಬ ಮುಖ್ಯಗುರಿಯ ವಿಚಾರದಲ್ಲಿ ಐಕಮತ್ಯವಿದೆ ಎಂಬುದನ್ನೂ, ಗಮನಿಸಬಹುದು.

3. ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ ದರ್ಶನಗಳಲ್ಲಿರುವ ತರ್ಕ ಮತ್ತು ಊಹೆಗಳೆಲ್ಲವನ್ನೂ ವೈದಿಕರು ಉಪನಿಷದರ್ಥ ನಿರ್ಣಯಕ್ಕೆ ಬಳಸಬಾರದೆಂಬ ಎಚ್ಚರಿಕೆ ಕೊಡುವುದು ಇದು. ಇದು ಈಶಾವಾಸ್ಯದ ವಿಮರ್ಶಕರೆಲ್ಲರಿಗೂ ಗಮನಾರ್ಹ.

4. ವೇದಾನ್ತವಿಚಾರಗಳಿಗೆ ಇತರ ತರ್ಕಗಳು ವಿರೋಧ ಮಾಡಲು ಸಾಧ್ಯವಿಲ್ಲ ಎಂಬುದನ್ನು ಈಶಾವಾಸ್ಯದ ವಿಮರ್ಶಕರು ಗಮನಿಸಬೇಕು.

೨೩

ಜಗತ್ತಿನ ಮೂಲಕಾರಣವಲ್ಲಿ ಇರಬೇಕಾದ ಎಲ್ಲ ಅಂಶಗಳೂ ಪರಮಾತ್ಮನಲ್ಲಿ ಅವಿರೋಧವಾಗಿ ಒಟ್ಟಿಗೆ ಇರುವುವು.[1] ಸೂ. ೧೭೪.

೨೪

ದೇವಾಲಯ, ಮೂರ್ತಿಪೂಜಾದಿವಿಧಾನಗಳು ವೇದಾನ್ತೋಕ್ತವಾದ ಪರಮಾತ್ಮೋಪಾಸನೆಗೆ ಒಂದಿನಿತೂ ವಿರುದ್ಧವಲ್ಲ. ಆದುದರಿಂದ ಪಾಂಚರಾತ್ರಆಗಮಗಳು ಉಪನಿಷತ್ತುಗಳಿಗೆ ಸಮಾನಾರ್ಥಕಗಳೂ ಪೋಷಕಗಳೂ ಆಗಿವೆ.[2] ಸೂ. ೨೦೩.

೨೫

ಜೀವಾತ್ಮನಿಗೆ ಜ್ಞಾನವು ಶಾಶ್ವತವಾದ ನಿತ್ಯಧರ್ಮ. ಜೀವಾತ್ಮನ ದಿವ್ಯಗುಣಗಳ ಆವಿರ್ಭಾವವು ಮುಕ್ತಿ ಸ್ಥಾನದಲ್ಲಿ ಆಗುವುದಾದರೂ, ಅವು ಮೊದಲಿನಿಂದಲೂ ಜೀವಾತ್ಮನಲ್ಲಿ ಒಳಗಿರುತ್ತಿದ್ದವೇ ಹೊರತು ಹೊಸದಾಗಿ ಹುಟ್ಟುವುವಲ್ಲ. ಪುರುಷನ ಪುರುಷತ್ವವು ಬಾಲ್ಯದಲ್ಲಿ ಕಾಣಿಸದಿದ್ದು ಯೌವನದಲ್ಲಿ ಹೊರಹೊಮ್ಮುವಂತೆ ಇದು ಕಾಲಾನ್ತರದಲ್ಲಿ ವಿಕಾಸವಾಗುವುದು.[3] ಸೂ. ೨೪೭.

೨೬

ನಮ್ಮ ವಾಗಿಂದ್ರಿಯದಲ್ಲಿ ಅಧಿಷ್ಠಿತವಾಗಿರುವ ಅಭಿಮಾನಿದೇವತೆ ಅಗ್ನಿ. ಅಗ್ನಿಗೆ ಅಂತಹ ಅಧಿಷ್ಠಾನ ಕಾರ್ಯವನ್ನು ನಡೆಸಲು ಆಜ್ಞಾಪಿಸಿರುವವನು ಆ ಅಗ್ನಿಯ ಅಂತರ್ಯಾಮಿಯಾದ ಪರಮಾತ್ಮ.[4] ಸೂ. ೨೮೧.

೨೭

ಪಾಪಿಗಳಿಗೆ ಅನುಭವಿಸಲು ಹೋಗಬೇಕಾದ ಏಳು ನರಕಲೋಕಗಳಿವೆಯೆಂಬುದು ಗಮನಾರ್ಹ. ಸ್ಮೃತಿ ಗ್ರಂಥಗಳಲ್ಲಿ ಇವುಗಳ ವಿವರಗಳಿವೆ.[5] ಸೂ. ೩೦೨.

---

1 ಜಗತ್ತಿನ ಮೂಲದ ಬಗ್ಗೆ ಎಲ್ಲ ಜ್ಞಾನಿಗಳೂ ವಿಜ್ಞಾನಿಗಳೂ ವಿಚಾರ ಮಾಡುತ್ತಾರೆ. ಆ ಮೂಲ ಯಾವುದೆಂಬ ನಿರ್ಣಯವನ್ನು ವಿವಿಧ ರೀತಿಯಲ್ಲಿ ಮಾಡುವಾಗ ಅವೆಲ್ಲದರಲ್ಲೂ ಏಕಸೂತ್ರತೆಯನ್ನೂ, ಏಕಲಕ್ಷ್ಯತೆಯನ್ನೂ, ಸಮನ್ವಯವನ್ನೂ ಕಾಣಬೇಕಾದರೆ ಪರಮಾತ್ಮ ಒಂದೇ ಅಂತಹ ವಿಶಿಷ್ಟರೀತಿಯ ಮೂಲವಸ್ತು ಎಂಬ ನಿರ್ಣಯ ಮಾತ್ರ ಅಡಕ್ಕಿರುವ ಆಧಾರ. ಈ ವಸ್ತುವಿನ ದರ್ಶನವೇ ಉಪನಿಷತ್ತುಗಳ ಮೂಲ ಧ್ಯೇಯ. ಹೀಗೆ ವೇದಾಂತವು ವಿಶ್ವಸಮನ್ವಯದ ಮೂಲಕೇಂದ್ರಬಿಂದು ಎಂಬುದನ್ನು ಅರಿತಿರುವುದು ಬಹಳ ಮುಖ್ಯ. 'ಈಶಾ ವಾಸ್ಯಮಿದಂ ಸರ್ವಂ' ಎಂಬ ಮಾತೇ ಇದಕ್ಕೆ ಮೂಲಸೂತ್ರದಂತೆ ಇದೆ ಎಂಬುದನ್ನು ಗಮನಿಸಿ.

2. ಈಶಾವಾಸ್ಯದ ಧ್ಯೇಯವಸ್ತು 'ವಾಸುದೇವ' ಎಂಬ ಅರ್ಥವನ್ನು ಸೂಚಿಸುವ ವೇದಾಂತಾಚಾರ್ಯಭಾಷ್ಯದ ಮಂಗಳಪದ್ಯ ಗಮನಿಸಿ. ಇತಿಹಾಸಪುರಾಣಾಗಮಗಳಲ್ಲಿ ವಾಸುದೇವರೂಪದ ವಿವರಣೆಗಳಿರುವುದನ್ನೂ ಇಲ್ಲಿ ಯೋಜಿಸಿಕೊಳ್ಳಬಹುದು.

3. ಈಶಾ. ೧೫. 'ಸತ್ಯಧರ್ಮಾಯ' ಗಮನಿಸಿ.

4. ಈಶಾ. ೧೮. 'ಅಗ್ನೇ' ಎಂಬ ಪದಪ್ರಯೋಗ ಗಮನಿಸಿ. ಮರಣಕಾಲದಲ್ಲಿ ವಾಗಿಂದ್ರಿಯವು ಮನಸ್ಸಿನೊಡನೆ ಸೇರುವುದು. ಇದು ಪರಲೋಕಕ್ಕೆ ಅಭಿಮುಖವಾಗುವ ಜೀವಾತ್ಮಗಳ ಮೊದಲನೆಯ ಚಿಹ್ನೆ. ಈಶಾ. ೧೮. ಇಂತಹ ಪರಲೋಕ ಗತಿಯ ಪ್ರಾರ್ಥನೆ.

5. ಈಶಾ. ೩, ಉಪಯುಕ್ತ.

## ೨೮

ಪರಮಾತ್ಮನು ಎಂದೆಂದಿಗೂ ಎಲ್ಲಿದ್ದರೂ ಹೇಗಿದ್ದರೂ ಪರಿಶುದ್ಧನಾಗಿಯೇ ಇರುವನು. ಸಮಸ್ತಸದ್ಗುಣ ಪೂರ್ಣನಾಗಿಯೇ ಇರುವನು.[1] ಸೂ. ೩.೨೫.

## ೨೯

ಪರಮಾತ್ಮನು ಎಂದಿಗೂ ಸರೂಪನಾಗಿಯೇ ಇರುವನು. ಈ ಸ್ಥೂಲವಾದ ಜಗತ್ತುಮಾತ್ರವಲ್ಲದೆ ಸೂಕ್ಷ್ಮವಾದ ಜಗತ್ತೆಲ್ಲವೂ ಪರಮಾತ್ಮನಿಗಿರುವ ರೂಪಗಳು. ಇವು ಉಪಾಸನೆಯ ಉನ್ನತ ಸ್ತರದಲ್ಲಿ ಮಾತ್ರ ನಮಗೆ ತಿಳಿಯಲು ಸಾಧ್ಯ. ಬೇರೆ ಯಾವ ರೀತಿಯಿಂದಲೂ ತಿಳಿಯಲು ಸಾಧ್ಯವಿಲ್ಲ. ಈ ಬಗ್ಗೆ 'ಯಮೇವೈಷ ವೃಣುತೇ' 'ಭಕ್ತ್ಯಾ ತ್ವನನ್ಯಯಾ ಶಕ್ಯಃ'–'ಅವನು ನಮಗೆ ಒಲಿದರೆ' 'ಅನನ್ಯಭಕ್ತಿಯಿರುವವರಿಗೆ ಮಾತ್ರ ಅವನು ಒಲಿಯುವನು' ಮುಂತಾದ ಅನೇಕ ಶ್ರುತಿ, ಸ್ಮೃತಿ ವಚನಗಳು ಆಧಾರಗಳಾಗಿವೆ.[2] ಸೂ. ೩.೩೫, ೩.೩೬, ೩.೩೭.

## ೩೦

ಆತ್ಮಗಳಿಗೆಲ್ಲಕ್ಕೂ ಪರಮಾತ್ಮನು ಆತ್ಮನಾಗಿರುವಂತೆಯೇ ಈ ಜಗತ್ತಿನ ಜಡವಸ್ತುವೆಲ್ಲಕ್ಕೂ ಆತ್ಮನಾಗಿರು ವನು.[3] ಸೂ. ೩.೪೨.

## ೩೧

ಅನನ್ಯಭಕ್ತಿಯ ಉಪಾಸಕರ ಗುರಿಸಾಧನೆಗೆ ಪರಮಾತ್ಮನು ಮುಖ್ಯಸಾಧನವಾಗಿರುವಂತೆಯೇ ಮುಖ್ಯ ಗುರಿಯೂ ಆಗಿರುವನು. ಲೋಕದಲ್ಲಿ ಸಾಧನ ಮತ್ತು ಗುರಿಗಳು ಬೇರೆಯಾಗಿವೆಯಾದರೂ ಅನನ್ಯಭಕ್ತಿಯೆಂಬ ವೇದಾನ್ತವಿದ್ಯೆಯಲ್ಲಿ ಪರಮಾತ್ಮನಿಗಿಂತ ಬೇರೆ ಗುರಿ ಇದೆ ಎಂಬುದು ಇಲ್ಲವೇ ಇಲ್ಲ.[4] ಸೂ. ೩.೪೪.

## ೩೨

ಉಪಾಸನರೂಪವಾದ ಬ್ರಹ್ಮವಿದ್ಯೆಗಳಲ್ಲಿ ಜೀವಾತ್ಮಗಳ ವಿಚಾರ ಮುಖ್ಯವಾದುದಲ್ಲ. ಇವೆಲ್ಲದರಲ್ಲೂ ಜೀವಾತ್ಮಗಳಿಗಿಂತ ಭಿನ್ನವಾದ ಪರಮಾತ್ಮನ ವಿಚಾರವೇ ಮುಖ್ಯ. ಆದುದರಿಂದ ಉದ್ಗೀಥ ಮುಂತಾದ ಉಪಾ ಸನೆಗಳಂತೆ ಇವು ಕರ್ಮಕ್ಕೆ ಅಂಗ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ.[5] ಸೂ. ೪.೧೯.

---

1. ಈಶಾ. ೮. ಪರಮಾತ್ಮಪರವಾದ ಅರ್ಥವನ್ನೂ ಈಶಾ. ೧೬. ಅವತಾರ ವಿಚಾರವಾದ ಭಾಷ್ಯ, ವ್ಯಾಖ್ಯಾನಗಳನ್ನೂ ಗೀತೆ ಯಲ್ಲಿ ಅವತಾರರಹಸ್ಯಜ್ಞಾನಪೂರ್ವಕವಾದ ಉಪಾಸಕನಿಷ್ಠೆಯ ಬಗ್ಗೆ ಇರುವ ವಿಚಾರವನ್ನೂ ಗಮನಿಸಿ.
2. 'ಸರ್ವಂ ಆತ್ಮನ್ಯೇವಾನುಪಶ್ಯತಿ' 'ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ' ಗಮನಿಸಿ.
3. 'ಈಶಾ ವಾಸ್ಯಮಿದಂ ಸರ್ವಂ' ಎಂಬುದರ ವ್ಯಾಪಕಾರ್ಥನಿರ್ಣಯ ಇದು.
4. ಉಪಾಯವೂ ಉಪೇಯವೂ ಪರಮಾತ್ಮ ಒಬ್ಬನೇ ಎಂಬ ದೃಢನಿಶ್ಚಯವು ಶರಣಾಗತನಿಗೆ ಅವಶ್ಯ ಇರಬೇಕಾದುದು. 'ಅಗ್ನೇ ನಯ' ಎಂಬುವಾಗ ಪರಮಾತ್ಮ ಉಪಾಯ ಎಂಬ ವಿಚಾರವೂ, 'ತೇ ನಮಉಕ್ತಿಂ ವಿಧೇಮ' ಎನ್ನುವಾಗ ಪರಮಾತ್ಮನನ್ನು ಪಡೆದು ಅವನ ಸೇವೆ ಮಾಡುವುದೇ ಮುಖ್ಯ ಗುರಿಯಾದುದರಿಂದ ಅವನೇ ಉಪೇಯ ಎಂಬ ವಿಚಾರವೂ ಉಪಾಸಕನು ಶರ ಣಾಗತನಾಗಿರಬೇಕೆಂಬ ನಿರ್ಣಯಕ್ಕೆ ಸಹಾಯ.
5. ಕರ್ಮಕಾಂಡದಲ್ಲಿರುವ ಈಶಾವಾಸ್ಯವಿಚಾರವು ಕರ್ಮಕ್ಕೆ ಅಂಗವೇ ಅಥವಾ ಸ್ವತಂತ್ರವೇ ಎಂಬ ವಿಚಾರ ಈಶಾವಾಸ್ಯದ ಆರಂಭದ ಭಾಷ್ಯಗಳಲ್ಲಿರುವುದನ್ನು ಗಮನಿಸಿ.

### ೩೩

"ಆಚಾರ್ಯರ ಬಳಿ ವೇದವನ್ನು ಕಲಿತು, ವ್ರತವನ್ನು ಮುಗಿಸಿ, ನಂತರ ಸದ್ಗೃಹಸ್ಥನಾಗಿ"[1] ಎಂಬ ಉಪನಿಷತ್ ವಚನಾನುಸಾರ, ವೇದವನ್ನು ಅರ್ಥದೊಡನೆ ಕಲಿತು ವಿದ್ಯಾಸಂಪನ್ನನಾದವನಿಗೆ ತನ್ನ ಆಯುಷ್ಯವೆಲ್ಲವನ್ನೂ ಸತ್ಕರ್ಮಾಚರಣೆಯಲ್ಲೇ ಕಳೆಯಬೇಕೆಂದು ವಿಧಾನಮಾಡಲಾಗಿದೆ.[2] ಸೂ. ೪೨೪, ೪೨೫.

### ೩೪

'ಅಧ್ಯಯನ' ಎಂದರೆ ವೇದಾಕ್ಷರರಾಶಿಯನ್ನು ಕಂಠಪಾಠ ಮಾಡುವುದು. ಈ ನಂತರ ಅದರ ಅರ್ಥವನ್ನು ತಿಳಿಯುವ ಕುತೂಹಲ ಉಂಟಾಗುವುದು. ಇದರಿಂದ ವೇದಾರ್ಥನಿರ್ಣಾಯಕವಾದ ಮೀಮಾಂಸಾಶಾಸ್ತ್ರದ ಅಧ್ಯಯನ ಮಾಡಬೇಕು. ವೇದಗಳ ಅಕ್ಷರಾರ್ಥವನ್ನು ಅರಿತರೆ ಅದು ವಿದ್ಯೆಯಲ್ಲ. "ವೇದಂ ಅಧೀತ್ಯ" ಎಂಬ ವಿಧಿವಚನಕ್ಕಿಂತ ಬೇರೆಯಾದ 'ವಿದ್ಯಾತ್', 'ಉಪಾಸೀತ' ಎಂಬ ವಿಧಿವಚನಗಳನ್ನು ಅನುಸರಿಸಿ, ವೇದಾರ್ಥತತ್ತ್ವವಾದ ಪರಮಾತ್ಮನನ್ನು ಧ್ಯಾನಿಸಿ, ಅವನ ದರ್ಶನ ಪಡೆಯಬೇಕು. ಈ ದರ್ಶನರೂಪವಾದ ಅರಿವು ಮಾತ್ರ ವಿದ್ಯೆಯೆನಿಸಿದೆ. ಹೀಗೆ ಅಧ್ಯಯನವಿಧಿಗೆ ಶೇಷವಲ್ಲದ ವಿದ್ಯೆಯು ಸ್ವತಂತ್ರವಾದುದು.[3] ಸೂ. ೫೩೦.

### ೩೫

ಉಪಾಸನೆಗೆ ಮನಸ್ಸಿನ ಏಕಾಗ್ರತೆಯೇ ಮುಖ್ಯ. ನಮ್ಮ ಪಾಪಕರ್ಮಗಳು ಏಕಾಗ್ರತೆಗೆ ಭಂಗ ತರುವುವು. ಈ ಪಾಪಗಳ ಪರಿಹಾರಕ್ಕಾಗಿ ಸತತವೂ ಯಜ್ಞಾದಿಕರ್ಮಗಳು ಆವಶ್ಯಕ.[4] ಸೂ. ೪೪೫.

### ೩೬

ಯಜ್ಞಾದಿಕರ್ಮಗಳು ವಿದ್ಯೆಗೆ ಸಹಾಯಕವಾಗಿಯೇ ಇರುವುವಲ್ಲದೆ ಸ್ವತಂತ್ರವಲ್ಲ ಮತ್ತು ಸಮಪ್ರಧಾನವೂ ಅಲ್ಲ.[5] ಸೂ. ೫೫೧

### ೩೭

ಸಾಮಾನ್ಯಬ್ರಹ್ಮಚಾರಿಯು ಪತಿತನಾದರೂ ಪ್ರಾಯಶ್ಚಿತ್ತಮಾಡಿಕೊಂಡು ಕರ್ಮಾಚರಣೆಯನ್ನು ಮಾಡಬಹುದಾಗಿದೆ. ನೈಷ್ಠಿಕಬ್ರಹ್ಮಚಾರಿಯೂ, ಪತ್ನಿಯಿಲ್ಲದ ಗೃಹಸ್ಥರೂ, ವಾನಪ್ರಸ್ಥರೂ, ಸನ್ಯಾಸಿಗಳೂ, ವ್ರತಭ್ರಷ್ಟರಾದರೆ ಅಂತಹವರಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ, ಅಂತಹವರಿಗೆ ಯಾವ ಉಪಾಸನೆಯ ಅರ್ಹತೆಯೂ ಇಲ್ಲ.[6] ಸೂ. ೫೫೮, ೫೫೯.

---

1-2. 'ಕುರ್ವನ್ನೇವೇಹ ಕರ್ಮಾಣಿ' ಗಮನಿಸಿ.

3. 'ಅಧೀತ್ಯ' ಎಂಬ ವಿಧಿಯು ಅಧ್ಯಯನದ ನಂತರ ಆಗಬೇಕಾದ ಪ್ರಧಾನವಿಷಯವನ್ನು ಅನುಸರಿಸಿಯೇ ಇರುವುದರಿಂದ 'ಉಪಾಸೀತ' ಎಂಬ ಪ್ರಧಾನವಾದ ವಿದ್ಯಾವಿಧಿಗೆ ಇದು ಶೇಷವೆನಿಸುವುದು. ಆದುದರಿಂದ ಕರ್ಮಮೀಮಾಂಸಾಧ್ಯಯನವು ಮೀಮಾಂಸೆಯ ಉನ್ನತಸ್ತರವಾದ ಬ್ರಹ್ಮಮೀಮಾಂಸೆಯೆನಿಸಿದ ವೇದಾನ್ತಭಾಗದ ಅಧ್ಯಯನವಿಧಿವಿಧಾನಾಚರಣೆಗಳಿಗೆ ಅವಶ್ಯಕವೆಂದೂ, ವೇದಾನ್ತವಿದ್ಯೆಗೆ ಕರ್ಮವು ಅಂಗವೆಂದೂ, ತೀರ್ಮಾನಿಸಲಾಗಿದೆ. ಹೀಗೆ ಕರ್ಮಕಾಂಡದಲ್ಲಿರುವ ಈಶಾವಾಸ್ಯವಿದ್ಯೆಗೆ ಹಿಂದಿನ ಅಧ್ಯಾಯಗಳಲ್ಲಿ ಹೇಳಿರುವ ಕರ್ಮಗಳೆಲ್ಲವೂ ಅಂಗವಾಗುವುವು. ಇದನ್ನೇ ಈಶಾ. ೧, ೨ ರಲ್ಲಿ ಸಂಸ್ಮರಿಸಿ ಬಳಸಬೇಕೆಂದು ತಿಳಿಸಲಾಗಿದೆ.

4. ಈಶಾ. ೨, ೧೧. 'ಏವ', 'ಸಹ' ಗಮನಿಸಿ.

5. ಈಶಾ. ೧೧ 'ಸಹ' ಎಂಬುದರ ಅರ್ಥವಿವರಣೆಗೆ ಉಪಯೋಗಿಸಿರಿ.

6. ಈಶಾವಾಸ್ಯೋಪಾಸನೆಯ ಅರ್ಹತೆ ಯಾರ್ಯಾರಿಗಿದೆ ಎಂಬ ಬಗ್ಗೆ ಇದು ಗಮನಾರ್ಹ.

೩೮

ಬಾಲ್ಯ, ಪಾಂಡಿತ್ಯ, ಮೌನಗಳೆಂಬ ಸಾಂಕೇತಿಕ ವಿಚಾರಗಳನ್ನು ವಿದ್ಯೆಗೆ ಕೆಲವು ಪ್ರಮುಖ ಸಹಾಯಕಗಳೆನ್ನಲಾಗಿದೆ.[1] ಸೂ. ೪೬೪.

(ಇಲ್ಲಿಂದ ಮುಂದೆ 'ವೇದಾನ್ತದೀಪ'ದಲ್ಲಿ ಇರುವ ವಿಚಾರಗಳೆಲ್ಲವೂ ಶ್ರೀಭಾಷ್ಯಪರಿಶಿಷ್ಟದಲ್ಲಿ ಉಕ್ತವಾಗಿವೆ. ಅಲ್ಲಿ ಗಮನಿಸಿದರೆ ಸಾಕು.)

# 5. ವೇದಾನ್ತಸಾರ

೧

ಜಗತ್ಕಾರಣವಸ್ತುವನ್ನೇ ಉಪಾಸನೆ ಮಾಡಬೇಕೆಂಬುದು ವೇದಾನ್ತದಲ್ಲಿ ನಿಶ್ಚಿತವಾಗಿದೆ. ಹೇಗೆ ಮಾಡಬೇಕೆಂಬ ಬಗ್ಗೆ 'ಆತ್ಮಾ' ಎಂದೇ ಉಪಾಸಿಸಬೇಕು ಮುಂತಾದ ಉಪನಿಷತ್‌ವಚನಗಳು ನಿರ್ಧಾರಕಗಳಾಗಿವೆ. ಆದುದರಿಂದ 'ಯೋಽಸೌ ಸೋಽಹಂ, ಯೋಽಹಂ ಸೋಽಸೌ' ಮುಂತಾದ ವಚನಗಳಿಗೆ 'ಯಾವನು ಜಗತ್ಕಾರಣನೋ ಅವನಿಗೆ ನಾನು ಶರೀರ, ನನಗೆ ಅವನು ಆತ್ಮ' ಎಂದೇ ಅರ್ಥ ಮಾಡಬೇಕು.[2] ಸೂ. ೨.

೨

ವಿಶ್ವದ ಉನ್ನತ ಸ್ತರದಲ್ಲಿ ಎಲ್ಲ ಲೋಕಗಳ ಮೇಲುಭಾಗದಲ್ಲಿ ದಿವ್ಯಜ್ಯೋತಿರ್ಮಯನಾದ ಪರಮಾತ್ಮನು ನಾಲ್ಕನೆಯ ಮೂರು ಭಾಗದ ತನ್ನ ಐಶ್ವರ್ಯಸಮೃದ್ಧಿಯೊಡನೆ ರಾರಾಜಿಸುತ್ತಿರುವನು. ಈ ನಮ್ಮ ವಿಶ್ವವೆಲ್ಲಾ ಅವನ ಐಶ್ವರ್ಯದ ನಾಲ್ಕನೆಯ ಒಂದು ಭಾಗ ಮಾತ್ರ. ಈ ಬಗ್ಗೆ 'ಪುರುಷಸೂಕ್ತ'ದಲ್ಲಿ ಸ್ಪಷ್ಟವಾದ ವಿವರಣೆ ಇದೆ. ಸಕಲಜಗತ್ಕಾರಣನೂ ಪರಮಪುರುಷನೂ ಪರತತ್ತ್ವವೂ ಆದ ನಾರಾಯಣನೇ ಉಪಾಸ್ಯನಾದ ಪರಮಾತ್ಮ.[3] ಸೂ. ೨೫, ೩೨, ೪೪.

೩

ಧ್ಯಾನಿಸುವವರ ಹೃದಯದ ಸೂಕ್ಷ್ಮ ಪ್ರದೇಶದಲ್ಲಿರುವ ಪರಮಾತ್ಮನು ಅಲ್ಪಾಕಾರವಾಗಿರದೆ ಅಲ್ಲೂ ಭೂಮಿ ಆಕಾಶಗಳಿಗಿಂತ ಬೃಹದಾಕಾರನಾಗಿಯೇ ಇರುವನು.[4] ಸೂ. ೩೯.

೪

ವಿದ್ಯಾಂಗವಾದ ಕರ್ಮಗಳಲ್ಲಿ ಪರಮಾತ್ಮನನ್ನು ಉಪಾಸಕನು ತನ್ನಲ್ಲಿರುವಂತೆ ಭಾವಿಸುವಾಗ "ತನ್ನ ಶಿರಸ್ಸೇ ಅವನ ಶಿರಸ್ಸು" ಮುಂತಾದ ರೀತಿಯಲ್ಲಿ ವಿಭಾಗಿಸಿ ಭಾವಿಸಬೇಕಾಗುವುದು. ಹೀಗೆ ವಿಶ್ವವೆಲ್ಲವನ್ನೂ ಪರಮಾತ್ಮನ

1. ಸಂಭೂತಿ, ವಿನಾಶ, ವಿಚಾರಗಳಲ್ಲಿ ಇದನ್ನು ಅವಶ್ಯ ಉಪಯೋಗಿಸಬೇಕು. ಶ್ರೀಭಾಷ್ಯವಿವರಣೆ ಪರಿಶಿಷ್ಟ ಪುಟ ೨೬೩ ಗಮನಿಸಿ.

2. ಈಶಾ. ೧೬. "ಯೋಽಸಾವಸೌ ಪುರುಷಸ್ಸೋಽಹಮಸ್ಮಿ" ಭಾಷ್ಯ ಗಮನಿಸಿ.

3. ಈಶಾವಾಸ್ಯದ ಉಪಾಸ್ಯವಾದ ಪರತತ್ತ್ವದ ನಿರ್ಣಯಕ್ಕೆ ಇದು ಸಹಾಯಕ. ಈಶಾ. ೧. ಭಾಷ್ಯ ಗಮನಿಸಿ.

4. ಈಶಾ. 'ತದಂತರಸ್ಯ" ಎಂಬ ಮಂತ್ರಭಾಗದ ವಿವರಣೆಗೆ ಉಪಯುಕ್ತ.

ಅಂಗಾಂಗಗಳನ್ನಾಗಿಯೂ ಭಾವಿಸಬೇಕಾಗುವುದು. ಇದೆಲ್ಲವೂ ಪರಮಾತ್ಮನ ಅಭಿವ್ಯಕ್ತಿಗೆ ಅವಶ್ಯಕ. ವಿಶ್ವದ ಎಲ್ಲ ವಸ್ತುಗಳಲ್ಲೂ ಆಯಾ ವಸ್ತುಗಳ ಅಭಿಮಾನಿದೇವತೆಗಳಾದ ಅಗ್ನಿ ಮುಂತಾದವರಲ್ಲಿ ಪರಮಾತ್ಮನು ಅಂತರಾತ್ಮನಾಗಿರುವುದರಿಂದ ಯಾವ ಅಂಶವನ್ನೂ ಪರಮಾತ್ಮನದೆಂದು ಭಾವಿಸಬಹುದಾಗಿದೆ. ಮತ್ತು ಅಭಿಮಾನಿದೇವತೆಗಳ ಮೂಲಕವಲ್ಲದೆ ಸ್ವತಃ ಪರಮಾತ್ಮನೇ ಎಲ್ಲೆಲ್ಲೂ ಆವರಿಸಿರುವುದರಿಂದ......, ಅಗ್ನಿ ಮುಂತಾದ ಶಬ್ದಗಳಿಗೂ ಸಹ ನೇರವಾಗಿ ಪರಮಾತ್ಮನೆಂದೇ ಅರ್ಥವಾಗುವುದರಿಂದಲೂ, ವಿಶ್ವಶರೀರಕನಾದ ಪರಮಾತ್ಮನನ್ನು ಧ್ಯಾನಿಸುವುದು ಸೂಕ್ತವಾಗಿದೆ ಮತ್ತು ಸುಲಭವಾಗಿದೆ. ಬಾದರಿ, ಆಶ್ಮರಥ್ಯ, ಜೈಮಿನಿಮಹರ್ಷಿಗಳ ಈ ಎಲ್ಲ ಅಭಿಪ್ರಾಯಗಳೂ ಬ್ರಹ್ಮಸೂತ್ರಕಾರರಾದ ವೇದವ್ಯಾಸಮಹರ್ಷಿಗಳಿಗೆ ಒಪ್ಪಿಗೆಯಾಗಿವೆ.[1]

ಸೂ. ೫೬ರಿಂದ ೭೫.

೫

ಉಪಾಸಕನಿಗೆ ಉಪಾಸ್ಯನಾದ ಪರಮಾತ್ಮ, ಉಪಾಸನವಾದ ಭಕ್ತಿ, ಉಪಾಸಕನಾದ ಜೀವಾತ್ಮ, ಈ ಮೂರರ ಬಗ್ಗೆ ನಿಷ್ಕೃಷ್ಟವಾದ ಜ್ಞಾನವು ಅತ್ಯವಶ್ಯಕ.[2] ಸೂ, ೧೧೫.

೬

ಬ್ರಹ್ಮವೊಂದೇ ಜಗತ್ತಿಗೆ ನಿಮಿತ್ತಕಾರಣ ಮತ್ತು ಉಪಾದಾನಕಾರಣ ಎಂಬುದು ವೇದವಚನಸಿದ್ಧವಾದ ವಿಷಯ. ('ಈಶಾ' ಎಂಬಲ್ಲಿ 'ಈಶನಂ' ಎಂದರೆ ಆಳ್ವಿಕೆ, ಅದರ ಕರ್ತನೇ ಈಟ್ - ಈಶ ಎಂಬುದು ತಿಳಿದರೂ "ಈಶಾ ವಾಸ್ಯಮಿದಂ ಸರ್ವಂ" ಎಂಬ ಮಾತಿಗೆ 'ಜಗತ್ತಿಗೆ ಕರ್ತಾ' (ಜಗತ್ತಿಗೆ ನಿಮಿತ್ತಕಾರಣ) ಎಂದಷ್ಟೇ ಅರ್ಥವಾಗುವುದು. ಜಗತ್ತಿಗೆ ಸಕಲಕಾರಣವೂ ಅವನೇ ಎಂಬ ವಿಚಾರ ತಿಳಿಯದೇ ಹೋಗುವುದು. ಆದುದರಿಂದ ಇಂತಹ ಪ್ರಕರಣಗಳಲ್ಲಿ ಮಡಕೆಗೆ ಮಣ್ಣು ಮೂಲವಸ್ತುವಾಗಿರುವಂತೆ ಜಗತ್ತಿಗೆ ಈಶನು ಮೂಲವಸ್ತುವೂ ಆಗಿರುವನೆಂಬ ವಿಷಯ ಉಪಾಸಕನಿಗೆ ಅವಶ್ಯವಾಗಿ ತಿಳಿದಿರಬೇಕು. ಉಪಾಸ್ಯಗುಣಗಳಲ್ಲಿ ಇದೂ ಒಂದು. ಎಲ್ಲ ವಿದ್ಯೆಗಳಿಗೂ ಇದು ಅವಶ್ಯಕ. ಆದುದರಿಂದ ಈ ಸೂತ್ರದಲ್ಲಿ ಈ ನಿರ್ಣಯವನ್ನು ತಿಳಿಸಲಾಗಿದೆ ) ಸೂ. ೧೩೪.

೭

ವಸ್ತುವಿನ ವಿನಾಶ ಎಂದರೆ ವಸ್ತುವಿನ ಒಂದು ರೂಪಾಂತರಸ್ಥಿತಿಯಷ್ಟೆ. ವಸ್ತುವಿನ ಸಂಪೂರ್ಣ ನಾಶ ಎಂಬುದು ಎಂದಿಗೂ ಎಲ್ಲೂ ಇಲ್ಲವೇ ಇಲ್ಲ.[3] ಸೂ. ೧೯೫.

---

1. ಈಶಾವಾಸ್ಯದ ಆತ್ಮಾ, ಪೂಷ, ಯಮ, ಸೂರ್ಯ, ಪ್ರಾಜಾಪತ್ಯ, ಅಗ್ನಿ, ಮುಂತಾದ ಶಬ್ದಗಳಿಗೆ ಪರಮಾತ್ಮಪರವಾಗಿ ಅರ್ಥ ಮಾಡಲು ಇದು ಸಹಾಯಕ.

2. ಈಶಾವಾಸ್ಯದಲ್ಲೂ ಈ ವಿಚಾರ ಅತಿಮುಖ್ಯ.

3. ಈಶಾ. ೧೪. ಗಮನಿಸಿ. ಯಾಸ್ಕನಿರುಕ್ತ. ೧.೧.೩. ಗಮನಿಸಿ.

೮

ಪಾಂಚರಾತ್ರಾಗಮದಲ್ಲಿ "ಪರಮಾತ್ಮನಿಗೂ ಜಗತ್ತಿಗೂ ವ್ಯಾಪ್ತಿರೂಪವಾದ ಸಂಬಂಧವು ನಿತ್ಯವಾಗಿರುವುದರಿಂದ, ವಿಶ್ವವೂ ಪರಮಾತ್ಮನೂ ಪರಮಾರ್ಥವೇ ಹೊರತು ಕೃತಕವಲ್ಲ. ಜೀವಾತ್ಮವೂ ಕೃತಕವಲ್ಲ. ಅವನೂ ಪರಮಾತ್ಮನಂತೆ ಅನಾದಿ ಮತ್ತು ಅನಂತ" ಎಂದು ಸ್ಪಷ್ಟವಚನವಿರುವುದರಿಂದ, ವೇದವಿರುದ್ಧವಾದ ಯಾವ ಸಿದ್ಧಾಂತವೂ ಇದರಲ್ಲಿಲ್ಲವಾದ್ದರಿಂದ ಇದು ವೇದದಷ್ಟೇ ಆಧಾರಭೂತವಾದ ಪ್ರಮಾಣ, ಮತ್ತು ವೇದಗಳಿಗೆ ಪೋಷಕ.[1] ಸೂ. ೨೧೬.

೯

ಎಲ್ಲ ಜೀವಗಳಲ್ಲೂ ಪರಮಾತ್ಮನು ವ್ಯಾಪಿಸಿರುವುದರಿಂದ ಪರಮಾತ್ಮನ ದಾಸರಾದ ಜೀವಾತ್ಮರನ್ನು ಪರಮಾತ್ಮನೊಡನೆ ಐಕ್ಯದಿಂದ ವ್ಯವಹರಿಸಲಾಗಿದೆ. ಪರಮಾತ್ಮನ ವಿಶೇಷಣವಾದ ಅಂಶ ಜೀವಾತ್ಮ ಎಂದಿಟ್ಟುಕೊಂಡರೆ ಭಿನ್ನತೆ, ಏಕತೆಗಳನ್ನು ಸಮನ್ವಯ ಮಾಡಬಹುದು.[2] ಸೂ. ೨೨೮.

೧೦

ಉಪಾಸಕನು ಹಿಂದೆ ತಾನು ಮಾಡಿದ ಕೆಲಸಗಳಿಂದ ಪರಮಾತ್ಮನಿಗೆ ಅಪ್ರೀತಿಯಾಗಿರುವುದನ್ನೂ, ಆದರಿಂದ ಅವನು ಕೆಲವು ದುಃಖಗಳನ್ನು ತನಗೆ ಕೊಟ್ಟಿರುವುದನ್ನೂ ಭಾವಿಸಿ, ಈಗ ಉಪಾಸನದಿಂದ ಸುಪ್ರೀತನಾದ ಪರಮಾತ್ಮನ ಅನುಗ್ರಹದಿಂದ ಅಂತಹ ದುಃಖಗಳ ಪರಿಹಾರವನ್ನು ಅಂದರೆ ದುಃಖದ ಸಂಪರ್ಕವಿಲ್ಲದಿರುವುದನ್ನು ನಿತ್ಯವೂ ಚಿಂತಿಸಬೇಕು.[3] ಸೂ. ೩೩೪.

೧೧

ಭಕ್ತಿಯ ಉನ್ನತಸ್ತರದಲ್ಲಿ ಮಾತ್ರ ಪರಮಾತ್ಮನ ಸ್ವರೂಪದರ್ಶನವು ಆಗುವುದೆಂದು ಶ್ರುತಿಸ್ಮೃತಿಗಳು ಘೋಷಿಸುತ್ತವೆ. 'ನಾಯಮಾತ್ಮಾ ಪ್ರವಚನೇನ ಲಭ್ಯಃ' ಎಂಬ ಶ್ರುತಿವಚನ ಮತ್ತು "ನಾಹಂ ವೇದೈರ್ನ ತಪಸಾ" ಎಂಬ ಗೀತಾಸ್ಮೃತಿವಚನ ಇಲ್ಲಿ ಅತ್ಯಂತ ಗಮನಾರ್ಹ.[4] ಸೂ. ೩೩೬.

---

1. ''ವ್ಯಾಪ್ತಿರೂಪೇಣ ಸಂಬಂಧಃ ತಸ್ಯಾಶ್ಚ ಪುರುಷಸ್ಯ ಚ.
ಸಹ್ಯನಾದಿರನಂತಶ್ಚ ಪರಮಾರ್ಥೇತಿ ನಿಶ್ಚಿತಃ''
'ಈಶಾವಾಸ್ಯಂ' ಎಂಬ ವ್ಯಾಪ್ತಿಯ ವಿಶೇಷವನ್ನು ಇಲ್ಲಿ ತಿಳಿಸಲಾಗಿದೆ. ಪರಮಾತ್ಮನಿಂದ ಪ್ರಕೃತಿ ಮತ್ತು ಜೀವಾತ್ಮತತ್ತ್ವಗಳು ವ್ಯಾಪಿಸಲ್ಪಟ್ಟು ಅವನ ಸಂಕಲ್ಪಾನುಸಾರ ಸಂಯೋಗವಿಯೋಗಗಳನ್ನು ಪಡೆಯುತ್ತವೆ. ಈ ಸಂಯೋಗವಿಯೋಗಗಳೇ ಜೀವಾತ್ಮನ ಉತ್ಪತ್ತಿವಿನಾಶಗಳು. ವಾಸ್ತವವಾಗಿ ಯಾವ ವಸ್ತುವಿಗೂ ಹುಟ್ಟು ಸಾವಿಲ್ಲ. ಜೀವಾತ್ಮನೂ ಹಾಗೆಯೇ ಅನಾದಿ ಮತ್ತು ಅನಂತ. ಆದುದರಿಂದ ಪರಮಾತ್ಮನಂತೆಯೇ ಪ್ರಕೃತಿಯೂ ಜೀವಾತ್ಮತತ್ತ್ವವೂ ಪಾರಮಾರ್ಥಿಕ ಎಂದು ಭಾವ.

2. ಜೀವಾತ್ಮಪರಮಾತ್ಮರು ಪ್ರತ್ಯೇಕ ಸ್ವತಂತ್ರರೆಂದಾಗಲಿ, ಇಬ್ಬರೂ ಒಂದೇ ತತ್ತ್ವ ಎಂದಾಗಲಿ, ಎಲ್ಲೂ ಅರ್ಥವಿಲ್ಲ. ವೇದಾಂತವಿದ್ಯೆಗಳಲ್ಲಿ ಇವುಗಳ ಭಿನ್ನತೆ, ಏಕತೆಗಳೆರಡನ್ನೂ ಒಟ್ಟಿಗೆ ಧ್ಯಾನಿಸಬೇಕಾದ ಅವಶ್ಯಕತೆ ಇದೆ. ವಿಧಿ ವಚನಗಳೂ ಇವೆ. ಇವೆರಡರ ಸಮನ್ವಯವೇ ಬ್ರಹ್ಮಸೂತ್ರಕಾರರ ಮುಖ್ಯ ಗುರಿ. ಇದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ. ಈಶಾವಾಸ್ಯದ ವ್ಯಾಪ್ತಿ ಎಂಬುದು ಶರೀರಶರೀರಿಭಾವ ಎಂಬುದರ ಪರ್ಯಾಯ. ವ್ಯಾಪ್ತಿ ಎಂಬ ಶಬ್ದದಿಂದ ಶರೀರಶರೀರಿಗಳಿಗೆ ಭಿನ್ನತೆಯೂ ಇದೆ ವಿಶಿಷ್ಟ ಏಕತೆಯೂ ಇದೆ ಎಂಬುದನ್ನು ಗಮನಿಸಿ.

3. ಸಂಭೂತಿ, ವಿನಾಶಗಳ ವಿಚಾರದಲ್ಲಿ ಉಪಯುಕ್ತ.

4. ಈಶಾ. ೧೬ ರ ದರ್ಶನಸ್ಥಿತಿಗೆ ಪೂರ್ವಭಾವಿಯಾಗಿ ಈಶಾ. ೧೧ ರ ವಿದ್ಯೆಯ ಸ್ತರ ಹೇಗಿರಬೇಕೆಂಬ ಬಗ್ಗೆ ಇದು ಅತ್ಯವಶ್ಯಕ.

## ೧೨

ಉಪಾಸಕನಿಗೆ ಪ್ರಾಪ್ಯವೂ ಪ್ರಾಪಕವೂ ಪರಮಾತ್ಮನೇ ಎಂಬ ನಿಶ್ಚಯವು 'ಯಮೇವೈಷ ವೃಣುತೇ ತೇನ ಲಭ್ಯಃ' ಎಂಬ ವಚನದಲ್ಲಿ ಸ್ಪಷ್ಟವಾಗಿದೆ.[1] ಸೂ. ೩೪೮.

## ೧೩

ವಿವಿಧ ಉಪಾಸನೆಗಳಲ್ಲಿ ಪರಸ್ಪರ ಉಪಕಾರಕಗಳಾದ ಅಂಶಗಳಿದ್ದರೆ ಅವುಗಳನ್ನು ಪರಸ್ಪರ ಬಳಸಿಕೊಳ್ಳಬೇಕು. ಈ ನಿಯಮವನ್ನು ಪೂರ್ವಮೀಮಾಂಸೆಯ ವಿಧಿವಿಚಾರದಲ್ಲಿ ಹೇಳಲಾಗಿದ್ದು ಅದು ಇಲ್ಲಿ ಅವಶ್ಯಕ ಎಂಬ ದೃಷ್ಟಿಯಿಂದ ಜ್ಞಾಪಕಪಡಿಸಲಾಗಿದೆ.[2] ಸೂ. ೩೫೯.

## ೧೪

ಪರಮಾತ್ಮನಿಗೆ ಮಾತ್ರ ಇರುವ ಜಗತ್ಕಾರಣತ್ವ ಮುಂತಾದ ವಿಶೇಷಗುಣಗಳಲ್ಲಿ ಆಯಾ ಸಂದರ್ಭದಲ್ಲಿ ಹೇಳಿರುವುದನ್ನು ಗಮನಿಸಿ, ಅಲ್ಲಲ್ಲೇ ಇರುವ 'ಆತ್ಮಾ' ಎಂಬ ಶಬ್ದಕ್ಕೆ ಪರಮಾತ್ಮ ಎಂದೇ ಅರ್ಥ ಮಾಡಬೇಕು.[3] ಸೂ. ೩೬೦.

## ೧೫

ಉಪಾಸನಾಂಗವಾದ ಯಜ್ಞಾದಿ ಕರ್ಮಗಳಿಗೆ ಏನು ಫಲವೋ ಯಜ್ಞಾದಿಗಳಿಗೆ ಸಹಾಯಕಗಳಾದ ಉದ್ಗೀಥಾದ್ಯುಪಾಸನೆಗಳಿಗೂ ಅದೇ ಮುಖ್ಯಫಲ. ಯಜ್ಞಾದಿಕರ್ಮಗಳಿಗೆ ವಿರೋಧವಾದ ಪಾಪಕರ್ಮಗಳಿಂದ ಆಗಬಹುದಾದ ವಿಘ್ನವನ್ನು ಪರಿಹರಿಸಿ, ಯಜ್ಞಾದಿಗಳನ್ನು ಸಬಲವಾಗಿಸಿ, ಶೀಘ್ರವಾಗಿ ಫಲಿಸುವಂತೆ ಮಾಡುವುದೇ ಉದ್ಗೀಥಾದ್ಯುಪಾಸನೆಗಳ ಫಲವಾದುದರಿಂದ, ಯಜ್ಞಾದಿಗಳ ಫಲಕ್ಕಿಂತ ಉದ್ಗೀಥಾದ್ಯುಪಾಸನೆಗೆ ಪ್ರತ್ಯೇಕ ಫಲವಿರಬೇಕೆಂದು ನಿಯಮವೇನೂ ಇಲ್ಲ.[4] ಸೂ. ೩೭೫.

## ೧೬

ಸಹಭಾವ ಎಂದರೆ ಅಂಗವಾಗಿರುವಿಕೆ ಎಂದರ್ಥ. ಕರ್ಮವಿಧಿಗಳಲ್ಲಿ ಉಪಾಸನೆಗಳ ಸಹಭಾವವನ್ನು ಹೇಳುವ "ಸಹ" ಎಂಬ ಪದಪ್ರಯೋಗ ಎಲ್ಲೂ ಇಲ್ಲ. ಆದುದರಿಂದ ಉಪಾಸನೆಗಳು ಕರ್ಮಕ್ಕೆ ಅಂಗವಲ್ಲ.[5] ಸೂ. ೪೧೭.

---

1. ಉಪಾಸಕನಿಗೆ ಶರಣಾಗತಿ ಅತ್ಯವಶ್ಯಕ ಎಂಬ ಬಗ್ಗೆ ಇದು ಆಧಾರವಾಗಿದೆ. ಈಶಾವಾಸ್ಯದಲ್ಲಿ ಶರಣಾಗತಿವಿಚಾರ ಗಮನಿಸಿ.
2. ಈಶಾವಾಸ್ಯವಿದ್ಯೆಗೆ ಇತರ ಉಪನಿಷತ್ತುಗಳಲ್ಲಿ ಬರುವ ಬ್ರಹ್ಮವಿದ್ಯೆಗಳ ಅಧ್ಯಯನವೂ ಅವಶ್ಯಕ ಎಂಬ ವಿಚಾರ ಇದರಿಂದ ತಿಳಿಯುವುದು.
3. ಈಶಾ. ೭. ಭಾಷ್ಯ ಗಮನಿಸಿ.
4. ಈಶಾ. ೨ರಲ್ಲಿ ಇದನ್ನು ಅವಶ್ಯಕತೆ ಇದ್ದವರು ಬಳಸಿಕೊಳ್ಳಬಹುದಾಗಿದೆ.
5. ಈಶಾ. ೧೧,೧೪. "ಸಹ" ಎಂಬುದರ ಅರ್ಥವಿವರಣೆಗೆ ಅವಶ್ಯಕ.

## ೧೭

ಯಜ್ಞಾದಿಕರ್ಮಗಳಲ್ಲಿ ಉದ್ಗೀಥಾದಿ ಉಪಾಸನವನ್ನು 'ಬ್ರಹ್ಮಾ' ಎಂಬ ಹೆಸರಿನ ಋತ್ವಿಕ್ - ಯಜ್ಞಸಹಾಯಕನು ಮಾಡಿದರೆ ಸಾಕು. ಉದ್ಗಾತೃ ಮುಂತಾದ ಇತರ ಸಹಾಯಕರಿಗೂ ಯಜಮಾನನಿಗೂ ಇದರ ಬಗ್ಗೆ ಏನೂ ತಿಳಿಯದಿದ್ದರೂ ಸರಿ, ಬ್ರಹ್ಮಋತ್ವಿಜನು ಮಾಡುವ ಉಪಾಸನೆಯೊಂದರಿಂದಲೇ ಸರ್ವರಕ್ಷಣವಾಗುವುದರಿಂದ ಇತರರಿಗೆ ಆ ಫಲದಲ್ಲಿ ಅನ್ವಯ ಉಂಟೇ ಹೊರತು, ಅವರಿಗೆ ಉದ್ಗೀಥೋಪಾಸನೆ ತಿಳಿದಿದ್ದರೂ ಅದರಿಂದ ಏನೂ ಉಪಯೋಗವಿಲ್ಲ.[1] ಸೂ. ೪೧೮.

## ೧೮

ವೈದಿಕರಿಗೆ ಉಪಾಸನವೆಂಬ ವಿದ್ಯೆಯೇ ಮುಖ್ಯ. 'ಉಪಾಸೀತ' ಎಂಬ ಅರ್ಥವುಳ್ಳ ವಚನಗಳಿಂದ ವಿದ್ಯೆಯನ್ನು ವಿಧಿಸಲಾಗಿದೆ. ಶಬ್ದ, ವಾಕ್ಯ, ಮತ್ತು ಗ್ರಂಥಗಳ ಅರ್ಥಜ್ಞಾನವೇ ವಿದ್ಯೆಯಲ್ಲ. ವಿದ್ಯೆಯ ಗುರಿಯಾದ ಪರಮಾತ್ಮತತ್ತ್ವವನ್ನು ತಿಳಿದು, ನಮ್ಮ ಆ ಜ್ಞಾನವನ್ನೇ ಮತ್ತೆ ಮತ್ತೆ ನಿರಂತರವಾಗಿ ಪ್ರೀತಿಯಿಂದ ಆವರ್ತಿಸುವ ಧ್ಯಾನವೇ ಉಪಾಸನೆ. ಅದೀಗ ವಿದ್ಯೆ.[2] ಸೂ. ೪೩೦.

ಸ್ಮೃತಿಪುರಾಣಾದಿ ಗ್ರಂಥಗಳಲ್ಲಿ ಧ್ಯಾನಮಾಡುವ ವಿಧಾನವನ್ನು ಸಾಂಗವಾಗಿ ವಿವರಿಸಲಾಗಿದೆ. ಅವುಗಳನು ತಿಳಿದು ಆಚರಿಸಬೇಕು.[3] ಸೂ. ೪೭೦.

ತಮ್ಮ ತಮ್ಮ ಹೃದಯದೊಳಗಿರುವ ಪರಮಾತ್ಮನ ಆರಾಧನರೂಪವಾದುದೇ ಈ ಉಪಾಸನೆ. ಅವನ ಅನುಗ್ರಹಮಾತ್ರದಿಂದ ಉಪಾಸಕನಾದ ಜೀವಾತ್ಮನಿಗೆ ಸಕಲ ದಿವ್ಯಜ್ಞಾನಗಳೂ ಉಂಟಾಗಿ, ಅವನು ಪರಮಾತ್ಮನನ್ನು ಪರಲೋಕದಲ್ಲೂ ಅನುಭವಿಸಲು ಸಾಧ್ಯ. ಇಂತಹ ಉಪಾಸಕರನ್ನೇ ಯೋಗಿಗಳೆಂದು ಹೆಸರಿಸಲಾಗಿದೆ.[4]
ಸೂ. ೫೦೫, ೫೦೮.

---

1. ಈಶಾ. ೧೫. ಶರಣಾಗತಿಯನ್ನು ಒಬ್ಬರು ಮಾಡಿದರೂ ಅವರ ಸಂಬಂಧಿಸಂಬಂಧಿಗಳಿಗೂ ಅದರ ಫಲವುಂಟೆಂಬ ತತ್ತ್ವ ಇಲ್ಲಿ ಸೂಚಿತವಾಗಿರುವಂತಿದೆ. ಇದೇ ರೀತಿಯ ಅರ್ಥ ಈಶಾ. ಪುಟ. ೦೭೮. 'ಅಸ್ಮಾನ್' ಎಂಬುದರ ವಿವರಣೆಯಲ್ಲಿ ಇರುವುದನ್ನೂ ಗಮನಿಸಿ.

2-3. ಈಶಾ. ೧೧. 'ವಿದ್ಯೆ' ಎಂಬುದರ ವಿವರಣೆಗೆ ಅತ್ಯವಶ್ಯಕ. 'ಮಾಂ ಧ್ಯಾಯನ್ತ ಉಪಾಸತೇ', 'ತೇಷಾಮಹಂ ಸಮುದ್ಧರ್ತಾ' ಗೀ. ೧೨. ೬, ೭.

ತದ್ರೂಪಪ್ರತ್ಯಯೇ ಚೈಕಾ ಸಂತತಿಶ್ಚಾನ್ಯನಿಃಸ್ಪೃಹಾ
ತದ್ಧ್ಯಾನಂ ಪ್ರಥಮೈಃ ಷಡ್ಭಿರಂಗೈರ್ನಿಷ್ಪಾದ್ಯತೇ ನೃಪ. ವಿ. ಪು. ೬. ೭. ೯೧.

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಗಳು 'ಅಷ್ಟಾಂಗಯೋಗ' ಎನಿಸಿವೆ. ಧಾರಣ, ಧ್ಯಾನ, ಸಮಾಧಿಗಳು ಇವುಗಳಲ್ಲಿ ಬಹಳ ಮುಖ್ಯ. ಯಮನಿಯಮಾದಿಗಳು ನಾಲ್ಕೂ ಬಹಿರಂಗಗಳು. ಪ್ರತ್ಯಾಹಾರ ಧಾರಣೆಗಳು ಎರಡೂ ಅಂತರಂಗಗಳು. ಈ ಆರು ಅಂಗಗಳಿಂದ ಧ್ಯಾನವು ಸಿದ್ಧಿಸುವುದು.

4. ಗೀತೆಯಲ್ಲೂ ಈ ಅರ್ಥದಲ್ಲಿ 'ಯೋಗಿ' ಎಂಬ ಪದವನ್ನೇ ಬಳಸಲಾಗಿದೆ. ಈಶಾವಾಸ್ಯೋಪಾಸಕನೂ 'ಯೋಗಿ'. ಈಶಾವಾಸ್ಯದ ಪ್ರವರ್ತಕರಾದ ಯಾಜ್ಞವಲ್ಕ್ಯರೂ 'ಯೋಗಿ'. ಅವರು ಬರೆದಿರುವ "ಯೋಗಯಾಜ್ಞವಲ್ಕ್ಯ" ಗ್ರಂಥವೂ ಸಹ ಈಶಾವಾಸ್ಯದ ಸೂಕ್ಷ್ಮಾರ್ಥಗಳನ್ನು ತಿಳಿಸುವುದು. ಪರಿಶಿಷ್ಟ ಪುಟ. ೨೧೨. ೨೧೫. ನೋಡಿ.

## ೧೯

'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ' ಎಂಬ ವಚನಾನುಸಾರ ಆತ್ಮಜ್ಞಾನಿಯ ಜೀವನವೆಲ್ಲವೂ ಕರ್ಮದಲ್ಲೇ ಉಪಯೋಗವಾಗಬೇಕು ಎಂದಿರುವುದರಿಂದ ಧ್ಯಾನರೂಪವಾದ ಈ ವಿದ್ಯೆಯು ಕರ್ಮಕ್ಕೆ ಅಂಗವಾಗಲಿ ಎಂದು ಆಕ್ಷೇಪಿಸಬಹುದು. ಸೂ. ೪೨೫.

'ಕುರ್ವನ್ನೇವೇಹ' ಎಂಬ ಮಾತನ್ನು ತಮ್ಮಿಷ್ಟಬಂದ ಕರ್ಮಗಳ ಬಗ್ಗೆ ಎಂದಾಗಲಿ, ಉಪಾಸನೆಗೆ ಅಂಗವಲ್ಲದ ಶಾಸ್ತ್ರೀಯ ಕರ್ಮಗಳ ಬಗ್ಗೆ ಎಂದಾಗಲಿ ಇಟ್ಟುಕೊಳ್ಳಬಾರದು. ಹಾಗಿಟ್ಟುಕೊಳ್ಳಲು ಬಲವಾದ ಯಾವ ಕಾರಣವೂ ಇಲ್ಲ. 'ಈಶಾ ವಾಸ್ಯಮಿದಂ ಸರ್ವಂ' ಎಂಬ ಪರಮಾತ್ಮೋಪಾಸನರೂಪವಾದ ವಿದ್ಯೆಯ ಸಂದರ್ಭದಲ್ಲಿ ಈ ಮಾತು ಇರುವುದರಿಂದ ಉಪಾಸನೆಗೆ ಅಂಗವಾದ ಕರ್ಮಗಳ ಬಗ್ಗೆಯೇ ಈ ಮಾತನ್ನು ಇಟ್ಟುಕೊಳ್ಳಬೇಕು. ಆದುದರಿಂದ ಈ ವಿದ್ಯೆಗೆ ಕರ್ಮಗಳು ಅಂಗವಾಗುವುವು. ಕರ್ಮಗಳಿಗೆ ವಿದ್ಯೆ ಅಂಗವಲ್ಲ. ಸೂ. ೪೩೧.

'ಕುರ್ವನ್ನೇವೇಹ' ಎಂಬ ಈ ಮಾತಿಗೆ ವಿದ್ಯಾಂಗವಾದ ಕರ್ಮಗಳಲ್ಲೇ ಸದಾ ತೊಳಲಬೇಕೆಂದರ್ಥವಲ್ಲ. ಒಂದು ಪಕ್ಷ ಸರ್ವದಾ ಇಂತಹ ಕರ್ಮಗಳನ್ನೇ ಮಾಡುತ್ತಿದ್ದರೂ ವಿದ್ಯೆಯ ಬಲದಿಂದ ಇಂತಹ ಯಾವುದೇ ಲೌಕಿಕ, ವೈದಿಕ, ಕರ್ಮಗಳೂ ವಿದ್ಯೆಗೆ ವಿರುದ್ಧವಾದ ಫಲಗಳನ್ನು ಕೊಡಲಾರವು. ವಿದ್ಯೆಯ ಇಂತಹ ಮಹಿಮೆಯನ್ನು ತಿಳಿಸಲೆಂದೇ 'ಕುರ್ವನ್ನೇವ' ಎಂಬ ಮಾತು ಬಂದಿದೆ. ಇದು ಕರ್ಮಗಳ ವಿಧಿಯಲ್ಲ. ಅನುಮತಿ ಮಾತ್ರ. ಈ ವಿಷಯವನ್ನು ಇದೇ ಮಂತ್ರದ ಕೊನೆಯ ಭಾಗವಾದ 'ನ ಕರ್ಮ ಲಿಪ್ಯತೇ ನರೇ' ಎಂಬ ಮಾತು ದೃಢಪಡಿಸುತ್ತದೆ. ಸೂ. ೪೩೨.

## ೨೦

ಕರ್ಮಬಿಟ್ಟವರೂ ಇದ್ದಾರೆ, ಕರ್ಮಮಾಡುತ್ತಲೇ ಇರುವವರೂ ಇದ್ದಾರೆ. ಕರ್ಮಬಿಟ್ಟವರು ಬಿಟ್ಟ ಕರ್ಮ ವಿದ್ಯಾಂಗವಲ್ಲ. ಅದು ಸ್ವರ್ಗಾದಿ ಸುಖಗಳಿಗಾಗಿ ಮಾಡಬೇಕಾದ ಸ್ವತಂತ್ರಕರ್ಮ. ಕರ್ಮ ಮಾಡುವವರು ಮಾಡುತ್ತಿರುವ ಕರ್ಮ ವಿದ್ಯಾಂಗವಾದ ನಿಷ್ಕಾಮಕರ್ಮ. ವರ್ಣಾಶ್ರಮಧರ್ಮರೂಪವಾದ ಯಜ್ಞಾದಿ ಕರ್ಮಗಳೇ ಆಚರಿಸಬೇಕಾದವು. ಫಲಸಂಗಕರ್ತೃತ್ವಗಳ ಸಂಬಂಧವಿದ್ದಾಗ ಅವು ಸ್ವತಂತ್ರಕರ್ಮಗಳೆನಿಸುವುವು. ಫಲಸಂಗಕರ್ತೃತ್ವಗಳ ತ್ಯಾಗವಿದ್ದಾಗ ಅವುಗಳೇ ನಿಷ್ಕಾಮವೆನಿಸುವುವು. ಸೂ. ೪೨೭, ೪೫೦, ೪೫೧, ೪೫೨.

## ೨೧

ವಿದ್ಯೆ ಮತ್ತು ಕರ್ಮಗಳು ಒಬ್ಬ ವ್ಯಕ್ತಿಯಲ್ಲೇ ಒಗ್ಗೂಡಿರಬೇಕೆಂದು ತಿಳಿಸಿ, ಅವೆರಡರ ಸಹಭಾವವನ್ನು ಹೇಳಿರುವುದರಿಂದ,[1] ವಿದ್ಯೆಯು ಕರ್ಮಕ್ಕೆ ಅಂಗವಾಗಲಿ ಎಂದು ಆಕ್ಷೇಪಿಸಬಹುದು. ಸೂ. ೪೨೩.

ಆದರೆ ಕರ್ಮಗಳ ಕರ್ತೃವಾದ ಜೀವಾತ್ಮನಿಗಿಂತ ಉತ್ಕೃಷ್ಟನಾದ ಪರಮಾತ್ಮನು ವಿದ್ಯೆಗೆ ಫಲವೂ ಸಾಧನವೂ ಆಗಿರುವುದರಿಂದ ವಿದ್ಯೆಗೆ ಕರ್ಮವು ಅಧೀನವಾಗಿರಬಹುದೇ ಹೊರತು ಕರ್ಮಕ್ಕೆ ವಿದ್ಯೆಯು ಅಧೀನವಾಗಿರಲು ಸಾಧ್ಯವಿಲ್ಲ. ಇದು ಸೂತ್ರಕಾರರಾದ ಬಾದರಾಯಣರೆಂದು ಪ್ರಸಿದ್ಧರಾದ ವೇದವ್ಯಾಸರ ಸ್ವಂತ ಅಭಿಪ್ರಾಯ. ಸೂ. ೪೨೬.

'ಯದೇವ ವಿದ್ಯಯಾ' ಎಂಬ ಮಾತು ಉದ್ಗೀಥವಿದ್ಯೆಯನ್ನು ಮಾತ್ರ ಕರ್ಮಕ್ಕೆ ಅಂಗ ಎಂದು ತಿಳಿಸುವುದೇ ಹೊರತು ಎಲ್ಲ ಬ್ರಹ್ಮವಿದ್ಯೆಗಳನ್ನೂ ಅಲ್ಲ. ಸೂ. ೪೨೮.

---

1. 'ತಂ ವಿದ್ಯಾಕರ್ಮಣೀ ಸಮನ್ವಾರಭೇತೇ' ಬೃಹ. ಉ. ೬. ೪. ೨.

ವಿದ್ಯೆ ಮತ್ತು ಕರ್ಮಗಳ ಅಂಗಾಂಗಿಭಾವ ಇರುವಾಗ ಅಂಗವಾದ ಕರ್ಮಕ್ಕೆ ಫಲ ಮೃತ್ಯುತರಣ. ಅಂಗಿಯಾದ ವಿದ್ಯೆಗೆ ಫಲ ಅಮೃತತ್ತ್ವಪ್ರಾಪ್ತಿ ಎಂದು ಫಲಾಂಶದಲ್ಲಿ ವಿಭಾಗವನ್ನು ಗಮನಿಸಬೇಕು. ಜಮೀನು ಮತ್ತು ಒಂದು ರತ್ನ ಎರಡನ್ನೂ ಒಟ್ಟಿಗೆ ಇನ್ನೂರು ಹಣಕ್ಕೆ ಮಾರಿದಾಗ ಜಮೀನಿಗಾಗಿ ನೂರು ರತ್ನಕ್ಕಾಗಿ ನೂರು ಎಂಬ ವಿಭಾಗ ಲೋಕವ್ಯವಹಾರದಲ್ಲೂ ಇರುವುದನ್ನು ಕಾಣಬಹುದು. ಆದುದರಿಂದ ವಿದ್ಯೆ, ಕರ್ಮಗಳು ಒಬ್ಬ ವ್ಯಕ್ತಿಯಲ್ಲೇ ಒಗ್ಗೂಡಿದ್ದರೂ, ಕರ್ಮವು ಅಂಗ, ವಿದ್ಯೆಯು ಅಂಗಿ, ಎಂಬ ವಿಭಾಗ ಇದ್ದೇ ಇರುವುದು.
ಸೂ. ೪೨೯.

'ಧರ್ಮೇಣ ಪಾಪಂ ಅಪನುದತಿ' ಎಂಬ ವಚನವು ಅಂಗವಾದ ಕರ್ಮಾಚರಣೆಯಿಂದ ಅಂಗಿಯಾದ ವಿದ್ಯೆಗೆ ಇರುವ ವಿಘ್ನಗಳು ಪರಿಹಾರವಾಗುತ್ತವೆಯಾಗಿ, ಅತ್ಯವಶ್ಯ ಕರ್ಮವನ್ನು ಆಚರಿಸಬೇಕು, ಎಂದು ತಿಳಿಸುತ್ತದೆ. ಆದುದರಿಂದ ಕರ್ಮವು ವಿದ್ಯೆಗೆ ಸಹಾಯಕ ಅಂಗವೇ ಹೊರತು ಪ್ರಧಾನವಲ್ಲ. ಸೂ. ೪೩೩.

ಊರ್ಧ್ವರೇತಸ್ಕರಾದ ಸನಕಸನಂದಾದಿಗಳಂತಹವರು ಕರ್ಮಗಳನ್ನು ಮಾಡದೆಯೇ ಉಪಾಸನನಿಷ್ಠರಾಗಿರುವುದರಿಂದ ಕರ್ಮವನ್ನು ಪ್ರಧಾನ (ಅಂಗಿ) ಎಂದು ಇಟ್ಟುಕೊಳ್ಳಲಾಗದು. ಉಪಾಸನವಿದ್ಯೆಯೇ ಪ್ರಧಾನ.

(ಯಜ್ಞಾದಿಗಳನ್ನು ಅಂಗವಾಗಿ ಆಚರಿಸದೆಯೇ ಜಪ, ತಪ, ಉಪವಾಸಾದಿಗಳನ್ನು ಅಂಗವಾಗಿ ಆಚರಿಸುತ್ತಾ ಉಪಾಸನೆಮಾಡಬಹುದು. ಯಜ್ಞಾದಿಗಳನ್ನು ಆಚರಿಸಬೇಕಾದವರು ಮಾತ್ರ ಅವುಗಳನ್ನೇ ಆಚರಿಸತಕ್ಕದ್ದು.)
ಸೂ. ೪೩೩, ೪೩೭, ೪೩೪, ೪೩೫, ೪೩೬.

(ಇನ್ನೂ ಕೆಲವು ವಿಷಯಗಳು ಈ ವೇದಾನ್ತಸಾರದಲ್ಲಿದ್ದರೂ ಅವೆಲ್ಲ ಪ್ರಾಯಶಃ ಶ್ರೀಭಾಷ್ಯ, ದೀಪ ಗ್ರಂಥಗಳ ಪರಿಶಿಷ್ಟದಲ್ಲಿ ಬಂದಿವೆಯಾಗಿ ಮತ್ತೆ ಅವುಗಳನ್ನು ಉಲ್ಲೇಖಿಸುತ್ತಿಲ್ಲ—ಸಂ.)

# 6. ಗದ್ಯತ್ರಯ[1]

## ೧

ಪಾರಮಾರ್ಥಿಕವಾಗಿ ಮೊದಲಿಂದ ಕೊನೆಯವರೆಗೂ ಪರಮಾತ್ಮನ ಪರಿಪೂರ್ಣಾನುಭವರೂಪವಾದ ಧ್ಯಾನದಿಂದ ಅವನಲ್ಲೇ ಅತ್ಯುತ್ಕೃಷ್ಟವಾದ ಪ್ರೀತಿಯನ್ನು ಬೆಳೆಸಿಕೊಂಡು, ಅದೇ ಪ್ರೀತಿಯಿಂದ ಎಲ್ಲ ಅವಸ್ಥೆಗಳಲ್ಲೂ ನಾವು ಆ ಪರಮಾತ್ಮನ ದಾಸಾನುದಾಸರಾಗಿದ್ದು ಅವನ ಸೇವೆ ಮಾಡಲೋಸುಗ ಅವನ ಪಾದಾರವಿಂದಗಳಲ್ಲಿ ಸ್ಥಿರವಾಗಿ ಶರಣಾಗತರಾಗಬೇಕು.[2] ಪರಮಾತ್ಮನು ನಮ್ಮ ಹಿಂದಿನ ತಪ್ಪುಗಳೆಲ್ಲವನ್ನೂ ಕ್ಷಮಿಸಿ, ನಮ್ಮ ಪ್ರಕೃತಿ ಸಹಜವಾದ ಅಜ್ಞಾನಾದಿಗಳನ್ನು ಪರಿಹರಿಸುವನು.[3]

---

1. ಶರಣಾಗತಿಗದ್ಯ, ಶ್ರೀರಂಗಗದ್ಯ, ವೈಕುಂಠಗದ್ಯ, ಈ ಮೂರು ಸೇರಿ 'ಗದ್ಯತ್ರಯ' ಎನಿಸಿದೆ.

2. 'ಪಾರಮಾರ್ಥಿಕ......' 'ಅತ್ರದ್ವಯಂ......' 'ದಾಸಭೂತಃ ಶರಣಾಗತೋಽಸ್ಮಿ'. ಈಶಾ. ೭, ೧, ೧೮. ಗಮನಿಸಿ.

3. ಗದ್ಯತ್ರಯ. 'ಕ್ಷಮಸ್ವ', 'ತಾರಯ'. ಈಶಾ. ೧೫ 'ಪೂಷನ್', 'ಅಪಾವೃಣು' ೧೮ 'ಯುಯೋಧಿ' 'ನಯ' ಗಮನಿಸಿ.

ಗೀತೆಯ ಮೂರು ಶ್ಲೋಕಗಳಲ್ಲಿ ಜ್ಞಾನಿಯ ಲಕ್ಷಣವನ್ನೂ,[1] ಮೂರುಸ್ಥಳಗಳಲ್ಲಿ ಪರಭಕ್ತಿಯ ಲಕ್ಷಣವನ್ನೂ[2] ತಿಳಿಸಲಾಗಿದೆ. ಶರಣಾಗತನು ಅಂತಹ ಜ್ಞಾನಿಯಾಗಿರಬೇಕು ಮತ್ತು ಪರಭಕ್ತಿ ಅವನಿಗಿರಬೇಕು. ಪರಭಕ್ತಿ ಪರಜ್ಞಾನ ಪರಮಭಕ್ತಿ ಎಂಬ ಸ್ವಾಭಾವಿಕವಾದ ಭಕ್ತಿಯ ಸ್ತರಗಳಲ್ಲಿ ಶರಣಾಗತನು ಪರಮಾತ್ಮನನ್ನು ಸಾಕ್ಷಾತ್ಕರಿಸಿ, ಅವನ ಸೇವೆಯಲ್ಲಿ ನಿರತನಾಗಿರಬೇಕು.[3] ಈ ಸೇವೆ, ಸಾಕ್ಷಾತ್ಕಾರಾದಿಗಳಿಗಿರುವ ವಿಘ್ನವೆಲ್ಲವನ್ನೂ ಪರಮಾತ್ಮನು ನಮ್ಮ ಮೇಲಿನ ಕರುಣೆಯಿಂದ ತಾನಾಗಿಯೇ ನಿವಾರಿಸುವನು., ಮತ್ತು ಶರಣಾಗತನಿಗೆ ಕಷ್ಟವಿಲ್ಲದೆ ದೇಹವಿಯೋಗ ಆಗುವಂತೆಯೂ, ಪ್ರಕೃತಿಮಂಡಲವನ್ನು ದಾಟಿ ತನ್ನ ಶಾಶ್ವತಸೇವೆಯಲ್ಲಿ ನಿರತನಾಗಿರುವಂತೆಯೂ, ಅನುಗೊಳಿಸುವನು.[4] ಈ ಬಗ್ಗೆ ಪರಮಾತ್ಮನ ಈ ಪ್ರತಿಜ್ಞಾವಚನಗಳು ನಮಗೆ ಧೈರ್ಯ ಕೊಟ್ಟಿವೆ.[5]

"ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ.
ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ."

ರಾಮಾಯಣ, ಯುದ್ಧಕಾಂಡ. 18. 33.

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ.
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ. ಗೀ. ೧೮. ೬೬.

ಶರಣಾಗತಿಗದ್ಯದ ಸಾರ.

---

1. ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ.
ಪ್ರಿಯೋ ಹಿ ಜ್ಞಾನಿನೋತ್ಯರ್ಥಮಹಂ ಸ ಚ ಮಮ ಪ್ರಿಯಃ.
ಉದಾರಾಸ್ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಂ.
ಆಸ್ಥಿತಸ್ಸಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ.
ಬಹೂನಾಂ ಜನ್ಮನಾಮಸ್ತೇ ಜ್ಞಾನವಾನ್ಮಾಂ ಪ್ರಪದ್ಯತೇ.
ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ. ಗೀತೆ. ೭. ೧೭, ೧೮, ೧೯.

2. ಪುರುಷಸ್ಸಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ. ಗೀತೆ. ೮ ೨೦.
ಭಕ್ತ್ಯಾ ತ್ವನನ್ಯಯಾ ಶಕ್ಯಃ. ಗೀತೆ. ೧೧. ೫೪.
ಮದ್ಭಕ್ತಿಂ ಲಭತೇ ಪರಾಂ. ಗೀತೆ. ೧೮. ೫೪.

3. ಈಶಾ. ೧. 'ಈಶಾವಾಸ್ಯಮಿದಂ ಸರ್ವಂ', 'ಭುಂಜೀಥಾಃ' ಆದಮೇಲೆ ಈಶಾ. ೨. ಕುರ್ವನ್ನೇವೇಹ 'ಕರ್ಮಾಣಿ' ಇರುವುದನ್ನೂ ಇವುಗಳ ಭಾಷ್ಯಗಳನ್ನೂ ಗಮನಿಸಿ.

4. ಈಶಾ. ೧೭, ೧೮. ಮಂತ್ರಗಳನ್ನೂ ಭಾಷ್ಯಗಳನ್ನೂ ಗಮನಿಸಿ.

5. ಈ ವಚನಗಳನ್ನು ಈಶಾ. ೧೭ ಭಾಷ್ಯದಲ್ಲಿರುವ ವರಾಹಚರಮಶ್ಲೋಕಗಳೊಡನೆ ತುಲನಾತ್ಮಕವಾಗಿ ಅಧ್ಯಯನ ಮಾಡಿ. ಶರಣಾಗತರನ್ನು ಪರಮಾತ್ಮನು ಕಾಪಾಡುವನೆಂಬುದೇ ಇವುಗಳ ಸಾರಾರ್ಥ. ಈಶಾ. ೧೮. (ಪುಟ ೧೭೮)ರ 'ಅಸ್ಮತ್' ಎಂಬುದರ ಅರ್ಥ 'ಸರ್ವಭೂತೇಭ್ಯಃ' ಎಂಬುದರಲ್ಲಿರುವುದನ್ನು ಗಮನಿಸಿ. "ಯುಯೋಧ್ಯಸ್ಮಜ್ಜುಹುರಾಣಮೇನಃ" ಎಂಬ ಪ್ರಾರ್ಥನೆಗೆ ಪ್ರತ್ಯುತ್ತರವಾಗಿ 'ಸರ್ವಪಾಪೇಭ್ಯಃ ಮೋಕ್ಷಯಿಷ್ಯಾಮಿ ಮಾ ಶುಚಃ' ಎಂಬ ವಚನವಿರುವುದನ್ನೂ ಗಮನಿಸಿ.

೨

ನಮಗೆ ಪರಮಾತ್ಮನ ಸಾಕ್ಷಾತ್ಕಾರವಾಗಿ, ಅವನಲ್ಲಿ ನಮ್ಮ ಪ್ರೀತಿಯು ಉಕ್ಕಿ ಹರಿಯುವಂತಾಗಿ, ನಾವು ದಾಸಾನುದಾಸರಾಗಿ ಅವನ ಸೇವೆಗೆಯ್ಯುವ ಭಾಗ್ಯ ನಮಗೆ ಅವನ ದಯೆಯಿಂದಲೇ ಸಿಗಬೇಕು. ಇದಕ್ಕೆ ಬೇರೆ ಮಾರ್ಗವಿಲ್ಲ. ಇದಕ್ಕಾಗಿ ಅವನನ್ನೇ ಬೇಡೋಣ. ಈ ಬೇಡಿಕೆಯ ಮಾತನ್ನಾಡಿದರೂ ಸಾಕು, ಪರಮಾತ್ಮನು ಅದರಂತೆ ನಡೆಸಿಕೊಡುವನು.[1]

ಶ್ರೀರಂಗಗದ್ಯದ ಸಾರ.

೩

ನಿರ್ದೋಷನೂ ಸಮಸ್ತಕಲ್ಯಾಣಗುಣಾಕರನೂ ದಿವ್ಯಲೋಕದಲ್ಲಿ ದಿವ್ಯರೂಪದಿಂದ ಇರುವವನೂ ಸಮಸ್ತ ವಿಶ್ವವನ್ನೂ ವ್ಯಾಪಿಸಿ ಆಳುತ್ತಿರುವವನೂ ಆದ ಪರಮಾತ್ಮನನ್ನು ಶರಣಾಗತನು ಪ್ರತಿದಿನವೂ ಆತ್ಮೋಜ್ಜೀವನಕ್ಕಾಗಿ ಧ್ಯಾನಿಸುತ್ತ, ಅವನಲ್ಲಿ ತನ್ನ ಸೇವಾಭಾವವನ್ನೇ ತೋರುತ್ತ, ಕೈಮುಗಿದುಕೊಂಡು ಅವನ ಅನುಭವಾಮೃತದಲ್ಲಿ ಮಗ್ನನಾಗಿ ಆನಂದದಿಂದಿರಬೇಕು.[2]

ವೈಕುಂಠಗದ್ಯದ ಸಾರ..

## 7. ನಿತ್ಯಗ್ರಂಥ[3]

ಪರಮಾತ್ಮನ ಸೇವೆಯೊಂದರಲ್ಲೇ ಉತ್ಕಟವಾದ ಅಭಿರುಚಿಯುಳ್ಳಿಟ್ಟು,[4] ಅವನನ್ನೇ ಪಡೆಯುವ ಏಕೈಕವಾದ ದೃಢನಿಶ್ಚಯದಿಂದ, ತಾನು ಎಂದೆಂದಿಗೂ ಪರಮಾತ್ಮನ ದಾಸಾನುದಾಸನೆಂಬುದನ್ನೂ, ತನ್ನಿಂದ ಪರಮಾತ್ಮನು ಸೇವೆಮಾಡಿಸಿಕೊಳ್ಳುವನೆಂಬುದನ್ನೂ ಭಾವಿಸಿ, ಪೂಜೆಗೆ ಪೂರ್ವಸಿದ್ಧತೆಯಾಗಿ ಸ್ನಾನಾದಿ ಕ್ರಿಯೆಗಳನ್ನು ನೆರವೇರಿಸಿ,[5] ಪರಮಾತ್ಮನಾದ ನಾರಾಯಣನು ಪರವೈಕುಂಠಲೋಕದಲ್ಲಿ ಲಕ್ಷ್ಮಿ ಮುಂತಾದ ದೇವಿಯರೊಡನೆ ಮತ್ತು ಪರಿಜನರೊಡನೆ ದಿವ್ಯವಾದ ಆಯುಧ ಆಭರಣಾದಿಗಳನ್ನು ಧರಿಸಿದವನಾಗಿ ದಿವ್ಯಾಸ್ಥಾನದಲ್ಲಿ ಇರುತ್ತ, ಸಮಸ್ತವಾದ ಜಗತ್ತಿನ ಸ್ವರೂಪ, ಸ್ಥಿತಿ, ಪ್ರವೃತ್ತಿಗಳನ್ನು ತನ್ನ ಆಣತಿಯಂತೆ ನಡೆಸುತ್ತ ನಿರ್ದೋಷನಾಗಿಯೂ ಸಮಸ್ತಕಲ್ಯಾಣಗುಣಗಣಪರಿಪೂರ್ಣನಾಗಿಯೂ ಇರುವುದನ್ನು ಧ್ಯಾನಿಸಿ,[6] ನಂತರ ಅರ್ಚನೆ ಮುಂತಾದ ರೀತಿಯಲ್ಲಿ ಪೂಜಿಸಿ, ಕೊನೆಯಲ್ಲಿ ಸಾಷ್ಟಾಂಗವಾಗಿ ನಮಸ್ಕರಿಸಿ[7] ಪರಮಾತ್ಮನಿಗೆ ಶರಣಾಗತರಾಗಬೇಕು. ಈ ಶರಣಾಗತಿಯ ರೀತಿಯನ್ನು ಹಿಂದೆಯೇ[8] ವಿವರಿಸಲಾಗಿದೆ.

ನಿತ್ಯಗ್ರಂಥದ ಸಾರ.

---

1. ಈಶಾ. ೧೮ 'ಅಗ್ನೇ', 'ಸುಪಥಾ' 'ರಾಯೇ', 'ನಮಉಕ್ತಿಂ' ಗಮನಿಸಿ.
2. ಈಶಾ. ೧, ೨, ೭, ೪, ೧೬, ೧೮ ಗಮನಿಸಿ.
3. ಪರಮೈಕಾಂತಿಗಳಾದ ಉಪಾಸಕರು ಪ್ರತಿನಿತ್ಯವೂ ಮಾಡಬೇಕಾದ ದೇವರ ಪೂಜೆಯ ವಿಧಾನವನ್ನು ತಿಳಿಸುವ ಗ್ರಂಥ.
4. 'ಫಲರುಚಿತಾಮುಪೈತಿ ಭಕ್ತಿಃ' ತಿರುಮಲಾರ್ಯರ ಲಕ್ಷ್ಮೀನೃಸಿಂಹಸ್ತವ. ಶ್ಲೋ. ೨೦.
5. ಈಶಾ. ೨ 'ಕರ್ಮಾಣಿ' ಗಮನಿಸಿ.
6. ಈಶಾ. ೧೬ 'ಕಲ್ಯಾಣತಮಂ ರೂಪಂ ಪಶ್ಯಾಮಿ' ಗಮನಿಸಿ.
7. ಈಶಾ. ೧೮ 'ನಮಉಕ್ತಿಂ ವಿಧೇಮ' ಗಮನಿಸಿ.
8. ಶರಣಾಗತಿಗದ್ಯದಲ್ಲಿ.

# ಯಾಮುನಾಚಾರ್ಯರ[1] ಗ್ರಂಥಗಳಲ್ಲಿ ಉಪಯುಕ್ತ ವಿಚಾರಗಳು

## 1. ಸಿದ್ಧಿತ್ರಯ

೧

ಕರ್ಮಜ್ಞಾನಗಳ ಸಹಕಾರದಿಂದ ಪರಿಶುದ್ಧವಾದ ಮನಸ್ಸಿನಿಂದ ಕೂಡಿ ಅತ್ಯಂತ ಪ್ರೀತಿರೂಪವಾದ ಅನನ್ಯಭಕ್ತಿಯಿಂದ ಭಜಿಸುವವರಿಗೆ ಮಾತ್ರ ಪರಮಾತ್ಮನ ಅನುಭವವಾಗುವುದು.[2]

ಆತ್ಮಸಿದ್ಧಿ. ಉಪೋದ್ಘಾತ.

೨

ವಿವಿಧ ಮತದರ್ಶನಗಳ ಅಧ್ಯಯನದಿಂದ ಜೀವಾತ್ಮ,ಪರಮಾತ್ಮಗಳ ಬಗ್ಗೆ ಮತ್ತಷ್ಟು ಸಂದೇಹಗಳೇ ಹೆಚ್ಚುವುದರಿಂದ, ಸಂದೇಹ ಪರಿಹಾರ ಮಾಡಿ ನಿರ್ಣಯಿಸಲೆಂದೇ ಮಹರ್ಷಿ ವ್ಯಾಸರು ಬ್ರಹ್ಮಸೂತ್ರಗಳನ್ನು ಮಾಡಿ, ವೇದಾಂತಶಾಸ್ತ್ರವನ್ನು ದೃಢಗೊಳಿಸಿರುವರು. ದ್ರಮಿಡಾಚಾರ್ಯರು ಬಹಳ ಆಳವಾಗಿಯೂ, ಸಂಕ್ಷಿಪ್ತವಾಗಿಯೂ, ಸೂತ್ರಾರ್ಥಗಳನ್ನು ವಿವರಿಸಿ ಭಾಷ್ಯವನ್ನು ಬರೆದಿರುವರು. ಶ್ರೀವತ್ಸಾಂಕರೆಂಬ ಪ್ರಾಚೀನ ಆಚಾರ್ಯರು ವೈದಿಕ ವಾಙ್ಮಯನಿಯಮಗಳನ್ನು ಅನುಸರಿಸಿ ಸೂತ್ರಭಾಷ್ಯಗಳನ್ನು ವಿಸ್ತಾರವಾಗಿ ವ್ಯಾಖ್ಯಾನಿಸಿರುವರು. ಇದಲ್ಲದೆ ಆಚಾರ್ಯರ ಪರಿಶುದ್ಧಗ್ರಂಥಗಳೂ[3] ಈ ವಿಷಯಗಳಲ್ಲಿ ನಿರ್ಣಾಯಕಗಳಾಗಿವೆ. ಟಂಕ, ಭರ್ತೃಪ್ರಪಂಚ, ಭರ್ತೃಮಿತ್ರ, ಭರ್ತೃಹರಿ, ಬ್ರಹ್ಮದತ್ತ, ಶಂಕರ, ಶ್ರೀವತ್ಸಾಂಕ, ಭಾಸ್ಕರ ಮುಂತಾದವರ[4] ವಿವಿಧ ವ್ಯಾಖ್ಯಾನಗಳಿಂದ

---

1. ಭಗವದ್ರಾಮಾನುಜರ ಪರಮಾಚಾರ್ಯರು ಈ ಯಾಮುನಮುನಿಗಳು. ಕವಿ ಮತ್ತು ದಾರ್ಶನಿಕರಾಗಿ ಅಪಾರ ಪಾಂಡಿತ್ಯ ಪ್ರತಿಭೆಗಳ ಆಗರವಾಗಿದ್ದ ಇವರು ಚೋಳ ಸಾಮ್ರಾಜ್ಯದ ರಾಜತ್ವವನ್ನೂ ವಹಿಸಿ ಆಡಳಿತ ನಿರ್ವಹಿಸಿದವರು. ಪ್ರಸಿದ್ಧ ಯೋಗಿಗಳಾಗಿದ್ದ ನಾಥಮುನಿಗಳ ಪ್ರಶಿಷ್ಯರಾದ ರಾಮಮಿಶ್ರಾಚಾರ್ಯರ ಉಪದೇಶದಿಂದ ವೇದಾಂತಸಾಮ್ರಾಜ್ಯದಲ್ಲೂ ಪಟ್ಟಾಭಿಷಿಕ್ತರಾದ ಇವರ ವೈದುಷ್ಯ ಅದ್ಭುತವಾದುದು. ಇವರ ಗ್ರಂಥಗಳು ಭಕ್ತಿಮಾರ್ಗದ ದಾರ್ಶನಿಕ ನಿರ್ಧಾರಗಳಿಗೆ ಬಹುಮುಖವಾದ ಪ್ರಾಚೀನ ಆಧಾರಗಳಾಗಿವೆ. ಇವರ ಕಾಲ ಕ್ರಿ. ಶ. ೧೧ನೆಯ ಶತಮಾನ. ದೇಶ ದ್ರಾವಿಡ. ಇತರ ವಿವರಗಳಿಗೆ ಗ್ರಂಥಕಾರರ ಪಟ್ಟಿ ಪರಿಶಿಷ್ಟ ನೋಡಿ.

2. ಈ ವಿಷಯ ಈಶಾವಾಸ್ಯದ ಸಾರವೆಂಬುದನ್ನು ಗಮನಿಸಿ. ಇದರ ವಿವರಣೆ ವೇದಾರ್ಥಸಂಗ್ರಹದಲ್ಲಿದೆ.

ಈಶಾ. ಪುಟ. ೨೩೨ ನೋಡಿ.

3. ಆಚಾರ್ಯರೆಂದರೆ ಇಲ್ಲಿ ಯಾಮುನಾಚಾರ್ಯರ ಸಿದ್ಧಾಂತಪದ್ಧತಿಗೆ ಮೂಲಪುರುಷರೆನಿಸಿ "ಆದ್ಯಸ್ಯ ನಃ ಕುಲಪತೇಃ" ಎಂದು ಪ್ರಸಿದ್ಧರಾದ ಪರಾಂಕುಶಮುನಿ ಮತ್ತು ಇವರ ಸಿದ್ಧಾಂತದೊಡನೆ ಒಮ್ಮತವಿರುವ ಇತರ ಆಚಾರ್ಯರು ಎನ್ನಬಹುದು. ಇಂತಹವರಲ್ಲಿ ಬೋಧಾಯನರು ಕಾಣ್ವಶಾಖಾಪ್ರವರ್ತಕರಾದ ಕಣ್ವರ ತಂದೆ ಅಥವಾ ಕಣ್ವರ ಮಗನಿರಬಹುದು. ಇವರು ಉಭಯಮೀಮಾಂಸಾಸೂತ್ರವೃತ್ತಿಕಾರರೆಂದು ಪ್ರಸಿದ್ಧರಾದವರು. ಇವರ ವೃತ್ತಿಗ್ರಂಥವನ್ನು ಯಾಮುನಾಚಾರ್ಯರು ನೋಡದಿದ್ದುದರಿಂದ ಇವರ ಹೆಸರನ್ನು ಇಲ್ಲಿ ಪ್ರಕಟಿಸಿಲ್ಲವೆಂದು ತೋರುವುದು.
ಶುಕ್ಲಯಜುರ್ವೇದ ವಿ. ಎಸ್. ಸಾತವೇಳಕರ್ ಸಂಪಾದಿತ, ಉಪೋದ್ಘಾತ ನೋಡಿ.

4. ಟಂಕ-ಬ್ರಹ್ಮನಂದಿಮುನಿ. ಕಾಲಕ್ರಮದಲ್ಲಿ ಇವರಿಂದೀಚಿನ ಅನೇಕ ಭಾಷ್ಯಕಾರರನ್ನು ಇಲ್ಲಿ ಮುಂದೆ ತಿಳಿಸಲಾಗಿದೆ ಎಂದು ನಮಗೆ ತೋರುವುದು. ಇವರಲ್ಲಿ ಶಂಕರಾಚಾರ್ಯರು ಮತ್ತು ಅವರಿಗಿಂತ ಹಿಂದಿನ ಭರ್ತೃಪ್ರಪಂಚ ಇಬ್ಬರೂ ಈಶಾವಾಸ್ಯ, ಬೃಹದಾರಣ್ಯಕಗಳಿಗೆ ನೇರವಾಗಿ ಭಾಷ್ಯ ಬರೆದಿರುವರೆಂಬುದೂ, ಈ ಬ್ರಹ್ಮಸೂತ್ರದ ವಿವಿಧ ಭಾಷ್ಯವಿವರಣೆಗಳನ್ನೂ ಈಶಾವಾಸ್ಯದ ಆಳವಾದ ಅಧ್ಯಯನಕ್ಕೆ ಉಪಯೋಗಿಸಿಕೊಳ್ಳಬಹುದೆಂಬುದೂ ಗಮನಾರ್ಹ.

ಈಗಿನವರು ವೇದಾಂತಾರ್ಥಗಳನ್ನು ನಿರ್ಣಯಿಸಲು ಸಾಧ್ಯವಿಲ್ಲದೆ ವಿರುದ್ಧವಾದ ವಾದಗಳನ್ನು ಮಂಡಿಸಿ, ತೋಚಿದಂತೆ ನಿರ್ಣಯಿಸುತ್ತಿರುವರು. ಇವರೆಲ್ಲರ ವಾದಗಳನ್ನು ವಿಮರ್ಶಿಸಿ ವೇದಾಂತದ ಯುಕ್ತವಾದ ನಿರ್ಣಯಕ್ಕಾಗಿ ಈ 'ಸಿದ್ಧಿತ್ರಯ' ಗ್ರಂಥ ಬರೆಯಲಾಗುತ್ತಿದೆ. ಆತ್ಮಸಿದ್ಧಿ. ಉಪೋದ್ಘಾತ.

## 2. ಆಗಮಪ್ರಾಮಾಣ್ಯ

### ೧

ಸಕಲಜಗತ್ಕಾರಣನಾದ ಪರಮಾತ್ಮನೇ ವಾಸುದೇವ ಎಂಬ ಬಗ್ಗೆ ಯಾವ ವೈದಿಕರಿಗೂ ಭಿನ್ನಾಭಿಪ್ರಾಯವಿಲ್ಲ.[1] ವಾಸುದೇವನೇ ವಿಷ್ಣು. ಅವನೇ ನಾರಾಯಣ. ಈ ವಿಷಯದ ವಿಸ್ತೃತ ವಿಮರ್ಶೆಯನ್ನು ನಮ್ಮ 'ಮಹಾಪುರುಷನಿರ್ಣಯ' ಗ್ರಂಥದಲ್ಲಿ ಚೆನ್ನಾಗಿ ಮಾಡಿರುವೆವು. ಅಲ್ಲಿ ಗಮನಿಸಿ.[2] ಆ. ಪ್ರಾ. ಪುಟ. ೮೪.೯೦.

ಓರಿಯಂಟಲ್ ಇನ್‌ಸ್ಟಿಟ್ಯೂಟ್, ಬರೋಡಾ ನಂ. ೧೬೦.

### ೨

ವಾಸುದೇವನೇ ಶಾಂಡಿಲ್ಯ ನಾರದಾದಿಮಹರ್ಷಿಗಳಿಗೆ ವೇದಾನ್ತಸಾರವಾದ ಪಾಂಚರಾತ್ರಾಗಮವನ್ನು ಉಪದೇಶಿಸಿದ. ಈ ಮೂಲಕ ವೇದಾನ್ತದ ಉಪಾಸನಮಾರ್ಗವನ್ನು ಸುಲಭಗೊಳಿಸಿದ. ವ್ಯಾಸರೂಪಿಯಾಗಿ ಅವತರಿಸಿದ ಅವನು ನಾಲ್ಕುವೇದಗಳ ಸಾರವಾದ ಪಾಂಚರಾತ್ರವು ವೇದಾರ್ಥೋಪಬೃಂಹಣಪ್ರಮಾಣಾಧಾರವೆಂದು ಮಹಾಭಾರತದಲ್ಲಿ ನಿರ್ಣಯಿಸಿದ. ಭಕ್ತಿಯೆಂಬ ಉಪಾಸನೆಗೆ ಯಜ್ಞಾದಿ ಕರ್ಮಗಳು ಹೇಗೆ ಅಂಗವೋ ಹಾಗೆ ವೇದಗಳಿಗೆ ಪಾಂಚರಾತ್ರವೂ ಅಂಗ ಎಂದು ವರಾಹಪುರಾಣದಲ್ಲೂ ಸ್ಪಷ್ಟ ವಚನವಿದೆ.[3] ಪರಸ್ಪರ ಪೋಷಕಗಳಾಗಿರುವ ಈ ಗ್ರಂಥಗಳಲ್ಲಿ ಯಾವುದನ್ನೂ ಬಿಡಲಾಗದು.[4]

ಆ. ಪ್ರಾ. ಪುಟ. ೯೧,೧೦೨,೧೦೩,೧೩೦,೧೩೨,೧೩೩.

### ೩

ಪಾಂಚರಾತ್ರಾನುಸಾರಿಗಳಾದ ಭಾಗವತಮತದವರಿಗೆ ಸಮಸ್ತ ಕರ್ಮಸಂಸ್ಕಾರಾದಿಗಳಿಗೂ ಪಕಾಯನಶಾಖೆ

---

1. ಈಶಾವಾಸ್ಯದ ಈಶನು ವಾಸುದೇವನೇ ಎಂಬುದಕ್ಕೆ ಸೂಚಕವಾಗಿ ವೇದಾಂತಾಚಾರ್ಯರ ಭಾಷ್ಯದ ಮಂಗಳಪದ್ಯ ಗಮನಿಸಿ. ಗೀತೆಯಲ್ಲಿ 'ಈಶ್ವರ' ಮುಂತಾದ ಶಬ್ದ ಬಂದಾಗಲೆಲ್ಲ ಪ್ರಾಯಶಃ ಶಂಕರಭಗವತ್ಪಾದರು 'ವಾಸುದೇವ' ಎಂದು ವಿವರಿಸಿರುವುದನ್ನು ಗಮನಿಸಿ.
2. 'ಮಹಾಪುರುಷನಿರ್ಣಯ' ಗ್ರಂಥ ಈಗ ನಮಗೆ ಸಿಕ್ಕಿಲ್ಲ.
3. ವೇದೇನ ಪಂಚರಾತ್ರೇಣ ಭಕ್ತ್ಯಾ ಯಜ್ಞೇನ ಚ ದ್ವಿಜ.
ಪ್ರಾಪ್ಯೋऽಹಂ ನಾನ್ಯಥಾ ಪ್ರಾಪ್ಯೋ ವರ್ಷಲಕ್ಷಶತೈರಪಿ. ವರಾಹಪುರಾಣ. ಆ. ಪ್ರಾ. ಪುಟ. ೧೩೨.
4. ಭಾರ. ಮೋಕ್ಷ. ೩೪೦, ೧೦೦.

ಮತ್ತು ವಾಜಸನೇಯಶಾಖೆಯೇ ಮೂಲಾಧಾರ.[1] ಸಂಧ್ಯಾವಂದನ, ಅಷ್ಟಕಶ್ರಾದ್ಧಾದಿ ಕರ್ಮಗಳಿಗೆ ಶಿಷ್ಟಾಚಾರವೇ ಹೇಗೆ ಪ್ರಮಾಣಾಧಾರವೋ ಹಾಗೆ ಆಗಮೋಕ್ತ ದೇವಾಲಯ ಮೂರ್ತಿಪೂಜಾದಿಗಳಿಗೂ ಪರಮವೈದಿಕ ಶಿಷ್ಟಾಚಾರವೇ ಪ್ರಮಾಣಾಧಾರ. ವೈದಿಕರಲ್ಲಿ ಪರಮಪುರುಷನಾದ ಭಗವಂತನೊಬ್ಬನನ್ನೇ ಅನನ್ಯಭಕ್ತಿಯಿಂದ ಉಪಾಸಿಸಿ ಆರಾಧಿಸುವವರಿಗೆ ಭಾಗವತರೆಂದೂ ಸಾತ್ತ್ವತರೆಂದೂ ರೂಢಿಯ ಹೆಸರು. ಹೀಗೆ ಉಪಾಸಕ, ಭಕ್ತ, ಭಾಗವತ ಎಂಬ ಶಬ್ದಗಳು ಸಮಾನಾರ್ಥಗಳಾಗಿವೆ.[2] ಭಗವದಾರಾಧನ ಕ್ರಮವನ್ನು ತಿಳಿಸುವ ಏಕಾಯನವೇದ ಶಾಖೆಗಳು ಅಪೌರುಷೇಯ ಎಂಬ ಬಗ್ಗೆ ಕಾಶ್ಮೀರದೇಶದ 'ಆಗಮಪ್ರಾಮಾಣ್ಯ' ಎಂಬ ಪ್ರಾಚೀನ ಗ್ರಂಥದಲ್ಲಿರುವುದು ಎಲ್ಲ ಪಂಡಿತರಿಗೂ ತಿಳಿದೇ ಇರುವುದರಿಂದ ಅದರ ಬಗ್ಗೆ ನಮ್ಮ ಈ ಹೊಸ ಆಗಮಪ್ರಾಮಾಣ್ಯಗ್ರಂಥದಲ್ಲಿ ಮತ್ತೆ ಹೇಳಬೇಕಿಲ್ಲ.[3] ಆ. ಪ್ರಾ. ಪುಟ. ೧೪೦ ರಿಂದ ೧೭೦.

## 3. ಗೀತಾರ್ಥಸಂಗ್ರಹ

### ೧

ಜೀವಾತ್ಮನು ವರ್ಣಾಶ್ರಮಧರ್ಮಗಳನ್ನು ಬಿಡದೆ ಆಚರಿಸುತ್ತಾ ತಾನು ಪರಮಾತ್ಮನ ದಾಸಾನುದಾಸನೆಂಬ ತತ್ತ್ವಜ್ಞಾನವನ್ನು ಪಡೆದು ಪರಮಾತ್ಮವಿರೋಧಿಯಾದ ವಿಷಯಗಳಲ್ಲಿ ವೈರಾಗ್ಯ ಹೊಂದಿದ್ದು ಭಕ್ತಿರೂಪವಾದ ಉಪಾಸನೆಯನ್ನು ಸಾಧಿಸಬೇಕು. ಈ ಭಕ್ತಿಯೋಗದ ಮೂಲಕ ಮಾತ್ರ ಪರಮಾತ್ಮನನ್ನು ಕಾಣಲು ಸಾಧ್ಯ. ಇದಿಷ್ಟೂ ಗೀತೆಯ ಮುಖ್ಯವಾದ ಸಾರ.[4] ಗೀ. ಸಂ. ೧.

---

1. ಸಮಸ್ತ ವೇದಗಳಿಗೂ ಮೂಲವಾದ ಪರಿಶುದ್ಧ ವೇದಭಾಗಕ್ಕೆ ಮೂಲವೇದವೆಂದೂ ಏಕಾಯನವೇದವೆಂದೂ ಹೆಸರು. ಈ ವೇದದ ಕೆಲವು ವಚನಗಳು ಮತ್ತು ಮಂತ್ರಗಳು ಈಗ ಉಪಲಬ್ಧವಿವೆ. ಈ ವೇದದ ಏಕಾಂಶವನ್ನೇ ಸೂರ್ಯನಿಂದ ಯಾಜ್ಞವಲ್ಕ್ಯರು ಪಡೆದುದು. ಆದುದರಿಂದ ಅವರ ವಾಜಸನೇಯಶಾಖೆಗೂ ಏಕಾಯನಶಾಖೆಯೆಂಬ ಹೆಸರಿದೆ. ಇಂದಿಗೂ ಪಾಂಚರಾತ್ರಾಗಮದ ಶುದ್ಧಪರಂಪರೆಯವರು ವಾಜಸನೇಯ ಕಾಣ್ವಶಾಖೆಯವರಾಗಿಯೇ ಇರುವರು. ಹೀಗೆ ಮೂಲವೇದ ಏಕಾಯನ ವಾಜಸನೇಯ ಶಾಖೆಗಳ ಸಾರಾರ್ಥವೇ ಪಾಂಚರಾತ್ರದಲ್ಲಿರುವುದರಿಂದ ಏಕಾಯನಶಾಖೆಯಲ್ಲಿರುವ ಈಶಾವಾಸ್ಯವನ್ನು ಪಾಂಚರಾತ್ರಾಗಮಗಳಿಂದ ಪೋಷಿಸಬಹುದಾಗಿದೆ.
2. ಈಶಾವಾಸ್ಯದ ಉಪಾಸನೆಯ ವಿಚಾರನಿರ್ಣಯಕ್ಕೆ ಭಾಗವತಮತದವರೂ ಭಕ್ತರೂ ಪಾರಂಪರ್ಯವಾಗಿ ಪ್ರಯೋಗಶೀಲ ಪೋಷಕರೆಂಬುದನ್ನೂ ರಾಮಾನುಜದರ್ಶನವು ಈ ಮತದ ಸಾರವಾಗಿದ್ದು ಉಪಾಸನೆಗೆ (ಭಕ್ತಿಗೆ) ಪ್ರಮುಖಸ್ಥಾನವನ್ನು ಕೊಟ್ಟಿದೆ ಎಂಬುದನ್ನೂ ಗಮನಿಸಬಹುದು.
3. ಕ್ರಿ. ಶ. ೧೧ನೆಯ ಶತಮಾನಕ್ಕೆ ಹಿಂದೆಯೇ ಕಾಶ್ಮೀರದಲ್ಲಿ ಆಗಿಹೋದ ಅನೇಕ ವೈದಿಕ ವೈಷ್ಣವಾಚಾರ್ಯರ ಮತ್ತು ಅವರ ಅಭಿಪ್ರಾಯಗಳ ಬಗ್ಗೆ ಕಲ್ಹಣನ ರಾಜತರಂಗಿಣಿ, ಆನಂದವರ್ಧನಾಚಾರ್ಯರ ಧ್ವನ್ಯಾಲೋಕದ ಸ್ವಾಲ್ಯನೆಯ ಉದ್ಯೋತ, ಕ್ಷೇಮೇಂದ್ರನ ಭಗವದ್ವಿಷಯವಾದ ಗ್ರಂಥಗಳೂ ಗಮನಾರ್ಹ. ಇವುಗಳಲ್ಲಿ ಭಕ್ತಿ ಪ್ರಪತ್ತಿಗಳ ತಾತ್ತ್ವಿಕವಾದ ಮುಖ್ಯ ರೂಪರೇಖೆಗಳು ಅಲ್ಲಲ್ಲೇ ಕಾಣಸಿಗುತ್ತವೆ. ಈ ವಿಚಾರಗಳನ್ನು ಸ್ಪಷ್ಟಪಡಿಸುವ ಬೋಧಾಯನರ ಬ್ರಹ್ಮಸೂತ್ರವೃತ್ತಿ ಗ್ರಂಥವು ಕಾಶ್ಮೀರದಲ್ಲಿ ಮಾತ್ರ ಉಳಿದಿದ್ದು ರಾಮಾನುಜರು ಅದನ್ನು ಸಂಪಾದಿಸಿ ನಂತರವೇ ಶ್ರೀಭಾಷ್ಯ ಬರೆದರೆಂಬುದು ಇಲ್ಲಿ ಗಮನಾರ್ಹ.
4. ಈಶಾವಾಸ್ಯದ ಸಾರ ಯಾವುದೋ ಅದೇ ಗೀತೆಯ ಸಾರವೂ ಆಗಿದೆ. ಗೀತೆಯು ಉಪನಿಷತ್ತುಗಳ ಸಾರಸಂಗ್ರಹ ಎಂಬುದನ್ನು ಮರೆಯದಿರಿ.

ಭಕ್ತಿಯು ಹುಟ್ಟಿದ ಮೇಲೂ ಅದರ ಬೆಳವಣಿಗೆಗೆ ನಿಷ್ಕಾಮವಾದ ವರ್ಣಾಶ್ರಮಧರ್ಮಾಚರಣೆಯು ಅತ್ಯವಶ್ಯ. ಗೀ. ಸಂ. ೮.[1]

## ೨

ಆತ್ಮಸಾಕ್ಷಾತ್ಕಾರರೂಪವಾದ ಯೋಗಸಮಾಧಿಗೆ ಸಹಾಯಕವಾದ ಗೀತೆಯ ೧೮ ಅಧ್ಯಾಯಗಳ ಮೊದಲ ಆರು ಅಧ್ಯಾಯಗಳು ಕರ್ಮ ಮತ್ತು ಆತ್ಮಜ್ಞಾನಗಳನ್ನು ಮುಖ್ಯವಾಗಿ ಕುರಿತಿವೆ. ಮಧ್ಯದ ಆರು ಅಧ್ಯಾಯಗಳು ಪರಮಾತ್ಮತತ್ತ್ವದ ನಿಜವಾದ ಜ್ಞಾನಕ್ಕೆ ಸಹಾಯಕವಾದ ಭಕ್ತಿಯನ್ನು ಕರ್ಮಜ್ಞಾನಗಳ ಜೊತೆಗೆ ಹೇಗೆ ನೆರವೇರಿಸುವುದೆಂಬ ಬಗ್ಗೆ ಇವೆ. ಕೊನೆಯ ಆರು ಅಧ್ಯಾಯಗಳು ಪ್ರಕೃತಿ, ಜೀವಾತ್ಮ, ಪರಮಾತ್ಮತತ್ತ್ವಗಳ ವಿವೇಚನಾಪೂರ್ವಕವಾಗಿ ಕರ್ಮ, ಜ್ಞಾನ, ಭಕ್ತಿಗಳ ಬಗ್ಗೆ ಹೇಳದೆ ಉಳಿದಿರುವ ಕೆಲವು ರಹಸ್ಯಗಳನ್ನು ಕುರಿತಾಗಿವೆ.[2]

## ೩

### ಗೀತೆಯ ಹದಿನೆಂಟು ಅಧ್ಯಾಯಗಳ ಸಾರಾರ್ಥ[3]

೧. ಉಪನಿಷತ್ತಿನ ಉಪದೇಶ ಪಡೆಯಲೂ, ಧರ್ಮಾಧರ್ಮಗಳನ್ನು ನಿರ್ಣಯಿಸಿ ತಿಳಿಯಲೂ, ಪರಮಾತ್ಮನಿಗೆ ನಾವು ಶರಣಾಗತಿ ಮಾಡಿರಬೇಕಾದುದು ಅವಶ್ಯ. ಗೀ. ಸಂ. ೫.

೨. ಉಪನಿಷತ್ತಿನ ಉಪದೇಶವನ್ನು ಅನುಸರಿಸುವ ಉಪಾಸಕನು ಸ್ಥಿತಪ್ರಜ್ಞನಾಗಿರಬೇಕಾದುದೂ ಅವಶ್ಯ. ಗೀ. ಸಂ. ೬.

೩. ಸಮಾಜವ್ಯವಸ್ಥೆಯು ಸುರಕ್ಷಿತವಾಗಿರಲು ನಿಷ್ಕಾಮವಾಗಿ ಕರ್ಮವನ್ನು ಆಚರಿಸುವುದು ಎಂತಹ ಉಪಾಸಕರಿಗೂ ಅವಶ್ಯ. ಪರಮಾತ್ಮನಿಗೆ ಎಲ್ಲ ಕರ್ಮಗಳನ್ನೂ ಒಪ್ಪಿಸಬೇಕು. ಗೀ. ಸಂ. ೭.

೪. "ಪರಮಾತ್ಮನ ಅವತಾರ, ಕಾರ್ಯ ಎಲ್ಲವೂ ದಿವ್ಯ" ಎಂಬ ಜ್ಞಾನದಿಂದ ಯಾವುದೇ ರೀತಿಯ ಕರ್ಮಗಳನ್ನು ಮಾಡಿದರೂ ಆ ಕರ್ಮಗಳು ಬಂಧಕವಾಗವು. ಗೀ. ಸಂ. ೮.

ವಾಲ್ಮೀಕಿ, ಪರಾಶರ, ವ್ಯಾಸ, ಶುಕ, ಶೌನಕ ಮುಂತಾದ ಮಹರ್ಷಿಗಳು ಇಂತಹ ಕರ್ಮನಿಷ್ಠರಾಗಿದ್ದರು. ಗೀ. ಸಂ. ೮.

---

1. ಗೀತಾರ್ಥಸಂಗ್ರಹಕ್ಕೆ ವೇದಾಂತಾಚಾರ್ಯರ ವ್ಯಾಖ್ಯಾನ 'ರಕ್ಷೆ'. ಇದರ ಅಂಶವನ್ನು ಅಲ್ಲಲ್ಲೇ ಹೀಗೆ ಸಂಗ್ರಹಿಸಲಾಗಿದೆ.

2. ಮಾಧ್ಯಂದಿನಶಾಖೆಯ ಈಶಾವಾಸ್ಯದಲ್ಲಿ ಮೊದಲ ಎಂಟು ಮಂತ್ರಗಳು ಒಂದು ಭಾಗ. ಉಳಿದವು ಒಂದುಭಾಗ. ಕಾಣ್ವಪಾಠದಲ್ಲೂ ಎಂಟು ಮಂತ್ರಗಳ ಕ್ರಮದಲ್ಲಿ ವ್ಯತ್ಯಾಸವಿಲ್ಲ. ಇವುಗಳಲ್ಲಿ ಕರ್ಮಜ್ಞಾನಗಳ ಸಾರಭೂತವಾದ ಅಂಶಗಳ ವಿವರಣೆ ಇದ್ದು ಗೀತೆಯ ಮೊದಲ ಆರು ಅಧ್ಯಾಯಗಳು ಇವುಗಳಿಗೆ ಪೋಷಕವಾಗಿವೆ ಎಂಬುದನ್ನು ಗಮನಿಸಿ. ಕಾಣ್ವಪಾಠದ ಉಳಿದ ಮಂತ್ರಗಳಲ್ಲಿ (ಶ್ರೀವತ್ಸನಾರಾಯಣಮುನಿಗಳ ವಿವರಣಾನುಸಾರ) ೯ ರಿಂದ ೧೪ ರ ವರೆಗಿನ ಮಂತ್ರಗಳು ಜ್ಞಾನಕರ್ಮಗಳ ಸಹಯೋಗದಿಂದ ಸಾಧಿಸಲ್ಪಡುವ ವಿದ್ಯೆ ಎಂಬ ಭಕ್ತಿಯನ್ನು ಕುರಿತಾಗಿವೆ. ಇವುಗಳಿಗೆ ಗೀತೆಯ ಮಧ್ಯದ ಆರು ಅಧ್ಯಾಯಗಳನ್ನು ಪೋಷಕವೆನ್ನಬಹುದು. ಕೊನೆಯ ನಾಲ್ಕು ಮಂತ್ರಗಳಲ್ಲಿ ಪ್ರಕೃತಿ, ಜೀವಾತ್ಮ ಪರಮಾತ್ಮಗಳ ಸೂಕ್ಷ್ಮಸ್ವಭಾವಗಳನ್ನೂ ಕರ್ಮ, ಜ್ಞಾನ, ಭಕ್ತಿಗಳಲ್ಲಿ ಎಲ್ಲದರ ಜೊತೆಗಿರಬೇಕಾದ ರಹಸ್ಯವೆನಿಸಿದ 'ಶರಣಾಗತಿ' ಧರ್ಮವನ್ನೂ ಸ್ಪಷ್ಟಪಡಿಸಲಾಗಿದೆ. ಇವುಗಳಿಗೆ ಗೀತೆಯ ಕೊನೆಯ ಆರು ಅಧ್ಯಾಯಗಳು ಪೋಷಕ ಎಂಬುದನ್ನು ಗಮನಿಸಬಹುದು.

3. ಈ ಅರ್ಥಗಳನ್ನು ಔಚಿತ್ಯವರಿತು ಈಶಾವಾಸ್ಯಾರ್ಥಗಳೊಡನೆ ಯೋಜಿಸಿಕೊಳ್ಳಬಹುದು.

೫. ಅಹಂಕಾರರೂಪವಾದ ತಮ್ಮ ಕರ್ತೃತ್ವವನ್ನು ಬಿಟ್ಟು, ಕರ್ತವ್ಯ ಕರ್ಮಗಳನ್ನು ಆತ್ಮಜ್ಞಾನಿಯು ಮಾಡಲೇ ಬೇಕು. ಗೀ. ಸಂ. ೯.

೬. ಉಪಾಸಕನಿಗೆ ಆತ್ಮದರ್ಶನವಾಗಲು ಯೋಗಾಭ್ಯಾಸ ಆವಶ್ಯಕ. ಆತ್ಮದರ್ಶನರೂಪವಾದ ಯೋಗಸಿದ್ಧಿಗಿಂತ ಪರಮಾತ್ಮದರ್ಶನರೂಪವಾದ ಭಕ್ತಿಯೋಗವೇ ಶ್ರೇಷ್ಠ. ಗೀ. ಸಂ. ೧೦.

೭. ಉಪಾಸಕರು ಪ್ರಾಕೃತಗುಣಗಳ ಸಂಬಂಧವೆಂಬ ಮಾಯೆಯಿಂದ ಮೋಹಿತರಾಗಿರುವುದರಿಂದ ಅವರಿಗೆ ಪರಮಾತ್ಮನು ಕಾಣಿಸದೆ ಮರೆಸಿಕೊಂಡಿರುವನು. ಪರಮಾತ್ಮನಲ್ಲಿ ಶರಣಾಗತಿಮಾಡಿದ ಉಪಾಸಕನಿಗೆ ಈ ಮಾಯೆಯು ನಿವೃತ್ತಿ ಆಗುವುದು. ಗೀ. ಸಂ. ೧೧.

೮. ಐಶ್ವರ್ಯಕ್ಕಾಗಿ ಪರಮಾತ್ಮನ ಉಪಾಸನೆಮಾಡುವವರಿದ್ದಾರೆ. ಹೀಗೆ ಆತ್ಮದರ್ಶನಕ್ಕಾಗಿಯೂ ಪರಮಾತ್ಮ ದರ್ಶನಕ್ಕಾಗಿಯೂ ಉಪಾಸಿಸುವ ಪ್ರತ್ಯೇಕ ಜನರಿದ್ದಾರೆ. ಪರಮಾತ್ಮನ ರೂಪಚಿಂತನೆ, ಮರಣಕಾಲದಲ್ಲಿ ಅವನ ಸ್ಮರಣೆ, ಮುಕ್ತಿಮಾರ್ಗದಲ್ಲಿ ಚಲನೆ ಇತ್ಯಾದಿಗಳು ಮುಖ್ಯವಾಗಿ ಅವರು ತಿಳಿದಿರಬೇಕಾದ ಪ್ರತ್ಯೇಕ ಅಂಶಗಳು. ಗೀ. ಸಂ. ೧೨.

೯. ಪರಮಾತ್ಮನ ಅವತಾರವು ದಿವ್ಯ. ಅದನ್ನು ತಿಳಿದವರೇ ಶ್ರೇಷ್ಠಜ್ಞಾನಿಗಳು. ಅವರು ಅವನ ಅತ್ಯಂತ ಪ್ರೀತಿಗೆ ಪಾತ್ರರಾಗಿ ಅನನ್ಯಭಕ್ತಿಯಿಂದ ಅವನನ್ನು ಉಪಾಸಿಸುವರು. ಗೀ. ಸಂ. ೧೩.

೧೦. ಪರಮಾತ್ಮ ಎಲ್ಲವನ್ನೂ ತನ್ನ ಶರೀರವಾಗಿಸಿ ಸ್ವಾಧೀನದಲ್ಲಿಟ್ಟುಕೊಂಡು ಅನಂತಕಲ್ಯಾಣಗುಣಪರಿಪೂರ್ಣನಾಗಿಯೇ ಇರುವನೆಂಬುದನ್ನು ಅರಿತು ಉಪಾಸಿಸಿದರೆ ಭಕ್ತಿಯೂ ಅಭಿವೃದ್ಧಿಯಾಗುವುದು. ಗೀ. ಸಂ ೧೪.

೧೧. ಅನನ್ಯಭಕ್ತಿಯ ಉನ್ನತಸ್ತರದಲ್ಲಿ ಮಾತ್ರ ಪರಮಾತ್ಮನ ಬಗ್ಗೆ ವಾಸ್ತವಜ್ಞಾನವೂ, ದರ್ಶನವೂ ಅನುಭವವೂ ಆಗುವುದು. ಗೀ. ಸಂ. ೧೫.

೧೨. ಪರಮಾತ್ಮದರ್ಶನಸಮಾಧಿಯನ್ನು ಸಾಧಿಸಲಾರದವರಿಗೆ ಅವನ ಗುಣಾನುಭವ ಸುಲಭೋಪಾಯ. ಅದೂ ಸಾಧ್ಯವಿಲ್ಲದವರಿಗೆ ಶ್ರದ್ಧಾಭಕ್ತಿಗಳಿಂದ ಅವನ ಸೇವಾರೂಪವಾದ ನಿಷ್ಕಾಮಕರ್ಮಾಚರಣೆ ಸುಲಭ. ಅದೂ ಸಾಧ್ಯವಿಲ್ಲದವರಿಗೆ ಆತ್ಮದರ್ಶನಪ್ರಯತ್ನ ಸುಲಭ.

ಎಲ್ಲರಿಗೂ ಯಾವುದರಬಗ್ಗೆಯೂ ದ್ವೇಷವಿಲ್ಲದಿರುವಿಕೆ, ಪರಮಾತ್ಮನ ಬಗ್ಗೆ ಅಭಿಮುಖ್ಯ, ಇತ್ಯಾದಿ ಗುಣಗಳು ಅವಶ್ಯಕ.

ಪರಮಾತ್ಮನಿಗೆ ತನ್ನ ಭಕ್ತರಲ್ಲೇ ಪ್ರೀತಿ ಹೆಚ್ಚು. ಗೀ. ಸಂ. ೧೬.

೧೩. ಉಪಾಸಕನಿಗೆ ತನ್ನ ದೇಹ, ಆತ್ಮಗಳ ವಿವೇಚನೆಯೂ, ಡಂಭ, ಅಹಂಕಾರಾದಿಗಳ ವರ್ಜನೆಯೂ, ಆತ್ಮ ಶೋಧನೆಯೂ, ಪ್ರಕೃತಿಬಂಧದ ಕಾರಣವಿವೇಚನೆಯೂ ಅತ್ಯವಶ್ಯ. ಗೀ. ಸಂ. ೧೭.

೧೪. ಉಪಾಸಕನು ಪ್ರಾಕೃತಿಕಗುಣಗಳಿಂದ ಬರುವ ತನ್ನ ಕರ್ತೃತ್ವವನ್ನೂ, ಸಂಗವನ್ನೂ, ವಿರುದ್ಧಫಲಗಳನ್ನೂ ಅಂಟಿಸಿಕೊಳ್ಳದಿರಲು ಪರಮಾತ್ಮನಲ್ಲಿ ಅನನ್ಯಭಕ್ತಿಯಿಂದ ಶರಣಾಗತನಾಗಿ, ಗುಣಗಳಿಂದಾಗುವ ಉನ್ನತಿ, ಅವನತಿಗಳನ್ನು ಗಮನಿಸಬೇಕು. ಗೀ. ಸಂ. ೧೮.

೧೫. ಪ್ರಕೃತಿಗಿಂತಲೂ ಪ್ರಕೃತಿಯ ಪರಿಣಾಮದಿಂದಾದ ಈ ದೇಹಾದಿಗಳಲ್ಲಿ ಬಂಧಿತರಾದ ಜೀವಾತ್ಮಗಳಿಗಿಂತಲೂ ಮುಕ್ತರಾಗಿ ಅತ್ಯಂತ ಪರಿಶುದ್ಧರಾಗಿರುವ ಜೀವಾತ್ಮಗಳಿಗಿಂತಲೂ ಪರಮಾತ್ಮನು ಭಿನ್ನವಸ್ತು, ಇವೆಲ್ಲವನ್ನೂ ವ್ಯಾಪಿಸಿ ಧರಿಸಿ ಆಳುವವನೇ ಅವನು, ಇವೆಲ್ಲವೂ ಅವನ ಅಧೀನ, ಎಂಬ ಜ್ಞಾನ ಉಪಾಸಕನಿಗೆ ಮುಖ್ಯ. ಗೀ. ಸಂ. ೧೯.

೧೬. 'ದೈವಸ್ವಭಾವ' 'ಆಸುರಸ್ವಭಾವ' ಗಳ ತಾರತಮ್ಯವನ್ನು ಉಪಾಸಕನು ವಿವೇಚಿಸಿ, ದೈವಸ್ವಭಾವವನ್ನು ಅನುಸರಿಸಿದರೆ ಮಾತ್ರ ತತ್ತ್ವದ ಜ್ಞಾನವೂ ಅದರ ಪ್ರಯೋಗಶೀಲತೆಯೂ ಪ್ರಯೋಗದಿಂದ ಅದರ ಬಗ್ಗೆ ವಿಶೇಷ ಜ್ಞಾನವೂ ದೃಢವಾಗುವುದು. ಗೀ. ಸಂ. ೨೦.

೧೭. ಅಶಾಸ್ತ್ರೀಯವಾದ ಎಲ್ಲವೂ 'ಆಸುರ'. ಶಾಸ್ತ್ರೀಯವಾದುದೆಲ್ಲವೂ ಸಾತ್ತ್ವಿಕ, ರಾಜಸ, ತಾಮಸ ಎಂದು ಸಹಜಗುಣಸ್ವಭಾವಾನುಸಾರ ವ್ಯವಸ್ಥಿತವಾಗಿರುವುದು. ಸಾತ್ತ್ವಿಕವಾದುದೆಲ್ಲದಕ್ಕೂ ಶಾಸ್ತ್ರೀಯವಾದ ಓಂಕಾರದ ನಿರ್ದೇಶ ಇರುವುದನ್ನು ಅವಶ್ಯ ಗಮನಿಸಬೇಕು. ಗೀ. ಸಂ. ೨೧.

೧೮. ವಿಶ್ವದ ಎಲ್ಲವನ್ನೂ ಆಗುಮಾಡಿಸುವವನು ಪರಮಾತ್ಮನೊಬ್ಬನೇ ಎಂಬುದನ್ನರಿತು, ಅವನ ಅಧೀನರಾಗಿ ಇರಲು ನಿಶ್ಚಯಿಸಿ, ಅವನೇ ಗತಿ ಎಂದು ಅವನಲ್ಲೇ ಎಲ್ಲ ಭಾರವನ್ನೂ ಒಪ್ಪಿಸಿ, ನಿಶ್ಚಿಂತರಾಗಿ, ನಿಷ್ಕಾಮ ಕರ್ಮಾಚರಣೆ ಮಾಡುತ್ತಾ, ಅವನಲ್ಲೇ ಅನನ್ಯವಾದ ಫಲಭಕ್ತಿಯನ್ನು ಅಭಿವೃದ್ಧಿಮಾಡಿಕೊಳ್ಳ ಬೇಕೆಂಬುದೇ ಸಮಸ್ತ ಗೀತಾಶಾಸ್ತ್ರದ ಸಾರಾರ್ಥ. ಗೀ. ಸಂ. ೨೨.

## ೪

ತಪಸ್ಸು, ತೀರ್ಥಯಾತ್ರೆ, ಕ್ಷೇತ್ರವಾಸಾದಿಗಳು, ದಾನ ಧರ್ಮಗಳು, ಯಜ್ಞಯಾಗಾದಿಗಳು, ಇತ್ಯಾದಿ ಎಲ್ಲವೂ ವಿವಿಧಕರ್ಮಯೋಗಗಳೆನಿಸಿವೆ. ಇಂದ್ರಿಯನಿಗ್ರಹ ಮಾಡಿ ಪರಿಶುದ್ಧ ಜೀವಾತ್ಮಸ್ವರೂಪದ ಧ್ಯಾನ ಮಾಡುವುದೇ ಜ್ಞಾನಯೋಗ. ಸರ್ವಶ್ರೇಷ್ಠನಾದ ಪರಮಾತ್ಮನನ್ನು ಅನನ್ಯಭಕ್ತಿಯಿಂದ ಧ್ಯಾನಿಸುವುದೇ ಭಕ್ತಿ ಯೋಗ. ಈ ಯಾವುದೇ ಒಂದು ಯೋಗದಲ್ಲೂ ಇತರ ಯೋಗಗಳ ಸಂಪರ್ಕ ಸೂಕ್ಷ್ಮವಾಗಿ ಇದ್ದೇ ಇರುವುದು. ಯಾವುದೇ ಕರ್ಮಯೋಗವನ್ನು ಆಚರಿಸಬೇಕಾದರೂ ಪರಮಾತ್ಮನ ಆರಾಧನರೂಪವಾಗಿ ನಡೆಸಿ ಅವನಿಗೆ ನಿವೇದಿಸಿ ಉಳಿದ ಆಹಾರಾದಿಗಳಿಂದಲೇ ದೇಹಧಾರಣೆ ಮಾಡಬೇಕು. ಹೀಗಿದ್ದರೆ ಆತ್ಮದರ್ಶನವು ಆಗುವುದು. ಜ್ಞಾನಯೋಗಕ್ಕಾಗಿ ಪ್ರಯತ್ನಿಸದೆ ಭಕ್ತಿಯೋಗದಲ್ಲೇ ನಿಷ್ಠರಾದವರಿಗೂ ಅದರ ಮೊದಲ ಸ್ತರದಲ್ಲೇ ಜ್ಞಾನ ಯೋಗದ ಫಲವಾದ ಆತ್ಮದರ್ಶನವಾಗುವುದು. ಆತ್ಮದರ್ಶನಸ್ತರದಲ್ಲಿರುವ ಭಕ್ತಿ ಅಪರ (ಕೆಳಮಟ್ಟದ) ಭಕ್ತಿ. ಪರಮಾತ್ಮದರ್ಶನಸ್ತರದಲ್ಲಿರುವ ಭಕ್ತಿಯೇ ಪರ (ಮೇಲ್ಮಟ್ಟದ) ಭಕ್ತಿ. ಈ ಭಕ್ತಿಯಿಂದ ಮಾತ್ರ ಉಪಾಸಕನ ಸಮಸ್ತ ಅಜ್ಞಾನಗಳೂ ಹೋಗಿ ಪರಮಾತ್ಮನ ದಾಸಾನುದಾಸನೆಂಬ ತನ್ನ ಸ್ವರೂಪವನ್ನು ಅರಿತ ಅವನು ಎಂಟು ಸ್ವರೂಪಗುಣಗಳನ್ನು ಪಡೆಯುವುದರಿಂದ ಪರಮಾತ್ಮನಿಗೆ ಸಮನೆನಿಸಿ, ಅವನ ಲೋಕದಲ್ಲೇ ಅವನ ಪಾದಸೇವೆ ಮಾಡುತ್ತಾ ಆನಂದವಾಗಿ ನೆಲೆಸುವನು. ಹೀಗೆ ಭಕ್ತಿರೂಪವಾದ ಉಪಾಸನೆಯು ಪರಲೋಕದ ಮುಕ್ತ್ಯೈಶ್ವರ್ಯ ವನ್ನು ಕೊಡುವುದಲ್ಲದೆ ಆಸೆಪಟ್ಟವರಿಗೆ ಇಹಲೋಕದ ಸಮಸ್ತೈಶ್ವರ್ಯವನ್ನೂ ಬ್ರಹ್ಮರುದ್ರೇಂದ್ರಾದಿಲೋಕಗಳ ಐಶ್ವರ್ಯವನ್ನೂ ಕೊಡುವುದು. ಕೈವಲ್ಯದ ಆಸೆ ಇರುವವರು ಮಾತ್ರ ಕರ್ಮ, ಜ್ಞಾನ, ಭಕ್ತಿಯೋಗಗಳಲ್ಲಿ ಯಾವುದೊಂದನ್ನಾದರೂ ಮುಖ್ಯವಾಗಿ ಆಚರಿಸಬಹುದು. ಯಾವುದರಲ್ಲೂ ಪರಮಾತ್ಮಭಕ್ತಿಯು ಸಾರವಾದ "ಶರಣಾಗತಿ" ಅವಶ್ಯವಾಗಿರುವುದರಿಂದ ಅದರ ಬಲದಿಂದಲೇ ಫಲಸಿದ್ಧಿ ಆಗುವುದು. ಎಲ್ಲವಿಧ ಆಸೆಯಿರುವ ಉಪಾಸಕರೂ ಪರಮಾತ್ಮನೊಬ್ಬನನ್ನೇ ಉಪಾಸಿಸಬೇಕು. ಹೀಗೆ ಪರಮಾತ್ಮನನ್ನು ಫಲಕ್ಕೆ ಸಾಧನವಾಗಿ ಉಪಾಸಿಸುವವರಿಗೆ "ಏಕಾಂತಿ"ಗಳೆಂದು ಹೆಸರು. ಅವನನ್ನೇ ಪಡೆಯುವ ಒಂದೇ ನಿಶ್ಚಿತವಾದ ಆಸೆಯಿರುವ ಉಪಾಸಕರಿಗೆ ಪರಮಾತ್ಮನು ತನ್ನನ್ನು ತಾನೇ ಒಪ್ಪಿಸಿಕೊಳ್ಳುವನು. ಇಂತಹವರು ಒಂದು ಕ್ಷಣವೂ ಪರಮಾತ್ಮನ ದರ್ಶನ ವಿಲ್ಲದೆ ಬದುಕಿರಲಾರರು. ಸದಾ ಅವನ ನೆನಪು, ಸದಾ ಅವನದೇ ಆರಾಧನೆ, ಅವನಿಗಾಗಿಯೇ ಅವರ ಜೀವನ ಮುಡಿಪು. ಇಂತಹವರಿಗೆ "ಪರಮೈಕಾಂತಿ"ಗಳೆಂದು ಹೆಸರು. ಇಂತಹವರು ತಾವು ಮಾಡುವ ಕರ್ಮ, ಜ್ಞಾನ,

ಭಕ್ತಿಯೋಗಗಳನ್ನು ನಿರ್ಭಯವಾಗಿ ಪರಮಾತ್ಮನಿಗೆ ಒಪ್ಪಿಸಿ, ಅವು ತಮಗೆ ಫಲಸಾಧಕವಲ್ಲವೆಂಬ ಭಾವನೆಯಿಂದ ಮಾಡುವರು. ಇದೇ ಪರಮಾತ್ಮನಿಗೆ ಸಮರ್ಪಣ. ಈ ಸಮರ್ಪಣಭಾವದಿಂದ ನಾವು ಪರಮಾತ್ಮನ ದಾಸಾನುದಾಸರೆಂಬುದನ್ನು ಮರೆಯದೆ ನಮ್ಮ ಪ್ರವೃತ್ತಿ, ನಿವೃತ್ತಿಗಳೆಲ್ಲದರಲ್ಲೂ ನಿರ್ಲಿಪ್ತರಾಗಿ ಜೀವನ ನಡೆಸುವುದೇ ಗೀತಾಶಾಸ್ತ್ರದ ಪ್ರಧಾನ ಉಪದೇಶ.[1] ಗೀ. ಸಂ. ೨೩ ರಿಂದ ೩೨.

ಈ ಅರ್ಥವೆಲ್ಲವೂ ಮಹಾಯೋಗಿಗಳಾದ ಶ್ರೀಮನ್ನಾಥಮುನಿಗಳ ಆಜ್ಞಾನುವರ್ತಿಗಳಾದ ಶ್ರೀರಾಮಮಿಶ್ರಾಚಾರ್ಯರ ದೃಢವಾದ ಉಪದೇಶಪರಂಪರೆಯಿಂದ ಯಾಮುನಾಚಾರ್ಯರಿಗೆ ಲಭಿಸಿದವು. ಪರಮೈಕಾಂತಿಗಳಾಗಿ ಮುಮುಕ್ಷುಜೀವನ ನಡೆಸಬೇಕೆಂಬುದೇ ಈ ಎಲ್ಲ ಉಪನಿಷತ್, ಗೀತೆ, ಆಚಾರ್ಯೋಪದೇಶಗಳ ಸಾರ.[2]

ಗೀ. ಸಂ. ೮.

## ನಮ್ಮಾಳ್ವಾರವರ ತಿರುವಾಯ್ಮೊಳಿ ಮತ್ತು ಅದರ ವಿವರಣೆಗಳಲ್ಲಿ[3] ಉಪಯುಕ್ತ ವಿಚಾರಗಳು

### ೧

ಸಕಲ ಕಲ್ಯಾಣಗುಣಪರಿಪೂರ್ಣನೂ, ನಿರ್ದೋಷನೂ, ವಿಶ್ವದ ಅಧಿಪತಿಯೂ, ಕಾರಣನೂ, ವ್ಯಾಪಕನೂ ಆದ ಪರಮಾತ್ಮನು ತನ್ನ ಕರುಣೆಯಿಂದ ನಮಗೆ ಅಜ್ಞಾನವನ್ನು ಹೋಗಲಾಡಿಸಿ ಉತ್ತಮವಾದ ಜ್ಞಾನ

---

1. ಈ ಸಾರಾರ್ಥ ಗಮನಿಸಿದರೆ ಗೀತೆಯು ಉಪನಿಷತ್ತಿನ ಅರ್ಥಗಳಿಗೆ ಹೇಗೆ ಕೈಗನ್ನಡಿಯಂತಿದೆ ಎಂಬುದು ಅರಿವಾದೀತು.
   ಈಶಾವಾಸ್ಯದ 'ಕರ್ಮಾಣಿ', 'ಕುರ್ವನ್ನೇವ', 'ತ್ಯಕ್ತೇನ ಭುಂಜೀಥಾಃ', 'ಈಶಾ ವಾಸ್ಯಮಿದಂ ಸರ್ವಂ', 'ಆತ್ಮನ್ಯೇವ ಅನುಪಶ್ಯತಿ, 'ಆತ್ಮೈವಾಭೂತ್', 'ಸತ್ಯಧರ್ಮಾಯ ದೃಷ್ಟಯೇ', 'ವಿದ್ಯಯಾ ಅಮೃತಂ', 'ಸೋಽಹಮಸ್ಮಿ', 'ಅಗ್ನೇ ನಯ ಸುಪಥಾ', 'ನಮ ಉಕ್ತಿಂ ವಿಧೇಮ', 'ಜಿಜೀವಿಷೇತ್ ಶತಂ ಸಮಾಃ' ಎಂಬ ಪದಗಳ ಭಾವವಿವರಣೆ ಇಲ್ಲಿರುವುದನ್ನು ಗಮನಿಸಿ.
2. ನಾಥಮುನಿಗಳು ಕ್ರಿ. ಶ. ೫ನೆಯ ಶತಮಾನದಿಂದ ೯ನೇ ಶತಮಾನ ಪೂರ್ತಿ ಬದುಕಿದ್ದ ಮಹಾಯೋಗಿ ಮತ್ತು ಸಮಗ್ರ ಭಕ್ತಿಯೋಗನಿಷ್ಠರು. ಇವರ ಬಗ್ಗೆ ವಿವರಗಳಿಗೆ ಗ್ರಂಥಕರ್ತರ ಪಟ್ಟಿ ಪರಿಶಿಷ್ಟ ನೋಡಿ. ಶ್ರೀರಾಮಮಿಶ್ರಾಚಾರ್ಯರಿಗೆ 'ಮಣಕ್ಕಾಲ್‌ನಂಬಿ' ಎಂದು ಹೆಸರು. ಇವರು ನಾಥಮುನಿಗಳ ಪ್ರಶಿಷ್ಯರು. ಯಾಮುನಮುನಿಗಳಿಗೆ ಸಾಕ್ಷಾತ್ ಆಚಾರ್ಯರು. ಇವರ ಕಾಲ ಕ್ರಿ. ಶ. ೯-೧೦ನೇ ಶತಮಾನ.
3. ಈಗಿನ ಕೆಲವರ ಅಭಿಪ್ರಾಯದಂತೆ 'ನಮ್ಮಾಳ್ವಾರ್'ರವರ ಕಾಲ ಕ್ರಿ. ಶ. ೬, ೭ ನೇ ಶತಮಾನ. ಸಾಂಪ್ರದಾಯಿಕವಾಗಿಯೂ, ವೈಚಾರಿಕವಾಗಿಯೂ ಆದಿಶಂಕರರಿಗಿಂತ ಇವರು ಪ್ರಾಚೀನರು. ಇವರ ಬಗ್ಗೆ ಈಶಾ. ಪುಟ ೧೬೭ ಮತ್ತು ಗ್ರಂಥಕಾರರ ಪರಿಶಿಷ್ಟ ನೋಡಿ, ಇವರ ಗ್ರಂಥಗಳು ತಮಿಳುಭಾಷೆಯಲ್ಲಿರುವ ವೇದಗಳೆನಿಸಿವೆ. ಮೂಲವೇದವೆನಿಸಿದ ಏಕಾಯನಶಾಖೆಯಲ್ಲಿರುವಂತೆಯೇ ಶುದ್ಧವಾದ ಪರಮಾತ್ಮನ ವಿಷಯವು ಮಾತ್ರ ಇವುಗಳಲ್ಲಿರುವುದು. ಹೀಗೆ ಉಪನಿಷತ್ತುಗಳ ಸಾರಾರ್ಥ ಇವುಗಳಲ್ಲಿದೆ. ಆಚಾರ್ಯರ ಭಾಷ್ಯಾದಿ ಗ್ರಂಥಗಳಿಗೂ ಉಪನಿಷತ್ತುಗಳಿಗೂ ಮಧ್ಯವರ್ತಿಗಳಂತಿರುವ ಇವುಗಳನ್ನು ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ 'ಪ್ರಮಾಣತರ' ಎಂದೂ ಸಾಂಗೋಪಾಂಗವಾದ ವೈದಿಕಸಾಹಿತ್ಯವನ್ನು 'ಪ್ರಮಾಣ' ಎಂದೂ ಪರಿಗಣಿಸಲಾಗಿದೆ. (ಯತೀಂದ್ರಮತದೀಪಿಕಾ, ೩ ನೆಯ ಅವತಾರ)

   ನಮ್ಮಾಳ್ವಾರ್‌ರವರ ಶ್ರೇಷ್ಠ ಗ್ರಂಥ ತಿರುವಾಯ್ಮೊಳಿ. ಈ ಗ್ರಂಥಕ್ಕೆ ರಾಮಾನುಜರ ಜ್ಞಾನಪುತ್ರರೆನಿಸಿದ ಮತ್ತು ಅವರ ಸೋದರಮಾವನ ಪುತ್ರರಾದ 'ಕುರುಕೇಶ್ವರಸೂರಿ'ಗಳ 'ಆರುಸಾವಿರ' ಎಂಬ ವ್ಯಾಖ್ಯಾನವಿದೆ. ಇದು ರಾಮಾನುಜರ ಆಜ್ಞೆಯಂತೆಯೇ ಬರೆದುದು. ಕಾಲ ಕ್ರಿ. ಶ. ೧೧ ನೇ ಶತಮಾನ. ರಾಮಾನುಜರಿಗೂ ಇವರಿಗೂ ಶಿಷ್ಯರಾದ ಪರಾಶರ ಭಟ್ಟರ ಉಪದೇಶದಂತೆ ಕರ್ಣಾಟಕದ 'ನಂಜೀಯರ್' ಎಂದು ಪ್ರಸಿದ್ಧರಾದ 'ಮಾಧವಮುನಿ'ಗಳ ವ್ಯಾಖ್ಯಾನ 'ಒಂಭತ್ತು ಸಾವಿರ'. ಕಾಲ ಕ್ರಿ. ಶ. ೧೨ನೇ ಶತಮಾನ. 'ನಂಜೀಯರ್'ರ ಶಿಷ್ಯರಾದ 'ನಮ್ಪಿಳ್ಳೈ' ಎಂದು ಪ್ರಸಿದ್ಧರಾದ 'ಕಲಿವೈರಿ

ವನ್ನೂ ಭಕ್ತಿಯನ್ನೂ ಉಂಟುಮಾಡುವುದರಿಂದ ಅವನ ದಿವ್ಯರೂಪವನ್ನು ದರ್ಶನಮಾಡುತ್ತಾ ನಾವು ಸಹಜವಾಗಿಯೇ ಅವನ ದಾಸಾನುದಾಸರಾಗಿ ಮನಸಾರೆ ಅವನ ಸೇವೆ ಮಾಡುತ್ತಿರಬೇಕು.[1]

ತಿರು. ೧.೧.೧.

೨

ಒಂದು ಬ್ರಹ್ಮಾಂಡಕ್ಕೆಲ್ಲಾ ನಮ್ಮಂತಹ ಒಬ್ಬ ಸಣ್ಣ ಮನುಷ್ಯನಿದ್ದರೆ ಹೇಗೆ ಅವನಿಗೆ ವಿಸ್ತಾರವಾದ ಪ್ರದೇಶ ಸಿಗುವುದೋ ಹಾಗೆ ನಿರಾಯಾಸವಾಗಿ ಅವಕಾಶ ಪಡೆದು ವಿಶ್ವದ ಅಣುಅಣುಗಳಲ್ಲಿ ಮಾತ್ರವಲ್ಲದೆ ನೀರಿನ ಸಣ್ಣ ಗುಳ್ಳೆಯಂತಹ ಅಣುವಾದ ಜೀವಾತ್ಮಗಳಲ್ಲೂ ಅವುಗಳಿಗೆ ತಿಳಿಯದಂತೆಯೇ ಒಳಹೊಕ್ಕು ವ್ಯಾಪಿಸಿರುವವನು

---

(ಹಿಂದಿನ ಪುಟದಿಂದ)

ದಾಸ'ರ ಆಜ್ಞೆಯಂತೆ ಅವರ ಶಿಷ್ಯರೂ 'ವ್ಯಾಖ್ಯಾನಚಕ್ರವರ್ತಿ' ಎಂದು ಬಿರುದು ಪಡೆದವರೂ ಆದ 'ಪೆರಿಯವಾಚ್ಚಾನ್‌ಪಿಳ್ಳೈ'ಯವರ ವ್ಯಾಖ್ಯಾನ 'ಇಪ್ಪತ್ತುನಾಲ್ಕುಸಾವಿರ'. ಕಾಲ ಕ್ರಿ. ಶ. ೧೩ ನೇ ಶತಮಾನ. 'ನಮ್ಪಿಳ್ಳೈ'ಯವರು ಉಪದೇಶಿಸಿದ ವಿವರಣೆಯ ಮಾತುಗಳನ್ನೇ ಆಲಿಸಿ ಹಾಗೆಯೇ ಅವರ ಶಿಷ್ಯರಾದ 'ವಡಕ್ಕುತ್ತಿರುವೀಧಿಪಿಳ್ಳೈ' ಎಂಬ 'ಕೃಷ್ಣಪಾದಸೂರಿ'ಗಳು ಬರೆದಿಟ್ಟ ವ್ಯಾಖ್ಯಾನ ಮೂವತ್ತಾರುಸಾವಿರ. ಇದಕ್ಕೆ 'ಈಡು-ಭಗವದ್ವಿಷಯ' ಎಂದು ಹೆಸರು. ಇದು ಕಾಂಚೀ ವರದರಾಜಸ್ವಾಮಿಯ ಆಜ್ಞೆಯಂತೆ ಅವರ ಶಿಷ್ಯಪರಂಪರೆಯ 'ನಾಲೂರಾಚ್ಚಾನ್‌ಪಿಳ್ಳೈ'ಯವರಿಂದ ಕರ್ನಾಟಕದ ಮೇಲುಕೋಟೆಯಲ್ಲಿ ಕ್ರಿ ಶ. ೧೪ನೇ ಶತಮಾನದಲ್ಲಿ ಪ್ರಪ್ರಥಮ ಪ್ರಕಟಿತವಾಯಿತು. ಅಲ್ಲಿಯವರೆಗೆ ಈ ಗ್ರಂಥ ಮನೆಗಳಲ್ಲಿ ಮಾತ್ರ ಪೂಜೆಗೊಳ್ಳುತ್ತಿತ್ತು. 'ಪೆರಿಯವಾಚ್ಚಾನ್‌ಪಿಳ್ಳೈ'ಯ ವಯಸ್ಸಿನವರಾಗಿದ್ದೂ ಅವರ ಪುತ್ರರಲ್ಲಿ ಶಿಷ್ಯವೃತ್ತಿ ಮಾಡಿ ವೃದ್ಧಾಪ್ಯದಲ್ಲಿ ಪಂಡಿತರಾದವರು 'ವಾದಿಕೇಸರಿಮುನಿವರ್ಯ'ರು, ಇವರು ಬರೆದ ವ್ಯಾಖ್ಯಾನ 'ಹನ್ನೆರಡುಸಾವಿರ'. ಇದಕ್ಕೆ 'ಉರೈ-ಪ್ರತಿಪದಾರ್ಥ' ಎಂದು ಹೆಸರು. ಕಾಲ ಕ್ರಿ. ಶ. ೧೩ ನೇ ಶತಮಾನ. ವೇದಾಂತಾಚಾರ್ಯರೆಂದು ಪ್ರಸಿದ್ಧರಾದ 'ವೇಂಕಟನಾಥರ' 'ಎಪ್ಪತ್ತನಾಲ್ಕುಸಾವಿರ' ವ್ಯಾಖ್ಯಾನದ ಹೆಸರು ಮಾತ್ರ ಇದೆಯಾದರೂ ಅವರ 'ದ್ರಮಿಡೋಪನಿಷತ್ಸಾರ' 'ದ್ರಮಿಡೋಪನಿಷತ್‌ತಾತ್ಪರ್ಯರತ್ನಾವಳಿ' ಗ್ರಂಥಗಳು ತಿರುವಾಯ್ಮೊಳಿಯ ಪ್ರತಿಯೊಂದು ಪದ್ಯದ ಸಾರಾರ್ಥವನ್ನೂ ಗಣಿತ ಕ್ರಮದಲ್ಲಿ ನಿಖರವಾಗಿ ತಿಳಿಸುತ್ತವೆ. ಕಾಲ ಕ್ರಿ. ಶ. ೧೪ನೇ ಶತಮಾನ. ಇದೇ ರೀತಿ 'ಪೆರಿಯಜೀಯರ್' ಎಂದು ಪ್ರಸಿದ್ಧರಾದ 'ಮಣವಾಳಮಾಮುನಿ'ಗಳ ಸಂಗ್ರಹಗ್ರಂಥ 'ತಿರುವಾಯ್ಮೊಳಿನೂತ್ತಂದಾದಿ' ಮತ್ತು ಟಿಪ್ಪಣಿಗ್ರಂಥ 'ಜೀಯರ್ ಅರುಂಪದಂ'. ಕಾಲ ಕ್ರಿ. ಶ. ೧೫ ನೇ ಶತಮಾನ. ಇದೇ ರೀತಿ ಪ್ರಸಿದ್ಧ ಭಾರತೀಯ ಯಾತ್ರಿಕ 'ವೇಂಕಟಾಧ್ವರಿ'ಯ ಸಮಕಾಲೀನರಾದ 'ಅತ್ತಾನ್ ಜೀಯರ್'ರವರ ಟಿಪ್ಪಣಿಗ್ರಂಥ 'ಅದ್ವೈಯವಳ್ಳೆನ್ದಾನ್ ಅರುಂಪದಂ'. ಕಾಲ ಕ್ರಿ. ಶ. ೧೬ನೇ ಶತಮಾನ. 'ಈಡು' ಗ್ರಂಥದಲ್ಲಿ ಕ್ರಿ. ಶ. ೧೦ ನೇ ಶತಮಾನಕ್ಕಿಂತ ಹಿಂದಿನ 'ಆಳವಂದಾರ್', 'ತಮ್ಬಿರಾನ್', 'ನಾಥಮುನಿ' ಮುಂತಾದವರ ಅಭಿಪ್ರಾಯಗಳು ಅಲ್ಲಲ್ಲಿ ಸಂಗ್ರಹೀತವಾಗಿವೆ. ಇದೂ ಅಲ್ಲದೆ 'ತಿರುವಾಯ್ಮೊಳಿ'ಗೆ ೧೬-೧೭ ನೇ ಶತಮಾನಗಳಲ್ಲಿದ್ದ 'ಕಂಚಿಅಳಿಯ ಮಣವಾಳಜೀಯರ್' ಅವರ ಶ್ರೀಭಾಷ್ಯದ್ರಮಿಡಾಗಮಯಾದ್ಯದಶಕದ್ವೈಕಮತ್ಯ' ಎಂಬ ವಿಮರ್ಶಾತ್ಮಕಪ್ರಬಂಧವೂ, ಕ್ರಿ ಶ. ೧೭ ನೇ ಶತಮಾನದ ಕೊನೆಯ ಭಾಗದಲ್ಲಿ 'ಪೆರಿಯಪರಕಾಲಸ್ವಾಮಿ'ಗಳ 'ಹದಿನೆಂಟುಸಾವಿರವ್ಯಾಖ್ಯಾನ', ೧೮ನೇ ಶತಮಾನದ 'ರಂಗರಾಮಾನುಜಸ್ವಾಮಿ'ಗಳ 'ಒಂಭತ್ತುಸಾವಿರ' ವ್ಯಾಖ್ಯಾನ, 'ತೆರಕಣಾಂಬಿಸ್ವಾಮಿ' ಗಳೆಂದು ಪ್ರಸಿದ್ಧರಾದ 'ವೇದಾನ್ತಿರಾಮಾನುಜಮುನಿಗಳ' ವ್ಯಾಖ್ಯಾನ 'ಇಪ್ಪತ್ತನಾಲ್ಕುಸಾವಿರಶಬ್ದಾರ್ಥ', ಇತ್ಯಾದಿಗಳೂ ಇವೆ. ಹೀಗೆ ಒಂದುಸಾವಿರ ವರ್ಷಗಳ ಕಾಲ ಸತತವಾಗಿ ವ್ಯಾಖ್ಯಾನೋಪದೇಶರೂಪದಿಂದ ಬೆಳೆದ ಈ 'ತಮಿಳ್‌ವೇದ'ಗಳ ನಿಷ್ಕೃಷ್ಟವಾದ ಅರ್ಥಗಳ ಬಗ್ಗೆ ಈ ವಿಮರ್ಶೆಗಳೆಲ್ಲವೂ ಗಮನಾರ್ಹ.

1. ಸಕಲ ಉಪನಿಷತ್ತುಗಳ ಸಾರಾರ್ಥವಾಗಿರುವ ಇದು ಈಶಾವಾಸ್ಯಕ್ಕೆ ಸಾರ ಎಂಬುದನ್ನು ಗಮನಿಸಿ ಅಧ್ಯಯನ ಮಾಡಬಹುದು.

'ಉಯರ ರವುಯರ್ನಲಮುಡೈಯವನ್ ಯವನವನ್
ಮಯರ್ವರಮದಿನಲಮರುಳಿನನ್ ಯವನವನ್.
ಅಯರ್ವರುಮಮರರ್ಕಳಧಿಪತಿ ಯವನವನ್
ತುಯರರುಶುಡರಡಿ ತೊಳುದೆಳೆನ್ನ ಮನನೇ'.

ಪರಮಾತ್ಮ ಒಬ್ಬನೇ. ವಿಶ್ವಸಂಹಾರಕಾಲದಲ್ಲಿ ಇವೆಲ್ಲವನ್ನೂ ತನ್ನೊಳಗೆ ಏಕದೇಶದಲ್ಲಿ ಅಡಗಿಸಿಕೊಳ್ಳುವವನೂ ಇವನೇ. ಇಂತಹ ವ್ಯಾಪಕನಾದ ಪರಮಾತ್ಮನ ದಿವ್ಯರೂಪವನ್ನು ಅನುಭವಿಸುತ್ತಾ, ಮನಸಾರೆ ಅವನ ಸೇವೆ ಮಾಡೋಣ.[1] ತಿರು. ೧. ೧. ೧೦.

## ೩

೧. ಎಲ್ಲೆಲ್ಲೂ ವ್ಯಾಪಿಸಿ ವಿಶಾಲವಾಗಿರುವ ಪರಮಾತ್ಮನು ಸಣ್ಣ ಅಣುವಾದ ಜೀವಾತ್ಮಗಳೊಳಗೆ ವ್ಯಾಪಿಸುವಾಗ ತನ್ನ ಸ್ವರೂಪವನ್ನು ಸಂಕುಚಿತಗೊಳಿಸಿಕೊಳ್ಳುವುದಿಲ್ಲ. ೬೦೦೦ ಪಡಿ.

೨. ಪ್ರಳಯಕಾಲದಲ್ಲಿ ತನ್ನ ಹೊಟ್ಟೆಯೊಳಗೇ ವಿಶ್ವವೆಲ್ಲವನ್ನೂ ಅಡಗಿಸಿಕೊಂಡಿದ್ದ ಆ ಮಹಾವ್ಯಕ್ತಿಯಾದ ಪರಮಾತ್ಮನು ಒಂದೊಂದು ಸಣ್ಣ ಪರಮಾಣುಗಳೊಳಗೂ ಪ್ರವೇಶಿಸಿ ವ್ಯಾಪಿಸಿರುವನೆಂಬುದು ಬಹಳ ಆಶ್ಚರ್ಯ. ೯೦೦೦ ಪಡಿ.

೩. ಅಣುವಿನಲ್ಲೂ ವ್ಯಾಪಿಸಿರುವ ಸೌಕರ್ಯ ಪರಮಾತ್ಮನಿಗೆ ಇದೆ. ೨೪೦೦೦ ಪಡಿ.

೪. ಒಂದು ಸಣ್ಣ ಅಣುವಿನೊಳಗೆ ವ್ಯಾಪಿಸಿರುವಾಗಲೂ ಪರಮಾತ್ಮನು ತನ್ನ ಯಾವ ಅಂಶವನ್ನೂ ಕಮ್ಮಿ ಮಾಡಿಕೊಳ್ಳದೆಯೇ ಸ್ವಲ್ಪವೂ ಕಷ್ಟವಿಲ್ಲದೆ ಸುಲಭವಾಗಿ ವ್ಯಾಪಿಸುವನು. ಹೀಗೆ ಸಣ್ಣದರಲ್ಲಿ ದೊಡ್ಡವನಾದ ಅವನು ಒಳಹೊಕ್ಕು ವ್ಯಾಪಿಸುವಂತಹ ವಿಚಿತ್ರಶಕ್ತಿಯನ್ನು ಪಡೆದಿರುವನು. ೩೬೦೦೦ ಪಡಿ.

೫. ವಿಶ್ವದ ಕಾರಣಾವಸ್ಥೆಯಲ್ಲಿರುವಂತೆ ಕಾರ್ಯಾವಸ್ಥೆಯಲ್ಲೂ ಪರಮಾತ್ಮನು ಎಲ್ಲದರಲ್ಲೂ ವ್ಯಾಪಿಸಿರುವನು. ೧೨೦೦೦ ಪಡಿ.

೬. ಪ್ರತಿಯೊಂದು ವಸ್ತುವಿನಲ್ಲೂ ಪರಮಾತ್ಮನು ತನ್ನ ಪರಿಪೂರ್ಣತೆಯೊಡನೆ ವ್ಯಾಪಿಸಿರುವನು. ದ್ರ. ತಾ. ರ. ೧೧.

೭. ಈ ಪರಮಾತ್ಮನು ನನ್ನ ಹೃದಯದ ಸೂಕ್ಷ್ಮಪ್ರದೇಶದೊಳಗಿರುವಾಗಲೂ "ಈ ಭೂಮಿಗಿಂತ ಈ ಆಕಾಶಕ್ಕಿಂತ ಹಿರಿದಾಗಿಯೇ ಇರುವನು" ಎಂಬ ಛಾಂದೋಗ್ಯೋಪನಿಷತ್ತಿನ ಶಾಂಡಿಲ್ಯವಿದ್ಯಾಪ್ರಕರಣದ ವಚನವನ್ನು ಗಮನಿಸಿರಿ. (ಛಾಂ. ೩. ೧೪) ಜೀ. ಅ.

೮. 'ಅಣೋರಣೀಯಾನ್' ಎಂಬ ಮಂತ್ರದಲ್ಲೂ ಪರಮಾತ್ಮನು ಏನೂ ಶ್ರಮವಿಲ್ಲದೆ ಎಲ್ಲದರೊಳಗೂ ವ್ಯಾಪಿಸುವನೆಂದು ತಿಳಿಸಲಾಗಿದೆ. ತಿರು. ಸೂ. ೧. ವ್ಯಾಖ್ಯಾನ.

೯. ಪ್ರತಿ ವಸ್ತುವಿನಲ್ಲೂ ಪರಮಾತ್ಮ ತನ್ನ ಪೂರ್ಣತೆಯೊಡನೆ ವ್ಯಾಪಿಸಿರುವ ಸೌಕರ್ಯವನ್ನು ಪಡೆದಿರುವನು. ಅ. ಅ.

---

1. 'ಈಶಾ ವಾಸ್ಯಮಿದಂ ಸರ್ವಂ', 'ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ' ಎಂಬ ಮಂತ್ರಗಳ ಸ್ಪಷ್ಟವಾದ ವಿವರಣೆ ಇಲ್ಲಿರುವುದನ್ನು ಗಮನಿಸಿ. ಮತ್ತು 'ಪೂರ್ಣಮದಃ' ಶಾಂತಿಮಂತ್ರದ ಅರ್ಥವನ್ನು ಗಮನಿಸಿ.

ಪರನ್ದ ತಣ್ಣುರವ್ವೆಯುಳ್ ನೀರ್‌ತೊರುಂ ಪರನ್ದುಳನ್
ಪರನ್ದವಣ್ ಮಿದನ ನಿಲವಿಶುವ್ವೊಳಿವರ.
ಕರನ್ದ ಶಿಲಿಡನ್ದೊರುಮಿಡನ್ದಿಹಳ್ ಪೊರುಡೊರುಂ
ಕರನ್ದೆಂಗುಮ್ಪರನ್ದುಳನಿವ್ವೆಯುಣ್ಣ ಕರನೇ.

೧೦. ವಿಸ್ತಾರವೂ ಶೀತಲವೂ ಆದ ಸಮುದ್ರಜಲದ ಪ್ರತಿ ಪರಮಾಣುಗಳಲ್ಲಿಯೂ, ಭೂಮಿ ಅಂತರಿಕ್ಷ ಎಂಬ ಪಕ್ಷಪಾತವಿಲ್ಲದೆ ಎಲ್ಲೆಲ್ಲೂ ಸೂಕ್ಷ್ಮಶರೀರಗಳೊಳಗೆ ಸ್ವಯಂಪ್ರಕಾಶವಾಗಿರುತ್ತಿರುವ ಪ್ರತಿಯೊಂದು ಜೀವಾತ್ಮವಸ್ತುಗಳಲ್ಲಿಯೂ, ಯಾರಿಗೂ ತಿಳಿಯದಂತೆ ತನ್ನ ಪರಿಪೂರ್ಣತೆಯೊಡನೆ ಒಳಹೊಕ್ಕು ಇರುತ್ತ, ಹೀಗೆ ಎಲ್ಲ ವಸ್ತುಗಳಲ್ಲೂ ಪ್ರತ್ಯೇಕ ಪರಿಪೂರ್ಣವಾಗಿರುತ್ತ, ಹೀಗಿರುವ ಎಲ್ಲ ಜಗತ್ತನ್ನೂ ತನ್ನ ಹೊಟ್ಟೆಯೊಳಗೂ ಇರಿಸಿಕೊಂಡಿರುವವನು ಈ ಪರಮಾತ್ಮ ಎಂಬ ವಿಷಯ ವೃಥವಾದ ವೇದಪ್ರಮಾಣಾಧಾರಗಳಿಂದ ಮಾತ್ರ ತಿಳಿದುಬರುವುದು.

ಜೀವಾತ್ಮಗಳ ಕರ್ತೃತ್ವಸ್ವಾತಂತ್ರ್ಯಾದಿಗಳು ಎಂದಿಗೂ ಪರಮಾತ್ಮನ ಅಧೀನದಲ್ಲೇ ಇರುತ್ತವೆ. ಪರಮಾತ್ಮನು ಅವುಗಳೊಳಗೂ ಹೊಕ್ಕು ನಿಯಂತ್ರಿಸುತ್ತಿರುವುದೇ ಇದಕ್ಕೆ ಆಧಾರ ಎಂಬುದು ಈ 'ಪಾಶುರ' – ಪದ್ಯದ ತಾತ್ಪರ್ಯ. ಭಗವದ್ರಾಮಾನುಜರು ಶ್ರೀಭಾಷ್ಯದಲ್ಲಿ 'ಪರಾತ್ತು ತಚ್ಛ್ರುತೇಃ' ಎಂಬ ಬ್ರಹ್ಮಸೂತ್ರವನ್ನು ವ್ಯಾಖ್ಯಾನಿಸುವಾಗ ಈ ಅಂತಃಪ್ರವೇಶನಿಯಂತ್ರಣಾದಿಗಳನ್ನು ಸ್ಪಷ್ಟವಾಗಿ ಘೋಷಿಸುವ ಶ್ರುತಿವಚನಗಳನ್ನು ಉದಾಹರಿಸಿ ಇದೇ ಅರ್ಥವನ್ನು ಸಮರ್ಥಿಸಿರುವರು. ಶ್ರೀ.ಭಾ.ದ್ರ ಐ.

೧೧. ಪರಮಾತ್ಮನು ಸ್ವರೂಪದಿಂದಲೇ ವ್ಯಾಪಿಸಿರುವನೆಂಬ ಕೆಲವರ ಅಭಿಪ್ರಾಯವನ್ನು ಪರಮಾತ್ಮನ ಅಘಟಿತಘಟನಾಸಾಮರ್ಥ್ಯದಿಂದಲೂ ಸಾಧಿಸಲಾಗುವುದಿಲ್ಲ. ಅದು ನಮ್ಮ ಸಿದ್ಧಾಂತವಲ್ಲ. ಇತರರ ಮತವಾದೀತು. ಎಲ್ಲ ತತ್ತ್ವಗಳಲ್ಲೂ ಪರಮಾತ್ಮನು ಪೂರ್ಣನೆಂಬ ವೇದಾಂತದೇಶಿಕರ ಮಾತಿಗೆ ಪರಮಾತ್ಮನ ಶಕ್ತಿ ಪ್ರತಿವಸ್ತುಗಳಲ್ಲೂ ಪೂರ್ಣವಾಗಿರುವುದು ಎಂದಷ್ಟೇ ಅರ್ಥ ಎಂಬುದು ನನ್ನ ಗುರುಗಳ ಅಭಿಪ್ರಾಯ.

ಸ್ವರೂಪತಃ ಎಲ್ಲದರ ಹೊರಗೂ ಒಳಗೂ ಪರಮಾತ್ಮನು ವ್ಯಾಪಿಸಿರುವನು. ನಮ್ಮ ಸಿದ್ಧಾಂತದಲ್ಲಿ ಅಣು ಎಂದರೆ ಕಾಣಿಸುವ ವಸ್ತು ಎಂದಷ್ಟೇ ಒಪ್ಪಿರುವುದರಿಂದ ಇತರರು ಹೇಳುವ (ನಿರವಯವ) ಅಣುವನ್ನು ಒಪ್ಪಿ ಅದರೊಳಗೆ ಪರಮಾತ್ಮನ ಪ್ರವೇಶ ಸಾಧ್ಯವಿಲ್ಲವೆಂದು ಆಕ್ಷೇಪಿಸಲು ಅವಕಾಶವಿಲ್ಲ.

೧೮೦೦೦ ಪಡಿ.

೧೨. ಪ್ರಕಾಶರೂಪವಾದ ಎಲ್ಲ ಜೀವಾತ್ಮಗಳ ಒಳಗೂ ಹೊರಗೂ ಅವುಗಳಿಗೆ ತಿಳಿಯದಂತೆಯೇ ಪರಮಾತ್ಮ ವ್ಯಾಪಿಸಿರುವನು. ರಂ. ರಾ.

೧೩. ನಿತ್ಯಸೂರಿಗಳೂ ಮುಕ್ತರೂ ತಮ್ಮ ತಮ್ಮ ಧರ್ಮಭೂತಜ್ಞಾನದ ಮೂಲಕ ಎಲ್ಲೆಲ್ಲೂ ವ್ಯಾಪಿಸಿರುವರು. ಪರಮಾತ್ಮನು ಹೀಗೆ ಮಾತ್ರವಲ್ಲದೆ ತನ್ನ ಸ್ವರೂಪದಿಂದಲೂ ಎಲ್ಲೆಡೆ ವ್ಯಾಪಿಸಿರುವನು. ಇ. ಶ.

## ವೇದವ್ಯಾಸಮಹರ್ಷಿಗಳ ಬ್ರಹ್ಮಸೂತ್ರದ ಅಧಿಕರಣಗಳಲ್ಲಿ ಉಪಯುಕ್ತ ವಿಚಾರಗಳು[1]

೧. ಜಿಜ್ಞಾಸಾಧಿಕರಣ – ಬ್ರಹ್ಮಶಬ್ದದ ವಿವರಣೆ ಈಶಾವಾಸ್ಯದಲ್ಲಿರುವ ಪುರುಷಶಬ್ದದ ವಿವರಣೆಗೆ ಅವಶ್ಯಕವಾಗಿದೆ.

೨. ಅನ್ತರಧಿಕರಣ – ಆ ಸೂರ್ಯನೊಳಗಿರುವ ಪುರುಷನೇ ಪರಮಾತ್ಮ ಎಂಬ ನಿರ್ಣಯವೂ ಪುರುಷಶಬ್ದದ ನಿರ್ಣಯಕ್ಕೆ ಸಹಾಯಕ.

---

1. ಮಹಾಚಾರ್ಯರ 'ಅಧಿಕರಣಾರ್ಥಸಂಗ್ರಹ' ವನ್ನು ಅನುಸರಿಸಿ ಈ ಅಂಶಗಳನ್ನು ಗಮನಿಸಲಾಗಿದೆ. ಸೂತ್ರಭಾಷ್ಯಗಳನ್ನು ಅಧ್ಯಯನ ಮಾಡಿದಾಗ ಮತ್ತಷ್ಟು ವಿಷಯಗಳು ಗಮನಕ್ಕೆ ಬರುವುವು.

೩. ಸರ್ವತ್ರಪ್ರಸಿದ್ಧ್ಯಧಿಕರಣ – 'ಸರ್ವಭೂತೇಷು ಚಾತ್ಮಾನಂ' ಎಂಬುದರ ವಿವರಣೆಗೆ ಆಧಾರಗಳಿವೆ.

೪. ಅಂತರ್ಯಾಮ್ಯಧಿಕರಣ – 'ತದಂತರಸ್ಯ ಸರ್ವಸ್ಯ' ಎಂಬ ಈಶಾವಾಸ್ಯದ ಮುಖ್ಯಾರ್ಥವಿದೆ. 'ಯಮ' ಶಬ್ದದ ಮನುಸಮ್ಮತವಾದ ಅರ್ಥಕ್ಕೆ ಇದು ಪೋಷಕ.

೫. ಈಕ್ಷತಿಕರ್ಮಾಧಿಕರಣ – 'ಓಂ'ಕಾರದ ಅರ್ಥವೂ ಪರಮಪುರುಷನ ಸಾಕ್ಷಾತ್ಕಾರವಿಷಯವೂ ಇದೆ.

೬. ದೇವತಾಧಿಕರಣ – ದೇವತೆಗಳಿಗೂ ಪರಮಾತ್ಮನನ್ನುಪಾಸಿಸುವ ಅರ್ಹತೆ ಇದೆ ಎನ್ನಲಾಗಿದೆ.

೭. ಅಪಶೂದ್ರಾಧಿಕರಣ – ವೇದಾಧ್ಯಯನಸಂಸ್ಕಾರಾದಿ ಪರಂಪರೆಯಿಲ್ಲದವರಿಗೆ ಪರಮಾತ್ಮನನ್ನು ಉಪಾಸಿಸುವ ಅರ್ಹತೆ ಇಲ್ಲ ಎನ್ನಲಾಗಿದೆ.

೮. ವಾಕ್ಯಾನ್ವಯಾಧಿಕರಣ – ಈಶಾವಾಸ್ಯದ 'ಆತ್ಮ'ಶಬ್ದಾರ್ಥ ಪರಮಾತ್ಮ ಎಂಬುದೂ, ಅದೇ 'ಅಮೃತತ್ವ'ಕ್ಕೆ ಮುಖ್ಯಸಾಧನ ಎಂಬುದೂ, 'ದೃಷ್ಟಯೇ' ಎಂಬುದರ ವಿಷಯವೂ ಇದೆ.

೯. ಪ್ರಕೃತ್ಯಧಿಕರಣ – ಈಶತತ್ತ್ವದ ಸೂಕ್ಷ್ಮಾರ್ಥವಾದ ಈಶನ ಜಗತ್ಕಾರಣತ್ವದ ವಿಚಾರವಿದೆ.

೧೦. ಸರ್ವವ್ಯಾಖ್ಯಾನಾಧಿಕರಣ – ಜಗತ್ಕಾರಣತ್ವಕ್ಕೆ ಅವಶ್ಯಕವಾದ ಎಲ್ಲ ಇತರ ವಿಷಯಗಳನ್ನೂ ಅಳವಡಿಸಿಕೊಳ್ಳಬೇಕೆಂಬ ಹೆಚ್ಚಿನ ವಿಷಯ ಇದೆ.

೧೧. ಸ್ಮೃತ್ಯಧಿಕರಣ – ವೇದಾಂತವಿಚಾರಗಳನ್ನು ಸಾಂಖ್ಯಯೋಗಾದಿಮತಾನುಸಾರ ವಿವೇಚಿಸಬಾರದೆಂದ್ರು ಎಚ್ಚರಿಸಲಾಗಿದೆ. ಮನು ಮುಂತಾದವರ ಸ್ಮೃತೀತಿಹಾಸಪುರಾಣಾದಿಗಳ ಸಹಾಯದಿಂದ ವಿವೇಚಿಸಿ ಪೋಷಿಸಬೇಕೆಂದು ತಿಳುವಳಿಕೆ ಕೊಡಲಾಗಿದೆ.

೧೨. ಭೋಕ್ತ್ರಾಪತ್ತ್ಯಧಿಕರಣ – 'ಶುದ್ಧಂ', 'ಅಪಾಪವಿದ್ಧಂ' ಎಂಬ ಪದಗಳ ಅರ್ಥವಿದೆ.

೧೩. ಆರಂಭಣಾಧಿಕರಣ – 'ಆತ್ಮೈವಾಭೂತ್' ಎಂಬುದರ ಅರ್ಥವಿದೆ.

೧೪. ಕೃತ್ಸ್ನಪ್ರಸಕ್ತ್ಯಧಿಕರಣ – 'ಅನೇಜತ್' ಮಂತ್ರದಲ್ಲಿ ಹೇಳಿರುವ ಕೆಲವು ವಿಚಿತ್ರಶಕ್ತಿಗಳನ್ನು ಸಮರ್ಥಿಸಲಾಗಿದೆ.

೧೫. ಉತ್ಪತ್ತ್ಯಸಂಭವಾಧಿಕರಣ – ಈಶಾವಾಸ್ಯಾದಿ ಉಪನಿಷತ್ತುಗಳನ್ನು ಪಾಂಚರಾತ್ರಾಗಮಗಳಿಂದಲೂ ಪೋಷಿಸಬಹುದೆಂಬ ಅರ್ಥ ಸೂಚಿತವಾಗಿದೆ.

೧೬. ಪರಾಯತ್ತತ್ವಾಧಿಕರಣ – 'ಈಶಾ ವಾಸ್ಯಂ' ಎಂಬ ಭಾಗದ ಸಾರಾರ್ಥವೂ 'ಅಗ್ನೇ ನಯ' ಎಂಬ ಮಂತ್ರದ ಸಾರಾರ್ಥವೂ 'ಯಮ' ಶಬ್ದಾರ್ಥವೂ ಅಡಗಿದೆ.

೧೭. ಅಂಶಾಧಿಕರಣ – ಈಶಾವಾಸ್ಯಕ್ಕೆ ಅವಶ್ಯಕವಾದ ಜೀವಾತ್ಮಪರಮಾತ್ಮತತ್ತ್ವಗಳ ಬಗ್ಗೆ ನಿರ್ಣಯವಿದೆ.

೧೮. ಉಭಯಲಿಂಗಾಧಿಕರಣ – 'ಶುಕ್ರಂ', 'ಅಕಾಯಮವ್ರಣಂ', ಮುಂತಾದ ಅರ್ಥಗಳೂ 'ಕಲ್ಯಾಣತಮಂ ರೂಪಂ' ಎಂಬ ಅರ್ಥದ ಸೂಚನೆಯೂ ಇದೆ.

೧೯. ಪರಾಧಿಕರಣ – 'ಈಶಾವಾಸ್ಯಂ' ಎಂಬುದರ ಅರ್ಥವೂ 'ಅಮೃತಂ', 'ರಾಯೇ' ಎಂಬ ಅರ್ಥಗಳೂ ಇವೆ.

೨೦. ಫಲಾಧಿಕರಣ – 'ನಯ', 'ರಾಯೇ' 'ಸತ್ಯಧರ್ಮಾಯ ದೃಷ್ಟಯೇ' ಎಂಬವುಗಳ ಅರ್ಥವೂ 'ತೇನ ತ್ಯಕ್ತೇನ' ಎಂಬುದರ ಅರ್ಥಾಂತರವೂ ಇದೆ.

೨೧. ಆನಂದಾದ್ಯಧಿಕರಣ – ಈಶಾವಾಸ್ಯವಿದ್ಯೆಯನ್ನು ಕಲಿತು ಆಚರಿಸುವವರಿಗೆ ಅವಶ್ಯಕವಾದ ವಿಶೇಷ ವಿಚಾರಗಳಿವೆ.

೨೨. ಸಂಭೃತ್ಯಧಿಕರಣ – ಈಶಾವಾಸ್ಯದ 'ತದು ಸರ್ವಸ್ಯಾಸ್ಯ' ಮಂತ್ರದಲ್ಲಿರುವ ಈಶನ ಬಹಿರ್ವ್ಯಾಪ್ತಿಯು ಇತರ ವಿದ್ಯೆಗಳಿಗೆಲ್ಲ ಅನ್ವಯಿಸುವುದಿಲ್ಲ ಎಂಬುದರ ಸೂಚನೆ ಇದೆ.

೨೩. ವೇಧಾದ್ಯಧಿಕರಣ – ಕೆಲವು ಶಾಂತಿಮಂತ್ರಗಳಿಗೆ ಆಯಾ ಉಪನಿಷದರ್ಥಗಳೊಡನೆ ಹೊಂದಿಕೆಯಿಲ್ಲವಾಗಿ ಆಯಾ ವಿದ್ಯೆಗಳಿಗೆ ಅವು ಅವಶ್ಯಕವಲ್ಲ ಎನ್ನಲಾಗಿದೆ. (ಪ್ರಕೃತ 'ಪೂರ್ಣಮದಃ' ಎಂಬ ಮಂತ್ರದಲ್ಲಿ ಅರ್ಥವಿರೋಧವಿಲ್ಲದುದರಿಂದ ವಿದ್ಯೆಗೆ ಉಪಯುಕ್ತವೆ ? ಎನ್ನುವ ಚರ್ಚೆಗೆ ಇವು ಪ್ರೇರಕವಾಗಿವೆ).

೨೪. ಹಾನ್ಯಧಿಕರಣ – ವಿನಾಶಶಬ್ದಾರ್ಥವೂ 'ಏನಃ ಯುಯೋಧಿ' ಎಂಬ ಅರ್ಥವೂ 'ನ ಕರ್ಮ ಲಿಪ್ಯತೇ'ಯ ಅರ್ಥವೂ ಇದೆ.

೨೫. ಸಾಂಪರಾಯಾಧಿಕರಣ – ಮುಮುಕ್ಷುವಿಗೆ ದೇಹವಿಯೋಗವಾಗುವಾಗಲೇ ಪುಣ್ಯಪಾಪಗಳೆಲ್ಲವೂ ಕಳೆದು ಹೋಗುವುವೆಂದು ತಿಳಿಸಲಾಗಿದೆ.

೨೬. ಅನಿಯಮಾಧಿಕರಣ – 'ಸುಪಥಾ' ಎಂಬುದರ ವಿಚಾರವಿದೆ.

೨೭. ಅಕ್ಷರಧ್ಯಧಿಕರಣ – ಈಶಾವಾಸ್ಯದಲ್ಲಿ ಹೇಳದಿರುವ, ಈಶಾವಾಸ್ಯವಿದ್ಯೆಗೆ ಅವಶ್ಯಕವಾದ ವಿಚಾರವಿದೆ.

೨೮. ಲಿಂಗಭೂಯಸ್ತ್ವಾಧಿಕರಣ – ಈಶಾವಾಸ್ಯದ ಈಶನು ಯಾರೆಂಬುದರ ಉತ್ತರವಾಗಿ ಪರದೇವತಾ ತತ್ತ್ವದ ನಿರ್ಣಯವಿದೆ.

೨೯. ಶರೀರೇಭಾವಾಧಿಕರಣ – 'ಸ ಪರ್ಯಗಾತ್' ಮಂತ್ರದ ತಾತ್ಪರ್ಯ ಮತ್ತು 'ಸೋಽಹಮಸ್ಮಿ' 'ಸತ್ಯ ಧರ್ಮಾಯ ದೃಷ್ಟಯೇ'ಗಳ ಅರ್ಥವಿದೆ.

೩೦. ಅಂಗಾವಬದ್ಧಾಧಿಕರಣ – ಓಂಕಾರದ ಸ್ವರಗಳು ಭಿನ್ನವಾಗಿದ್ದರೂ ಉದ್ಗೀಥರೂಪದಿಂದ ಓಂಕಾರವು ಎಲ್ಲ ವೇದಶಾಖೆಗಳಲ್ಲೂ ಅನ್ವಯಿಸುವುದು.

೩೧. ವಿಕಲ್ಪಾಧಿಕರಣ – ಈಶಾವಾಸ್ಯ ವಿದ್ಯೆ ಒಂದೇ ಅಲ್ಲ ಯಾವುದಾದರೊಂದು ವಿದ್ಯೆಯನ್ನು ಕಲಿತು ಆಚರಿಸಿ ದರೆ ಸಾಕು, ಮತ್ತೊಂದು ಅನವಶ್ಯಕ, ಮತ್ತು ಕೂಡದು ಎಂದು ಎಚ್ಚರಿಸಲಾಗಿದೆ.

೩೨. ಯಥಾಶ್ರಯಭಾವಾಧಿಕರಣ – ಓಂಕಾರದ ಉದ್ಗೀಥರೂಪದ ಉಪಾಸನ ಅತ್ಯವಶ್ಯಕವೇನಲ್ಲ. ಉಪಾ ಸನಾಂಗಕರ್ಮವು ಶೀಘ್ರ ಫಲಪ್ರದವಾಗಬೇಕೆಂಬ ಆಸೆ ಇದ್ದಾಗ ಮಾತ್ರ ಅವಶ್ಯ ಎಂದು ತಿಳಿಸಲಾಗಿದೆ.

೩೩. ಪುರುಷಾರ್ಥಾಧಿಕರಣ – ವಿದ್ಯಾವಿದ್ಯೆಗಳ ಅಂಗಾಂಗಿಭಾವ ಮತ್ತು ಉಪಯೋಗಗಳನ್ನು ತಿಳಿಸಲಾಗಿದೆ.

೩೪. ಪಾರಿಪ್ಲವಾಧಿಕರಣ – ಈಶಾವಾಸ್ಯದ ಬಗ್ಗೆ ಇರುವ ಕಥೆ ಆಖ್ಯಾಯಿಕೆಗಳೂ ಸಹ, ಈಶಾವಾಸ್ಯವಿದ್ಯೆಗೆ ಉಪಯುಕ್ತ ಎಂಬ ಅರ್ಥವನ್ನು ಸೂಚಿಸಲಾಗಿದೆ.

೩೫. ಅಗ್ನೀಂಧನಾದ್ಯಧಿಕರಣ – ಅಗ್ನಿಪೂಜೆಯಿಲ್ಲದ ಸನ್ಯಾಸಿ ಯೋಗಿ ಮುಂತಾದವರಿಗೂ ಉಪಾಸನಾಧಿಕಾರವಿದೆ ಎಂದು ತಿಳಿಸಲಾಗಿದೆ.

೩೬. ಸರ್ವಾಪೇಕ್ಷಾಧಿಕರಣ – ಗೃಹಸ್ಥರಿಗೂ ಅಗ್ನಿಪೂಜಾದಿ ಕರ್ಮಗಳನ್ನು ಅಂಗವಾಗಿಟ್ಟುಕೊಂಡು ಮಾಡುವ ಉಪಾಸನೆಯಿಂದ ಸನ್ಯಾಸಿಗಳಾಗದೆಯೇ ಮುಕ್ತಿಯುಂಟು ಎನ್ನಲಾಗಿದೆ.

೩೭. ಶಮದಮಾದ್ಯಧಿಕರಣ – ಶಮದಮಾದ್ಯಾತ್ಮಗುಣಗಳು ಉಪಾಸಕನಿಗೆ ಅತ್ಯವಶ್ಯಕ ಎಂದು ತಿಳಿಸಲಾಗಿದೆ.

೩೮. ವಿಹಿತತ್ವಾಧಿಕರಣ – ನಿಷ್ಕಾಮಕರ್ಮವೇ ನಿಜವಾದ ಆಯಾ ಆಶ್ರಮಗಳಿಗೆ ಉಚಿತವಾದ ಕರ್ಮ ಎಂದು ಸ್ಪಷ್ಟಪಡಿಸಲಾಗಿದೆ.

೩೯. ವಿಧುರಾಧಿಕರಣ – ಪತ್ನಿಯಿಲ್ಲದ ವಿಧುರರಿಗೂ ಉಪಾಸನೆ ಉಂಟೆಂದು ತಿಳಿಸಲಾಗಿದೆ.

೪೦. ತದ್ಭೂತಾಧಿಕರಣ – ವ್ರತಭ್ರಷ್ಟರಾದವರಿಗೆ ಉಪಾಸನೆಯಲ್ಲಿ ಅಧಿಕಾರವಿಲ್ಲವೆನ್ನಲಾಗಿದೆ.

೪೧. ಸಹಕಾರ್ಯಂತರವಿಧ್ಯಧಿಕರಣ – ಪ್ರತಿಯೊಬ್ಬ ಉಪಾಸಕನಿಗೂ ಅತ್ಯವಶ್ಯಕ ಇರಬೇಕಾದ "ಬಾಲ್ಯ, ಪಾಂಡಿತ್ಯ, ಮೌನ" ಎಂಬ ಗುಣಗಳನ್ನು ನಿರ್ದೇಶಿಸಲಾಗಿದೆ.

೪೨. ಅನಾವಿಷ್ಕಾರಾಧಿಕರಣ – ಬಾಲ್ಯ ಎಂಬುದರ ಅರ್ಥ ವಿವರಿಸಲಾಗಿದೆ.

೪೩. ಮುಕ್ತಿಫಲಾಧಿಕರಣ – ಉಪಾಸಕನು ಸಜ್ಜನರಿಗೆ ಮಾಡುವ ತೊಂದರೆಗಳು ವಿದ್ಯಾಂಗವಾದ ಕರ್ಮಗಳಿಂದಾಗುವ ಅವನ 'ಮೃತ್ಯುತರಣ' ಫಲಕ್ಕೆ ತಡೆಯೊಡ್ಡುವುವು ಎಂದು ಎಚ್ಚರಿಸಲಾಗಿದೆ.

೪೪. ಆವೃತ್ತ್ಯಧಿಕರಣ – ವಿದ್ಯೆಯ ಬಗ್ಗೆ ಉಪಾಸಕನಿಗೆ ತಿಳಿದಿರಬೇಕಾದ ವಿದ್ಯಾಸ್ವರೂಪ, ವಿದ್ಯೆಯ ನಿರಂತರ ಅಭ್ಯಾಸ, ಮುಂತಾದ ಕೆಲವು ರಹಸ್ಯಗಳನ್ನು ತಿಳಿಸಲಾಗಿದೆ. "ಕುರ್ವನ್ನೇವ" 'ಶತಂ ಸಮಾಃ' ಎಂಬ ಪದಗಳ ಸೂಚ್ಯಾರ್ಥ ಇದರಲ್ಲಿದೆ.

೪೫. ಆತ್ಮತ್ವೋಪಾಸನಾಧಿಕರಣ – ಯಾವುದೇ ಉಪಾಸಕನೂ ಸಹ 'ಆತ್ಮನ್ನೇವಾನುಪಶ್ಯತಿ' 'ಸರ್ವಭೂತೇಷು ಚಾತ್ಮಾನಂ' 'ಆತ್ಮೈವಾಭೂತ್' 'ಸೋऽಹಮಸ್ಮಿ' ಎಂಬ ವಿಚಾರಗಳನ್ನು ಹೇಗೆ ಅಳವಡಿಸಿಕೊಳ್ಳಬೇಕೆಂಬುದರ ನಿರ್ಣಯವಿದೆ.

೪೬. ಪ್ರತೀಕಾಧಿಕರಣ – ಪರಮಾತ್ಮನನ್ನು ಜಗತ್ತಿನ ನಾನಾವಸ್ತುಗಳೆಂದು ನಿಕೃಷ್ಟರೀತಿಯಲ್ಲಿ ಉಪಾಸಿಸಕೂಡದೆಂದು ಎಚ್ಚರಿಸಲಾಗಿದೆ. (ಪ್ರತೀಕೋಪಾಸನೆ ಮುಮುಕ್ಷುಗಳಿಗೆ ನಿಷಿದ್ಧ).

೪೭. ಆಶ್ರಯಾಣಾಧಿಕರಣ – 'ಕುರ್ವನ್ನೇವ' 'ಶತಂ ಸಮಾಃ' ಎಂಬ ಅರ್ಥಗಳ ನಿರ್ಣಯವಿದೆ.

೪೮. ತದಧಿಗಮಾಧಿಕರಣ – ವಿದ್ಯೆಯ ಕೆಲವು ಮಹಿಮೆಗಳನ್ನು ತಿಳಿಸುತ್ತಾ ವಿದ್ಯೆಯ ಜೊತೆಗಿರುವ ಅವಿದ್ಯೆ

ಯೆಂಬ ಕರ್ಮಗಳಿಂದಾಗುವ 'ಮೃತ್ಯುಂ ತೀರ್ತ್ವಾ' ಎಂಬ ಮೃತ್ಯುತರಣದ ವಿಶೇಷ ರೀತಿಗಳನ್ನು ತಿಳಿಸಲಾಗಿದೆ.

೪೯. ಇತರಾಧಿಕರಣ – ಮುಮುಕ್ಷುವಿಗೆ ಪುಣ್ಯವೂ ಹೇಗೆ ಪಾಪವೆನಿಸುವುದು ಎಂಬುದನ್ನು ತಿಳಿಸಲಾಗಿದೆ.

೫೦. ಅಗ್ನಿಹೋತ್ರಾದ್ಯಧಿಕರಣ – ವಿದ್ಯಾಂಗವಾದ ನಿತ್ಯನೈಮಿತ್ತಿಕಾದಿ ಪುಣ್ಯಕರ್ಮಗಳನ್ನು ಅತ್ಯವಶ್ಯಕವೆಂದು ತಿಳಿಸಲಾಗಿದೆ. ಇವು ಮುಮುಕ್ಷುವಿಗೆ ಪಾಪವೆನಿಸುವುದಿಲ್ಲ ಎಂದು ತಾತ್ಪರ್ಯ. ಇದೇ ಅವಿದ್ಯಾಶಬ್ದಾರ್ಥವಾದ ನಿಷ್ಕಾಮಕರ್ಮ.

೫೧. ಪರಸಂಪತ್ತ್ಯಧಿಕರಣ – 'ವಾಯುರನಿಲಮಮೃತಂ' ಎಂಬುದರ ಕೆಲವು ಸೂಕ್ಷ್ಮಾರ್ಥಗಳಿವೆ.

೫೨. ರಶ್ಮ್ಯನುಸಾರಾಧಿಕರಣ – 'ವ್ಯೂಹ ರಶ್ಮೀನ್' ಎಂಬುದರ ಸೂಚ್ಯಾರ್ಥವಿದೆ.

೫೩. ಅರ್ಚಿರಾದ್ಯಧಿಕರಣ
೫೪. ವಾಯ್ವಧಿಕರಣ
೫೫. ತಟಿದಧಿಕರಣ
೫೬. ಆತಿವಾಹಿಕಾಧಿಕರಣ
} 'ಸುಪಥಾ ಎಂಬುದರ ವಿವರಣೆ ಇದೆ.

೫೭. ಕಾರ್ಯಾಧಿಕರಣ – 'ಸುಪಥಾ' ಎಂದು ತಿಳಿಸಿರುವ ಮಾರ್ಗದಲ್ಲಿ ಹೋಗುವ ಉಪಾಸಕರನ್ನು ನಿರ್ಣಯಿಸಲಾಗಿದೆ.

೫೮. ಸಂಪದ್ಯಾವಿರ್ಭಾವಾಧಿಕರಣ – 'ಸೋಽಹಮಸ್ಮಿ' 'ರಾಯೇ' ಎಂಬವುಗಳ ಅರ್ಥವೂ 'ಶುಕ್ರಂ' 'ಅಕಾಯಂ' ಮುಂತಾದುವುಗಳ ಜೀವಾತ್ಮಪರವಾದ ಅರ್ಥವೂ ಇದೆ.

೫೯. ಬ್ರಾಹ್ಮಾಧಿಕರಣ – 'ಸತ್ಯಧರ್ಮಾಯ ದೃಷ್ಟಯೇ' ಎಂಬುದರ ಜೀವಾತ್ಮಸ್ವರೂಪಪರವಾದ ಅರ್ಥವಿದೆ.

೬೦. ಸಂಕಲ್ಪಾಧಿಕರಣ – 'ಮನೀಷೀ' ಎಂಬುದರ ಜೀವಾತ್ಮಪರವಾದ ಅರ್ಥವಿದೆ.

೬೧. ಅಭಾವಾಧಿಕರಣ – 'ಅಕಾಯಂ' ಎಂಬ ಪದಕ್ಕೆ ಜೀವಾತ್ಮಪರವಾದ ವಿಶೇಷಾರ್ಥವಿದೆ.

೬೨. ಅನಾವೃತ್ತ್ಯಧಿಕರಣ – 'ರಾಯೇ' ಎಂಬುದರ ಶಾಶ್ವತತೆಯನ್ನು ತಿಳಿಸಲಾಗಿದೆ.

* * *

## ವೇದಾಂಗಗಳು, ಉಪಾಂಗಗಳು

ವೇದಗಳಿಗೆ ಆರು ಅಂಗಗಳೂ ನಾಲ್ಕು ಉಪಾಂಗಗಳೂ ಇವೆ. ಸಾಂಗವಾಗಿ ವೇದಾಧ್ಯಯನ ಮಾಡಿದ ನಂತರವೇ ಕರ್ಮಕಾಂಡ ಬ್ರಹ್ಮಕಾಂಡಗಳನ್ನು ವಿಮರ್ಶಿಸುವ ಅರ್ಹತೆ ಬರುವುದು. ಅಂಗೋಪಾಂಗಗಳನ್ನೂ, ರಹಸ್ಯಗಳನ್ನೂ ಅರಿಯದೆ ವೇದದ ಯಾವುದೇ ಅರ್ಥವನ್ನೂ 'ಇದಮಿತ್ಥಂ' ಎಂದು ನಿರ್ಣಯಿಸಲು ಸಾಧ್ಯವಿಲ್ಲ.

ಶಿಕ್ಷಾ, ವ್ಯಾಕರಣ, ಛಂದಸ್, ನಿರುಕ್ತ, ಜ್ಯೋತಿಷ, ಕಲ್ಪಗಳು ವೇದದ ಆರು ಅಂಗಗಳು. ಪುರಾಣ, ನ್ಯಾಯ, ಮೀಮಾಂಸೆ, ಧರ್ಮಶಾಸ್ತ್ರಗಳು ಉಪಾಂಗಗಳು. ಇವುಗಳಲ್ಲಿ ಧರ್ಮಶಾಸ್ತ್ರಗಳೂ, ಪುರಾಣಗಳೂ ಕ್ರಮವಾಗಿ ವೇದದ ಕರ್ಮಕಾಂಡ ಮತ್ತು ಬ್ರಹ್ಮಕಾಂಡಗಳಿಗೆ ಪ್ರಾಯಶಃ ಪೋಷಕಗಳಾಗಿವೆ, ಗತಕಾಲದ ವಿಚಾರಗಳನ್ನು ಕೇಳಿ ಬರೆದರೆ ಅದು ಪುರಾಣವೆನಿಸುವುದು. ನೋಡಿ ಬರೆದರೆ ಅದು ಇತಿಹಾಸಗ್ರಂಥವೆನಿಸು

ವುದು. ಪುರಾಣಕ್ಕಿಂತ ಇತಿಹಾಸ ಶ್ರೇಷ್ಠವಾದುದು. ಇತಿಹಾಸದಲ್ಲೂ ರಾಮಾಯಣ, ಭಾರತಗಳು ಪ್ರಧಾನವೆನಿಸಿವೆ. ವೇದ, ವೇದಾಂತಗಳಲ್ಲಿ ಪುರುಷಸೂಕ್ತವು ಪ್ರಧಾನವೂ ಶ್ರೇಷ್ಠವೂ ಆಗಿರುವಂತೆಯೇ ಮಹಾಭಾರತದಲ್ಲಿ ಭಗವದ್ಗೀತೆಯೂ, ಪುರಾಣಗಳಲ್ಲಿ ವಿಷ್ಣುಪುರಾಣವೂ, ಧರ್ಮಶಾಸ್ತ್ರಗಳಲ್ಲಿ ಮನುಸ್ಮೃತಿಯೂ ಶ್ರೇಷ್ಠವೆನಿಸಿವೆ. ವೈದಿಕನ್ಯಾಯ ಮತ್ತು ಮೀಮಾಂಸೆಗಳನ್ನು ಜೈಮಿನಿ ಮತ್ತು ವ್ಯಾಸರಿಬ್ಬರೂ ತಮ್ಮ ಸೂತ್ರಗ್ರಂಥಗಳಲ್ಲಿ ಸಂಗ್ರಹಿಸಿ ನಿರೂಪಿಸಿರುವರು. ಈಶಾವಾಸ್ಯಕ್ಕೆ ಸೂತ್ರಗ್ರಂಥಗಳಿಂದಾಗುವ ಉಪಯೋಗವನ್ನು ಪರಿಶಿಷ್ಟ ಭಾಗದಲ್ಲಿ ನಿರೂಪಿಸಿ ಆಗಿದೆ. ಆಗಮಗಳಲ್ಲಿ ಪಾಂಚರಾತ್ರಾಗಮವು 'ಚತುರ್ವೇದಸಾರ', 'ಪಂಚಮವೇದ' ಎಂದು ಪ್ರಸಿದ್ಧವಾಗಿದ್ದರೂ ವೇದಗಳಿಗೆ ಸ್ಮೃತಿಗಳಂತೆ ಪೋಷಕಅಂಗವಾಗಿಯೂ ಇದೆ. ಇದರಿಂದಾಗುವ ಸಹಾಯವನ್ನು ಮುಂದೆ ಪ್ರತ್ಯೇಕವಾಗಿ ನಿರೂಪಿಸಲಾಗುವುದು. ಹೀಗೆ ಕೆಲವು ವೇದಾಂಗಗಳ ಸಹಾಯವನ್ನೂ ವಿವರಿಸಲಾಗುವುದು.

# ಸ್ಮೃತಿ ಇತಿಹಾಸ ಗ್ರಂಥಗಳಲ್ಲಿ ಉಪಯುಕ್ತ ವಿಚಾರಗಳು

## 1. ಯಾಜ್ಞವಲ್ಕ್ಯಸ್ಮೃತಿ

೧

ವಿವಿಧವೇದಶಾಖೆಗಳಿಗೆ ಪ್ರತ್ಯೇಕ ಅಂಗೋಪಾಂಗಗಳಿದ್ದು, ಅವರಂತೆ ಯಾಜ್ಞವಲ್ಕ್ಯರು ಪಡೆದ ವೇದಶಾಖೆಗಳಿಗೆ ಯಾಜ್ಞವಲ್ಕ್ಯಸ್ಮೃತಿಯೂ ಯೋಗಯಾಜ್ಞವಲ್ಕ್ಯ ಗ್ರಂಥವೂ ನೇರವಾಗಿ ಉಪಾಂಗಗಳಾಗಿವೆ.

ಈ ಬಗ್ಗೆ ಯಾಜ್ಞವಲ್ಕ್ಯರ ವಚನವೇ ಸುಸ್ಪಷ್ಟವಾಗಿದೆ. "ಪರಮಾತ್ಮಯೋಗವನ್ನು ಸಾಧಿಸಲು ಸೂರ್ಯನಿಂದ ನಾವು ಪಡೆದ ಆರಣ್ಯಕ ಉಪನಿಷತ್ತುಗಳನ್ನೂ ನಮ್ಮದೇ ಆದ ಯೋಗಶಾಸ್ತ್ರ ಗ್ರಂಥವನ್ನೂ ಈ ಧರ್ಮಶಾಸ್ತ್ರವನ್ನೂ ಚೆನ್ನಾಗಿ ತಿಳಿದಿರಬೇಕು".

ಯಾ. ಸ್ಮೃ. ३. ೧೧೦.

೨

ಆತ್ಮಜ್ಞಾನರೂಪವಾದ ವಿದ್ಯೆಯಲ್ಲಿ ಮಾತ್ರ ಸನ್ಯಾಸಿಯೂ ಯೋಗಿಯೂ ಮನವಿಡಬೇಕೆಂಬುದು ಶಾಸ್ತ್ರವಿರುದ್ಧವಾದುದು ಎಂಬುದಾಗಿ ಆಪಸ್ತಂಬವಚನವು ಸ್ಪಷ್ಟವಾಗಿದೆ. ಬರಿಯ ಕರ್ಮಾಚರಣೆಯೂ ಸರಿಯಲ್ಲ, ಬರಿಯ ಜ್ಞಾನನಿಷ್ಠೆಯೂ ಸರಿಯಲ್ಲ. ವಿಶೇಷರೀತಿಯ ಕರ್ಮಾಚರಣೆಯನ್ನು ಅಂಗವಾಗಿ ಉಳ್ಳ ಜ್ಞಾನವಿಶೇಷವು ಮಾತ್ರ ಪರಮಾತ್ಮಯೋಗರೂಪವಾದ ಮುಕ್ತಿಗೆ ಸಾಧನ ಎಂಬುದಾಗಿ "ಅಂಧಂ ತಮಃ", ವಿದ್ಯಾಂ ಚಾವಿದ್ಯಾಂ ಚ" ಎಂಬ ಮಾಧ್ಯಂದಿನ ಮಂತ್ರಗಳೂ ಘೋಷಿಸುತ್ತವೆ. "ವಿವಿದಿಷಂತಿ ಯಜ್ಞೇನ" ಮುಂತಾದ ಶ್ರುತಿವಚನಗಳಲ್ಲಿರುವ ತೃತೀಯಾವಿಭಕ್ತಿಯೂ ಯಜ್ಞಾದಿಗಳ ಅಂಗತ್ವವನ್ನು ಸ್ಪಷ್ಟಪಡಿಸುತ್ತದೆ. ಕರ್ಮಜ್ಞಾನಗಳ ಈ ಜೋಡಣೆಯಲ್ಲಿ ಜ್ಞಾನವೇ ಪ್ರಧಾನಸಾಧನ ಎಂಬ ಬಗ್ಗೆ "ವಿದ್ಯಯಾಽಮೃತಮಶ್ನುತೇ" ಎಂಬ ಮನುಸ್ಮೃತಿವಚನವೂ ಆಧಾರವಾಗಿದೆ. "ಸ್ವಕರ್ಮಾನುಷ್ಠಾನದೊಡನೆ ಆತ್ಮದರ್ಶನವೂ ಆದರೆ ಮಾತ್ರ ಮುಕ್ತಿ" ಎಂದು ಯೋಗಯಾಜ್ಞವಲ್ಕ್ಯವಚನವೂ ಇದೆ. "ಪುಲಸ್ತ್ಯಮಹರ್ಷಿ"ಯೂ 'ಜ್ಞಾನಕರ್ಮಗಳ ವಿಶಿಷ್ಟ ಸಂಯೋ

ಜನೆಯೇ ಪರಮಪುರುಷಪ್ರಾಪ್ತಿಗೆ ಸಾಧನ' ಎಂದಿರುವರು. ಹೀಗೆಯೇ ಮಾರ್ಕಂಡೇಯ, ವ್ಯಾಸ, ಅಶ್ವಿನಿ, ವಿಷ್ಣು, ಹಾರೀತ, ಬೋಧಾಯನ ಮುಂತಾದವರ ವಚನಗಳಿವೆ.

ಯಾ. ಸ್ಮೃ. ೩.೫೭. ಅಪರಾರ್ಕಟೀಕೆ.[1]

೩

'ಜೀವಾತ್ಮದೊಳಗಿರುವ ಪರಮಾತ್ಮನನ್ನು ಧ್ಯಾನಯೋಗದಿಂದ ಮಾತ್ರ ಕಾಣಬಹುದು' ಎಂಬುದು ಯಾಜ್ಞವಲ್ಕ್ಯರ ವಚನ. 'ಜೀವಾತ್ಮನು ಪರಮಾತ್ಮನ ಆಸರೆಯಲ್ಲೇ ಇರುವನೆಂಬ ತತ್ತ್ವವನ್ನಿಟ್ಟುಕೊಂಡು ಪರಮಾತ್ಮನೊಡನೆ ಏಕೀಭವಿಸುವಂತೆ ಭಾವಿಸಿದರೆ ಇದೇ ಧ್ಯಾನ, ಇದೇ ಯೋಗ, ಇದೇ ಮುಕ್ತಿಕಾರಣ. ಬೇರೆ ಎಲ್ಲ ವಿಚಾರಗಳೂ ಬರಿಯ ಗ್ರಂಥವಿಸ್ತಾರಕ್ಕಾಗಿ ಮಾತ್ರ' ಎಂದು ದಕ್ಷಸ್ಮೃತಿಯ ವಚನ. 'ಎಲ್ಲೆಡೆಯೂ ವ್ಯಾಪಿಸಿ ಅತಿಸೂಕ್ಷ್ಮವಾಗಿರುವ ಅತೀಂದ್ರಿಯನಾದ ವಿಷ್ಣುವನ್ನು ಧ್ಯಾನಿಸಬೇಕು' ಎಂಬುದು ಶಂಖಸ್ಮೃತಿ ವಚನ.[2]

ಯಾ. ಸ್ಮೃ. ೩. ೬೩. ಅಪ.

೪

ಸತ್ಯ, ಅಸ್ತೇಯ, ಅಕ್ರೋಧ, ಹ್ರೀ, ಶೌಚ, ಧೀ, ಧೃತಿ, ದಮ, ಇಂದ್ರಿಯನಿಗ್ರಹ, ವಿದ್ಯೆಗಳು ಹತ್ತು ಸಾಮಾನ್ಯ ಮಾನವಧರ್ಮಗಳು. ಇವು ಯಾವುದೇ ಆತ್ಮಜ್ಞಾನಿಗೂ ಯಾವಾಗಲೂ ಇರಬೇಕಾದವು. ಇದು ಯಾಜ್ಞವಲ್ಕ್ಯರ ನುಡಿ. ಈ ವಿಚಾರವನ್ನು ಮನುವೂ ಹೀಗೆಯೇ ಹೇಳಿರುವನು. ಹ್ರೀಗೆ ಬದಲು ಕ್ಷಮೆ ಎಂಬುದಷ್ಟೇ ವ್ಯತ್ಯಾಸ.[3]

ಯಾ. ಸ್ಮೃ. ೩. ೬೫. ಅಪ.

೫

ಪರಮಾತ್ಮಧ್ಯಾನಿಯಾದ ಯೋಗಿಯೂ ಕೂಡ ಶಬ್ದಗಳ ನಾದಗಳನ್ನೂ ಅವುಗಳ ಉದಯ ಲಯಗಳನ್ನೂ ಅರಿತು, ತಾತ್ತ್ವಿಕವಾದ ರಾಗ, ತಾಳ, ಮೇಳಗಳಿಂದ ಕೂಡಿದ ವೀಣಾವಾದನ ಶ್ರುತಿಯೊಡನೆ ಋಙ್ಮಂತ್ರಗಳನ್ನೂ, ಪರಮಾತ್ಮವಿಷಯಕವಾದ ಹಾಡುಗಳನ್ನೂ ಹಾಡುತ್ತಾ, ಅನಾಯಾಸವಾಗಿ ಮುಕ್ತಿಮಾರ್ಗದಲ್ಲಿ ಸಾಗುವನು.[4]

ಯಾ. ಸ್ಮೃ. ೩. ೧೧೦ ರಿಂದ ೧೧೪.

---

1. ಶಿಲಾಹಾರ ವಂಶದ ಪ್ರಖ್ಯಾತ ರಾಜರಲ್ಲಿ ಅಪರಾರ್ಕನು ವೀರನೂ ವಿದ್ವತ್ಕವಿಯೂ ಆಗಿದ್ದನು. ಇವನ ಕಾಲ ಕ್ರಿ. ಶ. ೧೧, ೧೨ ನೆಯ ಶತಮಾನಗಳು. ಒಂದು ವಿಷಯಕ್ಕೆ ಸಂಬಂಧಿಸಿದಂತೆ ವಿವಿಧ ಶ್ರುತಿ, ಸ್ಮೃತಿ, ಪುರಾಣಾದಿ ವಚನಗಳನ್ನು ಉದ್ಧರಿಸಿ ವಿಮರ್ಶಿಸಿ ನಿರ್ಣಯಿಸುವ ಇವನ ಟೀಕೆಯ ಗ್ರಂಥಶೈಲಿ ಸಂಶೋಧಕರಿಗೆ ಬಹಳ ಉಪಯುಕ್ತವಾಗಿದೆ.

2. "ಈಶಾ ವಾಸ್ಯಮಿದಂ ಸರ್ವಂ" ಎಂಬ ಅಭಿಪ್ರಾಯವು 'ವಿದ್ಯಾಂ ಚ' ಎಂಬಲ್ಲಿಯೂ ಉಪಯುಕ್ತ ಎಂದು ಇದರಿಂದ ಸೂಚಿತವಾಗುವುದು.

3. 'ವಿದ್ಯಾಂ ಚ', 'ಸಂಭೂತಿಂ ಚ' ಮಂತ್ರಗಳಲ್ಲಿ ಚಕಾರಗಳ ಅರ್ಥವಿವರಣೆಗೆ ಉಪಯುಕ್ತ.

4. ಮಂತ್ರಗಳ ಛಂದಸ್ಸು, ಸ್ವರ ಇತ್ಯಾದಿಗಳೆಲ್ಲವೂ ಅವುಗಳ ಗಾನಕ್ಕೆ ಉಪಯುಕ್ತವಾದುದರಿಂದ ಉಪಾಸಕರಿಗೆ ಗಾನವೂ ಅವಶ್ಯ ಎಂದು ತಿಳಿಯುವುದು.

೬

'ಪರಮಾತ್ಮನೇ ಬ್ರಹ್ಮ, ಅವನಿಂದಲೇ ಈ ಜಗತ್ತಿನ ಜಡ ಮತ್ತು ಜೀವಗಳೆಲ್ಲವೂ ಸೃಷ್ಟಿಯಾಗಿವೆ' ಎಂಬುದು ಯಾಜ್ಞವಲ್ಕ್ಯರ ನುಡಿ. ಜಗತ್ತೆಲ್ಲಕ್ಕೂ ಪರಮಾತ್ಮನೇ ಕಾರಣನಾಗಿರುವುದರಿಂದಲೂ, ಜಗತ್ತೆಲ್ಲವನ್ನೂ ಅವನೇ ಅನುಭವಿಸುವುದರಿಂದಲೂ, ಜಗತ್ತೆಲ್ಲವೂ ಅವನೇ ಎಂಬ ರೀತಿಯಲ್ಲಿ ಪರಮಾತ್ಮ - ಜಗತ್ತುಗಳಿಗೆ ಕಾರ್ಯಕಾರಣಭಾವದಿಂದಾದ ಏಕತೆಯನ್ನು ಭಾವಿಸಬೇಕು.[1]

ಯಾ. ಸ್ಮೃ. ೩. ೧೪೪. ಅಪ.

೭

ಆಚಾರ್ಯರ ಬಳಿ ಸಾರಿ, ವೇದಶಾಸ್ತ್ರಗಳ ಅರ್ಥ ತಿಳಿದು, ವಿವೇಕವನ್ನು ಪಡೆದು, ಅದರಂತೆ ನಿಷ್ಕಾಮ ಕರ್ಮಗಳನ್ನು ಆಚರಿಸುತ್ತ ಸಜ್ಜನರ ಸಹವಾಸ, ಸತ್ಕಥಾಕಾಲಕ್ಷೇಪಗಳಿಂದ ಕಾಲಕಳೆಯುತ್ತ 'ಎಲ್ಲವೂ ತನ್ನಂತೆಯೇ, ಎಲ್ಲದರಲ್ಲೂ ಪರಮಾತ್ಮನಿರುವನು' ಎಂಬ ತತ್ವವನ್ನು ಸಾಕ್ಷಾತ್ಕಾರದಿಂದ ದೃಢಪಡಿಸಿಕೊಂಡು ತ್ಯಾಗಮಯವಾದ ಪರಿಶುದ್ಧಜೀವನವನ್ನು ನಡೆಸುವವನೇ ನಿಜವಾದ ಯೋಗಿ. ಇಂತಹವನು ಮಾತ್ರ ಮುಕ್ತಿಗೆ ಯೋಗ್ಯನಾದವನು. ಇವನಿಗೆ ಧ್ಯಾನವೂ ನಿಷಿದ್ಧಕಾಮ್ಯಕರ್ಮಗಳ ಪರಿಹಾರವೂ ಯೋಗಿಗಳಾದವರ ಸಹವಾಸವೂ ಮುಖ್ಯ.[2]

ಯಾ. ಸ್ಮೃ. ೩.೧೫೫ ರಿಂದ ೧೫೯.

೮

ವೇದ, ಪುರಾಣ, ಶಾಸ್ತ್ರ, ಉಪನಿಷತ್ತುಗಳೂ, ಶ್ಲೋಕ, ಸೂತ್ರ, ಭಾಷ್ಯಗಳೂ ಕೆಲವು ಸಂದರ್ಭಗಳಲ್ಲಿ ಇತರ ವಾಙ್ಮಯಗಳೂ ಆತ್ಮಜ್ಞಾನಸಾಧನೆಗೆ ಆಧಾರಗಳು. ವೇದಗಳನ್ನು ಗುರುವಿನ ಬಳಿಯೇ ಕಲಿತು, ಯಜ್ಞಕರ್ಮಗಳನ್ನು ಆಚರಿಸಿ, ಬ್ರಹ್ಮಚರ್ಯೆಯಿಂದಲೂ ತಪಸ್ಸಿನಿಂದಲೂ ಬಾಹ್ಯೇಂದ್ರಿಯಗಳನ್ನು ಜಯಿಸಿ, ಶ್ರದ್ಧೆಯಿಂದ ಗುರುಹಿರಿಯರ ಮತ್ತು ದೇವರ ಬಳಿಯಲ್ಲೇ ಜಿತೇಂದ್ರಿಯನಾಗಿದ್ದು, ಜೀವನ ಸಾಗಿಸುವುದು ಆತ್ಮಜ್ಞಾನಸಾಧನೆಯ ಮಾರ್ಗ.

ಈ ರೀತಿ ಸಾಧನೆಯಿಂದ ಪರಮಾತ್ಮದರ್ಶನವೂ ಸಿದ್ಧಿಸುವುದು. ಇಂತಹ ಸಾಧಕರನ್ನು ದಿವ್ಯಪುರುಷನು ಅರ್ಚಿರಾದಿಮಾರ್ಗದಿಂದ ಪರಮಾತ್ಮಲೋಕಕ್ಕೆ ಕರೆದೊಯ್ಯುವನು. ಅವರಿಗೆ ಮತ್ತೆ ಸಂಸಾರಬಂಧವಾಗುವುದಿಲ್ಲ. ಇಂತಹ ಧ್ಯಾನವು ಅಷ್ಟಾಂಗಯೋಗವೆನಿಸಿದೆ. ಇದರ ಸಿದ್ಧಿಯೇ ಮುಕ್ತಿ.[3]

ಯಾ. ಸ್ಮೃ. ೩. ೧೮೯ ರಿಂದ ೨೦೩.

೯

ಈಶಾವಾಸ್ಯೋಪನಿಷತ್ತಿನ 'ವಿದ್ಯೆ' ಎಂದರೆ ದೇವತಾಂತರಜ್ಞಾನವಲ್ಲ. ಅದು ಪರಮಾತ್ಮವಿಜ್ಞಾನ- 'ಈಶಾ' ಎಂಬ ಪದದಿಂದಲೇ ಈ ವಿಚಾರ ಸ್ಪಷ್ಟವಾಗುವುದು. 'ವಿದ್ಯೆ', 'ಅವಿದ್ಯೆ'ಗಳಿಗೆ ಅಂಗಾಂಗಿಭಾವ

---

1. ಈಶಾ. ೬. ೭ ಕ್ಕೆ ಉಪಯುಕ್ತ.  2. ಈಶಾ. ೬. ೭. ೯ ರಿಂದ ೧೪ ಕ್ಕೆ ಉಪಯುಕ್ತ.

3. ಅಷ್ಟಾಂಗಯೋಗದ ವಿವರವನ್ನು ಮುಂದೆ 'ವಿಷ್ಣುಪುರಾಣ' ಪರಿಶಿಷ್ಟದಲ್ಲಿ ನೋಡಿ. ಈಶಾವಾಸ್ಯದ ಸಿದ್ಧಿಸಾಧನೆಗಳ ಬಗ್ಗೆ ಈ ವಿಚಾರ ಉಪಯುಕ್ತ.

ದಿಂದಾಗುವ ಸಹಯೋಗ ಈ ಉಪನಿಷತ್ತಿನ ಒಂದು ಉಪದೇಶ. ವಿದ್ಯೆಯೆಂದರೆ ಪರಮಾತ್ಮಜ್ಞಾನ. (ಈ ಜ್ಞಾನವು ಪರಮಾತ್ಮದರ್ಶನಸಮಾನಾಕಾರವಾಗಿರಬೇಕು). ಅವಿದ್ಯೆಯೆಂದರೆ ಕರ್ಮ (ನಿಷ್ಕಾಮಕರ್ಮ). ಇವುಗಳಿಗೆ ಪರಸ್ಪರ ಎಂದೂ ವಿರೋಧವಿಲ್ಲ. 'ಅವಿದ್ಯಯಾ ಮೃತ್ಯುಂ ತೀರ್ತ್ವಾ' ಎಂಬ ಮಾತು 'ವಿದ್ಯಯಾಽಮೃತಮಶ್ನುತೇ' ಎಂಬ ಪ್ರಧಾನ ವಿಷಯಕ್ಕೆ ಪೂರ್ವಾಂಗವಾಗಿರುವುದರಿಂದ ವಿದ್ಯೆಗೆ ಅವಿದ್ಯೆಯು ಅಂಗ ಎಂಬುದು ಈ ಮಾತಿನಲ್ಲಿರುವ 'ತ್ವಾ' ಎಂಬುದರಿಂದಲೇ ಸ್ಪಷ್ಟವಾಗುವುದು. ಇಂತಹ ಅಂಗಾಂಗಿಭಾವವಿಲ್ಲದಿದ್ದಾಗ ಬರಿಯ ಪರಮಾತ್ಮಜ್ಞಾನದಿಂದಾಗಲಿ, ಬರಿಯ ಕರ್ಮದಿಂದಾಗಲಿ ಬಹಳ ಅನರ್ಥವೇ ಆದೀತು ಎಂದು ಈ ಉಪನಿಷತ್ತು 'ಅಂಧಂ ತಮಃ' ಎಂಬ ಮಂತ್ರದ ಮೂಲಕ ಎಚ್ಚರಿಕೆ ನೀಡಿದೆ.

ಯಾ. ಸ್ಮೃ. ೩. ೨೦೪. ೨೦೫. ಅಪ.

## 2. ಮನುಸ್ಮೃತಿ ಮತ್ತು ಭಗವದ್ಗೀತೆ[1]

"ರುಕ್ಮಾಭಂ ಸ್ವಪ್ನಧೀಗಮ್ಯಂ ವಿದ್ಯಾತ್ತು ಪುರುಷಂ ಪರಮ್"
"ಏನಮೇಕೇ ವದಂತ್ಯಗ್ನಿಂ ಮಾರುತೋಽನ್ಯೇ ಪ್ರಜಾಪತಿಮ್".

ಮುಂತಾದ ಮನುಸ್ಮೃತಿ ವಚನಗಳು, ಆಡಳಿತಸಲಹೆಗಾರರಾದ ಧರ್ಮಶಾಸ್ತ್ರಜ್ಞರಿಗೂ ಆಡಳಿತಗಾರರಾದ ರಾಜಮಹಾರಾಜರಿಗೂ. ಪ್ರಜೆಗಳಿಗೂ, ಸರ್ವದೇವತಾಮಯನಾದ ಪರಮಾತ್ಮನ ದಿವ್ಯಸ್ವರೂಪದ ಅರಿವು ಮೂಡಿರಬೇಕೆಂಬ ಬಗ್ಗೆ ಸಾಕ್ಷಿಯಾಗಿವೆ. ಇವುಗಳಿಂದ ಈಶಾವಾಸ್ಯದ ೧೬ನೆಯ ಮಂತ್ರದ ವಿಚಾರ ಸಮಾಜಕ್ಕೆ ಅವಶ್ಯಕ ಎಂದು ತಿಳಿಯುವುದು. ಇಂತಹ ಪರಮಾತ್ಮಜ್ಞಾನ ಸಾರ್ವಜನಿಕ ಕಾರ್ಯಕರ್ತರಿಗೆ ಅತ್ಯವಶ್ಯ ಎಂಬುದು ವಿಶ್ವಹಿತಚಿಂತಕರಾದವರ ಮನೋಗತ. ಎಂದಿಗಿಂತಲೂ ಇಂದಿನ ಎಲ್ಲ ಪ್ರಜೆಗಳಿಗೂ ಇದು ಅವಶ್ಯಕ.

ಯಾವ ಪ್ರಜೆಯೇ ಆಗಲಿ ಇಂದು ಶೋಕ ಮೋಹಗಳಿಲ್ಲದೆ ನೆಮ್ಮದಿಯಾಗಿ ರಾಷ್ಟ್ರದ ಆಡಳಿತದಲ್ಲಿ ಪರಿಶುದ್ಧವಾದ ಮನಸ್ಸಿನಿಂದ ತಾತ್ವಿಕವಾಗಿ ಪ್ರವೇಶಿಸಿ ರಾಷ್ಟ್ರಕ್ಷೇಮವನ್ನು ಸಾಧಿಸಲು ಆಗುತ್ತಿಲ್ಲ. ರಾಷ್ಟ್ರಕ್ಷೇಮದ ಏಕೈಕ ದೃಷ್ಟಿಯಿದ್ದವರು ನಿಜವಾಗಿ ಪರಮಾತ್ಮನ ಭಕ್ತರಾಗಿರುತ್ತಾರೆ. ಅವರಿಗೆ ವರ್ಣ ವರ್ಗ ಜಾತಿ ಮತ್ತು ಭಾಷೆ ಪ್ರದೇಶಗಳ ಯಾವುದೇ ಕ್ಷುದ್ರಗಳೂ ಯಾವ ಕಾರ್ಯದಲ್ಲೂ ಅಡ್ಡಿಮಾಡಲಾರವು. ಅವರಿಗೆ ಎಲ್ಲದರಲ್ಲೂ ಪರಮಾತ್ಮನ ರೂಪವೇ ಕಾಣುವುದರಿಂದ ಸಮಸ್ತ ವಿಶ್ವಮಾನವತೆ ಅವರಲ್ಲಿ ಉಂಟಾಗುವುದು. ಇಂತಹ ದೃಷ್ಟಿಯ ಸಾಧನೆಯ ಬಗ್ಗೆ ವಚನಗಳು ಈಶಾವಾಸ್ಯದಲ್ಲಿವೆ. ಈ ವಚನಗಳನ್ನು ಹೇಗೆ ಸ್ಮೃತಿ ಇತಿಹಾಸ ಪುರಾಣಗಳಲ್ಲಿ ಮಹರ್ಷಿಗಳು ಸಮಾಜಕ್ಕೆ ಉಪದೇಶಿಸಿದರು ಎಂಬುದನ್ನು ಈ ಕೆಳಗಿನ ಈಶಾವಾಸ್ಯ ಮತ್ತು ಗೀತೆಯ ಶ್ಲೋಕಗಳ ಹೋಲಿಕೆಯಿಂದ ಅರಿಯಬಹುದು.

ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯತಿ ।
ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥
ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ ।
ತತ್ರ ಕೋ ಮೋಹಃ ಕಶ್ಶೋಕಃ ಏಕತ್ವಮನುಪಶ್ಯತಃ ॥ ಈಶಾ. ೬. ೭.

---

1. ಸ್ಮೃತಿಗ್ರಂಥಗಳಲ್ಲಿ ಮನುಸ್ಮೃತಿಯು ವೇದೋಪನಿಷತ್ತುಗಳಿಂದ ಶ್ಲಾಘ್ಯವಾಗಿ ಸರ್ವಸಾಮಾನ್ಯವಾದ ಧರ್ಮಶಾಸ್ತ್ರವೆನಿಸಿದೆ. ಇತಿಹಾಸವೆನಿಸಿದ ಮಹಾಭಾರತದಲ್ಲಿರುವ ಭಗವದ್ಗೀತೆಯು ಒಂದು ವಿಧದಲ್ಲಿ ಉಪನಿಷತ್ತೂ ಸ್ಮೃತಿಯೂ ಆಗಿದೆ.

ಈಶಾವಾಸ್ಯದಲ್ಲಿ ಪರಮಾತ್ಮನನ್ನು 'ಆತ್ಮಾ' ಎಂಬ ಹೆಸರಿನಿಂದ ಕರೆಯಲಾಗಿದೆ. ಸಾಮಾಜಿಕವಾಗಿ ಪರಮಾತ್ಮ ದರ್ಶನದಿಂದ ಸರ್ವಸಮಭಾವ ಮೂಡುವುದು, ಇತರ ಬಗ್ಗೆಯೂ ಬೇಸರವಾಗಲಿ ಶೋಕಮೋಹಗಳಾಗಲಿ ಉಂಟಾಗುವುದಿಲ್ಲ, ಎಂಬುದೇ ಅದರ ಫಲ.

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥

ಗೀ. ೬. ೨೯.

ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।
ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥

ಗೀ. ೬. ೩೨.

ಸರ್ವತ್ರ ಸಮದರ್ಶನವೇ ಆತ್ಮಯೋಗ. ಪ್ರತಿಯೊಬ್ಬರೂ ಇಂತಹ ಯೋಗಿಯಾಗಬೇಕು. ಇದು ಶ್ರೀಕೃಷ್ಣನ ಉಪದೇಶ.[1]

## 3. ಮಹಾಭಾರತ ಮತ್ತು ರಾಮಾಯಣ

"ಅಹಿಂಸಾ ಪರಮೋ ಧರ್ಮಃ" ಎಂಬ ಘೋಷವೇ ಸರ್ವಮತದರ್ಶನಗಳಲ್ಲೂ ಸಾರವಾದ ಭಾಗ. ಸರ್ವತ್ರ ಪಕ್ಷಪಾತವಿಲ್ಲದೆ ಪರಮಾತ್ಮನದೇಬ ದೃಷ್ಟಿಯಿಟ್ಟಾಗ ಮಾತ್ರ ಸಾರ್ವತ್ರಿಕವಾದ ಅಹಿಂಸೆಯನ್ನು ಸಾಧಿಸಬಹುದೆಂಬುದು ಬುದ್ಧಿವಂತರಲ್ಲಿ ಅಧ್ಯನೆನಿಸಿದ ಬೃಹಸ್ಪತಿಯ ಉಪದೇಶ. ದಂಡನೀತಿಗಿಂತ ಆಡಳಿತಕ್ಕೆ ಈ ಅಹಿಂಸಾನೀತಿಯೇ ಶ್ರೇಷ್ಠ ಎಂಬುದು ಬೃಹಸ್ಪತಿಯ ಮನೋಗತ.

ಹನ್ತ ! ನಿಃಶ್ರೇಯಸಂ ಜನ್ತೋರಹಂ ವಕ್ಷ್ಯಾಮ್ಯನುತ್ತಮಮ್ ।
ಅಹಿಂಸಾಪಾಶ್ರಯಂ ಧರ್ಮಂ ಯಃ ಸಾಧಯತಿ ವೈ ನರಃ ॥೩॥
ಆತ್ಮೋಪಮಸ್ತು ಭೂತೇಷು ಯೋ ವೈ ಭವತಿ ಪೂರುಷಃ ।
ನ್ಯಸ್ತದಂಡೋ ಜಿತಕ್ರೋಧಃ ಸ ಪ್ರೇತ್ಯ ಸುಖಮೇಧತೇ ॥೬॥
ಸರ್ವಭೂತಾತ್ಮಭೂತಸ್ಯ ಸರ್ವಭೂತಾನಿ ಪಶ್ಯತಃ ।
ದೇವಾಪಿ ಮಾರ್ಗೇ ಮುಹ್ಯನ್ತಿ ಅಪದಸ್ಯ ಪದೈಷಿಣಃ ॥೭॥
ನ ತತ್ ಪರಸ್ಯ ಸಂದಧ್ಯಾತ್ ಪ್ರತಿಕೂಲಂ ಯದಾತ್ಮನಃ ।
ಏಷ ಸಂಕ್ಷೇಪತೋ ಧರ್ಮಃ ಕಾಮಾದನ್ಯಃ ಪ್ರವರ್ತತೇ ॥೮॥
ಪ್ರತ್ಯಾಖ್ಯಾನೇ ಚ ದಾನೇ ಚ ಸುಖದುಃಖೇ ಪ್ರಿಯಾಪ್ರಿಯೇ ।
ಆತ್ಮೌಪಮ್ಯೇನ ಪುರುಷಃ ಪ್ರಮಾಣಮಧಿಗಚ್ಛತಿ ॥೯॥

ಮಹಾಭಾರತ. ಅನುಶಾಸನಪರ್ವ. ಅಧ್ಯಾಯ ೧೧೩.

ಇಂತಹ ಸಾರವಾದ ಧರ್ಮದ ಬಗ್ಗೆ ವ್ಯಾಸಮಹರ್ಷಿಗಳ ವಚನವೂ ಹೀಗೆಯೇ ಇದೆ.

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।
ನ ಹಿನಸ್ತ್ಯಾತ್ಮನಾಽಽತ್ಮಾನಂ ತತೋ ಯಾತಿ ಪರಾಂ ಗತಿಮ್॥

1. ಗೀತೆಯಲ್ಲಿರುವ ಇನ್ನೂ ಅನೇಕ ವಿಷಯಗಳಿಗೆ ಈಶಾ. ಪುಟ ೪೦, ೨೩೬ ನೋಡಿ.

ಇಂತಹ ಸಮದರ್ಶಿಗಳು ಎಂದಿಗೂ ಆತ್ಮಘಾತಿಗಳಾಗುವುದಿಲ್ಲ. ಆದುದರಿಂದಲೇ ಅವರು ಉತ್ತಮಗತಿಯನ್ನು ಪಡೆಯುವರು. ಈ ಅನುದರ್ಶನದಿಂದಲೇ ಶಾಂತಿ ಸುಖ ಸೌಭಾಗ್ಯಗಳು ಎಂಬುದು ಗಮನಾರ್ಹ. "ರಾಮ ಮೇವಾನುಪಶ್ಯಂತೋ ನಾಭ್ಯಹಿಂಸನ್ ಪರಸ್ಪರಮ್" (ರಾಮಾಯಣ ೬. ೧೨೮.೧೦೦) ಎಂಬ ವಾಲ್ಮೀಕಿಯ ಮಾತು ಈಶಾವಾಸ್ಯದ "ಅನುಪಶ್ಯತಿ" ಎಂಬ ಈ ಅನುದರ್ಶನದ ಫಲವನ್ನು ರಾಷ್ಟ್ರವ್ಯಾಪಿಯಾಗಿತ್ತೆಂದು ತಿಳಿಸು ತ್ತಿದೆ. "ಅಹಿಂಸಾ ಪರಮೋ ಧರ್ಮಃ" ಎಂಬುದು ಈ ಅನುದರ್ಶನವಿಲ್ಲದಾಗ ಬರಿಯ ಘೋಷಣೆಯಾದೀತು.

ಹೀಗೆ ಅಸುರಸ್ವಭಾವದ ದಮನವೂ ದೈವಸಂಪತ್ತಿನ ಅಭಿವೃದ್ಧಿಯೂ ಈಶಾವಾಸ್ಯದ ಮುಖ್ಯ ಗುರಿ ಎಂಬು ದನ್ನೂ ಇದೇ ಎಲ್ಲ ವೇದಾನ್ತ ಧರ್ಮಶಾಸ್ತ್ರೇತಿಹಾಸ ಪುರಾಣಗಳ ಗುರಿಯೂ ಆಗಿದೆಯೆಂಬುದನ್ನೂ ಮನುವಿಗೆ ಸಂಬಂಧಿಸಿದ ಈಶಾವಾಸ್ಯದ ಪೌರಾಣಿಕಕಥಾನಕವೂ ಇದೇ ಅಂಶವನ್ನು ಸ್ಪಷ್ಟಪಡಿಸುತ್ತಿದೆ ಎಂಬುದನ್ನೂ ಗಮ ನಿಸಿ ಈ ಕಥಾನಕವನ್ನು ಮುಂದೆ ವಿವರಿಸಲಾಗುವುದು.

ರಾಮಾಯಣ-ಮಹಾಭಾರತಗಳಲ್ಲಿ ಆಧ್ಯಾತ್ಮಿಕ ವಿಚಾರಭಾಗಗಳೆಲ್ಲ ವೇದಾನ್ತವಿಚಾರಗಳಿಗೆ ಪೋಷಕಗಳಾಗಿ ರುವುದನ್ನು ಗಮನಿಸಿ, ಅವುಗಳ ಅಧ್ಯಯನವನ್ನು ಈಶಾವಾಸ್ಯದ ತಜ್ಞರೂ ಬೆಳಸಿಕೊಳ್ಳುವುದು ಅವಶ್ಯಕ. ಇಲ್ಲಿ ಅದರ ಸೂಚನೆಗಾಗಿ ಮಾತ್ರ ಇಷ್ಟು ತಿಳಿಸಲಾಗಿದೆ.

## ಪುರಾಣಗಳಲ್ಲಿ ಉಪಯುಕ್ತ ವಿಚಾರಗಳು

### 1. ಭಾಗವತ ಪುರಾಣ

೧

ಇತಿಹಾಸ ಪುರಾಣಗಳು ವೇದ-ವೇದಾನ್ತಗಳಿಗೆ ಉಪಬೃಂಹಣ-ಪೋಷಕವೆನಿಸಿವೆ. ಅತಿಪ್ರಾಚೀನ ಇತಿ ಹಾಸವೇ ಪುರಾಣ. ಐತಿಹಾಸಿಕ, ಪೌರಾಣಿಕ, ಕಥಾನಕಗಳನ್ನು ಉಪಾಸಕರು ಉಪಾಸನಾಂಗವಾದ ಯಜ್ಞಗಳ ಮಧ್ಯೆ ವಿರಾಮ ಕಾಲದಲ್ಲಿ ಶ್ರವಣ ಮಾಡಬೇಕೆಂಬ ನಿಯಮವಿದೆ. ಈ ವಿಚಾರವನ್ನು ಬ್ರಹ್ಮಸೂತ್ರಕಾರರಾದ ವ್ಯಾಸಮಹರ್ಷಿಗಳು ಪಾರಿಪ್ಲವಾಧಿಕರಣದಲ್ಲಿ ನಿರ್ಣಯಿಸಿರುವರು.

ಇಂತಹ ಕಥಾನಕಗಳ ಮಧ್ಯೆ ವೇದವೇದಾಂತಾರ್ಥಗಳ ಸೂಕ್ಷ್ಮ ವಿವರಣೆಗಳೂ ಇರುತ್ತವೆ. ಈಶಾವಾಸ್ಯಕ್ಕೆ ಸಂಬಂಧಿಸಿದ ಇಂತಹ ಒಂದು ಕಥಾನಕ ಭಾಗವತಪುರಾಣದ ಎಂಟನೆಯ ಸ್ಕಂಧದ ಮೊದಲನೆಯ ಅಧ್ಯಾಯ ದಲ್ಲಿದೆ. ಪಂಡಿತ ಶ್ರೀ ದೇವಶಿಖಾಮಣಿ ಅಳಸಿಂಗರಾಚಾರ್ಯರು ಮಾಡಿರುವ ಈ ಭಾಗದ ಕನ್ನಡ ಅನುವಾದವನ್ನೇ ಇಲ್ಲಿ ಕೃತಜ್ಞತೆಯಿಂದ ಬಳಸಿಕೊಳ್ಳಲಾಗುವುದು.

"ಪರೀಕ್ಷಿದ್ರಾಜನು ಶುಕಮುನಿಯನ್ನು ತಿರುಗಿ ಪ್ರಶ್ನೆ ಮಾಡುವನು. ಓ ಗುರುವರ್ಯ! ನಿನ್ನಿಂದ ನಾನು ಸ್ವಾಯಂಭುವ ಮನುವಿನ ವಂಶಾನುಕ್ರಮವೆಲ್ಲವನ್ನೂ ವಿವರವಾಗಿ ಕೇಳಿದುದಾಯಿತು. ಅದರಿಂದ ವರ್ಣಾಶ್ರಮ ಧರ್ಮಗಳೆಲ್ಲವೂ ತಿಳಿದುಬಂದುವು. ಅದರಲ್ಲಿ ಮರೀಚಿ ಮೊದಲಾದ ಪ್ರಜಾಧಿಪತಿಗಳ ಸಂತತಿಯೂ ನನಗೆ ತಿಳಿದು ಬಂದಿತು. ಹೀಗೆಯೇ ಇತರ ಮನುಗಳ ಚರಿತ್ರವನ್ನೂ, ಅವರ ವಂಶಾನುಕ್ರಮವನ್ನೂ ನನಗೆ ತಿಳಿಸಬೇಕು. ಆ ಪರಮಪುರುಷನು ಯಾವ ಯಾವ ಮನ್ವಂತರಗಳಲ್ಲಿ ಯಾವ ಯಾವ ಅವತಾರಗಳನ್ನೆತ್ತಿರುವನು? ಯಾವ ಯಾವ ಅದ್ಭುತ ಕಾರ್ಯಗಳನ್ನು ನಡೆಸಿರುವನು? ಅವೆಲ್ಲವನ್ನೂ ತಿಳಿಸಬೇಕು. ಇದುವರೆಗೆ ಕಳೆದುಹೋದ ಮನ್ವಂತರ

ಗಳೆಷ್ಟು ? ಈಗ ನಡೆಯುವ ಮನ್ವಂತರವಾವುದು? ಮುಂದಿನ ಮನ್ವಂತರಗಳಲ್ಲಿ ಭಗವಂತನಿಂದ ನಡೆಯ ಬೇಕಾದ ಕಾರ್ಯವೇನು ? ಎಂದನು.

ಅದಕ್ಕೆ ಆ ಶುಕಮುನಿಯು "ರಾಜೇಂದ್ರ ಕೇಳು ! ಈ ಕಲ್ಪದಲ್ಲಿ ಇದುವರೆಗೆ ಸ್ವಾಯಂಭುವನೇ ಮೊದಲಾದ ಆರು ಮಂದಿ ಮನುಗಳ ಆಳ್ವಿಕೆಯು ಕಳೆದುಹೋಯಿತು. ಇವರಲ್ಲಿ ಮೊದಲನೆಯವನೇ ಸ್ವಾಯಂಭುವನು. ಅವನ ಚರಿತ್ರವನ್ನೂ, ದೇವತೆಗಳ ಉತ್ಪತ್ತಿಗೆ ಕಾರಣವಾದ ಅವನ ಸಂತತಿಯನ್ನೂ ನಿನಗೆ ಮೊದಲೇ ವಿವರಿಸಿರು ವೆನು. ಆ ಸ್ವಾಯಂಭುವನಿಗೆ ಆಕೂತಿಯೆಂದೂ, ದೇವಹೂತಿಯೆಂದೂ ಇಬ್ಬರು ಕುಮಾರಿಯರಿದ್ದರೆಂದೂ ಹೇಳಿದ್ದೆನಲ್ಲವೆ ? ಆ ಕನ್ನೆಯರಿಬ್ಬರಲ್ಲಿ ಭಗವಂತನು, ಆಕೂತಿಗೆ ಯಜ್ಞನೆಂಬ ಹೆಸರಿನಿಂದಲೂ, ದೇವಹೂತಿಗೆ ಕಪಿಲನೆಂಬ ಹೆಸರಿನಿಂದಲೂ ಪುತ್ರನಾಗಿ ಜನಿಸಿದನು. ಕಪಿಲನ ಚರಿತ್ರವನ್ನು ಮೊದಲೇ ನಿನಗೆ ತಿಳಿಸಿರುವೆನು. ಯಜ್ಞನೆಂಬ ಹೆಸರಿನಿಂದ ಆ ಭಗವಂತನು ನಡೆಸಿದ ಕಾರ್ಯಗಳನ್ನೂ ಹೇಳುವೆನು ಕೇಳು. ಪೂರ್ವದಲ್ಲಿ ಸ್ವಾಯಂಭುವ ಮನುವು, ಶಬ್ದಾದಿವಿಷಯಗಳಲ್ಲಿ ವಿರಕ್ತನಾಗಿ, ರಾಜ್ಯವನ್ನು ಬಿಟ್ಟು, ತನ್ನ ಪತ್ನಿಯಾದ ಶತರೂಪೆಯೊಡನೆ ತಪಸ್ಸಿಗಾಗಿ ಕಾಡಿಗೆ ಹೋದನು. ಸುನಂದಾ ನದಿಯಲ್ಲಿ ಸ್ನಾನಮಾಡಿ, ಒಂದೇ ಕಾಲಿನಿಂದ ನಿಂತು, ಘೋರವಾದ ತಪಸ್ಸನ್ನು ಹಿಡಿದು, ಭಗವಂತನನ್ನು ಹೀಗೆಂದು ಸ್ತುತಿಸುವನು.

"ಯಾವನಿಂದಲೇ ಈ ಜಗತ್ತೆಲ್ಲವೂ ತನ್ನ ವ್ಯಾಪಾರಗಳಲ್ಲಿ ಸಮರ್ಥವಾಗುವುದೋ, ಯಾವನು ಬೇರೊಬ್ಬರ ಪ್ರೇರಣೆಯಿಲ್ಲದೆ, ತಾನಾಗಿಯೇ ತನ್ನ ಸ್ವೇಚ್ಛೆಯಿಂದ ಕಾರ್ಯಗಳನ್ನೂ ನಡೆಸುವನೋ, ಆ ಪರಮಾತ್ಮನು ನನಗೆ ರಕ್ಷಕನಾಗಲಿ. ಲೋಕವೆಲ್ಲವೂ ಪ್ರಕೃತಿ ಸಂಬಂಧದಿಂದ ದೇಹಾತ್ಮಭ್ರಮಕ್ಕೆ ಗುರಿಯಾಗಿ, ಆತ್ಮ-ಪರಮಾತ್ಮಗಳ ಸ್ಥಿತಿಯನ್ನು ತಿಳಿಯದೆ ನಿದ್ರೆಮಾಡುವಂತಿರುವಾಗಲೂ, ಯಾವನೊಬ್ಬನು ಮಾತ್ರ ಎಚ್ಚರಗೊಂಡು ಅವೆಲ್ಲವನ್ನೂ ನೋಡುತ್ತಿರುವನೋ, ಯಾವನ ನಿಜಸ್ಥಿತಿಯನ್ನು ಈ ಜಗತ್ತು ಕಾಣಲಾರದೋ, ಆ ಪರಮಪುರುಷನು ನನಗೆ ರಕ್ಷಕನಾಗಲಿ.[1]

ಎಲ್ಲವನ್ನೂ ತನ್ನಲ್ಲಿ ನಿಯಮಿಸತಕ್ಕ ಆ ಪರಮಪುರುಷನಿಗೆ ಅಧೀನವಲ್ಲದ ಸ್ವತಂತ್ರ ವಸ್ತುವು ಯಾವುವೂ ಇರುವುದಿಲ್ಲ. ದೇಹವೂ, ಹೆಂಡಿರು ಮಕ್ಕಳು ಮೊದಲಾದ ಆ ದೇಹಾನುಬಂಧಿಗಳೂ, ಮನೆಮಠಗಳೂ ಇವೆಲ್ಲವೂ, ಆತನಿಗೇ ಅಧೀನವಾಗಿರುವುದರಿಂದ ಅವುಗಳಲ್ಲಿ ಯಾವುದನ್ನೂ ತನ್ನದೆಂದು ಅಭಿಮಾನಿಸಬಾರದು.[2]

ಜೀವಾತ್ಮನ ಜ್ಞಾನದಂತೆ ಆ ಪರಮಪುರುಷನ ಜ್ಞಾನವು ಕರ್ಮದಿಂದ ಸಂಕುಚಿತವಾಗತಕ್ಕದ್ದಲ್ಲ. ಆದುದರಿಂದ ಅವನು ಎಲ್ಲವನ್ನೂ ಒಮ್ಮೆಯೇ ಸಾಕ್ಷಾತ್ಕರಿಸಬಲ್ಲನು. ತಮ್ಮ ತಮ್ಮ ಕರ್ಮದಿಂದ ಜ್ಞಾನಸಂಕೋಚ ಹೊಂದುವ ಜೀವವರ್ಗಗಳು ಅವನನ್ನು ಸಾಕ್ಷಾತ್ಕರಿಸಲಾರವು. ಸಮಸ್ತಭೂತಗಳಿಗೂ ಆಧಾರನಾಗಿ, ಸ್ವಯಂ

---

1. ಮನುರುವಾಚ :-

ಯೇನ ಚೇತಯತೇ ವಿಶ್ವಂ ವಿಶ್ವಂ ಚೇತಯತೇ ನ ಯಮ್.
ಯೋ ಜಾಗರ್ತಿ ಶಯಾನೇಽಸ್ಮಿನ್ನಾಯಂ ತಂ ವೇದ ವೇದ ಸಃ. ಭಾಗ. ೮. ೧. ೯.

2. ಆತ್ಮಾವಾಸ್ಯಮಿದಂ ಸರ್ವಂ ಯತ್ ಕಿಂ ಚ ಜಗತ್ಯಾಂ ಜಗತ್
ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯ ಸ್ವಿದ್ಧನಮ್. ಭಾಗ. ೮. ೧. ೧೦.

ಪ್ರಕಾಶನಾಗಿ, ಗೂಡಿನಲ್ಲಿರುವ ಹಕ್ಕಿಯಂತೆ ಜೀವನೊಡನೆ ತಾನೂ ಆಯಾ ಶರೀರಗಳಲ್ಲಿ ಸೇರಿರತಕ್ಕ ಆ ಪರಮ ಪುರುಷನನ್ನು ಉಪಾಸನೆ ಮಾಡಿರಿ.[1]

ಅವನು ಆದಿಮಧ್ಯಾಂತಗಳಿಲ್ಲದವನು. ಇತರರಲ್ಲಿ ತನ್ನವನೆಂದೂ, ಇತರನೆಂದೂ ಭೇದಬುದ್ಧಿಯಿಲ್ಲ ದವನು. ಹೊರಗೊಂದು ಒಳಗೊಂದು ಎಂಬ ವ್ಯತ್ಯಾಸವಿಲ್ಲದೆ ಸರ್ವವ್ಯಾಪಿಯಾಗಿರುವನು. ಲೋಕದ ಸೃಷ್ಟಿ ಸ್ಥಿತಿಲಯಗಳೆಲ್ಲಕ್ಕೂ ಕಾರಣನು. ಸ್ವರೂಪಸ್ವಭಾವಗಳಲ್ಲಿ ವಿಕಾರವಿಲ್ಲದವನು. ತಾನೇ ಪ್ರಪಂಚರೂಪವಾಗಿ ದೇವ ಮನುಷ್ಯಾದಿ ನಾಮಗಳಿಂದ ಕರೆಯಲ್ಪಡುವನು. ಹಾಗಿದ್ದರೂ ಕರ್ಮಾಧೀನವಾದ ಜನನಮರಣಗಳಿಲ್ಲ ದವನು.[2]

ತನ್ನ ಶರೀರವೆನಿಸಿಕೊಂಡ ಚೇತನಾಚೇತನಗಳ ದೋಷಕ್ಕೆ ತಾನು ಈಡಾಗದೆ, ಅವೆಲ್ಲವನ್ನೂ ಒಳಹೊಕ್ಕು ನಿಯಮಿಸುತ್ತಿರುವನು. ಎಲ್ಲಕ್ಕೂ ಆತನೇ ರಕ್ಷಕನು. ಅವನು ತನ್ನ ಶಕ್ತಿಯೆನಿಸಿಕೊಂಡ ಪ್ರಕೃತಿಯಿಂದಲೇ ಲೋಕದ ಸೃಷ್ಟಿ ಸ್ಥಿತಿ ಸಂಹಾರಗಳನ್ನು ನಡೆಸುವನು. ಆ ಪ್ರಕೃತಿ ಸಂಬಂಧದಿಂದುಂಟಾಗುವ ದೋಷವನ್ನು ತನ್ನ ಜ್ಞಾನಬಲದಿಂದ ಪರಿಹರಿಸಿಕೊಂಡು, ನಿರಪೇಕ್ಷನಾಗಿ, ನಿರ್ವ್ಯಾಪಾರನಾಗಿರುವನು.[3]

ಲೋಕದಲ್ಲಿ ಜೀವರಾಶಿಗಳು ತಮ್ಮ ಸುಖವನ್ನುದ್ದೇಶಿಸಿ ಮಾಡತಕ್ಕ ಕರ್ಮಗಳೆಲ್ಲವೂ ಅವರಿಗೆ ಕೇವಲ ದುಃಖರೂಪವಾದ ವಿಪರೀತ ಫಲವನ್ನೇ ಉಂಟುಮಾಡುವುವು. ಆದುದರಿಂದಲೇ ಜ್ಞಾನಿಗಳು, ಕರ್ಮಾಭಿಲಾಷೆ ಯನ್ನು ಬಿಟ್ಟು, ವಿರಕ್ತಿಮಾರ್ಗವನ್ನೇ ಅನುಸರಿಸಿರುವರು.[4]

ಸರ್ವೇಶ್ವರನಾದ ಭಗವಂತನು, ಜೀವಾತ್ಮರನ್ನು ಅವರವರ ಕರ್ಮಾನುಸಾರವಾಗಿ ಸುಖದುಃಖಗಳಿಗೆ ಗುರಿ ಮಾಡುತ್ತ, ತಾನು ಜೀವಶರೀರಕನಾಗಿದ್ದರೂ, ಆ ಸುಖದುಃಖಗಳಿಗೆ ತಾನು ಗುರಿಯಾಗದೆ, ನಿತ್ಯಾನಂದ ಸ್ವರೂಪನಾಗಿ, ತನ್ನನ್ನು ತಾನೇ ಅನುಭವಿಸುತ್ತ ಪೂರ್ಣಕಾಮನಾಗಿರುವನು. ತಾನುಮಾತ್ರವೇ ಅಲ್ಲದೆ, ತನ್ನನ್ನು ಆಶ್ರಯಿಸಿದ ಪ್ರಾಣಿಗಳಿಗೂ, ಕರ್ಮಗಳಲ್ಲಿ ಆಸಕ್ತಿ ಇಲ್ಲದಂತೆ ಮಾಡಿ, ಅವರನ್ನು ಉದ್ಧರಿಸುವನು.[5]

ಹೀಗೆ ಜೀವಗಳನ್ನು ಕರ್ಮಾನುಸಾರವಾಗಿ ಪ್ರೇರಿಸುತ್ತ, ಅಹಂಕಾರರಹಿತನಾಗಿಯೂ, ಸರ್ವಜ್ಞನಾಗಿಯೂ, ಪರಿಪೂರ್ಣನಾದುದರಿಂದ ನಿರಪೇಕ್ಷನಾಗಿಯೂ ಇರುವ ಆ ಪರಮಪುರುಷನು ನಮಗೆ ರಕ್ಷಕನಾಗಲಿ. ಅವನು ಮತ್ತೊಬ್ಬರಿಗೆ ಅಧೀನನಲ್ಲದೆ, ತನ್ನ ಭಕ್ತರನ್ನೂ ತನಗೆ ಸಮಾನವಾಗಿ ಮಾಡಿಕೊಳ್ಳತಕ್ಕವನು. ನಿಜಸ್ವಭಾವ

---

1. ಯಂ ನ ಪಶ್ಯತಿ ಪಶ್ಯಂತಂ ಚಕ್ಷುರ್ಯಸ್ಯ ನ ರಿಷ್ಯತಿ.
   ತಂ ಭೂತನಿಲಯಂ ದೇವಂ ಸುಪರ್ಣಮುಪಧಾವತ. ಭಾಗ. ೮. ೧. ೧೧.
2. ನ ಯಸ್ಯಾದ್ಯಂತಮಧ್ಯಾನಿ ಸ್ವಃ ಪರೋ ನಾಂತರಂ ಬಹಿಃ.
   ವಿಶ್ವಸ್ಯಾಮೂನಿ ಯದ್ ಯಸ್ಮಾತ್ ವಿಶ್ವಂ ಚ ತದೃತಂ ಮಹತ್. ಭಾಗ. ೮. ೧. ೧೨.
3. ಸ ವಿಶ್ವಕಾಯಃ ಪುರುಹೂತ ಈಶಃ ಸರ್ವಸ್ಯ ಗೋಪ್ತಾ ಹ್ಯಜರಃ ಪುರಾಣಃ.
   ಧತ್ತೇಽಸ್ಯ ಜನ್ಮಾದ್ಯಜಯಾಽಽತ್ಮಶಕ್ತ್ಯಾ ತಾಂ ವಿದ್ಯಯೋದಸ್ಯ ನಿರೀಹ ಆಸ್ತೇ. ಭಾಗ. ೮. ೧. ೧೩.
4. ಅಥಾಗ್ರ್ಯಋಷಯಃ ಕರ್ಮಾಣೀಹಂತೇಽಕರ್ಮಹೇತವೇ.
   ಈಹಮಾನೋಽಪಿ ಪುರುಷಃ ಪ್ರಾಯೋಽನೀಹಾಂ ಪ್ರಪದ್ಯತೇ. ಭಾಗ. ೮. ೧. ೧೪.
5. ಈಹತೇ ಭಗವಾನೀಶೋ ನ ಹಿ ತತ್ರ ವಿಷಜ್ಜತೇ.
   ಆತ್ಮಲಾಭೇನ ಪೂರ್ಣಾರ್ಥೋ, ನಾವಸೀದಂತಿ ಯೇಽನು ತಮ್. ಭಾಗ. ೮. ೧. ೧೫.

ದಲ್ಲಿಯೇ ಬೆಳಗತಕ್ಕವನು, ಸರ್ವಶಕ್ತನು. ಸಮಸ್ತ ಧರ್ಮಗಳನ್ನೂ ಪಾಲಿಸತಕ್ಕವನು. ಇಂತಹ ಪರಮ ಪುರುಷನನ್ನು ಶರಣು ಹೊಂದುವೆವು.[1]

ಹೀಗೆ ಮಂತ್ರಾತ್ಮಕವಾದ ಈ ಉಪನಿಷತ್ತನ್ನು ದೃಢಮನಸ್ಸಿನಿಂದ ಜಪಿಸುತ್ತಿದ್ದ ಸ್ವಾಯಂಭುವನು ತಪಸ್ಸಿನಲ್ಲಿರುವಾಗ ಹಸಿವಿನಿಂದ ಪೀಡಿತರಾದ ಕೆಲವು ರಾಕ್ಷಸರು, ಅವನನ್ನು ಕೊಂದು ತಿನ್ನಬೇಕೆಂದು ಸಮೀಪಿಸಿದರು. ಹೀಗೆ ಘೋರಕಾರ್ಯಕ್ಕಾಗಿ ನಿಶ್ಚಯಿಸಿ ಮುಂದೆ ಬರುತ್ತಿರುವ ಆ ರಾಕ್ಷಸರನ್ನು ನೋಡಿ, ಸರ್ವಾಂತರ್ಯಾಮಿಯಾದ ಭಗವಂತನು, ಆಗಲೇ ಯಜ್ಞನೆಂಬ ಹೆಸರಿನಿಂದವತರಿಸಿ ಯಾಮರೆಂಬ ದೇವಗಣಗಳೊಡನೆ ಸೇರಿ ಬಂದು, ಆ ರಾಕ್ಷಸರೆಲ್ಲರನ್ನೂ ಧ್ವಂಸಮಾಡಿ ತಾನೇ ಇಂದ್ರನಾಗಿ ಸ್ವರ್ಗವನ್ನು ಪಾಲಿಸುತ್ತಿದ್ದನು.

ಓ ಪರೀಕ್ಷಿದ್ರಾಜಾ ! ಪ್ರತಿಮನ್ವಂತರ ಕಾಲದಲ್ಲಿಯೂ, ಹೀಗೆಯೇ ಮನುಗಳೂ, ಮನುಪುತ್ರರೂ, ದೇವತೆಗಳೂ, ದೇವೇಂದ್ರನೂ, ಋಷಿಗಳೂ, ವಿಷ್ಣುವಿನ ಅವತಾರಗಳೂ ಬೇರೆಬೇರೆಯಾಗಿರುವುವು. ಮೊದಲನೆಯ ಮನ್ವಂತರದಲ್ಲಿ ಸ್ವಾಯಂಭುವನೇ ಮನುವು. ಪ್ರಿಯವ್ರತಾದಿಗಳು ಮನುಪುತ್ರರು. ಮರೀಚಿ ಮೊದಲಾದವರು ಸಪ್ತಋಷಿಗಳು. ಯಜ್ಞಪುತ್ರರಾದ ಯಮಾದಿಗಳೇ ದೇವಗಣಗಳು. ಭಗವಂತನೇ ಯಜ್ಞರೂಪದಿಂದ ಇಂದ್ರನಾಗಿದ್ದನು".

## ೨

ಭಾಗವತ ಪುರಾಣದಲ್ಲಿ ೮ನೇ ಸ್ಕಂಧದ ಒಂದನೇ ಅಧ್ಯಾಯದಲ್ಲಿ ಮಂತ್ರೋಪನಿಷತ್ ಎಂಬ ಹೆಸರಿನ ಎಂಟು ಪದ್ಯಗಳಲ್ಲಿ ಈಶಾವಾಸ್ಯಮಂತ್ರಾರ್ಥಗಳನ್ನು ಸಂಗ್ರಹಿಸಲಾಗಿದೆ. ಇವುಗಳ ವಿವರ ಈ ರೀತಿ ಇದೆ.

೧. ವಾಜಸನೇಯ ಸಂಹಿತೆಯ ಮೂವತ್ತೊಂಬತ್ತು ಅಧ್ಯಾಯಗಳ ಅಥವಾ ನಲವತ್ತು ಅಧ್ಯಾಯಗಳ ಸಾರಾರ್ಥವನ್ನು 'ಯೇನ ಚೇತಯತೇ ವಿಶ್ವಂ' ಎಂಬ ಒಂದು ಪದ್ಯದಲ್ಲಿ ಸಂಗ್ರಹಿಸಲಾಗಿದೆ.

೨. 'ಈಶಾವಾಸ್ಯಂ'ಗೆ 'ಆತ್ಮಾವಾಸ್ಯಂ' ಸಂಗ್ರಹ.

೩. 'ಅನೇಜದೇಕಂ', 'ತದೇಜತಿ' ಗಳಿಗೆ 'ಯಂ ನ ಪಶ್ಯಂತಿ' ಸಂಗ್ರಹ.

೪. 'ಯಸ್ತು ಸರ್ವಾಣಿ', 'ಯಸ್ಮಿನ್ ಸರ್ವಾಣಿ'ಗಳಿಗೆ 'ನ ಯಸ್ಯಾದ್ಯಂತಮಧ್ಯಾನಿ' ಸಂಗ್ರಹ.

೫. 'ಸ ಪರ್ಯಗಾತ್' ಗೆ 'ಸ ವಿಶ್ವಕಾಯಃ' ಸಂಗ್ರಹ.

೬. 'ಕುರ್ವನ್ನೇವ' ಮತ್ತು 'ಅಂಧಂ ತಮಃ' ಇಂದ 'ಸಂಭೂತಿಂ ಚ' ವರೆಗಿನ ಆರು ಮಂತ್ರಗಳಿಗೆ 'ಅಥಾಗ್ರಋಷಯಃ' ಸಂಗ್ರಹ.

೭. 'ಹಿರಣ್ಮಯೇನ', 'ಪೂಷನ್ನೇಕರ್ಷೇ' ಗಳಿಗೆ 'ಈಹತೇ ಭಗವಾನೀಶಃ' ಸಂಗ್ರಹ.

೮. 'ವಾಯುರನಿಲಂ', 'ಅಗ್ನೇ ನಯ' ಗಳಿಗೆ 'ತಮೀಹಮಾನಂ' ಸಂಗ್ರಹ.

---

1. ತಮೀಹಮಾನಂ ನಿರಹಂಕೃತಂ ಬುಧಂ ನಿರಾಶಿಷಂ ಪೂರ್ಣಮನನ್ಯಚೋದಿತಮ್
ನೃನ್ ಶಿಕ್ಷಯಂತಂ ನಿಜವರ್ತ್ಮ ಸಂಸ್ಥಿತಂ ಪ್ರಭುಂ ಪ್ರಪದ್ಯೇಽಖಿಲಧರ್ಮಭಾವನಮ್. ಭಾಗ. ೮ ೧. ೧೬.

೩

ಆತ್ಮಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್.
ತೇನ ತ್ಯಕ್ತೇನ ಭುಂಜೀಥಾಃ, ಮಾ ಗೃಧಃ, ಕಸ್ಯ ಸ್ವಿತ್ ಧನಮ್ !

ಭಾಗ. ೮. ೧. ೧೦.

ಈಶಾವಾಸ್ಯದ ಮೊದಲ ಮಂತ್ರವೇ ಇಲ್ಲಿ ಶ್ಲೋಕರೂಪದಲ್ಲಿದೆ. ಈಶ ಎಂಬ ಶಬ್ದಕ್ಕೆ ಬದಲು ಆತ್ಮ ಎಂಬ ಶಬ್ದ ಇರುವುದೊಂದೇ ವ್ಯತ್ಯಾಸ.

ಯತ್ – ಯಾವುದು ಚೇತನಾಚೇತನಾತ್ಮಕವೋ, ಇದಂ – ಈ, ಸರ್ವಂ – ಎಲ್ಲ ವಸ್ತುವೂ, ಆತ್ಮನಾ + ಆವಾಸ್ಯಂ = ಆತ್ಮಾವಾಸ್ಯಂ – ಒಳಹೊಕ್ಕು ನಿಯಂತ್ರಿಸಿ ಒಡೆಯನಾಗಿರುವ ಪರಮಾತ್ಮನಿಂದ ಆಸರೆಯಾಗಿ ಮಾಡಿಕೊಳ್ಳಲ್ಪಟ್ಟಿದೆ. ಆದುದರಿಂದ, ತೇನ – ಆ ಪರಮಾತ್ಮನಿಂದ, ತ್ಯಕ್ತೇ – ಆಸರೆಯಾಗಿ ಸ್ವೀಕರಿಸಲ್ಪಡದಿರುವ ಸ್ವತಂತ್ರವಾದ ವಸ್ತುವಿನ ಬಗ್ಗೆ, ನ ಭುಂಜೀಥಾಃ – ಅನುಭವಪಡೆಯಬೇಡ, ಅಂದರೆ ಪರಮಾತ್ಮನಿಗೆ ಅಧೀನವಲ್ಲದ ಸ್ವತಂತ್ರವಾದ ವಸ್ತು ಬೇರೆ ಇದೆಯೆಂದು ತಿಳಿಯಬೇಡ ಎಂದರ್ಥ. (ಕಿಂ ಚ – ಮತ್ತು), ಮಾ ಗೃಧಃ – ಪರಮಾತ್ಮನ ಅಧೀನವಾದ ಎಲ್ಲ ದೇಹ ಮತ್ತು ದೇಹಸಂಬಂಧಿ ಮುಂತಾದುವನ್ನೂ, ತನ್ನ ಅಧೀನವೆಂದು ಆಸೆಪಡಬೇಡ, "ಕಸ್ಯ ಸ್ವಿತ್ ಧನಮ್!" ನಾವು ನಮ್ಮದು ಈ ಎಲ್ಲವೂ ಯಾರದು ! ಯಾರದೂ ಅಲ್ಲ. ಎಲ್ಲವೂ ಪರಮಾತ್ಮನದೇ ಎಂದು ಭಾವ. ಈ ಭಾವಾರ್ಥವು ಈ ವಾಕ್ಯದಲ್ಲಿರುವ ಕಾಕುಸ್ವರದಿಂದ[2] ಆಗಿದೆ.

೪

ಆತ್ಮ ಎಂದರೆ ಪರಮಾತ್ಮ. ಪರಮಾತ್ಮನೇ ಎಲ್ಲದರ ಈಶ್ವರ-ಒಡೆಯ. ಈ ವಿಶ್ವವೆಲ್ಲವೂ ಅವನಿಂದ 'ಆವಾಸ್ಯ' ವಾದುದು. ಪರಮಾತ್ಮನು ತನ್ನ ಅಸ್ತಿತ್ವದಿಂದಲೂ ಜ್ಞಾನದಿಂದಲೂ ಎಲ್ಲವನ್ನೂ ವ್ಯಾಪಿಸಿರುವವನು ಎಂದು ಭಾವ. ಈ ಲೋಕದಲ್ಲಿ ಏನೊಂದಿದೆಯೋ ಅದೆಲ್ಲವೂ ಹೀಗೆಯೇ ಪರಮಾತ್ಮನ ಅಧೀನ. ಆದುದರಿಂದ ಆ ಪರಮಾತ್ಮನು ನಮ್ಮ ಪಾಲಿಗೆ ಕೊಟ್ಟಿರುವಷ್ಟರಿಂದಲೇ ನಾವು ಜೀವನ ಮಾಡಬೇಕು. ಮತ್ತು ನಮ್ಮದೇನಿದ್ದರೂ ಅದೆಲ್ಲವನ್ನೂ ಪರಮಾತ್ಮನಿಗೆ ನಿವೇದಿಸಿಯೇ ಅನುಭವಿಸಬೇಕು. ಸ್ವಾರ್ಥಕ್ಕಾಗಿ ಏನನ್ನೂ ಬಯಸಬಾರದು. ಸ್ವಾರ್ಥಕ್ಕೆ ಬಳಸಲು ನಮ್ಮದಾಗಿ ಇರುವುದಾದರೂ ಏನು ? ಯಾವುದೂ ನಮ್ಮದಲ್ಲ. ಎಲ್ಲವೂ ಪರಮಾತ್ಮನೊಬ್ಬನದೇ ಆಗಿದೆ. ಇದೇ ಅರ್ಥದ 'ಈಶಾವಾಸ್ಯಮಿದಂ ಸರ್ವಂ' ಇತ್ಯಾದಿ ಶ್ರುತಿವಚನವು ಇದೇ ಶ್ಲೋಕದ ಸಮಾನಾಕಾರವಾಗಿರುವುದು ಗಮನಾರ್ಹ. ಭಾಗ. ಶ್ರೀಧರೀಯ. ೮. ೧. ೧೦.

---

1. ಆತ್ಮಾವಾಸ್ಯಮಿದಂ ವಿಶ್ವಂ ಯತ್ಕಿಂಚಿತ್ ಜಗತ್ಯಾಂ ಜಗತ್.
ತೇನ ತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಚಿದ್ಧನಮ್.
ಆತ್ಮಾವಾಸ್ಯಮಿದಂ ಸರ್ವಂ ಯಜ್ಜಗತ್ಯಾಂ ಜಗನ್ಮನಃ.

ಎಂಬ ಪಾಠಾಂತರಗಳೂ ಇವೆ. ಶ್ರೀ ವೀರರಾಘವೀಯ ವ್ಯಾಖ್ಯಾನುಸಾರವಾದ ಪಾಠವನ್ನು ಇಲ್ಲಿ ಸ್ವೀಕರಿಸಲಾಗಿದೆ ಮತ್ತು ಅದರಂತೆಯೇ ವಿವರಿಸಲಾಗಿದೆ. ಈ ವೀರರಾಘವಸ್ವಾಮಿಗಳು ಕರ್ನಾಟಕದ 'ಸುರಪುರ' ಸಂಸ್ಥಾನಕ್ಕೆ ಸಂಬಂಧಿಸಿದ ವಿದ್ವದ್ವಂಶದವರೆಂದೂ ಸುಮಾರು ೨೦೦ ವರ್ಷಗಳ ಹಿಂದೆ ಇದ್ದರೆಂದೂ ತಿಳಿದು ಬರುವುದು.

2. ಕಾಕುಸ್ವರ ಚಿಹ್ನೆ (!)

# 2. ವಿಷ್ಣುಪುರಾಣ

ಪರಮಾತ್ಮದರ್ಶನರೂಪವಾದ 'ವಿದ್ಯೆ'ಯೇ ಈಶಾವಾಸ್ಯದ ಪ್ರಮುಖವಾದ ಸಾರಾಂಶ. ಇದನ್ನು ಸಾಧಿಸಬೇಕಾದರೆ ಸ್ಮೃತಿ ಪುರಾಣಗಳಲ್ಲಿ ಹೇಳಿರುವ ಅಷ್ಟಾಂಗಧ್ಯಾನಯೋಗದ ಕ್ರಮ ಜ್ಞಾನ ಮತ್ತು ಆಚರಣೆ ಅತ್ಯವಶ್ಯ ಎಂಬುದನ್ನು ಮಹರ್ಷಿ ವ್ಯಾಸರು ತಮ್ಮ ಬ್ರಹ್ಮಸೂತ್ರದಲ್ಲಿ ಸ್ಪಷ್ಟಪಡಿಸಿರುವರು. ಅದರಂತೆ ಪುರಾಣಗಳಲ್ಲಿ ಶ್ರೇಷ್ಠವೆನಿಸಿರುವ ಮತ್ತು ನವೀನಭಾಷಾಶಾಸ್ತ್ರ ವಿಮರ್ಶಕರಿಂದಲೂ ಈಗ ಉಪಲಬ್ಧವಿರುವ ಪುರಾಣಗಳಲ್ಲೆಲ್ಲಾ ಅತಿ ಪ್ರಾಚೀನ ಪುರಾಣವೆಂದು ತೀರ್ಮಾನಿಸಲಾಗಿರುವ ವಿಷ್ಣುಪುರಾಣದಲ್ಲಿ ಈ ಧ್ಯಾನಯೋಗದ ಬಗ್ಗೆ ಹೇಳಿರುವುದನ್ನು ನಾವು ಅತ್ಯವಶ್ಯ ಗಮನಿಸಬೇಕು. ವಿಷ್ಣುಪುರಾಣಕ್ಕೆ ವಿಷ್ಣುಚಿತ್ತಾಚಾರ್ಯರ ರಮಣೀಯವಾದ ವ್ಯಾಖ್ಯಾನವೂ ಇದೆ. ಆಚಾರ್ಯ ವರವರಮುನಿವರ್ಯರು ತಮ್ಮ 'ಪ್ರಮಾಣಾಕರಸಂಗ್ರಹ' ಗ್ರಂಥದಲ್ಲಿ ಈ ಭಾಗಗಳನ್ನು ಉಲ್ಲೇಖಿಸಿ ವಿವರಿಸಿರುವರು. ಅದರಂತೆ ಈ ವಿಚಾರವನ್ನು ಇಲ್ಲಿ ನಿರೂಪಿಸಲಾಗುವುದು.

ಅಷ್ಟಾಂಗಧ್ಯಾನಯೋಗದಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮಂಗಳು ಧ್ಯಾನಕ್ಕೆ ಸಹಾಯಕಗಳಾದುದರಿಂದ ಬಹಿರಂಗಗಳು. ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಗಳು ಧ್ಯಾನರೂಪದಲ್ಲೇ ಅಂತರ್ಗತವಾದುದರಿಂದ ಅಂತರಂಗಗಳು. ಮನಸ್ಸಿನ ವಶದಲ್ಲಿ ಇಂದ್ರಿಯಗಳನ್ನು ಇರಿಸಿಕೊಳ್ಳುವುದೇ ಪ್ರತ್ಯಾಹಾರ. ಮನಸ್ಸನ್ನು ಪರಮಾತ್ಮನ ಕಲ್ಯಾಣತಮವಾದ ಯಾವುದಾದರೊಂದು ರೂಪದಲ್ಲಿ ನೆಲೆಗೊಳಿಸುವುದು ಧಾರಣೆ. ನೆಲೆನಿಂತ ಮನಸ್ಸಿನಲ್ಲಿ ಅದೇ ರೂಪವನ್ನು ಭಕ್ತಿಯಿಂದ ಮತ್ತೆ ಮತ್ತೆ ನಿರಂತರವಾಗಿ ಮೆಲುಕುಹಾಕುವುದೇ ಧ್ಯಾನ. ಧ್ಯೇಯವಸ್ತುವಿನ ರೂಪವರ್ಣಾದಿಗಳನ್ನು ಲಕ್ಷ್ಯವಾಗಿರಿಸಿಕೊಳ್ಳದೆ ಅದರ ಸ್ವರೂಪವನ್ನು ಮಾತ್ರ ಮನಸ್ಸಿನಿಂದ ಗ್ರಹಿಸುವುದು ಸಮಾಧಿ.[1]

---

1. 'ಮನಸಾ ತು ವಿಶುದ್ಧೇನ' ಎಂಬ ವಚನಕ್ಕೆ ವಿವೇಕಾದಿಸಾಧನಸಪ್ತಕಗಳಿಂದ ಸಿದ್ಧವಾದ ಪರಮಾತ್ಮೋಪಾಸನೆಯ ಆಸರೆಯಲ್ಲಿ ನಿರ್ಮಲವಾದ ಮನಸ್ಸಿಗೆ ಪರಮಾತ್ಮನನ್ನು ಗ್ರಹಿಸಲು ಸಾಧ್ಯ ಎಂದು ಅರ್ಥ. ಪ್ರ. ಸಂ.

ಸಾಧನಸಪ್ತಕದ ಬಗ್ಗೆ ಬ್ರಹ್ಮಸೂತ್ರಗಳ ಪ್ರಾಚೀನ ವಿಮರ್ಶಕರೂ ವಾಕ್ಯಕಾರರೂ ಆದ ಬ್ರಹ್ಮನಂದಿ–ಟಂಕಾಚಾರ್ಯರ ವಚನಗಳು ಹೀಗಿವೆ:- ವಿವೇಕ, ವಿಮೋಕ, ಅಭ್ಯಾಸ, ಕ್ರಿಯಾ, ಕಲ್ಯಾಣ, ಅನವಸಾದ, ಅನುದ್ಧರ್ಷ ಎಂಬ ಏಳು ಅಂಶಗಳಿಗೆ ಸಾಧನಸಪ್ತಕ ಎಂದು ಪ್ರಸಿದ್ಧಿ ಇದೆ.

ವಿವೇಕ— ಶುದ್ಧವಾದ ಶಾಸ್ತ್ರೀಯ ಆಹಾರದಿಂದ ದೇಹವನ್ನು ಶುದ್ಧವಾಗಿ ಇರಿಸಿಕೊಳ್ಳುವುದು.

ವಿಮೋಕ— ಯಾವ ಚಟವನ್ನೂ ಅಂಟಿಸಿಕೊಳ್ಳದೆ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು ನೆಮ್ಮದಿಯಾಗಿರುವುದು.

ಅಭ್ಯಾಸ— ಧ್ಯಾನಕ್ಕೆ ಆಸರೆಯಾದ ಪರಮಾತ್ಮನ ಅರ್ಚಾದಿರೂಪಗಳನ್ನು ಪ್ರತಿದಿನ ಪರಿಶೀಲಿಸುವುದು.

ಕ್ರಿಯಾ— ದೇವ ಋಷಿ ಪಿತೃಗಳಿಗೂ ಪ್ರಾಣಿಗಳಿಗೂ ಅತಿಥಿಗಳಿಗೂ ಸತ್ಕಾರಾದಿಗಳನ್ನು ಶಕ್ತ್ಯನುಸಾರ ಮಾಡುವುದು.

ಕಲ್ಯಾಣ— ಸತ್ಯ, ಆರ್ಜವ, ದಯೆ, ದಾನ, ಅಹಿಂಸೆ, ಅನಭಿಧ್ಯೆಗಳು. ಇವು 'ಷಟ್ಕಲ್ಯಾಣ' ಎನಿಸಿವೆ. ಆರ್ಜವ ಎಂದರೆ ಸರಳತೆ. ಸತ್ಯ, ಸರಳತೆ, ದಯೆ, ದಾನ, ಅಹಿಂಸೆಗಳ ಶಾಸ್ತ್ರೀಯ ಅರ್ಥಕ್ಕೆ ಈಶಾ. ಪುಟ ೪೦ ನೋಡಿ. ಇತರರ ವಸ್ತುಗಳ ಬಗ್ಗೆ ಸ್ವಲ್ಪವೂ ಆಸೆಪಡದಿರುವಿಕೆಯೇ ಅನಭಿಧ್ಯೆ. (ಇದೇ ಈಶಾವಾಸ್ಯದ ಅತಿಮುಖ್ಯವಾದ ಸಾರ್ವತ್ರಿಕ ಉಪದೇಶ.)

ಅನವಸಾದ— ಕಾಲ, ದೇಶ, ಸ್ವಭಾವಗಳಿಂದ ಮನಸ್ಸು ಪೆಚ್ಚಾಗಿ ಮುಖ ಕಳೆಗುಂದುವುದೇ ಅವಸಾದ. ಇದರ ಅಭಾವವೇ ಅನವಸಾದ. ಆಧ್ಯಾತ್ಮಿಕಕ್ಷೇತ್ರದಲ್ಲಿ ಸೋಲೆಂಬುದನ್ನು ಮನಸ್ಸಿಗೆ ತೆಗೆದುಕೊಳ್ಳದೆ ಧೈರ್ಯವಾಗಿ ಮುನ್ನಡೆಯುವುದು ಎಂದು ಭಾವ.

ಅನುದ್ಧರ್ಷ— ಹೀಗೆ ಸೋಲದೆ ಮುನ್ನಡೆದಾಗ ಆಗುವ ಹೆಮ್ಮೆಯೇ ಉದ್ಧರ್ಷ. ಇಲ್ಲದಿರುವುದೇ ಅನುದ್ಧರ್ಷ. ತಮ್ಮ ಯಾವುದೇ ಸಾಧನೆ ಸಿದ್ಧಿಗಳ ಬಗ್ಗೆ ಅತಿ ಸಂತೋಷವೂ ಕೂಡದು ಎಂದು ಭಾವ.

ಶ್ರೀಭಾಷ್ಯ, ಲಘುಸಿದ್ಧಾಂತ.

ಪರಮಾತ್ಮಧ್ಯಾನವು ಐದು ಸ್ತರಗಳಲ್ಲಿರುವುದು. ಒಂದನೆಯದು ಆಯುಧ - ಅಲಂಕಾರಾದಿಗಳಿರುವ ಪರಮಾತ್ಮನ ರೂಪಧ್ಯಾನ. ಎರಡನೆಯದು ಆಯುಧವಿಲ್ಲದಂತೆ. ಮೂರನೆಯದು ಅಂಗ ಪ್ರತ್ಯಂಗಗಳು ಮಾತ್ರ ಇರುವ ಪರಮಾತ್ಮನ ರೂಪಧ್ಯಾನ. ನಾಲ್ಕನೆಯದು ಹೆಚ್ಚಿನ ತೋಳುಗಳಿಲ್ಲದೆ ಎರಡು ತೋಳಿರುವ ಪುರುಷಾಕಾರನಾದ ಪರಮಾತ್ಮನ ಧ್ಯಾನ. ಐದನೆಯದು ಹಸುವಿನ ಮುಖದಂತೆ ದೀರ್ಘ ತ್ರಿಕೋಣಾಕಾರ ಜ್ಯೋತಿರ್ಮಯವಾದ ಪರಮಾತ್ಮರೂಪಧ್ಯಾನ. ಈ ರೀತಿ ಧ್ಯಾನಸ್ತರಗಳನ್ನು ಅಭ್ಯಸಿಸಿ ನಂತರ ಪರಮಾತ್ಮನ ಸ್ವರೂಪವನ್ನು ಮನಸ್ಸಿಗೆ ತಂದುಕೊಂಡರೆ ಅದೇ ಸಮಾಧಿ.[1]

ಧ್ಯಾನದಲ್ಲಿ ಪರಮಾತ್ಮನ ಸ್ವರೂಪವನ್ನರಿಯಲು ಅಭ್ಯಾಸಕ್ಕಾಗಿ ರೂಪಧ್ಯಾನದ ವಿವಿಧ ಸ್ತರಗಳನ್ನು ಈ ರೀತಿ ಇಟ್ಟುಕೊಳ್ಳಲಾಗಿದೆಯೇ ಹೊರತು ಪರಮಾತ್ಮನಿಗೆ ರೂಪವಿಲ್ಲವೆಂದರ್ಥವಲ್ಲ. ಪರಲೋಕದಲ್ಲಿ ಪರಮಾತ್ಮನನ್ನು ಪಡೆಯುವಾಗ ದಿವ್ಯಪುರುಷಾಕಾರದಲ್ಲೇ ಅವನಿರುವುದು ಸ್ವಾಭಾವಿಕವೂ ಪಾರಮಾರ್ಥಿಕವೂ ಆಗಿರುವುದರಿಂದ ಎಂದಿಗೂ ಪರಮಾತ್ಮನ ರೂಪಕ್ಕೆ ನಿಷೇಧವಿಲ್ಲ.[2]

## ೩. ವಿವಿಧ ಪುರಾಣಗಳು[3]

### ೧

ಸ್ವಾಯಂಭುವ ಮನುವು ತನ್ನ ಮಗಳ ಮಗನಾಗಿ 'ಯಜ್ಞ'ನೆಂಬ ಹೆಸರಿನಿಂದ ಹುಟ್ಟಿದ್ದ ಪರಮಾತ್ಮನಾದ ವಿಷ್ಣುವನ್ನು 'ಈಶಾವಾಸ್ಯ' ಎಂದು ಆರಂಭವಾಗುವ ಮಂತ್ರಗಳಿಂದ ಬಹಳ ಎಚ್ಚರಿಕೆಯಿಂದ ಹೊಗಳಿದನು. ಭಯಂಕರ ರಾಕ್ಷಸರು ಜಗತ್ಪಾಲಕನಾದ ಮನುವನ್ನೇ ನುಂಗಲು ಬಂದಿದ್ದರು. ತಮಗೆ ವಿಶ್ವದ ಯಾರಿಂದಲೂ ಸಾವಿಲ್ಲದೆ ವಿಶ್ವವನ್ನೇ ಕೊಲ್ಲುವಂತಹ ಶಕ್ತಿಯನ್ನು ಅವರು ಹರನಿಂದ ಪಡೆದಿದ್ದರು. ಈಶಾವಾಸ್ಯ ಸ್ತೋತ್ರವನ್ನು ಆಲಿಸಿದೊಡನೆಯೇ ಯಜ್ಞನೆಂಬ ಆ ಪರಮಾತ್ಮನಾದ ಹರಿಯು ಅವರನ್ನೆಲ್ಲ ಕೊಂದು ಮನುವನ್ನು ರಕ್ಷಿಸಿದನು. ಹೀಗೆ ಹರನಿಗಿಂತ ಹಿರಿಯ ಪ್ರಭು ಬೇರೆ ಯಾರಿದ್ದಾರು ! ಇದು ಬ್ರಹ್ಮಾಂಡಪುರಾಣ ವಚನ. ಇದೇ ಅರ್ಥವು ಭಾಗವತದಲ್ಲೂ ಇದೆ.

### ೨

ಪ್ರಕೃತಿಯೂ ಪ್ರಕೃತಿಯಲ್ಲಿರುವ ಜೀವಾತ್ಮಗಳೂ ಸ್ವತಂತ್ರವಾಗಿ ಏನೂ ಮಾಡಲಾರವು. ಪರಮಾತ್ಮನು ಅವುಗಳ ಒಳಹೊಕ್ಕು ಪ್ರೇರಿಸುವುದರಿಂದ ಎಲ್ಲವೂ ಅವನ ಅಧೀನ. ಅವನು ನಮಗೆ ಕೊಟ್ಟಷ್ಟು ನಾವು ಪಡೆದು ಅನುಭವಿಸಬೇಕು. ಇತರರನ್ನು ಬೇಡಬಾರದು.[4] ಬ್ರಹ್ಮಾಂಡ ಪುರಾಣ

---

1. ಪರಮಾತ್ಮ ಸ್ವರೂಪದರ್ಶನವಾಗಿ, ಆ ಸ್ವರೂಪ ಮತ್ತು ಸ್ವರೂಪ ನಿರೂಪಕಗುಣಗಳಾದ ಸತ್ಯತ್ವ, ಜ್ಞಾನತ್ವ, ಅನಂತತ್ವ, ಆನಂದತ್ವ, ಅಮಲತ್ವ ಮುಂತಾದ ಗುಣಗಳ ನಿಷ್ಕೃಷ್ಟಜ್ಞಾನವುಂಟಾಗುವುದು, ಇದೇ ಪರಭಕ್ತಿ.
2. 'ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ' 'ಸತ್ಯಧರ್ಮಾಯ ದೃಷ್ಟಯೇ', 'ಯೋಽಸಾವಸೌ ಪುರುಷ ಸ್ಸೋಽಹಮಸ್ಮಿ' ಗಮನಿಸಿ.
3. ಮಧ್ವಾಚಾರ್ಯರೆಂದೂ ಪೂರ್ಣಪ್ರಜ್ಞರೆಂದೂ ಪ್ರಸಿದ್ಧರಾದ ಆಚಾರ್ಯ ಆನಂದತೀರ್ಥರ ಈಶಾವಾಸ್ಯಭಾಷ್ಯದಿಂದ ಉಪಲಬ್ಧವಾಗುವ ವಿವಿಧ ಪುರಾಣವಚನಗಳನ್ನು ಇಲ್ಲಿ ವಿವರಿಸಲಾಗಿದೆ. ಪುರಾಣಗಳ ವಿವಿಧ ಸಂಹಿತಾಪಾಠಕ್ರಮಗಳಿರುವುದರಿಂದ ಈಗ ಉಪಲಬ್ಧವಾಗಿ ಉಳಿದಿರುವ ಮುದ್ರಿತ ಪುರಾಣಗ್ರಂಥಗಳಲ್ಲಿ ಈ ಪದ್ಯಗಳ 'ಆಕರ' ಸಿಗದಿರಬಹುದು, ಆದರೂ ಆಚಾರ್ಯರು ಉದ್ಧರಿಸಿರುವ ಇವುಗಳನ್ನು ಅವಶ್ಯ ಸ್ವೀಕರಿಸಬಹುದೆಂದು ನಮಗೆ ತೋರುವುದು.
4. ಈಶಾ. ೧ಕ್ಕೆ ಉಪಯುಕ್ತ.

೩

ಕೃಷ್ಣನ ಉಪಾಸನೆ ಮಾಡದಿದ್ದರೆ ಅಂತಹ ಅಜ್ಞಾನಿಗಳಿಗೆ ಕರ್ಮವು ಬಂಧಕವಾಗುವುದು. ಅಂತಹ ಜ್ಞಾನಿಗಳಿಗೂ ಸಹ ಇರುವ ಜ್ಞಾನ ಮತ್ತು ಆನಂದಗಳು ಕ್ಷಯಿಸಿ ಹೋಗುವುವು. ಆದುದರಿಂದ ಉಪಾಸನೆಯನ್ನು ಯಾವಾಗಲೂ ಮಾಡಬೇಕು.[1] ನಾರದೀಯ ಪುರಾಣ.

೪

"ಏನೇನೋ ಕೆಟ್ಟ ಉಪಾಸನೆಗಳನ್ನು ಮಾಡುತ್ತ ಪರಮಾತ್ಮನನ್ನು ನೆನೆಯದವರು ಆತ್ಮಘಾತಿಗಳು" ಎನ್ನಲಾಗಿದೆಯಲ್ಲವೆ ! ಪರಮಾತ್ಮನಾದ ವಿಷ್ಣುವಿಗೆ ವಿಮುಖರಾದವರು, ಬಹಳ ದುಃಖಕರವಾದ ಅಸುರರ 'ಅಸುರ್ಯ' ಎಂಬ ಲೋಕಗಳನ್ನು ಪಡೆಯುವರು.[2] ವಾಮನ ಪುರಾಣ.

೫

ಪರಮಾತ್ಮತತ್ತ್ವಕ್ಕೆ ಹೆದರಿಕೆಯಿಲ್ಲವೆಂಬುದರಿಂದ ಅದು ನಡುಗುವುದಿಲ್ಲ. ಪ್ರಧಾನವಾದುದರಿಂದ ಏಕ್ಯಕೆ ವೆನಿಸಿದೆ. ದೇವತೆಗಳೂ ಅದನ್ನು ಸರಿಯಾಗಿ ಅರಿಯಲಾರರು. ಅದು ಸ್ವಾಭಾವಿಕವಾಗಿ ಮೊದಲೇ ಎಲ್ಲರ ಬಳಿಯೂ ಸೇರಿರುವುದು. ಅದರ ವಿಚಿತ್ರಶಕ್ತಿಯನ್ನು ಮನಸ್ಸಿನಿಂದ ಯೋಚಿಸಲೂ ಸಾಧ್ಯವಿಲ್ಲ. ಎಲ್ಲದರೊಳಗೂ ಇರುವುದರಿಂದ ಅದು ವ್ಯಾಪಕ ಮತ್ತು ಅತ್ಯಂತ ಶ್ರೇಷ್ಠ. ನಿಂತಿದ್ದರೂ ಅದು ಓಡುವವರನ್ನು ಮೀರಿದೆ. ಅದರ ಆಸರೆಯಲ್ಲೇ ವಾಯುವು ಚಲನೆಯನ್ನುಂಟುಮಾಡುವುದು. ನಮ್ಮೆಲ್ಲ ಚಲನವಲನ ಕರ್ಮಗಳನ್ನೂ ಆ ಪರಮಾತ್ಮನಾದ ಶ್ರೀಹರಿಗೇ ಒಪ್ಪಿಸಬೇಕು.[3] ಬ್ರಹ್ಮಾಂಡಪುರಾಣ.

೬

ಶೋಕವಿಲ್ಲದ ಅದು ಶುಕ್ರವೆನಿಸಿದೆ. ನಿತ್ಯಪೂರ್ಣವೂ ಆದುದರಿಂದ ಅದು ಅವ್ರಣ. ಎಲ್ಲವನ್ನೂ ಪಾವನಗೊಳಿಸುವುದರಿಂದ ಅದು ಶುದ್ಧ. ಸ್ತ್ರೀ ಪುರುಷ ನಪುಂಸಕ ಎಂಬ ಯಾವ ಲಿಂಗಗಳೂ ಅದಕ್ಕಿಲ್ಲವಾದುದರಿಂದ ಅಂತಹ ಶರೀರವೂ ಅದಕ್ಕಿಲ್ಲ.

ಇಂದ್ರಿಯಗೋಚರವಾಗುವಂತಹ ಶರೀರವಿಲ್ಲದುದರಿಂದ ನರನಾಡಿಗಳೂ ಅದಕ್ಕಿಲ್ಲ. ಹೀಗಿದ್ದರೂ ಅದು ಎಲ್ಲವನ್ನೂ ಅರಿತಿರುವುದರಿಂದ ಅದನ್ನು ಕವಿ ಎನ್ನುವರು. ಚತುರ್ಮುಖ ಬ್ರಹ್ಮನಿಂದ ಆದಿಯಾಗಿ ಎಲ್ಲರ ಎಲ್ಲ ವಿಧ ಮನಸ್ಸನ್ನೂ ತನ್ನ ಅಧೀನದಲ್ಲಿಟ್ಟುಕೊಂಡಿರುವುದರಿಂದ ಅದು ಮನೀಷಿ. ಎಲ್ಲೆಡೆ ಸುತ್ತುವರಿದಿರುವುದರಿಂದ ಅದು ಪರಿಭೂ. ಎಂದಿಗೂ ಯಾವುದೊಂದರ ಅಧೀನದಲ್ಲೂ ಇಲ್ಲದುದರಿಂದ ಸ್ವಯಂಭು. ನದೀ ಪ್ರವಾಹದಂತೆ ಏಕಾಕಾರವಾಗಿ ಅನಾದಿಕಾಲದಿಂದಲೂ ಇರುವ ಈ ಸತ್ಯವಾದ ಜಗತ್ತನ್ನು ಮತ್ತೆ ಮತ್ತೆ ಹಾಗೆಯೇ ನಿಯಮಾನುಸಾರ ಶಾಶ್ವತವಾಗಿ ಸೃಷ್ಟಿಸುತ್ತಲೇ ಇರುವ ಆ ಪರಮಾತ್ಮವಸ್ತುವೇ ಷಾಡ್ಗುಣ್ಯಪರಿಪೂರ್ಣನಾದ ಪುರುಷೋತ್ತಮ. ಅವನ ತಲೆ ತೋಳು ಕಾಲು ದೇಹ ಎಲ್ಲವೂ ಜ್ಞಾನಾನಂದಮಯವಾಗಿರುವುವಲ್ಲದೆ ಭೌತಿಕವಲ್ಲ. ಇಂತಹ ಮಹಾಪುರುಷನೇ ಜಗದೀಶ್ವರನಾದ ಮಹಾವಿಷ್ಣು. ಅವನ ಸಂಕಲ್ಪಾಧೀನವಾದುದು ಈ ಜಗತ್ತು.[4] ವರಾಹಪುರಾಣ.

---

1. ಈಶಾ. ೨ ಕ್ಕೆ ಉಪಯುಕ್ತ. 2. ಈಶಾ. ೩ ಕ್ಕೆ ಉಪಯುಕ್ತ.
3. ಈಶಾ. ೪, ೫ ಕ್ಕೆ ಉಪಯುಕ್ತ. 4. ಈಶಾ. ೮ ಕ್ಕೆ ಉಪಯುಕ್ತ.

## ೭

ಪರಮಾತ್ಮನ ಬಗ್ಗೆ ವಿರುದ್ಧ ಜ್ಞಾನವನ್ನೂ ವಿರುದ್ಧಉಪಾಸನೆಯನ್ನೂ ಮೆಟ್ಟಿ ನಿಲ್ಲುವಂತಹ ಜ್ಞಾನವನ್ನೂ ಉಪಾಸನೆಯನ್ನೂ ಸಜ್ಜನನು ಮಾಡಬೇಕು.

ಹೀಗೆಯೇ ಪರಮಾತ್ಮನನ್ನು ಸಕಲಜಗತ್ಕಾರಣನೆಂದೂ ಸಕಲಕಲ್ಯಾಣಗುಣಾಕರನೆಂದೂ, ಸಕಲಸೃಷ್ಟಿಸಂಹಾರಗಳ ಕರ್ತನೆಂದೂ ಉಪಾಸಿಸಬೇಕು. ಈ ವಿಧವಾದ ಉಪಾಸನೆ ಮಾಡದವರು ನರಕಕ್ಕೆ ಹೋಗಬೇಕಾದೀತು. ಈ ವಿಧವಾದ ಉಪಾಸಕರು ಈ ಸಂಸಾರಬಂಧದಿಂದ ಬಿಡುಗಡೆಯನ್ನು ಪಡೆಯುವರು. ಅವರ ಜ್ಞಾನಾದಿಗುಣಗಳು ವಿಕಾಸವನ್ನು ಪಡೆಯುವುವು. ನಿರ್ದೋಷನಾದ ಪರಮಾತ್ಮನು ವಿರಿಂಚಾದಿದೇವತೆಗಳಿಗಿಂತ ಉತ್ಕೃಷ್ಟನಾಗಿರುವುದರಿಂದ ಅವನ ಉತ್ಕರ್ಷವಾದ ಸಾಮ್ಯವನ್ನು ತಿಳಿದರೆ ಅದೇ ಮುಕ್ತಿಯ ಸನ್ನಿವೇಶ.[1]

ಕೂರ್ಮಪುರಾಣ.

## ೮

ಹೊಳೆಯುವ ಸೂರ್ಯಮಂಡಲವೇ ಚಿನ್ನದ ತಟ್ಟೆ. ಸತ್ಯವೆನಿಸಿದ ಪರಮಾತ್ಮನಾದ ವಿಷ್ಣುವಿನ ಮುಖವನ್ನು ಅದು ಮುಚ್ಚಿದೆ. ಪೂರ್ಣತೆಯಿಂದ 'ಪೂಷಾ' ಎನಿಸಿದ ಆ ವಿಷ್ಣುವೇ ಸತ್ಯಧರ್ಮನಿಷ್ಠನಾದ ಭಕ್ತನಿಗೆ ತನ್ನ ಮುಖವನ್ನು ತೋರುವನು. ಈ ದರ್ಶನವೇ ಪ್ರಧಾನವಾದ ಜ್ಞಾನ.[2]

ಬ್ರಹ್ಮಾಂಡಪುರಾಣ.

## ೯

ವಿಷ್ಣುವೇ 'ಏಕಋಷಿ'. ಎಲ್ಲವನ್ನೂ ನಿಯಂತ್ರಿಸುವ ಅವನು 'ಯಮ' ಎನಿಸಿರುವನು. ದಿವ್ಯಸೂರಿಗಳು ಅವನನ್ನು ಪಡೆಯುವುದರಿಂದ ಅವನು 'ಸೂರ್ಯ'. ಜಗತ್ತಿನ ವ್ಯಷ್ಟಿಸೃಷ್ಟಿಕರ್ತರಾದ ಪ್ರಜಾಪತಿಗಳೆನಿಸಿದವರು ಇವನನ್ನೇ ಆಶ್ರಯಿಸಿರುವುದರಿಂದ, ಇವನನ್ನು 'ಪ್ರಾಜಾಪತ್ಯ' ಎನ್ನುವರು. ಎಲ್ಲ ಜೀವಾತ್ಮಗಳೊಳಗೂ ಪರಮಾತ್ಮನು ಶಾಶ್ವತವಾಗಿರುವುದರಿಂದ ಒಂದು ಜೀವಾತ್ಮನಾದ ನಾನೂ ಪರಮಾತ್ಮನನ್ನು ಬಿಟ್ಟಿರುವುದಿಲ್ಲ.[3]

ಬ್ರಹ್ಮಾಂಡಪುರಾಣ.

## ೧೦

ಪರಮಾತ್ಮನೇ ಜ್ಞಾನಮಯವಾದ ಕ್ರತು. ತನ್ನ ಅಂಗವಾದ ವಿಶ್ವವನ್ನು ಮುನ್ನಡೆಸುವ ಅವನೇ ಅಗ್ನಿ.[4]

ಬ್ರಹ್ಮಾಂಡ ಪುರಾಣ.

## ೧೧

ನಾವು ಮಾಡುವ ಪಾಪಗಳು ನಮ್ಮನ್ನು ಅಲ್ಪರನ್ನಾಗಿಸುವುವು. ನಮ್ಮ ಆ ಪಾಪಗಳನ್ನು ಬಿಡಿಸಿ, ನಿನ್ನ ಬಳಿಗೆ ಕರೆದೊಯ್ದು, ಮೋಕ್ಷಸಾಮ್ರಾಜ್ಯೈಶ್ವರ್ಯವನ್ನು ಕೊಡಿಸು ಎಂದು "ಯಜ್ಞ" ಎಂಬ ಹೆಸರಿನ ಪರಮಾತ್ಮನನ್ನು ಮನುವು ಸ್ತೋತ್ರ ಮಾಡಿದನು.[5]

ಸ್ಕಾಂದಪುರಾಣ.

---

1. ಈಶಾ. ೯ ರಿಂದ ೧೪ ಕ್ಕೆ ಉಪಯುಕ್ತ.
2. ಈಶಾ. ೧೫ ಕ್ಕೆ ಉಪಯುಕ್ತ.
3. ಈಶಾ. ೧೬ ಕ್ಕೆ ಉಪಯುಕ್ತ.
4. ಈಶಾ. ೧೭, ೧೮ ಕ್ಕೆ ಉಪಯುಕ್ತ.
5. ಈಶಾ. ೧೮ ಕ್ಕೆ ಉಪಯುಕ್ತ.

# ಆಗಮಗಳಲ್ಲಿ ಉಪಯುಕ್ತವಿಚಾರಗಳು

ಬ್ರಹ್ಮಸೂತ್ರ ಮುಂತಾದ ಗ್ರಂಥಗಳಲ್ಲಿ ವೇದವ್ಯಾಸಮಹರ್ಷಿಗಳು ವೇದವೇದಾನ್ತಾರ್ಥಗಳಿಗೆ ಪೋಷಕವಾಗಿ ವೈದಿಕಸಿದ್ಧಾಂತಾರ್ಥಗಳ ಪ್ರಾಯೋಗಿಕ ಸುಲಭಮಾರ್ಗವನ್ನು ನಿರ್ದೇಶಿಸುವ ಪಾಂಚರಾತ್ರಾಗಮಗ್ರಂಥಗಳನ್ನು ಪ್ರಮಾಣಾಧಾರವೆಂದು ತಿಳಿಸಿರುವರು.[1] ಈ ಹಿನ್ನೆಲೆಯಲ್ಲಿ ಮುಖ್ಯವಾದ ಕೆಲವು ಆಗಮಸಂಹಿತಾಗ್ರಂಥಗಳಿಂದ ಈಶಾವಾಸ್ಯಕ್ಕೆ ಉಪಯುಕ್ತವಾದ ಅರ್ಥಗಳನ್ನು ಉದ್ಧರಿಸಿ ತೋರಿಸಲಾಗುವುದು. ಈಶಾವಾಸ್ಯದ ಅಧ್ಯಯನದಲ್ಲಿ ಇವುಗಳ ಉಪಯುಕ್ತತೆಗೆ ಸೂಚನೆ ಮಾತ್ರ ಇದು. ಈ ಅರ್ಥಗಳನ್ನು ಗಮನಿಸಿಯೇ ವೇದಾಂತದೇಶಿಕ, ಶ್ರೀವತ್ಸನಾರಾಯಣ ಮುಂತಾದ ಆಚಾರ್ಯರು ತಮ್ಮ ಈಶಾವಾಸ್ಯಭಾಷ್ಯಗಳಲ್ಲಿ ಕೆಲವು ಸೂಕ್ಷ್ಮವಾದ ನಿರ್ಣಯಗಳನ್ನು ಕೈಗೊಂಡಿರುವರು.

೧

ಉಪಸಂಹಾರರೂಪವಾದ ಪೂರ್ಣಾಹುತಿಯನ್ನು ಕೊಟ್ಟು ನಂತರ ಉದಿತೋದಿತನಾದ ಪರಮಾತ್ಮನನ್ನು ಹಿಂದೆ ಹೇಳಿರುವಂತೆಯೇ ನೆನೆಯಬೇಕು. 'ಅಜಸ್ಯನಾಭೌ' ಮುಂತಾದ ಏಕಾಯನವೇದಮಂತ್ರಗಳಿಂದ ಸ್ತುತಿಸಬೇಕು. ಸಾತ್ವತಸಂಹಿತಾ. ೨೫. ೧೪೬, ೧೬೮.

ಯಜ್ಞಾದಿಕರ್ಮಗಳಲ್ಲಾಗುವ ಲೋಪದೋಷಗಳ ಶಾಂತಿಗಾಗಿ ಪೂರ್ಣವಸ್ತುಗಳನ್ನು ಅಗ್ನಿಯಲ್ಲಿ ಅರ್ಪಿಸುತ್ತಾ 'ಪೂರ್ಣಾತ್‌ಪೂರ್ಣಂ' ಮಂತ್ರವನ್ನು ಪಠಿಸಿ ನಂತರ ಏಕಾಯನವೆನಿಸಿದ ಯಜುರ್ವೇದದ ಮಂತ್ರಗಳನ್ನು ಎಲ್ಲರಿಗೂ ಕೇಳಿಸುವಂತೆ ಹೇಳಬೇಕು. ಸಾತ್ವ. ಸಂ. ೨೫. ೯೩, ೯೪.

೨

ಚಿತ್—ಜೀವಾತ್ಮ, ಅಚಿತ್—ಜಡಪ್ರಕೃತಿ ಇವೆರಡು ತತ್ತ್ವಗಳೂ ಈಶನಿಂದ ಆಳಲ್ಪಡುವುವು. ಆಳುವ ಪರಮಾತ್ಮನೇ ಈಶ. ಅಹಂಕಾರ ಮಮಕಾರಗಳಿಂದ ಜೀವಾತ್ಮನು ಸಂಸಾರಬಂಧದಲ್ಲಿ ಬಿದ್ದು ಅಜ್ಞನಾಗಿರುವನು. ಪರಮಾತ್ಮೋಪಾಸನೆ ಎಂಬ ವಿದ್ಯೆಯ ಅಭ್ಯಾಸದಿಂದ ಅಹಂಕಾರ ಅಭಿಮಾನಗಳನ್ನು ಬಿಟ್ಟು ನಂತರ ಪರಮಾತ್ಮನ ಸಾಯುಜ್ಯವನ್ನು ಪಡೆಯುವನು.[2] ಲಕ್ಷ್ಮೀತಂತ್ರ. ೩. ೧೩ ರಿಂದ ೧೮, ೨೨ ರಿಂದ ೨೪.

೩

ಯಾವ ಕರ್ಮಗಳಿಗೆ ಪರಮಾತ್ಮಪ್ರಾಪ್ತಿ ಹೊರತು ಬೇರೆ ಯಾವ ಫಲವೂ ಇಲ್ಲವೋ ಮತ್ತು ಆ ಕರ್ಮಗಳನ್ನು ಮಾಡದಿದ್ದರೆ 'ಅನರ್ಥ' ವಾಗುವುದೋ ಅಂತಹ ಕರ್ಮಗಳನ್ನು ಮಾತ್ರ ಆಚರಿಸುವುದೇ ವೈದಿಕಕರ್ಮನಿಷ್ಠೆ. ಇದೇ ನಿಷ್ಕಾಮಕರ್ಮ. ಇದನ್ನೇ 'ಕರ್ಮಸಾಮ್ಯ' ಎನ್ನುವರು.[3]

ಲಕ್ಷ್ಮೀ. ತಂ. ೧೭. ೯೦, ೯೧.

---

1. 'ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ' ಬ್ರ. ಸೂ. ೨. ೨. ೪೨.
ಇದಂ ಮಹೋಪನಿಷದಂ ಚತುರ್ವೇದಸಮನ್ವಿತಮ್.
ಸಾಂಖ್ಯಯೋಗ ಕೃತಾಂತೇನ ಪಂಚರಾತ್ರಾನುಶಬ್ದಿತಮ್.
(ಭಾರತ. ಶಾನ್ತಿಪರ್ವ. ಮೋಕ್ಷಧರ್ಮ. ೩೪೨ನೇ ಅಧ್ಯಾಯ ೧೧೧ ನೇ ಶ್ಲೋಕ)
2. ಇದು ಈಶಾ. ೧. ಮಂತ್ರಾರ್ಥದ ವಿವರಣೆಯಾಗಿದೆ. ಭಾಷ್ಯಗಳೊಡನೆ ಹೋಲಿಸಿ.
3. ಈಶಾ ೨. ೧೨ ಕ್ಕೆ ಉಪಯು..

೪

ನಿಷ್ಕಾಮಕರ್ಮಾನುಷ್ಠಾನದಿಂದ ಅಂತಃಕರಣಶೋಧನೆಯಾಗಿ ಸತ್ತತ್ತ್ವಜ್ಞಾನವು ಸಿದ್ಧಿಸುವುದು. ಈ ಶಾಸ್ತ್ರಾಭ್ಯಾಸಜನ್ಯವಾದ ನಿರ್ಣಯಾತ್ಮಕ ಜ್ಞಾನವೂ ಧ್ಯಾನದ ಬಲದಿಂದ ದೃಢವಾಗುತ್ತಾ ಪ್ರತ್ಯಕ್ಷಸಮಾನಾಕಾರ ವಾಗುವುದು. ಇದೇ ವಿವೇಕಜನ್ಯಜ್ಞಾನ. ಈ ಜ್ಞಾನವು ದೃಢವಾದ ಭಕ್ತಿ ಎನಿಸಿ, ನಂತರ ಸಮಾಧಿ ಸಂಯಮ ಎಂಬ ದ್ವಿವಿಧವಾದ ಯೋಗವೂ ಸಿದ್ಧಿಸುವುದು. 'ಸದ್ಬ್ರಹ್ಮ' ಎನಿಸಿದ ಪರಮಾತ್ಮನ ಸಾಕ್ಷಾತ್ಕಾರವೇ ಸಮಾಧಿ. ಅಂತಹ ಸಮಾಧಿಯಿಂದ ವ್ಯುತ್ಥಾನವಾದಾಗಲೂ ಪರಮಾತ್ಮನ ಸೇವೆಯನ್ನು ಶಾರೀರಕವಾಗಿಯೂ, ಮಾನಸಿಕ ವಾಗಿಯೂ ಮಾಡುತ್ತಿರಬೇಕು. ಇದೇ ಸಂಯಮಯೋಗ. ಇದೇ ಅತ್ಯಂತ ಪ್ರೀತಿರೂಪವಾದ ಭಕ್ತಿಯ ಬೆಲೆ. ಇವೆಲ್ಲಕ್ಕೂ ಸಾರವಾದ ಉಪಾಯವೇ ಸರ್ವತ್ಯಾಗರೂಪವಾದ ಶರಣಾಗತಿ.[1]

ಲಕ್ಷ್ಮೀ. ತಂ. ೧೬. ೩೪ ರಿಂದ ೪೨.

೫

ಕಾಣ್ವ - ಮಾಧ್ಯಂದಿನ ಶಾಖೆಗಳಿಗೆ ಸೇರಿ ಕಾತ್ಯಾಯನಸೂತ್ರಾನುಸಾರ ಕರ್ಮಗಳನ್ನು ಮಾಡುತ್ತ, ಪಾಂಚರಾತ್ರಶಾಸ್ತ್ರದಲ್ಲಿ ನಿಷ್ಣಾತರಾಗಿ, ಶರಣಾಗತಿಧರ್ಮವನ್ನು ಅರಿತು, ದ್ವಯಮಂತ್ರಪರರಾಗಿ ಎಂಟುನೂರು ಮಹರ್ಷಿಗಳು ಪ್ರಸಿದ್ಧರಾಗಿರುವರು.[2] ಲಕ್ಷ್ಮೀ. ತಂ. ೪೧. ೭೦, ೭೧. ಪಾಠಾನ್ತರ.

೬

ನಿರಂತರವಾದ ಧ್ಯಾನದಿಂದಾಗುವ ಸಮಾಧಿಯೇ ವೇದಶಾಸ್ತ್ರಗಳ ಪ್ರಾಯೋಗಿಕ ವಿಜ್ಞಾನ. ಸತತವಾದ ಪರತತ್ವಜ್ಞಾನಕ್ಕೆ ಈ ಸಮಾಧಿಸ್ತರವು ಕಾರಣ.[3] ಪಾದ್ಮಸಂಹಿತಾ. ಜ್ಞಾನಪಾದ. ೮. ೩೬.

೭

ಸಾರೂಪ್ಯವೆಂಬ ಮುಕ್ತಿಯಲ್ಲಿ ಸೋಽಹಂ ಎಂಬ ಭಾವೈಕ್ಯವಿರುವುದು.[4]

ಪಾದ್ಮ. ಸಂ. ಜ್ಞಾನ. ೮. ೩೬.

೮

ಸಾತ್ತ್ವಿಕತಪೋರೂಪವಾದ ಕರ್ಮವು ಮಾತ್ರ ವಿದ್ಯೆ ಎಂಬ ಪ್ರಾಯೋಗಿಕಜ್ಞಾನಕ್ಕೆ ಅಂಗವಾಗುವುದು. ರಾಜಸ ತಾಮಸ ಕರ್ಮಗಳು ಜ್ಞಾನಕ್ಕೆ ಎಂದಿಗೂ ಅಂಗವಾಗುವುದಿಲ್ಲ.[5]

ಪಾದ್ಮ. ಸಂ. ಜ್ಞಾನ. ೮. ೭.

೯

ಈ ಸಂಸಾರದಲ್ಲಿ ಹುಟ್ಟು, ಸಾವು, ಸ್ವಪ್ನ, ನಿದ್ರೆ, ಮೂರ್ಛಾದಿಗಳಿಂದ ಬಸವಳಿದು ಪರದಾಡುತ್ತಿರುವ ಜೀವಾತ್ಮರ ಬಗ್ಗೆ ಪರಮಾತ್ಮನ ಕೃಪಾಕಟಾಕ್ಷ ಬಿದ್ದಾಗ ಅವರ ಅಜ್ಞಾನವೆಲ್ಲವೂ ಹೋಗಿ, ಯೋಗನಿಷ್ಠೆಯೂ

1. ಇದು ಈಶಾವಾಸ್ಯಸಾರಾರ್ಥ ಎಂಬುದನ್ನು ಗಮನಿಸಿರಿ.
2. ಕಾಣ್ವಮಾಧ್ಯಂದಿನ ಶಾಖೆಗಳಿಗೂ ಪಾಂಚರಾತ್ರಾಗಮಕ್ಕೂ ಸಂಬಂಧವಿರುವುದು ಗಮನಾರ್ಹ.
3. ಈಶಾ. ೧೧ ಭಾಷ್ಯಗಳಲ್ಲಿ ಸಮಾಧಿವಿಷಯ ಗಮನಿಸಿ.
4. ಈಶಾ. ೧೬ ಗಮನಿಸಿ. 5. ಈಶಾ. ೨. ೧೧. ಗಮನಿಸಿ.

ಸಿದ್ಧಿಸಿ, ಇಂದ್ರಿಯಸಂಯಮವಾಗಿ, ಅನುಭವಾತ್ಮಕವಾದ ವಿಶೇಷಜ್ಞಾನವು ಉಂಟಾಗಿ, ನಂತರ ಪರಮಾತ್ಮ ಪ್ರಾಪ್ತಿಯೂ, ಪರಮಾತ್ಮಾನುಭವಾನಂದವೂ ಆಗುವುದು. ಇದೇ ಮುಕ್ತಿ.'

ಪಾದ್ಮ ಸಂ. ಜ್ಞಾನ. ೭. ೩೧ ರಿಂದ ೩೩.

## ೧೦

ಎಲ್ಲೂ ಹೋಗಿಬರಬೇಕಾದ ಅವಶ್ಯಕತೆಯೇ ಇಲ್ಲದಂತೆ ಎಲ್ಲೆಲ್ಲೂ ವೈಭವದೊಡನೆ ಇರುತ್ತಾ, ಎಲ್ಲದರ ಒಳಗೂ ಹೊರಗೂ ವ್ಯಾಪಿಸಿ ಎಲ್ಲವನ್ನೂ ಆಳುತ್ತಾ, ಯಾವ ಶಾಸ್ತ್ರದ ಕಟ್ಟುನಿಟ್ಟುಗಳಿಗೂ ಸಿಲುಕದಂತಿರುವ 'ವಾಸುದೇವ' ಎಂಬ ಹೆಸರಿನ ಪರಮಾತ್ಮನನ್ನು ಪರಭಕ್ತಿ ಎಂಬ ಜ್ಞಾನದಿಂದ ನೋಡುತ್ತಾ (ಸಂಯಮವೆಂಬ) ಪರಮಾತ್ಮಸೇವಾಯೋಗದಲ್ಲಿ ನಿಷ್ಠನಾದ ಜೀವಾತ್ಮನು ಪರಮಾತ್ಮನ ಲೋಕವನ್ನೂ ಪರಮಾತ್ಮನನ್ನೂ ಪಡೆಯುವನು.[2]

ಪಾದ್ಮ ಸಂ. ಜ್ಞಾನ. ೫. ೩೧, ೩೭, ೪೦.

## ೧೧

ಕರ್ಮಯೋಗವನ್ನು ಅಂಗವಾಗಿ ಉಳ್ಳ ಜ್ಞಾನವು ಮಾತ್ರ ಮುಕ್ತಿಗೆ ಕಾರಣ. ಈ ಜ್ಞಾನವು ಭಕ್ತಿಯೋಗ ರೂಪವಾಗಿ ಪರಿಣಮಿಸಿರಬೇಕು.[3]

ಪಾದ್ಮ ಸಂ. ಕ್ರಿಯಾಪಾದ. ೧. ೯.

## ೧೨

ಪಾತಾಳದಲ್ಲಿ ಕಪಿಲಮಹರ್ಷಿಯಿಂದ ಪದ್ಮ ಎಂಬ ನಾಗರಾಜನಿಗೂ ಅವನಿಂದ ಸಂವರ್ತ ಎಂಬ ಮುನಿಗೂ ಸಂವರ್ತನಿಂದ ಕಣ್ವಮಹರ್ಷಿಗೂ ಉಪದೇಶರೂಪವಾಗಿ ಬಂದ ಈ 'ಪಾದ್ಮಸಂಹಿತೆ' ಮಹೋಪನಿಷತ್ಸಾರ.[4]

ಪಾದ್ಮ ಸಂ. ಕ್ರಿಯಾ. ೩೨. ೧೩೫, ೧೩೬.

## ೧೩

ಪರಮಾತ್ಮನಿಗೆ ನಮಸ್ಕರಿಸುವುದೇ ಜ್ಞಾನಿಯಾದವನ ಸ್ವಾಭಾವಿಕವಾದ ಮುಖ್ಯ ಪ್ರಯತ್ನ. ಕಾಲ ಮತ್ತು ಗುಣಗಳಿಂದ ಉತ್ಕೃಷ್ಟನಾದವನೇ ಹಿರಿಯವನು. ಅವನು ಶೇಷಿ–ಸ್ವಾಮಿ. ಅವನೇ ನಮಸ್ಕಾರ ಮಾಡಿಸಿಕೊಳ್ಳಲು ಅರ್ಹನಾದ ಪರಮಾತ್ಮ. ಜೀವಾತ್ಮಗಳೆಲ್ಲರೂ ಅವನಿಗೆ ಶೇಷರು-ಭೃತ್ಯರು. ನಮಸ್ಕರಿಸುವವರೇ ಇವರು. ಈ ಶೇಷಶೇಷಿಭಾವಸಂಬಂಧ ಸ್ವಾಭಾವಿಕ. 'ಪರಮಾತ್ಮನೇ ಹಿರಿಯವನು, ನಾನು ಕಿರಿಯವನು' ಎಂಬ ಭಾವವೇ ನಮಸ್ಕಾರ. ನಾವು ಕಿರಿಯರೆನಿಸಿ ನಿಮ್ನರಾದಷ್ಟೂ ಪರಮಾತ್ಮನು ನಮ್ಮನ್ನು ಉದ್ಧರಿಸಲು ಮೇಲಿಂದ ಕೆಳಗೆ ಬಾಗಲೂಬೇಕು, ಇಳಿಯಲೂ ಬೇಕು. ನಮ್ಮ ನಮಸ್ಕಾರ ಅವನನ್ನು ಹೀಗೆ ಬಾಗಿಸುವುದರಿಂದಲೂ 'ನಮನ' ಎನಿಸಿದೆ.

---

1. ಈಶಾ. ೩, ೬, ೭, ೮, ೧೧, ೧೪, ೧೭, ೧೮ ಗಮನಿಸಿ.
2. ಈಶಾ. ೪, ೫, ೧೨, ೧೮, ವೇದಾಂತಾಚಾರ್ಯಭಾಷ್ಯಮಂಗಳಪದ್ಯ ಗಮನಿಸಿ.
3. ಈಶಾ, ೧೨ ಗಮನಿಸಿ.
4. ಉಪನಿಷತ್ತಿನ ಸಾರವೇ ಆಗಮ ಎಂಬ ಬಗ್ಗೆಯೂ ಕಾಣ್ವಸಂಹಿತೆಯ ಈಶಾವಾಸ್ಯಕ್ಕೆ ಸಂಬಂಧಿಸಿದ ಕಣ್ವರಿಗೂ ಈ ಆಗಮದ ಪಾದ್ಮಸಂಹಿತೆಯ ಸಂಬಂಧ ಎಂತಹುದು ಎಂಬ ಬಗ್ಗೆ ಚರ್ಚಿಸಲೂ ಉಪಯುಕ್ತ.

ಮೈ, ಮಾತು, ಮನಗಳಿಂದ ನಮಿಸಿದರೆ ಅದು ಪರಿಪೂರ್ಣ ನಮಸ್ಕಾರ. ನಮಸ್ಕಾರದಲ್ಲಿ ಆರು ಅಂಗ–ಅಂಶಗಳು ಯಾವಾಗಲೂ ಅಡಗಿರುತ್ತದೆ. ಯಾವ ಒಂದು ಆಸೆಯೂ ಇಲ್ಲದೆ ಪರಮಾತ್ಮನಿಗೆ ನಮ್ಮನ್ನು ಒಪ್ಪಿಸುವುದು ಒಂದನೆಯ ಅಂಗ. ನಮ್ಮಲ್ಲಿರುವ ಜ್ಞಾನಕ್ರಿಯಾದಿಗಳು ಯಾವುವೂ ಪರಿಪೂರ್ಣವಲ್ಲದುದರಿಂದ ನಾವು ಸಲಕರಣೆಯಿಲ್ಲದವರು ಎಂಬ ಭಾವವೇ ಎರಡನೆಯ ಅಂಗವಾದ ಕಾರ್ಪಣ್ಯ. ನಮ್ಮ ಸ್ಥಿತಿಗತಿಗಳು ಹೇಗಿದ್ದರೂ ಪರಮಾತ್ಮನು ನಮ್ಮನ್ನು ತನ್ನ ಸ್ವಾಭಾವಿಕವಾದ ಕರುಣೆಯಿಂದ ಸ್ವೀಕರಿಸುವನು ಎಂಬ ದೃಢ ನಿಶ್ಚಯವೇ ಮಹಾವಿಶ್ವಾಸವೆಂಬ ಮೂರನೆಯ ಅಂಗ. ಇಂತಹ ಪರಮಾತ್ಮನು ಅಶಕ್ತರಾದ ನಮ್ಮನ್ನು ರಕ್ಷಿಸಲಿ ಎಂಬ ಭಾವವೇ ಗೋಪ್ತೃತ್ವವರಣವೆಂಬ ನಾಲ್ಕನೆಯ ಅಂಗ. ಪರಮಾತ್ಮನು ನಮ್ಮನ್ನು ಕಾಪಾಡಲು ಸಿದ್ಧನಾಗಿರುವಾಗ ಅವನ ಪ್ರಯತ್ನಗಳಿಗೆ ನಾವು ವಿರೋಧವಾಡದಿರುವುದೇ ಪ್ರಾತಿಕೂಲ್ಯವರ್ಜನವೆಂಬ ಐದನೆಯ ಅಂಗ. ಶಾಸ್ತ್ರೀಯ ನಿಯಮಗಳನ್ನು ಪಾಲಿಸುವುದೇ ಈ ಅಂಗದ ಪರಿಪಕ್ವವಾದ ಸ್ಥಿತಿ. ವಿಶ್ವವೆಲ್ಲವೂ ಪರಮಾತ್ಮನ ಶರೀರವಾದುದರಿಂದ ಯಾವುದೊಂದನ್ನೂ ಪೀಡಿಸದೆ ವಿಶ್ವಾನುಕೂಲರಾಗಿರಬೇಕೆಂಬ ದೃಢ ಸಂಕಲ್ಪವೇ ಆರನೆಯ ಅಂಗವಾದ ಆನುಕೂಲ್ಯಸಂಕಲ್ಪ. ಸಾಂಗವಾದ ನಮಸ್ಕಾರವು ಇರುವುದು ಹೀಗೆ. ಇದು ಸಾರವಾದ ಅರ್ಥ.

ನಾನು ನನ್ನದು ಎಂಬ ಬುದ್ಧಿಯ ತ್ಯಾಗವೇ ನಮಸ್ಕಾರದ ಸೂಕ್ಷ್ಮಾರ್ಥ. ಪರಮಾತ್ಮನನ್ನು ಪಡೆಯಲು ಜೀವಾತ್ಮನಿಗೆ ನಮಸ್ಕಾರಕ್ಕಿಂತ ಬೇರೆ ಮಾರ್ಗವಿಲ್ಲ, ಇದೇ ಪರಮಾತ್ಮಪ್ರಾಪ್ತಿಗೆ ಮುಖ್ಯಸಾಧನ ಎಂಬುದೇ ನಮಸ್ಕಾರದ ಪರಮಾರ್ಥ.[1] ಅಹಿರ್ಬುಧ್ನ್ಯಸಂಹಿತಾ. ೫೨. ೨ ರಿಂದ ೩೪.

೧೪

ವಿಶ್ವದ ಮೂಲಬೀಜಗಳಾಗಿಯೂ, ಸಾರವಾಗಿಯೂ ಇರುವುದರಿಂದ ಜೀವಾತ್ಮಗಳಿಗೆ 'ಶುಕ್ರ' ಎಂಬ ಹೆಸರಾಗಿದೆ.[2] ಅಹಿ. ಸಂ. ೫೮, ೪೫.

೧೫

ಮೋಕ್ಷಾರ್ಥವಾಗಿ ಯಜ್ಞರೂಪಿಯಾದ ದಿವ್ಯಪುರುಷನ ವಿಚಾರವೇ 'ಪುರುಷಸೂಕ್ತ'. ಇದರ ಮೊದಲ ನಾಲ್ಕು ಮಂತ್ರಗಳೂ ಕ್ರಮವಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಪರಮಾತ್ಮನ ನಾಲ್ಕು ವ್ಯೂಹಮೂರ್ತಿಗಳನ್ನು ಕುರಿತಾಗಿವೆ.

ಪೂರ್ಣನೂ, ಪೂರೈಸುವವನೂ ಆಗಿ ಪುರುಷನೆನಿಸಿದವನು ಪರಮಾತ್ಮ – ಲಕ್ಷ್ಮೀಪತಿಯಾದ ವಾಸುದೇವ.

ಸೃಷ್ಟಿಸುವವನೂ ಜ್ಞಾನಕೊಡುವವನೂ ಮೋಕ್ಷಕೊಡುವವನೂ ಆಗಿ ಪುರುಷನೆನಿಸಿದ ಪರಮಾತ್ಮನೇ ಸಂಕರ್ಷಣ.

ವಿಶ್ವಾಧಾರನೂ ವಿಶ್ವೋಪಕಾರಕನೂ ಪ್ರಕೃತಿ ಜೀವತತ್ತ್ವಗಳ ರಕ್ಷಕನೂ ಆಗಿ ಪುರುಷನೆನಿಸಿದ ಪರಮಾತ್ಮನೇ ಪ್ರದ್ಯುಮ್ನ.

---

1. ಈ.ಶಾ. ೧೮. ಶರಣಾಗತಿ ಮಂತ್ರ ಎಂಬ ಭಾಷ್ಯವಚನಗಳ ಸಮರ್ಥನೆ ಮತ್ತು 'ನಮಃ' ಎಂಬುದರ ವಿಸ್ತೃತವಾದ ಅರ್ಥ ಇಲ್ಲಿರುವುದು ಗಮನಾರ್ಹ.

2. ಈಶಾ. ೮ ಕ್ಕೆ ಉಪಯುಕ್ತ.

ಎಲ್ಲರಿಂದ ಎಲ್ಲ ಸತ್ಕರ್ಮಗಳನ್ನು ಮಾಡಿಸುತ್ತ ಅದಕ್ಕೆ ತಕ್ಕ ಫಲಗಳನ್ನು ಕೊಡುತ್ತ ಎಲ್ಲವನ್ನೂ ಅಂತರ್ಯಾಮಿಯಾಗಿ ವ್ಯಾಪಿಸಿ ಪುರುಷನೆನಿಸಿದ ಪರಮಾತ್ಮನೇ ಅನಿರುದ್ಧ.[1]

ಅಹಿ. ಸಂ. ೫೯. ೫ ರಿಂದ ೭೯.

೧೬

ವಾಸುದೇವ:- ಎಂದರೆ ಬೆಂಕಿಯು ಇಂಧನದಲ್ಲಿ ಒಳಗೂ ಹೊರಗೂ ವ್ಯಾಪಿಸಿರುವಂತೆ ತನ್ನ ಜ್ಞಾನಾನಂದಾದಿಗಳಿಂದ ಕೂಡಿ ವಿಶ್ವವನ್ನೇ ಆವರಿಸಿ ಬೆಳಗಿಸುವುದು ಮಾತ್ರವಲ್ಲದೆ ವಿಶ್ವವನ್ನು ಒಳಹೊಕ್ಕು ಆವರಿಸಿ ಧರಿಸಿ ಪೋಷಿಸುತ್ತಾ ತನ್ನ ಸ್ವಚ್ಛಿನಂತೆ ಕ್ರೀಡಾರ್ಥವಾಗಿ ಉಪಯೋಗಿಸುವ ಸ್ವಾಮಿ–ಈಶನಾದ ಪರಮಾತ್ಮ.[2]

ಅಹಿ. ಸಂ. ೫೨. ೬೪, ೬೫, ೬೮.

ನರರೆಂದರೆ ಜೀವಾತ್ಮಗಳು. ಅವು ಪರಮಾತ್ಮನಿಂದ ಆಳಲ್ಪಡುವುದರಿಂದ 'ಈಶಿತವ್ಯ' ಎನಿಸಿವೆ. ಪರಮಾತ್ಮನೇ ನರರಿಗೆ ಗತಿ. ಆದುದರಿಂದ ಅವನೇ ಈಶನೆನಿಸಿ ಆಳುವ ನಾರಾಯಣನು.[3]

ಅಹಿ. ಸಂ. ೫೨. ೫೦ ರಿಂದ ೫೭.

ವಿಶ್ವವನ್ನು ವ್ಯಾಪಿಸಿ ಸೃಷ್ಟಿಸಿ ಎಲ್ಲರ ಇಷ್ಟಾರ್ಥಗಳನ್ನೂ ಕೊಡುತ್ತಿರುವ ಪರಮಾತ್ಮನಿಗೆ ವಿಷ್ಣು ಎಂದು ಹೆಸರು.[4]

ಅಹಿ. ಸಂ. ೫೨. ೩೮ ರಿಂದ ೪೭.

೧೭

ಪರಿಶುದ್ಧವಾದ ಜ್ಞಾನ, ಶಕ್ತಿ, ಕ್ರಿಯೆಗಳನ್ನು ಪಡೆದು ಈ ಮೂರು ಬಗೆಯಿಂದ ಪರಿಪೂರ್ಣನೂ, ವಿಶ್ವದ ಒಡೆಯನೂ ಪುಂಡರೀಕಾಕ್ಷನೂ ಆದ ಪರಮಾತ್ಮನಿಗೆ ನಮ್ಮನ್ನೇ ನಾವು ಒಪ್ಪಿಸಿಕೊಳ್ಳಬೇಕು. ಇದೇ ನೇರವಾದ ಪರಮಾತ್ಮನ ಪೂಜೆ. ಇದೇ ಯಜ್ಞ. ವಿಶ್ವಪೋಷಕನಾಗಿರುವ ಪರಮಾತ್ಮನು ಇಂತಹ ಪೂಜಕರಾದ ನಮ್ಮನ್ನು ತನಗೆ ಸಮಾನಗುಣರನ್ನಾಗಿ ಮಾಡಿಕೊಳ್ಳುವನು. ಅದಕ್ಕಾಗಿಯೇ ನಮ್ಮನ್ನು ಮೃತ್ಯುರೂಪವಾದ ಸಂಸಾರ ಬಂಧದಿಂದ ಬಿಡಿಸುವನು. ಅಮೃತವೆನಿಸಿದ ಪರಮಾತ್ಮನನ್ನೇ ಸೇವಿಸಿದವರಿಗೆ ಮೃತ್ಯುವೆಲ್ಲಿಯದು.[5]

ಅಹಿ. ಸಂ. ೫೭. ೬೫ ರಿಂದ ೭೮ ಮತ್ತು ೫೪. ೩೫.

---

1. ಈಶಾ. ೧೬. 'ಪುರುಷ' ಎಂಬುದರ ಅರ್ಥವಿವರಣೆಗೆ ಈಶಾವಾಸ್ಯವು ಪುರುಷಸೂಕ್ತದ ಅರ್ಥವನ್ನು ತಿಳಿಸುತ್ತದೆಂಬ ಭಾಷ್ಯ ಮತ್ತು ವಾಸ್ಯಂ ಎಂಬುದರ ವಿಚಾರಕ್ಕೆ ಉಪಯುಕ್ತ.

2, 3. 'ವಾಸ್ಯಂ' ಎಂಬುದರ ವಿವರಣೆಗೆ ಉಪಯುಕ್ತ.

4. ಈಶಾವಾಸ್ಯದ ವೇದಾಂತಾಚಾರ್ಯಭಾಷ್ಯದಲ್ಲಿರುವ ವಾಸುದೇವಶಬ್ದಾರ್ಥವಿವರಣೆಗೂ, 'ವಾಸ್ಯಂ' ಎಂಬುದರ ವಿವರಣೆಗೂ, ಈಶನು ಯಾರು? ಎಂಬುದರ ಉತ್ತರವಾಗಿ ವಾಸುದೇವನೇ ಈಶ, ಅವನೇ ನಾರಾಯಣ, ಅವನೇ ವಿಷ್ಣು ಎಂಬ ನಿರ್ಣಯಕ್ಕೂ ಉಪಯುಕ್ತ.

5. ವಾಜಸನೇಯ ಸಂಹಿತೆಯಲ್ಲಿ ಪ್ರಪ್ರಥಮವಾಗಿ ಬರುವ ಪರಮಾತ್ಮವಿಚಾರಕವಾದ ಮಂತ್ರ 'ತ್ರ್ಯಂಬಕಮಂತ್ರ'. ಇದರ ಅರ್ಥವಿವರಣೆಯಾಗಿರುವ ಈ ಭಾಗ ಈಶಾವಾಸ್ಯದ ಸಾರಾರ್ಥರೂಪವೇ ಆಗಿದೆ ಎಂಬುದನ್ನು ಗಮನಿಸಿ.

## ೧೮

ವಿಶ್ವವನ್ನು ಒಳಹೊಕ್ಕು ವ್ಯಾಪಿಸಿ ರಕ್ಷಿಸುವವನು ಪರಮಾತ್ಮ ಒಬ್ಬನೇ ಎಂಬುದು ಓಂಕಾರದ ಅರ್ಥ. ಓಂಕಾರದೊಳಗೂ ಅರ್ಥರೂಪದಲ್ಲಿ ಪರಮಾತ್ಮನೇ ಪ್ರವೇಶಿಸಿರುವವನು.[1] ಪಂಚಶಕ್ತಿಮಯವಾದ ಓಂಕಾರದ ಅನುಸಂಧಾನದಿಂದ ಮುಕ್ತಿಯು ಲಭಿಸುವುದು.

ಅಹಿ. ಸಂ. ೫೧. ೧೪ ರಿಂದ ೪೩.

## ೧೯

ಮಾಯೆ ಎಂದರೆ ಜ್ಞಾನ. ಜ್ಞಾನ ಎಂಬುದೇ ವಿದ್ಯೆ. ಇದರ ಸಂಕೇತಾಕ್ಷರ 'ಈ'ಕಾರ.[2]

ಅಹಿ. ಸಂ. ೫೫. ೪೦.

## ೨೦

ಎಲ್ಲದರ ಒಳಗೂ ಹೊರಗೂ ವ್ಯಾಪಿಸಿ ಸ್ಥಿರವಾಗಿದ್ದು ಪುರುಷೋತ್ತಮನೆನಿಸಿರುವ ಪರಮಾತ್ಮನೇ ನೃಸಿಂಹ. ಅವನೇ ಮೃತ್ಯುವಿಗೂ ಮೃತ್ಯು. ಧ್ಯಾನಿಸಲೂ ಸುಲಭ. ಅವನನ್ನು ನಮ್ಮೆಲ್ಲರ ಅಂತರಾತ್ಮ ಎಂದು ಚಿಂತಿಸಬೇಕು. ಇದೇ ಸಾತ್ವತಸಿದ್ಧಾಂತದ ಸಾರಾರ್ಥ.[3]

ಅಹಿ. ಸಂ. ೫೫. ೩೧, ೩೨, ೩೩.

## ೨೧

'ಅಹಂ' ಎಂಬುದು ಆತ್ಮಸ್ವರೂಪವನ್ನು ನಿಷ್ಕರ್ಷಿಸುತ್ತದೆ. ಜೀವಾತ್ಮನು ಪರಮಾತ್ಮನ ದಾಸ ಎಂಬುದೇ ಈ ನಿಷ್ಕರ್ಷೆ.[4] ಪ್ರಕೃತಿಯನ್ನು ಮೀರಿದ ಪರಿಶುದ್ಧ ಜೀವಾತ್ಮತತ್ವಕ್ಕೆ ಅಹಂ ಎಂದು ಹೆಸರು.

ಅಹಿ. ಸಂ. ೫೪. ೧೨, ೫೧, ೫೨, ೫೩.

## ೨೨

ಅನಾದಿಯಾದ ಪರಮಾತ್ಮನ ಸಂಕಲ್ಪವೇ ಕ್ರತು. ಇಂದಿಗೂ ಯೋಗಿಗಳು ಇದನ್ನೇ ಅನುಸರಿಸುವರು.[5]

ಅಹಿ. ಸಂ. ೫೮. ೨೩.

---

1. ಈಶಾ. ೧೭ ಕ್ಕೆ ಉಪಯುಕ್ತ. ಮಾಂಡೂಕ್ಯೋಪನಿಷತ್ತಿನಲ್ಲಿ ಓಂಕಾರದ ವಿವರಣೆಯಾಗಿ ಬರುವ ವಿಶ್ವ ಮುಂತಾದ ಅರ್ಥಗಳೂ ಇಲ್ಲಿ ಗಮನಾರ್ಹವೆನಿಸುವ ಸ್ಪಷ್ಟ ಸೂಚನೆಯಿದೆ.
2. ಈಶಾವಾಸ್ಯದ ಆರಂಭದ 'ಈ'ಕಾರವು 'ವಿದ್ಯೆ' ಎಂಬ ಈಶಾವಾಸ್ಯದ ಪ್ರಧಾನಾರ್ಥಕ್ಕೆ ಸೂಚಕವಾಗಿದೆ ಎಂಬುದನ್ನು ಗಮನಿಸಿ.
3. ಪರಮಾತ್ಮನ ವ್ಯಾಪ್ತಿಗೆ ಎಲ್ಲವೂ ಒಳಪಟ್ಟಿದೆಯೆಂಬುದೇ ಸಾತ್ವತವೆಂಬ ಪಾಂಚರಾತ್ರಾಗಮದ ಸಿದ್ಧಾಂತ. ಇದೇ ಈಶಾವಾಸ್ಯದ ಮುಖ್ಯವಿಷಯ ಎಂಬುದು ಗಮನಾರ್ಹ.
4. ಈಶಾ. ೧೭ ಕ್ಕೆ ಉಪಯುಕ್ತ.
5. ಈಶಾ. ೧೭ ಕ್ಕೆ ಉಪಯುಕ್ತ.

## ೨೩

ಪರಮಾತ್ಮನಿಗೆ ಎಲ್ಲವೂ ಹೆದರುತ್ತದೆ. ಯಾವುದಕ್ಕೂ ಪರಮಾತ್ಮ ಹೆದರುವುದಿಲ್ಲ. ಎಲ್ಲೆಲ್ಲೂ ಇರುವ ಅವನು ಎಲ್ಲದರ ಒಳಗೂ ಹೊರಗೂ ಸಮೀಪದಲ್ಲೂ ದೂರದಲ್ಲೂ ಇರುವನೆನ್ನಬಹುದು.[1]

ತತ್ವ (ಸಾಗರ) ಸಂಹಿತಾ.

## ೨೪

ಮುಖ್ಯವಾಗಿ ಅಮೃತವೆಂದರೆ ಪರಮಾತ್ಮನಾದ ಶ್ರೀರಾಮಚಂದ್ರಸ್ವಾಮಿ. ಅವನ ಆಸರೆಯಲ್ಲಿರುವ ಮತ್ತು ಅವನನ್ನು ಒಳಗೊಂಡಿರುವ ವಾಯುವೂ ಅಮೃತವೆನಿಸುವುದು. 'ಅ' ಎಂದರೆ ಪರಮಾತ್ಮ. ಅವನನ್ನೇ ನೆಲೆಯಾಗಿ ಉಳ್ಳ ವಾಯು 'ಅ-ನಿಲ' ಎನಿಸಿದೆ. ಮತ್ತು ಪರಮಾತ್ಮನಂತೆ ಪರಿಶುದ್ಧ ಜ್ಞಾನವಿರುವುದರಿಂದ ವಾಯುವನ್ನು 'ಅಮೃತ' ಎನ್ನಬಹುದು.[2]

ರಾಮ– (ರಾಘವ) ಸಂಹಿತಾ.

# ವೇದಾಂಗಗಳಲ್ಲಿ ಉಪಯುಕ್ತ ವಿಚಾರಗಳು

## 1. ಕಾತ್ಯಾಯನ ಪ್ರಾತಿಶಾಖ್ಯ

'ಶೀಕ್ಷಾ' ಎಂಬ ವೇದಾಂಗದಲ್ಲಿ ವರ್ಣಗಳ ಉಚ್ಚಾರಣೆ ಸ್ವರ ಮುಂತಾದ ವಿಷಯಗಳಿರುತ್ತವೆ. ಶುಕ್ಲ ಯಜುರ್ವೇದದ ಬಗ್ಗೆ ಈ ವಿಚಾರದಲ್ಲಿ 'ಯಾಜ್ಞವಲ್ಕ್ಯಶಿಕ್ಷಾ' ಎಂಬ ಗ್ರಂಥವೂ ಅವಶ್ಯ ಓದಬೇಕಾದುದು. ವೇದಾಂಗಗಳಲ್ಲಿ ವ್ಯಾಕರಣವೂ ಅರ್ಥನಿರ್ಣಯಕ್ಕೆ ಬಹಳ ಮುಖ್ಯ. ವೇದಗಳ ಪ್ರತಿಯೊಂದು ಶಾಖೆಗಳಿಗೂ ಅನೇಕ ಮಹರ್ಷಿಗಳು ವೈದಿಕಸಾಹಿತ್ಯದ ನಿಯಮಗಳನ್ನೇ ಅನುಸರಿಸಿ ವ್ಯಾಕರಣ ಬರೆದಿರುತ್ತಾರೆ. ಇವುಗಳೇ 'ಪ್ರಾತಿಶಾಖ್ಯಗಳು'. 'ಶೀಕ್ಷಾ' ಶಾಸ್ತ್ರದ ಕೆಲವು ಅಂಶಗಳೂ ಇವುಗಳಲ್ಲಿರುವುವು. ಯಾಜ್ಞವಲ್ಕ್ಯರ ಪುತ್ರರಾದ ಕಾತ್ಯಾಯನಮಹರ್ಷಿಗಳು ಶುಕ್ಲಯಜುಸ್ ಶಾಖೆಗೆ 'ಪ್ರಾತಿಶಾಖ್ಯ' ಬರೆದಿರುವರು. ಇದರಲ್ಲಿ ಮಾಧ್ಯಂದಿನ ಶಾಖೆಯ ವಿಚಾರಗಳನ್ನೂ ಅಲ್ಲಲ್ಲೇ ಕಾಣ್ವಶಾಖೆಯ ವಿಶೇಷಗಳನ್ನೂ ತಿಳಿಸಿ ವ್ಯತ್ಯಾಸಗಳನ್ನು ಗುರುತಿಸಿರುವರು. ಹೀಗೆಯೇ ಅವರು ತಿಳಿಸಿರುವ ಸ್ವರ, ಸಂಧಿ, ಪ್ರಕೃತಿ, ಪ್ರತ್ಯಯ, ಪದ, ಇವೆಲ್ಲದರ ವಿಕಾರ–ವ್ಯತ್ಯಾಸ, ಅವಗ್ರಹಚಿಹ್ನೆ (ऽ) ಮುಂತಾದವುಗಳ ನಿರ್ಣಯದಿಂದ ಪಾಠಶುದ್ಧಿಯೂ, ಪಾಠಶುದ್ಧಿಯಿಂದ ವಾಕ್ಯದ ಅನ್ವಯವೂ, ವಾಕ್ಯಾನ್ವಯದಿಂದ ಅರ್ಥನಿರ್ಣಯವೂ ಸುಲಭವಾಗುವುದು. ಇಲ್ಲಿ ಹೇಳದಿರುವ ಸಾಮಾನ್ಯ ಅಂಶಗಳನ್ನು ಪಾಣಿನಿ ಮುಂತಾದ ಮಹರ್ಷಿಗಳ ಲೌಕಿಕ ಸಂಸ್ಕೃತ ವ್ಯಾಕರಣದಿಂದ ತಿಳಿಯಬೇಕು.[3]

ಈಶಾವಾಸ್ಯದ ಬಗ್ಗೆ ಈ ಗ್ರಂಥದಿಂದ ಆಗುವ ಉಪಯೋಗವನ್ನು ಈ ಕೆಳಕಾಣಿಸುವ ಉದಾಹರಣೆಗಳಿಂದ ಸ್ಥೂಲವಾಗಿ ತಿಳಿಯಬಹುದು. ಇವು ಕೇವಲ ಮಾದರಿಗಾಗಿ ಮಾತ್ರ.

---

1. ಈಶಾ. ೩, ೪ ಕ್ಕೆ ಉಪಯುಕ್ತ. 2. ಈಶಾ. ೧೭ ಕ್ಕೆ ಉಪಯುಕ್ತ.

3. ಕಾತ್ಯಾಯನ ಪ್ರಾತಿಶಾಖ್ಯ, ಅಧ್ಯಾಯ ೩. ಸೂತ್ರ ೧೩. ಉವ್ವಟಭಾಷ್ಯ ಸಹಿತ. ಯುಗಳಕಿಶೋರಪಾಠಕ ಸಂಪಾದಿತ. ಬನಾರಸ್ ಪ್ರಕಾಶಿತ. ಕ್ರಿ. ಶ. ೧೮೮೮.

೧. ಸ್ವರ – ಏನಃ – ಇವನು, ಏನಃ – ಪಾಪ. ಈಶಾ. ೧೮.

ಚಿತ್ – ಜ್ಞಾನ, ಸ್ವಿತ್ – ಚಿತ್ – ಸ್ವಲ್ಪವೂ. ಈಶಾ. ೧.

ಅನ್ಧಃ – ಅನ್ನ, ಅನ್ಧಃ – ಕುರುಡ. ಈಶಾ ೩. ೯. ೧೨.[1]

ಸ್ವರವ್ಯತ್ಯಾಸ – "ನಮಉಕ್ತಿಂ ವಿಧೇಮ" ಈಶಾ. ೧೮.
ಮೂಲತಃ ಸ್ವಂತ ಮಾತಾಗಿದ್ದಾಗ (ಮಂತ್ರಭಾಗದಲ್ಲಿದ್ದಾಗ) ಹೀಗೆ ಸ್ವರವಿದ್ದರೆ; "ನಮ ಉಕ್ತಿಂ ವಿಧೇಮೇತಿ" ಎಂದು ಹಿಂದಿನ ಮಾತನ್ನು ಅನುಕರಿಸಿದಾಗ ವ್ಯತ್ಯಾಸವಾಗುವುದು.

೨. ಸಂಧಿ – 'ಏಕಋಷೇ' ಈಶಾ. ೧೬. ಮಂತ್ರಭಾಗದಲ್ಲಿ ಹೀಗೆಯೇ ಉಚ್ಚಾರಣೆ ಬರವಣಿಗೆ ಸಹ.[2] 'ಏಕರ್ಷೇ' ಬ್ರಾಹ್ಮಣಭಾಗದಲ್ಲಿ ಹೀಗೆ.

ಈಶಾ. ೫. 'ತನ್ನೈಜತಿ' ಮಾಧ್ಯಂದಿನ ಪಾಠ. 'ತನ್ನೇಜತಿ' ಕಾಣ್ವಪಾಠ.[3]

ಸಂಧಿವ್ಯತ್ಯಾಸ – 'ಯೋऽಸಾವಸೌ' ಲೌಕಿಕಸಂಸ್ಕೃತದಂತೆ.
'ಯೋ ಅಸಾವಸೌ' ಕಾಣ್ವಪಾಠದಂತೆ.[4]
'ಯೋ ಅಸಾಅಸೌ ಮಾಧ್ಯಂದಿನಪಾಠದಂತೆ.[5]
ಈಶಾ. ೧೬. ಈ ಮಂತ್ರದ ಕೊನೆಯ ಭಾಗದಲ್ಲಿ ೧೨ ಅಕ್ಷರಗಳಿವೆಯೆಂಬ ಪ್ರಾಯೋಗಿಕ ಪದ್ಧತಿ ವಚನಗಳನ್ನು[6] ಗಮನಿಸಿದರೆ ಈ ರೀತಿ ಸಂಧಿಯ ಅವಶ್ಯಕತೆ ಮನದಟ್ಟಾಗುವುದು.

೩. ಪದ – "ಈಶಾ । ವಾಸ್ಯಂ". 'ಈಶಾ' ಎಂಬುದು 'ಈಟ್' ಶಬ್ದದ ತೃತೀಯಾ ವಿಭಕ್ತಿಯ ಪದ. ಇಲ್ಲಿ ಈಶನಿಂದ 'ಆವಾಸ್ಯ' ಎಂಬ ಒಟ್ಟರ್ಥ ಇಟ್ಟುಕೊಳ್ಳಲಾಗಲಿ, ಅದಕ್ಕಾಗಿ 'ಈಶಾವಾಸ್ಯಂ' ಎಂಬ ಒಂದೇ ಪದವನ್ನು ಇಟ್ಟುಕೊಳ್ಳಲಾಗಲಿ ಅವಕಾಶವಿಲ್ಲ. 'ಈಶ ನಿಂದ ವಾಸ್ಯ' ಎಂದೇ ಅರ್ಥವಿವರಣೆ ಅವಶ್ಯ ಎಂಬ ನಿರ್ಧಾರಕ್ಕೆ ಇದು ಕಾರಣವಾಗುವುದು.

ಪದವ್ಯತ್ಯಾಸ – 'ಪ್ರ । ವಿಶನ್ತಿ' ಈಶಾ. ೯. ೧೨. ಪ್ರವೇಶಿಸುತ್ತಾರೆ ಎಂದಷ್ಟೇ ಅರ್ಥ. ಈ ಪ್ರವೇಶಕ್ರಿಯೆಯಲ್ಲಿ ಯಾವ ಉತ್ಕರ್ಷವೂ ಇಲ್ಲ. ನರಕಕ್ಕೆ ಪ್ರವೇಶಿಸುವಾಗ ಉತ್ಕರ್ಷ – ಒಳ್ಳೆಯದು ಏನಿರುವುದು ! 'ಪ್ರವಿಶಂತೀತಿ ಪ್ರ ऽ ವಿಶಂತಿ' ಎಂಬ ಪದಪಾಠವಿದ್ದಿದ್ದರೆ ಪ್ರವೇಶದಿಂದ ಉತ್ಕರ್ಷವುಂಟು ಎಂಬ ಅರ್ಥವಾಗುತ್ತಿತ್ತು.

---

1. ಕಾ. ಪ್ರಾ. ೨. ೧೩, ೧೬, ೩೪.
2. ಕಾ ಪ್ರಾ. ೪. ೪೯. ಉವ್ವಟಭಾಷ್ಯ. ಭಾಷಿಕಪರಿಶಿಷ್ಟ ಸೂತ್ರ ೩. ೦೦.
3. ಕಾ. ಪ್ರಾ. ೪. ೫೬. ಭಾಷ್ಯ ಗಮನಿಸಿ.
4. ಕಾ. ಪ್ರಾ. ೪. ೩೭, ೪೨, ೪೩, ೧೨೫, ೧೨೬.
5. ಕಾ. ಪ್ರಾ. ೪. ೧೨೫.
6. ಈಶಾ. ೧೬. ಅನಂತಾಚಾರ್ಯಭಾಷ್ಯದಲ್ಲಿ ಉದ್ಧೃತ.

೪. **ಸಮಾಸ** – 'ವಿಚಚಕ್ಷಿರ ಇತಿ ವಿ ಽ ಚಚಕ್ಷಿರೇ' ಈಶಾ. ೧೦, ೧೨. ಸಮಾಸದಿಂದ ಅನೇಕ ಪದಗಳು ಸೇರಿ ಒಂದು ಪದವಾಗಿದ್ದರೆ ಅವಗ್ರಹ 'ಽ' ಚಿಹ್ನೆ ಬರೆಯಬೇಕು. ಬರವಣಿಗೆ ಇಲ್ಲದೆ ಕಂಠಪಾಠವೇ ಪ್ರಚಾರದಲ್ಲಿದ್ದುದರಿಂದ ಹಿಂದಿನಂತೆ ವಿಂಗಡಿಸಿ ಹೇಳಲಾಗುವುದು.

**ಸಮಾಸವ್ಯತ್ಯಾಸ** – 'ವಿ । ಜುಗುಪ್ಸತೇ' 'ವಿನಾಶಮಿತಿ ವಿ ಽ ನಾಶಮ್', ಹೀಗೆ ಪೂರ್ವಪದಾರ್ಥ ಸಂಬಂಧವಿದ್ದರೆ ಸಮಾಸವೂ, ಇಲ್ಲದಿದ್ದರೆ ಸಮಾಸಾಭಾವವೂ ಇಲ್ಲಿ ಗಮನಾರ್ಹ. ಪದ ವ್ಯತ್ಯಾಸ ವಿಚಾರವನ್ನೂ ಗಮನಿಸಿ.

೫. **ಅವಗ್ರಹ** – ಒಂದುಪದದ ಒಳಪದಗಳನ್ನು ಗುರುತಿಸಲು ಇದನ್ನು ಬಳಸಲಾಗುವುದಷ್ಟೇ. ಸಮಾಸ ವಿಚಾರದ ಉದಾಹರಣೆಯೇ ಇದಕ್ಕೆ ಸಾಕು.

**ಅವಗ್ರಹವ್ಯತ್ಯಾಸ** – 'ನ' ಎಂಬ ಪದವು ಮತ್ತೊಂದರೊಡನೆ ಸೇರಿ ಸಮಾಸವಾಗುವುದು. ಉದಾ:- 'ಅನೇಜತ್', 'ಅಸ್ನಾವಿರಂ', 'ಅಪಾಪವಿದ್ಧಂ', 'ಅವಿದ್ಯಾಂ', 'ಅಸಂಭೂತಿಂ' ಇತ್ಯಾದಿ. 'ಅನೇಜತ್', 'ಅಸ್ನಾವಿರಂ' 'ಅವಿದ್ಯಾಂ'ಗಳಲ್ಲಿ ಅವಗ್ರಹವಿಲ್ಲ. 'ಅಪಾಪವಿದ್ಧಮಿತ್ಯಪಾಪಽವಿದ್ಧಂ', 'ಅಸಂಭೂತಿಮಿತ್ಯಸಂಽಭೂತಿಂ' ಗಳಲ್ಲಿ ಅವಗ್ರಹವಿದೆ. 'ನ' ಎಂಬುದಕ್ಕೆ ಪ್ರತಿಷೇಧ, ಪರ್ಯುದಾಸ ಎಂಬ ಎರಡುವಿಧ ಅರ್ಥಗಳೂ ಶಾಸ್ತ್ರಸಿದ್ಧವಾಗಿವೆ. 'ಅದು ಇಲ್ಲ', 'ಅದು ಕೂಡದು' ಎಂಬುದೇ ಪ್ರತಿಷೇಧ. 'ಇದು ಅದಲ್ಲ ಅದಕ್ಕಿಂತ ಬೇರೆ' ಎಂಬುದೇ ಪರ್ಯುದಾಸ ಎಂದು ಸಾಮಾನ್ಯವಾಗಿ ಇಟ್ಟುಕೊಳ್ಳೋಣ. ಪ್ರತಿಷೇಧಾರ್ಥ ಇದ್ದಾಗ ಅವಗ್ರಹ ಇರುವುದಿಲ್ಲ. ಪರ್ಯುದಾಸಾರ್ಥ ಇದ್ದಾಗ ಅವಗ್ರಹ ಇರುವುದು.[2]

**ವಿಶೇಷ ವಿಚಾರ** – 'ಅವಿದ್ಯಾ' ಶಬ್ದದಲ್ಲಿ ಸಂಕ್ರಮ[3] ಇಲ್ಲ. ಅವಗ್ರಹವನ್ನು ಬಳಸಿಲ್ಲ ಎಂಬ ವಿಶೇಷ ನಿಯಮದಿಂದಲೂ[4] "ಅವಿದ್ಯಾ" ಎಂದು ಕರ್ಮದ ಹೆಸರು. ಅದು ವಿದ್ಯೆಯ ಅಭಾವವಲ್ಲ, ಎಂಬ ನಿರ್ದಿಷ್ಟವಚನಗಳಿಂದಲೂ[5] ಅವಗ್ರಹವಿಲ್ಲದೆಯೂ ಪರ್ಯುದಾಸವನ್ನೇ ಅರ್ಥವಾಗಿ ಸ್ವೀಕರಿಸಲಾಗಿದೆ.

**ಉಚ್ಚಾರಣಕಾಲ** – ಓಂಕಾರವನ್ನು ಮೂರು ಮಾತ್ರಾಕಾಲ ಉದಾತ್ತಸ್ವರದಲ್ಲಿ ಪಠಿಸಬೇಕು. ಹೀಗಿದ್ದರೆ ಮಾತ್ರ ಅದು ಪರಮಾತ್ಮನ ಬಳಿಗೆ ಸೇರಿಸುವುದು. "ಓಂ3"

ಹೀಗೆ ಇನ್ನೂ ಎಷ್ಟೋ ವಿಶೇಷಾರ್ಥಗಳನ್ನು ನಿರ್ಣಯಿಸಲು ಪ್ರಾತಿಶಾಖ್ಯವು ಅತ್ಯಂತ ಸಹಾಯಕವಾಗಿದೆ ಎಂಬುದನ್ನು ಶಾಸ್ತ್ರೀಯವಾದ ಸಾಂಗಾಧ್ಯಯನದಿಂದ ಮಾತ್ರ ತಿಳಿಯಬಹುದು.

---

1. ಕಾ. ಪ್ರಾ. ೧. ೧೫೩, ೩. ೨. ಟಿಪ್ಪಣಿ ಗಮನಿಸಿ.
2. ಕಾ. ಪ್ರಾ ೫. ೨೪. ಭಾಷ್ಯ ಗಮನಿಸಿ.
3. ಮತ್ತೆ ಮತ್ತೆ ಪದವನ್ನು ಆವೃತ್ತಿಯಿಂದ ಪಠಿಸುವುದು.
4. ಕಾ. ಪ್ರಾ. ೪. ೧೯೫. ಟಿಪ್ಪಣಿ.
5. 'ಅವಿದ್ಯಾ ಕರ್ಮಸಂಜ್ಞಾನ್ಯಾ ತೃತೀಯಾ ಶಕ್ತಿರಿಷ್ಯತೇ' ವಿ. ಪು. ೬. ೭. ೬೧.

# 2. ಪಿಂಗಳ ಛಂದಶ್ಶಾಸ್ತ್ರ

ವೈದಿಕಸಾಹಿತ್ಯದಲ್ಲಿ ಛಂದೋಬದ್ಧವಾದ ವಾಕ್ಯಗಳಿಗೆ 'ಮಂತ್ರ' ಎಂಬ ಹೆಸರು ಸಾಮಾನ್ಯವಾಗಿದೆ. ಮಂತ್ರಗಳ ಉಚ್ಚಾರಣೆಯು ಕಾಲ, ಸ್ವರವಿನ್ಯಾಸ, ಅಕ್ಷರಸಂಖ್ಯೆ ಮುಂತಾದುವು ಗಾನಕ್ಕೆ ಬಹಳ ಉಪಯುಕ್ತ. ಮಂತ್ರಗಳನ್ನು ಕೆಲವೆಡೆ ಗಾನಮಾಡದೆ ಪಠಿಸುವುದೂ ಉಂಟು. ಗಾನವು ಉಪಾಸನರೂಪವಾದ ವಿದ್ಯೆಗೆ ಒಂದು ಸಹಾಯಕ ಅಂಗ. ಗಾನೋಪಯುಕ್ತವಾದ ಛಂದಸ್ಸುಗಳ ವಿಚಾರದಲ್ಲಿ ಸಂಗೀತಶಾಸ್ತ್ರದ ಪ್ರಬಂಧಾಧ್ಯಾಯ ಅವಶ್ಯ ಗಮನಾರ್ಹ. ಕೆಲವು ಅರ್ಥವಿಶೇಷಗಳಿರಬೇಕಾದಾಗ ಕೆಲವು ಛಂದಸ್ಸುಗಳನ್ನೇ ಬಳಸುವುದು ಶಾಸ್ತ್ರೀಯ ಪದ್ಧತಿ. ಇದರಂತೆ ಅರ್ಥಾನ್ವಯಕ್ಕೆ ಛಂದೋಜ್ಞಾನ ಅವಶ್ಯ ಎಂದೂ, ಈ ಜ್ಞಾನವಿಲ್ಲದೆ ಮಂತ್ರವನ್ನು ಎಷ್ಟು ಹೇಳಿಯೂ ಏನೂ ಉಪಯೋಗವಿಲ್ಲದೆ ಅನರ್ಥವಾಗುವುದೆಂದೂ ಛಾಂದೋಗ್ಯಬ್ರಾಹ್ಮಣದಲ್ಲಿ ಎಚ್ಚರಿಸಲಾಗಿದೆ ಯೆಂದು ಹಲಾಯುಧಾಚಾರ್ಯನು ತನ್ನ ಪಿಂಗಳ ಛಂದಸ್ಸೂತ್ರವೃತ್ತಿಯಲ್ಲಿ ತಿಳಿಸಿರುವನು [1]

ಈಶಾವಾಸ್ಯದ 'ಸ ಪರ್ಯಗಾತ್' ಎಂಬ ಮಂತ್ರದ ಛಂದಸ್ಸು 'ಜಗತೀ' ಎನಿಸಿರುವುದು. ಸಾಮಾನ್ಯವಾಗಿ ವಿವಿಧ ಅಕ್ಷರಸಂಖ್ಯಾನಿಯಮವೇ ಛಂದಸ್ಸುಗಳ ವೈವಿಧ್ಯಕ್ಕೆ ಕಾರಣ. ಈಶಾವಾಸ್ಯದಲ್ಲಿ ಬರುವ ವಿವಿಧ ಛಂದಸ್ ಗಳನ್ನು ತಿಳಿಯಲು ಈ ಮುಂದೆ ಒಂದು ಛಂದಶ್ಚಕ್ರವನ್ನು ಕೊಡಲಾಗುವುದು. ವಿಶೇಷ ವಿಚಾರಗಳನ್ನೂ ಛಂದ ಸ್ಸಿನ ವಿಶೇಷ ಹೆಸರುಗಳನ್ನೂ ಹೆಸರಿಗೆ ಕಾರಣವಾದ ಅರ್ಥವಿಶೇಷಗಳನ್ನೂ ನಾವು ಛಂದಶ್ಶಾಸ್ತ್ರದ ಸೂಕ್ಷ್ಮ ಅಧ್ಯ ಯನದಿಂದಲೇ ತಿಳಿಯಬೇಕು. 'ಸ ಪರ್ಯಗಾತ್' ಎಂಬ ಮಂತ್ರದ 'ಜಗತೀ' ಛಂದಸ್ಸಿಗೆ 'ಪುರಸ್ತಾತ್ ಜ್ಯೋತಿ' ಎಂಬ ವಿಶೇಷವಾದ ಹೆಸರಿದೆ.[2] ಪರಮಾತ್ಮಪ್ರಾಪ್ತಿಗೆ ಪೂರ್ವಭಾವಿಯಾಗಿ ಆಗುವ ಜೀವಾತ್ಮಜ್ಯೋತಿರ್ದರ್ಶನವೇ ಈ ಮಂತ್ರದ ಒಂದರ್ಥ ಎನ್ನುವ ಭಾಷ್ಯಕಾರರ ವಿವರಣೆಗಳಿಗೆ ಈ ಹೆಸರು ಬಹುಮುಖ್ಯ ಆಧಾರ ಎಂದು ತೋರುವುದು.

ಏಳು ಛಂದಸ್ಸುಗಳು ಮುಖ್ಯ ಮತ್ತು ಪ್ರಸಿದ್ಧವಾದವು. ಪ್ರತಿಯೊಂದು ಛಂದಸ್ಸೂ ಎಂಟು ವಿಧವಾಗಿದೆ. ಆಯಾ ಛಂದಸ್ಸುಗಳ ಅಕ್ಷರಸಂಖ್ಯೆಯನ್ನು ಮಾತ್ರ ಮುಂದೆ ತೋರಿಸಲಾಗಿದೆ. ಒಂದು ಅಕ್ಷರ ಕಡಿಮೆಯಾದರೆ "ನಿಚೃತ್ ಅಥವಾ 'ನಿವೃತ್ ಎಂದೂ ಒಂದಕ್ಷರ ಹೆಚ್ಚಾದರೆ 'ಭುರಿಕ್' ಎಂದೂ ವಿಶೇಷವಾದ ಹೆಸರು. ಹೀಗೆಯೇ ಎರಡಕ್ಷರ ಕಡಿಮೆಯಾದರೆ "ವಿರಾಟ್" ಎಂದೂ ಎರಡಕ್ಷರ ಹೆಚ್ಚಾದರೆ 'ಸ್ವರಾಟ್' ಎಂದೂ ಹೆಸರು. ಯಾಜುಷೀ ಛಂದಸ್ಸುಗಳೇ ಲೌಕಿಕವಾಗಿ ಬಳಕೆಯಲ್ಲಿದ್ದು ಲೌಕಿಕ ಸಂಸ್ಕೃತ ಛಂದಸ್ಸುಗಳಾಗಿವೆ. ಇತರ ವಿಶೇಷಗಳನ್ನು ಛಂದಶ್ಶಾಸ್ತ್ರಗ್ರಂಥಗಳಿಂದ ತಿಳಿಯಬಹುದು.

---

1. ಪಿಂ. ಛಂ. ಹಲಾ. ೧. ೧.

2. ಹಲಾ. ೩. ೫೨.

# ಛಂದಸ್ ಚಕ್ರ

| * | * | ೧ | ೨ | ೩ | ೪ | ೫ | ೬ | ೭ |
|---|---|---|---|---|---|---|---|---|
| * | ಛಂದಸ್ | ಗಾಯತ್ರೀ | ಉಷ್ಣಿಕ್ | ಅನುಷ್ಟುಪ್ | ಬೃಹತೀ | ಪಙ್ಕ್ತಿಃ | ತ್ರಿಷ್ಟುಪ್ | ಜಗತೀ |
| ೧ | ಆರ್ಷೀ | ೨೪ | ೨೮ | ೩೨ | ೩೬ | ೪೦ | ೪೪ | ೪೮ |
| ೨ | ದೈವೀ | ೧ | ೨ | ೩ | ೪ | ೫ | ೬ | ೭ |
| ೩ | ಆಸುರೀ | ೧೫ | ೧೪ | ೧೩ | ೧೨ | ೧೧ | ೧೦ | ೯ |
| ೪ | ಪ್ರಾಜಾಪತ್ಯಾ | ೮ | ೧೨ | ೧೬ | ೨೦ | ೨೪ | ೨೮ | ೩೨ |
| ೫ | ಯಾಜುಷೀ | ೬ | ೭ | ೮ | ೯ | ೧೦ | ೧೧ | ೧೨ |
| ೬ | ಸಾಮ್ನೀ | ೧೨ | ೧೪ | ೧೬ | ೧೮ | ೨೦ | ೨೨ | ೨೪ |
| ೭ | ಆರ್ಚೀ | ೧೮ | ೨೧ | ೨೪ | ೨೭ | ೩೦ | ೩೩ | ೩೬ |
| ೮ | ಬ್ರಾಹ್ಮೀ | ೩೬ | ೪೨ | ೪೮ | ೫೪ | ೬೦ | ೬೬ | ೭೨ |

# 3. ಯಾಸ್ಕ ನಿರುಕ್ತ

ವೈದಿಕಸಾಹಿತ್ಯದಲ್ಲಿ ಬಳಕೆಯಾಗಿರುವ ಪದಗಳಿಗೆ ತಕ್ಕ ಅರ್ಥಗಳನ್ನು ನಿರ್ಣಯಿಸುವ ಶಾಸ್ತ್ರ "ನಿರುಕ್ತ" ಎನಿಸಿದೆ. ಯಾಸ್ಕಮಹರ್ಷಿಗಳ ಈ ಶಾಸ್ತ್ರವು ಲೌಕಿಕ ಭಾಷಾಶಾಸ್ತ್ರಜ್ಞರಿಗೂ ಅತ್ಯಂತಮಹಾನ್ಯವೂ ಮಾರ್ಗದರ್ಶಕವೂ ಆಗಿದೆ. ವಿಮರ್ಶಾತ್ಮಕವಾಗಿ ಅರ್ಥದರ್ಶಕವಾದ ಈ ಶಾಸ್ತ್ರವನ್ನು 'ತರ್ಕ' ಎಂದೂ 'ಸ್ಮೃತಿ' ಎಂದೂ ಕರೆಯಲಾಗಿದೆ. ಇದರ ಮಾರ್ಗವನ್ನು ಅನುಸರಿಸುವುದು ವೈದಿಕ ವಾಙ್ಮಯದಲ್ಲಿ ಅತಿಮುಖ್ಯ. ಈಶಾವಾಸ್ಯಕ್ಕೆ ಸಂಬಂಧಿಸಿದ ಕೆಲವು ಪದಗಳ ಅರ್ಥನಿರ್ಣಯಕ್ಕೆ ಇದರಿಂದಾಗುವ ಉಪಯೋಗವನ್ನು ಈ ಮುಂದೆ ಮಾದರಿಗಾಗಿ ಸೂಚಿಸಲಾಗುವುದು.

## ೧. ಶಬ್ದಾರ್ಥಗಳು

**ಅದಃ** – ಇಂದ್ರಿಯಗೋಚರವಾಗದೆ ದೂರದಲ್ಲಿರುವ ವಸ್ತುಗಳು. ೧. ೧. ೨.

**ವಿನಾಶ** – ವಸ್ತುವಿನ ರೂಪಾಂತರವೇ ಹೊರತು ನಾಶವಲ್ಲ. ಇಲ್ಲಿ 'ನಿಷೇಧ' ಎಂಬ ಅರ್ಥ ಹೇಳ ಕೂಡದು. ೧. ೧. ೩.

**ವಿದ್ಯಾ** – ಜ್ಞಾನ. ಇದಕ್ಕೆ ವಿಷಯ ದೇವತೆ. ಮಂತ್ರಗಳು ನೆನಪಿಗಾಗಿ. ಕರ್ಮಗಳು ದೇವತೆಗಳ ಸಾನ್ನಿಧ್ಯಾನುಭವಕ್ಕಾಗಿ. ೧. ೧. ೩.

**ದೇವತಾ** – ದೇವತೆಗಳಿಗೆ ಮನುಷ್ಯರಂತೆಯೇ ದಿವ್ಯಶರೀರವೂ ಅಂಗೋಪಾಂಗಗಳೂ ಇವೆ.

**ಸಂ** – ಏಕೀಭಾವ – ಒಗ್ಗೂಡುವಿಕೆ. ೧. ೧. ೫.

**ವಿ. ಅಪ** – ಏಕೀಭಾವಕ್ಕೆ ವಿರುದ್ಧವಾದ ಅರ್ಥ – ವಿಶ್ಲೇಷ. ೧ ೧. ೫.

**ಪರಿ** – ಎಲ್ಲೆಡೆ ಹರಡಿರುವಿಕೆ. ೧. ೧. ೫.

**ಅನು** – ಹೋಲಿಕೆ ಮತ್ತು ಅನುಸರಿಸುವಿಕೆ. ೧. ೧. ೫.

**ಅತಿ, ಸು** – ಪ್ರಶಸ್ತ ಎಂಬ ಅರ್ಥ. ೧. ೧. ೫.

**ಇವ** – ಹೋಲಿಕೆ, ಕರ್ಮೋಪಸಂಗ್ರಹ. ೧. ೨. ೧.
ಬೇರೆ ಪದದೊಡನೆ ಸೇರಿದ್ದಾಗಲೂ ಬಿಂಗಡಿಸಿದ್ದಾಗಲೂ ವಿವಿಧ ಅರ್ಥಗಳನ್ನು ಸೇರಿಸಿ ಕೊಡುವುದಕ್ಕೆ ಕರ್ಮೋಪಸಂಗ್ರಹ ಎಂದು ಹೆಸರು.

**ಚ** – ಮತ್ತು, ಕೂಡ. ಇದು ಬಿಡಿಪದವಾದರೂ ಕರ್ಮೋಪಸಂಗ್ರಹ. ೧. ೨. ೪.

**ಕಲ್ಯಾಣಂ** – ಚಿನ್ನದ ಬಣ್ಣದ, ಸುಂದರ, ಆಸೆಯಾಗುವಂತಹ. ೨. ೧. ೪.

**ಪುರುಷಃ** – ಎಲ್ಲೆಲ್ಲೂ ತುಂಬಿರುವ ಪರಮಾತ್ಮ. (ಮತ್ತು ಎಲ್ಲೆಲ್ಲೂ ಜ್ಞಾನದ ಮೂಲಕ ವ್ಯಾಪಿಸುವ ಜೀವಾತ್ಮ) ೨. ೧. ೪.

**ಋಷಿಃ** – ದರ್ಶಕ – ನೋಡುವವನು. ತಿಳಿಯುವವನು. ೨. ೩. ೨.

**ಮಾತಾ** – ಆಕಾಶ. ೨. ೨. ೮.

**ಶರೀರಂ** – ಶಿಥಿಲವಾಗಿ ಹೋಗುವ ದೇಹ. ೨. ೫. ೧೬.

**ಕ್ರತುಃ** – ಯಜ್ಞಾದಿಕ್ರಿಯೆ ಮತ್ತು ಜ್ಞಾನ. ೨. ೬. ೨೫.

**ಅಸುರಾಃ** – ತಾವೇ ಬದುಕಬೇಕೆಂಬ ದುರಾಸೆಯಿಂದಾಗಿ ತಮ್ಮ ಯೋಗ್ಯವಾದ ಸ್ಥಾನವನ್ನು ಕಳೆದುಕೊಳ್ಳುವವರು. ೩. ೨. ೬.

**ಧೀರಃ** – ಬುದ್ಧಿವಂತ. ೩. ೨. ೧೨.

**ಸತ್ಯಂ** – ಇರುವ ವಸ್ತುಗಳಲ್ಲಿ ವ್ಯಾಪಕವಾಗಿರುವಂತಹದು. ೩. ೩. ೧೩.

**ಆತ್ಮಾ** – ಎಲ್ಲವನ್ನೂ ಕಾಪಾಡುವ ಮತ್ತು ಪಡೆಯುವ ವ್ಯಾಪಿಸುವ ವಸ್ತು. ೩. ೩. ೧೫.

**ಅಸೌ** – ಕಣ್ಣಿಗೆ ಕಾಣದಿರುವ ವಸ್ತು, ದೂರದಲ್ಲಿರುವ ವಸ್ತು. ೩. ೩. ೧೬.

ನರಾಃ — ಕೆಲಸಕಾರ್ಯಗಳನ್ನು ಮಾಡುವ ಯೋಗ್ಯತೆ ಇರುವವರು. ೫. ೧. ೧.

ಅನ್ಧಂ — ಕತ್ತಲೆಯನ್ನೂ ಕುರುಡು ಎಂದು ಹೇಳುವುದು 'ಅನ್ಧಂ ತಮಃ' ಮುಂತಾದ ವಚನಗಳಲ್ಲಿ ಪ್ರಸಿದ್ಧವಾಗಿದೆ. ೫. ೧. ೨.

ವಯುನಂ — ಕಾಂತಿ, ವಿಶೇಷವಾದ ಜ್ಞಾನ. (ವೀ. ಎಂಬ ಧಾತು ಚಲನೆ ಮುಂತಾದ ಅರ್ಥದಲ್ಲಿದೆ.) ೫. ೩. ೧೪.

## ೨. ಆಧ್ಯಾತ್ಮಿಕ ದೇವತಾತತ್ತ್ವ

ಯಾವುದೇ ಮಂತ್ರದ್ರಷ್ಟಾರನಾದ ಋಷಿಯು ಯಾವುದಾದರೊಂದು ಫಲಕ್ಕಾಗಿ ಮಂತ್ರದ ಮುಖ್ಯಾರ್ಥವಾದ ಯಾವ ದೇವತೆಯನ್ನು ಸ್ತೋತ್ರಮಾಡುತ್ತಾನೋ ಅದೇ ಆ ಮಂತ್ರದ ದೇವತೆ. ಮಂತ್ರಗಳೆಲ್ಲವೂ ಸಾಮಾನ್ಯವಾಗಿ ಸ್ತೋತ್ರರೂಪದಲ್ಲೇ ಇರುವುವು. ಸ್ತೋತ್ರವೆಂದರೆ ದೇವತೆಗಳ ಹೆಸರು, ಆಕಾರ, ಬಣ್ಣ, ಕೆಲಸ, ಪರಿವಾರ ಮುಂತಾದವುಗಳನ್ನು ನಿರ್ದಿಷ್ಟವಾಗಿ ಹೇಳುವುದು. ಸ್ತೋತ್ರಗಳಲ್ಲಿ ಪ್ರತ್ಯಕ್ಷ, ಪರೋಕ್ಷ, ಆಧ್ಯಾತ್ಮಿಕ ಎಂಬ ಮೂರು ವಿಧಾನಗಳಿವೆ.[1] 'ಇಂದ್ರನು ಭೂವ್ಯೋಮಾಕಾಶಗಳಿಗೆ ಒಡೆಯ', (ಋಗ್ವೇದ. ೮. ೪. ೧೫. ೫) 'ಈ ಪ್ರಪಂಚಕ್ಕೆಲ್ಲ ಒಬ್ಬ ವ್ಯಾಪಕನಾದ ಒಡೆಯನಿರುವನು', 'ಈಶಾವಾಸ್ಯಮಿದಂ ಸರ್ವಂ' ಮುಂತಾದವು ಪರೋಕ್ಷವಚನಗಳು. ಈ ಪರೋಕ್ಷತೆಯಿಂದ ಈಶಾವಾಸ್ಯೋಪನಿಷತ್ತಿನ ಹಿಂದಿನ ಅಧ್ಯಾಯಗಳಲ್ಲಿ ಅಲ್ಲಲ್ಲೇ ಪರಮಾತ್ಮನಾದ ಈಶನ ವಿಚಾರ ಸ್ಪಷ್ಟವಾಗಿದೆಯೆಂಬ ಅಂಶವೂ, ಈಶನ ಬಗ್ಗೆ ಪ್ರಸಿದ್ಧಿಯಿದೆಯೆಂಬ ಅಂಶವೂ ಸ್ಪಷ್ಟವಾಗುವುದು. 'ಈಶ ಎಂದರೆ ಪ್ರಭು.'

'ಎಲೈ! ಕಣ್ವವಂಶದವರೇ! ಒಟ್ಟಾಗಿ ಸೇರಿ ಚೆನ್ನಾಗಿ ಮಂತ್ರಗಳನ್ನು ಹಾಡಿರಿ' (ಋಗ್ವೇದ. ೧. ೩. ೧೨. ೧.) ಮುಂತಾದವು ಪ್ರತ್ಯಕ್ಷವಚನಗಳು. ಪ್ರತ್ಯಕ್ಷ ವಚನಗಳಲ್ಲಿ ಕಂಡು ಬರುವ ವ್ಯಕ್ತಿಗಳು ಸಾಮಾನ್ಯವಾಗಿ ಸ್ತೋತ್ರಮಾಡುವವರೂ, ಉಪಾಸಕರೂ, ಕರ್ಮ ಮಾಡುವವರೂ ಆಗಿರುವರು. "ತೇನ ತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿತ್ ಧನಂ" ಇಂತಹುದು ಪ್ರತ್ಯಕ್ಷ ವಚನ ಎಂಬುದು ಗಮನಾರ್ಹ.

"ವಾಗಾಂಭೃಣೀಯಂ" ಎಂಬ 'ಲವಸೂಕ್ತ'ವನ್ನು 'ವೈಕುಂಠಿ'ಯೆನಿಸಿದ ಇಂದ್ರನು ತನ್ನ ಬಗ್ಗೆಯೇ ಹೇಳಿಕೊಳ್ಳುತ್ತಾನಲ್ಲವೆ? ಪರಮಾತ್ಮನು 'ವಿಕುಂಠಾ' ಎಂಬ ಅಸುರತಪಸ್ವಿನಿಯ ಮಗನಾಗಿ ಹುಟ್ಟಿದ. ಅವಳಿಗೆ ತನ್ನ ಸ್ವರೂಪ ಗುಣ ವೈಭವಾದಿಗಳನ್ನು ತಾನೇ ಸ್ವಯಂ ತಿಳಿಸುವಾಗಿನ ಮಂತ್ರ ಹೀಗಿದೆ. ''ನಾನು ಈ ಭೂವ್ಯೋಮಾಂತರಿಕ್ಷಾದಿಗಳ ಸಮಸ್ತೈಶ್ವರ್ಯಕ್ಕೂ ಅನಾದಿಕಾಲದಿಂದ ಒಡೆಯನಾಗಿಯೇ ಇರುವೆನು. ಸಮಸ್ತ ವಿಶ್ವಕ್ಕೂ ತಂದೆಯಾದ ನನ್ನನ್ನು ತಿಳಿದ ಕೆಲವರು ಆರಾಧಿಸುವರು. ತಿಳಿಯದವರು ಆರಾಧಿಸುವುದಿಲ್ಲ. ಆದರೂ ನಾನೇ ಎಲ್ಲರಿಗೂ ಅವರವರಿಗೆ ತಕ್ಕಂತೆ ಆಹಾರಾದಿಗಳನ್ನು ಒದಗಿಸಿ ಪಕ್ಷಪಾತವಿಲ್ಲದೆ ರಕ್ಷಿಸುತ್ತಿರುವೆನು." (ಋ. ೮ ೧. ೫. ೧.) ವೈಕುಂಠಲೋಕದಲ್ಲಿರುವ ಪರಮಾತ್ಮನೇ ವಿಕುಂಠೆಯ ಮಗನಾಗಿ ಅವತರಿಸಿರುವನೆಂಬುದೂ ಇಂದ್ರಶಬ್ದಕ್ಕೆ ಪರಮಾತ್ಮನೇ ಇಲ್ಲಿ ಅರ್ಥ ಎಂಬುದೂ ಗಮನಾರ್ಹ.[2]

---

1. ಯಾ. ನಿ. ೭. ೧. ೧. ದುರ್ಗಾಚಾರ್ಯವ್ಯಾಖ್ಯಾನ ಟಿಪ್ಪಣಿ ಸಹ.
2. ಯಾ. ಐ. ೭. ೧. ೨. ವ್ಯಾಖ್ಯಾನ ಟಿಪ್ಪಣಿ ಸಹ.

ಪರಮಾತ್ಮ ಒಬ್ಬನೇ ನಿಜವಾಗಿ ಮುಖ್ಯವಾದ ದೇವತೆ. ಉಳಿದ ದೇವತೆಗಳೆಲ್ಲರೂ ಅವನ ಅಂಗೋಪಾಂಗಗಳಿದ್ದಂತೆ. ಸಮಸ್ತ ವಿಶ್ವವನ್ನು ತನ್ನ ಮೂರ್ತಿಯನ್ನಾಗಿ ಮಾಡಿಕೊಂಡು ವಿಶ್ವದ ಎಲ್ಲ ಭಾಗದಲ್ಲೂ ವ್ಯಾಪಿಸಿರುವ ದೇವತೆಯೊಂದನ್ನೇ ವೇದಶಾಸ್ತ್ರಗಳಲ್ಲಿ ಜ್ಞಾನಿಗಳಾದವರು ಇಂದ್ರ, ಮಿತ್ರ, ವರುಣ, ಅಗ್ನಿ, ಗರುಡ, ಯಮ, ವಾಯು ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಇದು ಸತ್ಯದ ವಿಷಯ. (ಋಗ್ವೇದ. ೨.೩.೨೨) ಯಾವ ಮಂತ್ರಗಳಿಗೆ ದೇವತೆಗಳನ್ನು ನಿರ್ದಿಷ್ಟವಾಗಿ ಹೇಳಿಲ್ಲವೋ ಅಲ್ಲಿ 'ಯಜ್ಞ' ಎಂಬ ಮಹಾವಿಷ್ಣುವೇ ದೇವತೆ ಎಂಬುದು 'ಕಾತ್ಥ' ಋಷಿಯ ವಚನ. 'ಅಗ್ನಿ' ಎಂಬುದಾಗಿ 'ಶಾಕಪೂಣಿ' ಋಷಿಯ ವಚನ. 'ಪ್ರಜಾಪತಿ' ಎಂಬುದಾಗಿ ಯಾಜ್ಞಿಕರಾದ ಮಹಾಜನರ ವಚನ. 'ನಾರಾಂಶಂಸ' ಎಂಬುದಾಗಿ ನಿರುಕ್ತಶಾಸ್ತ್ರಜ್ಞರ ವಚನ. 'ಅಗ್ನಿ' ಅಥವಾ 'ಯಜ್ಞ' ಎಂಬ ದೇವತೆಗೆ 'ನಾರಾಶಂಸ' ಎಂಬುದಾಗಿ ವ್ಯವಹಾರವಿದೆ. 'ಯಜ್ಞ' ಎಂದರೆ ವಿಷ್ಣುವೇ ಎಂದು ವೇದವಚನ ಸ್ಪಷ್ಟವಾಗಿದೆ. ವಿಷ್ಣುವೆಂದರೆ ಆದಿತ್ಯನೇ ಎಂದು ನಿರುಕ್ತದವರ ಅಭಿಪ್ರಾಯ.[1] 'ಅಗ್ನಿ' ಎಂದರೂ ಆ ಪರಮಾತ್ಮನಾದ ವಿಷ್ಣುವೇ ಎಂಬುದು ಜೈಮಿನಿ ವ್ಯಾಸ ಮುಂತಾದವರ ನಿರ್ಣಯ.[2] ಈಶಾವಾಸ್ಯೋಪನಿಷತ್ತಿಗೆ 'ಆತ್ಮ'ವೇ ದೇವತೆ. ಆತ್ಮಶಬ್ದಕ್ಕೆ ಇಲ್ಲಿ ಹಿಂದೆ ತಿಳಿಸಿದಂತೆ ಪರಮಾತ್ಮನೇ ಮುಖ್ಯವಾದ ಅರ್ಥ. ಈ ಉಪನಿಷತ್ತು ಜೀವಾತ್ಮವಿಚಾರವಾಗಿರುವುದಲ್ಲ; ಪರಮಾತ್ಮನ ವಿಚಾರವಾಗಿಯೇ ಇರುವುದು.

ಇಂತಹ ಇನ್ನೂ ಅನೇಕ ವಿಚಾರಗಳನ್ನು ವಿಮರ್ಶಾತ್ಮಕವಾಗಿ ನಿರ್ಣಯಿಸಲು ಯಾಸ್ಕರ ನಿರುಕ್ತವೂ ಇದರ ವ್ಯಾಖ್ಯಾನಗಳೂ ಅತ್ಯವಶ್ಯ ಅಧ್ಯಯನಯೋಗ್ಯವಾಗಿವೆ.

## 4. ಜ್ಯೌತಿಷ ಶಾಸ್ತ್ರ

ಜ್ಯೌತಿಷವೂ ಒಂದು ವೇದಾಂಗ. ಇದರಲ್ಲಿ ಭೂಗೋಳ ಖಗೋಳ ವಿಚಾರಗಳು ಪರಮಾತ್ಮನ ಅಧೀನದಲ್ಲಿರುವ ವಿಶ್ವದ ವಿಸ್ತಾರಜ್ಞಾನಕ್ಕೆ ಸಹಾಯಕ, ಹಾಗೂ ಪರಮಾತ್ಮಾರಾಧನರೂಪವಾದ ಯಜ್ಞಯಾಗಾದಿ ಕಾಲಗಳನ್ನೂ ಉಪಾಸಕನ ಜನನಮರಣಾದಿ ಕಾಲವನ್ನೂ ಆಯುಃಪ್ರಮಾಣವನ್ನೂ ಆಯಾವ್ಯಕ್ತಿಗಳ ಜನ್ಮಜನ್ಮಾಂತರಗಳನ್ನೂ ಈ ಜನ್ಮದಲ್ಲಿ ಉಪಾಸನೆಯ ಸಾಧ್ಯಾಸಾಧ್ಯತೆಗಳನ್ನೂ ವಿಘ್ನಗಳನ್ನೂ ಅವುಗಳ ಪರಿಹಾರವನ್ನೂ ತಿಳಿಯಲು ಅತ್ಯವಶ್ಯಕ. 'ಜಿಜೀವಿಷೇತ್ ಶತಂ ಸಮಾಃ', 'ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ', 'ತಸ್ಮಿನ್ನಪೋ ಮಾತರಿಶ್ವಾ ದಧಾತಿ', 'ಹಿರಣ್ಮಯೇನ ಪಾತ್ರೇಣ', 'ಸುಪಥಾ' ಮುಂತಾದೆಡೆಗಳಲ್ಲಿ ಸೂಕ್ಷ್ಮವಿಶೇಷಗಳನ್ನು ಅರಿಯಲು ಹಿಂದಿನ ಮಹರ್ಷಿಗಳೆಲ್ಲರೂ ಈ ಜ್ಯೌತಿಷದ ಆಧಾರವನ್ನು ಪಡೆದಿದ್ದರೆನ್ನಲು ವಿಮರ್ಶಕರ ಗಮನ ಹರಿಯುವುದು ಒಳಿತು.

## 5. ಕಲ್ಪಸೂತ್ರಗಳು

ವೇದಮಂತ್ರಗಳ ಪ್ರಯೋಗವನ್ನೂ ಅದಕ್ಕೆ ಸಂಬಂಧಿಸಿದ ಅರ್ಥ ದ್ರವ್ಯ ದೇವತಾದಿಗಳನ್ನೂ ತಿಳಿಸುವ ಗ್ರಂಥಗಳು 'ಕಲ್ಪ' ಎನಿಸಿವೆ. ಈಶಾವಾಸ್ಯವಿರುವ ಶುಕ್ಲಯಜುರ್ವೇದಕ್ಕೆ ಯಾಜ್ಞವಲ್ಕ್ಯರ ಪುತ್ರರಾದ ಕಾತ್ಯಾಯನ ಮಹರ್ಷಿಯು ಪ್ರಾತಿಶಾಖ್ಯ, ಭಾಷಿಕಸೂತ್ರ, ಪ್ರತಿಜ್ಞಾಸೂತ್ರ, ಪರಿಶಿಷ್ಟಸೂತ್ರ ಮುಂತಾದುವನ್ನು ಬರೆದಿರುವಂತೆಯೇ ಕಲ್ಪಸೂತ್ರ, ಶ್ರೌತಸೂತ್ರ, ಅನುಕ್ರಮಣಿ ಮುಂತಾದುವನ್ನು ಬರೆದಿರುವರು. ಇವುಗಳಿಂದ ತಿಳಿದು ಬರುವ ಕೆಲವು ಅಂಶಗಳನ್ನು ಮಾದರಿಗಾಗಿ ಇಲ್ಲಿ ಕೊಡಲಾಗುವುದು.

---

1. ಯಾ. ನಿ. ೭. ೧. ೪. ೭. ೨. ೫. ವ್ಯಾಖ್ಯಾನ ಟಿಪ್ಪಣಿ ಸಹ.

2. ಈಶಾ. ೧೮೭ನೇ ಪುಟ ಟಿಪ್ಪಣಿ ಗಮನಿಸಿ.

ಈಶಾವಾಸ್ಯದಲ್ಲಿ ಮಾಧ್ಯಂದಿನಪಾಠಪ್ರಕಾರ ಎರಡು ವಿಭಾಗ.[1] ಕಾಣ್ವಪಾಠಪ್ರಕಾರ ಒಟ್ಟು ಒಂದೇ ಅಧ್ಯಾಯ ಒಂದೇ ಅನುವಾಕ.[2] ಪ್ರವರ್ಗ್ಯ ಎಂಬ ಯಜ್ಞದಲ್ಲಿ ವೇದಾಧ್ಯಯನದ ಆರಂಭದಲ್ಲೂ ಅಂತ್ಯದಲ್ಲೂ ಹೇಳುವ ಶಾಂತಿಮಂತ್ರಗಳನ್ನು ಹಾಗೆಯೇ ಪಠಿಸಬೇಕು. ಪ್ರವರ್ಗ್ಯವಿಚಾರವಾದ ಬ್ರಾಹ್ಮಣಭಾಗವನ್ನು ಬೃಹದಾರಣ್ಯಕೋಪನಿಷತ್ತಿನ ಆದ್ಯಂತಗಳಲ್ಲಿ ಪಠಿಸುವಂತೆ ಪ್ರವರ್ಗ್ಯವಿಚಾರವಾದ ೨೫ ಮಂತ್ರಗಳನ್ನೂ[3] ಈಶಾವಾಸ್ಯದ ಅಧ್ಯಯನದಲ್ಲಿ ಹಾಗೆಯೇ ಪಠಿಸಬೇಕೆಂಬ ವಿಚಾರವು ಇದರಿಂದ ತಿಳಿಯುವುದು.[4] ಈ ಶಾಂತಿಮಂತ್ರಗಳಲ್ಲೂ ಇದರ ಹಿಂದಿನ ಅಧ್ಯಾಯಗಳಲ್ಲೂ ಪರಮಾತ್ಮತತ್ತ್ವವಿಚಾರವು ಹೆಚ್ಚಾಗಿ ಬಂದಿದೆಯೆಂಬ ವಿಚಾರವು ಸಾಯಣಾಚಾರ್ಯಭಾಷ್ಯದಲ್ಲಿ[5] ಉದ್ಧೃತವಾಗಿದೆ. ಇವುಗಳಿಂದ ಈಶಾವಾಸ್ಯದ ಅನೇಕ ಸಂದರ್ಭಗಳಲ್ಲಿ ಅರ್ಥನಿರ್ಣಯಕ್ಕೆ ಸಹಾಯಕವಾಗುವುದು. ಭಗವದ್ರಾಮಾನುಜರೂ ತಮ್ಮ ಶ್ರೀಭಾಷ್ಯದಲ್ಲಿ ಶಾಂತಿಮಂತ್ರ ವಿಚಾರ ಬಂದಾಗ ಶುಕ್ಲಯಜುರ್ವೇದದ ಬಗ್ಗೆ ಪ್ರವರ್ಗ್ಯದ ವಿಷಯವನ್ನು ಸೂಚಿಸಿರುವರು.[6]

ಹೀಗೆಯೇ ಶೌನಕಮಹರ್ಷಿಗಳ 'ಚರಣವ್ಯೂಹ' ಗ್ರಂಥದಲ್ಲಿ ವಿವಿಧ ವೇದಶಾಖೆಗಳ ಇತಿಹಾಸಗಳೂ ಅವುಗಳ ಪರಿಮಾಣ ಆಕಾರ ಬಣ್ಣ ದೇವತೆ ಮುಂತಾದ ವಿವಿಧ ವಿಚಾರಗಳೂ ವೈಜ್ಞಾನಿಕವಾಗಿ ಗಮನಾರ್ಹವಾಗಿವೆ.[7]

ಹೀಗೆ ಆರು ವೇದಾಂಗಗಳ ಅಧ್ಯಯನ ಅವಶ್ಯಕವಾದರೂ ಲೋಕದಲ್ಲಿ ಲುಪ್ತವಾಗುತ್ತಿದೆ. ಈಶಾವಾಸ್ಯದ ವಿಸ್ತೃತವಾದ ಮತ್ತು ಸೂಕ್ಷ್ಮವಾದ ಅರ್ಥಜ್ಞಾನಕ್ಕೆ ಸಾಂಗಾಧ್ಯಯನದ ಅವಶ್ಯಕತೆ ಎಂದಿಗಿಂತಲೂ ಇಂದು ಹೆಚ್ಚಾಗಿದೆ.

## ಉಪವೇದಗಳು

ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥವೇದ ಎಂದು ನಾಲ್ಕು ಉಪವೇದಗಳು ಪ್ರಸಿದ್ಧವಾಗಿವೆ.

ಆಯುರ್ವೇದವು ಈಶಾವಾಸ್ಯದ 'ಜಿಜೀವಿಷೇತ್ ಶತಂ ಸಮಾಃ' ಎಂಬುವರ ಸಾಧನೆಗೆ ಅತ್ಯುಪಯುಕ್ತ ಮತ್ತು 'ವಾಯುರನಿಲಂ ಅಮೃತಂ, ಶರೀರಂ' ಮುಂತಾದ ವಿಚಾರಗಳ ವಿಸ್ತೃತ ಸೂಕ್ಷ್ಮಜ್ಞಾನಕ್ಕೂ ಯೋಗಶಾಸ್ತ್ರೋಕ್ತವಾದ ನರನಾಡಿಗಳ ಜ್ಞಾನಕ್ಕೂ ಸಹಾಯಕವಾಗಿ ಉಪಾಸಕನಿಗೆ ಅತ್ಯವಶ್ಯ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಧನುರ್ವೇದದ ಕೆಲವು ಶಾರೀರಕ ಮಾನಸಿಕ ಅಸ್ತ್ರಗಳೂ ಸಹ ಉಪಾಸನೆಯ ವಿಘ್ನನಿವಾರಣೆಗೆ ಅತ್ಯವಶ್ಯವೆನಿಸಿವೆ. ಉಸಿರಾಟದ ಹತೋಟಿಯನ್ನು ತಿಳಿಸುವ ಸ್ವರೋದಯವಿಚಾರ ಮತ್ತು ಪಾಂಚಭೌತಿಕವಾಗಿ

---

1. ಕಾ. ಪರಿಶಿಷ್ಟಸೂತ್ರ ೪.
2. 'ಈಶಾವಾಸ್ಯವಿಂಶತ್ಯಷ್ಟಾದಶ' ಕಾಣ್ವಪದಪಾಠಪದ್ಧತಿ.
3. ಶುಕ್ಲಯಜುರ್ವೇದ ಕಾಣ್ವಸಂಹಿತೆ. ೩೬ನೇ ಅಧ್ಯಾಯ.
4. ಕಾ. ಶ್ರೌತಸೂತ್ರ. ೨೬. ೭. ೫೭. ಕಾ. ಸರ್ವಾನುಕ್ರಮಣಿ. ೪. ೫.
5. ಶುಕ್ಲಯಜುಸ್, ಕಾಣ್ವಸಂಹಿತಾ. ೩೫. ೧, ೨, ೩. ಸಾಯಣಭಾಷ್ಯ ಸಹಿತ ಗಮನಿಸಿ-ನಂ. ೧೦೪, ಸರಸ್ವತೀಭವನಗ್ರಂಥಮಾಲಾ, ಸಂಪೂರ್ಣಾನಂದ ವಿಶ್ವವಿದ್ಯಾಲಯ, ಕ್ರಿ. ಶ. ೧೯೭೮ ಮುದ್ರಿತ.
6. ಈಶಾ. ಪುಟ. ೨೫೬. ಟಿಪ್ಪಣಿ ಗಮನಿಸಿ. ವಿಮರ್ಶಿಸಿ.
7. ಕಾತ್ಯಾಯನ ಪ್ರಾತಿಶಾಖ್ಯದ ಜೊತೆ ಮುದ್ರಿತ ಕ್ರಿ. ಶ. ೧೮೮೮ ಯುಗಳ ಕಿಶೋರಪಾಠಕ ಸಂಪಾದಿತ ಪುಸ್ತಕ.

ಯುದ್ಧಾದಿಗಳಲ್ಲೂ ಉಪಯೋಗಿಸುವ ಕೆಲವು ಪಟ್ಟುಗಳು ಯೋಗಿಗಳಿಗೂ ಉಪಾಸಕರಿಗೂ ಕೆಲವು ಸಾಧನೆಗಳ ಕಾಲದಲ್ಲಿ ಅವಶ್ಯಕ ಎಂಬುದು ಗಮನಾರ್ಹ.

ಗಾಂಧರ್ವವೇದವೇ ಸಂಗೀತಶಾಸ್ತ್ರ. ಸಂಗೀತವೆಂದರೆ ತಾಳ, ರಾಗ, ಅಭಿನಯಗಳು. ಉಪಾಸಕರಿಗೆ ಭಗವದಾರಾಧನೆ ಯಜ್ಞ ಮುಂತಾದವುಗಳಲ್ಲಿ ವಿವಿಧ ಮುದ್ರಾಭಂಗಿಗಳ ಪ್ರಾಯೋಗಿಕ ಜ್ಞಾನವೂ, ತಾಳ ಮತ್ತು ರಾಗ ವಿಶೇಷಗಳ ಅವಶ್ಯಕತೆಯೂ ಇರುವುದನ್ನು ಯಾಜ್ಞವಲ್ಕ್ಯರ ಸ್ಮೃತಿ ಗ್ರಂಥದಿಂದ ಸೂಚ್ಯವಾಗಿ ಹಿಂದೆಯೇ ತಿಳಿಸಲಾಗಿದೆ.

ಅರ್ಥಶಾಸ್ತ್ರವೇ ಅರ್ಥವೇದವೆನಿಸಿರುವುದು. ಯಾವೊಬ್ಬ ಉಪಾಸಕನೂ ತನ್ನ ಉಪಾಸನೆಯನ್ನು ನೆರವೇರಿಸಲು ಸಮಾಜದ ಸಹಾಯ ಅತ್ಯಗತ್ಯ. ಸಮಾಜವ್ಯವಸ್ಥೆ ಸರಿಯಿಲ್ಲವಾದರೆ ಉಪಾಸನೆಯ ಹಿರಿಮೆಯಾಗಲಿ ಅವಶ್ಯಕತೆಯಾಗಲಿ ತಿಳಿಯದೆ ಉಪಾಸನೆಗಳ ಆಚರಣೆಗಳೇ ಸಮಾಜದಲ್ಲಿ ನಾಶವಾಗಿ ಸಮಾಜದ ಉಜ್ಜೀವನವಾಗದೆ ಸಮಾಜವೇ ನಾಶವಾದೀತು. ಆದುದರಿಂದ ಸಮಾಜದ ಆಡಳಿತವ್ಯವಸ್ಥೆಯನ್ನು ತಿಳಿಸುವ ಶಾಸ್ತ್ರವೂ ಉಪಾಸಕರಿಗೆ ಸಾಕಷ್ಟು ಪರಿಚಿತವಾಗಿರಬೇಕಲ್ಲವೆ ?

## ವೇದವಿಕೃತಿಗಳು

ವೈದಿಕಸಾಹಿತ್ಯವನ್ನು ರಕ್ಷಿಸಲು ಹಿಂದಿನ ಮಹರ್ಷಿಗಳು ಸ್ವರ, ಪದ, ಕ್ರಮ, ಜಟೆ, ಘನ ಮುಂತಾದ ರೀತಿಗಳಿಂದ ಅದರ ಅಧ್ಯಯನವನ್ನು ವಿಸ್ತರಿಸಿರುವರು. ಈ ಅಧ್ಯಯನರೀತಿಗಳಲ್ಲಿ ಅಳವಡಿಸಿರುವ ವೇದಭಾಗಗಳಿಗೆ ವೇದವಿಕೃತಿಗಳೆಂದು ಹೆಸರು. ಇವುಗಳ ಅಧ್ಯಯನದಿಂದ ಕೆಲವು ಸೂಕ್ಷ್ಮವಾದ ಅರ್ಥನಿರ್ಣಯಗಳಿಗೆ ಸಹಾಯವಾಗುವುವು: ಅವುಗಳಲ್ಲಿ ಮಾದರಿಗಾಗಿ ಪದಪಾಠದ ಒಂದು ವಿಚಾರವನ್ನು ತಿಳಿಸಲಾಗುವುದು.

ಈಶಾವಾಸ್ಯದ 'ತದೇಜತಿ' ಮಂತ್ರದಲ್ಲಿ 'ತತ್' ಎಂಬ ಪದವು ಆರು ಸಲ ಬಂದಿದೆ. 'ಪೂಷನ್ನೇಕರ್ಷೇ' ಮಂತ್ರದಲ್ಲಿ 'ತೇ' ಎಂಬ ಪದವು ಎರಡು ಸಲ ಬಂದಿದೆ. ಒಂದೇ ಅರ್ಥವಿರುವ ಒಂದೇ ಆಕಾರದ ಪದ ಅದೇ ಮಂತ್ರದಲ್ಲಿ ಬಂದರೆ ಅದನ್ನು ಕಾಣ್ವಪದಪಾಠದಲ್ಲಿ ಎರಡನೆಯ ಸಲ ಪಠಿಸುವುದಿಲ್ಲ. 'ತತ್' ಪದವು ಒಂದೇ ಸಲ ಕಾಣ್ವಪದಪಾಠದಲ್ಲಿ ಬಂದಿದೆ. 'ತೇ' ಪದವು ಎರಡುಸಲವೂ ಬಂದಿದೆ. ಹೀಗೆ ಎರಡು' ತೇ' ಪದಗಳಿಗೂ ಈ ಮಂತ್ರದಲ್ಲಿ ಅರ್ಥವ್ಯತ್ಯಾಸವನ್ನು ಹೇಳಲೇಬೇಕು ಎಂಬ ವಿಚಾರ ಇದರಿಂದ ಖಚಿತವಾಗುವುದು.

ಶಾಕಲಮಹರ್ಷಿಗಳು ಮಾಧ್ಯಂದಿನಪದಪಾಠವನ್ನು ರೂಢಿಸಿದವರು. ಇವರು ಯಾಜ್ಞವಲ್ಕ್ಯರಿಗೂ ಗುರುಗಳಾಗಿದ್ದಿರಬಹುದು. ಇವರ ಪಾಠಕ್ರಮದಲ್ಲಿ ಅರ್ಥವ್ಯತ್ಯಾಸವಿರಲಿ, ಇಲ್ಲದಿರಲಿ ಒಂದೇ ಆಕಾರದ ಪದಗಳು ಪುನಃ ಬಂದರೆ ಪಠಿಸುವುದಿಲ್ಲ. 'ಗಾರ್ಗ್ಯ' ಮಹರ್ಷಿಗಳು ಕೆಲವು ಶಾಖೆಗಳ ಪದಪಾಠವನ್ನು ರೂಢಿಸಿದವರು. ಪ್ರಾಯಃ ಇವರು ಶ್ರೀಕೃಷ್ಣನ ಗುರುಗಳು, ಯಾದವಪುರೋಹಿತರು, ಪ್ರಸಿದ್ಧ ಜ್ಯೌತಿಷಿಗಳು ಮತ್ತು ದೇಶಾಂತರ ದ್ವೀಪಾಂತರಗಳಲ್ಲೂ ನೆಲೆಸಿದ್ದು ವೈದಿಕಸಂಸ್ಕೃತಿಯನ್ನು ರಕ್ಷಿಸಿದವರು ಎಂದು ತಿಳಿಯುವುದು, ಇವರ ಪಾಠಕ್ರಮದಲ್ಲಿ ಪುನರುಕ್ತವಾಗುವ ಯಾವ ಪದವನ್ನೂ ಬಿಡದೆ ಪಠಿಸಲಾಗಿದೆ. ಕಣ್ವಮಹರ್ಷಿಗಳು ಮಾತ್ರ ಅರ್ಥವನ್ನು ಗಮನಿಸಿ ಪದಗಳ ಪುನಃಪಠನ ತ್ಯಾಗಗಳನ್ನು ವ್ಯವಸ್ಥೆಗೊಳಿಸಿರುವರು.[1] ಇದು ಮಂತ್ರತ್ರಯಾಚಾರ್ಯರೂ ಅನುಸರಿಸಿರುವ ಕಾಣ್ವಶಾಖೆಯ ವೈಶಿಷ್ಟ್ಯ. ಇದನ್ನು ಅನುಸರಿಸಿ ಈಶಾವಾಸ್ಯದ ಪದಗಳ ವಿಂಗಡಣೆಯನ್ನೂ ಅರ್ಥವಿಶೇಷವನ್ನೂ ಗಮನಿಸುವುದು ಒಳಿತು.

---

1. ಕಾ. ಪ್ರಾ. ೪. ೧೭೭, ೧೮೩. ಭಾಷ್ಯಟೀಕೆಗಳಲ್ಲಿ ಉದ್ಧೃತವಚನ.

# ವೇದಶಾಖೆಗಳು, ಉಪನಿಷತ್ತುಗಳು

ವೈದಿಕಸಾಹಿತ್ಯವು ವಿವಿಧಶಾಖೆಗಳಾಗಿ ಬೆಳೆದು ನಿಂತಿದ್ದಾಗ ಅದರ ತುತ್ತತುದಿಗಳಲ್ಲಿ ಬಿಟ್ಟ ಹೂಹಣ್ಣು ಗೊಂಚಲುಗಳಂತೆ ವಿವಿಧ ಉಪನಿಷತ್ತುಗಳು ಪ್ರಕಾಶಿಸುತ್ತ 'ವೇದಾಂತ' ಎನಿಸಿದವು. ಸಮಸ್ತವೇದಾಂತ-ಉಪನಿಷತ್ತುಗಳ ಗುರಿಯೂ ಫಲವೂ ಒಂದೇ ಎಂಬುದು ವೇದವ್ಯಾಸಮಹರ್ಷಿಗಳ ನಿರ್ಣಯ. ಒಂದೇ ಮರದ ಹೂ ಮತ್ತು ಹಣ್ಣುಗಳಲ್ಲಿ ಸಮಾನವಾದ ಗುಣವೂ ಬಣ್ಣವೂ ರುಚಿಯೂ ಆಕಾರವೂ ಇರುವಂತೆ ವಿವಿಧ ಉಪನಿಷತ್ತುಗಳ ಶಬ್ದ ಅರ್ಥಗಳಲ್ಲೂ ಹೋಲಿಕೆಗಳಿವೆ. ಜಜ್ಜಿಹೋದ ಒಂದು ಹಣ್ಣಿನ ಆಕಾರ ರುಚಿ ಮುಂತಾದುವನ್ನು ಊಹಿಸಿ ನಿರ್ಣಯಿಸಲು ಆ ಹಣ್ಣು ಬಿದ್ದಿರುವೆಡೆಯ ಮರ, ಆ ಮರದ ಸ್ವಭಾವ, ಅದರ ಮತ್ತೊಂದು ಒಳ್ಳೆಯ ಹಣ್ಣು ಅದರ ಆಕಾರ ರುಚಿ ಮುಂತಾದುವು ಬಹುಮುಖ್ಯ ಸಹಾಯಕಗಳಾಗುವಂತೆ ಗುರುಮುಖವಾದ ಅಧ್ಯಯನ ಸಂಪ್ರದಾಯಗಳು ನಷ್ಟವಾಗುತ್ತಿರುವ ಈ ಕಾಲದಲ್ಲಿ ಒಂದು ಉಪನಿಷತ್ತಿನ ಅರ್ಥನಿರ್ಣಯಕ್ಕೆ ಇತರ ಉಪನಿಷತ್ತುಗಳ ವೇದಶಾಖೆಗಳ ಸಹಾಯವೂ ಅವಶ್ಯಕವಾಗಿದೆ ಎನ್ನಲಡ್ಡಿಯಿಲ್ಲ. ಈಶಾವಾಸ್ಯಕ್ಕಾಗುವ ಇಂತಹ ಸಹಾಯವನ್ನು ಇಲ್ಲೇ ಕೊಡಲು ಸಾಧ್ಯವಿಲ್ಲ. ಸಾಧ್ಯವಿದ್ದಷ್ಟು ಈ ಪರಿಶಿಷ್ಟದ ಭಾಗಗಳಲ್ಲೂ ವಿವಿಧ ಭಾಷ್ಯವಿವರಣೆಗಳಲ್ಲೂ ತಿಳಿಸಲಾಗಿದೆ. ಸಂಶೋಧಕರು ಈವರೆಗಿನ ಪರಿಶಿಷ್ಟಭಾಷ್ಯಗಳನ್ನು ಗಾಢವಾಗಿ ಅಧ್ಯಯನಮಾಡಿ ಸಮಾಜಕ್ಕೆ ಅತ್ಯವಶ್ಯಕವಾದ ಉಪನಿಷತ್ ವಿಚಾರಗಳನ್ನು ವಿವೇಕದಿಂದ ಸುಲಭವಾಗಿ ತಿಳಿಸಲು ಅನುಕೂಲವಾಗುವುದೆಂಬ ಒಂದೇ ದೃಷ್ಟಿಯಿಂದ ಈ ಮೊದಲನೆಯ ಪರಿಶಿಷ್ಟಭಾಗವನ್ನು ಇಷ್ಟು ವಿಸ್ತಾರವಾಗಿ ಇಲ್ಲಿ ನಿರೂಪಿಸಲಾಯಿತು. ಇದು ಈಶಾವಾಸ್ಯದ ಅಧ್ಯಯನದಲ್ಲಿ ಶ್ರದ್ಧೆ ಇರುವ ಸಜ್ಜನರಿಗೆ ನಮ್ಮ ಅತ್ಯಲ್ಪವಾದ ಕಾಣಿಕೆ. ಇದನ್ನವರು ಸ್ವೀಕರಿಸಿದರೆ ನಾವು ಧನ್ಯರು.



# ಪರಿಶಿಷ್ಟ ಎರಡು

## ಉಪಯುಕ್ತಪದಸೂಚಿ

# ಪರಿಶಿಷ್ಟ ಮೂರು

## ನ್ಯಾಯಸೂಚಿ



  

# ಪರಿಶಿಷ್ಟ ನಾಲ್ಕು

## ವ್ಯಕ್ತಿಸೂಚಿ

# ಪರಿಶಿಷ್ಟ ಐದು

## ಪ್ರಮಾಣವಾಕ್ಯ ಅಕಾರಾದಿಸೂಚಿ

# ಪರಿಶಿಷ್ಟ ಆರು

## ಗ್ರಂಥಕರ್ತರ ಬಗ್ಗೆ ವಿವರಣೆ

### ೧. ಈಶಾವಾಸ್ಯಭಾಷ್ಯಕಾರರು

## ೧. ವೇದಾಂತಾಚಾರ್ಯ[1]

**ಹೆಸರು :-** ವೇಂಕಟನಾಥ, ವೇಂಕಟಾಚಾರ್ಯ, ವೆಂಕಟೇಶ, ವೇಂಕಟಗುರು, ವೇಂಕಟನಾಯಕ, ವೇದಾಂತ ದೇಶಿಕ, ಶ್ರುತ್ಯನ್ತದೇಶಿಕ, ಶ್ರುತಿಮಂಕಂಟಗುರು, ನಿಗಮಾನ್ತಗುರು, ನಿಗಮಾನ್ತಮಹಾ ದೇಶಿಕ, ತೂಪ್ಪಿಲ್‌ಪಿಳ್ಳೈ ಇತ್ಯಾದಿ.

**ಕುಲ, ಗೋತ್ರ :-** ವಿಶ್ವಾಮಿತ್ರಗೋತ್ರ, ಆಪಸ್ತಂಬಸೂತ್ರ, ತೈತ್ತಿರೀಯಶಾಖೆ, ವಡಮಕುಲ, ತೂಪ್ಪಿಲ್ ಮನೆತನ.

**ಬಂಧು ಮಿತ್ರರು :-** ಅಜ್ಜ-ಪುಂಡರೀಕಾಕ್ಷಯಜ್ವ, ತಂದೆ-ಅನಂತಸೋಮಯಾಜಿ, ತಾಯಿ-ತೋತಾರಾಂಬಾ, ಪುತ್ರ-ವರದಾಚಾರ್ಯ ಅಥವಾ ನಾಯನಾರ್, ಸೋದರಮಾವ-ಕಿಡಾಂಬಿ ಅಪ್ಪಿಳ್ಳಾರ್, ಸೋದರತ್ತೆ ಮಕ್ಕಳು-ಪಿಳ್ಳೈಲೋಕಾಚಾರ್ಯ ಮತ್ತು ಅಳಹಿಯಮಣವಾಳಪ್ಪೆರುಮಾಳ್-ನಾಯನಾರ್, ಆಚಾರ್ಯ-ಸೋದರಮಾವ ಅಪ್ಪಿಳ್ಳಾರ್, ಪರಮಾಚಾರ್ಯ-ನಡಾದೂರ್ ಅಮ್ಮಾಳ್, ಪ್ರಧಾನಶಿಷ್ಯರು-ಪುತ್ರರಾದ ನಾಯನಾರ್ ಮತ್ತು ಬ್ರಹ್ಮತಂತ್ರಸ್ವತಂತ್ರ ಜೀಯರ್, ಪ್ರಶಿಷ್ಯ-ಪ್ರತಿವಾದಿಭಯಂಕರಂ ಅಣ್ಣನ್, ಮಿತ್ರರು-ವಿದ್ಯಾರಣ್ಯ, ಅಕ್ಷೋಭ್ಯ-ತೀರ್ಥ ಇತ್ಯಾದಿ.

**ಕಾಲ :-** ಅವತಾರ :- ವಿಭವಸಂವತ್ಸರ, ಕನ್ಯಾಮಾಸ, ಶ್ರವಣನಕ್ಷತ್ರ, ಭಾದ್ರಪದ ಶುಕ್ಲದಶಮಿ ಕ್ರಿಸ್ತಶಕ 1268.

ಪರಮಪದ :- ಸೌಮ್ಯ ಸಂವತ್ಸರ, ಕಾರ್ತಿಕಪೂರ್ಣಿಮಾ, ಕ್ರಿಸ್ತಶಕ 1369.

ಜೀವಿತಾವಧಿ :- 101 ವರ್ಷ, 2 ತಿಂಗಳು, ಐದು ದಿವಸ.

**ದೇಶ :-** ಹುಟ್ಟೂರು-ಕಾಂಚೀಪುರದ ತೂಪ್ಪಿಲ್ ಅಗ್ರಹಾರ. ಪರಮಪದಿಸಿದ ಸ್ಥಳ-ಶ್ರೀರಂಗ, ವಾಸ- ಕಾಂಚಿ, ತಿರುವಹೀಂದ್ರಪುರ, ಸಶ್ಯಾಗಾಲ (ಸತ್ಯಮಂಗಲ), ಮೇಲುಕೋಟೆ, ಶ್ರೀರಂಗ ಇತ್ಯಾದಿ.

**ಬಿರುದು :-** ಕವಿತಾರ್ಕಿಕಸಿಂಹ, ಸರ್ವತಂತ್ರಸ್ವತಂತ್ರ, ವೇದಾಂತಾಚಾರ್ಯ, ಶತಘಂಟಾಸಂರಥ.

**ಜೀವನ ಘಟನೆಗಳು :-** 20 ನೇ ವಯಸ್ಸಿಗೆ ಸರ್ವಶಾಸ್ತ್ರ ಅಧ್ಯಯನ. ಗರುಡ ಮತ್ತು ಹಯಗ್ರೀವೋಪಾಸನೆ. ಹಾವಾಡಿಗ, ಮಂತ್ರವಾದಿ, ಶಿಲ್ಪಿ ಮೊದಲಾದವರನ್ನು ಜಯಿಸಿದುದು. ತಿರುವಹೀಂದ್ರಪುರದಲ್ಲಿ ಸ್ವಯಂ ಬಾವಿಕಟ್ಟಿದ್ದು. ಆಂಧ್ರದ ಶಿಂಗಭೂಪಾಲನಿಗೆ ಉಪದೇಶ. ಅಗಸೆಮರಕ್ಕೆ ಮೋಕ್ಷ ದಯಪಾಲಿಸಿದುದು. ವೈರಾಗ್ಯ ಜೀವನ. ಭಾರತಾದ್ಯಂತ ಯಾತ್ರೆ. ಶ್ರುತಪ್ರಕಾಶಿಕಾ ರಕ್ಷಣೆ. ಕ್ರಿಸ್ತಶಕ 1347 ರಲ್ಲಿ ರಂಗನಾಥನ ಪುನಃಪ್ರತಿಷ್ಠೆ. ಕ್ರಿಸ್ತಶಕ 1368 ರಲ್ಲಿ ಸ್ವಯಂ ತನ್ನ ಪಂಚಲೋಹ ವಿಗ್ರಹಮಾಡಿ ತಿರುವಹೀಂದ್ರಪುರದಲ್ಲಿ ಪ್ರತಿಷ್ಠೆ. ಸ್ವಯಂಶಾಪದಿಂದ ಮೊಮ್ಮಕ್ಕಳಿಲ್ಲದೆ ವಂಶನಾಶ.

---

1. ಆಧಾರ ಗ್ರಂಥಗಳು :- ಪೆರಿಯತಿರುಮುಡಿ ಅಡೈವು. ಗುರುಪರಂಪರಾಪ್ರಭಾವ. ವೇದಾಂತದೇಶಿಕರು. ನಿಗಮಾಂತಮಹಾ ದೇಶಿಕರು. ಸಂಕಲ್ಪಸೂರ್ಯೋದಯದ ಉಪೋದ್ಘಾತ-ಅಡ್ಯಾರ್ ಲೈಬ್ರರಿಪ್ರಕಟಿತ. ನಾವಲ್ಪಾಕಂ ಯಜ್ಞವರಾಹಾಚಾರ್ಯರ ಅಭಿಪ್ರಾಯ. ವರವರಮುನಿಗಳ ಪ್ರಮಾಣಸಂಗ್ರಹ.

ಮಹಿಮೆ :- ಇವರು ಸಾಕ್ಷಾತ್ ತಿರುಪತಿ ವೆಂಕಟೇಶಸ್ವಾಮಿಯ ಅಥವಾ ಅವರ ಘಂಟೆಯ ಅಂಶ.

ಇವರ ಗ್ರಂಥಗಳು :-

1. ಸ್ತೋತ್ರಗಳು

| | |
|---|---|
| ಹಯಗ್ರೀವಸ್ತೋತ್ರ | ನ್ಯಾಸತಿಲಕ |
| ದೇವನಾಯಕಪಂಚಾಶತ್ | ರಘುವೀರಗದ್ಯ |
| ಗೋಪಾಲವಿಂಶತಿ | ಶ್ರೀಸ್ತುತಿ |
| ದೇಹಳೀಶಸ್ತುತಿ | ಭೂಸ್ತುತಿ |
| ಯಥೋಕ್ತಕಾರಿಸ್ತೋತ್ರ | ನೀಳಾಸ್ತುತಿ |
| ಕಾಮಾಸಿಕಾಷ್ಟಕ | ಗೋದಾಸ್ತುತಿ |
| ಅಷ್ಟಭುಜಾಷ್ಟಕ | ಸುದರ್ಶನಾಷ್ಟಕ |
| ಶರಣಾಗತಿದೀಪಿಕೆ | ಷೋಡಶಾಯುಧಸ್ತೋತ್ರ |
| ಪರಮಾರ್ಥಸ್ತುತಿ | ಗರುಡದಂಡಕ |
| ದಯಾಶತಕಂ | ಗರುಡಪಂಚಾಶತ್ |
| ವರದರಾಜಪಂಚಾಶತ್ | ದಿವ್ಯದೇಶಮಂಗಳಾಶಾಸನಪಂಚಕ |
| ಭಗವದ್ಧ್ಯಾನಸೋಪಾನ | ಯತಿರಾಜಸಪ್ತತಿ |
| ದಶಾವತಾರಸ್ತೋತ್ರ | ಲೋಕಾರ್ಯಪಂಚಾಶತ್ |
| ಅಭೀತಿಸ್ತವ | ಗುರುರತ್ನಾವಳಿ (ಲುಪ್ತ) |
| ನ್ಯಾಸದಶಕ | ಅಚ್ಚು ಅಸಲಅಂ |
| ನ್ಯಾಸವಿಂಶತಿ | (ಪ್ರಾಕೃತಭಾಷೆ) (ಅಚ್ಯುತಶತಕಂ) ಇತ್ಯಾದಿ |

2. ಕಾವ್ಯನಾಟಕಗಳು

| | |
|---|---|
| ಯಾದವಾಭ್ಯುದಯ | ವೈರಾಗ್ಯಪಂಚಕ |
| ಹಂಸಸಂದೇಶ | ಯಮಕರಹಸ್ಯ (ಲುಪ್ತ) |
| ಸುಭಾಷಿತನೀವೀ | ಯಮಕರತ್ನ (ಲುಪ್ತ) |
| ಪಾದುಕಾಸಹಸ್ರ | ಮುಕ್ತಕಶ್ಲೋಕಗಳು |
| ಸಮಸ್ಯಾಸಹಸ್ರೀ (ಲುಪ್ತ) | ಶಾಸನಪದ್ಯಗಳು |
| ಸಂಕಲ್ಪಸೂರ್ಯೋದಯ ನಾಟಕ | ತನಿಯನ್ ಪದ್ಯಗಳು, ಇತ್ಯಾದಿ. |

3. ಸಂಗ್ರಹಗಳು

| | |
|---|---|
| ಭೂಗೋಳನಿರ್ಣಯ | ವೈಶ್ವದೇವಕಾರಿಕೆ |
| ಯಜ್ಞೋಪವೀತಪ್ರತಿಷ್ಠೆ | ದ್ರಮಿಡೋಪನಿಷತ್ತಾತ್ಪರ್ಯರತ್ನಾವಳಿ |
| ಆರಾಧನಕ್ರಮ | ದ್ರಮಿಡೋಪನಿಷತ್ಸಾರ |
| | ಹರಿದಿನತಿಲಕ? ಇತ್ಯಾದಿ. |

4. ವ್ಯಾಖ್ಯಾನಗಳು

ನ್ಯಾಸವಿಂಶತಿ ವ್ಯಾಖ್ಯಾನ

ಸರ್ವಾರ್ಥಸಿದ್ಧಿ (ತತ್ತ್ವಮುಕ್ತಾಕಲಾಪ ವ್ಯಾಖ್ಯಾನ).

| | |
|---|---|
| ತಾತ್ಪರ್ಯಚಂದ್ರಿಕೆ (ಗೀತಾಭಾಷ್ಯ ಟೀಕೆ) | ಗೀತಾರ್ಥಸಂಗ್ರಹರಕ್ಷೆ |
| ಭೂಗೋಳನಿರ್ಣಯವ್ಯಾಖ್ಯಾನ | |
| ತತ್ವಟೀಕೆ (ಶ್ರೀಭಾಷ್ಯವ್ಯಾಖ್ಯಾನ) | ಮೀಮಾಂಸಾಭಾಷ್ಯ (ಲುಪ್ತ) |
| ಈಶೋಪನಿಷದ್ವ್ಯಾಖ್ಯಾನ | ಸ್ತೋತ್ರಭಾಷ್ಯ (ರಹಸ್ಯರಕ್ಷೆ. 1) |
| ವೇದಾರ್ಥಸಂಗ್ರಹವ್ಯಾಖ್ಯಾನ (ಭಾಗಶಃ ಲುಪ್ತ) | ಗದ್ಯಭಾಷ್ಯ(ರಹಸ್ಯರಕ್ಷೆ. 2) |
| | ಚತುಃಶ್ಲೋಕೀಭಾಷ್ಯ (ರಹಸ್ಯರಕ್ಷೆ. 3) |
| | ಹರಿದಿನತಿಲಕ? ವ್ಯಾಖ್ಯಾನ ಇತ್ಯಾದಿ. |

5. ಶಾಸ್ತ್ರಗ್ರಂಥಗಳು

| | |
|---|---|
| ಪಾಂಚರಾತ್ರರಕ್ಷೆ | ವಾದಿತ್ರಯಖಂಡನ |
| ಸಚ್ಚರಿತ್ರರಕ್ಷೆ | ವೈಖಾನಸತತ್ವಪಕಾಶಿಕೆ |
| ನಿಕ್ಷೇಪರಕ್ಷೆ | ತತ್ವದೀಪಿಕೆ (ಲುಪ್ತ) |
| ನ್ಯಾಯಸಿದ್ಧಾಂಜನ | ಅವಿದ್ಯಾಖಂಡನ (ಲುಪ್ತ) |
| ನ್ಯಾಯಪರಿಶುದ್ಧಿ | ಕುದೃಷ್ಟಿತ್ರಯನಿರಾಸ (ಲುಪ್ತ) |
| ಸೇಶ್ವರಮೀಮಾಂಸೆ | ಶಿಲ್ಪಾರ್ಥಸಾರ (ಲುಪ್ತ) |
| ಮೀಮಾಂಸಾಪಾದುಕೆ | ಪೂರ್ವೋತ್ತರಮೀಮಾಂಸೈಕಕಂಠ್ಯ? |
| ತತ್ವಮುಕ್ತಾಕಲಾಪ | ರಸಭೌಮಾಮೃತ (ಲುಪ್ತ) |
| ಅಧಿಕರಣಸಾರಾವಳಿ | ವೃಕ್ಷಭೌಮಾಮೃತ (ಲುಪ್ತ) |
| ಅಧಿಕರಣದರ್ಪಣ (ಲುಪ್ತ) | ಗೀತಾಭಾಷ್ಯಸಾರ? |
| ಶತದೂಷಣಿ | ಸ್ತೇಯಾವಿರೋಧ (ಲುಪ್ತ) ಇತ್ಯಾದಿ. |
| ಚಕಾರಸಮರ್ಥನ (ಲುಪ್ತ) | |

6. ತಮಿಳ್‌ಗ್ರಂಥಗಳು

| | |
|---|---|
| ಸಂಪ್ರದಾಯಪರಿಶುದ್ಧಿ | ಅಂಜಲಿವೈಭವ |
| ತತ್ವಪದವಿ | ಪ್ರಧಾನಶತಕ |
| ರಹಸ್ಯಪದವಿ | ಉಪಕಾರಸಂಗ್ರಹ |
| ತತ್ವನವನೀತ | ಸಾರಸಂಗ್ರಹ |
| ರಹಸ್ಯನವನೀತ | ವಿರೋಧಪರಿಹಾರ |
| ತತ್ವಮಾತೃಕೆ | ಮುನಿವಾಹನಭೋಗ |
| | (ಅಮಲನಾದಿಪಿರಾನ್‌ವ್ಯಾಖ್ಯಾನ) |
| ರಹಸ್ಯಮಾತೃಕೆ | ಮಧುರಕವಿಹೃದಯ(ಲುಪ್ತ) |
| ತತ್ವಸಂದೇಶ | ಪರಮಪದಸೋಪಾನ |
| ರಹಸ್ಯಸಂದೇಶ | ಪರಮತಭಂಗ 1 |
| ರಹಸ್ಯಸಂದೇಶವಿವರಣ | ಪರಮತಭಂಗ 2 |
| ತತ್ವರತ್ನಾವಳಿ | ಹಸ್ತಿಗಿರಿಮಾಹಾತ್ಮ್ಯ 1 |
| ತತ್ವರತ್ನಾವಳೀಸಂಗ್ರಹ | ಹಸ್ತಿಗಿರಿಮಾಹಾತ್ಮ್ಯ 2 |

ರಹಸ್ಯರತ್ನಾವಳಿ
ರಹಸ್ಯರತ್ನಾವಳೀಹೃದಯಂ
ತತ್ವತ್ರಯಂ
ತತ್ವತ್ರಯಚುಳಕ
ಸಾರಸಂಕ್ಷೇಪ
ಸಾರದೀಪ
ರಹಸ್ಯತ್ರಯಸಾರ
ಸಾರಸಾರ
ಅಭಯಪ್ರದಾನಸಾರ
ತತ್ವಶಿಖಾಮಣಿ
ರಹಸ್ಯಶಿಖಾಮಣಿ
ದ್ವಯಚ್ಚುರುಕ್ಕು
ಚರಮಶ್ಲೋಕಚ್ಚುರುಕ್ಕು
ಗೀತಾರ್ಥಸಂಗ್ರಹ
ಮುಮ್ಮಣಿಕ್ಕೋವೈ
ಪಂದುಪ್ಪಾ (ಲುಪ್ತ)
ಕಳಲ್‌ಪಾ (,,)
ಅಮ್ಮಾನಿಪ್ಪಾ (,,)

ಗುರುಪರಂಪರಾಸಾರ
ಅಮೃತರಂಜಿನಿ
ಅಧಿಕಾರಸಂಗ್ರಹ
ಅಮೃತಾಸ್ವಾದಿನಿ
ಪರಮಪದಭ್ಪಂಗ (ಲುಪ್ತ)
ಅಡೈಕ್ಕಲಪ್ಪತ್ತು
ಅರ್ಥಪಂಚಕ
ಶ್ರೀವೈಷ್ಣವದಿನಚರಿ
ತಿರುಚ್ಚಿನ್ನಮಾಲೈ
ಪನ್ನಿರುನಾಮಂ
ತಿರುಮಂತ್ರಚ್ಚುರುಕ್ಕು
ಆಹಾರನಿಯಮ
ಪ್ರಬಂಧಸಾರ
ಯಾದವಗಿರಿಮಹಾತ್ಮ್ಯ?
ನಿಗಮಪರಿಮಳ?
ಊಶಲ್‌ಪಾ (ಲುಪ್ತ)
ಏಶಲ್‌ಪಾ (,,)
ನವರತ್ನಮಾಲೆ ಇತ್ಯಾದಿ.

## ೨. ರಾಮಾನಂದ[1]

**ಬಿರುದು :–** 'ವಾದೀಭಪಂಚಾನನ' 'ವೈರಾಗ್ಯವಾರಿಧಿ.'

**ಕುಲಗೋತ್ರ :–** ಬೋಧಾಯನಶ್ರೀವೈಷ್ಣವಸಂಪ್ರದಾಯ, ವಿದ್ಯಾಗುರು ಮತ್ತು ಸನ್ಯಾಸದೀಕ್ಷಾಗುರು–ರಾಘವಾನಂದ, ಗುರುಪರಂಪರೆಯಲ್ಲಿ ರಾಮ, ಸೀತೆ, ಚತುರ್ಮುಖ, ವಸಿಷ್ಠ, ಶಕ್ತಿ, ಪರಾಶರ, ವ್ಯಾಸ, ಶುಕ, ಬೋಧಾಯನ, ಬೌಧಾಯನಪುರುಷೋತ್ತಮಾಚಾರ್ಯರಾದ ಮೇಲೆ ಇಲ್ಲಿಂದ ಹದಿಮೂರನೆಯ ಪಟ್ಟ ಇವರದು. ಶಿಷ್ಯಪ್ರಶಿಷ್ಯರು–ಶ್ರೀಕೃಷ್ಣದಾಸ, ಶ್ರೀನಾಭಸ್ವಾಮಿ, ಗೋಸ್ವಾಮಿತುಳಸೀದಾಸ, ರೈದಾಸ, ಮೀರಾಬಾಯಿ ಇತ್ಯಾದಿ. ಇಷ್ಟದೈವ ಶ್ರೀರಾಮಚಂದ್ರ ಮತ್ತು ಸೀತಾದೇವಿ.

**ಕಾಲ :–** ಕ್ರಿ. ಶ. 1300. ಅಥವಾ ಕ್ರಿ. ಶ. 15ನೆಯ ಶತಮಾನ.

**ದೇಶ :–** ಹುಟ್ಟೂರು-ಪ್ರಯಾಗ. ವಾಸ-ಕಾಶಿಯ ಪಂಚಗಂಗಾಘಾಟ್.

**ಸಾಧನೆಗಳು :–** ಪ್ರಸ್ಥಾನತ್ರಯಭಾಷ್ಯರಚನೆ, ಭಾರತಾದ್ಯಂತಸಂಚಾರ. ಶ್ರೀಸಂಪ್ರದಾಯದ ರಕ್ಷಣೆ, ಪ್ರಚಾರ.

---

1. ಆಧಾರ ಗ್ರಂಥ: ಶ್ರೀರಾಮಾನಂದ ಗ್ರಂಥಮಾಲಾ ಕುಸುಮ ಮೂರು. ರಾಮಾನಂದ ವೇದಾಂತಪ್ರಚಾರಸಮಿತಿ ಅಹಮದಾಬಾದ್ 22. ; ಕ್ರಿ.ಶ. 1969.

ಮಹಿಮೆ :– ಇವರು ಸಾಕ್ಷಾತ್ ಶ್ರೀರಾಮನ ಅಪರಾವತಾರ.

ಕೃತಿಗಳು :– ದಶೋಪನಿಷದ್‌ಭಾಷ್ಯ, ಬ್ರಹ್ಮಸೂತ್ರಭಾಷ್ಯ, ಗೀತಾಭಾಷ್ಯ, ಶ್ರೀವೈಷ್ಣವಮತಾಬ್ಜಭಾಸ್ಕರ ಇತ್ಯಾದಿ.

## ೩. (ಶ್ರೀವತ್ಸ) ನಾರಾಯಣಮುನಿ. 3

ಹೆಸರು :– ಶ್ರೀಮನ್ನಾರಾಯಣಮುನಿ.

ಕುಲಗೋತ್ರ :– ಶ್ರೀವತ್ಸಗೋತ್ರ.

ಪಟ್ಟ :– ಅಹೋಬಿಲಮಠದ ಹದಿನಾಲ್ಕನೆಯ ಪೀಠಾಧಿಪತಿ.

ಕಾಲ :– ಕ್ರಿ. ಶ. 17ನೆಯ ಶತಮಾನ. ಪಟ್ಟವಹಿಸಿದ್ದ ಅವಧಿ- ಕ್ರಿ. ಶ. 1678 ರಿಂದ 1686.

ದೇಶ :– ಅಹೋಬಿಲ.

ಕೃತಿ :– 'ಆಚಾರ್ಯಗುಣಾದರ್ಶ' ಎಂಬ ಅಹೋಬಿಲಮಠ ಗುರುಪರಂಪರಾಪ್ರಭಾವ ಗ್ರಂಥ.

ವಿಚಾರ :– ಕೂರನಾರಾಯಣಮುನಿ ೧, ನಾರಾಯಣಮುನಿ ೨ ಮತ್ತು ೪ ರಲ್ಲಿ ವಿಚಾರ ಮುಂದೆ ಗಮನಿಸಿ

## (ಶ್ರೀವತ್ಸ) ನಾರಾಯಣಮುನಿ. 4

ಹೆಸರು :– ಶ್ರೀಮನ್ನಾರಾಯಣಮುನಿ.

ಕುಲಗೋತ್ರ :– ಶ್ರೀವತ್ಸಗೋತ್ರ.

ಪಟ್ಟ :– ಅಹೋಬಿಲಮಠದ ಇಪ್ಪತ್ತೆರಡನೆಯ ಪೀಠಾಧಿಪತಿ.

ಕಾಲ :– ಕ್ರಿ. ಶ. 18ನೆಯ ಶತಮಾನ. ಪಟ್ಟವಹಿಸಿದ್ದ ಅವಧಿ– ಕ್ರಿ. ಶ. 1758ರಲ್ಲಿ ಏಳು ತಿಂಗಳು ಮಾತ್ರ.

ದೇಶ :– ಅಹೋಬಿಲ.

ಕೃತಿ :– ಅಷ್ಟಶ್ಲೋಕೀ ವ್ಯಾಖ್ಯಾನ
ಆರಾಧನಸಂಗ್ರಹಕಾರಿಕೆ
ನ್ಯಾಸವಿಂಶತಿವ್ಯಾಖ್ಯಾನ
ಶ್ರೀಭಾಷ್ಯಭಾವಪ್ರಕಾಶಿಕೆ
ಗೀತಾರ್ಥಸಂಗ್ರಹವಿಭಾಗ ಇತ್ಯಾದಿ.

ವಿಶೇಷ :– ಇವರು ಪ್ರಸಿದ್ಧವಾದ ಎಲ್ಲ ಶಾಸ್ತ್ರಗ್ರಂಥಗಳಿಗೂ ವ್ಯಾಖ್ಯಾನ ಬರೆದಿರುವುದಾಗಿ ಇವರ ತನಿಯನ್ ಪದ್ಯದಲ್ಲಿ ಉಲ್ಲೇಖವಿದೆ.[1]

ವಿಚಾರ :– ಈಶಾವಾಸ್ಯಪ್ರಕಾಶಿಕೆ ಬರೆದ ನಾರಾಯಣಮುನಿ ಯಾರು? ಈ ಗ್ರಂಥಕರ್ತರು ತಮ್ಮ ಹೆಸರು "ಶ್ರೀವತ್ಸಾಂಕ" ಎಂದೂ, ವೇದಾಂತಾಚಾರ್ಯರ ಭಾಷ್ಯವನ್ನು ಬಾಲಕರೂ ಅರಿಯಲು ಅದನ್ನೇ

---

ಆಧಾರಗ್ರಂಥಗಳು:-

1. ಉಭಯವೇದಾಂತಗ್ರಂಥಮಾಲಾ, ಸಂಸ್ಕೃತಸರ 1, ಅಹೋಬಿಲಮಠವೈಭವ, ಸಂಧ್ಯಾಭಾಷ್ಯಂ ಇತ್ಯಾದಿ.

ಅನುಸರಿಸಿ ಈ ವಿವರಣೆ ಬರೆಯುತ್ತಿರುವುದಾಗಿಯೂ ತಿಳಿಸಿರುವರು. ಮಂಗಳಪದ್ಯದಲ್ಲಿ ಶ್ರೀರಂಗನಾಥನನ್ನು ಹೊಗಳಿರುವರು. ಗ್ರಂಥದ ಪಲ್ಲವವಚನ (ಇತಿಶ್ರೀ ಎಂಬ ಕೊನೆಯ ಮಾತು) ಗಳಲ್ಲಿ ಇವರು ಸರ್ವತಂತ್ರ ಸ್ವತಂತ್ರರೆಂದೂ ಇವರ ಹೆಸರು ಶ್ರೀಮನ್ನಾರಾಯಣಮುನೀಂದ್ರರೆಂದೂ ತಿಳಿಯುವುದು. ಗ್ರಂಥದ ಹೆಸರು ಬರೆಯುವಾಗ ಆರಂಭದಲ್ಲಿ ಕೆಲವು ಪ್ರತಿಗಳಲ್ಲಿ ಕೂರನಾರಾಯಣಭಾಷ್ಯ ಎಂದಿರುವುದು.

ಇದೆಲ್ಲವನ್ನೂ ನಾಲ್ಕು ನಾರಾಯಣಮುನಿಗಳ ಚರಿತ್ರೆಗಳೊಡನೆ ವಿಮರ್ಶಿಸಿದಾಗ ನಮಗೆ ಈ ಕೆಳಗಿನ ಅಂಶ ಗಳು ತೋರುತ್ತವೆ.

1) ಕ್ರಿ.ಶ. 12 ನೆಯ ಶತಮಾನದ ಒಂದನೆಯ ನಾರಾಯಣಮುನಿಗಳು ಕ್ರಿ.ಶ.14 ನೆಯ ಶತಮಾನದ ವೇದಾಂತಾಚಾರ್ಯಭಾಷ್ಯವನ್ನು ಅನುಸರಿಸುವುದು ಅಸಂಭವವಾದುದರಿಂದ ಈ ಈಶಾವಾಸ್ಯಪ್ರಕಾಶಿಕೆಯು ಒಂದ ನೆಯ ನಾರಾಯಣಮುನಿಗಳದಲ್ಲ.

2) ಈಶಾವಾಸ್ಯಪ್ರಕಾಶಿಕೆಯಲ್ಲಿರುವ 'ಶ್ರೀವತ್ಸಾಂಕ' ಎಂಬ ಹೆಸರಿಗೆ 'ಶ್ರೀವತ್ಸ' ಎಂಬ ಗೋತ್ರದ ಗುರು ತಿರುವ ವ್ಯಕ್ತಿ ಎಂದರ್ಥವಿಟ್ಟುಕೊಂಡರೆ ಇದು ಕ್ರಿ.ಶ. 15 ನೇ ಶತಮಾನದ ಶಠಮರ್ಷಣಗೋತ್ರದ ಎರಡನೆಯ ನಾರಾಯಣಮುನಿಗಳದೂ ಅಲ್ಲ ಎನ್ನಬೇಕು.

3) ಕ್ರಿ.ಶ.16 ನೆಯ ಶತಮಾನದ ಉಪನಿಷದ್ಭಾಷ್ಯಕಾರರಾದ ವಾತ್ಸ್ಯನಾರಾಯಣಾಚಾರ್ಯರು ಗೃಹಸ್ಥರು. ಅವರು ಸನ್ಯಾಸಿಯಾದರೆನ್ನಲು ಈವರೆಗೆ ಯಾವ ಆಧಾರವೂ ಇಲ್ಲವಾದುದರಿಂದ ಇವರೂ ಈ ಈಶಾವಾಸ್ಯ ಪ್ರಕಾಶಿಕೆ ಬರೆದವರಲ್ಲ ಎನ್ನಬಹುದು.

4) ಕ್ರಿ.ಶ.17,18ನೆಯ ಶತಮಾನದ ನಾರಾಯಣಮುನಿಗಳಿಬ್ಬರೂ ಶ್ರೀವತ್ಸಗೋತ್ರ. ಇವರಿಬ್ಬರಲ್ಲಿ ಯಾರಾದರೊಬ್ಬರು ಪೂರ್ವಾಶ್ರಮದಲ್ಲಿ ಈಶಾವಾಸ್ಯಪ್ರಕಾಶಿಕೆಯನ್ನು ಬರೆದಿರಬಹುದಾಗಿದೆ.

5) ಕೂರತ್ತಾಳ್ವಾರ್ ಮತ್ತು ಅವರ ವಂಶದವರಿಗೆ "ಶ್ರೀವತ್ಸಾಂಕ" ಎಂಬ ಹೆಸರು ಪರಂಪರೆಯಾಗಿ ಇದೆ. ಇವರು "ಕೂರ" ಅಗ್ರಹಾರದವರು. ಒಂದನೆಯವರಾದ ಕೂರನಾರಾಯಣಮುನಿಗಳೂ ಇದೇ ಅಗ್ರಹಾರದವರು. ಎರಡನೆಯವರಾದ ಶ್ರೀಮನ್ನಾರಾಯಣಮುನಿಗಳು ಒಂದನೆಯವರ ಗ್ರಂಥಗಳಂತಹ ಗ್ರಂಥಗಳನ್ನೇ ಬರೆದು ಮಂತ್ರ ವಾದಿಯೂ ಆಗಿದ್ದುದರಿಂದ ನವೀನರು ಇವರಿಬ್ಬರನ್ನೂ ಒಂದಾಗಿ ಭ್ರಮಿಸಲು ಅವಕಾಶವಿದೆ.

ಉದಾ:- ಒಂದನೆಯವರ ನಾರಾಯಣೀಯ ಮಂತ್ರಶಾಸ್ತ್ರ ಗ್ರಂಥವು ಕ್ರಿ.ಶ. 13 ನೆಯ ಶತಮಾನದ ದೂರ್ವಾಸ ಪಂಡಿತನ "ಕಲ್ಪಸಾರಸಮುಚ್ಚಯ" ದಲ್ಲಿ ವ್ಯಾಖ್ಯಾನಸಹಿತ ಉಲ್ಲೇಖವಾಗಿದೆ. ಎರಡನೆಯವರ "ನಾರಾಯಣೀಯ" ಮಂತ್ರಶಾಸ್ತ್ರವು 14 ನೆಯ ಶತಮಾನದ ಆದಿವಣ್‌ಶಠಕೋಪಮಾಮುನಿಗಳ ತನಿಯನ್ ಪದ್ಯದಿಂದ ಆರಂಭವಾಗಿದೆ. ಇಬ್ಬರ ಗ್ರಂಥರಾಶಿಯಲ್ಲೂ ಪುರುಷಕಾರಮೀಮಾಂಸೆ, ಸ್ತೋತ್ರವ್ಯಾಖ್ಯಾನ ಮುಂತಾದ ಒಂದೇ ಹೆಸರಿನ ಗ್ರಂಥಗಳಿವೆ.

6) ಹೀಗೆಯೇ "ಕೂರತ್ತಾಳ್ವಾರ್" "ಶ್ರೀವತ್ಸಾಂಕ" ಎಂಬ ಹೆಸರುಗಳು ಒಬ್ಬರಿಗೇ ಇರುವುದರಿಂದ "ಶ್ರೀವತ್ಸಾಂಕ ನಾರಾಯಣಮುನಿ" ಎಂದರೆ "ಕೂರನಾರಾಯಣಮುನಿ" ಎಂದೇ ನವೀನರು ಭ್ರಮಿಸಿ ವ್ಯವಹರಿಸಲು ಅವಕಾಶವಿದೆ. ಹೀಗಾಗಿ 3,4 ನೆಯ ನಾರಾಯಣಮುನಿಗಳ ಗ್ರಂಥದ ಶೀರ್ಷಿಕೆಗಳಲ್ಲಿ ಕೂರನಾರಾಯಣಮುನಿ ಎಂಬ ಹೆಸರು ಭ್ರಮೆಯಿಂದ ಉಲ್ಲೇಖವಾಗಿರುವ ಸಂಭವವಿದೆ.

7) ಎರಡನೆಯ ನಾರಾಯಣಮುನಿಗಳಿಗೆ ಪೂರ್ವಾಶ್ರಮದಲ್ಲಿ ಕೃಷ್ಣಮಾಚಾರ್ಯ ಎಂಬ ಹೆಸರಿದ್ದು ಅವರು

'ನಂಪಾಕ್ಕಂ' ಅಗ್ರಹಾರದವರೆಂಬ ಉಲ್ಲೇಖವು ಸ್ಪಷ್ಟವಾಗಿದೆ. ಇವರು ಶ್ರೀವತ್ಸಾಂಕರಂತೂ ಅಲ್ಲ.

8) ಆದುದರಿಂದ ಈಶಾವಾಸ್ಯಪ್ರಕಾಶಿಕೆಯು ಒಂದು ಮತ್ತು ಎರಡನೆಯ ನಾರಾಯಣಮುನಿಗಳ ಕೃತಿಯಾಗಲಿ, ಶ್ರೀವತ್ಸನಾರಾಯಣಾಚಾರ್ಯ, ಕೃತಿಯಾಗಲಿ ಅಲ್ಲವೆಂದೂ, ಮೂರು ನಾಲ್ಕನೆಯ ನಾರಾಯಣ ಮುನಿಗಳಲ್ಲೊಬ್ಬರ ಕೃತಿಯಿರಬೇಕೆಂದೂ, ಇವರಿಬ್ಬರಿಗೂ ಕೂರನಾರಾಯಣ ಎಂಬ ಹೆಸರು ಸರ್ವಥಾ ಹೊಂದುವುದಿಲ್ಲವೆಂದೂ ಒಂದು ನಿರ್ಧಾರಕ್ಕೆ ಬರಬಹುದು.

## ೪. ರಂಗರಾಮಾನುಜಮುನಿ[1]

**ಹೆಸರು :-** ರಾಮಾನುಜ, ಶ್ರೀರಂಗರಾಮಾನುಜಮುನಿ.

**ಬಿರುದು :-** "ಚತುಷ್ಷಷ್ಟಿಪ್ರಬಂಧನಿರ್ಮಾತಾ," "ದಶೋಪನಿಷದ್ಭಾಷ್ಯಕಾರ."

**ಕುಲಗೋತ್ರ :-** ಶ್ರೀವತ್ಸಗೋತ್ರ? ಲಕ್ಷ್ಮೀಪುರಶಾಖೆಯ ನಲ್ಲಾನ್ ವಂಶ? ಛಂದಸ್ಸಾಮಶಾಖಾಧ್ಯಾಯಿ.

**ಬಂಧು ಮಿತ್ರರು :-** ವಿದ್ಯಾಗುರು–ವಾತ್ಸ್ಯ ಅನಂತಾಚಾರ್ಯ. ಪರಮಗುರು–ತಾತಾಚಾರ್ಯ. ಸನ್ಯಾಸದೀಕ್ಷಾಗುರು–ಪರಕಾಲಮುನಿ. ಮಿತ್ರರು–ಸುರಪುರಸಂಸ್ಥಾನದ ವೇಂಕಟಾಚಾರ್ಯ.

**ಕಾಲ :-** ಕ್ರಿ.ಶ. 1670 ರಿಂದ 1750 (ಸುಮಾರು)

**ದೇಶ :-** ಹುಟ್ಟೂರು ತಿರುಪತಿ ಇರಬಹುದು. ವಾಸ-ಪ್ರಾಯಶಃ ಕಾಂಚೀಪುರದ ದೀಪಪ್ರಕಾಶಸನ್ನಿಧಿ.

**ಸಾಧನೆಗಳು :-** 64 ಮಹಾಗ್ರಂಥಗಳ ನಿರ್ಮಾಣ, ಸಿದ್ಧಾಂತಪ್ರವಚನ ಇತ್ಯಾದಿ.

**ವಿಚಾರ :-** ಕಾಲ–ದೇಶ–ಕೃತಿಗಳು.

ದಶೋಪನಿಷದ್ಭಾಷ್ಯಕಾರರೆಂದೂ, ಚತುಷ್ಷಷ್ಟಿಪ್ರಬಂಧನಿರ್ಮಾತಾ ಎಂದೂ ಪ್ರಸಿದ್ಧರಾದ ಇವರ ಕಾಲದ ಬಗ್ಗೆ ವಿವಿಧ ಅಭಿಪ್ರಾಯಗಳಿವೆ.

1. ಇವರ ಉಪನಿಷದ್ಭಾಷ್ಯಾದಿ ರಚನೆಗಳನ್ನು ಕಂಡು ಚಂಡಮಾರುತಂ ದೊಡ್ಡಯಾಚಾರ್ಯರು ಶ್ಲಾಘಿಸಿದ್ದರು. ದೊಡ್ಡಯಾಚಾರ್ಯರ ಕಾಲ ಕ್ರಿ.ಶ. 1.2.1543 ರಿಂದ 3.10.1607 ಎಂದು ಅವರ ವಂಶದವರಾದ ಕೆ. ಸಿ. ತಾತಾಚಾರ್ಯರು ತಿಳಿಸಿರುತ್ತಾರೆ.

2. ಇವರು ಜ್ಞಾನಾಬ್ಧಿಬ್ರಹ್ಮತಂತ್ರಸ್ವಾಮಿಗಳ ಶಿಷ್ಯರು[2] (ಜ್ಞಾನಾಬ್ಧಿಸ್ವಾಮಿಯ ಪಟ್ಟದ ಕಾಲ ಕ್ರಿ.ಶ. 1607 ರಿಂದ 1618)

3. ಇವರನ್ನು ಶ್ಲಾಘಿಸಿದವರು ದೊಡ್ಡಯಾಚಾರ್ಯರಲ್ಲ. ಅವರಂತೆಯೇ ಪ್ರತಿವಾದಿಗಳನ್ನು ಜಯಿಸಿ ವಿವಿಧ ಗ್ರಂಥರಚನೆಯಿಂದ ಪ್ರಸಿದ್ಧರಾದ ಸುರಪುರಸಂಸ್ಥಾನದ ವೆಂಕಟಾಚಾರ್ಯರು. ಇವರ ಕಾಲ ಇಂದಿಗೆ

---

ಆಧಾರ ಗ್ರಂಥಗಳು :-

1. ಉಭಯವೇದಾಂತಗ್ರಂಥಮಾಲಾ. ಸಂಸ್ಕೃತಸರ 1. ಉಪೋದ್ಘಾತ. ಪುಟ 7. 8. ಸಂ- ಉ.ತಿ. ವೀರರಾಘವಾಚಾರ್ಯ. ತಿರುಮಲೈ-ತಿರುಪತಿ. ಕ್ರಿ.ಶ. 1948.
2. ಒಂದನೇ ಟಿಪ್ಪಣಿಯಂತೆ ಮತ್ತು 'ಪರಕಾಲಮಠದ ವೈಭವ' ಪರಕಾಲಮಠ, ಮೈಸೂರು, ಕ್ರಿ.ಶ. 1973 ಪುಟ.26,31 .

(ಕ್ರಿ.ಶ.1915) ಸುಮಾರು ಇನ್ನೂರ ಐವತ್ತು ವರ್ಷ ಹಿಂದಿನದಿರಬಹುದು.[1] (ಕ್ರಿ.ಶ.1665)

4. ಇವರು ಪರಕಾಲಸ್ವಾಮಿಗಳಿಂದ ಸನ್ಯಾಸದೀಕ್ಷೆ ಪಡೆದರು. ಇವರ ಆಚಾರ್ಯರು ವಾತ್ಸ್ಯಅನಂತಾಚಾರ್ಯರು. ಈ ಅನಂತಾಚಾರ್ಯರು ಶ್ರೀಶೈಲಪೂರ್ಣವಂಶದ ಜಗದ್ಗುರು ತಾತಾಚಾರ್ಯರ ಶಿಷ್ಯರು.[2] ಪ್ರಸಿದ್ಧರಾದ ಪೆರಿಯಪರಕಾಲಸ್ವಾಮಿಗಳು ತಿರುಮಂಗೈಆಳ್ವಾರವರ ಸ್ವಪ್ನಸೂಚನೆಯಂತೆ "ಪರಕಾಲ" ಎಂಬ ಹೆಸರನ್ನು ಸ್ವಾಮಿಪಟ್ಟದಲ್ಲಿ ಪಡೆದರು. ಇವರ ಕಾಲ ಕ್ರಿ.ಶ. 1626 ರಿಂದ 1737.

5. ತಾತಾಚಾರ್ಯ (ಪಂಚಮತಭಂಜನಂ) ರ ಕಾಲ ಕ್ರಿ.ಶ.1509 ರಿಂದ 1591. ವಾತ್ಸ್ಯಅನಂತಾಚಾರ್ಯರು 'ಅಮ್ಮಾಳ್' ವಂಶ. ರಂಗರಾಮಾನುಜರು ಲಕ್ಷ್ಮೀಪುರದ ತಿರುಮಲೈನಲ್ಲಾನ್‌ರ ವಂಶ.[3]

ಮೇಲ್ಕಂಡ ನಾಲ್ಕು ಅಭಿಪ್ರಾಯಗಳನ್ನು ವಿಮರ್ಶಿಸುವಾಗ ಸ್ವಯಂಗ್ರಂಥಕರ್ತರ ಹೇಳಿಕೆಗೆ ಇರುವಷ್ಟು ಬೆಲೆಗಿಂತ ಆಬಗ್ಗೆ ಇತರರ ಅಭಿಪ್ರಾಯಗಳಿಗೆ ಬೆಲೆ ಕಡಿಮೆ ಎಂಬುದು ಎಲ್ಲರೂ ಒಪ್ಪಬೇಕಾದ ವಿಷಯ. ಜನ್ನಿನಾಬ್ಬಿ ಸ್ವಾಮಿಗಳಿಗೆ "ಪರಕಾಲಸ್ವಾಮಿ" ಎಂಬ ಪ್ರಸಿದ್ಧಿ ಇದ್ದ ಬಗ್ಗೆ ಪ್ರಾಚೀನವಾದ ಉಲ್ಲೇಖಗಳಿಲ್ಲ. 1 ಮತ್ತು 3 ನೆಯ ಅಭಿಪ್ರಾಯಗಳು ಪರಸ್ಪರ ವಿರುದ್ಧವಾಗಿವೆ. 1 ಮತ್ತು 2ನೆಯ ಅಭಿಪ್ರಾಯಗಳಲ್ಲಿರುವ ಕಾಲಗಳು ಬೇರೆ ಬೇರೆಯಾಗಿವೆ. 3 ಮತ್ತು 4 ನೆಯ ಅಭಿಪ್ರಾಯಗಳಿಗೆ ಯಾವ ವಿರೋಧವೂ ಇಲ್ಲ ಮತ್ತು ಕಾಲವೂ ಪ್ರಾಯಶಃ ಒಂದೇ ಘಟ್ಟಕ್ಕೆ ಸೇರುವುದು. ಇದರಂತೆ ರಂಗರಾಮಾನುಜಮುನಿಗಳ ಕಾಲ ಕ್ರಿ.ಶ. 17 ನೆಯ ಶತಮಾನದ ಅಂತಿಮ ಮತ್ತು 18 ನೆಯ ಶತಮಾನದ ಆದಿಮಭಾಗವೆಂದು ಒಪ್ಪಬಹುದಾಗಿ ತೋರುವುದು.

ಇವರ ಗೋತ್ರ ಶ್ರೀವತ್ಸ. ಇವರು ಛಂದೋಗ ಸಾಮವೇದಿಗಳು. ಆದುದರಿಂದಲೇ ಪ್ರಪ್ರಥಮವಾಗಿ ಛಾಂದೋಗ್ಯಭಾಷ್ಯ ಬರೆದಿರುವರು. (ನಲ್ಲಾನ್ ಶ್ರೀವತ್ಸರು ಕೃಷ್ಣಯಜುರ್ವೇದಿಗಳು)

ತಿರುಪತಿ ಇವರ ಹುಟ್ಟೂರು ಇರಬಹುದು ಮತ್ತು ಇವರು ತಿರುಪತಿ ಶ್ರೀನಿವಾಸನ ಭಕ್ತರೆಂಬುದು ಇವರ ಎಲ್ಲ ಗ್ರಂಥಗಳ ಮಂಗಳಪದ್ಯದಿಂದಲೂ ತಿಳಿಯುವುದು. ಪ್ರಾಯಶಃ ಇವರ ವಾಸಸ್ಥಾನ ಕಾಂಚೀಪುರ. ಅಲ್ಲಿ "ದೀಪಪ್ರಕಾಶ" ಎಂಬ ದೇವರ ಸನ್ನಿಧಿಯಲ್ಲಿ ಗ್ರಂಥರಚನಾಮಗ್ನರಾದ ಇವರನ್ನು ಕಂಡು ಸುರಪುರಂ ವೇಂಕಟಾಚಾರ್ಯರು 'ಏನಿದು! ಸಿಹಿಜೇನನ್ನು ಆನಂದವಾಗಿ ಕುಡಿಯುತ್ತಿರುವಿರಲ್ಲ' ಎನ್ನಲು, ಇವರು ತಮ್ಮಂತಹ ಸಾಹಸಿ ವಿದ್ವಾಂಸರು ನೊಣಗಳ ಕಾಟವಿಲ್ಲದಂತೆ ಮಾಡಿರುವುದರಿಂದಲೇ ನಮಗೆ ಈ ಭಾಗ್ಯ' ಎಂದರಂತೆ. (ಅಂದರೆ ರಾಮಾನುಜದರ್ಶನಕ್ಕೆ ಪ್ರತಿವಾದಿಗಳಿಲ್ಲದಂತೆ ಅವರೆಲ್ಲರ ಬಾಯಿಮುಚ್ಚಿಸಿದ ಮಹನೀಯರು ನೀವು. ಹೀಗೆ ಪ್ರತಿಬಂಧಕವಿಲ್ಲದುದರಿಂದ ನಮ್ಮಂತಹ ಯತಿಗಳು ಹೀಗೆ ಏಕಾಂತವಾಗಿ ದರ್ಶನಾರ್ಥಸ್ವಾರಸ್ಯಗಳನ್ನು ಅನುಭವಿಸು

---

1. ಶಾರೀರಕಶಾಸ್ತ್ರಾರ್ಥದೀಪಿಕಾ. ಉಪೋದ್ಘಾತ, ಸಂ.-ವ.ನ. ಕೃಷ್ಣಮಾಚಾರ್ಯ, ಕುಂಭಘೋಣ, ಗೋಪಾಲವಿಲಾಸ ಮುದ್ರಣಾಲಯ. ಕ್ರಿ.ಶ. 1915.
2. ಛಾಂದೋಗ್ಯ ಭಾಷ್ಯದ ಆರಂಭದಲ್ಲಿ ಎಲ್ಲ ಮುದ್ರಣಗಳಲ್ಲೂ ಏಕರೀತಿ ಇರುವ ಸ್ವಯಂಗ್ರಂಥಕರ್ತರ ಮೂರು ಪದ್ಯಗಳು.
ಶ್ರೀಶೈಲಪೂರ್ಣವಂಶಾಬ್ಧಿಕೌಸ್ತುಭಸ್ಯ ಜಗದ್ಗುರೋಃ. ಶ್ರೀಮತಸ್ತಾತಯಾರ್ಯಸ್ಯ ಚರಣೌ ಶರಣಂ ವೃಣೇ.
ಶ್ರೀತಾತಗುರುಸೇವಾಪ್ತವೇದಾನ್ತಯುಗಳಾಶಯಃ. ವಾತ್ಸ್ಯಾನಂತಗುರುಃ ಶ್ರೀಮಾನ್ ಶ್ರೇಯಸೇ ಮೇಽಸ್ತು ಭೂಯಸೇ.
ಯತ್ಸೇವಾವೈಭವಾಲ್ಲಬ್ಧಾ ಮಯಾ ಪರಮಹಂಸತಾ. ತಮಹಂ ಶಿರಸಾ ವಂದೇ ಪರಕಾಲಮುನೀಶ್ವರಮ್.
3. "ರಾಮಾನುಜಸಿದ್ಧಾಂತದರ್ಪಣ" ಹೆಚ್. ಜಿ. ರಾಮಯ್ಯಂಗಾರ್, ಬೆಂಗಳೂರು ಕ್ರಿ. ಶ. 1982.

ತ್ತಿರಲು ಸಾಧ್ಯವಾಯಿತು ಎಂದು ಅಭಿಪ್ರಾಯ)

ಇವರು ತಮ್ಮ ಗ್ರಂಥಗಳಲ್ಲಿ ಪ್ರಾಚೀನವಿದ್ವಾಂಸರ ಪಂಕ್ತಿಯಲ್ಲಿ ದೊಡ್ಡಯ್ಯಾಚಾರ್ಯರನ್ನೂ ಅಪ್ಪಯ್ಯದೀಕ್ಷಿತ ರನ್ನೂ ಉಲ್ಲೇಖಿಸಿರುವರು.

ಇವರ ಗ್ರಂಥಗಳ ಉಲ್ಲೇಖ ಕ್ರಿ. ಶ. 18 ಕ್ಕಿಂತ 19 ನೆಯ ಶತಮಾನದ ವೇದಾಂತಗ್ರಂಥಗಳಲ್ಲಿ ಹೇರಳವಾಗಿ ಸಿಗುತ್ತವೆ.

ಇವರು ಅನುಗ್ರಹಿಸಿರುವ ಗ್ರಂಥಗಳಲ್ಲಿ ಕೆಲವು ಉಪಲಬ್ಧ, ಕೆಲವು ಮುದ್ರಿತ, ಕೆಲವು ಅನುಪಲಬ್ಧವಾಗಿವೆ. ಇವರ ದಶೋಪನಿಷದ್ಭಾಷ್ಯಗಳಲ್ಲಿ ಐತರೇಯಭಾಷ್ಯವು ಮೇಲುಕೋಟೆಯ ಸಂಸ್ಕೃತಮಹಾಪಾಠಶಾಲೆಯಲ್ಲಿ ಏಕೈಕ ಹಸ್ತಪ್ರತಿಯಾಗಿ ಉಳಿದಿದ್ದು, ಈಶಾವಾಸ್ಯಭಾವದೀಪಿಕೆಯೂ ಸಹ ಮೇಲುಕೋಟೆ ಸಂಸ್ಕೃತ ಸಂಶೋಧನ ಸಂಸತ್ತಿನಿಂದ ಸಂಪಾದಿತವಾಗಿದೆ ಮತ್ತು ಮೈಸೂರಿನ ಓರಿಯೆಂಟಲ್ ಲೈಬ್ರರಿಯಲ್ಲಿ ಇದರ ಕನ್ನಡ ಅನುವಾದವೂ ಇದೆ ಎಂಬುದು ಒಂದು ವಿಶೇಷ.

ಈಶಾವಾಸ್ಯೋಪನಿಷತ್ತಿಗೆ ವೇದಾಂತಾಚಾರ್ಯರ ಪ್ರಾಚೀನವಾದಭಾಷ್ಯವೂ, ಸುಬಾಲೋಪನಿಷತ್ತಿಗೆ ಶ್ರುತ-ಪ್ರಕಾಶಿಕಾಚಾರ್ಯರಭಾಷ್ಯವೂ ಇರುವುದರಿಂದ ರಂಗರಾಮಾನುಜರು ಮತ್ತೆ ಇವುಗಳ ಭಾಷ್ಯ ಬರೆಯಲಿಲ್ಲವೆಂಬುದು ಕೆಲವರ ಅನಿಸಿಕೆ. ಹೀಗಾಗುವ ಪಕ್ಷಕ್ಕೆ ಇವರಿಗಿಂತ ಹಿಂದಿನ ಕೂರನಾರಾಯಣರ ತೈತ್ತಿರೀಯಭಾಷ್ಯ, ವಾಧೂಲ ಶ್ರೀನಿವಾಸರ ಛಾಂದೋಗ್ಯಭಾಷ್ಯ, ಮಹಾಚಾರ್ಯರ ಉಪನಿಷನ್ಮಂಗಳದೀಪಿಕೆ, ವಾತ್ಸ್ಯನಾರಾಯಣರ ಶ್ವೇತಾಶ್ವತರ, ಮಾಂಡೂಕ್ಯಭಾಷ್ಯ ಮುಂತಾದವುಗಳಿರುವುದರಿಂದ ಇವರು ಅವುಗಳಿಗೂ ಭಾಷ್ಯ ಮಾಡದಿರಬೇಕಿತ್ತಲ್ಲವೆ ?

ಇವರ ಕೇನಾದ್ಯುಪನಿಷದ್ಭಾಷ್ಯಗಳ ಶೈಲಿಗೆ ಹೊಂದುವ ಶೈಲಿ ಐತರೇಯಭಾಷ್ಯ ಮತ್ತು ಈಶಾವಾಸ್ಯ ಭಾವ ದೀಪಿಕೆಗಳಿಗೆ ಇಲ್ಲವಾದರೂ ' ದಶೋಪನಿಷದ್ಭಾಷ್ಯಕಾರ ' ಎಂಬ ಬಿರುದಿಗೆ ತಕ್ಕ ಕೃತಿಯೂ ಅವಶ್ಯ ಇರಬೇಕಲ್ಲವೆ ? ಐತರೇಯದಲ್ಲಿರುವ ವಿಷಯದ ಶೈಲಿಯೇ ಬೇರೆಯಾದುದರಿಂದ ಭಾಷ್ಯಶೈಲಿಯೂ ಬೇರೆಯಾಗುವ ಸಂಭವವಿದೆ. ಈಶಾ ವಾಸ್ಯಕ್ಕೆ ಅವರ ಭಾವದೀಪಿಕೆಯು ಪೂರ್ವಾಚಾರ್ಯಭಾಷ್ಯಗಳ ಸಾರಸಂಗ್ರಹವಾಗಿರುವುದರಿಂದ ಭಾಷ್ಯದಂತಹ ವಿಸ್ತೃತ ಗಹನ ಶಾಸ್ತ್ರಾರ್ಥಚರ್ಚೆಗಳ ಶೈಲಿ ಇದಕ್ಕಿಲ್ಲದಿರಬಹುದು. ಐತರೇಯಭಾಷ್ಯವನ್ನು ಇವರದೆಂದು ಒಪ್ಪಿಕೊಳ್ಳಲು ಅಡ್ಡಿಯಿಲ್ಲವಾದರೆ ಅದೇ ನ್ಯಾಯದಿಂದ ಈಶಾವಾಸ್ಯಭಾವದೀಪಿಕೆಯನ್ನೂ ಇವರ ಕೃತಿಯೆಂದೇ ಒಪ್ಪಬಹುದಾಗಿ ತೋರುವುದು.

ನೂರೈವತ್ತು ವರ್ಷಗಳಿಗಿಂತ ಹಿಂದಿನ ಉಪನಿಷತ್‌ವ್ಯಾಖ್ಯಾನಕಾರರಾದ ಮಂಗಳಾದ್ರಿಯ ಶ್ರೀಭಾಷ್ಯಂ ರಾಮಾನುಜಾಚಾರ್ಯರು ''ರಂಗರಾಮಾನುಜಮುನಿಗಳು ಪುರುಷಸೂಕ್ತಭಾಷ್ಯವನ್ನು ಬರೆಯದಿರುವುದರಿಂದ ಅವರಿಗಿಂತ ಪ್ರಾಚೀನರ ಪುರುಷಸೂಕ್ತಭಾಷ್ಯವನ್ನನುಸರಿಸಿ ನಾನು ವಿವರಿಸುವೆನು'' ಎಂದು ತಿಳಿಸಿರುವುದನ್ನು ವಿಮರ್ಶಿಸಿದರೆ ಈಗ ಉಪಲಬ್ಧವಾಗಿ ಮುದ್ರಿತವಾಗಿರುವ ರಂಗರಾಮಾನುಜರ ಪುರುಷಸೂಕ್ತವಿವರಣವು ಅವರಿಗೆ ಉಪಲಬ್ಧವಾಗಿರಲಿಲ್ಲ ವೆಂಬಷ್ಟರಿಂದ ಗ್ರಂಥವೇ ಇಲ್ಲವೆಂದು ವಾದಿಸಲಾಗದಲ್ಲವೆ ?

ಇವರ ಕೃತಿಗಳೆಂದು ಈವರೆಗೆ ಉಪಲಬ್ಧವಾಗಿರುವ ಮುದ್ರಿತಗ್ರಂಥಗಳು :—

ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ, ಮಂತ್ರಿಕ, ಅಥರ್ವಶಿಖಾ, ಕೌಷೀತಕೀ, ಶ್ವೇತಾಶ್ವತರ, ಅಗ್ನಿರಹಸ್ಯ, ಪುರುಷಸೂಕ್ತಭಾಷ್ಯಗಳು, ಶ್ರೀಭಾಷ್ಯಮೂಲಭಾವಪ್ರಕಾಶಿಕೆ, ಶ್ರುತಪ್ರಕಾಶಿಕಾಭಾವಪ್ರಕಾಶಿಕೆ, ಶಾರೀರಕಶಾಸ್ತ್ರಾರ್ಥದೀಪಿಕೆ, ವಿಷಯವಾಕ್ಯದೀಪಿಕೆ, ನ್ಯಾಯಸಿದ್ಧಾಂಜನ ಟೀಕೆಗಳು, ತಿರುಪ್ಪಲ್ಲಾಂಡ್, ತಿರುಪ್ಪಾವೈ, ತಿರುವಾಯ್ಮೊಳಿ ಎಂಬ ತಮಿಳ್‌ದಿವ್ಯಪ್ರಬಂಧಗಳ ಸಂಸ್ಕೃತ ಭಾಷಾಂತರಗಳು.

ಅಮುದ್ರಿತ ಗ್ರಂಥಗಳು :— ಕಣ್ಣಿನುಣ್ಶಿರುತ್ತ್ಯಾಂಬುಪ್ಯಾಖ್ಯಾನ, (ಮಹೋಪನಿಷದ್ಭಾಷ್ಯಂ) ರಾಮಾನುಜಸಿದ್ಧಾಂತ ಸಾರಸಂಗ್ರಹ, ತತ್ತ್ವನಿಷ್ಕರ್ಷ, ರಹಸ್ಯತ್ರಯಸಾರತಾತ್ಪರ್ಯಕೌಮುದೀ, ಪ್ರತಿತಂತ್ರಪರಿಷ್ಕ್ರಿಯಾ, ಈಶಾವಾಸ್ಯ ಭಾವದೀಪಿಕಾ ಇತ್ಯಾದಿ.

## ೫. ಶ್ರೀಗೋಪಾಲಾನಂದಸ್ವಾಮಿ

ಹೆಸರು :–ಗೋಪಾಲನಂದಜೀಯೋಗಿರಾಜ. ಪೂರ್ವಾಶ್ರಮದ ಹೆಸರು ಕುಶಾಲಭಟ್ಟ.

ಕುಲ, ಗೋತ್ರ :– ಬ್ರಾಹ್ಮಣ. ಶುಕ್ಲಯಜುರ್ವೇದದ ಮಾಧ್ಯಂದಿನಶಾಖಾಧ್ಯಾಯಿ. ಉದ್ಧವಸಂಪ್ರದಾಯ.

ಬಂಧು-ಮಿತ್ರರು :— ತಂದೆ–ಮುಕುಂದರಾಮ. ತಾಯಿ–ಕುಶಲಾಂಬಾ. ವಿದ್ಯಾಗುರು–ಸಂಬಂಧಿಕರಾದ ಪಂಡಿತರು. ಸನ್ಯಾಸದೀಕ್ಷಾಗುರು–ಸ್ವಾಮಿಸಹಜಾನಂದರು. ಇಷ್ಟದೈವ–ಸ್ವಾಮಿ ನಾರಾಯಣ. ಶಿಷ್ಯರು –ಸದಾಶಿವಭಟ್ಟ ಮುಂತಾದವರು.

ಕಾಲ :– ಅವತಾರ–ಕ್ರಿ. ಶ. 1781, ಮಾಘಶುಕ್ಲಅಷ್ಟಮಿ ಪ್ರಾತಃಕಾಲ. ಸಮಾಧಿ–ಕ್ರಿ ಶ. 1852, ವೈಶಾಖ ಶುಕ್ಲ ಪಂಚಮಿ. ಜೀವಿತಕಾಲ–71 ವರ್ಷ, 2 ತಿಂಗಳು, 27 ದಿವಸ.

ದೇಶ :–ಹುಟ್ಟೂರು-ಗುಜರಾತಿನ " ಇಡಾರ್ " ಪ್ರದೇಶದ " ಟೋರಡಾ " ಗ್ರಾಮ. ಸಮಾಧಿಸ್ಥಳ–" ವಡತಾಲ್ " ನಗರದ ಪುರುಷೋತ್ತಮ ಮಂದಿರ. ಇವರ ಪೂರ್ವಜರು ಉತ್ತರಪ್ರದೇಶದವರು.

ಸಾಧನೆಗಳು :– ಇವರಿಗೆ ಹುಟ್ಟುವಾಗಲೇ ಅನೇಕ ಯೋಗಶಕ್ತಿಗಳಿದ್ದುವು. ಚಿಕ್ಕಂದಿನಲ್ಲೇ ವ್ಯಾಕರಣ, ನ್ಯಾಯ ಮೀಮಾಂಸೆ, ಜ್ಯೋತಿಷ, ವೇದಾಂತ ಇತ್ಯಾದಿ ಸಕಲಶಾಸ್ತ್ರಾಧ್ಯಯನ. ಶಿಷ್ಯರಿಗೆ ಅಧ್ಯಾಪನ, ಯೋಗಾಭ್ಯಾಸ, ಭಕ್ತಿಯಿಂದ ಭಗವತ್ಪೂಜೆ ಇವರ ದಿನಚರಿಯಾಗಿತ್ತು. ದೇವರು ಒಬ್ಬ ಬ್ರಾಹ್ಮಣನ ರೂಪದಲ್ಲಿ ಬಂದು ಇವರನ್ನು " ಜೇತಲ್ " ಪುರದ ಬಳಿ ಕರೆದೊಯ್ದು ತನ್ನ ರೂಪತೋರಿಸಿ ಮಾಯವಾದನಂತೆ. ಜೇತಲ್ ಪುರದಲ್ಲೇ ಬ್ರಹ್ಮವಿದ್ಯೆಯ ಆಚರಣೆ ಮಾಡುತ್ತಿದ್ದು ಕಾಲಾಂತರದಲ್ಲಿ ಬರೋಡಾನಗರಕ್ಕೆ ಪ್ರಯಾಣ ಬೆಳೆಸಿದರು. ಅಲ್ಲಿ ಸದಾಶಿವ ಮುಂತಾದ ಸಜ್ಜನರು ಇವರ ಶಿಷ್ಯರಾದರು. ಇವರು ಹೊರಗಡೆ ಊಟ ಮಾಡುತ್ತಿದ್ದರೆ ಒಳಗೆ ಇಟ್ಟಿದ್ದ ದೇವರ ನೈವೇದ್ಯವು ಮಾಯವಾಗುತ್ತಿತ್ತಂತೆ. ಕೆಲವು ಕಾಲಾನಂತರ ಆಚಾರ್ಯ ಸಹಜಾನಂದರ ಸಹವಾಸ ಸಿಕ್ಕಿ ಇವರು ಸನ್ಯಾಸಿಗಳಾದರು. ಹೀಗೆಯೇ ಒಂದು ಸಲ ಬರೋಡಾ ಪ್ರಾಂತ್ಯದಲ್ಲಿ ಬರಗಾಲ ಬಂದಾಗ ಇವರು ದೇವರ ಪ್ರಾರ್ಥನೆ ಮಾಡುತ್ತಾ ಬಯಲಲ್ಲೇ ನಿಂತಿದ್ದು ಮೂರುದಿನ ಪೂರ್ತಾ ಒಳ್ಳೆಯ ಮಳೆ ಬರಿಸಿದರಂತೆ.

ಭಾವನಗರಕ್ಕೆ ಒಂದು ಸಲ ಒಬ್ಬ ಸಜ್ಜನನ ಬಳಿ ಮಹಾಭಾರತ ಪುಸ್ತಕ ತರಲು ಹೋದಾಗ ಅದನ್ನು ಅವನು ಕೊಡಲು ಒಪ್ಪಲಿಲ್ಲ. ಇವರು ವಿವಿಧ ಐಶ್ವರ್ಯಗಳ ಆಸೆ ತೋರಿಸಿದರಂತೆ. ಆದರೂ ಅವನು ಒಪ್ಪದಿದ್ದಾಗ ಇವರು ದೂರದಿಂದಲೇ ಅವನ ಪೂಜೆಯ ವಿಗ್ರಹ ಹಿಮ್ಮುಖ ವಾಗುವಂತೆ ತಮ್ಮ ಯೋಗಶಕ್ತಿಯಿಂದ ಮಾಡಿದರಂತೆ. ಅವನು ಇವರನ್ನು ಸಾಮಾನ್ಯರಲ್ಲವೆಂದರಿತು ಭಕ್ತಿಯಿಂದ ಪೂಜಿಸಿ ಮಹಾಭಾರತವನ್ನು ಕೊಟ್ಟಿನಲ್ಲದೆ, ತಾನೂ ಶಿಷ್ಯನಾದ. ಸ್ವಾಮಿಗಳು ಶಾಙ್ಗಪುರದಲ್ಲಿ ಆಂಜನೇಯನ ಗುಡಿ ಕಟ್ಟಿಸಿ ವಿಗ್ರಹ ಪ್ರತಿಷ್ಠೆ ಮಾಡಿಸಿ ತಮ್ಮ ಯೋಗಬಲದಿಂದ ಈ ಮೂರ್ತಿಯು ಸ್ವತಃ ಅಟ್ಟಹಾಸ ಮಾಡುವಂತೆ ಮಾಡಿಸಿ ಎಲ್ಲರನ್ನೂ ಚಕಿತಗೊಳಿಸಿದರಂತೆ.

ಈಗಲೂ ಈ ಮೂರ್ತಿಯು ಮಹಿಮಶಾಲಿಯಾಗಿ ವರಪ್ರದವಾಗಿದೆ ಎನ್ನುತ್ತಾರೆ. ಸೂರತ್ ನಗರದಲ್ಲಿ ಪಾರಸಿಯವರೊಬ್ಬರ ಮೂಗ ಹುಡುಗನಿಗೆ ಸ್ವಾಮಿ ನಾರಾಯಣನ ಪ್ರಸಾದರೂಪವಾದ ಬಾಳೆಹಣ್ಣನ್ನು ತಿನ್ನಿಸಿ ಮಾತು ಬರಿಸಿದರು. ಇವರು ವೃದ್ಧಾಪ್ಯದಲ್ಲಿ "ಉಮರೇತ್" ಗ್ರಾಮದಲ್ಲಿ ಜ್ವರಬಂದಂತಾಗಿ ಶಿಷ್ಯಮಂಡಲಿಯೊಡನೆ ಅಲ್ಲಿಂದ ಹೊರಟು "ವಡತಾಲ್" ನಗರಕ್ಕೆ ಬಂದು ಅಲ್ಲಿ ಎಲ್ಲರೂ ನೋಡುತ್ತಿರುವಂತೆಯೇ ಯೋಗಮಹಿಮೆಯಿಂದ ಅಂತರ್ಧಾನವಾದರು. ಇವರು ತಮ್ಮ ಜೀವಿತದಲ್ಲಿ ಅನೇಕ ವಿದ್ವಾಂಸರನ್ನೂ ಸಾಧು ಸನ್ಯಾಸಿಗಳನ್ನೂ ತಯಾರಿಸಿ ದೇಶಕ್ಕೆ ಉಪಕರಿಸಿದ್ದಾರೆ. ಇವರು ಸಂಸ್ಕೃತ ಮಾತ್ರವಲ್ಲದೆ ವಿವಿಧ ಭಾಷೆಗಳಲ್ಲೂ ಜನಸಾಮಾನ್ಯರಿಗಾಗುವಂತೆ ವೇದಾಂತ, ಭಕ್ತಿ, ಪೂಜೆ, ಧರ್ಮ ಮುಂತಾದವಿಷಯಗಳಲ್ಲಿ ಗ್ರಂಥಗಳನ್ನು ಬರೆದಿರುವರು.

ಇವರು "ಜಗತ್ ಪರಮಾತ್ಮಗಳ ಸಂಬಂಧ ; ಶರೀರಿ-ಶರೀರಿಭಾವ" ಎಂಬ ಪರಮವೈದಿಕ ಸಿದ್ಧಾಂತವನ್ನೇ ತಮ್ಮ ಗ್ರಂಥಗಳಲ್ಲಿ ಪೋಷಿಸಿರುವರು. ರಂಗರಾಮಾನುಜಮುನಿಗಳ ಉಪ ನಿಷದ್ಭಾಷ್ಯವು ಶಾಸ್ತ್ರಗಹನವಾಗಿದ್ದು ಗೋಪಾಲಾನಂದರಭಾಷ್ಯ ,ಬಹಳ ಸರಳವಾಗಿಯೂ ಸಹಜವಾಗಿಯೂ ಇರುವುದು. ಹಿಂದುಮುಂದಿನ ವಿಚಾರಗಳಿಗೆ ಪರಸ್ಪರ ಹೊಂದಾಣಿಕೆ ಇರುವುದನ್ನು ಒಪ್ಪುವಂತೆ ತೋರಿಸಿ ಭಾವಾರ್ಥಗಳನ್ನು ರಸವತ್ತಾಗಿ ವ್ಯಾಖ್ಯಾನಿಸಿರುವುದರಿಂದ ಇವರ ಪಾಂಡಿತ್ಯ ಕುಶಲತೆ ಹಾಗೂ ಯೋಗಸಿದ್ಧಿಗಳ ಪ್ರಭಾವ ಇವರ ಗ್ರಂಥಗಳಲ್ಲಿ ಎದ್ದು ಕಾಣುವುದು. ಇವರ ಚರಿತ್ರಾದಿಗಳ ಬಗ್ಗೆ ಸಂಸ್ಕೃತದ ಸತ್ಸಂಗಿ ಜೀವನವೆಂಬ ಸಜ್ಜನ ಚರಿತ್ರಸಂಗ್ರಹರೂಪವಾದ ಗ್ರಂಥದ ಐವತ್ತೈದನೆಯ ಅಧ್ಯಾಯ ನೋಡಿ ತಿಳಿಯಬಹುದು.[1]

ಇವರಗ್ರಂಥಗಳು :—

ಈಶಾದಿದಶೋಪನಿಷದ್ಭಾಷ್ಯಂ (ಸುಬೋಧಿನೀ) ; ಭಗವದ್ಗೀತಾಭಾಷ್ಯಮ್ ; ಬ್ರಹ್ಮಸೂತ್ರದೀಪಿಕಾ ; ಶುಕಾಭಿಪ್ರಾಯಬೋಧಿಕಾ (ಭಾಗವತ ದ್ವಿತೀಯಸ್ಕಂಧವ್ಯಾಖ್ಯಾ) ; ನಿಗೂಢಾರ್ಥಪ್ರಕಾಶಿಕಾ ; (ಭಾಗವತ ದಶಮಸ್ಕಂಧವ್ಯಾಖ್ಯಾ ; ಶ್ರೀಕೃಷ್ಣಾಭಿಪ್ರಾಯಪ್ರಬೋಧಿನೀ (ಶ್ರೀಭಾಗವತೈಕಾದಶಸ್ಕಂಧವ್ಯಾಖ್ಯಾ) ; ಅನ್ವಯಾರ್ಥ ಪ್ರಕಾಶಿಕಾ (ವೇದಸ್ತುತಿವ್ಯಾಖ್ಯಾ) ; ಶ್ರುತ್ಯರ್ಥದೀಪಿಕಾ (ವೇದಸ್ತುತಿವ್ಯಾಖ್ಯಾ) ; ವಿವೇಕದೀಪಃ ; ಭಕ್ತಿಸಿದ್ಧಿಃ ; ಹರಿಭಕ್ತನಾಮರತ್ನಾವಲೀ ; ವಿಷ್ಣುಯಾಗಪದ್ಧತಿಃ ; ಧರ್ಮದೇವಪೂಜಾವಿಧಿಃ ; ಭಕ್ತಿದೇವೀಪೂಜಾವಿಧಿಃ ; ಪುರಾಣೋಕ್ತ ಶ್ರೀಕೃಷ್ಣಪೂಜಾ ; ಹನೂಮತ್ಪೂಜಾವಿಧಿಃ ಇನ್ನೂ ಅನೇಕ ಹಿಂದೀ ಗುಜರಾತೀ ಭಾಷೆಯ ಗ್ರಂಥಗಳು,

---

ಆಧಾರ ಗ್ರಂಥ:—

1. ಈಶಾದಿದಶೋಪನಿಷದ್ಭಾಷ್ಯಂ. ಸಂ.-ಎಂಬಾರ್ ಕೃಷ್ಣಮಾಚಾರ್ಯ, ನಿರ್ಣಯಸಾಗರ ಪ್ರೆಸ್. ಮುಂಬಯಿ, ಕ್ರಿ.ಶ. 1932. ಪ್ರಸ್ತಾವನೆ, ಪುಟ, 39–46 ನೋಡಿ.

## ೬. ಭಾರದ್ವಾಜರಾಮಾನುಜಾಚಾರ್ಯರ್

**ಹೆಸರು** :— ಶ್ರೀಭಾಷ್ಯಂರಾಮಾನುಜಾಚಾರ್ಯ. ದೀಕ್ಷೆಕೊಟ್ಟಗುರು ಇಟ್ಟ ಹೆಸರು ತಿರುವಾಯ್‌ಮೊಳಿಪ್ಪಿಳ್ಳೈ. ಬಾಲ್ಯದ ಹೆಸರು "ರಾಮಾನುಜಯ್ಯ". ವಿದ್ಯಾಗುರುವಿನಿಂದ ಬಂದುದು "ಶ್ರೀಭಾಷ್ಯಂ" ಎಂಬ ಬಿರುದು.

**ಕುಲ, ಗೋತ್ರ** :— ನಿಯೋಗಿ ಬ್ರಾಹ್ಮಣ ಕುಲ, ಭಾರದ್ವಾಜಗೋತ್ರ, ನಂರ್ಲಪಾಟಿ ವಂಶ.

**ಬಂಧುಮಿತ್ರರು** :— ತಂದೆ–ಜಗನ್ನಾಥಾಚಾರ್ಯ. ವಿದ್ಯಾಗುರು–ಶ್ರೀಭಾಷ್ಯಂನರಸಿಂಹಾಚಾರ್ಯ. ದೀಕ್ಷಾಗುರು–ಶ್ರೀವತ್ಸಶ್ರೀನಿವಾಸಾಚಾರ್ಯ.

**ಕಾಲ** :— ಕ್ರಿ. ಶ. 1790 ರಿಂದ 1880 (ಸುಮಾರು)

**ದೇಶ** :— ಹುಟ್ಟೂರು ಮತ್ತು ವಾಸ ಆಂಧ್ರದ ಮಂಗಳಾದ್ರಿ ಕ್ಷೇತ್ರದ ಬಳಿ ಹಳೆಯ ಮಂಗಳಗಿರಿಗ್ರಾಮ.

**ವಿಶೇಷ** :— "ಪುರುಷಸೂಕ್ತ"ಕ್ಕೆ ರಂಗರಾಮಾನುಜಮುನಿಗಳು ಭಾಷ್ಯ ಬರೆದಿಲ್ಲವಾಗಿ ಪೂರ್ವಾಚಾರ್ಯರ ಭಾಷ್ಯವನ್ನೇ ಅನುಸರಿಸಿ ಇದನ್ನು ವಿವರಿಸುತ್ತಿರುವುದಾಗಿ ಇವರು ತಮ್ಮ ತೈತ್ತಿರೀಯ ಭಾಷ್ಯದಲ್ಲಿ ತಿಳಿಸಿರುವರು.[1] ಇವರ ಕುಲದವರು "ವೈಷ್ಣವೇಷ್ಟಿ" ಎಂಬ ಮಹಾಯಾಗವನ್ನು ನಡೆಸಿ ವೈಷ್ಣವದೀಕ್ಷೆ ಪಡೆದರಂತೆ.

**ಕೃತಿಗಳು**:—

- ಪರಮವೈದಿಕಸಿದ್ಧಾಂತ
- ಸರ್ವವೇದಾಂತಸಾರಾರ್ಥ
- ಶಿಷ್ಟಾದ್ವೈತಿಜನಾಚಾರ
- ಶಿಷ್ಟಶ್ರೀವೈಷ್ಣವಾಚಾರ
- ಸೀತಾಕಲ್ಯಾಣ ಸರ್ಗವ್ಯಾಖ್ಯಾನ
- ಶ್ರೀರಾಮಜನನಶ್ಲೋಕ ವ್ಯಾಖ್ಯಾನ
- ಶ್ರೀಕೃಷ್ಣಜನನಶ್ಲೋಕ ವ್ಯಾಖ್ಯಾನ
- ವಿಷ್ಣುಪುರಾಣಪ್ರಥಮಪದ್ಯವ್ಯಾಖ್ಯಾನ
- ಜ್ಯೋತಿಷ ಭಾವಾರ್ಥನಿಧಿ
- ಆಂಧ್ರದೇಶೀಯವಿಪ್ರಚರಿತಂ
- ಉಪಮಾವಾದ
- ದಶೋಪನಿಷತ್ ಪದಾರ್ಥದೀಪಿಕಾ
- ಶ್ರೀವತ್ಸವಂಶತಿಲಕಶ್ಲೋಕವ್ಯಾಖ್ಯಾನ

## ೭. ಶ್ರೀರಂಗಾಚಾರ್ಯ

**ಹೆಸರು** :— ಪುರಿಶೈ ಶ್ರೀರಂಗಾಚಾರ್, ತಿರುಪತಿ ಶ್ರೀರಂಗಾಚಾರ್, ಶ್ರೀರಂಗಪಂಡಿತರ್, ವಿದ್ವಾನ್ ಶ್ರೀರಂಗಾಚಾರ್,

**ಕುಲ, ಗೋತ್ರ** :—ಅನಂದಾಣ್‌ಪಿಳ್ಳೈಕುಲ, ಭಾರದ್ವಾಜಗೋತ್ರ, ಕರ್ನಾಟಕ ಬ್ರಾಹ್ಮಣ.

**ಬಂಧುಮಿತ್ರರು** :— ರಂಗಾಚಾರ್ (ಸಹೋದರ ಮತ್ತು ಶಿಷ್ಯ), ಕಪಿಸ್ಥಲಂ ದೇಶಿಕಾಚಾರ್ ಮುಂತಾದ ವಿದ್ವಾಂಸರೂ, ಜಯಪುರ್, ಜ್ಯೋತಿಪುರ್, ಉದಯಪುರ್, ಮುಂತಾದ ಸಂಸ್ಥಾನಗಳ ಮಹಾರಾಜರೂ ಶಿಷ್ಯರು. ಮುಳ್ಳಂಪೂಡಿ ಪಂಡಿತರು, ಪುರಿಶೈ ಶ್ರೀನಿವಾಸಾಚಾರ್ಯ, ವಾದಾವಳೀ ಅನಂದಾಳ್ವಾರ್ ಮುಂತಾದವರು ಗುರುಗಳು.

---

1. ಈ ವಿಷಯಗಳನ್ನು ಓರಂಗಲ್ಲಿನ ವಿದ್ವಾನ್ ತಿ. ನ. ಚ. ರಘುನಾಥಾಚಾರ್ಯರೂ, ಬಾಪಟ್ಲಾದ ಕೆ. ಇ. ಟಿ. ರಾಮಾನುಜಾಚಾರ್ಯರೂ ತಿಳಿಸಿ ಉಪಕರಿಸಿರುವರು.
   ದಶೋಪನಿಷದ್ವ್ಯಾಖ್ಯಾನಮ್, ವಿವೇಕಕಳಾನಿಧಿ ಪ್ರೆಸ್-ಪ್ರಕಾಶಕರು, ಯನಮದಲ ವೆಂಕಟಾಚಾರ್ಯ. 1875.

**ಕಾಲ** :— ಕ್ರಿ. ಶ. 1843 ರಿಂದ 1930 (ಸುಮಾರು)

**ದೇಶ** :—ಆಂಧ್ರದ ತಿರುಪತಿ ಬಳಿ 'ಪುರಿಶೈ' ಅಗ್ರಹಾರ.

**ಸಾಧನೆಗಳು** :—ಈಶಾವಾಸ್ಯದ 2ನೆಯ ಮಂತ್ರೋಪದೇಶಾನುಸಾರ ಆಜೀವಪರ್ಯಂತ ಯಜ್ಞಯಾಗಾದಿ ಕರ್ಮನಿಷ್ಠೆ, ತರ್ಕ, ವೇದಾಂತ, ಆಗಮ, ಧರ್ಮಶಾಸ್ತ್ರ, ಸಂಪ್ರದಾಯಗಳಲ್ಲಿ ವಿವಿಧಶಿಷ್ಯರ ತಯಾರಿಕೆ ಮತ್ತು ನೂರಾರು ಗ್ರಂಥಗಳ ರಚನೆ. ಭಾರತಾದ್ಯಂತ ಸಂಚಾರ, ವಿದ್ವತ್ಸಭೆಗಳಲ್ಲಿ ವಾದವಿವಾದನಿರ್ಣಯ ಹಾಗೂ ಹಿಂದೂಧರ್ಮಪ್ರಚಾರ. ಕ್ರಿ. ಶ. 1906ರಲ್ಲಿ ಈಶಾವಾಸ್ಯಭಾಷ್ಯ ರಚನೆ.

**ಕೃತಿಗಳು** :—

ಈಶಾವಾಸ್ಯಭಾಷ್ಯ
ಕಾರ್ಯಾಧಿಕರಣವಾದ
ವಾದನಕ್ಷತ್ರಮಾಲಿಕೆ
ಕ್ರೋಡಪತ್ರಗಳು
ವೆಂಕಟೇಶಸ್ತೋತ್ರ
ಇತ್ಯಾದಿ ಸುಮಾರು 130 ಗ್ರಂಥಗಳು

**ಈಶಾವಾಸ್ಯೋಪನಿಷತ್ತಿನ ಇತರ ಭಾಷ್ಯಕಾರರು**

ಭರ್ತೃಯಜ್ಞ, ಹರಿಸ್ವಾಮಿ, ಪಿತೃಭಕ್ತಿ, ವಾಸುದೇವ, ತರ್ಕೋಪಾಧ್ಯಾಯ, ಮಂಡನ, ದೇವಯಾಜ್ಞಿಕ, ಉವ್ವಟ, ಮಹೀಧರ, ಆನಂದಭಟ್ಟ, ಸಾಯಣ, ವಿಜ್ಞಾನಭಿಕ್ಷು, ಅನಂತಾಚಾರ್ಯ, ದ್ವಿವೇದಗಂಗ, ಹೋಳೀರ, ಮಿಶ್ರ, ಶಂಕರ, ಭರ್ತೃಪ್ರಪಂಚ, ಆನಂದತೀರ್ಥ ಮುಂತಾದವರು.

## ೨. ಈಶಾವಾಸ್ಯದ ಉಲ್ಲೇಖವಿವರಣಕಾರರು

### ೧. ಅಪ್ಪಯ್ಯದೀಕ್ಷಿತ[1]

**ಹೆಸರು** :—ಗಣೇಶ, ಅಪ್ಪ, ಅಪ್ಪಯ್ಯ.

**ಬಿರುದು** :—ಸರ್ವತಂತ್ರಸ್ವತಂತ್ರ, ದ್ರವಿಡ ಪುಂಗವ.

**ಕುಲ, ಗೋತ್ರ** :—ವಡಮಕುಲ, ಭಾರದ್ವಾಜ ಗೋತ್ರ, ಸಾಮಶಾಖೆ, ಆಚ್ಚಾನ್ ವಂಶ.

**ಬಂಧುಮಿತ್ರರು** :—ತಂದೆ-ಶ್ರೀರಂಗರಾಜಾಧ್ವರಿ. ಅಜ್ಜ–ಆಚ್ಚಾನ್‌ದೀಕ್ಷಿತ ಅಥವಾ ವಕ್ಷಸ್ಥಲಾಚಾರ್ಯ. ಗುರು–ತಂದೆ ಮತ್ತು ಅಜ್ಜ. ತಮ್ಮ–ಆಚ್ಚಾನ್‌ದೀಕ್ಷಿತ. ತಮ್ಮನ ಮೊಮ್ಮಗ-ನೀಲಕಂಠ ದೀಕ್ಷಿತ. ಪತ್ನಿ-ತೂಪ್ಪಿಲ್ ರತ್ನಖೇಟದೀಕ್ಷಿತನ ಮಗಳು ಮಂಗಳನಾಯಕಿ. ಶಿಷ್ಯರು–ಭಟ್ಟೋಜಿದೀಕ್ಷಿತ ಇತ್ಯಾದಿ. ಸಮಕಾಲೀನ ಪಂಡಿತಸ್ಪರ್ಧಿಗಳು ಚಂಡಮಾರುತಂದೊಡ್ಡಯಾಚಾರ್ಯ. ಜಗನ್ನಾಥಪಂಡಿತರಾಜ ಇತ್ಯಾದಿ. ವಿಜಯನಗರದ ವೆಂಕಟಪತಿರಾಜ, ವೆಲ್ಲೂರಿನ ಚಿನ್ನಬೊಮ್ಮರಾಜನರಸಿಂಹ ಮುಂತಾದವರು ಆಶ್ರಯದಾತರು.

**ಕಾಲ** :—ಕ್ರಿ. ಶ. 1552 ರಿಂದ 1626

---

ಆಧಾರ ಗ್ರಂಥಗಳು :

1 ಶಿವಾನಂದಯತಿಯ "ಅಪ್ಪಯ್ಯದೀಕ್ಷಿತಚರಿತಂ", ನೀಲಕಂಠದೀಕ್ಷಿತನ ಕೃತಿಗಳು, ಸ್ವಯಂ ಗ್ರಂಥಕರ್ತರ ಕೃತಿಗಳು, ಭಟ್ಟೋಜಿದೀಕ್ಷಿತನ ಕೃತಿಗಳು.

**ದೇಶ :**—ಹುಟ್ಟೂರು ಕಂಚಿಯು ಸಮೀಪ "ಅಡ್ಡಪಾಳ್ಯ" ಗ್ರಾಮ. ಪರಂಧಾಮ ಹೊಂದಿದುದು ಚಿದಂಬರ. ವಾಸ ಪ್ರಾಯಃ ಕಂಚಿ.

**ಸಾಧನೆ :**—ಸಮಸ್ತಶಾಸ್ತ್ರಗಳಿಗೂ ಮತದರ್ಶನಗಳಿಗೂ ಉತ್ತಮವಾದ ಪಠ್ಯಗ್ರಂಥಗಳನ್ನು ರಚಿಸಿ ವ್ಯಾಕರಣ, ಅಲಂಕಾರ, ವೇದಾಂತ, ಮೀಮಾಂಸಾದಿಗಳಲ್ಲಿ ನೂರಾರು ಶಿಷ್ಯರನ್ನು ತಯಾರಿಸಿ ಭಾರತಾದ್ಯಂತ ಸಂಚರಿಸಿದುದು. ವಿದ್ವತ್ತಿನಿಂದ ಮೆರೆದು ರಾಜನಿಂದ ಕನಕಾಭಿಷೇಕ ಮಾಡಿಸಿಕೊಂಡು ಆ ಧನದಿಂದ ಅಡ್ಡಪಾಳ್ಯದಲ್ಲಿ ಕಾಲಕಂಠೇಶ್ವರಮಂದಿರ ಸ್ಥಾಪಿಸಿದುದು.

**ಕೃತಿ :**—

ಶಿವಾರ್ಕಮಣಿದೀಪಿಕೆ
ನ್ಯಾಯರಕ್ಷಾಮಣಿ
ಚತುರ್ಮತಸಾರಸಂಗ್ರಹ (4 ಭಾಗ)
(1) ನಯಮಂಜರಿ (ಶಂಕರದರ್ಶನ)
(2) ನಯಮಣಿಮಾಲಾ (ಶ್ರೀಕಂಠದರ್ಶನ)
(3) ನಯಮಯೂಖಮಾಲಿಕಾ (ರಾಮಾನುಜದರ್ಶನ)
(4) ನ್ಯಾಯಮುಕ್ತಾವಳಿ (ಮಧ್ವದರ್ಶನ)
ಪರಿಮಳಟೀಕಾ
ಸಿದ್ಧಾಂತಲೇಶಸಂಗ್ರಹ
ವಿಧಿರಸಾಯನ
ಚಿತ್ರಮೀಮಾಂಸಾ
ಕುವಲಯಾನಂದ
ವೃತ್ತಿವಾರ್ತಿಕ
ಯಾದವಾಭ್ಯುದಯವ್ಯಾಖ್ಯಾನ
ರಾಮಾಯಣ, ಭಾರತತಾತ್ಪರ್ಯಸಂಗ್ರಹ
ಶಿವಕರ್ಣಾಮೃತ
ವರದರಾಜಸ್ತವ
ಆಪೀತಕುಚಾಂಬಾಸ್ತವ ಇತ್ಯಾದಿ
ನೂರಾರು ಗ್ರಂಥಗಳು.

## ೨. ಮಹಾಚಾರ್ಯ[1]

**ಹೆಸರು :**—ರಾಮಾನುಜ, ಶ್ರೀನಿವಾಸದಾಸ, ದೊಡ್ಡಯ್ಯಾಚಾರ್ಯ, ಮಹಾಗುರು, ಮಹಾದೇಶಿಕ, ಮಹಾರ್ಯ, ಚಂಡಮಾರುತಾಚಾರ್ಯ, ಘನಗುರು, ಘನದೇಶಿಕ, ತಿರುಪತಿಶ್ರೀನಿವಾಸನ ಸ್ವಪ್ನಸೂಚನೆಯಂತೆ "ಶ್ರೀನಿವಾಸದಾಸ" ಎಂಬುದು ಇವರ ಮನೆತನದ ಎಲ್ಲರಿಗೂ ಬರುವ ಹೆಸರು.

**ಕುಲ, ಗೋತ್ರ :**—ವಡಮಕುಲ. ವಾಧೂಲಗೋತ್ರ. ಕಂದಾಡೈವಂಶ. ಆಪಸ್ತಂಬಸೂತ್ರ. ಕೃಷ್ಣಯಜುಸ್‌ಶಾಖೆ.

**ಬಂಧುಮಿತ್ರರು :**—ದತ್ತು ಪಡೆದ ತಂದೆ-ಪೆರಿಯಅಪ್ಪಂಗಾರ್ (ಮಹಾಚಾರ್ಯ) ಪರಮಾಚಾರ್ಯ-ದೊಡ್ಡಯ್ಯಂಗಾರಪ್ಪೈ (ವಾಧೂಲಶ್ರೀನಿವಾಸಾಚಾರ್ಯ) ಇವರು "ತೂಲಿಕಾ" ಗ್ರಂಥಕರ್ತೃ. ಆಪ್ತಮಿತ್ರರು—ಪಂಚಮತಭಂಜನತಾತಾಚಾರ್ಯ.

**ಕಾಲ :**—ಅವತಾರ-ಶುಭಕೃತ್‌ಸಂವತ್ಸರ, ಕುಂಭಕೃಷ್ಣತ್ರಯೋದಶಿ, ಗುರುವಾರ, ಉತ್ತರಾಷಾಢಾನಕ್ಷತ್ರ (ಕ್ರಿ. ಶ. 1-2-1543) ಕೆಲವರಮತದಂತೆ (1541). ಪರಮಪದ- ಪ್ಲವಂಗಸಂವತ್ಸರ ತುಲಾಕೃಷ್ಣಾಷ್ಟಮಿ ಶನಿವಾರ. ಕ್ರಿ.ಶ. 3-10-1607. ಕೆಲವರಮತದಂತೆ (1606).

---

1. ಈ ಲೇಖನದ ವಿಷಯದಲ್ಲಿ ಶೋಳಂಗಿಪುರದ ಮಹಾಚಾರ್ಯರವಂಶದ ಕೆ. ಕೆ. ಸಿ. ತಾತಾಚಾರ್ಯರು ಕೆಲವು ವಿಷಯಗಳನ್ನು ತಿಳಿಸಿ ಉಪಕರಿಸಿರುವರು.

**ದೇಶ** :—ಇವರ ಹಿಂದಿನವರಾದ ದೊಡ್ಡಯ್ಯಂಗಾರ್‌ಅಪ್ಪೈ ಎಂಬುವರು ಕರ್ನಾಟಕದಲ್ಲಿ ಪ್ರಸಿದ್ಧರಾಗಿದ್ದರು. ಇವರು ಕರ್ನಾಟಕದ ಕಂದಾಡೈ ಶಾಖೆಯವರಿರಬೇಕು. ದೊಡ್ಡ ಎಂಬ ಕನ್ನಡ ಹೆಸರೂ ಇದಕ್ಕೆ ಪೋಷಕವಾಗಿದೆ. ಹುಟ್ಟಿದ ಊರು ಕಾಂಚಿ ಅಥವಾ ಚೋಳಸಿಂಹಪುರ. (ಶೋಲಿಂಗರ್) ಪರಮಪದಿಸಿದ್ದು ಚಿದಂಬರದ ಸಮೀಪದ ಶ್ರೀಮುಷ್ಣಕ್ಷೇತ್ರ.

**ಸಾಧನೆಗಳು** :—ವೇದಾಂತದೇಶಿಕರು ಜೀರ್ಣೋದ್ಧಾರ ಮಾಡಿದ್ದ ಚಿದಂಬರದ ಗೋವಿಂದರಾಜ ದೇವರನ್ನು ಅಲ್ಲಿನ ಕೆಲವರು ಕಲ್ಲುಚಪ್ಪಡಿ ಹಾಕಿ ಮುಚ್ಚಿಬಿಟ್ಟಿದ್ದರು. ವಾದದಲ್ಲಿ ವಿರೋಧಿಗಳನ್ನೆಲ್ಲ ಜಯಿಸಿ ವಿಜಯನಗರದ ರಾಮರಾಯನ ಸಹಾಯದಿಂದ ಕಲ್ಲು ತೆಗೆಸಿ ಗೋವಿಂದರಾಜದೇವರ ಪೂಜೆಗಾಗಿ ಐದು ಗ್ರಾಮಗಳನ್ನು ಬಿಡಿಸಿ ರಾಮಾನುಜರ ಕಾಲದಿಂದ ಬಂದಿದ್ದ ಶೈವವೈಷ್ಣವ ಕಲಹವನ್ನು ಶಮನಗೊಳಿಸಿದರು. ಅಪ್ಪಯ್ಯದೀಕ್ಷಿತರು ಇವರ ಮಿತ್ರರಾದರೂ ವಾದದಲ್ಲಿ ಪ್ರತಿಕಕ್ಷಿಯಾಗಿದ್ದರು.

ವೇದಾಂತದೇಶಿಕರ ಗ್ರಂಥಗಳಿಗೆಲ್ಲ ವ್ಯಾಖ್ಯಾನ ಬರೆದು ಶಿಷ್ಯರಿಂದ ಬರೆಸಿಯೂ ದರ್ಶನ ಸಂರಕ್ಷಣೆ ಮಾಡಿದರು.

ಶೋಳಂಗಿಪುರ (ಘಟಿಕಾಚಲ) ನೃಸಿಂಹ ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಅದರ ಧರ್ಮಕರ್ತರೂ ಪ್ರಥಮ ಸ್ಥಳಾಚಾರ್ಯಪುರುಷರೂ ಆದರು.

ಕಂಚಿಯ ವರದರಾಜಸ್ವಾಮಿಯು ಇವರಿಗೆ ವೃದ್ಧಾಪ್ಯದಲ್ಲಿ ಪ್ರತ್ಯಕ್ಷವಾದಾಗ ಆಸ್ಥಳದಲ್ಲೇ ತಮ್ಮೂರಲ್ಲಿ ಒಂದು ವರದರಾಜರ ಗುಡಿ ಕಟ್ಟಿಸಿದರು.

**ಕುಲದೈವ** :—ತಿರುಪತಿ ಶ್ರೀನಿವಾಸ.

**ಮನೆದೇವರು** :—ಹಯಗ್ರೀವ,

**ಇಷ್ಟದೈವ** :—ಶ್ರೀಕೃಷ್ಣ.

**ಶಿಷ್ಯಪ್ರಶಿಷ್ಯರು** :—ಜ್ಞಾನಭೂಷಣಂಸುದರ್ಶನಾಚಾರ್ಯ, ನೃಸಿಂಹರಾಜ, ಸ್ವಾಮಿಪುಷ್ಕರಿಣೀ ಶ್ರೀನಿವಾಸದಾಸ, ವಾತ್ಸ್ಯನಾರಾಯಣಾಚಾರ್ಯ, ಚಂಪಕೇಶಾಚಾರ್ಯ, ಇತ್ಯಾದಿ.

**ಇವರ ಗ್ರಂಥಗಳು** :—

ಚಂಡಮಾರುತ (ಶತದೂಷಣೀವ್ಯಾಖ್ಯಾನ)
ವೇದಾನ್ತ ವಿಜಯ (ಐದು ಭಾಗ)
(1) ಗುರೂಪಸತ್ತಿವಿಜಯ
(2) ಬ್ರಹ್ಮವಿದ್ಯಾವಿಜಯ
(3) ಸದ್ವಿದ್ಯಾವಿಜಯ
(4) ಅದ್ವೈತವಿದ್ಯಾವಿಜಯ
(5) ಪರಿಕರವಿದ್ಯಾವಿಜಯ
ಪಾರಾಶರ್ಯ ವಿಜಯ
ಉಪನಿಷನ್ಮಂಗಳದೀಪಿಕೆ (ಉಪನಿಷತ್ ಭಾಷ್ಯ)
ಸರ್ವಾರ್ಥಸಿದ್ಧಿ ವ್ಯಾಖ್ಯಾನ
ತಾತ್ಪರ್ಯಪ್ರಕಾಶಿಕೆ
ಬ್ರಹ್ಮಸೂತ್ರಾರ್ಥಸಂಗ್ರಹ
ರಾಮಾನುಜಚರಿತಚುಳಕಂ
ವೈಭವಪ್ರಕಾಶಿಕೆ
ಮೋಕ್ಷಕಪದ್ಯಗಳು
ಶಾಸನಪದ್ಯಗಳು
ತನಿಯನ್‌ಪದ್ಯಗಳು
ದೇವರಾಜಪಂಚಕ ಇತ್ಯಾದಿ.

## ೩. ಕುಮಾರ ವೇದಾಂತಾಚಾರ್ಯ[1]

**ಹೆಸರು :**—ವರದಾಚಾರ್ಯ, ವರದನಾಥ, ನಾಯನಾರ್, ನಯಿನಾರಾಚಾರ್ಯ, ತಂದೆಗೆ ಸಮಾನವಾದ ಪಾಂಡಿತ್ಯದಿಂದ ಬಂದ ಬಿರುದು " ವೇದಾಂತಾಚಾರ್ಯ."

**ಕುಲ, ಗೋತ್ರ :**— ವಡಮಕುಲ, ವಿಶ್ವಾಮಿತ್ರಗೋತ್ರ, ಆಪಸ್ತಂಬಸೂತ್ರ, ತೈತ್ತಿರೀಯ ಶಾಖೆ, ತೂಪ್ಪಿಲ್‌ವಂಶ.

**ಬಂಧುಮಿತ್ರರು :** ತಂದೆ ಮತ್ತು ಗುರು ವೇದಾಂತದೇಶಿಕ. ಸಹಾಧ್ಯಾಯಿ ಬ್ರಹ್ಮತಂತ್ರಸ್ವತಂತ್ರಸ್ವಾಮಿ. ಶಿಷ್ಯ ಪ್ರತಿವಾದಿಭಯಂಕರಂ ಅಣ್ಣನ್ ಇತ್ಯಾದಿ. ತಂದೆಯ ಆಕಸ್ಮಿಕ ಶಾಪದಿಂದ ಇವರಿಗೆ ಮಕ್ಕಳಿಲ್ಲ.

**ಕಾಲ :**—ಅವತಾರ–ಕ್ರಿ. ಶ. 1316 ಆಗಸ್ಟ್ 11. ನಳಸಂವತ್ಸರ, ಸಿಂಹಮಾಸ, ಬುಧವಾರ, ರೋಹಿಣಿನಕ್ಷತ್ರ. ಪರಮಪದ–ಕ್ರಿ. ಶ. 1400 (ಸುಮಾರು).

**ದೇಶ :**—ಹುಟ್ಟೂರು-ಶ್ರೀರಂಗ. ವಾಸ-ಸತ್ಯಾಗಾಲ (ಸತ್ಯಮಂಗಲ), ಮೇಲುಕೋಟೆ, ಶ್ರೀರಂಗ. ಪರಮಪದ-ಶ್ರೀರಂಗ.

**ಸಾಧನೆ :**—ವೇದಾಂತದೇಶಿಕರ ಮಹಾಗ್ರಂಥಗಳಿಗೆಲ್ಲ ವ್ಯಾಖ್ಯಾನ ಬರೆದು ಅನೇಕ ಶಿಷ್ಯರನ್ನು ತಯಾರಿಸಿದುದು. ರೇಚಕೊಂಡದ ಸರ್ವಜ್ಞಶಿಂಗಭೂಪಾಲನ ಆಸ್ಥಾನದಲ್ಲಿ ಮಂತ್ರವಾದಿಯಾದ " ಶಾಕ್ಯಮಲ್ಲ " ಪಂಡಿತನನ್ನು ಜಯಿಸಿದುದು.

**ಕೃತಿಗಳು :**—

ಅಧಿಕರಣಚಿಂತಾಮಣಿ — ಮೀಮಾಂಸಾಪಾದುಕಾಪರಿತ್ರಾಣಂ
ವೇದಾಂತಾರ್ಯದಿನಚರ್ಯಾ — ವೇದಾಂತಾರ್ಯಮಂಗಳಾಶಾಸನಂ
ವೇದಾಂತಾರ್ಯಪ್ರಪತ್ತಿ — ವೇದಾಂತಾರ್ಯಪ್ರಾರ್ಥನಾಷ್ಟಕಂ
ತಮಿಳ್ ರಹಸ್ಯಗ್ರಂಥಗಳು ಇತ್ಯಾದಿ.

## ೪. ಪಿಳ್ಳೈಲೋಕಾಚಾರ್ಯ

**ಹೆಸರು :**—ಜಗದ್ಗುರು, ದ್ವಿತೀಯಲೋಕಾಚಾರ್ಯ, ಲೋಕಾರ್ಯ, ಭುವನಗುರು, ಮುಡುಂಬೈಇರೈವನ್ ಉಲಹಾರಿಯನ್ ಇತ್ಯಾದಿ.

**ಬಿರುದು :**—" ಸರ್ವಜ್ಞಭಟ್ಟ " " ಉಭಯ ವೇದಾನ್ತನಿರ್ವಾಹಕ ".

**ಕುಲ, ಗೋತ್ರ :**—ವಡಮಕುಲ, ಶ್ರೀವತ್ಸಗೋತ್ರ, ಮುಡುಂಬೈವಂಶ, ತೈತ್ತಿರೀಯ ಶಾಖೆ, ಆಪಸ್ತಂಬಸೂತ್ರ.

**ಬಂಧುಮಿತ್ರರು :**—ಇವರ ಮೂಲಪುರುಷರು ರಾಮಾನುಜರ 74 ಪೀಠಾಧಿಪತಿಗಳಲ್ಲೊಬ್ಬರಾದ ಶ್ರೀವತ್ಸಪೂರ್ಣ ತಂದೆ–ವಡಕ್ಕುತ್ತಿರುವೀದಿಪ್ಪಿಳ್ಳೈ ಎಂಬ ಕೃಷ್ಣಪಾದಗುರು. ತಾಯಿ–ಶ್ರೀರಂಗನಾಯಕಿ. ತಮ್ಮ ಅಳಹಿಯಮಣವಾಳಪ್ಪೆರುಮಾಳ್‌ನಾಯನಾರ್. ಆಚಾರ್ಯರು ನಂಬಿಳ್ಳೈ ಎಂಬ ಪ್ರಥಮ ಲೋಕಾಚಾರ್ಯರು. ಶಿಷ್ಯರು ಕೂರಕುಲೋತ್ತಮದಾಸ, ಶ್ರೀಶೈಲೇಶ ಇತ್ಯಾದಿ. ಸೋದರಮಾವನ ಮಗ ವೇದಾಂತಾಚಾರ್ಯ.

---

ಆಧಾರ ಗ್ರಂಥಗಳು :

1. ಪೆರಿಯತಿರುಮುಡಿಅಡೈವು, ಗುರುಪರಂಪರಾಪ್ರಭಾವ (ವೇದಾಂತದೇಶಿಕರು), ಲೇ. ಎನ್. ಅನಂತರಂಗಾಚಾರ್.
2. ಪೆರಿಯತಿರುಮುಡಿಅಡೈವು (ಕಂದಾಡೈನಾಯನ್ ಕೃತಿ) ತಿರುಮುಡಿಅಡೈವು (ಮುಡುಂಬೈವಂಶದ ಯಜ್ಞನಾರಾಯಣ ದೇಶಿಕರ ಕೃತಿ, ಅಮುದ್ರಿತ ಹಸ್ತಪ್ರತಿ, ಅರೆಯರ್ ಪುಸ್ತಕಭಂಡಾರ, ಮೇಲುಕೋಟೆ)

**ಕಾಲ** :—ಕ್ರಿ. ಶ. 1228-1327.

ಅವತಾರ —ಸರ್ವಧಾರಿ ಸಂವತ್ಸರ ತುಲಾಶ್ರವಣ ನಕ್ಷತ್ರ.

ಪರಮಪದ —ಅಕ್ಷಯ ಸಂವತ್ಸರ ಜ್ಯೇಷ್ಠ ಶುಕ್ಲ ದ್ವಾದಶಿ. ಜೀವಿತಕಾಲ 99 ವರ್ಷ.

**ದೇಶ** :—ಹುಟ್ಟೂರು ಮತ್ತು ವಾಸ ಶ್ರೀರಂಗ. ಪರಮಪದಿಸಿದ್ದು ಕರ್ನಾಟಕದ ಬಂಡಿಪುರದ ಬಳಿ ' ಜ್ಯೋತಿಷ್ಕುಡಿ ' ಎಂಬ ಗ್ರಾಮ.

**ಸಾಧನೆ** :—ನೈಷ್ಠಿಕ ಬ್ರಹ್ಮಚರ್ಯಸಿದ್ಧಿ. ತಮಿಳು ಭಾಷೆಯಲ್ಲಿ ಅನುಭವ ಸಾಹಿತ್ಯ. ವಿಪುಲವಾದ ವೇದಾಂತವಚನ ಸಾಹಿತ್ಯ ನಿರ್ಮಾಣ. ತುರುಕರ ಹಾವಳಿಯಲ್ಲಿ ಶ್ರೀರಂಗನಾಥವಿಗ್ರಹದ ರಕ್ಷಣಕಾರ್ಯದಲ್ಲಿ ದೇಹತ್ಯಾಗ. " ನೀಲಕಂಠ " ಎಂಬ ಮಾಯಾವಾದಿಯನ್ನು ಜಯಿಸಿದ್ದು. ಸಂಸ್ಕೃತ ತಮಿಳುಗಳಲ್ಲಿ ನೂರಾರು ಗ್ರಂಥಗಳ ರಚನೆ ಮತ್ತು ಸಚ್ಛಿಷ್ಯರ ಶಿಕ್ಷಣ.

**ವಿಶೇಷ** :—ಇವರು ಕಂಚಿ ವರದರಾಜಸ್ವಾಮಿಯ ಅಪರಾವತಾರ.

**ಕೃತಿ** :—ಶ್ರೀವಚನಭೂಷಣ, ಮುಮುಕ್ಷುಪ್ಪಡಿ, ತತ್ತ್ವತ್ರಯ ಇತ್ಯಾದಿ 18 ರಹಸ್ಯಗ್ರಂಥಗಳು.

**ಲುಪ್ತಗ್ರಂಥಗಳು** :—

| | |
|---|---|
| ವೇದಾಂತಭೂಷಣ | ಗದ್ಯತ್ರಯವ್ಯಾಖ್ಯಾನ |
| ವೇದಾಂತಾದರ್ಶ | ಸ್ತೋತ್ರರತ್ನವ್ಯಾಖ್ಯಾನ |
| ರಂಗೇಶವಿಂಶತಿಃ | ಪಂಚಸ್ತವವ್ಯಾಖ್ಯಾನ |
| ವೇದಾಂತಸಾರ | ಅನೇಕ ಸ್ತೋತ್ರಗಳು |
| ರಾಮಾಯಣವ್ಯಾಖ್ಯಾನ | ನೂರೆಂಟು ರಹಸ್ಯಗ್ರಂಥಗಳು. |

## ೫. ಮಣವಾಳಮಾಮುನಿ[1]

**ಹೆಸರು** :—ವರವರಮುನಿ, ವರಯೋಗಿ, ಸೌಮ್ಯಜಾಮಾತೃಮುನಿ, ರಮ್ಯಜಾಮಾತಾ, ಯತೀಂದ್ರಪ್ರವಣ, ಪೆರಿಯ ಜೀಯರ್, ಅಳಹಿಯಮಣವಾಳಜೀಯರ್, ರಾಮಾನುಜಶನ್‌ಪೊನ್ನಡಿ. ಕಾನ್ತೋಪಯಂತಾ, ಶ್ರೀರಂಗನಾಥಾರ್ಯ, ವೆಳ್ಳೈಜೀಯರ್.

**ಬಿರುದು** :—' ವಿಶದವಾಕ್‌ಶಿಖಾಮಣಿ ', ' ಈಡುಪೆರುಕ್ಕರ್ '.

**ಕುಲ, ಗೋತ್ರ** :—ಕುಲ–ಬ್ರಹ್ಮಚರಣ. ಗೋತ್ರ–ಕೌಂಡಿನ್ಯ. ವಂಶ–ಗೋಮಠ. ತಂದೆ–ಶಿಹಳಕ್ಕಿಡನ್ದಾನ್ ತಿರುನಾವೀರುಡೈಯಪಿರಾನ್. ತಾತ–ರಣ್ಣರಯ್ಯನ್. ತಾಯಿ–ಶ್ರೀರಂಗನಾಯಕಿ. ತಮ್ಮ–ತಿರುಮಲೆಯಾಳ್ವಾರ್. ಮಗ–ರಾಮಾನುಜ. ಮೊಮ್ಮಗ–ಜೀಯರ್ ನಾಯನಾರ್. ಗುರು–ಶ್ರೀಶೈಲೇಶ-ತಿರುವಾಯ್‌ಮೊಳಿಪ್ಪಿಳ್ಳೈ. 'ಶ್ರುತಪ್ರಕಾಶಿಕಾ' ಗುರು–ಕಿಡಾಂಬಿನಾಯನ್. 'ಆಚಾರ್ಯಹೃದಯ' ಗುರು-ತಿರುನಾರಾಯಣಪುರಂಆಯ್. ಸನ್ಯಾಸದೀಕ್ಷಾಗುರು–ಸಹಾಧ್ಯಾಯಿಯಾಗಿದ್ದ ಶಠಕೋಪಜೀಯರ್. ಶಿಷ್ಯರು–ವಾನಮಾಮಲೈಸ್ವಾಮಿ, ಕಂದಾಡೈ ಅಣ್ಣನ್, ಪ್ರತಿವಾದಿಭಯಂಕರಂ ಅಣ್ಣನ್, ಇತ್ಯಾದಿ ' ಅಷ್ಟದಿಗ್ಗಜ ' ಎನಿಸಿದವರು.

---

**ಆಧಾರ ಗ್ರಂಥಗಳು** :—

1. ಯತೀಂದ್ರಪ್ರವಣಪ್ರಭಾವ, ಪೆರಿಯತಿರುಮುಡಿ ಅಡೈವು, ಸ್ವಂತ ಮತ್ತು ಶಿಷ್ಯರಗ್ರಂಥಗಳು.

**ಕಾಲ** :—ಅವತಾರ–ಕ್ರಿ.ಶ. 1370. ಸಾಧಾರಣ ಸಂವತ್ಸರ ಆಶ್ವಯುಜ ಶುಕ್ಲ ಚತುರ್ಥೀ ಗುರುವಾರ ಮೂಲಾನಕ್ಷತ್ರ. ತುಲಾಮಾಸ 26ನೆಯ ತೇದಿ. ಸನ್ಯಾಸ–ಕ್ರಿ.ಶ 1414. ಪರಮಪದ–ಕ್ರಿ.ಶ. 1444 ರುಧಿರೋದ್ಗಾರಿ ಸಂವತ್ಸರ ಕುಂಭ ಕೃಷ್ಣ ದ್ವಾದಶಿ ಶನಿವಾರ ಶ್ರವಣ ನಕ್ಷತ್ರ.

**ದೇಶ** :—ಹುಟ್ಟೂರು–ತಮಿಳುನಾಡಿನ ಪಾಂಡ್ಯದೇಶದ ' ಶಿಕ್ಕಿಲ್‌ಕಿಡಾರ್ ' ಎಂಬ ಗ್ರಾಮ. ವಾಸ ಮತ್ತು ಸಮಾಧಿ–ಶ್ರೀರಂಗ.

**ಸಾಧನೆ** :—ಶ್ರೀವೈಷ್ಣವರ ಸಂಘಟನೆ, ಪ್ರಾಚೀನರ ಲುಪ್ತವಾದ ಗ್ರಂಥಗಳ ರಕ್ಷಣೆ. ' ಈಡು ' ಗ್ರಂಥವನ್ನು ಶ್ರೀರಂಗನಾಥರ ಮುಂದೆ ಉಪದೇಶಿಸಿದುದು. ಆಗ ರಂಗನಾಥರು ಮಗುವಿನಂತೆ ಬಂದು. ' ಶ್ರೀಶೈಲೇಶ ' ಎಂಬ ಪದ್ಯವನ್ನು ಹೇಳಿ ದಿವ್ಯಪ್ರಬಂಧದ ಆರಂಭದಲ್ಲಿ ಎಲ್ಲರೂ ಹೇಳಬೇಕೆಂದು ತಿಳಿಸಿದ ಸಮಯ–ಕ್ರಿ.ಶ. 1435 ಮಿಥುನ ಪೂರ್ಣಿಮೆ. ವೇದಾಂತಾಧ್ಯಯನದಲ್ಲಿ ' ಪ್ರಮಾಣಾಕರ ಸಂಗ್ರಹ ' ಮುಂತಾದ ಗ್ರಂಥಗಳ ರಚನೆಯಿಂದ ಹೊಸ ' ರೆಫರೆನ್ಸ್ ' ಕ್ರಮವನ್ನು ಸಜ್ಜುಗೊಳಿಸಿದುದು. ಶ್ರೀರಂಗ ದೇವಾಲಯದ ಆಡಳಿತ ವ್ಯವಸ್ಥೆ ಸರಿಪಡಿಸಿದುದು.

**ಮಹಿಮೆ** :—ಹುಣಸೆಮರಕ್ಕೆ ಮೋಕ್ಷ ಕೊಟ್ಟಿದ್ದು. ಆದಿಶೇಷರೂಪ ತೋರಿಸಿದುದು. ಇವರು ರಾಮಾನುಜರ ಪುನರವತಾರ.

**ಕೃತಿಗಳು** :—

| | |
|---|---|
| ಭಗವದ್ವಿಷಯಪ್ರಮಾಣಸಂಗ್ರಹ | ಉಪದೇಶರತ್ನಮಾಲೆ |
| ಶ್ರೀಭಾಷ್ಯಪ್ರಮಾಣಸಂಗ್ರಹ | ಆರ್ತಿಪ್ರಬಂಧ |
| ರಹಸ್ಯತ್ರಯಪ್ರಮಾಣಸಂಗ್ರಹ | ತಿರುವಾಯ್‌ಮೊಳಿನೂತ್ತಂದಾದಿ |
| ಯತಿರಾಜವಿಂಶತಿ | ದಿವ್ಯದೇಶಮಂಗಳಾಪ |
| ರಾಜಗೋಪಾಲವಿಂಶತಿ | ಗೀತಾಪ್ರತಿಪದಾರ್ಥ |
| ಗೋದಾಚತುಶ್ಶ್ಲೋಕೀ | ಮುಕ್ತಕ ಶ್ಲೋಕಗಳು |
| ಯತಿರಾಜಮಂಗಳಮ್ | ತಮಿಳ್ ಬಿಡಿ ಪದ್ಯಗಳು |
| ರಹಸ್ಯ ವ್ಯಾಖ್ಯಾನಗಳು | ಚೂರ್ಣಿಕೆಗಳು ಇತ್ಯಾದಿ. |
| ದಿವ್ಯಪ್ರಬಂಧ ವ್ಯಾಖ್ಯಾನಗಳು | |

## ೬. ವಾಧೂಲವೀರರಾಘವ[1]

**ಹೆಸರು** :—ವೀರರಾಘವದಾಸ, ವೀರರಾಘವಾಚಾರ್ಯ, ತಿರುಮಲಿಶೈಅಣ್ಣಾ, ಅಣ್ಣಾವಪ್ಪನ್, ಅಣ್ಣಾವಪ್ಪಂಗಾರ್.

**ಬಿರುದು** :—' ಅಪರಬಾಲಸರಸ್ವತಿ ' ' ಜ್ಞಾನವೈರಾಗ್ಯವಾರಿಧಿ '.

**ಕುಲ, ಗೋತ್ರ** :—ವಾಧೂಲಗೋತ್ರ, ಕಂದಾಡೈವಂಶ.

**ಬಂಧುಮಿತ್ರರು** :—ತಂದೆ-ನೃಸಿಂಹಾರ್ಯ, ಅಜ್ಜ–ವೀರರಾಘವಾರ್ಯ, ಗುರು ವಾಧೂಲವರದದೇಶಿಕ ಮತ್ತು ಶ್ರೀರಂಗರಾಚಾರ್ಯ, ಇಷ್ಟದೈವ–ಭಕ್ತಿಸಾರಮುನಿ ಮತ್ತು ನೃಸಿಂಹ.

---

ಆಧಾರ ಗ್ರಂಥಗಳು :—

1. ವೀರರಾಘವರ ಗ್ರಂಥಗಳು ಮತ್ತು ಗುರುಪರಂಪರೆ ತನಿಯನ್‌ಗಳು.

ಕಾಲ :—ಕ್ರಿ.ಶ. 18ನೆಯ ಶತಮಾನ.

ದೇಶ :—ತಮಿಳುನಾಡಿನ ತಿರುಮಳಿಶೈ ' ಕ್ಷೇತ್ರ.

ವಿಶೇಷ :—ಶ್ರೀರಂಗದಲ್ಲಿ ಬಾಲಸರಸ್ವತ್ಯಾಚಾರ್ಯರೆಂಬ ಮಹಾವಿದ್ವಾಂಸರಿದ್ದರು. ತಿರುಮಳಿಶೈ ನೃಸಿಂಹಾರ್ಯರು ಅವರ ಬಳಿ ವೇದಾಂತಾಧ್ಯಯನಕ್ಕಾಗಿ ಹೋದರು. ಆಗ ಆಚಾರ್ಯರು ಕ್ಷಿಪ್ರಕಾಲದಲ್ಲೇ ತಾವು ತಿರುಮಳಿಶೈಗೆ ಬರುವುದಾಗಿಯೂ ಅಲ್ಲೇ ಅಧ್ಯಯನಮಾಡಿಸುವುದಾಗಿಯೂ ಹೇಳಿ ಕೆಲದಿವಸಗಳಲ್ಲೇ ಮೃತರಾದರು. ಅಂದಿನವರೆಗೆ ಮಕ್ಕಳಿಲ್ಲದ ನೃಸಿಂಹಾರ್ಯರಿಗೆ ಗಂಡುಮಗುವಾಗಿ ಎರಡು ವರ್ಷದಲ್ಲೇ ತಾನು ಬಾಲ ಸರಸ್ವತಿ ಎಂಬು ಹೇಳಿಕೊಳ್ಳುತ್ತಾ, ಗಹನಶಾಸ್ತ್ರಾರ್ಥಗಳನ್ನೂ ವಿವಿಧ ಭಾಷೆಗಳಲ್ಲಿ ಹೇಳುತ್ತಾ, ಎಲ್ಲರಿಗೂ ಆಶ್ಚರ್ಯಪಡಿಸುತ್ತಿತ್ತು. ನೃಸಿಂಹಾಚಾರ್ಯರು ಉಪನಯನಮಾಡಿ ಗುರುವಿನ ಬಳಿ ಇವರನ್ನು ಬಿಟ್ಟಾಗ ಇವರು ಏಕಸಂಧಿಗ್ರಾಹಿಯಾಗಿ ಪೂರ್ವಜನ್ಮದ ವಿದ್ಯೆಯೆಲ್ಲವನ್ನೂ ನೆನಪಿಸಿಕೊಂಡು ತಂದೆಗೆ ಮನೆಯಲ್ಲಿ ಬಂದು ಉಪದೇಶಿಸುತ್ತಿದ್ದರಂತೆ.[1]

ಕೃತಿಗಳು :—

ಶ್ರೀಭಾಷ್ಯತಾತ್ಪರ್ಯದೀಪಿಕೆ
ಶ್ರುತಪ್ರಕಾಶಿಕಾತಾತ್ಪರ್ಯದೀಪಿಕೆ
ರಹಸ್ಯತ್ರಯತಾತ್ಪರ್ಯದೀಪಿಕೆ
ಲಕ್ಷ್ಮೀಮಂಗಳದೀಪಿಕೆ ವ್ಯಾಖ್ಯಾನ ಸಹಿತ
ವಿಶಿಷ್ಟವ್ಯುತ್ಪತ್ತಿನಿರಾಸ
ಪರಾಂಕುಶಪಂಚವಿಂಶತಿವ್ಯಾಖ್ಯಾನ
ವರವರಮುನಿದಿನಚರ್ಯಾವ್ಯಾಖ್ಯಾನ
ಯತಿರಾಜವಿಂಶತಿವ್ಯಾಖ್ಯಾನ
ಮಹಾವೀರಚರಿತ ವ್ಯಾಖ್ಯಾನ
ಅನುಪ್ರವೇಶಟಿಪ್ಪಣೀ
ದುಷ್ಕರಶ್ಲೋಕಟಿಪ್ಪಣೀ
ಶ್ರೀವಚನಭೂಷಣ ವ್ಯಾಖ್ಯಾನಅರುಂಪದಂ
ಮುಕ್ತಕಶ್ಲೋಕಗಳು
ಶ್ರಿಯೋಣುತ್ವವಾದಃ
ಪ್ರಾಚೀನಮಾರ್ಗಪ್ರಕಾಶ
ತ್ರಿಂಶತ್‌ಪ್ರಶ್ನೋತ್ತರ
ಕಾಳಿದಾಸಾದಿಗಳ ವಿವಿಧ ಕಾವ್ಯನಾಟಕಾದಿಗಳ ವ್ಯಾಖ್ಯಾನಗಳು ಇತ್ಯಾದಿ.

## ೭. ಶ್ರೀಶೈಲಲಕ್ಷ್ಮಣಮುನಿ

ಹೆಸರು :—ಶ್ರೀನಿವಾಸದಾಸ, ಶ್ರೀನಿವಾಸರಾಮಾನುಜ, ತಿರುವೇಂಗಡರಾಮಾನುಜಜೀಯರ್, ಎಂಬಾರ್‌ಸ್ವಾಮಿ ಮಧುರಮಂಗಲಂ ಎಂಬಾರ್‌ಜೀಯರ್.

ಕುಲ, ಗೋತ್ರ :—ಕುಲ ' ವೃತ್ತರತ್ನ ', ವಂಶ–ಶಿರಿಯಎಂಬಾರ್, ಗೋತ್ರ-ಭಾರದ್ವಾಜ, ಸೂತ್ರ–ಆಪಸ್ತಂಬ, ಶಾಖೆ–ಕೃಷ್ಣಯಜುಸ್.

ಬಂಧುಮಿತ್ರರು :— ಸೋದರಮಾವ ಮತ್ತು ಸನ್ಯಾಸದೀಕ್ಷಾಗುರು-ತಿರುಮಲೈ ತಿರುಪತಿ ಪೆರಿಯಜೀಯರ್. ಸಮಾಶ್ರಯಣಾಚಾರ್ಯ-ಚೋಳಸಿಂಹಪುರಂ ರಂಗಾರ್ಯಮಹಾಚಾರ್ಯ. ರಹಸ್ಯವಿದ್ಯಾಗುರು–ತಿರುನಾರಾಯಣ ಪುರಂ ದೊಡ್ಡಯಾಚಾರ ಶಿಷ್ಯರು–ಕುಂಡಲಂಸ್ವಾಮಿ, ಕುಪ್ಪಣ್ಣಸ್ವಾಮಿ, ಶಿರುಪುಲಿಯೂರ್ ಅಣ್ಣನ್, ಇತ್ಯಾದಿ.

---

ಆಧಾರ :

1. ಈ ವಿಚಾರವನ್ನು ವಾನಮಾಮಲೈ ವಿದ್ವಾನ್ ಶ್ರೀನಿವಾಸಾಚಾರ್ಯ ಸ್ವಾಮಿಗಳು ತಿಳಿಸಿ ಉಪಕರಿಸಿರುವರು.

**ಕಾಲ, ದೇಶ :**—ಅವತಾರ-ಕ್ರಿ.ಶ. ಸುಮಾರು 1810 ಸಿಂಹಮಾಸ, ರೋಹಿಣಿ ನಕ್ಷತ್ರ, ಪರಮಪದ-ಕ್ರಿ.ಶ. 1883 ಚಿತ್ರಭಾನು ಸಂವತ್ಸರ ಪುಷ್ಯ ಶುಕ್ಲ ಚತುರ್ದಶಿ ಹುಟ್ಟೂರು-ಮಧುರಮಂಗಲಕ್ಷೇತ್ರ. ವಿದ್ಯಾಭ್ಯಾಸ-ಮೇಲುಕೋಟೆ. ವಾಸ ಮತ್ತು ಸಮಾಧಿ-ಶ್ರೀಪೆರುಂಬೂದೂರು.

**ಸಾಧನೆ :**—ಹದಿನಾರನೆಯ ವಯಸ್ಸಿನಲ್ಲೇ ತಿರುಪತಿ ಶ್ರೀನಿವಾಸನ ಸೇವೆಗಾಗಿ ಬ್ರಹ್ಮಚರ್ಯದಿಂದ ನೇರವಾಗಿ ಸನ್ಯಾಸ. ಪೂರ್ವಜನ್ಮದ ಯೋಗವಿದ್ಯೆ ಮತ್ತು ರಾಮಾನುಜಭಕ್ತಿ. ಸಮರ್ಥರಾಮದಾಸರ ಪರಂಪರೆಯಲ್ಲಿ ಯೋಗಸಾಧನೆ. ಶ್ರೀಪೆರುಂಬೂದೂರಿನ ರಾಮಾನುಜರ ಗುಡಿಯಲ್ಲಿ ಸಕಲವಿಧವಾದ ಸೇವೆ ಮತ್ತು ಜೀರ್ಣೋದ್ಧಾರಕಾರ್ಯ. ಎಂಬಾರ್ ಮಠ ಸ್ಥಾಪನೆ. ಜ್ಯೋತಿಷ-ಯೋಗ-ವೇದಾಂತ-ಸಂಗೀತ-ಚಿತ್ರ-ಇತಿಹಾಸ-ಪುರಾಣ-ನ್ಯಾಯ-ಮೀಮಾಂಸಾದಿ ಶಾಸ್ತ್ರಗಳಲ್ಲಿ ನೈಪುಣ್ಯ. ಆಂಧ್ರ, ಕರ್ನಾಟಕ, ತಮಿಳು ನಾಡುಗಳಲ್ಲಿ ಅನೇಕ ಉತ್ತಮ ವಿದ್ವಾಂಸರನ್ನು ತಯಾರಿಸಿದುದು. ವಿವಿಧಗ್ರಂಥರಚನೆ, ವಿಶ್ವನಕ್ಷೆಯ ರಚನೆ, ಪ್ರಾಚ್ಯಪಾಶ್ಚಾತ್ಯ ಸಮನ್ವಯ.

**ವಿಶೇಷ :**—ಆಂಜನೇಯನ ಅಂಶಾವತಾರವಾದ ಇವರಿಗೆ ಆಕಾಶಗಮನಾದಿ ಯೋಗಸಿದ್ಧಿಗಳಿತ್ತೆಂದು ತಿಳಿದ ಹಿರಿಯರ ಹೇಳಿಕೆ. ಕ್ರಿ.ಶ. 1871ರಲ್ಲಿ ತಮ್ಮ ಗುರುವಾದ ತಿರುನಾರಾಯಣಪುರಂ ದೊಡ್ಡಯಾಚಾರ್ಯರಿಗೆ ಇವರೇ ಉತ್ತರಕ್ರಿಯಾದಿಗಳನ್ನು ನೆರವೇರಿಸಿದರು.

**ಕೃತಿಗಳು :**—

## 1. ಮುದ್ರಿತ ಗ್ರಂಥಗಳು

- ಅಷ್ಟಾಕ್ಷರಸರ್ವಾಧಿಕಾರವಿಚಾರ
- ಪ್ರಪತ್ತ್ಯನುಪಾಯತ್ವವಿಚಾರ
- ಬ್ರಹ್ಮಾಂಡ, ಗ್ರಹಮಾರ್ಗ, ಗ್ರಹಣಕ್ರಮಗಳ ನಕ್ಷೆ
- ಭೂಗೋಳಖಗೋಳನಿರ್ಣಯ
- ಮುಕ್ತಿಪದಶಕ್ತಿವಾದ
- ರಾಮಾನುಜಾಷ್ಟಪದಿ
- ಶ್ರೀಭಾಷ್ಯಕಾರಚೂರ್ಣಿಕಾಸ್ತುತಿ
- ಶ್ರೀವಚನಭೂಷಣವ್ಯಾಖ್ಯಾ ಟಿಪ್ಪಣಿ
- ಸಿದ್ಧಾಂತತೂಲಿಕೆ.

## 2. ಅಮುದ್ರಿತ ಗ್ರಂಥಗಳು

- ಕೈವಲ್ಯಶತದೂಷಣಿ
- ಚರಮಶ್ಲೋಕಟಿಪ್ಪಣೀವಿವರಣ
- ಚರಮಶ್ಲೋಕತ್ಯಾಗಶಬ್ದಾರ್ಥಟಿಪ್ಪಣಿ
- ಚರಮಶ್ಲೋಕಸಂಗತಿ
- ಚರಮಶ್ಲೋಕಸಿದ್ಧತಾತ್ಪರ್ಯಟಿಪ್ಪಣಿ
- ದಶಮತದರ್ಶಿನಿ
- ನಿಕ್ಷೇಪರಕ್ಷಾವ್ಯಾಖ್ಯಾನ
- ನ್ಯಾಯಸಿದ್ಧಾಂಜನಭಾವದೀಪಿಕೆ
- ರಾಮಾನುಜಸುಪ್ರಭಾತ
- ಬ್ರಹ್ಮಸೂತ್ರಾದಿನಿರ್ಣಯಕ್ರಮ
- ಮುಕ್ತಕಶ್ಲೋಕಗಳು
- ಮೂಲಮಂತ್ರಾಧಿಕಾರಟಿಪ್ಪಣಿ
- ರಹಸ್ಯತ್ರಯಸಂಗ್ರಹಕಾರಿಕೆ
- ವಿಶ್ವಗುಣಾದರ್ಶಟಿಪ್ಪಣಿ
- ಶ್ರೀಭಾಷ್ಯಕಾರಾಭಿಷೇಕಚೂರ್ಣಿಕೆ
- ಶ್ರುತಪ್ರಕಾಶಿಕಾವ್ಯಾಖ್ಯಾನ
- ಸದ್ದರ್ಶನಸುದರ್ಶನಚಂಪು
- ಸಿದ್ಧಧರ್ಮಪ್ರಕಾಶಿಕೆ
- ಸಿದ್ಧಧರ್ಮವಿಜಯ
- ಸಿದ್ಧಧರ್ಮವಿಜಯಮಂಗಳದೀಪಿಕೆ
- ಸಿದ್ಧಾಂತಪರಿಭಾಷೆ
- ಸಿದ್ಧೋಪಾಯ ಸುದರ್ಶನ.

## 3. ಅನುಪಲಬ್ಧ ಗ್ರಂಥಗಳು

| | |
|---|---|
| ಅಸ್ಮದ್ಗುರುಚರಿತ | ಮಹಾಚಾರ್ಯದಿನಚರಿಯೆ |
| ಪುರಾಣಮಾರ್ಗದೀಪಿಕೆ | ಮಹಾಚಾರ್ಯ ಮಂಗಳಾಶಾಸನ |
| ಭಕ್ತಿರಸಾಯನಸ್ತೋತ್ರ | ಹಂಸಾನಂದಮಹಾಕಾವ್ಯ ಇತ್ಯಾದಿ. |

# ೮. ವ್ಯಾಸಾರ್ಯರ್[1]

**ಹೆಸರು :—** ಸುದರ್ಶನಭಟ್ಟರ್, ಸುದರ್ಶನಸೂರಿ, ವೇದವ್ಯಾಸಭಟ್ಟರ್, ವ್ಯಾಸಭಟ್ಟರ್, ಶ್ರುತಪ್ರಕಾಶಿಕಾಭಟ್ಟರ್ ಶ್ರುತಪ್ರಕಾಶಿಕಾಚಾರ್ಯ, ಟೀಕಾಚಾರ್ಯ.

**ಕುಲ, ಗೋತ್ರ :—** ಹಾರೀತಗೋತ್ರ, ಯಜುಶ್‌ಶಾಖೆ, ಆಪಸ್ತಂಬಸೂತ್ರ. ಕುಲ–ವಡಮ. ವಂಶ–ಕೂರ. ತಂದೆ–ವಾಗ್ ವಿಜಯಿಭಟ್ಟರ್. ಅಜ್ಜ–ವೇದವ್ಯಾಸಭಟ್ಟರೆಂಬ ಶ್ರೀರಾಮಪ್ಪಿಳ್ಳೈ. ಮಕ್ಕಳು–ವೇದಾಚಾರ್ಯಭಟ್ಟರ್ ಮತ್ತು ವೇದಾಂತಾಚಾರ್ಯಭಟ್ಟರ್. ಶಿಷ್ಯರು–ಪಿಳ್ಳೈಲೋಕಾಚಾರ್ಯ, ವೇದಾಂತದೇಶಿಕ, ಈಯುಣ್ಣಿ ಪದ್ಮನಾಭ ಇತ್ಯಾದಿ.

**ಕಾಲ :—** ಕ್ರಿ.ಶ. 13ನೆಯ ಶತಮಾನ.

**ದೇಶ :—** ಶ್ರೀರಂಗ.

**ಸಾಧನೆ :—** ಕಂಚಿಯಲ್ಲಿ ಪ್ರಸಿದ್ಧರಾದ ಅಮ್ಮಾಳ್ ವರದಾಚಾರ್ಯರ ಬಳಿ ಹಲವಾರು ಸಲ ರಾಮಾನುಜರ ಶ್ರೀಭಾಷ್ಯಾದಿ ಗ್ರಂಥಗಳನ್ನು ಚೆನ್ನಾಗಿ ಅಧ್ಯಯನಮಾಡಿ, ಅಮ್ಮಾಳ್‌ರವರ ಪ್ರವಚನವೆಲ್ಲವನ್ನೂ ಚಾಚೂತಪ್ಪದೆ ಬರೆದಿಟ್ಟು, ಗ್ರಂಥರೂಪವಾಗಿ ಮಾಡಿ, ಪ್ರಾಚೀನ ಪರಂಪರೆಯನ್ನು ರಕ್ಷಿಸಿ, ವೇದಾಂತದೇಶಿಕರ ಮೂಲಕ ಪ್ರಚುರಗೊಳಿಸಿದುದು. ಪ್ರಪ್ರಥಮ ಮೇಲುಕೋಟೆಯಲ್ಲಿ ರಾಮಾನುಜರ ಗುಡಿಯಲ್ಲಿ ತಮ್ಮ 'ಶ್ರುತ ಪ್ರಕಾಶಿಕೆ'ಯನ್ನು ಉಪನ್ಯಾಸಮಾಡಿ 'ಸಮರ್ಪಿಸಿದುದು. ' ಈಡು ' ಎಂಬ ತಮಿಳಿನ ಮಹಾಗ್ರಂಥದ ರಚನೆಗೆ ಪ್ರೇರಣೆಕೊಟ್ಟದ್ದು. ಇದರಿಂದ ಮುಂದೆ ನಾಲೂರಾಚ್ಚಾನ್ ಎಂಬುವರು 'ಈಡು' ಗ್ರಂಥವನ್ನು ಇದೇ ರೀತಿ ಮೇಲುಕೋಟೆಯಲ್ಲಿ ಪ್ರಪ್ರಥಮವಾಗಿ ರಾಮಾನುಜರ ಗುಡಿಯಲ್ಲಿ ಸಮರ್ಪಿಸಲು ಪ್ರೇರಣೆ ಆಗಿರಬಹುದು.

**ಕೃತಿಗಳು :—**

| | |
|---|---|
| ಶ್ರುತಪ್ರಕಾಶಿಕೆ | ಸುಬಾಲೋಪನಿಷದ್ಭಾಷ್ಯ |
| ಶ್ರುತಪ್ರದೀಪಿಕೆ | ನಿತ್ಯಗ್ರಂಥವ್ಯಾಖ್ಯಾನ |
| ತಾತ್ಪರ್ಯದೀಪಿಕೆ | ಪ್ರಾರ್ಥನಾಪಂಚಕ |
| ಗದ್ಯತ್ರಯ ವ್ಯಾಖ್ಯಾನ | ಮುಕ್ತಕಶ್ಲೋಕಗಳು |
| ಭಾಗವತವ್ಯಾಖ್ಯಾನ | ಸಂಧ್ಯಾಭಾಷ್ಯ |
| | ಷಚಸ್ತುವಾದಿ ವ್ಯಾಖ್ಯಾನ (ಲುಪ್ತ) ಇತ್ಯಾದಿ. |

---

**ಆಧಾರ ಗ್ರಂಥಗಳು :—**

1. ಪೆರಿಯತಿರುಮುಡಿ ಅಡೈವು. ಗುರುಪರಂಪರಾಪ್ರಭಾವ, ತನಿಯನ್ ಪದ್ಯಗಳು, ಸ್ವಯಂ ವ್ಯಾಸಾರ್ಯರ ಗ್ರಂಥಗಳು.

# ೯. (ಕೂರ) ನಾರಾಯಣಮುನಿ[1]

**ಹೆಸರು :**—ಕೂರನಾರಾಯಣಜೀಯರ್, ನಾರಾಯಣಮುನಿ, ಶ್ರೀರಂಗನಾರಾಯಣಜೀಯರ್, ನಲಂತಿಗಳ್ ನಾರಾಯಣಜೀಯರ್, ನಾರಾಯಣಮುನೀಂದ್ರ.

**ಬಿರುದು :**—ಸರ್ವಜ್ಞಚೂಡಾಮಣಿ.

**ಕುಲ, ಗೋತ್ರ :**—ಕುಲ–ವಡಮ, ಗೋತ್ರ–ಭಾರದ್ವಾಜ, ಆಪಸ್ತಂಬಸೂತ್ರ, ತೈತ್ತಿರೀಯಶಾಖೆ, ಮನೆತನ–ವಟ್ಟಮಣಿ.

**ಬಂಧುಮಿತ್ರರು :**—ರಾಮಾನುಜರ ಚಿಕ್ಕಮ್ಮನ ಮಗ ಚಿಕ್ಕ ಎಂಬಾರ್‌ಗೆ ಇವರು ಮರಿಮಗನ ಮಗ. ಮಿತ್ರರು-ಪಿಳ್ಳೈ ಪಿಳ್ಳೈ ಆಳ್ವಾನ್, ಪಿಳ್ಳೈ ಪೆರುಮಾಳ್ ಅಯ್ಯಂಗಾರ್, ನಂಜೀಯರ್, ಅಮ್ಮಣಿಯಾಳ್ವಾನ್, ವಿಳಪ್ಪರೆಯರ್ ಇತ್ಯಾದಿ. ಆಚಾರ್ಯರು–ಪರಾಶರಭಟ್ಟರು. ಶಿಷ್ಯಪ್ರಶಿಷ್ಯರು–ಶೇಮಂಜೀಯರ್, ಸುಂದರಪಾಂಡ್ಯದೇವ, ತಿರುಕ್ಕುರುಹೈಜೀಯರ್, ಮುನಿಜೀಯರ್ ಇತ್ಯಾದಿ.

**ಕಾಲ :** – ಕ್ರಿ.ಶ. 12ನೆಯ ಶತಮಾನ. ಅವತಾರ-ಮಾರ್ಗಶಿರಮಾಸ, ಜ್ಯೇಷ್ಠಾ ನಕ್ಷತ್ರ.

**ದೇಶ :**—ಹುಟ್ಟಿದ ಊರು ' ಕೂರ ' ಅಗ್ರಹಾರ. ವಾಸಸ್ಥಳ-ಶ್ರೀರಂಗ. ಸಮಾಧಿ-ಶ್ರೀರಂಗ.

**ಸಾಧನೆಗಳು :**—ರಾಮಾನುಜರು ಕಟ್ಟಿದ ಶ್ರೀರಂಗಕ್ಷೇತ್ರ ಸಾಮ್ರಾಜ್ಯವನ್ನು ಕಾಪಾಡಿದರು. ಆಳವಂದಾರ್ ಪರಂಪರೆಯಿಂದ ಶ್ರೀರಂಗದ ಮಠಕ್ಕೆ ರಾಮಾನುಜರ ನಂತರ ಇವರೇ ಪಟ್ಟವಹಿಸಿದರು. ಒಳ್ಳೆಯ ಮಂತ್ರವಾದಿ. ಹಯಗ್ರೀವ ಮತ್ತು ಸುದರ್ಶನರ ಉಪಾಸಕ. ಶ್ರೀರಂಗದಲ್ಲಿ ಹಯಗ್ರೀವ, ಸುದರ್ಶನ, ಪಾರ್ಥಸಾರಥಿ, ಗರುಡ, ಶಿಖರಿ, ಮಂದಿರಗಳನ್ನು ಕಟ್ಟಿಸಿದರು. ಶ್ರೀರಂಗದ ರಂಗನಾಥನ ಕಳಾಕರ್ಷಣೆ ಮಾಡಿದ ಕೆಟ್ಟ ಮಾಂತ್ರಿಕರನ್ನು ಅಡಗಿಸಿ ಈ ಕಾರ್ಯದಲ್ಲಿ ಸಹಾಯ ಮಾಡಿದ ಶ್ರೀರಂಗದ ಎಳಪ್ಪರೆಯರ್‌ರವರ ರಕ್ಷಣೆಗಾಗಿ ಸುದರ್ಶನಶತಕ ಮಾಡಿದರು.

**ಕೃತಿಗಳು :**—

- ಉಪನಿಷತ್ಕೂರನಾರಾಯಣಮ್ (ಉಪನಿಷದ್ಭಾಷ್ಯ)
- ಸ್ತೋತ್ರರತ್ನವ್ಯಾಖ್ಯಾನ
- ಸುದರ್ಶನಶತಕ ಮತ್ತು ವ್ಯಾಖ್ಯಾನ
- ಪಂಚಾಯುಧಸ್ತೋತ್ರ
- ನಾರಾಯಣೀಯಮಂತ್ರಶಾಸ್ತ್ರ ಮತ್ತು ವ್ಯಾಖ್ಯಾನ
- ಪುರುಷಕಾರಮೀಮಾಂಸೆ
- ಸುದರ್ಶನಮೀಮಾಂಸೆ ಇತ್ಯಾದಿ[2].

**ವಿಚಾರ :**—ನಾರಾಯಣ ಮುನಿ 2 ಮತ್ತು 4ರಲ್ಲಿ ' ವಿಚಾರ ' ಗಮನಿಸಿ.

---

ಆಧಾರ ಗ್ರಂಥಗಳು :—

1 ' ಪೆರಿಯತಿರುಮುಡಿ ಅಡೈವು . 75 ನೆಯ ಪುಟ. ಗ್ರಂಥಕರ್ತೃ–ಕೋಯಿಲ್ ಕಂದಾಡೈನಾಯನ್, ಕ್ರಿ.ಶ. 15ನೆಯ ಶತಮಾನ. ಮದ್ರಾಸ್ ಶ್ರೀನಿಕೇತನ ಪ್ರೆಸ್ ಮುದ್ರಿತ, ಕ್ರಿ.ಶ. 1898.

2 ದುರ್ವಾಸ ಪಂಡಿತನ ' ಕಲ್ಪಸಾರಸಮುಚ್ಚಯ.'
(ಈ ಹಸ್ತಪ್ರತಿ ಇರುವ ಸ್ಥಳ :- ವಸಿಷ್ಠಪುರಮ್ ರಾಮಾನುಜಾಚಾರ್ಯ, ತಿಟ್ಟಕುಡಿ, ತಮಿಳ್‌ನಾಡು.)

# ೧೦. ಭಟ್ಟಪರಾಶರ[1]

**ಹೆಸರು :**—ಶ್ರೀರಂಗನಾಥಾರ್ಯ, ಭಟ್ಟರ್, ತಿರುವರಂಗಪ್ಪೆರುಮಾಳ್‌ಭಟ್ಟರ್, ಪೆರಿಯಭಟ್ಟರ್, ಪರಾಶರ ಭಟ್ಟರ್.

**ಬಿರುದು :**—'ಶ್ರೀರಂಗೇಶಪುರೋಹಿತ', 'ವೇದಾಂತಾಚಾರ್ಯಭಟ್ಟ'. ಮನೆತನದಿಂದ ಬಂದ ಹೆಸರು 'ಶ್ರೀವತ್ಸಾಂಕ'.

**ಕುಲ, ಗೋತ್ರ :**—ಹಾರೀತ ಗೋತ್ರ, ಯಜುಶ್ ಶಾಖೆ, ಆಪಸ್ತಂಬಸೂತ್ರ, ವಡಮಕುಲ, ಕೂರವಂಶ.

**ಬಂಧುಮಿತ್ರರು :**—ತಂದೆ–ಕೂರತ್ತಾಳ್ವಾನ್. ತಾಯಿ–ಆಂಡಾಳಮ್ಮಂಗಾರ್. ಪತ್ನಿ–ಮನ್ನಿಯಮ್ಮ. ಅವಳಿ ಸಹೋದರ–ವೇದವ್ಯಾಸಭಟ್ಟರೆಂಬ ಶ್ರೀರಾಮಪಿಳ್ಳೈ. ಗುರು–ರಾಮಾನುಜರು, ಕೂರತ್ತಾಳ್ವಾನ್, ಎಂಬಾರ್, ತಿರುಕ್ಕುರುಹೈಪ್ಪಿರಾನ್‌ಪಿಳ್ಳಾನ್. ಮಗ–ಉದ್ದಂಡಭಟ್ಟರ್. ಶಿಷ್ಯರು–ಕೂರ ನಾರಾಯಣಮುನಿ, ನಂಜೀಯರ್, ಅಮ್ಮಣಿಯಾಳ್ವಾನ್, ವಿಳಪ್ಪರೆಯರ್, ವೀರಶಿಖಾಮಣಿ ಪಲ್ಲವರಾಯ, ಇತ್ಯಾದಿ.

**ಕಾಲ :**—ಕ್ರಿ. ಶ. 11–12 ನೆಯ ಶತಮಾನ. ಅವತಾರ–ಶುಭಕೃತ್‌ಸಂವತ್ಸರ, ವೃಷಭ ಮಾಸ, ಅನೂರಾಧಾ ನಕ್ಷತ್ರ. ಪರಮಪದ–ಜಯಸಂವತ್ಸರ, ಕಾರ್ತಿಕ ಶುಕ್ಲದ್ವಾದಶಿ. ಜೀವಿತಕಾಲ – 105 ವರ್ಷ ?

**ದೇಶ :**— ಶ್ರೀರಂಗ, ಕೆಲವುಕಾಲ ತಿರುವನಂತಪುರವಾಸ.

**ಸಾಧನೆ :**— ಯಾಮುನಾಚಾರ್ಯರ ಮೂರು ಆಸೆಗಳಲ್ಲೊಂದಾದ 'ವ್ಯಾಸ, ಪರಾಶರಮುನಿಗಳ ತತ್ವ ಮತ್ತು ಕೀರ್ತಿಯನ್ನು ಪ್ರಚುರಗೊಳಿಸುವುದು' ಎಂಬ ಕಾರ್ಯವನ್ನು ರಾಮಾನುಜರು ಇವರ ಮೂಲಕ ವಿಷ್ಣು ಸಹಸ್ರನಾಮಭಾಷ್ಯ ಬರೆಸಿ ನೆರವೇರಿಸಿದುದು. ರಾಮಾನುಜರ ಆಣತಿಯಂತೆ ಅವರ ಕೊನೆಯ ಆಸೆಯಾಗಿ ಕರ್ಣಾಟಕದ ಮಾಧವಾಚಾರ್ಯರನ್ನು ಜಯಿಸಿ ದರ್ಶನ ಸ್ಥಾಪನೆ ಮಾಡುವ ಕಾರ್ಯವನ್ನು ನೆರವೇರಿಸಿ ಮಾಧವಾಚಾರ್ಯರಿಗೆ 'ನಂಜೀಯರ್' ಎಂದು ಹೆಸರಿಟ್ಟು ಅವರಮೂಲಕ ರಾಮಾನುಜ ಸಿದ್ಧಾಂತ ಪ್ರವರ್ತನೆ ಮಾಡಿದುದು. ಯಾಮುನಾಚಾರ್ಯರ ಕಾಲದಿಂದ ಬಂದ ಶ್ರೀರಂಗಸಾಮ್ರಾಜ್ಯ ವನ್ನು ರಾಮಾನುಜರ ಸ್ಥಾನದಲ್ಲಿದ್ದು ರಕ್ಷಿಸಿದುದು. ಯಾಮುನರಂತೆ "ತತ್ವರತ್ನಾಕರ" ಮುಂತಾದ ಪ್ರೌಢಗ್ರಂಥಗಳನ್ನು ಬರೆದು ವೇದಾಂತಶಾಸ್ತ್ರವನ್ನು ಮುನ್ನಡೆಸಿದುದು. ಮೇಲುಕೋಟೆಯಲ್ಲಿ 'ಯತಿರಾಜ'ರ ಮೂಲ ಶಿಲಾವಿಗ್ರಹ ಸ್ಥಾಪಿಸಿ, ತಿರುನಕ್ಷತ್ರೋತ್ಸವ ಆರಂಭಿಸಿ ನಡೆಸಿದುದು. ಮೈಸೂರು ಜಿಲ್ಲೆಯ 'ಹಂಗಳ'ದ ಬಳಿ ಮಾಧವದಂಡನಾಯಕನಿಗೆ 'ಲಕ್ಷ್ಮೀಮಂತ್ರವನ್ನು ಉಪದೇಶಿಸಿ, ಅವನ ಮೂಲಕ "ಗೋವರ್ಧನ ಕ್ಷೇತ್ರ"-ಹಿಮವದ್ಗೋಪಾಲಸ್ವಾಮಿ ಬೆಟ್ಟವನ್ನು ಉದ್ಧಾರ ಮಾಡಿದುದು.

**ವಿಶೇಷ :**— ಇವರು ಪರಾಶರ ಮಹರ್ಷಿಗಳ ಅಂಶಾವತಾರ. ಸಂಪ್ರದಾಯದಲ್ಲಿ ಅತ್ಯಂತ ಪ್ರತಿಭಾಸಂಪನ್ನರಾದವರಲ್ಲಿ ಯಾಮುನಾರ್ಯ, ಭಟ್ಟಪರಾಶರ, ವೇದಾಂತದೇಶಿಕ, ಈ ಮೂವರೂ ಒಂದೇ ರೀತಿ.

---

**ಆಧಾರ ಗ್ರಂಥಗಳು :**—

1 ಪೆರಿಯತಿರುಮುಡಿ ಅಡೈವು, ಯಮಕರತ್ನಾಕರ ಮತ್ತು ವ್ಯಾಖ್ಯಾನ, ಹಂಗಳದ ಶಾಸನ, ಉಡೈಯವರ್ ನಿಯಮನಪ್ಪಡಿ (ಹಸ್ತಪ್ರತಿ ಅರೆಯರ್ ಪುಸ್ತಕ ಭಂಡಾರ, ಮೇಲುಕೋಟೆ) ಕರ್ನಾಟಕದ ಕುಣಿಗಲ್ ಕೃಷ್ಣಕ.ಮಾರಯ್ಯಂಗಾರ್ಯರ ವಾರ್ತಾಮಾಲೆ, ಗುರುಪರಂಪರಾ ಪ್ರಭಾವ ಇತ್ಯಾದಿ.

ಈಶಾವಾಸ್ಯೋಪನಿಷತ್

ಕೃತಿಗಳು :—

ಭಗದ್ಗುಣದರ್ಪಣ
(ವಿಷ್ಣುಸಹಸ್ರನಾಮಭಾಷ್ಯ)
ತತ್ತ್ವರತ್ನಾಕರ (ಲುಪ್ತ)
ಯಮಕರತ್ನಾಕರ ಮತ್ತು ವ್ಯಾಖ್ಯಾನ
ಶ್ರೀರಂಗರಾಜಸ್ತವ 2 ಶತಕ
ಶ್ರೀಗುಣರತ್ನಕೋಶ
ಅಷ್ಟಶ್ಲೋಕಿ
ರಂಗನಾಥಾಷ್ಟಕ
ಅಖಂಡಖಂಡನ (ಲುಪ್ತ)
ಶಾರೀರಕಭಾಷ್ಯ (ಲುಪ್ತ)
ಅಕಾರವಿವರಣ (ಲುಪ್ತ)
ಕ್ರಿಯಾದೀಪ
ಕೈಶಿಕಪುರಾಣ ವ್ಯಾಖ್ಯಾನ
ತನಿಯನ್ ಪದ್ಯಗಳು
ಮುಕ್ತಕ ಶ್ಲೋಕಗಳು
ದಿವ್ಯಪ್ರಬಂಧ ನಿರ್ವಾಹಗಳು
ವಾರ್ತಾಮಾಲೆಗಳು
ದಿವ್ಯಸೂರಿಪ್ರಭಾವದೀಪಿಕಾ (ಲುಪ್ತ)
ಇತ್ಯಾದಿ.

## ೧೧. ಯಾದವ ಪ್ರಕಾಶ

**ಹೆಸರು** :— ಯಾದವ, ಗೋವಿಂದ, ಗೋವಿಂದಮುನಿ.

**ಬಂಧುಮಿತ್ರರು** :— ಶಿಷ್ಯ ಮತ್ತು ಆಚಾರ್ಯರು ಭಗವದ್ರಾಮಾನುಜರು.

**ಕಾಲ** :—ಕ್ರಿ.ಶ.1000 ದಿಂದ 1100.

**ದೇಶ** :—ಕಾಂಚೀಪುರ.

**ಸಾಧನೆ** :—ವೇದಾಂತಮಾರ್ಗದಲ್ಲಿ ಯಾದವ ಪಂಥವೊಂದನ್ನು ದೃಢವಾಗಿ ಮುನ್ನಡೆಸುತ್ತಿದ್ದುದು. ಸರ್ವಶಾಸ್ತ್ರ ಪಾಂಡಿತ್ಯ. ದೇವರ ಆಜ್ಞೆಯಂತೆ ಹಿಂದೆ ತಮ್ಮ ಶಿಷ್ಯರಾಗಿದ್ದ ರಾಮಾನುಜರಿಗೆ ಶಿಷ್ಯರಾಗಿ ಅವರಿಂದಲೇ ಸನ್ಯಾಸದೀಕ್ಷೆ ಪಡೆದುದು.

**ಕೃತಿಗಳು** :—

ವೈಜಯಂತೀಕೋಶ
ಛಂದಶ್ಶಾಸ್ತ್ರ
ಬ್ರಹ್ಮಸೂತ್ರಭಾಷ್ಯ
ಯತಿಧರ್ಮಸಮುಚ್ಚಯ
ಇತ್ಯಾದಿ ನೂರಾರು ಗ್ರಂಥಗಳು.

# ೧೨. ಭಗವದ್ರಾಮಾನುಜ[1]

**ಹೆಸರು :—** ರಾಮಾನುಜ, ರಾಮಾನುಜಾಚಾರ್ಯ, ಶ್ರೀಭಾಷ್ಯಕಾರ, ಲಕ್ಷ್ಮಣಾರ್ಯ, ಲಕ್ಷ್ಮಣಮುನಿ, ಯತಿರಾಜ, ಇಳೈಯಾಳ್ವಾರ್, ಇರಾಮಾನುಶನ್, ಎಂಬೆರುಮಾನಾರ್, ಉಡೈಯವರ್, ತಿರುಪ್ಪಾವೈ ಜೀಯರ್, ಕೋಯಿಲಣ್ಣನ್, ಶಠಕೋಪನ್‌ಪೊನ್ನಡಿ, ಭೂತಪುರೀಂದ್ರ, ದೇಶಿಕೇಂದ್ರ, ರಾಮಾನುಜಭಟ್ಟರ್, ಭವಿಷ್ಯದಾಚಾರ್ಯ, ಕೃಪಾಮಾತ್ರಪ್ರಸನ್ನಾಚಾರ್ಯ ಇತ್ಯಾದಿ.

**ಬಿರುದು :—** ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾಚಾರ್ಯ, ಉಭಯವೇದಾಂತಾಚಾರ್ಯ, ಮಾಯಾವಾದಿಕೋಲಾಹಲ, ಮಂತ್ರವಾದಿಭಯಂಕರ, ಅಭಂಗಗರುಡಾಂಕ, ನಾರಾಯಣಪಾದಪದ್ಮಾರಾಧಕ, ಶ್ರೀರಂಗೇಶ ಜಯಧ್ವಜ ಇತ್ಯಾದಿ.

**ಕುಲ, ಗೋತ್ರ :—** ಹಾರೀತ ಗೋತ್ರ. ಆಪಸ್ತಂಬಸೂತ್ರ, ಯಜುಶ್ ಶಾಖೆ, ವಡಮಕುಲ, ಆಸೂರಿ ವಂಶ,

**ಬಂಧುಮಿತ್ರರು :—** ತಂದೆ–ಕೇಶವಸೋಮಯಾಜಿ, ತಾಯಿ–ಕಾನ್ತಿಮತಿ, ಸೋದರಮಾವ-ಶ್ರೀಶೈಲಪೂರ್ಣ. ಅಕ್ಕ–ನಾಚ್ಚಿಯಾರಮ್ಮ, ಅವಳ ಮಗ–ಮುದಲಿಯಾಂಡಾನ್, ತಂಗಿ–ಪೆರುಂದೇವಿ, ಅವಳ ಮಗ ನಡಾದೂರಾಳ್ವಾನ್. ಚಿಕ್ಕಮ್ಮ–ಶ್ರೀದೇವಿ ಮತ್ತು ನೀಳಾದೇವಿ. ಅವರ ಮಕ್ಕಳು ಎಂಬಾರ್, ಇಳೈಯವಿಲ್ಲಿ. ಪತ್ನಿ–ಆಂಡಾಳ್ ತಂಜೈ ಅಥವಾ ಲಕ್ಷ್ಮಿ. ಆವಳ ಮಕ್ಕಳು ಎಮ್ಮಾನ್, ಪೆಮ್ಮಾನ್, ಜ್ಞಾನಪುತ್ರ–ಶ್ರೀಶೈಲಪೂರ್ಣರ ಮಗನಾದ ತಿರುಕ್ಕುರುಹೈಪ್ಪಿರಾನ್‌ಪಿಳ್ಳಾನ್.

**ಆಚಾರ್ಯರು :—** ಸಾಮಾನ್ಯಶಾಸ್ತ್ರಗುರು–ಯಾದವಪ್ರಕಾಶ, ದರ್ಶನಾಚಾರ್ಯರು–ಮಹಾಪೂರ್ಣ, ಗೋಷ್ಠೀಪೂರ್ಣ, ಶ್ರೀಶೈಲಪೂರ್ಣ, ಮಾಲಾಧರಾರ್ಯ, ಶ್ರೀವರರಂಗ ಎಂಬ ಐವರು. ವಿಶೇಷ ರಹಸ್ಯಾಚಾರ್ಯರು–ಕಾಂಚೀಪೂರ್ಣ. ಪರಮಾಚಾರ್ಯರು–ಯಾಮುನಮುನಿ. ಸನ್ಯಾಸದೀಕ್ಷಾಗುರು–ಸಾಕ್ಷಾತ್ ಕಂಚಿ ವರದರಾಜಸ್ವಾಮಿ.

**ಶಿಷ್ಯರು :—** ಕೂರತ್ತಾಳ್ವಾನ್, ಮುದಲಿಯಾಂಡಾನ್ ಇಬ್ಬರೂ ತ್ರಿದಂಡ ಪವಿತ್ರಗಳಂತೆ ಪ್ರಧಾನ ಶಿಷ್ಯರು. ವ್ಯಾಕರಣ, ವೇದಾಂತ ವಿಚಾರಗಳಿಗೂ ಬರವಣಿಗೆಗೂ ಮಠದ ಹಣಕಾಸು ದವಸ ಧಾನ್ಯಗಳ ಜವಾಬ್ದಾರಿಗೂ ಕೂರತ್ತಾಳ್ವಾನ್. ತರ್ಕಸಂಪ್ರದಾಯ ಲೌಕಿಕ ವ್ಯವಹಾರಗಳಿಗೂ ಗೋಷ್ಠಿಯಲ್ಲಿ ಮುಣೇಗಾರಿಕೆಗೂ ದೇವರಪೂಜೆಯ ಸಹಾಯಕ್ಕೂ ಪಾದುಕೆಗಳ ರಕ್ಷಣೆಗೂ ಮುದಲಿಯಾಂಡಾನ್ ದೇಶಾಂತರಗಳಲ್ಲಿಸಂಚಾರ, ಪ್ರಚಾರ, ಪೂರ್ವಸಿದ್ಧತೆ, ಮುನ್ನಡೆಗಳಿಗೆ ಶ್ರೀಪಾದದಂತಹೆಅನಂದಾಳ್ವಾನ್. ದೇವರ ಪೂಜೆಗೆ ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್. ರಾಮಾನುಜರ ದೈಹಿಕವಾದ ಸ್ನಾನ, ವಸ್ತ್ರ, ಹಾಸಿಗೆಗಳ ಜವಾಬ್ದಾರಿ, ಅಂಗರಕ್ಷಣೆ ಮತ್ತು ಹಸ್ತಾವಲಂಬನ ಕೆಲಸಗಳಿಗೂ, ಅನುಭಾವಿಕ ವಿಚಾರಗಳಿಗೂ, ಎಂಬಾರ್. ಅಡಿಗೆ, ಭಿಕ್ಷೆ ಪ್ರಸಾದಿಸುವುದು, ವಾದ-ವಿವಾದ, ಇತ್ಯಾದಿಗಳಿಗೆ ಕಿಡಾಂಬಿ ಆಚ್ಚಾನ್. ಓಂಕಾರ, ಉಪನಿಷತ್, ಧ್ಯಾನ, ಉಪಾಸನೆ, ದಿನಚರಿ ಲೇಖನಗಳಿಗೆ ಕುಮಾಂಡೂರ್ ಇಳೈಯವಿಲ್ಲಿ. ಆಧ್ಯಾತ್ಮಿಕ ಮತ್ತು ಲೌಕಿಕ ವ್ಯವಹಾರಗಳಿಗೆ ನಡಾದೂರಾಳ್ವಾನ್. ಸಂದೇಶಗಳನ್ನು ತಲುಪಿಸುವುದು ತರುವುದು ಇತ್ಯಾದಿಗಳಿಗೆ ಕಿರಿಯಮಾರುತಿಯಾಂಡಾನ್. ದೇವರ ಪ್ರಸಾದಗಳನ್ನು

---

**ಆಧಾರ ಗ್ರಂಥಗಳು :—**

1. ಗುರುಪರಂಪರಾಪ್ರಭಾವ, ಪೆರಿಯ ತಿರುಮುಡಿ ಅಡೈವು ಮತ್ತು ಶಿಷ್ಯಪ್ರಶಿಷ್ಯರ ಗ್ರಂಥಗಳು, ಪ್ರಪನ್ನಾಮೃತ.

ವಿನಿಯೋಗಿಸಲೂ ಭಕ್ಷ್ಯಭೋಜ್ಯಾದಿಗಳು ಪೋಲಾಗದಂತೆ ನೋಡಿಕೊಳ್ಳಲೂ ವಂಗಿಪುರತ್ತ್‌ನಂಬಿ. ಹಾಲು-ಮೊಸರುಗಳ ಜವಾಬ್ದಾರಿಗೂ ಅಂಗರಕ್ಷಣೆಗೂ ವಡುಹನಂಬಿ. ಉಭಯ ವೇದಾಂತಗಳಲ್ಲೂ ವಿವಿಧ ಶಿಷ್ಯರನ್ನು ತಯಾರಿಸಲು ರಾಮಾನುಜರ ಜ್ಞಾನಪುತ್ರರೆನಿಸಿದ ತಿರುಕ್ಕುರುಹೈಪ್ಪಿರಾನ್‌ಪಿಳ್ಳಾನ್. ಹೀಗೆ 74 ಆಚಾರ್ಯ ಪುರುಷ ಸಿಂಹಾಸನಾಧಿಪತಿಗಳು ಪ್ರಧಾನ ಶಿಷ್ಯರು. ಇದೂ ಅಲ್ಲದೆ ಜನಿವಾರ ಧರಿಸಿದ 12 ಸಾವಿರ ಏಕಾಂತಿ ಶ್ರೀವೈಷ್ಣವರೂ, ಏಳುನೂರು ಸನ್ಯಾಸಿಗಳೂ, ಜನಿವಾರ ಧರಿಸದ ಲಕ್ಷಗಟ್ಟಳೆ ಶ್ರೀವೈಷ್ಣವರೂ ಸಾಧ್ವಿಯರೂ ನಾಮಧಾರಿಗಳಾದ ಕ್ಷತ್ರಿಯ-ಶೂದ್ರಾದಿಗಳೂ ಮ್ಲೇಚ್ಛರೂ, ಹರಿಜನರೂ ಭಾರತಾದ್ಯಂತ ರಾಮಾನುಜರ ಶಿಷ್ಯರು.

ಕರ್ನಾಟಕದ ಕೊಂಗುನಾಡಿನಲ್ಲಿ ತಿರುಮಲೈನಲ್ಲಾನ್, ಮಿಳಹಾಳ್ವಾನ್, ಬಯಲ್ನಾಡಿನಲ್ಲಿ ಮಾರುತಿಯಾಂಡಾನ್, ಎಚ್ಚಾನ್, ಗಂಗನಾಡಿನಲ್ಲಿ ಅನಂದಾಳ್ವಾನ್, ತೊರೆನಾಡಿನಲ್ಲಿ ಸಾಲಗ್ರಾಮ ಅಯ್ಯನ್, ವಡುಹನಂಬಿ, ಹೊಯ್ಸಳನಾಡಿನಲ್ಲಿ ಸೋಮಾಶಿಯಾಂಡಾನ್, ಅರಣಪ್ಪುರತ್ತಾಳ್ವಾನ್, ಶಿರಿಯಾಚ್ಚಾನ್, ಕುರುಮಂಕನಾಡಿನಲ್ಲಿ ತೊಂಡನೂರ್‌ನಂಬಿ, ನಂಬಿಯೂರಿಲ್ ಶ್ರೀರಂಗರಾಜಭಟ್ಟರ್, ಪಿಳ್ಳೈತಿರುನಾರಾಯಣಪುರತ್ತ್ ಅರೆಯರ್, ಕಲ್ಯಾಣನಾಡಿನಲ್ಲಿ ಮರುದೂರ್‌ನಂಬಿ, ಮಳುವೂರ್ ನಂಬಿ, ಮಿಳಹಾಳ್ವಾನ್, ವೆಂಗಿನಾಡಿನಲ್ಲಿ ವಂಗಿಪುರತ್ತ್‌ನಂಬಿ, ಘಟ್ಟಸೀಮೆಯಲ್ಲಿ ನಡುವಿಲಾಳ್ವಾನ್, ಮುಂತಾದವರು ಆಚಾರ್ಯ ಪೀಠಗಳನ್ನು ರಕ್ಷಿಸಿ ಸಿದ್ಧಾಂತವನ್ನು ಮುನ್ನಡೆಸಿದವರು. ಹೊಯ್ಸಳ ನಾಡಿಗೆ ಅಮ್ಮಣಿಯಾಳ್ವಾನ್ ಮುಂತಾದವರು ಶಿಷ್ಯ ಪ್ರತಿನಿಧಿಗಳು. ಪರ್ತಿಕ್ಕೊಲ್ಲೈ (ಹರ್ತಿಕೋಟೆ) ಅಮ್ಮಾಳ್, ಕೊಂಗಿಲ್‌ಪಿರಾಟ್ಟಿ, ಅಮ್ಮಂಗಿಅಮ್ಮಾಳ್, ಮುಂತಾದವರು ಕರ್ನಾಟಕದ ಸಾಧ್ವೀ ಸ್ತ್ರೀಸಮಾಜದ ಶಿಷ್ಯ ಪ್ರತಿನಿಧಿಗಳು. ಮಹಾರಾಜ ವಿಷ್ಣುವರ್ಧನ, ವಿಠ್ಠಲದೇವ, ಮಾಧವದಂಡ ನಾಯಕ, ಅಲ್ಲಾಳನಾಥ ಮುಂತಾದವರು ಕರ್ನಾಟಕದ ಕ್ಷತ್ರಿಯ ಶಿಷ್ಯ ಪ್ರತಿನಿಧಿಗಳು. ಪುಂಡರೀಕ ದಾಸ ಮುಂತಾದವರು ಜನಿವಾರ ಧರಿಸದ ಕರ್ನಾಟಕಶ್ರೀವೈಷ್ಣವ ಪ್ರತಿನಿಧಿಗಳು.

**ಕಾಲ :**—ಅವತಾರ ಕ್ರಿ.ಶ. 1017 ಪಿಂಗಳ ಸಂವತ್ಸರ ಚೈತ್ರ ಶುಕ್ಲ ಪಂಚಮಿ, ಗುರುವಾರ ಆದ್ರ್ರಾನಕ್ಷತ್ರ ಮೇಷಮಾಸ ತೇದಿ 13, ಆಯುಷ್ಮದ್‌ಯೋಗ, ಭದ್ರಕರಣ, ಕರ್ಕಾಟಕ ಲಗ್ನ ; ಪರಮಪದ-ದುರ್ಮತಿ ಸಂವತ್ಸರ, ಮಾಘ ಶುಕ್ಲ ದಶಮೀ ಶನಿವಾರ ಆದ್ರ್ರಾನಕ್ಷತ್ರ ಅಥವಾ ಆಶ್ಲೇಷಾ ನಕ್ಷತ್ರ, ಮಧ್ಯಾಹ್ನ. ಜೀವಿತ ಕಾಲ-124 ವರ್ಷ 10 ತಿಂಗಳು 5 ದಿವಸ.

**ದೇಶ :** —ಹುಟ್ಟೂರು-ತೊಂಡೈನಾಡಿನ ಶ್ರೀಪೆರುಂಪೂದೂರು. ವಾಸ-ಕಂಚಿ, ತಿರುಪತಿ, ಮೇಲುಕೋಟೆ, ಶ್ರೀರಂಗ ಇತ್ಯಾದಿ. ಸಮಾಧಿ-ಶ್ರೀರಂಗದಲ್ಲಿ ರಂಗನಾಥಮಂದಿರ ಪ್ರಾಕಾರ.

**ವಿಶೇಷ :**—ಇವರು ಆದಿಶೇಷನ ಅವತಾರ, ಪಂಚಾಯುಧಾಂಶ, ವಿಷ್ವಕ್ಸೇನಾಂಶ. ಇವರು ತಮ್ಮ 83ನೆಯ ವಯಸ್ಸಿನಲ್ಲಿ ತಾವೇ ಮಾಡಿಸಿದ ಪಂಚಲೋಹದ 'ತಾನುಹಂದತಿರುಮೇನಿ' ಸ್ವಂತ ವಿಗ್ರಹವು ಮೇಲುಕೋಟೆಯಲ್ಲೂ, ಇವರ ಸಮಾಧಿಗೆ ಕೆಲವು ದಿವಸ ಮೊದಲು ಕಂದಾಡೈಆಂಡಾನ್ ಮಾಡಿಸಿದ 'ತಮರುಹಂಡತಿರುಮೇನಿ' ಎಂಬ ಸ್ವಂತ ವಿಗ್ರಹವು ಶ್ರೀಪೆರುಂಪೂದೂರಿನಲ್ಲೂ ಇದೆ. ಶ್ರೀರಂಗದ ಇವರ ಸಮಾಧಿಯಲ್ಲಿ 'ತಾನಾನತಿರುಮೇನಿ' ಶ್ರೀಗಂಧಸುಧಾಲೇಪಿತವಾದ ದಿವ್ಯಶರೀರವು ಇದೆ.

**ಸಾಧನೆಗಳು :**—~~ಕಂಚಿವರದರಾಜಸ್ವಾಮಿಗೆ ತೀರ್ಥಸೇವೆ, ದಿವ್ಯವಿಚಾರಗಳ ಸಂಗ್ರಹಣೆ,~~ -ಭಗವದ್ ಭಾಗವತಾಚಾರ್ಯ ಸೇವೆಗಳಿಗೆ ವಿರೋಧವಾದ ಕಾರಣ ಪತ್ನೀಪುತ್ರರ ತ್ಯಾಗ, ಸನ್ಯಾಸ, ಶ್ರೀವೈಷ್ಣವ ಸಾಮ್ರಾಜ್ಯ-ಪೀಠಾಧಿಪತಿಗಳಾಗಿದ್ದ ಆಳವಂದಾರವರ ಮೂರು ಇಷ್ಟಾರ್ಥಗಳನ್ನು ನೆರವೇರಿಸಿದುದು.

